ಮಹಾಕವಿ ಅಗ್ಗಳದೇವ ವಿರಚಿತಂ

# ಚಂದ್ರಪ್ರಭ ಪುರಾಣಂ

ಗದ್ಯಾನುವಾದ

ಆರ್.ವಿ. ಕುಲಕರ್ಣಿ

ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮

ಮಹಾಕವಿ ಅಗ್ಗಳದೇವ ವಿರಚಿತಂ

# ಚಂದ್ರಪ್ರಭ ಪುರಾಣಂ

ಗದ್ಯಾನುವಾದ

ಆರ್.ವಿ.ಕುಲಕರ್ಣಿ

ಶುಭವಾಗಲಿ

**ಕನ್ನಡ ಸಾಹಿತ್ಯ ಪರಿಷತ್ತು**

ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ

ಬೆಂಗಳೂರು- ೫೬೦೦೧೮

CHANDRAPRABHA PURANAM by Aggladeva, Original Text with prose rendering in Kannada, by : R.V. Kulakrni
Published by : Kannada Sahitya Parishat
Pampa Mahakavi Road, Chamarajapet, Bangalore - 560018
Pages : 710+xxii Price : Rs. 250=00 : 2004

ಮುದ್ರಣ ವರ್ಷ : ೨೦೦೪
ಪ್ರತಿಗಳು : ೧೦೦೦
ಬೆಲೆ : ಎರಡು ನೂರ ಐವತ್ತು ರೂಪಾಯಿಗಳು



* * *

ಅಧ್ಯಕ್ಷರು

**ಧರ್ಮದರ್ಶಿ ಹರಿಕೃಷ್ಣ ಪುನರೂರು**

* * *

ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್. ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮

## ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ನಾಡು, ಭಾಷೆ, ಸಾಹಿತ್ಯ, ಸಂಸ್ಕೃತಿ ಸಂವರ್ಧನೆಗಾಗಿ ಶ್ರಮಿಸುತ್ತಿರುವ ಏಕೈಕ ಸಂಸ್ಥೆಯಾಗಿದೆ. ಸುಮಾರು ೮೯ ವರ್ಷಗಳ ದೀರ್ಘಕಾಲದ ಇತಿಹಾಸವನ್ನು ಪಡೆದಿರುವ ಪರಿಷತ್ತು ತನ್ನ ಕಾರ್ಯಕ್ಷೇತ್ರವನ್ನು ಅನೇಕ ರೀತಿಯಲ್ಲಿ ವಿಸ್ತರಿಸಿಕೊಂಡಿದೆ. ಅವುಗಳಲ್ಲಿ ಕನ್ನಡದ ಶ್ರೇಷ್ಠ ಸಾಹಿತ್ಯ ಗ್ರಂಥಗಳ ಪ್ರಕಟಣೆ ಕಾರ್ಯ ಪ್ರಧಾನವಾದುದಾಗಿದೆ. ಈ ಹಿಂದಿನ ಹಲವಾರು ಮಹನೀಯರ ಪ್ರಯತ್ನದ ಫಲವಾಗಿ ಒಂದು ಸಾವಿರಕ್ಕೂ ಹೆಚ್ಚು ಗ್ರಂಥಗಳನ್ನು ಪರಿಷತ್ತು ಹೊರತಂದಿದೆ. ಈ ಗ್ರಂಥಗಳು ಸಾಹಿತ್ಯ ಕ್ಷೇತ್ರದ ಎಲ್ಲ ಪ್ರಕಾರಗಳಿಗೂ ಸೇರಿವೆ. ಕನ್ನಡ ಜನತೆಗೆ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ನೀಡುವುದಕ್ಕೋಸ್ಕರ ಕಡಿಮೆ ಬೆಲೆಯಲ್ಲಿ ಈ ಕೃತಿಗಳನ್ನು ಮಾರಲಾಗುತ್ತಿದೆ. ಸಾಹಿತ್ಯಾಭಿಮಾನಿಗಳ ವಾಚನಾಭಿರುಚಿಯನ್ನು ಬೆಳೆಸುವುದರ ಮುಖಾಂತರ ಜ್ಞಾನ ಪ್ರಸಾರ ಮಾಡುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

'ಮಹಾಕವಿ ಅಗ್ಗಳದೇವ ವಿರಚಿತಂ ಚಂದ್ರಪ್ರಭ ಪುರಾಣಂ' ಕೃತಿಯು ಕನ್ನಡದ ಪ್ರಾಚೀನ ಗ್ರಂಥಗಳಲ್ಲಿ ಒಂದಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿಗೆ ಪುಸ್ತಕಗಳ ಪ್ರಕಟಣೆಗಾಗಿ ಕರ್ನಾಟಕ ಸರ್ಕಾರವು ವಿಶೇಷ ಅನುದಾನ ನೀಡಿ ಉಪಕರಿಸಿದೆ. ಸರ್ಕಾರದ ಆದೇಶ ಸಂಖ್ಯೆ ಸಂಕಇ ೧೭೨ ಕಸಧ ೨೦೦೩ ದಿನಾಂಕ ೧೬-೩-೨೦೦೪, ಈ ಸಹಾಯಕ್ಕಾಗಿ ಪರಿಷತ್ತು ಸರ್ಕಾರಕ್ಕೆ ಕೃತಜ್ಞವಾಗಿದೆ.

'ಮಹಾಕವಿ ಅಗ್ಗಳದೇವ ವಿರಚಿತಂ ಚಂದ್ರಪ್ರಭ ಪುರಾಣಂ' ಪುಸ್ತಕವನ್ನು ಸಹೃದಯ ಕಾವ್ಯಾಸ್ತಕರು, ಸಂಶೋಧಕರು, ಕನ್ನಡಾಭಿಮಾನಿಗಳು ವಿಶೇಷ ಆಸಕ್ತಿಯಿಂದ ಬರಮಾಡಿಕೊಳ್ಳುತ್ತಾರೆಂದು ಆಶಿಸಿದ್ದೇನೆ. ಈ ಗ್ರಂಥವನ್ನು ಅನುವಾದ ಮಾಡಿರುವ ಶ್ರೀ ಆರ್.ವಿ ಕುಲಕರ್ಣಿ ಅವರಿಗೆ ಪರಿಷತ್ತಿನ ಕೃತಜ್ಞತೆಗಳು. ಈ ಕೃತಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿದ ಮುದ್ರಣಾಲಯಕ್ಕೆ ಅಭಿನಂದನೆಗಳು.

ಧರ್ಮದರ್ಶಿ ಹರಿಕೃಷ್ಣ ಪುನರೂರು
ಅಧ್ಯಕ್ಷರು

# ಪೀಠಿಕೆ

ಎಂಟನೆಯ ತೀರ್ಥಂಕರನ ಚರಿತ್ರೆಯನ್ನು ನಿರೂಪಿಸುವ ಚಂದ್ರಪ್ರಭಪುರಾಣವು ಪ್ರಾಚೀನ ಚಂಪೂ ಕಾವ್ಯಗಳಲ್ಲಿ ತುಂಬ ಪ್ರಸಿದ್ಧವಾದ ಕಾವ್ಯ. ಅಭಿನವವಾದಿ ವಿದ್ಯಾನಂದನ "ಕಾವ್ಯಸಾರ"ದ ಮೇರೆಗೆ ಈ ಕಾವ್ಯಕ್ಕೆ "ಅಗ್ಗಳ ಲೀಲಾವತಿ" ಎಂಬ ಹೆಸರೂ ಇದ್ದಂತೆ ತೋರುತ್ತದೆ. ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರವೆಂಬ ಪದ್ಯಸಂಕಲನಗಳಲ್ಲಿ ಈ ಕಾವ್ಯದ ಅನೇಕ ಪದ್ಯಗಳು ಉದ್ಧೃತವಾಗಿವೆ. ರಸರತ್ನಾಕರದಲ್ಲಿಯೂ, ಶಬ್ದಾನುಶಾಸನದಲ್ಲಿಯೂ ಈ ಪುರಾಣದ ಪದ್ಯಗಳನ್ನು ಹಲವಾರು ಸ್ಥಳಗಳಲ್ಲಿ ಉದಾಹರಿಸಲಾಗಿದೆ. ಕ್ರಿ.ಶ. ೧೮೬೦ ರಲ್ಲಿದ್ದ ಹಿರಣ್ಯ ಗರ್ಭಕವಿಯು "ವಿಶ್ವಪರೀಕ್ಷಣ"ದಲ್ಲಿ ಚಂದ್ರಪ್ರಭ ಪುರಾಣದ ಸೂಕ್ತಿಗಳನ್ನು ಅಳವಡಿಸಿಕೊಂಡಿರುವುದು ಕಾಣುತ್ತದೆ. ಹೀಗೆ ಕಾವ್ಯರಸಿಕರಿಗೂ, ರಸಾಲಂಕಾರ ಮೊದಲಾದ ಲಕ್ಷಣ ಗ್ರಂಥಗಳಿಗೂ, ವೈಯಾಕರಣರಿಗೂ ಮೆಚ್ಚಿಗೆಯಾಗುವ ಅನೇಕಾಂಶಗಳನ್ನು ಒಡಗೊಂಡ ಈ ಕಾವ್ಯ ಕಾವ್ಯಕಲಾನಿಧಿ ಗ್ರಂಥಮಾಲೆಯ ಐದನೆಯ ಕುಸುಮವಾಗಿ ೧೯೦೧ರಲ್ಲಿ ಪ್ರಕಟವಾಗಿದ್ದು, ಓದುಗರಿಗೆ ಅದರ ಪ್ರತಿಗಳು ಈಗ ಅಲಭ್ಯವೆನಿಸಿದುದರಿಂದ, ಕನ್ನಡ ಸಾಹಿತ್ಯ ಪರಿಷತ್ತಿನ ಅನುವಾದಕ ಮಂಡಲಿ ಅನುವಾದ ಸಹಿತವಾಗಿ ಇದನ್ನು ಪ್ರಕಟಿಸುತ್ತಲಿದೆ.

**ಕವಿ ವಿಚಾರ :**

ಚಂದ್ರಪ್ರಭಪುರಾಣದ ಕರ್ತೃ ಅಗ್ಗಳದೇವ. ಮೂಲಸಂಘ ದೇಶೀಗಣ ಪುಸ್ತಕ ಗಚ್ಛ ಕೊಂಡಕುಂದಾನ್ವಯದಲ್ಲಿ ಹುಟ್ಟಿ, ವಿನಯಾಗ್ರಣಿಯೂ ವಿಮಲ ಸ್ವಭಾವದವನೂ ಎಂದು ಪ್ರಸಿದ್ಧನಾದವನು. (೧–೫೩) ತಂದೆಯ ಹೆಸರು ಶಾಂತೀಶ; ತಾಯಿ ವಾಚಾಂಬಿಕೆ. (೧–೫೪) ಇಂಗಳೇಶ್ವರದ ಚಂದ್ರಪ್ರಭನು ಈತನಿಗೆ ಆರಾಧ್ಯದೇವತೆ (೧–೫೨). ತ್ರೈವಿದ್ಯ ಚಕ್ರವರ್ತಿಯೆನಿಸಿದ ಶ್ರುತಕೀರ್ತಿದೇವನು ಅಗ್ಗಳದೇವನಿಗೆ ಗುರು. (೧–೫೨ ; ಮತ್ತು ಆಶ್ವಾಸಾಂತ ಗದ್ಯ). ಈ ಗುರುವಿನ ಆಜ್ಞಾನುಸಾರವಾಗಿಯೆ ಕವಿ ಪ್ರಸ್ತುತ ಗ್ರಂಥವನ್ನು ಬರೆದನೆಂದು ಬೀಳಗಿ ತಾಲೂಕಿನ ಶಾಸನದಲ್ಲಿರುವ ಈ ಕೆಳಗಿನ ಪದ್ಯದಿಂದ ತಿಳಿಯುತ್ತದೆ :

**ಶ್ರುತಕೀರ್ತಿದೇವನತ್ಯೂ**
**ರ್ಜಿತ ಕೀರ್ತಿತನಾತ್ಮಶಿಷ್ಯನಿಂದಗ್ಗಳನಿಂ**
**ದತಿಶಯಿತ ಕಾವ್ಯಮಾರ್ಗದೆ**
**ನುತಚಂದ್ರಪ್ರಭಪುರಾಣಮಂ ಪೇಳಿಸಿದಂ**

II

ಇದಲ್ಲದೆ ಈತನ ವಾಕ್‌ಪ್ರಗುಂಫನವನ್ನು ಮೆಚ್ಚಿ ಹೊಗಳಿ, ವಿನೇಯ ವಿಪಶ್ಚಿದ್ ವೃಂದವು "ಕೇವಣಿಸು ವಾಕ್ಸುವರ್ಣದೊಳೊಲವಿಂ ಸಂದ ಜಿನಚರಿತರತ್ನಮಂ" ಎಂದು ಹೇಳಲಾಗಿ, ಅವರ ಅನುಜ್ಞೆಯೂ ತನ್ನ ಕೃತಿ ನಿರ್ಮಾಣಕ್ಕೆ ಕಾರಣವೆಂದು ಕವಿ ತಿಳಿಸುತ್ತಾನೆ (೧-೬೦). ಬಲ್ಲವರು ಬಂದು ಹೊಗಳಿ "ಬರೆ"ಯೆಂದು ಪ್ರೋತ್ಸಾಹವಿತ್ತುದೇ ತಮ್ಮ ಕೃತಿ ರಚನೆಗೆ ಪ್ರೇರಣೆಯೆಂದು ಹೇಳುವುದು ನಮ್ಮ ಕವಿಗಳ ವಾಡಿಕೆ. ಇದು ಕೇವಲ ವಿನಯಪ್ರದರ್ಶನವಾಗಿರಲಾರದು. ಮಹಾಗ್ರಂಥರಚನೆಗೆ ಮೊದಲು ಬಿಡಿ ಪದ್ಯಗಳನ್ನೊ, ಶಾಸನ ಪದ್ಯಗಳನ್ನೊ ಇತರ ಚಿಕ್ಕ ಕಾವ್ಯಗಳನ್ನೊ ಬರೆದು ಈ ಕವಿಗಳು ಜನಪ್ರಿಯರಾಗಿರಬೇಕು. ಪಾರ್ಶ್ವನಾಥ ಪುರಾಣದ (೧-೬೧) ಪದ್ಯದ ಮೇರೆಗೆ **"ವಾಸ್ತವ ಭಕ್ತಿಯುತಂ ರೂಪಸ್ತವನ ಮಣಿಪ್ರವಾಳಮಂ ಜಿನನಾಸ್ಥಾನಸ್ತವನಮಂ"** ರಚಿಸಿ ಭುವನಸ್ತುತನಾದ ಅಗ್ಗಳದೇವನು ಎಲ್ಲರಿಗಿಂತ "ಅಗ್ಗಳ"ನೆನಿಸಿದನಂತೆ. ಈ ಎರಡೂ ಕೃತಿಗಳು ಉಪಲಬ್ಧವಾಗಿಲ್ಲ.

> **ಗಳಪರ್ ಪವಣಜಿಯದೆ ಬೆಸ**
> **ಗೊಳೆ ಸೆಣಸಿಂ ಲೋಕದೊಳಗೆ ವರ್ತಿಪ ವಿಲಸತ್**
> **ಕಳೆಗಳೆನಿತನಿತಱಿಕೊಳಮ**
> **ಗ್ಗಳಗಣ್ಣಂ ತೋರ್ಪನಗ್ಗಳಂ ನೃಪಸಭೆಯೊಳ್** (೧-೫೭)

ಎಂಬ ಮಾತಿನಿಂದ ಈ ಕವಿಗೆ ಯಾವುದೊ ಒಂದು ರಾಜಸಭೆಯಲ್ಲಿ ಗೌರವ ಸಂದಿರಬಹುದೆಂದು ತೋರುತ್ತದೆ. ಆದರೆ ತನಗೆ ರಾಜಾಶ್ರಯವಿತ್ತೆಂದು ಕವಿ ಎಲ್ಲಿಯೂ ಸೂಚಿಸಿಲ್ಲ. ಮೇಲೆ ಉದಾಹರಿಸಿದ ಪದ್ಯವು ಅವನ ಬಹುಶ್ರುತತ್ವವನ್ನು ಬೆರಳುಮಾಡಿ ತೋರುತ್ತದೆ. ತಾನು ಉಭಯಾಯತ್ತ ಚಿತ್ತನೆಂದೂ ಉಭಯಕವಿತಾ ವಿಶಾರದನೆಂದೂ (೧-೫೫) ಕವಿ ಹೇಳಿಕೊಂಡಿದ್ದಾನೆ. ಅವನು ಬರೆದಿರಬಹುದಾದ ಸಂಸ್ಕೃತ ಕಾವ್ಯ ನಮಗೆ ದೊರೆಯದಿದ್ದರೂ, ಅವನ ಸಂಸ್ಕೃತ ಪಾಂಡಿತ್ಯಕ್ಕೆ ಚಂದ್ರಪ್ರಭಪುರಾಣದಲ್ಲಿ ಹೇರಳವಾದ ಸಾಕ್ಷ್ಯಗಳು ಅಡಿಗಡಿಗೆ ಸಿಕ್ಕುತ್ತವೆ. ೧೨ನೆಯ ಆಶ್ವಾಸದಲ್ಲಿ ೧೫೫ ರಿಂದ ೧೫೮ ಹಾಗು ೧೬ನೆಯ ಆಶ್ವಾಸದಲ್ಲಿ ೭೭ನೆಯ ಪದ್ಯಾನಂತರ ೨೫ ಸಂಸ್ಕೃತ ಶ್ಲೋಕಗಳಿವೆ. ಉಪಮೆ, ರೂಪಕ ಹಾಗೂ ಶ್ಲೇಷಾಲಂಕಾರಗಳಲ್ಲಿ ಮಾತ್ರವಲ್ಲದೆ ಸಮವಸರಣ ಮಂಡಪದ ವರ್ಣನೆಯಲ್ಲಿ ವಾಸ್ತುಶಿಲ್ಪ, ಮೂರ್ತಿಶಿಲ್ಪ, ಚಿತ್ರಕಲೆ, ಗಾಯನ, ವಾದನ, ನೃತ್ಯ, ರಸಶಾಸ್ತ್ರ, ಅಲಂಕಾರಶಾಸ್ತ್ರ, ಮೊದಲಾದುವುಗಳ ಪರಿಭಾಷೆಯನ್ನೂ ವಿವರಗಳನ್ನೂ ಹೇರಳವಾಗಿ ಕಾಣುತ್ತೇವೆ; ಇಂದ್ರನ ನರ್ತನ ವರ್ಣನೆಯಲ್ಲಿ ನಾಟ್ಯಶಾಸ್ತ್ರದ ಪಾಂಡಿತ್ಯವೂ ಪ್ರಕಟವಾಗುತ್ತದೆ. ಮುಹಗ್ಗಳ ಅಡಕಿ ಮೊದಲಾದ ಮಲ್ಲಯುದ್ಧದ ವರಸೆಗಳೂ (೫-೭೮) ಬಿಡುವುರಿಯೆಣ್ಣೆ ಸೂಸುವ ಕನಲ್ಗಡಿ ಮುಂತಾದ ಕೋಟೆ ಕಾಳಗದ ವಿವರಗಳೂ (೫-೧೦೫ ಮತ್ತು ೧೦೬), ಹನ್ನೆರಡು ಹಸ್ತಪ್ರಹಾರ,

ಹದಿನೆಂಟು ಕೋಡೇಱು ಮುಂತಾದ ಆನೆವಾಂಗಿನ ಪರಿಗಳೂ (೯–೧೧೧ವ)– ಈ ಕವಿಯ ಬಹುಶ್ರುತತೆಗೆ ನಿದರ್ಶನ.

ತಾನು "ಜಿನಮತ ಶ್ರೀಕೋಶವೇಶ್ಮ"ನೆಂದು ಅಗ್ಗಳನು ಹೇಳಿಕೊಂಡಿರುವುದು (೧–೫೨) ಆತ್ಮಸ್ತುತಿಯಲ್ಲ. ಜಿನಾಗಮವನ್ನು ಚೆನ್ನಾಗಿ ತಿಳಿದುಕೊಂಡು ಸುಕರವಾಗಿ ನಿರೂಪಿಸುತ್ತಾನೆ. ಇಷ್ಟೆಲ್ಲ ಇದ್ದರೂ ಅಗ್ಗಳದೇವನು ತಾನೆ ಹೇಳಿಕೊಂಡಂತೆ "ವಿನಯಾಗ್ರಣಿ". ಪಂಪ, ಪೊನ್ನ, ರನ್ನರು ರಚಿಸಿದ ಕಾವ್ಯತ್ರಯಕ್ಕೆ ಜಗತ್ತ್ರಯವೆ ಬೆಲೆಯಾಗಿ ಹೋಯಿತೆಂದ ಮೇಲೆ "ಆಂ ಪೇೞ್ದ ಚಂದ್ರಪ್ರಭೋದಯ ವಿಸ್ತಾರಿಯಪ್ಪ ಕಾವ್ಯಮಿದಮುೞ್ಕೆ ಪಕ್ಕಾಗದೇ"? (೧–೬೬) ಎಂಬಲ್ಲಿಯೂ, "ಸೂರ್ಯನಂತೆ ನಭಮಂ ಬೆಳಪೊಂದುಳವಿಲ್ಲದಿರ್ದೊಡಂ ತಾರಗೆಯಲ್ಲಿ ಸಂಭವಿಸಿ ತನ್ನನೆ ತಾಂ ಬೆಳಪಂದದಿಂದೆ ಮದ್ಭಾರತಿಗಾದ್ಯಸೂರಿವಚದಂತೆ ಜಿನಸ್ತುತಿ ದಕ್ಷವೃತ್ತಿ ಕೈಸಾರದೊಡಂ ಪವಿತ್ರಮಿದೆನಿಪ್ಪುದು ತನ್ನನೆ ತತ್ಪ್ರಸಂಗದಿಂ" (೧–೬೫) ಎಂಬಲ್ಲಿಯೂ ಕವಿಯು ವಿನಯವನ್ನೆ ತೋರಿದ್ದಾನೆ. ಪಂಪನಂತೆ ಈತನು ಕೂಡ ತನ್ನ ರೂಪ ಮೋಹಕವಾಗಿತ್ತೆಂದು ಹೇಳಿಕೊಂಡಿದ್ದಾನೆ :

**ನಾರೀನಯನೋತ್ಪಲ ಹೃ**
**ನ್ನೀರೇಜಮನೊಡಸಲರ್ಚೆ ಶಶಿಸೂರ್ಯಸಮಾ**
**ಹಾರದಿನಾದವೊಲತುಳಾ**
**ಕಾರಂ ಸೌಭಾಗ್ಯಸಾರಮಾಯ್ತಗ್ಗಳನಾ (೧–೫೬)**

ಈ ರೂಪಕ್ಕಿಂತ ಅಧಿಕವಾಗಿ, ತನ್ನ ತಂದೆ ತಾಯಿಗಳಿಂದಲೆ ನಿಸರ್ಗವಾಗಿ ತನಗೆ ಬಂದುವೆಂಬ ಆತನ "ಉಪಶಾಂತತೆ" ಹಾಗು "ವಚಶ್ಚತುರತೆ"ಗಳು ಜನಮನೋಹರವಾದುವು. ಪೂರ್ವ ಕಾವ್ಯಗಳನ್ನು ತನ್ನ ಕೃತಿ ಇಕ್ಕಿ ಮೆಟ್ಟಿತೆಂಬಂತಹ ಅಹಂಕಾರದ ಮಾತಾಗಲಿ, ಪರಮತ ವಿಡಂಬನೆಯಾಗಲಿ ಇಲ್ಲದಿರುವುದು ಅಗ್ಗಳದೇವನ "ವಿಮಲತರ ಸ್ವಭಾವ"ಕ್ಕೆ ಸಾಕ್ಷಿ. ತನ್ನ ಕಾವ್ಯಸಾಮರ್ಥ್ಯದ ಬಗೆಗೆ ಆತನಿಗೆ ವಿಶ್ವಾಸವಿದೆ. ಕುಕವಿಗಳಿಗೆ ಆತನು ಅಂಜುವವನಲ್ಲ, ಇಷ್ಟೇ ಅಲ್ಲ, ನಿಷ್ಠುರ ವಿಮರ್ಶೆ ಬರಲಿ, ಅದರಿಂದ ನನ್ನ ಕಾವ್ಯಕ್ಕೆ ಶ್ರೇಯವೇ ಎನ್ನುತ್ತಾನೆ.

**ಖರಶಾಣ ಕಷಣದಿಂ ಮಣಿ**
**ಗುರು ತೇಜೋವೃತ್ತಿ ನೆಗೞ್ವವೋಲಕ್ಕುಂ ನಿ**
**ಷ್ಠುರ ವಾಕ್ಪಾಷಾಣ ಪರಿ**
**ಸ್ಫುರಿತಂ ಕೃತಿರತ್ನದೊಳ್ ಸಮುಜ್ಜ್ವಲ ಭಾವಂ (೧–೪೪)**

ಈ ರತ್ನವನ್ನು ಪರೀಕ್ಷಿಸಿ ಹಿಂದಿನವರು ಬೆಲೆ ಕಟ್ಟಿದರು. ಈಗ ನಾವು ಅದನ್ನು ಪುನಃ ಬೆಲೆ ಕಟ್ಟಬೇಕಾಗಿದೆ. ಗ್ರಂಥವಿಮರ್ಶೆಯಲ್ಲಿ ಮುಂದೆ ಇದನ್ನು ಕುರಿತು ಹೇಳೋಣ.

ಈ ಕವಿಯ ಕಾಲ ವಿಚಾರವಾಗಿ ವಿವಾದವೇನೂ ಇಲ್ಲ. "ಏಕಾದಶ ಶತಮುಂ ಮತ್ತೇಕಾದಶವಾಗೆ ಶಕನೃಪಾಬ್ದಂ" ಎಂದು ಕವಿಯೆ (೧೬-೮೭) ಹೇಳಿರುವುದರಿಂದ ಗ್ರಂಥ ಪರಿಸಮಾಪ್ತಿಯ ಕಾಲ ಕ್ರಿ.ಶ. ೧೧೮೯. ಈ ವರ್ಷಕ್ಕೆ ೨೦-೩೦ ವರ್ಷ ಮೊದಲು ಕವಿ ಹುಟ್ಟಿರಬಹುದು. ಮುಂದೆ ಎಷ್ಟು ದಿನ ಇದ್ದನೆಂದು ತಿಳಿದಿಲ್ಲ.

**ಚಂದ್ರಪ್ರಭ ಚರಿತೆಯ ಹರಹು :**

I . **ಸಂಸ್ಕೃತದಲ್ಲಿ** : ೧. ಕವಿ ಪರಮೇಷ್ಠಿಗಳ ಚತುರ್ವಿಂಶತಿ ತೀರ್ಥಂಕರ ಚರಿತ್ರೆಯಲ್ಲಿ ಚಂದ್ರಪ್ರಭ ಚರಿತೆಯೂ ಒಂದಾಗಿರಬೇಕು. ಆದರೆ ಈ ಗ್ರಂಥ ಉಪಲಬ್ಧವಿಲ್ಲ. ಕ್ರಿ.ಶ. ೧೬೨೦ ರಲ್ಲಿ ರಚಿತವಾದ ದೊಡ್ಡಯ್ಯನ ಚಂದ್ರಪ್ರಭ ಸಾಂಗತ್ಯ (೧-೧೯) ದ ಮೇರೆಗೆ ಒಬ್ಬೊಬ್ಬ ಜಿನನ ಕಥೆ "ಸಪಾದಲಕ್ಷ" ಗ್ರಂಥ ಪ್ರಮಾಣವಾಗಿತ್ತಂತೆ.

೨. ಗುಣಭದ್ರಾಚಾರ್ಯಕೃತ ಉತ್ತರಪುರಾಣದ ೫೪ನೆಯ ಪರ್ವದಲ್ಲಿ ೨೭೭ ಶ್ಲೋಕಗಳಲ್ಲಿ ಈ ಪುರಾಣ ನಿರೂಪಿತವಾಗಿದೆ.

೩. ಅಸಗಕವಿ ಪ್ರಣೀತವಾದ ಚಂದ್ರಪ್ರಭಪುರಾಣ (ಬಹುಶಃ ಸಂಸ್ಕೃತದಲ್ಲಿ ರಚಿತವಾದುದು) ಈವರೆಗೆ ಉಪಲಬ್ಧವಾಗಿಲ್ಲ.

೪. ಕ್ರಿ.ಶ. ೧೦೨೫ಕ್ಕೆ ಮೊದಲು ಇದ್ದ ವೀರನಂದಿ ೧೮ ಸರ್ಗಗಳಲ್ಲಿ ಚಂದ್ರ ಪ್ರಭ ಚರಿತವನ್ನು ಕಾವ್ಯವಾಗಿ ರಚಿಸಿದ್ದು, ಅಗ್ಗಳನು ಇದನ್ನೆ ವಿಶೇಷವಾಗಿ ಅನುಸರಿಸಿದ್ದಾನೆ.

೫. ಕ್ರಿ.ಶ. ೧೨೦೭ ರಲ್ಲಿ ದೇವೇಂದ್ರ ಮತ್ತು ೧೨೪೫ ರಲ್ಲಿ ಸರ್ವನಂದಿಸೂರಿ ಇಬ್ಬರೂ ಚಂದ್ರಪ್ರಭ ಚರಿತಗಳನ್ನು ರಚಿಸಿದರು.

೬. ಬಂಗಾಳದ ಧರ್ಮಚಂದ್ರ ಮತ್ತು ಪಂಡಿತಾಚಾರ್ಯ ಎಂಬಿಬ್ಬರು ಕೂಡ ಚಂದ್ರಪ್ರಭ ಚರಿತಗಳನ್ನು ರಚಿಸಿದರು.

೭. ಅಂಧಸೇನನೆಂಬಾತನೂ ಇದೇ ಚರಿತವನ್ನು ಬರೆದಂತೆ ತಿಳಿಯುತ್ತದೆ.

II **ಪ್ರಾಕೃತದಲ್ಲಿ** : ೧. ಕ್ರಿ.ಶ. ೧೦೮೧ ರಲ್ಲಿ ವೀರಸೂರಿ.

೨. ಕ್ರಿ.ಶ. ೧೧೨೧ ರಲ್ಲಿ ಧನದೇವ,

೩. ಗುಜರಾತದ ಕುಮಾರಪಾಲನ ಆಳಿಕೆಯಲ್ಲಿ ಹರಿಭದ್ರಸೂರಿ ಈ ಮೂವರೂ ಚಂದ್ರಪ್ರಭ ಚರಿತಗಳನ್ನು ರಚಿಸಿರುವರು.

iA

III. ಕನ್ನಡದಲ್ಲಿ : ೧. ಶ್ರೀವಿಜಯ ಕವಿ ಕೃತವಾದ "ಚಂದ್ರಪ್ರಭ ಪುರಾಣ"ವೇ ತೀರ ಪ್ರಾಚೀನ, ಆದರೆ ಅದು ಈವರೆಗೆ ದೊರೆತಿಲ್ಲ.

೨. ಚಾವುಂಡರಾಯ ಪುರಾಣದಲ್ಲಿ ಚಂದ್ರಪ್ರಭ ಚರಿತ್ರೆಯೂ ಅಡಕವಾಗಿ ದೊರೆಯುತ್ತದೆ.

೩. ಅಗ್ಗಳದೇವನ ಚಂದ್ರಪ್ರಭ ಪುರಾಣ.

೪. ಕ್ರಿ.ಶ. ೧೫೭೮ ರಲ್ಲಿ ರಚಿತವಾದ ನಿಟ್ಟೂರ ದೊಡ್ಡಣಾಂಕನ "ಚಂದ್ರಪ್ರಭ ಚರಿತ್ರೆ" ಎಂಬ ಭಾಮಿನೀ ಷಟ್ಪದಿಯ ೩೬ ಸಂಧಿಗಳ ಕಾವ್ಯ.

೫. ಕ್ರಿ.ಶ. ೧೬೨೦ ರಲ್ಲಿ ರಚಿತವಾದ ಪಿರಿಯಾಪಟ್ಟಣದ ದೊಡ್ಡಯ್ಯನ ೨೮ ಸಂಧಿಗಳ ಸಾಂಗತ್ಯ ಕಾವ್ಯ.

[ಕೊನೆಯ ಎರಡೂ ಕಾವ್ಯಗಳು ಅಗ್ಗಳನನ್ನು ಎಡೆಬಿಡದೆ ಅನುಸರಿಸಿವೆ.]

**ಅಗ್ಗಳದೇವನ ಕೃತಿಗೆ ಆಕರ :**

ಉಪಲಬ್ಧವಾಗಿರುವ ಗ್ರಂಥಗಳಲ್ಲಿ ಅಗ್ಗಳನಿಗೆ ಪೂರ್ವಾಕರವಾಗಿರಬಹುದಾದುವು ಉತ್ತರಪುರಾಣ ಹಾಗು ವೀರನಂದಿಯ ಕಾವ್ಯ. ಇವೆರಡರಲ್ಲಿ ಮೊದಲನೆಯದು ಅಗ್ಗಳನಿಗೆ ಆಕರವಾಗಿರಲಾರದು.

ಉತ್ತರಪುರಾಣದ ಕಥೆಗೂ, ಪ್ರಸ್ತುತ ಚಂದ್ರಪ್ರಭ ಪುರಾಣದ ಕಥೆಗೂ ಇರುವ ಈ ಕೆಳಗಿನ ವ್ಯತ್ಯಾಸಗಳನ್ನು ಗಮನಿಸಬಹುದು.

೧. ಉತ್ತರಪುರಾಣವು ಶ್ರೀವರ್ಮಭವದಿಂದ ಆರಂಭಿಸಿ ಅನಂತರದ ಭವಾವಳಿಗಳನ್ನು ಕ್ರಮವಾಗಿ ನಿರೂಪಿಸುತ್ತದೆ. ಅಗ್ಗಳನು ಪದ್ಮನಾಭ ಭವದಿಂದ ಆರಂಭಿಸಿ, ಶ್ರೀಧರ ಮುನಿಗಳ ಮೂಲಕ ಹಿಂದಿನ ಭವಗಳನ್ನು ನಿರೂಪಿಸುತ್ತಾನೆ.

೨. ಕನಕಪ್ರಭನ ವೈರಾಗ್ಯಕ್ಕೆ ಕಾರಣವಾಗುವ ಮುದಿಯೆತ್ತಿನ ಪ್ರಸಂಗ, ಶ್ರೀಕಾಂತೆಗೆ ಮಕ್ಕಳಾಗದಿರಲು ಆಕೆಯ ಪೂರ್ವಜನ್ಮದ ಘಟನಾವಳಿ, ಅಜಿತಸೇನನನ್ನು ಚಂಡರುಚಿಯೆಂಬ ಅಸುರನು ಎತ್ತಿಕೊಂಡು ಹೋದುದು, ಹಿರಣ್ಯನೆಂಬ ಭವನಾಮರನ ಪ್ರಸಂಗ, ಆತನ ಪೂರ್ವಭವದ ಕಥೆ, ಜಯವರ್ಮನ ಮಗಳು ಶಶಿಪ್ರಭೆಗಾಗಿ ಮಹೇಂದ್ರನ ಬೇಡಿಕೆ. ಮೊದಲಾದುವು, ಆತನ ಸೋಲು, ಧರಣೀಧ್ವಜನ ಕಾಳಗ ಹಾಗೂ ವಧೆ– ಈ ಪ್ರಸಂಗಗಳು ಉತ್ತರ ಪುರಾಣದಲ್ಲಿ ಇಲ್ಲ. ಅದರಂತೆ 'ವನಕೇಳಿ'ಯೆಂಬ ಆನೆಯ ಪ್ರಸಂಗ, ಪೃಥ್ವೀಪಾಲನ ಪಂದಲೆಯ ದರ್ಶನದಿಂದ ಪದ್ಮನಾಭನಿಗೆ ವೈರಾಗ್ಯವೊದಗಿತೆಂಬ ನಿರೂಪಣೆ, ಕಮಲಪ್ರಭೆಯ ಪ್ರಸಕ್ತಿ ಇವೂ ಉತ್ತರಪುರಾಣದಲ್ಲಿ ಇಲ್ಲ.

೩. ಉತ್ತರಪುರಾಣವು ಕೇವಲ ಪುರಾಣವಾಗಿರುವುದರಿಂದ ಅದರಲ್ಲಿ ಜಲಕೇಳಿ, ವನಕೇಳಿ, ವೇಶ್ಯಾವಾಟ ವರ್ಣನೆ ಮೊದಲಾದುವು ಇಲ್ಲ.

ಇವೆಲ್ಲವೂ ವೀರನಂದಿಯ ಕಾವ್ಯದಲ್ಲಿ ಇವೆ. "ಕಥಾ ಸಂವಿಧಾನದಲ್ಲೂ, ಆನುಪೂರ್ವಿಯಲ್ಲೂ, ವರ್ಣನೆಗಳಲ್ಲೂ ಅಗ್ಗಳನ ಕಾವ್ಯ ವೀರನಂದಿಯ ಕೃತಿಯನ್ನು ತುಂಬ ಹೋಲುತ್ತದೆ" ಎಂಬ ಡಾ.ದೊ.ಲ. ನರಸಿಂಹಾಚಾರ್ಯರ ಮಾತು ಸರಿಯಾಗಿದೆ.*

ವೀರನಂದಿಯ ಕಾವ್ಯವನ್ನು ಮೂಲ ಆಕರವಾಗಿ ಇಟ್ಟುಕೊಂಡಿದ್ದರೂ ಅಗ್ಗಳನು ಅವನ ನೊಣಪ್ರತಿಯಾಗಿಲ್ಲ. ಇದ್ದಂತೆ ಕೆಲವೆಡೆ ಭಾಷಾಂತರಿಸುವುದು, ವಿಸ್ತರಿಸುವುದು, ಮಾರ್ಪಡಿಸುವುದು, ಅಲ್ಪವ್ಯತ್ಯಾಸ ಮಾಡಿ ಮೂಲವನ್ನು ಬೇರೊಂದು ದಿಕ್ಕಿಗೆ ತಿರುಗಿಸುವುದು, ಸ್ವಂತ ಆಲೋಚನೆಯನ್ನು ಅಂಟಿಸುವುದು- ಹೀಗೆ ನಾನಾ ಬಗೆಯಾಗಿ ವೀರನಂದಿಯ ಕಾವ್ಯವನ್ನು ಅಗ್ಗಳದೇವನು ಬಳಸಿಕೊಂಡಿರುವನೆಂದು ಹೇಳಿ, ಡಾ. ನರಸಿಂಹಾಚಾರ್ಯರು ನಾಲ್ಕಾರು ಪದ್ಯಗಳನ್ನು ಉದಾಹರಿಸಿದ್ದಾರೆ. ಪಂಪನು ಪೂರ್ವಪುರಾಣವನ್ನೂ, ಪೊನ್ನನು ಅಸಗನ ಶಾಂತಿಪುರಾಣವನ್ನೂ ಇದೇ ರೀತಿಯಾಗಿ ಬಳಸಿಕೊಂಡುದುಂಟು. ವೀರನಂದಿಯ ಕಾವ್ಯವನ್ನೂ ಅಗ್ಗಳನ ಪುರಾಣವನ್ನು ಪಕ್ಕ ಪಕ್ಕದಲ್ಲಿಟ್ಟು ವಿವರವಾಗಿ ಹೋಲಿಸಿ ನೋಡಬೇಕು. ಎಂದರೆ ಅಗ್ಗಳನ ಸ್ವೋಪಜ್ಞತೆಯೇನೆಂಬುದು ಸ್ಪಷ್ಟವಾದೀತು. ಇದಿನ್ನೂ ಆಗಬೇಕಾದ ಕೆಲಸ. ಆತುರದಿಂದ ಹೇಳುವ ಬೀಸು ಮಾತುಗಳಿಂದ ವಿಮರ್ಶೆಗೆ ಶೋಭೆಯುಂಟಾಗುವುದಿಲ್ಲ.

## ಗ್ರಂಥವಿಮರ್ಶೆ :

೧. **ಪುರಾಣಸಂಪ್ರದಾಯ :-** ಉತ್ತರ ಪುರಾಣದ ೨೭೭ ಶ್ಲೋಕಗಳಲ್ಲಿ ಮುಗಿಯುವ ಏಳು ಭವಗಳ ಕಥೆ ಅಗ್ಗಳನ ಚಂದ್ರಪ್ರಭ ಪುರಾಣದಲ್ಲಿ ಹದಿನಾರು ಆಶ್ವಾಸಗಳಾಗಿ ಹಬ್ಬಿದೆ. ಪಂಪಾದಿಗಳಿಂದ ಸಾಗಿಬಂದಿರುವ ಜೈನಪುರಾಣಗಳ ಪರಂಪರೆಯ ಮೇರೆಗೆ ಪುರಾಣದಲ್ಲಿ ಲೋಕಾಕಾರಕಥನವೆ ಮೊದಲಾದ ಆಗಮಾಂಶಗಳೊಂದಿಗೆ ದೇಶನಗರಾದಿ ವರ್ಣನೆಗಳೂ ಸೇರಿ ಅಷ್ಟಲಕ್ಷಣಗಳನ್ನು ಅದು ಒಳಗೊಳ್ಳಬೇಕು. ಕಾವ್ಯಪರಂಪರೆಯ ಮೇರೆಗೆ ಸಮುದ್ರ, ಪರ್ವತ, ಮೊದಲಾದ ಹದಿನೆಂಟು ವರ್ಣನೆಗಳಲ್ಲಿ ಸಾಧ್ಯವಾದಷ್ಟು ಅದರಲ್ಲಿ ಬರಬೇಕು. ಹೀಗಾಗಿ ಧರ್ಮ ಹಾಗೂ ಕಾವ್ಯಧರ್ಮವೆಂಬೆರಡನ್ನೂ ಸಮನ್ವಯಗೊಳಿಸುವ ಒಂದು ಚಂಪೂ ಸಂಪ್ರದಾಯ ಪೂರ್ವದಿಂದಲೂ ನಡೆದು ಬಂದಿತ್ತು. ಆ ಸಂಪ್ರದಾಯಕ್ಕೆ ಬದ್ಧವಾದ ಕಾವ್ಯ ಹೀಗೆ ವಿಸ್ತಾರವನ್ನು ಪಡೆಯುವುದು ಸ್ವಾಭಾವಿಕ.

---

* ಪೀಠಿಕೆಗಳು, ಲೇಖನಗಳು ಪು. ೨೮೪.

೨. ಕಥೆ-ಭವಾವಳಿ :- ಶ್ರೀವರ್ಮ, ಶ್ರೀಧರ, ಅಜಿತಸೇನ, ಅಚ್ಯುತೇಂದ್ರ, ಪದ್ಮನಾಭ ಮತ್ತು ಅಹಮಿಂದ್ರ ಎಂಬ ಆರು ಪೂರ್ವಭವಗಳ ಕಥೆ ಮೊದಲ ಹತ್ತೂವರೆ ಆಶ್ವಾಸಗಳಲ್ಲಿ ಬಂದು, ಉಳಿದ ಐದೂವರೆ ಆಶ್ವಾಸಗಳಲ್ಲಿ ಚಂದ್ರಪ್ರಭನ ಚರಿತ್ರೆ ವರ್ಣಿತವಾಗಿದೆ. ಸಂಸಾರ ಬದ್ಧವಾದ ಒಂದು ಜೀವ ಹಲವು ಜನ್ಮಗಳಲ್ಲಿ ಹಾಯ್ದು ಬಂದು, ತಪಸ್ಸಿನಿಂದ ಆತ್ಮಸಾಕ್ಷಾತ್ಕಾರ ಮಾಡಿಕೊಂಡು ಮುಕ್ತಿಗೆ ಸಲ್ಲುವುದೆಂಬುದನ್ನು ತೋರುವುದು ಜೈನ ಪುರಾಣಗಳ ಉದ್ದೇಶ. ಭವದಿಂದ ಭವಕ್ಕೆ ಈ ಜೀವ ಹೊಂದುವ ವಿಕಾಸವೇನೆಂಬುದನ್ನು ಕಂಡು ಹಿಡಿಯುವುದು ಕಷ್ಟ. ಮೊದಲನೆಯ ಭವದ ಶ್ರೀವರ್ಮನಿಗೂ ಐದನೆಯ ಭವದ ಪದ್ಮನಾಭನಿಗೂ ಆಧ್ಯಾತ್ಮ ವಿಕಾಸ ದೃಷ್ಟಿಯಿಂದ ಅಂತರವಿದೆಯೆ ? ಆತ್ಮನ ಆಂತರಿಕ ಪ್ರಗತಿಯನ್ನು ಆತನ ಬಹಿರಂಗದಲ್ಲಿ ಹೆಜ್ಜೆ ಹೆಜ್ಜೆಗೂ ಕಾಣುವುದು ಸಾಧ್ಯವಿರಲಿಕ್ಕಿಲ್ಲ. ಅಥವಾ ಅದಿನ್ನೂ ಮಾಗಬೇಕೋ ಏನೋ ! ಮಹಾವೀರನು ಅರ್ಹಂತಾವಸ್ಥೆಗೇರಲು ಇಪ್ಪತ್ತುನಾಲ್ಕು ಜನ್ಮವೆತ್ತಬೇಕಾಯಿತು. ಒಳಗೊಳಗೆಯೆ ಪರಿಪೂರ್ಣಗೊಳ್ಳುತ್ತಿರುವ ಆತ್ಮನ ಪ್ರಕಾಶನಕ್ಕೆ ಯಾವುದೊ ಒಂದು ಕಾಲ, ಯಾವುದೊ ಒಂದು ನಿಮಿತ್ತ ಅವಶ್ಯವಾಗುತ್ತಿರಬಹುದು. ಕೊನೆವರೆಗೂ ಸಂಸಾರ ಮಗ್ನನಾಗಿಯೆ ತೋರುತ್ತಿರುವ ಭರತೇಶ ಚಕ್ರವರ್ತಿಗೆ ತನ್ನ ಮಕ್ಕಳು ವೈರಾಗ್ಯ ದೀಕ್ಷೆ ವಹಿಸಿದ ಪ್ರಸಂಗ ಒಮ್ಮೆಲೆ ಮುಕ್ತಿದ್ವಾರವನ್ನು ತೆರೆಯಿತು. ಯಾವ ದೀಕ್ಷೆಯಾಗಲಿ, ತಪಶ್ಚರಣವಾಗಲಿ ಇಲ್ಲದೆ ಭರತೇಶನ ಆತ್ಮ ನೇರವಾಗಿ ಮೋಕ್ಷವನ್ನು ಪಡೆಯಿತೆಂಬ ರತ್ನಾಕರವರ್ಣಿಯ ನಿರೂಪಣೆ ಈ ದೃಷ್ಟಿಗೆ ಸೇರಿದುದು.

ಅಗ್ಗಳನು ಕತೆಯನ್ನು ಮೊದಲನೆಯ ಭವದಿಂದ ಕ್ರಮವಾಗಿ ಹೇಳದೆ, ವೀರನಂದಿಯನ್ನನುಸರಿಸಿ, ಪದ್ಮನಾಭ ಭವದಿಂದ ಆರಂಭಿಸಿ, ಹಿಂದಿನ ಜನ್ಮಗಳ ಕಥೆಯನ್ನು ಶ್ರೀಧರನೆಂಬ ಮುನಿಯ ಬಾಯಿಂದ ಹೇಳಿಸಿದ್ದಾನೆ. ಅಸಗನ್ನನುಸರಿಸಿ ಪೊನ್ನನು ಕೂಡ ಇದೇ ಬಗೆಯಾಗಿ ಶಾಂತೀಶ್ವರನ ಕಥೆಯನ್ನು ಒಂಬತ್ತನೆಯ ಭವದಿಂದ ಆರಂಭಿಸಿ ಹಿಂದಿನ ಜನ್ಮಗಳ ಕಥೆಯನ್ನು ಮುಂದೆ ಹತ್ತನೆಯ ಭವದಲ್ಲಿ ಹೇಳಿದ್ದಾನೆ. ಭವಭವಗಳಲ್ಲಿ ಬರುವ ಆತನ ಸಂಗಡಿಗರ ಹಾಗೂ ಉಪಕಥೆಗಳಲ್ಲಿ ಬರುವ ಪಾತ್ರಗಳ ಭವಾವಳಿಗಳನ್ನೂ ಹೇಳುತ್ತ ಹೋಗುವುದರಿಂದ ಕಥೆಯ ಎಳೆಯನ್ನು ಹೊಂದಿಸಿಕೊಳ್ಳುವುದು ಕಷ್ಟವಾಗುತ್ತದೆ. ಅನೇಕ ಭವಾವಳಿಗಳ ಗೋಜು ಚಂದ್ರಪ್ರಭ ಪುರಾಣದಲ್ಲಿ ಇಲ್ಲವಾದುದರಿಂದ ಕಥೆಯಲ್ಲಿ ಅಂತಹ ತೊಡಕಿಲ್ಲ.

೩. ವರ್ಣನೆಗಳು :- ಆಗಮಿಕ ಮತ್ತು ಲೌಕಿಕ ಎಂದು ಎರಡು ಬಗೆಯ ವರ್ಣನೆಗಳಿವೆ. ಪಂಚಕಲ್ಯಾಣಗಳ ತಪಸ್ಸು, ಸಮವಸರಣ ಮೊದಲಾದ ಆಗಮೋಕ್ತ ವರ್ಣನೆಗಳು ಎಲ್ಲ ಜೈನ ಪುರಾಣಗಳಲ್ಲಿಯೂ ಒಂದೇ ರೀತಿಯಾಗಿವೆ. ಪೂರ್ವಪುರಾಣದಲ್ಲಿಯ ವರ್ಣನೆಗಳಿಗೆ ಹೋಲಿಸಿದರೆ ನಮ್ಮ ಚಂಪೂ ಕವಿಗಳ

ವರ್ಣನೆಗಳು ತೀರ ಚಿಕ್ಕವೆಂದೇ ಹೇಳಬೇಕು. ಜಿನಸೇನಾಚಾರ್ಯರಿಗಿದ್ದ ಕವಿತ್ವದ, ಪಾಂಡಿತ್ಯದ ಹಾಗು ವಿವರದರ್ಶನದ ಹರಹು ಇತರತ್ರ ಕಾಣದು. ತಂತಮ್ಮ ಕಾವ್ಯಗಳಲ್ಲಿ ಅದನ್ನು ಎಷ್ಟರಮಟ್ಟಿಗೆ ಅಡಕವಾಗಿ ಅಳವಡಿಸಿಕೊಳ್ಳಬಹುದೆಂಬುದನ್ನೂ ಯೋಚಿಸಿ ಆಮೇಲೆ ಬಂದ ಜೈನ ಪುರಾಣಕವಿಗಳು ನಿರ್ಧರಿಸಿಕೊಂಡರು. ಇದು ಸಂಪ್ರದಾಯಬದ್ಧವಾದ ಆಗಮಿಕ ನಿರೂಪಣೆಯಾದುದರಿಂದ ಕವಿಗಳಿಗೆ ಈ ವರ್ಣನೆಗಳಲ್ಲಿ ಬದಲಾವಣೆ ಮಾಡುವ ಸ್ವಾತಂತ್ರ್ಯವಿಲ್ಲ. ಉಕ್ತಿಚಮತ್ಕಾರದಿಂದಲೊ ಅಲಂಕಾರ ವಿನ್ಯಾಸದಿಂದಲೊ, ಒಬ್ಬೊಬ್ಬ ಕವಿ ತನ್ನ ವೈಶಿಷ್ಟ್ಯವನ್ನು ಕೆಲಮಟ್ಟಿಗೆ ತೋರಬಹುದು. ಸಮವಸರಣ ವರ್ಣನೆಯಲ್ಲಿ ಅಗ್ಗಳದೇವನು ಶಿಲ್ಪ, ಚಿತ್ರ, ಸಂಗೀತ, ಸಾಹಿತ್ಯ ಮೊದಲಾದುವುಗಳ ವಿವಿಧ ಪ್ರಕಾರಗಳನ್ನು ಸಾಲುಸಾಲಾಗಿ ಹೆಸರಿಸಿ ಅದನ್ನು ಸಜೀಕರಿಸಿದ್ದಾನೆ. ಈ ವಿವರಗಳಿಂದ ಆತನಿಗಿದ್ದ ಅನೇಕ ಶಾಸ್ತ್ರಪಾಂಡಿತ್ಯದ ಒಂದು ಇಣುಕು ನೋಟ ನಮಗೆ ದೊರೆಯುತ್ತದೆ. ಆದರೆ ವರ್ಣನೆಗೆ ರಮಣೀಯತೆಯೇನೂ ಉಂಟಾಗುವುದಿಲ್ಲ.

ಲೌಕಿಕವಾದ ವರ್ಣನೆಗಳಲ್ಲಿ ಇತರ ಕವಿಗಳಂತೆ ಅಗ್ಗಳನೂ ತನ್ನ ಸ್ವಂತಿಕೆಯನ್ನು ಪ್ರಕಟಿಸುತ್ತಾನೆ. ಚಂದ್ರಪ್ರಭ ಪುರಾಣದಲ್ಲಿರುವ ಲೌಕಿಕವರ್ಣನೆಗಳ ವಿವರಗಳನ್ನು ಈ ಕೆಳಗೆ ಕಾಣಿಸಿದ ಎಡೆಗಳಲ್ಲಿ ಪರಿಶೀಲಿಸಬಹುದು. ಹೊಳೆ (೧-೮೨ ರಿಂದ ೧-೮೫), ದೇಶ (೧-೮೬ ರಿಂದ ೧೦೦ ಮತ್ತು ೧೪೧ ರಿಂದ ೪೯), ಅರವಟ್ಟಿಗೆ (೧-೯೮ ಮತ್ತು ೯೯), ಪುರ, (೧-೧೦೨ ರಿಂದ ೧೫೧) ಮತ್ತು (೧೧-೫೦ ರಿಂದ ೬೪) ಪುತ್ರದೋಹಳ (೩-೪೦ ರಿಂದ ೫೦), ಮಳೆಗಾಲ (೪-೨೯ ರಿಂದ ೪೯), ಸರೋವರ (೫-೩೮ ರಿಂದ ೪೧), ಅರಣ್ಯ (೫-೬೪ ರಿಂದ ೬೫ವ), ಕೋಟೆಕಾಳಗ (೫-೧೦೫ ಮತ್ತು ೧೦೬), ವಿರಹ (೫-೧೨೩ ರಿಂದ ೧೩೬), ವಿವಾಹ (೬-೪೪ ರಿಂದ ೮೧), ವಸಂತಋತು (೭-೩೬ ರಿಂದ ೬೮), ಉದ್ಯಾನ (೭-೮೧ ರಿಂದ ೯೫), ಕುಸುಮಾಪಚಯ (೭-೯೭ ರಿಂದ ೧೪೪), ಜಲಕೇಳಿ (೭-೧೨೦ ರಿಂದ ೧೪೬), ಸೂರ್ಯಾಸ್ತ (೮-೨ ರಿಂದ ೧೮), ಬೆಳ್ದಿಂಗಳು (೮-೩೯ ರಿಂದ ೪೩ವ), ಸೂಳೆಗೇರಿ (೮-೪೪ವ ದಿಂದ ೯೨) ಸೂರ್ಯೋದಯ (೮-೯೬ ರಿಂದ ೧೦೪), ಬೇಸಗೆ (೯-೬೫ ರಿಂದ ೮೩) ಪರ್ವತ (೧೦-೩೧ ರಿಂದ ೪೬), ಯುದ್ಧ (೧೦-೬೮ ರಿಂದ ೧೦೪), ಸ್ತ್ರೀರೂಪ ವರ್ಣನೆ (೧೧-೯೧ ರಿಂದ ೧೧೧).

ಬೆಟ್ಟ, ಹೊಳೆ, ಕಾಡು, ಸೂರ್ಯ-ಚಂದ್ರರ ಉದಯಾಸ್ತಗಳು, ಬೆಳ್ದಿಂಗಳು ಮೊದಲಾದ ನಿಸರ್ಗ ಚಿತ್ರಣವೆ ಆಗಲಿ, ಕಾಳೆಗ, ಮದುವೆ, ಪ್ರಣಯ, ವಿರಹ ಮೊದಲಾದ ಮನುಷ್ಯ ವ್ಯವಹಾರ ನಿರೂಪಣೆಯೆ ಆಗಲಿ, ಅಗ್ಗಳದೇವನು ತುಂಬ ಉತ್ಸಾಹದಿಂದ ಬಣ್ಣಿಸುತ್ತಾ, ಚೆಲುವಾದ ಕೆಲವು ಬಿಡಿಚಿತ್ರಗಳನ್ನು ಮೂಡಿಸುತ್ತಾನೆ.

೧) ಮೊದಲನೆಯದಾಗಿ ಅವನು ಅನುಸರಿಸುವ ವಿಧಾನವೆಂದರೆ **ಸ್ವಭಾವೋಕ್ತಿಯ ಚಿತ್ರ** : ಮಳೆಯಲ್ಲಿ ಸಿಕ್ಕಿ, ಅಸಹಾಯವಾಗಿ ನಿಂತ ಜಿಂಕೆ ಹಿಂಡಿನ ಚಿತ್ರವನ್ನು ನೋಡಿ. (೪-೪೭) :

**ಬಡಪಂ ಬೆಂಬತ್ತೆ ಮೇವಂ ಮಱೆದು ಬಿಡದೊಡಲ್ ಕೋಡೆ ತನ್ನಿಚ್ಚೆಗೆಟ್ಟ**
**ರ್ದೆಡೆಯೊಳ್ ಬೆಚ್ಚಂತೆ ಬಾಲಂ ನಿಲೆ ನವಿರೊಡೆದುರ್ಚೆಟ್ಟು ಬೆಂಪೋಗೆ ಕಾಲೊಳ್**
**ನಡುಕಂ ಮಯ್ವೆರ್ಚೆ ಗಂಟಲ್ ಕುಸಿದು ಕಿವಿಯೆಟಲ್ತೆಂದು ನಿಂದಿರ್ದುದೋರೊಂ**
**ದೆಡೆಯೊಳ್ ತಾಱಿಲ್ಗಳೊತ್ತಂಬಿಡಿದು ಮೃಗಮೃಗೀವೃಂದಮೋರಂದದಿಂದಂ (೪-೪೭)**

ಇದರಂತೆ ಕಾಡೆಮ್ಮೆಗಳ ಚಿತ್ರ (೪-೪೮) ಕಾಡುಹಂದಿಯ ರೂಪ (೫-೬೦) ಒತ್ತೆಗೆ ನಿಂತ ದೇಸೆಕಾರ್ತಿ (೮-೫೧), ಜಲಕ್ರೀಡೆಯಿಂದ ನೆನೆದು ನಡುಗುತ್ತ ನಿಂತ ಯುವತಿಯರು (೭-೪೯), ವಸಂತಮಾಸದ ಸುಖದಲ್ಲಿ ಲೋಲಾಡುವ ದುಂಬಿಮರಿ (೭-೬೦), ಕ್ರಮಕ್ರಮವಾಗಿ ದಳಗಳನ್ನು ಬಿಚ್ಚಿಕೊಂಡು ಅರಳುವ ತಾವರೆ (೮-೧೦೩)- ಸ್ವಭಾವೋಕ್ತಿಯಿಂದ ತುಂಬ ರಮ್ಯವಾಗಿದೆ.

೨) ಎರಡನೆಯದು **ಅತಿಶಯೋಕ್ತಿ** : ಬೇಸಿಗೆಯ ಉಗ್ರತೆಯನ್ನು ಅತಿಶಯೋಕ್ತಿಯ ಮೂಲಕ ಸೂಚಿಸುವ ಪದ್ಯಗಳೂ ಇದೇ ಬಗೆಯ ಚಿತ್ರಗಳನ್ನು ಒದಗಿಸುತ್ತವೆ : ಬಿಸಿಲಿನ ತಾಪಕ್ಕೆ ಹೆದರಿ ಸಂಜೆಯವರೆಗೆ ನೀರಿನ ಮಡುವಿನಲ್ಲಿಯೆ ನಿಶ್ಚಲವಾಗಿ ಒರಗಿದ ಆನೆಹಿಂಡು (೯-೨೮), ಕರಗಿ ಹರಿಯುವ ಕಬ್ಬಿಣದ ರಸವನ್ನೆ ನೀರೆಂದು ಕುಡಿಯಲೆಳಸಿದ ನವಿಲು (೯-೭೨), ತನ್ನ ನೆಳಲನ್ನೆ ಇನ್ನೊಂದು ಆನೆಯೆಂದು ಭ್ರಮಿಸಿ, ಅದರ ಮರೆಹೋಗಲು ವ್ಯರ್ಥ ಪ್ರಯತ್ನ ಮಾಡುತ್ತಿರುವ ಇಭಕಳಭ (೯-೭೪), ತನ್ನ ಹೆಡೆಯನ್ನೆ ಕೊಡೆಮಾಡಿಕೊಂಡು ಮೈಯನ್ನೆಲ್ಲ ಅದರ ನೆಳಲಿಗೆ ಅಳವಡಿಸಿಕೊಳ್ಳುವ ಸರ್ಪ, ಸೋಗೆಯನ್ನು ಬಿಚ್ಚಿನಿಂತ ನವಿಲು (೯-೮೦) ತನ್ನ ತಲೆ ಬಿರಿತು ಸೋರುವ ಮುತ್ತುಗಳನ್ನೆ ನೀರಹನಿಗಳೆಂದು ಹೀರಿಕೊಳ್ಳಬಯಸುವ ಆನೆ (೯-೭೫). ಇಂತಹ ಬಿಡಿ ಚಿತ್ರಗಳೊಡನೆ, ಬೇಸಗೆಯ ಸಮಗ್ರ ಪರಿಣಾಮದ ಒಂದು ನೋಟವನ್ನೂ ಕವಿ ಕೊಡುತ್ತಾನೆ (೯-೭೯).

೩) ಮೂರನೆಯದು **ಉಕ್ತಿ ಚಮತ್ಕಾರ** : ಉಕ್ತಿಚಮತ್ಕಾರದೊಡನೆ ಭಾವವನ್ನು ವ್ಯಂಜಿಸುವ ಪದ್ಯಗಳೂ ಉಂಟು. ಕಾಡಿನ ವರ್ಣನೆಯಲ್ಲಿರುವ ಈ ಪದ್ಯವನ್ನು ನೋಡಿ :

**ಇದಿರೊಳ್ ಗರ್ಜಿಸಿ ಪುಲಿ ನಿಲೆ**
**ಬೆದಱೆ ಕರಂ ಶಬರಿ ಬರಿಯಸಪ್ಪಲೊಡಂ ರೋ**
**ಪದಿನಲರ್ದುದೊಂದು ಕಣ್ ರಾ**
**ಗದೆ ಮುಗುಳ್ದುದದೊಂದು ಕಣ್ ವನೇಚರಪತಿಯಾ (೫-೫೯)**

ಇದರಂತೆ ಸಾಯಂಕಾಲ ವರ್ಣನೆಯಲ್ಲಿ ಬರುವ ಚಕ್ರವಾಕಗಳ ವಿರಹದುಃಖ (೮–೬); ತಳಿರು ಕೊಯ್ಯಲು ಹೊರಟು, ಪಯೋಧರಭಾರದಿಂದ ನೊಂದು, ಗಾಳಿಯಿಂದ ಉಪಕೃತಳಾದ "ವಿಳಾಸವತಿ" (೭–೧೦೬). ತೋರುವ ಅನುಭಾವಗಳೆ ಈಕೆಯದು ಸಂಯೋಗವೊ ವಿರಹವೊ ಎಂಬ ಭ್ರಾಂತಿಯುಂಟುಮಾಡುವ ಬೆಡಗಿ (೮–೭೬).

೪) ಅಲಂಕಾರ ವಿನ್ಯಾಸದಿಂದ : ಹಾಗೂ ಕಲ್ಪನಾ ಚಮತ್ಕಾರದಿಂದ ಕೆಲವು ರಮ್ಯಚಿತ್ರಗಳನ್ನು ಮಿಂಚಿಸುವುದು ನಾಲ್ಕನೆಯ ವಿಧಾನ. ಮಳೆಗಾಲದ ಮಿಂಚಿನ ದರ್ಶನವಿದು :–

> ಸಕಳಾಬ್ದಾಂಭಶ್ಶಿಾಮೋಚನ ಸುನಿಶಿತಶಸ್ತ್ರಂ ಪ್ರಯಾಣೋತ್ಕಹಂಸ
> ಪ್ರಕರಪ್ರಸ್ಥಾನಭೇರೀ ಕನಕಮಯ ಕನತ್ಕೋಣಮಾಸಾರಲಕ್ಷ್ಮೀ
> ಪ್ರಕಟಾಂಭೋದಾವಳೀ ವಿಶ್ಲಥಕಬರಿಭರಸ್ರಂಸಿದಾಮಂ ಚಳಚ್ಚಾ
> ತಕರಾಜ್ಯಶ್ರೀಕಟಾಕ್ಷದ್ಯುತಿಲತಿಕೆ ತಟಿಸ್ಮಾಲೆ ಚೆಲ್ವಾದುದಾದಂ (೪–೩೬)

ಕತ್ತಲೆಯ ಬಣ್ಣನೆಯಿದು :

> ಇದು ತಿಮಿರಾಪಹಾಂಜನಮುಲೂಕಕುಲಕ್ಕಿದು ಪುಂಶ್ಚಲೀರತ
> ಕ್ಕುದಿತ ತಮಾಲ ಷಂಡಪಮಿದುತ್ಪಲಲಕ್ಷ್ಮಿಯ ಮಂಡನಕ್ಕೆ ಸು
> ತ್ತಿದ ನವನೀಲಕಾಡಪಟಮಿಂತಿದು ಚಕ್ರಯುಗಕ್ಕಗಲ್ಚಲಿ
> ಕ್ಕಿದ ಕಿಸುರ್ವಕ್ಕೆ ಕರ್ೂಗೆಯೆನಿಪ್ಪಿನಮಾಯ್ತು ಮಹತ್ತಮಂ ತಮಂ (೮–೧೯)

ಮನ್ಮಥಾಗ್ನಿಯ ತಾಪವನ್ನು ತಾಳದೆ ಬಾಯ ಬಾಗಿಲಿಂದ ಹೊರಟುಹೋದ ಲಜ್ಜೆಯ ಹೆಜ್ಜೆಯೆ ಈ ದಂತಕ್ಷತವೆಂಬ ಉತ್ಪ್ರೇಕ್ಷೆ (೮–೫೭) ರಮ್ಯವಾಗಿದೆ. ಈ ಕಲ್ಪನಾವಿಲಾಸದ ಉತ್ಪ್ರೇಕ್ಷಾವೈಭವ ಅಗ್ಗಳನಲ್ಲಿ ಆಗಾಗ ಹೊಳೆದುಹೋಗುತ್ತದೆ. ಬೆಳ್ದಿಂಗಳ ವರ್ಣನೆಯಲ್ಲಿ, ವೇಶ್ಯಾವಾಟದ ಬಗೆಬಗೆಯ ದೃಶ್ಯವಿವರಣೆಯಲ್ಲಿ ಇಂತಹ ಅಲಂಕಾರದ ಸೊಗಸನ್ನು ಅಲ್ಲಲ್ಲಿ ಕಾಣುತ್ತೇವೆ. "ಇಂಬುಗೆಟ್ಟು ಇಟೆದಾದ" ಚಂದ್ರನನ್ನು ಕುರಿತ ಉತ್ಪ್ರೇಕ್ಷೆ ಸೊಗಸಿನ ಜೊತೆಗೆ ಸಾರ್ಥಕತೆಯನ್ನೂ ಹೊಂದಿದೆ. ಅರಸನ ವೈರಾಗ್ಯಕ್ಕೆ ಕಾರಣವಾಗುವುದರಿಂದ ಈ ಅಲಂಕಾರೋಕ್ತಿ ಔಚಿತ್ಯಪೂರ್ಣವೆನಿಸುತ್ತದೆ.

೫) ಸಾಲುಸಾಲಾಗಿ ವಿವರಗಳೊಡನೆ ಬರುವ ಸಾಲಂಕೃತ ಚಿತ್ರಮಾಲೆಗಳ ಮೆರವಣಿಗೆಯನ್ನೆ ಹೊರಡಿಸುವ ದೀರ್ಘಗದ್ಯಗಳೂ ಅಗ್ಗಳನ ವ್ಯಾಪಾರದಲ್ಲಿ ಒಂದು ಮುಖ್ಯಾಂಶವಾಗಿದೆ. ಉದಾ: ನಗರೋಪವನ (೧–೧೦೫)ದ ವರ್ಣನ, ಪುತ್ರೋತ್ಸವದಲ್ಲಿದ್ದ ಅಂತಃಪುರ (೩–೯೭ವ), ಅರಣ್ಯ (೫–೪೦ವ), ಮದುಮಗಳ ಅಲಂಕರಣ (೬–೩ವ), ವನ (೭–೯೫ವ), ಬೆಳ್ದಿಂಗಳು (೮–೪೩ವ), ಪುತ್ರಜನ್ಮೋತ್ಸವ (೨–೩೫ವ).

೬) ಪರಿಸಂಖ್ಯೆ, ವಿರೋಧಾಭಾಸ ಮುಂತಾದ ಶ್ಲೇಷಮೂಲವಾದ ಅಲಂಕಾರಗಳನ್ನು ಕವಿ ತನ್ನ ವರ್ಣನೆಗಳಿಗೆ ತೊಡಿಸುವುದುಂಟು. ಉದಾ : ಪುರ (೧-೧೩೫ವ). ರಾಜ (೨-೭ವ). ಪುತ್ರದ್ರೋಹಳದಲ್ಲಿ ದುಃಖಿತೆಯಾದ ಅರಸಿ (೩-೫೦ವ). ವನ (೫-೫೨ವ). ವಿರಕ್ತ (೯-೪೧ವ). ಪ್ರಸ್ಥಾನಶಿಬಿರ (೧೦-೧೭ವ). ಚತುರಂಗಬಲ (೧೦-೩೦ವ). ಬೆಟ್ಟ (೧೦-೩೯ವ). ಸಂಗ್ರಾಮಭೂಮಿ (೧೪-೧೦೫ವ). ನಗರ (೧೧-೬೯ವ). ರಾಜಭವನ (೧೧-೭೮ವ). ಲಕ್ಷ್ಮಣಾದೇವಿ (೧೧-೧೧೦ವ). ಮದುವೆಯ ಮಂಡಪ (೧೨-೩೬ವ) ಪರಿಖೆ (೧೫-೩೦ವ). ಆಧುನಿಕ ವಿಮರ್ಶಕರ ಟೀಕೆಗೆ ವಿಶೇಷವಾಗಿ ಗುರಿಯಾಗಿರುವ ಅಂಶ ಇದೇ. ಪಾಂಡಿತ್ಯಪ್ರದರ್ಶನವಷ್ಟೆ ಅಲ್ಲದೆ, ಇದರಲ್ಲಿ ಕಾವ್ಯದ ಸೊಗಸಿಲ್ಲವೆಂಬುದು ಅವರ ವಾದ. ಶ್ಲೇಷಮಯವಾದ ಈ ಉಕ್ತಿಪರಂಪರೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಸಂಸ್ಕೃತಪಾಂಡಿತ್ಯವೊಂದೇ ಸಾಲದು. ವಿವಿಧ ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ನಗರವು "ಅನಶನ ತಪದಂತೆ ಸರ್ವತೋಭದ್ರ ಭಾಸುರ"ವೆಂಬುದನ್ನು ತಿಳಿಯಬೇಕಾದರೆ ಸರ್ವತೋಭದ್ರವೆಂಬ ಜೈನ ನೋಂಪಿಯ ಜ್ಞಾನವೂ ಇರಬೇಕು. "ಸಂಯುಃಹಸ್ತದಂತೆ ವಿಸ್ತೃತ ಸ್ವಸ್ತಿಕೋಪೇತ"ವೆಂಬುದಕ್ಕೆ ನಾಟ್ಯಶಾಸ್ತ್ರ ಪರಿಚಯ ಬೇಕು. "ಶಬರಶಿಶುಗಳುಜ್ಜುಗ"ವಾದ ವೃಕ್ಷಾರೋಹಣ, ವರಾಹ ಚರ್ವಿತ, ವೇಣುದಾರಿತಃ ಎಂಬ ಪದಗಳ ಇನ್ನೊಂದರ್ಥವನ್ನು ಕಾಮಶಾಸ್ತ್ರದಲ್ಲಿ ಕಂಡುಕೊಳ್ಳಬೇಕು. ಹೀಗೆಯೆ ವ್ಯಾಕರಣದ ಅಲಂಕಾರಶಾಸ್ತ್ರದ, ಚಿತ್ರಶಿಲ್ಪದ ಪರಿಭಾಷೆಯನ್ನು ಶ್ಲೇಷೆಯುಟ್ಟು ಅಗ್ಗಳದೇವನು ಕಾವ್ಯಾಭ್ಯಾಸಿಗಳಿಗೆ ಪರಿಶ್ರಮವನ್ನು ಒದಗಿಸುವುದುಂಟು. ನಮ್ಮ ಈಗಿನ ಅಭಿರುಚಿಯಿಂದ ಅಥವಾ ವಿಮರ್ಶಾಸೂತ್ರಗಳಿಂದ ಹಿಂದಣ ಕಾವ್ಯಗಳನ್ನು ಅಳೆದು ನೋಡುವುದು ಸಮಂಜಸವಲ್ಲ. ಇಂತಹ ಪಾಂಡಿತ್ಯ ಪೂರ್ಣವಾದ ಚಮತ್ಕೃತಿಯನ್ನು ಅಪೇಕ್ಷಿಸುವ ಹಾಗು ಕಂಡು ಮೆಚ್ಚುವ "ವಿಪಶ್ಚಿದ್ ವೃಂದ" ತನ್ನ ಸುತ್ತಲೂ ಇದ್ದುದರಿಂದ ಕವಿ ಹಾಗೆ ಬರೆದನು. ಸಂಗೀತದಲ್ಲಿ ಕೇವಲ ಲಯವಷ್ಟೆ ಕೆಲವರಿಗೆ ಸಾಲದು; ತಾಳದಲ್ಲಿ, ಸೂರಿನಲ್ಲಿ, ತಾನದಲ್ಲಿ ಶಾಸ್ತ್ರೀಯವಾದ ಕಸತ್ತನ್ನು ಅಪೇಕ್ಷಿಸುವ ಸಂಗೀತಪ್ರಿಯರು ಇಂದಿಗೂ ಇರುವಂತೆ, ಕಾವ್ಯದಲ್ಲಿ ವಿದ್ವದ್ವಿಲಾಸವನ್ನು ಅರಸುವ ಬಲ್ಲಿದರೂ ಇದ್ದರು. ಅಗ್ಗಳನಿಗಿಂತ ಪೂರ್ವದಲ್ಲಿಯೆ ಇದು ನಡೆದುಬಂದಿತ್ತು. ರುದ್ರಭಟ್ಟ, ಗುಣವರ್ಮ, ಪಾರ್ಶ್ವಪಂಡಿತ, ಕಮಲಭವ ಮೊದಲಾದ ಹಲವರು ಈ ಪದ್ಧತಿಯನ್ನು ಅನುಸರಿಸಿರುವುದು ತತ್ಕಾಲೀನ ಅಭಿರುಚಿಗೆ ನಿದರ್ಶನವಾಗಿದೆ.

ಅಗ್ಗಳದೇವನಿಗೆ ಶ್ಲೇಷೆಯ ಮೇಲೆ ಮಮತೆ, ಎಷ್ಟೋ ಸಲ ಅದರಿಂದ ಅರ್ಥಪುಷ್ಟಿಯೂ ಒದಗುವುದುಂಟು : ಸಾಮೋಪಾಯದ ಸದಲ್ಲಿ ದಂಡವನ್ನು ಸೂಚಿಸಿದ ದೂತನಿಗೆ ಉತ್ತರವಾಗಿ ರಾಜಕುಮಾರನು ಹೇಳುವ ಈ ಮಾತನ್ನು ನೋಡಿ : (೯-೧೦೯) :

ಬಗೆದೊಡೆ ಕಿಚ್ಚಿನವೊಲ್ ನಾ
ಲಗೆಯತಿಪಟುವೆನಿಪ ನಿಮ್ಮ ದೊರೆಯರ್ ಸಚಿವರ್
ಮಿಗೆ ಪೊರ್ದಿರೆ ನಿಮ್ಮಯ ರಾ.
ಜಗೃಹಂ ಪಿರಿದುಂ ವಿಭೂತಿಮಯಮಿನ್ನಕ್ಕುಂ

ಇಲ್ಲಿಯ "ವಿಭೂತಿ" ಶಬ್ದಕ್ಕೆ ವ್ಯಂಗ್ಯದಿಂದ ವಿರುದ್ಧಾರ್ಥವಿರಬೇಕೆಂದು ಮೊದಲ ನೋಟಕ್ಕೆ ಎನಿಸಬಹುದು. ಆದರೆ "ಕಿಚ್ಚಿನವೊಲ್ ನಾಲಗೆಯತಿಪಟುವೆನಿಪ" "ಸಚಿವರು" ಎಂಬ ಮಾತಿನಿಂದ "ವಿಭೂತಿ"ಗೆ ಭಸ್ಮವೆಂಬರ್ಥ ಸ್ಫುಟವಾಗಿ ಮಾತಿಗೆ ಮೊನೆಯುಂಟಾಗುತ್ತದೆ.

ಸರಳಂ ವಕ್ರಂ ತರಳಂ
ಸ್ಥಿರಮುಚ್ಚಂ ನೀಚಮೀಕ್ಷಣಕ್ಕೊದವೆ ತಮಂ
ಸರಿಯಾದುವಂತೆ ವಿಗತಾಂ
ತರವೆನಿಪನ ಮೆಚ್ಚು ಬಲ್ಲರಂ ಮೆಚ್ಚಿಕುಮೇ (೮–೨೧).

ಪದ್ಯದ ಪೂರ್ವಾರ್ಧದಲ್ಲಿ ಬರುವ ಮಾತು "ಕತ್ತಲೆಯಲ್ಲಿ ಎಲ್ಲವೂ ಒಂದೇ ಸಮ" ಎಂಬ ಸಾಮಾನ್ಯೋಕ್ತಿಯಂತೆ ಕಂಡರೂ ಕೊನೆಗೆ ಬರುವ ಅರ್ಥಾಂತರ ನ್ಯಾಸದಿಂದ ಅದಕ್ಕೊಂದು ಹೊಸ ತಿರುವು ಬಂದು, ಶ್ಲೇಷೆ ಅರ್ಥಪೂರ್ಣವಾಗುತ್ತದೆ.

ಹೀಗೆ ಅಗ್ಗಳದೇವನ ಪದ್ಯಗಳು ಕಲ್ಪನಾವಿಲಾಸ, ಅಲಂಕಾರ, ಉಕ್ತಿ ವೈಚಿತ್ರ್ಯ, ರಸಧ್ವನಿ, ಸ್ವಭಾವೋಕ್ತಿ– ಇವುಗಳಲ್ಲಿ ಯಾವುದಾದರೂ ಒಂದು ಸೊಬಗನ್ನು ಒಳಗೊಂಡಿರುತ್ತವೆ. ಇಷ್ಟೆಲ್ಲ ಇದ್ದರೂ, ಅಗ್ಗಳನ ವರ್ಣನೆಗಳಲ್ಲಿ ಅಲ್ಲಲ್ಲಿ ಮನಸೆಳೆಯುವ ಮಿಂಚು ಮಾತ್ರ ತೋರುತ್ತದೆ. ಒಟ್ಟಂದ, ಅಥವಾ ಸಮುದಾಯ ಶೋಭೆ ಅಲ್ಲಿ ತೋರದು.

೪. **ಭಾವನಿರೂಪಣೆ** :– ಪುತ್ರದೋಹಳ ವರ್ಣನೆಯಲ್ಲಿ ನಿರಾಡಂಬರವಾದ ಸುಕುಮಾರಭಾವ (೩–೪೧ ರಿಂದ ೫೦) ತಾಯ್ತನದ ಕನಸನ್ನೂ, ಕೊರಗನ್ನೂ ಸೂಚಿಸುತ್ತದೆ. ಆದರೆ ಆ ಕೊರಗಿನ ಉತ್ಕಟತೆಯೇನೆಂಬುದನ್ನು ಕವಿ ನಮ್ಮ ಊಹೆಗೆ ಬಿಡುತ್ತಾನೆ. ಅರಸಿಯ ಈ ಖೇದವನ್ನು "ಪಚ್ಚುಗೊಳ್ಳ"ಲು ಬಂದ ಅರಸನು ಆಡುವ ಮಾತುಗಳು (೩–೫೪ ರಿಂದ ೬೧) ರಸಕ್ಕೆ ಬದಲಾಗಿ ರಸಾಭಾಸವನ್ನೆ ನಿರ್ಮಿಸುತ್ತವೆ. ಚಕ್ರವಾಕಗಳ ಅಳಲನ್ನು ನಿರೂಪಿಸುವ ಪದ್ಯಗಳು (೮–೬ ರಿಂದ ೧೦) ಭಾವಪೂರ್ಣವಾಗಿವೆ. ಅದರಲ್ಲಿಯೂ ಉತ್ಕಟಭಾವೋದ್ವೇಗದ ಈ ಪದ್ಯವನ್ನು ನೋಡಿ :

ನಲ್ಲರಗಲ್ಕೆಯಿಲ್ಲದೆಡೆಯಸ್ತಮಯಕ್ಕೆ ದಿನಾಧಿನಾಯಕಂ
ಸಲ್ಲದ ತಾಣಮಂಗಜ ಶರಾಹತಿ ಪೊರ್ದದ ದೇಶಮುಳ್ಳೊಡಂ
ತಲ್ಲಿಯೆ ಮಾಟಕ್ಕೆ ಮಜ್ಜನನಮಂ ಬಿದಿಯೆಂದು ರಥಾಂಗಕಾಂತೆ ಹೃ
ದ್ವಲ್ಲಭವಿಪ್ರಯುಕ್ತೆ ಬಗೆಗೆಟ್ಟು ನಡಿಲ್ದುದು ಪದ್ಮಪತ್ರದೊಳ್

ಇದಕ್ಕೆ ಬಹುಶಃ ಮೂಲ ಪ್ರೇರಕವಾದ ಪಂಪನ ಪದ್ಯವನ್ನು (ಪಂಪ ಭಾ. ೪-೪೮) ನಾವು ಇದರೊಡನೆ ಹೋಲಿಸಿ ನೋಡಬಹುದು : ಪಂಪನ ಪದ್ಯದಲ್ಲಿ ಸೂಚ್ಯವಾಗಿದ್ದ ವಿರಹ ಮತ್ತು ಮನ್ಮಥಬಾಧೆಯೆಂಬೆರಡನ್ನು ಅಗ್ಗಳನು ಸ್ಪಷ್ಟವಾಗಿ ಹೇಳಿದ್ದಾನೆ. ಜೊತೆಗೆ "ಅಲ್ಲಿಯೆ ಮಾಟ್ಕೆ ಮಜ್ಜನನಮಂ" ಎಂದು ಸೇರಿಸಿ, ಇನ್ನು ಅದು ಸಾಯುವುದೇ ನಿಶ್ಚಿತವೆಂದು ಸೂಚಿಸುತ್ತಾನೆ. ಪೂರ್ವಕವಿಗಳ ಕೊಡುಗೆಯನ್ನು ಈ ಕವಿ ಹೇಗೆ ಮಾರ್ಪಡಿಸಿ ತನ್ನದಾಗಿ ಮಾಡಿಕೊಳ್ಳುತ್ತಾನೆಂಬುದಕ್ಕೆ ಇದೊಂದು ಉದಾಹರಣೆ. ಅಲ್ಲದೆ ಈ ಪದ್ಯದ ಭಾವ ಆ ಕ್ಷಣಕ್ಕೆ ಹೊಳೆದುದಲ್ಲವೆಂದೂ ತೋರುತ್ತದೆ. ವಿರಹಾವಸ್ಥೆಯು ಹೆಣ್ಣೊಂದನ್ನು ಕಂಡು ಅನುಕೂಲನಾಯಕನು ಹೀಗೆ ಹೇಳುತ್ತಾನೆ (೮-೬೬) :

ನೆಟ್ಟನೆ ಕೂರ್ತ ನಲ್ಲರನಗಲ್ದೞಲಂ ತಳೆದಿರ್ಪ ಮಾೞ್ಕೆಯಿಂ
ಪುಟ್ಟದೆ ಪೋಪುದೊಳ್ಳಿತು ಮನುಷ್ಯಭವಾಂತರದಲ್ಲಿ ದೈವದಿಂ
ಪುಟ್ಟಿದೊಡೇನೊ ಕೂರದಿರವೊಳ್ಳಿತು ಕೂರ್ತೊಡಮೇನಗಲ್ವುದುಂ
ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾವರಂಗಳೊಳ್

ಹೀಗೆ ಸಂಕ್ಷೇಪವಾಗಿ, ಸೂಚ್ಯವಾಗಿ ನಿರೂಪಿಸುವ ಭಾವ ಸೊಗಸಾಗಿರುತ್ತದೆ. ಬಹುಶಃ ಅಗ್ಗಳನ ಪ್ರತಿಭೆ ಇಷ್ಟಕ್ಕೇ ಸೀಮಿತವಾಗಿರಬೇಕು. ಶೋಕ ಚಿತ್ರಣಕ್ಕೆ ನೇರವಾಗಿ ಪ್ರಯತ್ನಿಸಿದಾಗ ಆತನು ಸೋಲುವುದುಂಟು. ತನ್ನ ಮಗನನ್ನು ಅಸುರನೊಬ್ಬನು ಮಾಯೆಯಿಂದ ಎತ್ತಿಕೊಂಡು ಹೋದಾಗ ಅರಸನು ವಿಲಾಪಿಸುವ ರೀತಿಯನ್ನು ನೋಡಿ (೫-೧೦ ರಿಂದ ೧೭). ತನ್ನ ಎದೆಯುರಳಿಸಿಕೊಳ್ಳಲೆಂದು ಈ ಕುಮಾರನನ್ನು ವಿಧಾತ್ರನು ಅಪಹರಿಸಿದನೆಂಬ ಮಾತಾಗಲಿ, ಯಮಕ-ಶ್ಲೇಷೆಗಳ ಪ್ರಯೋಗವಾಗಲಿ, ಕವಿಸಮಯಬದ್ಧವಾದ ಶಶಿಕಾಂತ, ದುಂಬಿಗಳ ರೂಪಕವಾಗಲಿ ಭಾವಕ್ಕೆ ಪುಷ್ಟಿಯೊದಗಿಸುವುದಿಲ್ಲ; ಇಷ್ಟೆ ಅಲ್ಲ. ಕೃತಕತೆಯನ್ನು ನಿರ್ಮಿಸಿ ರಸಾಭಾಸಕ್ಕೂ ಕಾರಣವಾಗುತ್ತವೆ. ಅಗ್ಗಳನ ಕಾವ್ಯಪ್ರತಿಭೆ ಪ್ರಖರವಲ್ಲ, ಸ್ಥಾಯಿಯಲ್ಲ, ಕಣ್ಣುಕೋರೈಸುವ ಮಿಂಚಿನಂತೆ ಜಗ್ಗನೆ ಒಮ್ಮೊಮ್ಮೆ ಬೆಳಗುತ್ತದೆ. ನಕ್ಷತ್ರದಂತೆ ಒಮ್ಮೊಮ್ಮೆ ಮಿನುಗುತ್ತದೆ. ಸತತವಾಗಿ ಏಕಪ್ರಕಾರವಾಗಿ ಇರುವುದಿಲ್ಲ. ಚಮತ್ಕೃತಿಯ ಮೋಹ ಪ್ರಬಲವಾಗಿ ಕವಿತ್ವ ಆಗಾಗ ಹಿಂದೆ ಸರಿಯುತ್ತದೆ.

**೫. ಭಾಷಾಶೈಲಿ** :- ಅಗ್ಗಳದೇವನ ಭಾಷಾಶೈಲಿಯ ನಾಲ್ಕು ಪರಿಗಳಿಗೆ ಉದಾಹರಣೆಯಾಗಿ ಈ ಕೆಳಗಿನ ಪದ್ಯಗಳನ್ನು, ಪದ್ಯಭಾಗಗಳನ್ನು ನೋಡಬಹುದು:

೧. ನಿನ್ನಯ ಸುೞಿಗುರುಳೆಲ್ಲವಿ
ವೆನ್ನಯ ಮಱೆಯೆಂದು ಬಂದು ತಲೆವಿಡದವೊಲಾ
ಚೆನ್ನೆಯ ತಲೆವಿಡಿದಿರ್ದುದು
ತಾಂ ನಱುಗುಪಿಂಗೆ ತುಂಬಿ ಮಱುದುಂಬಿ ಕರಂ (೭-೧೦೩)

೨. ನಿನ್ನಯ ಕೂಟಮಂ ಬಯಸಿ ಪೆತ್ತವಳೆಂತುಮೆಡಂಬಡಂ ದಿಟಂ
ನಿನ್ನ ಮನಕ್ಕೆ ಮಾಡಳದು ದೈವಕೃತಂ ದೊರೆಕೊಂಡುದಪ್ಪೊಡಂ
ಮನ್ನಿಪುದೆಮ್ಮೆ ಕಾರಣದಿನಿತ್ತಣ ಪಂಬಲನೀಕೆ ಮಾಡದಂ
ತಿನ್ನಡೆಯಿಪ್ಪುದೊಂದೆ ತೆಱನಪ್ಪುದಿದಂ ಸೆಱಗೊಡ್ಡಿ ಬೇಡಿದೆಂ (೬--೮೬)

ಅಕ್ಕ ನಿಜ ಪ್ರಿಯಂಗೆ ಮನದನ್ನದೆ ನೀಂ ಬೆಸಕೆಯ್ವುದಾಗಳುಂ
ಮಕ್ಕಳ ಮಾಟಕ್ಕಿಯಿಂದಿರದೆ ನೀನೊಡವಂದ ಜನಕ್ಕೆ ಸಂತಸಂ
ಮೊಕ್ಕಳಮಾಗೆ ಮನ್ನಿಪುದು ಮಾವನ ಪೆರ್ಮೆಗಮತ್ತೆಯೊಲ್ಮೆಗಂ
ತಕ್ಕ ನೆಗೆಟ್ಕೆಯಿಂ ನೆಗೞ್ವುದೀವುದು ಪೆತ್ತಮಗಂ ಪ್ರಮೋದಮಂ (೬--೮೭)

೩. ಪ್ರಣಯದಿನಾದ ಪೋರಟೆಯ ಪೋರಟೆ ಮಾಣ್ದೊಡೆ ಕೂಟದೊಳ್ ಮನಂ
ತಣಿಯದದೊಂದು ಕೋಟಲೆಯೆ ಕೋಟಲೆ ಮಾಣ್ದೊಡಗಲ್ದ ಪೊೞ್ತಿನೊಳ್
ರಣರಣಕೋತ್ಥ ವೇದನೆಯ ವೇದನೆ ಮಾಣ್ದೊಡೆ ಮತ್ತಮಿನ್ನವ
ಪ್ಪಣಕಮೆ ಪುಟ್ಟುಗೆಂದೊಡಕಟೇನಪಸೌಖ್ಯರೊ ಕೂರ್ತ ಮಾನಸರ್ (೮--೫೪)

೪. ವಿಕಿರತ್ಪುಷ್ಪಕದಂಬತಾರಕಿತಮಾಯಾತಪ್ರಯಾತಾಂಗನಾ
ನಿಕರೋದ್ಯಚ್ಚರಣಾಂಶು ಪಲ್ಲವಿತಮನ್ಯೋರ್ವೀಶ್ವರವ್ರಾತದೂ
ತಕುಳ ಸ್ತೂಪಿತ ರತ್ನರುಕ್ಛಬಳಿತಂ ಯಾಮದ್ವಿಪೇಂದ್ರಪ್ರತಾ
ನಕಟೋನ್ಮುಕ್ತಮದೌಘಕರ್ದಮಿತಕಾಂತಂ ರಾಜಗೇಹಾಜಿರಂ (೧--೧೫೧)

ಪರಿಚಿತ ಭೂತಿರೇಖ ಮುಖದರ್ಶಿತ ಸರ್ಷಪಪುಂಜಮಂಜನೋ
ಪರಿಚಿತ ಖಡ್ಗ ಖೇಟಕ ಸಮುದ್ಭಟ ವಿದ್ಧರ್ಪಿದ್ಧ ಭಿತ್ತಿ ಚಂ
ಚುರ ಪಿಚುಮಂದ ಪಲ್ಲವ ಸಮುಲ್ಲಸಿತಂ ಮುಸಲೋರುಸೀರಡಂ
ಬರಯುತಮೇಂ ಮನಕ್ಕೊಲವನಿತ್ತುದೊ ಬಾಗಿಲರಿಷ್ಟಸದ್ಮದಾ (೩--೯೭)

ಆನಾಭೀವಲಯ ಪ್ರಲಂಬಮಾನ ಚಕಚಕಿತ ಮುಕ್ತಾಹಾರಭಾರ ಮಳಯಜಸ್ಥಾಸಕಸ್ಥಗಿತ ವಿಸ್ತೀರ್ಣವಕ್ಷಸ್ಥಳನುಂ ಅಯನಲೀಲಾಂದೋಳಾಯಿತ ರತ್ನವಳಯೋನ್ಮುಖ ಮಯೂಖ ಲತಿಕಾಪ್ರತಾನಪರಿವೇಷ್ಟಿತಭುಜಾದಂಡ ಪಾರಿಜಾತಕಾಂಡ್ಡನುಂ ಉತ್ತಪ್ತತಪನೀಯ ಚ್ಛಾಯಾ ಪ್ರಾಯಕಾಯ ಕಾಂತಿಸಂತಾನಸಂಗಮ ಪಿಶಂಗೀಭೂತಸಹಜಾತನೂತನದುಕೂಲಾಂಚಲನುಂ ಅತಿವಿಶದಚರಣನಖಕಿರಣಶಂಕಾಸಮುತ್ಪಾದಕಪಾದಾಲಂಕಾರ ಶೌಕ್ತಿಕೇಯ ದೀರ್ಘದೀಧಿತಿಕ್ಷೀರಧಾರಾ ಪ್ರಕ್ಷಾಳಿತಾಕ್ಷೂಣ ಹರಿನೀಳಮಣಿಕುಟ್ಟಿಮನುಂ (೪--೩೮ವ).

ಇವುಗಳಲ್ಲಿ ಮೊದಲನೆಯದು ತಿಳಿಯಾದ "ದೇಸಿ". ಎರಡನೆಯದು ಒಂದೊ ಎರಡೊ ಸುಲಭವಾದ ಸಂಸ್ಕೃತಪದಗಳನ್ನು ಒಳಗೊಂಡ ಬಳಕೆ ಮಾತಿಗೆ ಸರಿಸಾಟಿಯಾದ ಕನ್ನಡ ಶೈಲಿ. ಮೂರನೆಯದು ಹಿತಮಿತವಾದ ಕನ್ನಡ-ಸಂಸ್ಕೃತಗಳ ಹೊಂದಾಣಿಕೆಯಿಂದ "ಕರ್ಮಣಿಸರದೊಳ್ ಚಂಬವಳಮಂ" ಪವಣಿಸಿದಂತಿರುವ ಚೆಲುವಾದ ಶೈಲಿ. ನಾಲ್ಕನೆಯದು ದೀರ್ಘಸಮಾಸಗಳಿಂದ ನಾರಿಕೇಳಪಾಕವಾದ ಸಂಸ್ಕೃತಭೂಯಿಷ್ಠ ಪ್ರೌಢ "ಮಾರ್ಗ" ಶೈಲಿ. ಕ್ಲಿಷ್ಟವೆಂದೂ, ಕರ್ಕಶವೆಂದೂ ಅನುಚಿತವೆಂದೂ ಕೆಲವು ಆಧುನಿಕರ ಟೀಕೆಗೆ ಇದು ಗುರಿಯಾಗಿದೆ. ಈ ಟೀಕೆಯನ್ನು ವಿಮರ್ಶಿಸುವುದಕ್ಕೆ ಮುನ್ನಾ ಸಂಖ್ಯಾಶಾಸ್ತ್ರದೃಷ್ಟಿಯಿಂದ ಸಮಗ್ರಗ್ರಂಥದಲ್ಲಿ ಈ

ಶೈಲಿಯ ಪ್ರಮಾಣವನ್ನು ನಿರ್ದೇಶಿಸುವುದು ಲೇಸು. ಮೇಲ್ಕಾಣಿಸಿದ ನಾಲ್ಕು ಪರಿಗಳಲ್ಲಿ ಹಿತಮಿತವಾದ ಕನ್ನಡ - ಸಂಸ್ಕೃತ ಸಂಮಿಳನದ (ಮೂರನೆಯ ಬಗೆಯ) ಶೈಲಿಯೆ ಈ ಗ್ರಂಥದಲ್ಲಿ ಪ್ರಧಾನವಾಗಿದೆ; ತರುವಾಯ ಬರುವುದು ಎರಡನೆಯ ಬಗೆ. ಒಂದನೆಯ ಪ್ರಕಾರದ ಶೈಲಿ ಅಲ್ಲೊಮ್ಮೆ ಇಲ್ಲೊಮ್ಮೆ ನಿರಾಡಂಬರವಾಗಿ ಬಂದು ಹೋಗುತ್ತದೆ. "ನಾನು ಬಂದಿದ್ದೇನೆ"ಂದು ಠೀವಿಯಿಂದ ಉಗ್ಗಡಿಸುತ್ತ ಆಗಮಿಸುವ ಕೊನೆಯ ಪ್ರಕಾರದ ಪಂಡಿತಪ್ರಿಯ ಸಂಸ್ಕೃತಮಯವಾದ ಶೈಲಿ ಸಮಗ್ರಗ್ರಂಥದಲ್ಲಿ ಕಾಲು ಪಾಲನ್ನು ಕೂಡ ತುಂಬಿಲ್ಲ. ಈ ಮಾತು ಅಗ್ಗಳನಂತೆ ಇನ್ನೂ ಕೆಲವು ಚಂಪೂ ಕವಿಗಳಿಗೂ ಅನ್ವಯಿಸುತ್ತದೆ.

ಇಂತಹ ಶೈಲಿಯನ್ನು ಅಗ್ಗಳದೇವನೆ ನಿರ್ಮಿಸಿಕೊಳ್ಳಲಿಲ್ಲ. ಮತ್ತು ಇದನ್ನು ಆತನೊಬ್ಬನೆ ಬಳಸಿಕೊಳ್ಳಲಿಲ್ಲ. ಚಂಪೂಕಾವ್ಯ ಬೆಳೆದು ಬಂದ ಹಿನ್ನೆಲೆಯನ್ನು ಗಮನಿಸಿದಾಗ ಇದು ನಮ್ಮ ಕವಿಗಳ ಪೂರ್ವಾರ್ಜಿತ ಆಸ್ತಿಯಲ್ಲಿ ಒಂದು ಪಾಲೆಂದು ಖಚಿತವಾಗುತ್ತದೆ. ಮೊದಲನೆಯ ಗುಣವರ್ಮನ ಸಮುದ್ರವರ್ಣನೆಯ ಈ ಪದ್ಯವನ್ನು ನೋಡಿ :

> **ಗಂಭೀರ ಸ್ಥಾರವೇಳಾಬಹಳ ಪರಿವೃತೋಲ್ಲೋಲಕಲ್ಲೋಲ ಮಾಲಾ**
> **ರಂಭ ಪ್ರೋಡ್ಡೀನ ಫೇನಪ್ರಬಳಜಲಚರೋಲ್ಲುಂಠ ಪಾಠೀನ ಶುಂಭ**
> **ತ್ಕುಂಭೀರಾಭೀಳನಕ್ರಪ್ರಕರಕಮಠನೀರೇಭರತ್ನಪ್ರವಾಳೋ**
> **ಜ್ಜೃಂಭತ್ಪ್ರೋದ್ಭಾಸಿವೀಚೀನಿಚಯ ಘನಘನಾರಾವರೌದ್ರಂ ಸಮುದ್ರಂ**

**(ಶೂದ್ರಕ ೭೩.)**

ಉಪಲಬ್ಧವಾದ ಶೂದ್ರಕ ಕಾವ್ಯದ ತುಂಡುಗಳಲ್ಲಿ ವಚನಭಾಗವೂ ಇರುವುದರಿಂದ ಅದು ಚಂಪೂಕಾವ್ಯವೆ ಎಂದೂ, ಈ ಬಗೆಯ ಪ್ರೌಢಕೃತಿ ನಿರ್ಮಾಣವಾಗಬೇಕಾದರೆ ಇದಕ್ಕೆ ಮುಂಚಿತವಾಗಿ ಇಂತಹ ಒಂದು ಚಂಪೂಕಾವ್ಯ ಸಂಪ್ರದಾಯರೂಢವಾಗಿರಬೇಕೆಂದೂ ನಾವು ಗ್ರಹಿಸಬೇಕಾಗುತ್ತದೆ. ಕನ್ನಡದಲ್ಲಿ ಮಿತಿಮೀರಿ ಸಂಸ್ಕೃತವನ್ನು ಬೆರಸಕೂಡದೆಂಬ ಕೂಗು ಕೂಡ ಈ ಕಾವ್ಯಗಳಷ್ಟೇ ಪ್ರಾಚೀನವಾಗಿದೆ. ಕವಿರಾಜಮಾರ್ಗದಲ್ಲಿಯೆ ಇದರ ಪ್ರಸ್ತಾಪವಿದೆ. ಸಂಸ್ಕೃತದ ಮೋಹವಿದ್ದರೆ, ಅದರಲ್ಲಿ ಪ್ರಭುತ್ವವಿದ್ದರೆ, ಸಂಸ್ಕೃತದಲ್ಲಿ ಬರೆಯಿರಿ. ಎಣ್ಣೆ ತುಪ್ಪಗಳನ್ನು ಬೆರಸುವಂತೆ ಕನ್ನಡದಲ್ಲಿ "ಮಿಸುಕದ ಸಕ್ಕದ"ವನ್ನು ಇಕ್ಕುವುದೇಕೆ ? ಎಂದು ನಯಸೇನನು ಪ್ರತಿಭಟಿಸಿದ್ದುಂಟು. (ಧರ್ಮಾಮೃತ ೧-೪೧ ಮತ್ತು ೪೨) "ಸೊಗಯಿಪ ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ ಬಗೆಗೊಳೆ ಪೇೞಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕಬ್ಬಿಗರ್" ಎಂಬ ಅಪಖ್ಯಾತಿಗೂ ಆಸ್ಪದವಾಗಿ, ಅಚ್ಚಗನ್ನಡದಲ್ಲಿ ಕಾವ್ಯವನ್ನು ರಚಿಸಬಲ್ಲೆನೆಂದು ಆಂಡಯ್ಯನು ಪ್ರತಿಜ್ಞೆಮಾಡಿ ಕೃತಿನಿರ್ಮಾಣಕ್ಕೆ ನಿಲ್ಲಬೇಕಾಯಿತು. ಕಾವ್ಯದಲ್ಲಿ ಬಳಸಬೇಕಾದ ಶೈಲಿ ಯಾವುದೆಂಬುದರ ಸ್ಪಷ್ಟ ಸೂಚನೆಯನ್ನು ಪಂಪನು ಕೊಟ್ಟಿದ್ದಾನೆ :

೧. ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್
ಪುಗುವುದು ಪೊಕ್ಕಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಂ
(ಪಂಪ ಭಾ. ೧–೮)

೨. ಆ ಸಕಳಾರ್ಥಸಂಯುತಮಳಂಕೃತಿಯುಕ್ತಮುದಾತ್ತ [ವೃತ್ತಿ] ವಿ
ನ್ಯಾಸಮನೇಕ ಲಕ್ಷಣಗುಣ ಪ್ರಭವಂ ಮೃದುಪಾದಮಾದ ವಾಕ್
ಶ್ರೀಸುಭಗಂ ಕಳಾಕಳಿತಮೆಂಬ ನೆಗಟ್ತೆಯನಾಳ್ದ ಕಬ್ಬಮಂ
ಕೂಸುಮನೀವುದೀವುದರಿಕೇಸರಿಗಲ್ಲದ ವಸ್ತುಗೀವುದೇ (ಪಂಪ ಭಾ. ೧–೯)

ಇದರಲ್ಲಿ ಮೊದಲನೆಯ ಪದ್ಯ ಕಾವ್ಯದ ಸಹಜ ಸೌಂದರ್ಯವನ್ನು ಕುರಿತುದು; ಎರಡನೆಯದು ಅವರ ಶಾಸ್ತ್ರವನ್ನು ಹೇಳುವುದು. ದೇಸಿ ಮಾರ್ಗಗಳ ಸಮನ್ವಯವೆ ಆದರ್ಶವೆಂಬುದು ಸ್ಪಷ್ಟವಾಗಿದೆ. ಅಳಂಕೃತಿ, ಉದಾತ್ತವೃತ್ತಿವಿನ್ಯಾಸ ಮತ್ತು ವಾಕ್‌ಶ್ರೀ– ಈ ಮೂರರ ಸ್ವರೂಪ ಹಾಗು ಪ್ರಮಾಣ ವಿಷಯದಲ್ಲಿ ಅನೇಕ ಕವಿಗಳು ಬೇರೆ ಅಭಿಪ್ರಾಯ ತಳೆದರು. ಇದರಿಂದ ಅವರ ಭಾಷೆಯೂ ಬೇರೊಂದು ರೂಪ ತಾಳಿತು. ಗೌಡೀರೀತಿಯ ಬರವಣಿಗೆಯಿಂದ ಹಾಗೂ ಶ್ಲೇಷ ಮೂಲಕವಾದ ಅಲಂಕಾರ ಬಾಹುಲ್ಯದಿಂದ ಸಂಸ್ಕೃತಪ್ರಚುರವಾದ ಭಾಷಾಶೈಲಿಯೊಂದು ರೂಢವಾಯಿತು.

ಇಂತಹ ಶೈಲಿಯನ್ನು ಮೆಚ್ಚುವ ರಸಿಕರೂ ಇದ್ದರು ಮತ್ತು ಕವಿಗಳು ಆ ರಸಿಕರನ್ನು ಮೆಚ್ಚಿಸುವುದಕ್ಕೆ ಪ್ರಯತ್ನಿಸುತ್ತಿದ್ದರು. "ಎನಿತನೋಱಲ್ದು ಕವಿಯೇವನದಂ ಪೆಸರಿಟ್ಟು ಮೆಚ್ಚಬಲ್ಲನನಱಸಲ್ಕೆವೇಟ್ಟುದವನಂ ಜಗದೊಳ್ ಪಡೆಯಲ್ಕೆ ಬಾರದಾತನ ಮುಖದಿಂದಮಲ್ಲದುದು ಸಲ್ಲದು (ಅನಂತನಾಥ ಪುರಾಣ ೧–೪೫). ಹೆಸರಿಟ್ಟು ಮೆಚ್ಚಬಲ್ಲವರು ಪಂಡಿತರಲ್ಲದೆ ಬೇರಾರೂ ಅಲ್ಲ. ಪಂಡಿತರೂ ವಿವಿಧ ಕಳಾಮಂಡಿತರೂ ಮೆಚ್ಚಬೇಕಲ್ಲದೆ ಕಂಡಕಂಡವರು ಮೆಚ್ಚುವುದಕ್ಕೆ ತನ್ನ ಕಾವ್ಯವೇನು ದುಂಡುಬಿಯೆ, ಬೀದಿವರಿಯೆ, ಬೀರನ ಕತೆಯೇ ಎಂದು ಮಧುರಕವಿ (ಧರ್ಮನಾಥ ಪುರಾಣ ೧–೫೭) ನಿಃಸಂದಿಗ್ಧವಾಗಿ ಈ ಮಾತನ್ನು ಸಮರ್ಥಿಸಿದ್ದಾನೆ. ಈ ಪಂಡಿತರು ಬಯಸುವ ಚಮತ್ಕೃತಿಗೆ, ಪಾಂಡಿತ್ಯಕ್ಕೆ, ಸಂಸ್ಕೃತವೊಗ್ಗುವಂತೆ ಕನ್ನಡವೊಗ್ಗಲಾರದು. ದೀರ್ಘವಾದ ಸಮಾಸ ರಚನೆಯಿಂದ ಹಲವಾರು ಮಾತುಗಳನ್ನು ಸಂಸ್ಕೃತದಲ್ಲಿ ಅಡಕವಾಗಿ ಹೇಳಬಹುದು. ಸಂಸ್ಕೃತಶಬ್ದಗಳಿಗಿರುವ ವಿವಿಧಾರ್ಥಭೇದಗಳಿಂದಲೂ, ಸಂಸ್ಕೃತಸಂಧಿ ನಿಯಮಗಳಿಗನುಸಾರವಾಗಿ ಹಲವಾರು ಬಗೆಯಾಗಿ ಪದಚ್ಛೇದಮಾಡಿ ನಾನಾ ರೀತಿಯ ಅರ್ಥಸಂಘಟನೆ ಮಾಡುವ ಸಾಧ್ಯತೆಯಿಂದಲೂ, ಹೀಗೆ ಒಗ್ಗೂಡಿಸಿದ ಪದಪುಂಜದಿಂದುಂಟಾಗುವ ಬಂಧಗೌರವ, ನಾದಸೌಖ್ಯ ಹಾಗು ಚಮತ್ಕಾರದಿಂದಲೂ ಈ ಶೈಲಿಗೆ ಒಂದು ವಿಶಿಷ್ಟವಾದ ರಮಣೀಯತೆಯಿದೆ. ಶ್ಲೇಷೆಗಾಗಿ ಬಳಸಿಕೊಳ್ಳುವ ಅನೇಕ ಶಾಸ್ತ್ರಗಳ ಪರಿಭಾಷೆ ಹಾಗು ಪ್ರಸಿದ್ಧ ಪ್ರಾಚೀನ ಕಾವ್ಯಗಳಲ್ಲಿ ಬಳಕೆಯಾಗಿ ಆಯಾ

ಸಂದರ್ಭಗಳಿಂದ ವಿಶೇಷಾರ್ಥವನ್ನು ಗಳಿಸಿಕೊಂಡ ಪದಗಳು ಸಂಸ್ಕೃತದಲ್ಲಿ ಹೇರಳವಾಗಿರುವುದರಿಂದ ಈ ಭಾಷಾಶೈಲಿಗೆ ಅವು ಪ್ರಮುಖ ಘಟಕಗಳಾದುವು.

ಈ ಎಲ್ಲ ಮಾತು ಸಂಸ್ಕೃತಭೂಯಿಷ್ಠ ಶೈಲಿಯ ಸಮರ್ಥನೆಗಾಗಿ ಹೇಳಿದುದಲ್ಲ. ಅಗ್ಗಳನಂತೆ ಇನ್ನೂ ಕೆಲವು ಕವಿಗಳಿಗೆ ಅನ್ವಯಿಸುವುದಾದರಿಂದ ಇದನ್ನು ಇಷ್ಟು ದೀರ್ಘವಾಗಿ ಪ್ರಸ್ತಾಪಿಸಬೇಕಾಯಿತು.

## ೬. ಗ್ರಂಥಪಾಠ :

ಕಾವ್ಯಕಲಾನಿಧಿ ಗ್ರಂಥಮಾಲೆಯಲ್ಲಿ (ಕ್ರಿ.ಶ. ೧೯೦೧) ಪ್ರಕಟವಾದ ಪ್ರತಿಯನ್ನೆ ಇಲ್ಲಿ, ಇದ್ದಂತೆಯೆ, ಇಟ್ಟುಕೊಳ್ಳಲಾಗಿದೆ. ಈ ಪ್ರತಿಯ ಗ್ರಂಥಪಾಠದಲ್ಲಿ ಅಲ್ಲಲ್ಲಿ ಗ್ರಂಥಪಾತದೊಡನೆ ಪಾಠದೋಷಗಳೂ ಇವೆ. ಸರಿಯಾದ ಪಾಠವೇನೆಂಬುದನ್ನು ಊಹಿಸುವುದಕ್ಕೆ ನಮಗೆ ಕೆಲಮಟ್ಟಿಗೆ ನೆರವು ದೊರೆಯುತ್ತದೆ. (೧) ಸೂಕ್ತಿಸುಧಾರ್ಣವದಲ್ಲಿ ಹಾಗು ಕಾವ್ಯಸಾರದಲ್ಲಿ ಉದ್ಧೃತವಾದ ಈ ಗ್ರಂಥದ ಪದ್ಯಗಳು. (೨) ಅಗ್ಗಳನನ್ನು ಬಹುಮಟ್ಟಿಗೆ ಅನುವಾದಿಸಿಕೊಂಡು ಹೋಗುವ ದೊಡ್ಡಣಾಂಕನ "ಚಂದ್ರಪ್ರಭ ಚರಿತ್ರೆ" ಮತ್ತು ದೊಡ್ಡಯ್ಯನ "ಚಂದ್ರಪ್ರಭಸಾಂಗತ್ಯ". (೩) ಛಂದಸ್ಸು, ಅಲಂಕಾರ ಹಾಗೂ ಜೈನ ಪರಿಭಾಷೆಯ ದೃಷ್ಟಿಯಿಂದ ಸರಿಯಾದ ಪದರೂಪ (೪) ಅನುವಾದ ರೂಪದ ಪದ್ಯವಾಗಿದ್ದಲ್ಲಿ ಮೂಲ ಆಕರದ ಪಾಠ ಈ ನಾಲ್ಕನ್ನು ಬಳಸಿಕೊಂಡು ಪಾಠವನ್ನು ತಿದ್ದಬಹುದಾಗಿತ್ತು. ಆದರೆ ಹಾಗೆ ಮಾಡುವುದು ಸರಿಯೆನಿಸಲಿಲ್ಲ. ಏಕೆಂದರೆ ಮೊದಲನೆಯದಾಗಿ, ಹೀಗೆ ಕೆಲವೆಡೆಗಳಲ್ಲಿ ಮಾತ್ರ ತಿದ್ದುಪಡಿಮಾಡಬಹುದಲ್ಲದೆ, ಸಮಗ್ರ ಗ್ರಂಥದಲ್ಲಿ ತಿದ್ದಬೇಕಾದ ಭಾಗಗಳು ಇನ್ನೂ ಉಳಿಯುತ್ತವೆ. ಎರಡನೆಯದಾಗಿ, ಗ್ರಂಥಸಂಪಾದನೆ ಶಾಸ್ತ್ರೀಯವಾಗಿ ನಡೆಯಬೇಕಾದರೆ, ಅದಕ್ಕೆ ಪಾಠಾಂತರಗಳ ಆಧಾರ ಬೇಕು. ಹೀಗೆ ಗ್ರಂಥವನ್ನು ತಿದ್ದದೆ ಇದ್ದರೂ, ಸರಿಯಾದ ಪಾಠವನ್ನು ಸಾಧ್ಯವಿದ್ದಲ್ಲೆಲ್ಲ ಅನುವಾದ ಭಾಗ ಸೂಚಿಸಿ ಅದಕ್ಕನುಸಾರವಾಗಿ ಅರ್ಥವನ್ನು ಕೊಟ್ಟಿದೆ.

## ೭. ಅನುಬಂಧಗಳು :

(೧) **ಅರ್ಥಕೋಶ :** ಅನುವಾದದಲ್ಲಿ ಎಲ್ಲವನ್ನೂ ವಿವರಿಸಿರುವುದರಿಂದ ಶ್ಲೇಷಾರ್ಥದ ಪದಗಳನ್ನು ಈ ಕೋಶದಲ್ಲಿ ಹೆಚ್ಚಾಗಿ ಸೇರಿಸಿಲ್ಲ. ಭಿನ್ನಾರ್ಥಗಳನ್ನು ಬೇರೆ ಬೇರೆ ಎಡೆಗಳಲ್ಲಿ ಹೊಂದಿರುವ ಕೆಲವು ಪದಗಳನ್ನು ಇಲ್ಲಿ ಅಳವಡಿಸಿದೆ.

(೨) ಪ್ರತಿಯೊಂದು ಜೈನಪುರಾಣದ ಅನುಬಂಧದಲ್ಲಿಯೂ ಜೈನಪರಿಭಾಷೆ ಯನ್ನು ವಿವರಿಸುತ್ತ ಬಂದಿರುವುದರಿಂದ, ಈ ಗ್ರಂಥದಲ್ಲಿ ಹೆಚ್ಚಿನ ಯಾವ ಪದಗಳನ್ನು ವಿವರಿಸಬೇಕೆಂಬುದೊಂದು ಪ್ರಶ್ನೆಯೇಳುತ್ತದೆ. ಇದಲ್ಲದೆ ಗ್ರಂಥದಲ್ಲಿ ಕವಿಯೇ ಅನೇಕ ಪದಗಳನ್ನು ವಿವರಿಸಿರುವುದರಿಂದಲೂ, ಅನುವಾದದಲ್ಲಿ ಇನ್ನು ಕೆಲವನ್ನು ನಿರೂಪಿಸಿರುವುದರಿಂದಲೂ, ಈ ಕೋಶದಲ್ಲಿ ಹೆಚ್ಚಿನ ಪದಗಳನ್ನು ಮಾತ್ರ ಕೊಡಲಾಗಿದೆ.

ಹಿಂದಿಯಲ್ಲಿ ಪ್ರಕಟವಾದ ಜೈನಸಿದ್ಧಾಂತಕೋಶದಂತೆ ಕನ್ನಡದಲ್ಲೊಂದು ಸಮಗ್ರಕೋಶ ಸಿದ್ಧವಾಗುವವರೆಗೆ ಇಂತಹ ಅನುಬಂಧಗಳು ಆವಶ್ಯಕವಾಗುತ್ತವೆ.

**೮. ಕೃತಜ್ಞತೆ :**

ಈ ಗ್ರಂಥದ ಕಾರ್ಯವನ್ನು ನನಗೆ ಒಪ್ಪಿಸಿದುದಕ್ಕಾಗಿ ಅನುವಾದಕಮಂಡಲಿಗೂ, ಪರಿಷದಧ್ಯಕ್ಷರಾದ ಶ್ರೀ ಹಂ.ಪ. ನಾಗರಾಜಯ್ಯನವರಿಗೂ ನಾನು ತುಂಬ ಕೃತಜ್ಞನಾಗಿದ್ದೇನೆ.

**ಬೆಂಗಳೂರು** **ಆರ್.ವಿ. ಕುಲಕರಣಿ**

**೪–೯–೧೯೮೧**

# ಪರಿವಿಡಿ



## ದ್ವಿತೀಯ ಸಂಪುಟ

ಮಹಾಕವಿ

ಅಗ್ಗಳದೇವ ವಿರಚಿತಂ

# ಚಂದ್ರಪ್ರಭ ಪುರಾಣಂ

## ಪ್ರಥಮಾಶ್ವಾಸಂ

ಶ್ರೀಪಾದದ್ವಿತಯಪ್ರದಕ್ಷಿಣಕೃತಿವ್ಯಾಸಕ್ತಗೀರ್ವಾಣಕಾಂ ।
ತಾಪಾಂಗಪ್ರತಿಬಿಂಬಕೋಟಿಘಟಿತಸ್ಮೇರಸ್ಥಳೇಂದೀವರ ॥
ಶ್ರೀಪೂರ್ಣಂ ಹಿಮವನ್ನಗೇಂದ್ರಮೆನೆ ಕಣ್ಗೆಂಬಾದ ಚಾಂದ್ರಪ್ರಭಂ ।
ರೂಪಂ ದಿವ್ಯವಚೋಮರುನ್ನದಿಯಿನೆಮ್ಮೊಳ್ ಮಾಟ್ಕೆ ನೈರ್ಮಲ್ಯಮಂ ॥ ೧

ಆವೃತಘಾತ್ಯಘಾತಿದುರಿತಾತ್ಯಯದೊಳ್ ಚರಮಾಂಗಮಾತ್ರಕರ್ ।
ಜೀವಘನಸ್ವರೂಪಮೊಗೆತರ್ಪುದುಮಷ್ಟಮಭೂಮಿವಿಷ್ಟರ ॥
ಸ್ತಾವಧಿಸೌಖ್ಯಮುಖ್ಯರುಪಶಿಷ್ಟಗುಣಾಪ್ರಕರಾದನಶ್ವರ ।
ಶ್ರೀವನಿತೇಶರೀಗೆಮಗೆ ಸಿದ್ಧರತೀಂದ್ರಿಯಸೌಖ್ಯಸಿದ್ಧಿಯಂ ॥ ೨

ಧೈರ್ಯಂ ಘೋರತಪಃಪರೀಷಹಸಮೂಹಪ್ರಾಪ್ತಿಯೊಳ್ ಸಂದ ತಾ ।
ತ್ವರ್ಯಂ ಪಂಚವಿಧಾಮಳಾಚರಣಷಟ್ತ್ರಿಂಶದ್ಗುಣಶ್ರೇಣಿಯೊಳ್ ॥

### ಅಗ್ಗಳದೇವವಿರಚಿತಂ ಚಂದ್ರಪ್ರಭಪುರಾಣಂ

೧. ಪೂಜ್ಯವಾದ ಪಾದಗಳಿಗೆ ಪ್ರದಕ್ಷಿಣೆ ಹಾಕುತ್ತಿರುವ ದೇವಾಂಗನೆಯರ ಕಡೆಗಣ್ಣ, ಕಾಂತಿಯ ಪ್ರತಿಬಿಂಬಗಳು ಸಾಲುಸಾಲಾಗಿ ನೆಲದಾವರೆಗಳ ಶೋಭೆಯನ್ನು ಪಡೆದಿರಲಾಗಿ, ಹಿಮವಂತ ಗಿರೀಂದ್ರರಂತೆ ನಯನಮನೋಹರವಾಗಿರುವ ಚಂದ್ರಪ್ರಭ ಜಿನೇಂದ್ರನು ತನ್ನ ದಿವ್ಯವಾಣಿಯೆಂಬ ದೇವಗಂಗೆಯಿಂದ ನಮ್ಮ ಅಂತರಂಗವನ್ನು ನಿರ್ಮಲಗೊಳಿಸಲಿ. ೨. ತಮ್ಮನ್ನು ಆವರಿಸಿದ್ದ ಘಾತಿ ಹಾಗೂ ಅಘಾತಿ ಕರ್ಮಗಳನ್ನು ನಾಶಪಡಿಸಿದ ತರುವಾಯ ಚರಮದೇಹಿಗಳಾಗಿದ್ದವರು, ಅಷ್ಟಮಭೂಮಿಯನ್ನು ಸೇರಿ ಅನಂತಸೌಖ್ಯವನ್ನು ಪಡೆದವರೂ, ಅಷ್ಟಗುಣಸಂಪನ್ನರೂ, ಮೋಕ್ಷಸಂಪತ್ತಿಗೆ ಒಡೆಯರೂ ಆದ ಸಿದ್ಧರು ನಮಗೆ ಇಂದ್ರಿಯಾತೀತವಾದ ಸುಖದ ಮಾರ್ಗವನ್ನು ದಯಪಾಲಿಸಲಿ. ೩. ಕಠೋರವಾದ ತಪಶ್ಚರಣದಲ್ಲಿಯೂ, ಪರೀಷಹಗಳನ್ನು ಸಹಿಸುವಲ್ಲಿಯೂ ಧೈರ್ಯ, (ಸಮ್ಯಗ್ ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ ತಪ ಆಚಾರ ಮತ್ತು ವೀರ್ಯಾಚಾರ ಎಂಬ) ಐದು ಆಚಾರಗಳಲ್ಲಿ ಹಾಗೂ ಮೂವತ್ತಾರು

ಕಾರ್ಯಂ ಶಿಷ್ಯವಿನೇಯಶಿಕ್ಷೆಯೊಳೊಡಂಬಟ್ಟೊಪ್ಪೆ ಸಂಶೋಭಿಪಾ।
ಚಾರ್ಯರ್ ತಾಮೆಮಗೀಗೆ ಸಪ್ತಪರಮಸ್ಥಾನೋದಯೋಪಾಯಮಂ ॥ ೩

ನಯನಿಕ್ಷೇಪಪ್ರಮಾಣಂಗಳೊಳೆ ಪಡೆದನೈಕಾಂತಸಿದ್ಧಿಪ್ರತಿಜ್ಞಾ।
ಜಯಮಂ ತದ್ವಿಜ್ಞರೊಳ್ ಮುಂ ಬಟಕೆ ತಿಳಿಪಿ ಭವ್ಯರ್ಗೆ ಸದ್ಧರ್ಮಕರ್ಮಾ ॥
ಶ್ರಯತತ್ತ್ವಾತತ್ತ್ವಭೇದಂಗಳನೊಡರಿಸಿ ವಾಕ್ಶ್ರೀಯಶಶ್ರೀಯಶಶ್ರೀಸಮಾಕೃ।
ಷ್ಟಿಯನಾದಂ ಸಂದರಂತರ್ಮುಖತೆಗಭಿಮುಖಂಮಾಳ್ಕುಪಾಧ್ಯಾಯರೆಮ್ಮಂ ॥ ೪

ಶೀಲಂ ಪಾಲಿತಷಟ್ಪ್ರಕಾರಮೆನಿಸಿರ್ದಾವಶ್ಯಕಕ್ಕಾಯ್ತು ನಿ।
ತ್ಯಾಲಂಬಂ ನಿರವದ್ಯಮಾಯ್ತು ಚರಿತಂ ಸಾವದ್ಯಮಂ ಪೊರ್ದದೆಂ ॥
ದೀಲೋಕಂ ಪೊಗಟ್ಟಪ್ರಮತ್ತಗುಣಸಂಸ್ಥಾನಕ್ಕೆ ಪಕ್ಕಾದ ಬೋ।
ಧಾಲೋಕರ್ ದಯೆಗೆಯ್ಗೆ ಸಾಧುಗಳಘಪ್ರಧ್ವಂಸನಪ್ರೌಢಿಯಂ ॥ ೫

ಪರಿಹೃತದೋಷಂ ಸಗುಣಂ।
ಪರಾರ್ಥ್ಯಮುತ್ಪ್ರಭಮತರ್ಕ್ಯಸಾಮರ್ಥ್ಯಮಳಂ ॥
ಕರಿಸಿರ್ಕೆ ಪಂಚಗುರುಪಂ।
ಚರತ್ನಮಾಳಿಕೆ ಮದೀಯಮತಿಮಾನಿನಿಯಂ ॥ ೬

ಗುಣಗಳಲ್ಲಿ ತತ್ಪರತೆ, ಶಿಷ್ಯರಿಗೂ ಭಕ್ತರಿಗೂ ಸನ್ಮಾರ್ಗವನ್ನು ಕಲಿಸುವ ಉದ್ಯೋಗ–ಇವುಗಳನ್ನು ಚೆನ್ನಾಗಿ ಅಳವಡಿಸಿಕೊಂಡು ಶೋಭಿಸುವ ಆಚಾರ್ಯರು ನಮಗೆ ಶ್ರೇಷ್ಠವಾದ ಅಪ್ರಮತ್ತಗುಣಸ್ಥಾನ ಪ್ರಾಪ್ತಿಯ ಮಾರ್ಗವನ್ನು ಅನುಗ್ರಹಿಸಲಿ. ೪. ನಯ–ನಿಕ್ಷೇಪ–ಪ್ರಮಾಣಗಳಲ್ಲಿ ಅನೇಕಾಂತವಾದ ಸಿದ್ಧಿಯನ್ನು ಗಳಿಸಿ, ಪಂಡಿತರಲ್ಲಿ ಜಯವನ್ನು ಮೊದಲು ಸಂಪಾದಿಸಿ, ಆ ನಂತರ ಭಕ್ತಜನಕ್ಕೆ ಸದ್ಧರ್ಮ, ಸತ್ಕರ್ಮ, ತತ್ತ್ವಾತತ್ತ್ವ ಭೇದ–ಇವುಗಳನ್ನೆಲ್ಲ ವಿಶದವಾಗಿ ತಿಳಿಸಿ, ವಾಕ್‌ಸಂಪತ್ತಿನೊಡನೆ ಯಶಸ್ಸಂಪತ್ತನ್ನೂ ಸಂಪಾದಿಸಿದ ಪ್ರಸಿದ್ಧರಾದ ಉಪಾಧ್ಯಾಯರು ನಮ್ಮ ಒಳಗಣ್ಣನ್ನು ತೆರೆಯಿಸಿ ನಮ್ಮೊಳಗನ್ನು ನಾವೆ ನೋಡಿಕೊಳ್ಳುವಂತೆ ಅನುಗ್ರಹಿಸಲಿ. ೫. "(ಸಾಮಯಿಕ, ಇಪ್ಪತ್ತುನಾಲ್ಕು ತೀರ್ಥಂಕರಸ್ತುತಿ, ಪಂಚಪರಮೇಷ್ಠಿ ವಂದನೆ, ಪ್ರತಿಕ್ರಮಣ, ಪ್ರತ್ಯಾಖ್ಯಾನ ಮತ್ತು ಕಾಯೋತ್ಸರ್ಗ ಎಂಬ) ಷಡಾವಶ್ಯಕಗಳ ಆಚರಣೆಯೆ ಶೀಲವಾಗಿ ನಿರ್ದುಷ್ಟವಾದ ಚಾರಿತ್ರವುಳ್ಳವರು ಸಾಧುಗಳು; ಇವರ ಚರಿತಕ್ಕೆ ಕಳಂಕವೆಂದೂ ತಾಗದು" ಎಂದು ಲೋಕದ ಜನರೆಲ್ಲರಿಂದ ಹೊಗಳಿಸಿಕೊಂಡವರೂ, ಅಪ್ರಮತ್ತ ಗುಣ ಸ್ಥಾನವನ್ನು ಪಡೆದವರೂ, ಜ್ಞಾನದೃಷ್ಟಿಗಳೂ ಆದ ಸಾಧುಗಳು ನಮಗೆ ಪಾಪನಾಶನದ ವಿದ್ಯೆಯನ್ನು ದಯಪಾಲಿಸಲಿ. ೬. ಪಂಚಪರಮೇಷ್ಠಿಗಳ ಸ್ತುತಿ ಒಂದು ರತ್ನಮಾಲಿಕೆ; ಅದು ದೋಷಗಳನ್ನು ಪರಿಹರಿಸಿರುವುದು; ಗುಣಯುಕ್ತವಾದುದು (ಸೂತ್ರಬದ್ಧವಾದುದು), ತುಂಬ ಬೆಲೆಯುಳ್ಳದು; ಪ್ರಜ್ವಲವಾದ ಪ್ರಭೆಯುಳ್ಳದು; ಊಹೆಗೆ ನಿಲುಕದಂತಹ ಶಕ್ತಿಯುಳ್ಳದು. ಹೀಗಿರುವ ಈ ರತ್ನಮಾಲೆ ನನ್ನ ಮತಿಯೆಂಬ ಸ್ತ್ರೀಗೆ

॥ ಮಾಳಿನೀ ವೃತ್ತಂ ॥

ಪ್ರಣತನಿಚಯಚೇತಶ್ಚಾತಕಕ್ಕೀಗೆ ಬೇಗಂ ।
ತಣಿವನಮಲವಾಣೀವೃಷ್ಟಿಯಿಂದಪ್ರಮತ್ತಂ ॥
ಗುಣಗಣಸಮುದಾತ್ತಂ ಸತ್ತಪೋವೃತ್ತಿವಿತ್ತಂ ।
ಗಣಧರವಿಭುದತ್ತಂ ಶುದ್ಧಬೋಧಪ್ರವೃತ್ತಂ ॥ ೭

ಜಿತಕರ್ಮಂ ಸಮುಪಾತ್ತತತ್ತ್ವ ಚಯಮರ್ಮಂ ಶುದ್ಧ ರತ್ನತ್ರಯಾ ।
ಧೃತಭರ್ಮಂ ಕುಮತಾವಳೀಶಿಶಿರಘರ್ಮಂ ಸಾಧುಸಂದೋಹಸಂ ॥
ವೃತವರ್ಮಂ ವಿನಮದ್ವಿನೇಯಜನಶರ್ಮಂ ಮೋಕ್ಷಲಕ್ಷ್ಮೀಪ್ರಿಯೋ ।
ಚಿತನರ್ಮಂ ನಮಗಾರ್ಮಮಕ್ಕೆ ಜಿನಧರ್ಮಂ ಜನ್ಮಪಾರಂಬರಂ ॥ ೮

ಪ್ರಾಳೇಯಾಮಳಿನಾಂಗಿ ತುಂಗಮಹಿಷೇಂದ್ರಾರೂಢೆಯಾತ್ಮಾಷ್ಟದೋ ।
ರ್ಮಾಳಾಳಂಕೃತೆ ಚಕ್ರಶೂಲಶರಚಾಪೋತ್ಕೇತುಚಂಚತ್ಕಶಾ ॥
ಭೀಳಾಸಿಸ್ಫುಟಖೇಟಕಾನ್ವಿತೆ ಚಳದ್ಭಾಳಾಕ್ಷಿ ಸಂಪ್ರೀತಿಯಿಂ ।
ಜ್ವಾಳಾಮಾಳಿನಿ ಮಾಟಿಕ್ಕೆ ಮತ್ಕೃತಿಗೆ ನಿರ್ವಿಘ್ನೋಕ್ತಿನಿರ್ವಾಹಮಂ ॥ ೯

ಮರಕತಕಾಂತಿಯು ತಳೆದ ಮೆಯ್ವೆಳಗಿಂ ನೊಸಲೊಳ್ ಪೊದಟ್ಟು ತಾ ।
ವರೆಯೆಸಳ್ದೊಟ್ಟಿನೆಂತೆಸೆವ ಕಣ್ಮಲರಿಂ ವರದಪ್ರಫುಲ್ಲಪಂ ॥
ಕರುಹಕಶಾಂಕುಶಾಂಕಿತಚತುರ್ಭುಜದಿಂದೆಸೆವಂ ಕಪೋತವಿ ।
ಷ್ಕಿರರಥನಟ್ಕಿಜೆಂ ವಿಜಯಯಕ್ಷನೊಡರ್ಚುಗಮೋಘರಕ್ಷೆಯಂ ॥ ೧೦

ಅಲಂಕಾರವಾಗಿರಲಿ. ೭. ಅನೇಕ ಗುಣಗಳಿಂದ ಕೂಡಿದವನೂ, ಉತ್ತಮವಾದ ತಪಃಸಂಪತ್ತಿಯುಳ್ಳವನೂ, ಪರಿಶುದ್ಧವಾದ ಜ್ಞಾನದಾನದಲ್ಲಿ ನಿರತನಾದವನೂ ಎನಿಸಿದ ಶ್ರೇಷ್ಠ ಗಣಧರ 'ದತ್ತ'ನು, ಬಾಗಿ ಬೇಡುತ್ತಿರುವ ಚೇತಸ್ಸೆಂಬ ಚಾತಕಪಕ್ಷಿಗೆ ತನ್ನ ನಿರ್ಮಲವಾದ ವಚನವೆಂಬ ಮಳೆಗರೆದು ತೃಪ್ತಿಯುಂಟು ಮಾಡಲಿ. ೮. ಜಿನ ಧರ್ಮವು ಕರ್ಮಗಳನ್ನೆಲ್ಲ ಜಯಿಸಿದುದು; ಶ್ರೇಷ್ಠ ತತ್ವಗಳ ರಹಸ್ಯವನ್ನು ಒಳಗೊಂಡುದು; ಪರಿಶುದ್ಧವಾದ ರತ್ನತ್ರಯಗಳನ್ನು ಚಿನ್ನದಂತೆ ಕುಂದಣಿಸಿಕೊಂಡಿರುವುದು; ಕುಮತಗಳೆಂಬ ಚಳಿಗಾಲಕ್ಕೆ ಬೇಸಗೆಯ ಸ್ವರೂಪವಾಗಿರುವುದು; ಸಾಧುಗಳೆಂಬ ಕವಚವನ್ನು ತೊಡಿಸಿರುವುದು; ತನಗೆ ಶರಣಾದ ಭಕ್ತಜನಕ್ಕೆ ಆನಂದದ ನೆಲೆಯಾದುದು; ಮುಕ್ತಿ ಕನ್ಯೆಗೆ ಪ್ರಿಯವಾದುದು. ಹೀಗಿರುವ ಈ ಧರ್ಮವು ಜನ್ಮಾಂತದವರೆಗೆ ನಮಗೆ ಆಶ್ರಯವಾಗಿರಲಿ. ೯. ಹಿಮದಂತೆ ಪರಿಶುಭ್ರವಾದ ದೇಹವುಳ್ಳ, ಮಹಾಮಹಿಷವನ್ನು ಏರಿದ, ಎಂಟು ತೋಳುಗಳನ್ನುಳ್ಳ, ಚಕ್ರ– ಶೂಲ– ಬಾಣ–ಬಿಲ್ಲು–ಕೇತು–ಪಾಶ–ಖಡ್ಗ–ಗುರಾಣಿಗಳನ್ನೊಡಗೊಂಡ, ಚಂಚಲವಾದ ಹಣೆಗಣ್ಣುಳ್ಳ ಜ್ವಾಲಾಮಾಲಿನಿಯು ಪರಮಪ್ರೇಮದಿಂದ ನನ್ನ ಕಾವ್ಯಕೃತಿಗೆ ನಿರ್ವಿಘ್ನತೆಯನ್ನುಂಟುಮಾಡಲಿ. ೧೦. ಹಸಿರುರತ್ನದ ಕಾಂತಿಯುಳ್ಳ ದೇಹ ಪ್ರಭೆಯಿಂದಲೂ, ತಾವರೆಯ ಎಸಳಿನಂತೆ ಹಣೆಯಲ್ಲಿ ಶೋಭಿಸುವ ಕಣ್ಣಿಂದಲೂ, ಅರಳಿದ ತಾವರೆ–ಪಾಶ–ಅಂಕುಶಗಳನ್ನು ಹಿಡಿದ ಮೂರು ಕೈಗಳಿಂದಲೂ

ಅಪಹಿಂಸಂ ಸಪ್ತಭಂಗ್ಯನ್ವಿತಮಪವನಸರೋಧೋದ್ಗತಂ ತ್ಯಕ್ತತಾಲ್ವೋ ।
ಷ್ಠಪುಟವ್ಯಾಪಾರಮಪ್ರಸ್ಖಲನಮಖಿಲಭಾಷಾತ್ಮಕಂ ನಿಶ್ಚಿತಾಶೇ ॥
ಷಪದಾರ್ಥಂ ವ್ಯಾಪ್ತಕಾಲತ್ರಯಮತಿಸದೃಶಾಸನ್ನದೂರಂ ಸುತತ್ತ್ವಾ ।
ಭ್ಯುಪಯುಕ್ತಂ ಮಾಟ್ಕೆ ಜೈನಂ ವಚನಮಮಳವಾಕ್ಪ್ರೌಢಿಯಂ ನಮ್ಮೊಳೆಂದುಂ ॥ ೧೧

ದುರಿತವ್ರಾತಲತಾಕೃಪಾಣಿ ವಿಸರದ್ದುರ್ಬೋಧರೋಧಸ್ವಿನೀ ।
ತರಣದ್ರೋಣಿ ಸಮುನ್ನತಾಕ್ಷಯಪದಪ್ರಾಸಾದನಿಶ್ರೇಣಿ ಬಂ ॥
ಧುರಸಾಹಿತ್ಯಸುರತ್ನರೋಹಣಮಹೇಂದ್ರಕ್ಷೋಣಿ ತಾಳ್ದಿರ್ಕೆ ವಿ ।
ಸ್ತರದಿಂ ವಾಣಿ ಮದೀಯಮಾನಿತಮುಖಶ್ರೀಯೊಳ್ ಸಖೀಲೀಲೆಯಂ ॥ ೧೨

ಮಳವಿಳಯನರೆನಿಸಿದ ಕೇ ।
ವಳಿಗಳ ಶುದ್ಧಾನುಬದ್ಧಕೇವಳಿಗಳ ನಿ ॥
ಶ್ಚಳಿತಶ್ರುತಕೇವಳಿಗಳ ।
ಚಳನಂ ನಮಗಚಳಸುಖಮನೀಗನವರತಂ ॥ ೧೩

ನೆಲೆ ನಾಲ್ವೆರಲಧಿಕಂ ನಿ ।
ಶ್ಚಲತಪದಿಂದಾರ್ಗಮೆಂಬುದರ್ಕಾ ಚತುರಂ ॥
ಗುಲಚಾರಣಋದ್ಧಿಯೆ ಮೂ ।
ದಲೆಯೆನಿಪಂ ವರ್ಯಕುಂಡಕುಂದಾಚಾರ್ಯಂ ॥ ೧೪

ಹಾಗೂ ವರದಹಸ್ತದಿಂದಲೂ, ಕಪೋತವಾಹನದಿಂದಲೂ ಶೋಭಿಸುವ ವಿಜಯ ಯಕ್ಷನು ನಮಗೆ ಉತ್ತಮವಾದ ರಕ್ಷೆಯನ್ನು ದಯಪಾಲಿಸಲಿ. ೧೧. ಹಿಂಸಾ ರಹಿತವಾದ, ಸಪ್ತಭಂಗಿಗಳಿಂದ ಕೂಡಿದ, ಗಾಳಿಯ ತಡೆಯಿಲ್ಲದೆ, ಅಂಗುಳು–ತುಟಿಗಳ ಚಲನೆಯಿಲ್ಲದೆ ಉಚ್ಚಾರವಾಗುವ, ಅಸ್ಖಲಿತವಾದ, ಸರ್ವಭಾಷಾತ್ಮಕವಾದ, ಸಮಸ್ತಪದಾರ್ಥಗಳನ್ನು ವಿವರಿಸುವ, ತ್ರಿಕಾಲಗಳನ್ನು ವ್ಯಾಪಿಸುವ, ಸಮೀಪ–ದೂರಗಳ ಭೇದವಿಲ್ಲದ, ಉತ್ತಮವಾದ ತತ್ತ್ವಗಳನ್ನೊಳಗೊಂಡ ಜಿನೇಶ್ವರನ ವಾಣಿಯು ನಮಗೆ ನಿರ್ಮಲವಾದ ವಚನಪಟುತ್ವವನ್ನು ಯಾವಾಗಲೂ ಉಂಟುಮಾಡಲಿ. ೧೨. ಪಾಪ ಸಮೂಹವೆಂಬ ಬಳ್ಳಿಯನ್ನು ಕತ್ತರಿಸುವ ಖಡ್ಗವಾದವಳೂ, ಅಜ್ಞಾನವೆಂಬ ಘೋರ ನದಿಯನ್ನು ದಾಟಿಸುವ ದೋಣಿಯಾದವಳೂ, ಮುಕ್ತಿಯ ಭವ್ಯಭವನಕ್ಕೆ ಸೋಪಾನಮಾರ್ಗವಾದವಳು, ರಮಣೀಯವಾದ ಸಾಹಿತ್ಯಕ್ಷೇತ್ರದಲ್ಲಿ ರತ್ನಮಯವಾದ ರೋಹಣಗಿರಿಯಾದವಳೂ ಎನಿಸಿದ ವಾಗ್ದೇವತೆಯು ನನ್ನ ಮುಖದಲ್ಲಿ ಸಖಿಯಂತೆ ಬಂದು ಸುಖವಾಗಿ ನೆಲಸಲಿ. ೧೩. ಪಾಪನಾಶಕರೆನಿಸಿದ ಕೇವಳಿಗಳ, ಶುದ್ಧಕೇವಳಿಗಳ, ಅನುಬದ್ಧ ಕೇವಳಿಗಳ ಹಾಗೂ ನಿಶ್ಚಲಿತ ಕೇವಲಿಗಳ ಪಾದಗಳು ನಮಗೆ ಸ್ಥಿರವಾದ ಸುಖವನ್ನು ಅನುಗ್ರಹಿಸಲಿ. ೧೪. ಸ್ಥಿರವಾದ ತಪಶ್ಚರಣದಲ್ಲಿ ಯಾರಿಗಾದರೂ ತಾವು ನಾಲ್ಕು ಬೆರಳು ಮೇಲೆಯೇ ಎಂದು ತೋರುವಂತೆ ಚತುರಂಗುಲ ಚಾರಣಸಿದ್ಧಿಯನ್ನು

ತ್ರಿಭುವನಮಂಗಲತೋರಣ ।
ನಿಭಮಂ ಪ್ರವಚನಮನೆಯ್ದಿ ರೈಸ್ತಂಭಸಮ ॥
ಪ್ರಭರಂತರ್ನಿರ್ಭೃತೋನ್ನತ ।
ವಿಭವರ್ ಭೂತಬಲಿ ಪುಷ್ಪದಂತಾಚಾರ್ಯರ್ ॥ ೧೫

ಅನಿಶಂ ಪ್ರಸನ್ನತಾಯುತ ।
ರನೂನಸದಸತ್ಪದಾರ್ಥದರ್ಶನನಿಪುಣರ್ ॥
ಜಿನಶಾಸನಲಕ್ಷ್ಮಿಗೆ ಲೋ ।
ಚನಯುಗಳರ್ ವೀರಸೇನಜಿನಸೇನಾಖ್ಯರ್ ॥ ೧೬

ಪ್ರಥಿತಾಕಳಂಕಹಿಮವ ।
ತ್ಪೃಥಿವೀಧರಜಾತಭಾರತೀನುತಭಾಗೀ ॥
ರಥಿಯನೊಳಪೊಕ್ಕು ಕಳೆದುದು ।
ಪೃಥುಮಿಥ್ಯಾತ್ವೋಪತಾಪಮರ ಸಕಳಜನಂ ॥ ೧೭

ಆಚರಿಕೆ ಗೃಧ್ರಪಿಂಛಮ ।
ಹಾಚಾರ್ಯಾಂಘ್ರಿನಖಭಾನುರುಚಿಯರ್ಹದ್ಬ ॥
ಲ್ಯಾಚಾರ್ಯಪದನಖರಶಶಿ ।
ರೋಚಿ ಮದೇನಸ್ತಮಸ್ತಮೋನಿರಸನಮಂ ॥ ೧೮

ಪಡೆದ ಮಹಾತ್ಮರು ಕುಂಡಕುಂದಾಚಾರ್ಯರು. ೧೫. ಮೂರುಲೋಕಗಳಿಗೂ ಮಂಗಳತೋರಣವೆನಿಸುವಂತಹ (ಷಟ್ಖಂಡಾಗಮವೆಂಬ) ಆಗಮಸಿದ್ಧಾಂತವನ್ನು ರಚಿಸಿ, ಆ ತೋರಣದ ಸುವರ್ಣಸ್ತಂಭಗಳಂತೆ ಉಜ್ವಲ ತೇಜಸ್ಸುಳ್ಳ, ಭೂತಬಲಿ ಹಾಗು ಪುಷ್ಪದಂತಾಚಾರ್ಯರು ಅತ್ಯುನ್ನತವಾದ ಆಂತರಿಕವೈಭವಸಂಪನ್ನರು. ೧೬. ವೀರಸೇನ ಮತ್ತು ಜಿನಸೇನ ಎಂಬುವರು ಸದಾಕಾಲ ಪ್ರಸನ್ನತೆಯುಳ್ಳವರು; ಸದ್ಭೂತ ಹಾಗು ಅಸದ್ಭೂತ ವ್ಯವಹಾರನಯವನ್ನೂ ಪದಾರ್ಥಗಳನ್ನೂ ಚೆನ್ನಾಗಿ ತಿಳಿದವರೂ ತಿಳಿಸಿಕೊಡುವುದರಲ್ಲಿ ನಿಷ್ಣಾತರೂ ಆಗಿರುವರು; ಜಿನಧರ್ಮವೆಂಬ ಲಕ್ಷ್ಮಿಗೆ ಇವರಿಬ್ಬರೂ ಎರಡು ಕಣ್ಣುಗಳಾಗಿರುವರು. ೧೭. ಹಿಮವಂತಗಿರಿಯಲ್ಲಿ ಹುಟ್ಟಿದ ಗಂಗಾನದಿಯಲ್ಲಿ ಹೊಕ್ಕು (ಪಾಪ) ತಾಪವನ್ನು ಕಳೆದುಕೊಳ್ಳುವಂತೆ, ಅಕಳಂಕಮುನಿಯ ವಚನದಿಂದ ಸಕಲ ಜನರು ಮಿಥ್ಯಾತ್ವದ ತಾಪವನ್ನು ಕಳೆದುಕೊಂಡರು. ೧೮. ಗೃಧ್ರ ಪಿಂಛಮಹಾ ಚಾರ್ಯರ ಪಾದದುಗುರುಗಳೆಂಬ ಸೂರ್ಯಪ್ರಭೆಯೂ, ಅರ್ಹದ್ಬಲ್ಯಾ ಚಾರ್ಯರ ಪಾದನಖಗಳೆಂಬ ಚಂದ್ರಪ್ರಭೆಯೂ ನನ್ನಲ್ಲಿಯ ದೋಷವೆಂಬ ಕತ್ತಲೆ

ಭೃತವಂಶನಾಗಿಯುಂ ವ್ಯಪ ।
ಗತರಾಗಾಸಕ್ತ ಸಿಂಹನಂದ್ಯಾಚಾರ್ಯ ॥
ವ್ರತಿಪತಿ ಸತ್ತತ್ವಸಮ ।
ನ್ವಿತನಾಗಿಯುಮಾತ್ತ ತತ್ತ್ವಚಯಚಾತುರ್ಯಂ ॥ ೧೯

ಸಮನಿಕೆ ಮನ್ಮಾನಸದೊಳ್ ।
ಸಮಂತಭದ್ರಾಂಘ್ರಿನಖರಕಾಂತಿಜಳಂ ಮ ॥
ತ್ತಮಳಿನಕವಿಪರಮೇಷ್ಠಿ ।
ಕ್ರಮಕಮಳಂ ಪೂಜ್ಯಪಾದಪದನಖಕುಮುದಂ ॥ ೨೦

ಅಯಮಾರ್ಗಾಶ್ರಯನಂ ಪ್ರಭೂತದಯನಂ ದೂರೀಕೃತಸ್ವಾಂತಭೂ ।
ಭಯನಂ ಲಬ್ಧ ಕಷಾಯವೈರಿಜಯನಂ ವಿಜ್ಞಾತನಿಶ್ಶೇಷವಾ ॥
ಙ್ಮಯನಂ ಸ್ವೀಕೃತಸತ್ತಪಃಪ್ರಚಯನಂ ಶ್ರೀಕುಂಡಕುಂದೋಜ್ಜ್ವಳಾ ।
ನ್ವಯನಂ ವಂದಿಪೆನೆಟ್ಟೆಯಿಂದೆ ಕುಳಚಂದ್ರಖ್ಯಾತಯೋಗೀಂದ್ರನಂ ॥ ೨೧

ಶಾಂತರಸೈಕಮೂರ್ತಿ ಪರಮಾಗಮವಾರಿಧಿಪಾರವರ್ತಿ ಚೈ ।
ರಂತನಯೋಗಿನಾಯಕಯಶಸ್ಸಮಕೀರ್ತಿ ಮನೋಜರಾಜವಿ ॥
ಕ್ರಾಂತವನಾಸಿತಾರ್ತಿಯೆನೆ ವಿಶ್ವವಸುಂಧರೆ ಮಾಘಣಂದಿಸೈ ।
ದ್ಧಾಂತಿಕಚಕ್ರವರ್ತಿ ನೆಗಳ್ದಂ ಧರಣೀಶ್ವರವೃಂದವಂದಿತಂ ॥ ೨೨

ಯನ್ನು ನಿವಾರಿಸಲಿ. ೧೯. "ಭೃತವಂಶ' (ಕೊಳಲನ್ನು ಹಿಡಿದು ನುಡಿಸುವವನು) ಆದರೂ "ವ್ಯಪಗತರಾಗಾಸಕ್ತ" (ರಾಗಗಳಲ್ಲಿ ಆಸಕ್ತಿಯಿಲ್ಲದವನು) : (ಇದು ವಿರೋಧ, ಇದರ ಪರಿಹಾರ ಹೇಗೆಂದರೆ–) 'ಭೃತವಂಶ' ಉತ್ತಮವಾದ ವಂಶಕ್ಕೆ ಸೇರಿದವನು; ಸುಖಭೋಗಗಳ ಅನುಕೂಲವುಳ್ಳವನು ಆಗಿದ್ದರೂ, 'ವ್ಯಪಗತ ರಾಗಾಸಕ್ತ' (ವಿರಾಗಿ) ಆದವನು; ಮುನೀಂದ್ರನು; ಶ್ರೇಷ್ಠವಾದ ಒಂದು ತತ್ತ್ವ ವುಳ್ಳವನು; ಆದರೂ ಅನೇಕ ತತ್ತ್ವಗಳಲ್ಲಿ ಚತುರನಾದವನು. (ಅದು ಹೇಗೆಂದರೆ) (ಜೈನಧರ್ಮದ ಮೇರೆಗೆ) ಏಳು ತತ್ತ್ವಗಳನ್ನು ವಿವರಿಸುವುದರಲ್ಲಿ ಚತುರನಾದವನು. ಹೀಗಿರುವವನು ಸಿಂಹನಂದ್ಯಾಚಾರ್ಯನು. ೨೦. ನನ್ನ ಮನಸ್ಸೆಂಬ ಮಾನಸ ಸರೋವರದಲ್ಲಿ ಸಮಂತಭದ್ರರ ಪಾದದುಗುರುಗಳ ಕಾಂತಿಯೆಂಬ ನೀರೂ, ನಿರ್ಮಲವಾದ ಕವಿಪರಮೇಷ್ಠಿಗಳ ಪಾದಗಳೆಂಬ ಕೆಂದಾವರೆಗಳೂ, ಪೂಜ್ಯಪಾದರ ಪಾದಗಳೆಂಬ ಬೆಳ್ದಾವರೆಗಳೂ ನೆಲಸಲಿ. ೨೧. ಶ್ರೇಯೋಪಾಯಕ್ಕೆ ನೆಲೆ ಯಾದವನೂ, ಅತ್ಯಂತ ದಯಾಮಯನೂ, ಮನ್ಮಥನ ಭಯವನ್ನು ದೂರಗೊಳಿಸಿ ದವನೂ, ಕಷಾಯಗಳೆಂಬ ವೈರಿಗಳನ್ನು ಗೆದ್ದವನೂ, ಸಮಸ್ತ ವಾಙ್ಮಯದಲ್ಲಿ ನಿಷ್ಣಾತನೂ, ಉತ್ತಮವಾದ ತಪಗಳನ್ನು ಆಚರಿಸಿದವನೂ, ಶ್ರೀ ಕುಂಡಕುಂದವೆಂಬ ಶ್ರೇಷ್ಠ ವಂಶಕ್ಕೆ ಸೇರಿದವನೂ, ಆದ ಕುಳಚಂದ್ರನೆಂಬ ಮುನೀಂದ್ರನನ್ನು ಭಕ್ತಿಪೂರ್ವಕ ವಾಗಿ ನಾನು ವಂದಿಸುವೆನು. ೨೨. "ಶಾಂತಿರಸವೇ ಮೂರ್ತಿಗೊಂಡಂತೆ ಇರುವವನು, ಆಗಮ ಸಮುದ್ರವನ್ನು ಪಾರುಗಂಡವನು, ಚಿರಂತನರಾದ ಯೋಗಿ

ಶ್ರೀಕನಕನಂದಿಮುನಿವಿ ।
ದ್ಯಾಕೀರ್ತನಮಂ ಫಣೀಶ್ವರಂ ಬಹುತರಜಿ ॥
ಹ್ವಾಕರನಾಗಿಯುಮಱಿಯದೆ ।
ಮೂಕತೆಯಂ ತಳೆದು ನಾಣ್ಚಿ ರಸೆಗಿೞಿದಿರ್ಪಂ ॥ ೨೩

ಭಾವಂ ಭಾಸುರತತ್ತ್ವಗರ್ಭಮಯನಂ ಚಾರಿತ್ರಗರ್ಭಂ ವಚ ।
ಶ್ರೀವಿಶ್ವೋರ್ಜಿತಶಾಸ್ತ್ರಗರ್ಭಮಮಳಾಳೋಕಂ ದಯಾಗರ್ಭಮೆಂ ॥
ಬೀ ವಿಖ್ಯಾತಿ ಸಮಸ್ತದಿಕ್ಪ್ರಸರಗರ್ಭಂ ನೋಟಿಪ್ಪೊಡೆಂಬನ್ನೆಗಂ ।
ತ್ರೈವಿದ್ಯಶ್ರುತಕೀರ್ತಿದೇವನೆಸೆದಂ ಸ್ಯಾದ್ವಾದಸಾರೋದಯಂ ॥ ೨೪

ಷಡಭಿಜ್ಞಂ ಕ್ಷಣಿಕಂ ಜಡಾತ್ಮನೆನಿಪಂ ನೈಯಾಯಿಕಂ ವೃತ್ರವಿ ।
ದ್ವಿಡಮಾತ್ಯಂ ಸಲೆ ಶೂನ್ಯವಾದಿ ಶಬರೋಕ್ತ್ಯಾಸಕ್ತ ಮೀಮಾಂಸಕಂ ॥
ನಡೆವಂ ಕಾಪಿಳವೃತ್ತಿಯಂ ಬಿಡದೆ ಸಾಂಖ್ಯಂ ನೋಟಿಪ್ಪೊಡೆಂದೊಲ್ಲದೊ ।
ಳ್ಪಡರ್ವನ್ನಂ ಶ್ರುತಕೀರ್ತಿದೇವನೊಳೆ ನಿಂದಳ್ ವಾಣಿಯೇಂ ಜಾಣೆಯೋ ॥ ೨೫

ಶ್ರೇಷ್ಠರಿಗೆ ಸಮವಾದ ಕೀರ್ತಿಯನ್ನು ಸಂಪಾದಿಸಿದವನು, ಮನ್ಮಥನ ಪರಾಕ್ರಮವನ್ನು ಸಂಪೂರ್ಣವಾಗಿ ಭೇದಿಸಿದವನು" ಎಂದು ಲೋಕವೆಲ್ಲ ಹೊಗಳುವಂತೆ ರಾಜಪೂಜಿತನಾದ ಮಾಘಣಂದಿ ಸೈದ್ಧಾಂತಿಕ ಚಕ್ರವರ್ತಿ ಪ್ರಸಿದ್ಧನಾದನು. ೨೩. ಶ್ರೀ ಕನಕನಂದಿ ಮುನಿಗಳ ವಿದ್ಯಾಮಹಿಮೆಯನ್ನು, ಹೊಗಳುವುದು ಸಾಧ್ಯವಾಗದೆ ತನಗೆ ಅನೇಕ ನಾಲಗೆಗಳಿದ್ದೂ ಉಪಯೋಗವಿಲ್ಲವೆಂದು ನಾಚಿಕೊಂಡು ಆದಿಶೇಷನು ಬಾಯಿ ಮುಚ್ಚಿಕೊಂಡು ಪಾತಾಳಕ್ಕೆ ಇಳಿದು ಹೋದನು. ೨೪. "ಮನಸ್ಸು ಶ್ರೇಷ್ಠವಾದ ತತ್ತ್ವರಹಸ್ಯವುಳ್ಳುದು; ನಡತೆ ಶೀಲಸಂಪನ್ನವಾದುದು; ಮಾತಿನ ಸೊಬಗು ವಿಶ್ವದಲ್ಲಿಯೆ ಶ್ರೇಷ್ಠವಾದ ಶಾಸ್ತ್ರಗಳ ಜ್ಞಾನವನ್ನು ಒಳಗೊಂಡುದು; ನಿರ್ಮಲವಾದ ದೃಷ್ಟಿ ದಯಾಪೂರ್ಣವಾದುದು" ಎಂಬ ತನ್ನ ಕೀರ್ತಿ ಎಲ್ಲ ದಿಕ್ಕುಗಳಲ್ಲಿಯೂ ತುಂಬಿರಲಾಗಿ, ಸ್ಯಾದ್ವಾದ ರಹಸ್ಯವನ್ನು ಬಲ್ಲ ತ್ರೈವಿದ್ಯ ಶ್ರುತಕೀರ್ತಿದೇವನು ಶೋಭಿಸಿದನು. ೨೫. "ಬುದ್ಧನು 'ಕ್ಷಣಿಕ' (೧. ಅಲ್ಪಾಯುಷ; ೨. ಎಲ್ಲವೂ ಕ್ಷಣಿಕವೆಂದು ವಾದಿಸುವವನು) ನೈಯಾಯಿಕನು 'ಜಡಾತ್ಮ' (೧. ಮಂದಬುದ್ಧಿಯವನು. ೨. ಜಗತ್ತಿಗೆ ನೀರೇ ಮೂಲವೆಂದು ವಾದಿಸುವವನು); ಬೃಹಸ್ಪತಿಯು ಶೂನ್ಯವಾದಿ (೧. ನಾಸ್ತಿಕ ೨. ಎಲ್ಲವೂ 'ಶೂನ್ಯ'ವೆಂದು ವಾದಿಸುವವನು) ; ಮೀಮಾಂಸಕನು 'ಶಬರೋಕ್ತ್ಯಾಸಕ್ತ'ನು (೧. ಅನಾಗರಿಕರ ಮಾತಿನಲ್ಲಿ ಆಸಕ್ತನಾದವನು. ೨. ಶಬರನೆಂಬ ಮೀಮಾಂಸಕನಲ್ಲಿ ಆದರ ವುಳ್ಳವನು) ; ಸಾಂಖ್ಯನು 'ಕಪಿಳವೃತ್ತಿ' (೧. ನಾಯಿಯಂತಹ ನಡತೆ ೨. ಕಪಿಲಾಚಾರ್ಯನ ಮಾರ್ಗ) ಯನ್ನು ಅನುಸರಿಸುವವನು; ವಿಚಾರಿಸಿದರೆ ಇವರಾರೂ ಯೋಗ್ಯರಲ್ಲ ಎಂದು ನಿಶ್ಚಯಿಸಿ ತನಗೆ ಒಪ್ಪುವಂತಹ ನಿವಾಸವೆಂದು ಶ್ರುತಕೀರ್ತಿ ದೇವನಲ್ಲಿ ಬಂದು ನೆಲೆಸಿದ ವಾಗ್ದೇವತೆ ಎಂತಹ ಜಾಣೆ ! [ಮೇಲೆ

ಅತಿಮೃದುಪುಷ್ಪಚಾಪದಲಿನೀಗುಣಟಂಕೃತಿರಾವಮಾಗಮಾ ।
ಮೃತಪರಿಪೂರ್ಣಕರ್ಣಯುಗನಂ ಸಲೆ ಕೇಳಿಸದಾತ್ತಸಪ್ತಸ ॥
ಪ್ತಿಪವಿವರ್ಮನಂ ನೆಡವು ಪುಷ್ಪಶರೋತ್ಕರಮೆಂದು ಮನ್ಮಥಂ ।
ಮತಿಗಿಡುವಂ ಗೆಲಲ್ ಪಡೆಯದಾ ನಯಸೇನಮುಮುಕ್ಷುಮುಖ್ಯನಂ ॥ ೨೬

ಶಾಂತರಸಾತ್ಮನಾರ್ದ್ರಹೃದಯಂ ಸುದಿಗಂಬರವರ್ತನಂ ಗತ ।
ಭ್ರಾಂತಿಯಬಂಧಕಂ ಸತತಮೋಕ್ಷಪದೇಚ್ಛು ಮಹಾತಪಸ್ವಿ ಮ ॥
ತ್ತಂತೆ ವಿತೃಷ್ಣನೆಂಬಸಮಶೀಲತೆಯಂ ತಳೆದಿರ್ದುಮೇನೊ ಸೈ ।
ದ್ಧಾಂತಿಕಚಕ್ರವರ್ತಿ ಮುನಿಚಂದ್ರಮುನೀಂದ್ರನೆ ವಂದ್ಯನುರ್ವಿಯೊಳ್ ॥ ೨೭

ದುರಿತಾಸಹಿಷ್ಣು ಸುತಪ ।
ಶ್ಚರಿಷ್ಣು ಭವ್ಯಪ್ರಮೋದವರ್ಧಿಷ್ಣು ರತೀ ॥
ಶ್ವರಜಿಷ್ಣು ಗುಣಗಣಾಲಂ ।
ಕರಿಷ್ಣುವೆನೆ ನೆಗಟ್ದನುದಯಚಂದ್ರಮುನೀಂದ್ರಂ ॥ ೨೮

ಕೊಟ್ಟಿರುವ ಎರಡೆರಡು ಅರ್ಥಗಳಲ್ಲಿ ಎರಡನೆಯದು ಆಯಾ ಶಬ್ದಗಳಿಗೆ ಇರುವ ಪ್ರಸಿದ್ಧವಾದ ಅರ್ಥ ; ಮೊದಲನೆಯದು– ಸರಸ್ವತಿಯ ನಿಶ್ಚಯಕ್ಕೆ ಕಾರಣ ವಾಗುವ ಅರ್ಥ.] ೨೬. "ನನ್ನ ಬಿಲ್ಲೋ ಅತ್ಯಂತ ಮೃದುವಾದುದು; ಅದರ ಹೆದೆಯೊ ಹೆಣ್ದುಂಬಿಗಳಿಂದಾದುದು; ಆದುದರಿಂದ ನಾನು ಮಾಡುವ ಮೃದುಮಧುರ ಟಂಕಾರವು ಆಗಮಾಮೃತದಿಂದ ತುಂಬಿದ ಈತನ ಕಿವಿಗೆ ಕೇಳಿಸಲಾರದು. ಸಪ್ತಸಪ್ತಿ (?) ಎಂಬ ವಜ್ರಕವಚವನ್ನು ತೊಟ್ಟ ಈತನ ಮೈಯನ್ನು ನನ್ನ ಹೂಬಾಣಗಳು ನಡಲಾರವು. ಇವನನ್ನು ಹೇಗೆ ಗೆಲ್ಲಲಿ?" ಎಂದು ನಯಸೇನ ಮುನೀಂದ್ರನನ್ನು ಕಂಡು ಮನ್ಮಥನು ಕಕ್ಕಾವಿಕ್ಕಿಯಾಗಿದ್ದಾನೆ. ೨೭. (ರಾಗದ್ವೇಷಗಳಿಂದ ಮುಕ್ತವಾಗಿ) ಶಾಂತರಸದಿಂದ ತುಂಬಿದ್ದರೂ, ಈತನ ಮನಸ್ಸು (ದಯೆಯಿಂದ) ಆರ್ದ್ರವಾಗಿದೆ; 'ದಿಗಂಬರ ವರ್ತನ'ನು (೧. ಜೈನಯತಿಯಾದುದರಿಂದ ನಗ್ನವಿರಾಗಿ. ೨. ಚಂದ್ರ ಸೂರ್ಯಾದಿಗಳಂತೆ ದಿಕ್ಕಿನಿಂದ ದಿಕ್ಕಿಗೆ ಆಕಾಶದಲ್ಲಿ ಸಂಚರಿಸುವವನು) ಆಗಿದ್ದರೂ 'ಗತಭ್ರಾಂತಿ' (೧. ಭ್ರಮೆಯಿಲ್ಲದವನು, –ಜ್ಞಾನಿ. ೨. ಸಂಚಾರ ವಿಲ್ಲದವನು) ಆಗಿದ್ದಾನೆ; 'ಅಬಂಧಕ' (ಸಂಪೂರ್ಣನಿಸ್ಪೃಹನಾದ ವಿರಾಗಿ) ಆಗಿರುವನಾದರೂ ಮುಕ್ತಿಪದವಿಯಲ್ಲಿ ಆಸೆಯುಳ್ಳವನಾಗಿರುವನು; ಮಹಾ ತಪಸ್ವಿ (೧. ತಪಸ್ಸಿನಲ್ಲಿ ತೊಡಗಿರುವವನು. ೨. ತಾಪ–ದಾಹಗಳನ್ನು ಹೊಂದಿ ರುವವನು)ಯಾಗಿದ್ದರೂ ವಿತೃಷ್ಣ (೧. ಯಾವ ಆಸೆಯೂ ಇಲ್ಲದವನು; ನಿಷ್ಕಾಮ ಬುದ್ಧಿಯ ತಪಸ್ವಿ ೨. ಬಾಯಾರಿಕೆಯಿಲ್ಲದವನು) ; ಹೀಗೆ "ಅಸಮಶೀಲತೆ" (೧. ಅಸಾಮಾನ್ಯವಾದ ಶೀಲ. ೨. ಪರಸ್ಪರ ವಿರುದ್ಧವಾದ ನಡತೆಯುಳ್ಳ) ಸೈದ್ಧಾಂತಿಕ ಚಕ್ರವರ್ತಿ ಮುನಿಚಂದ್ರ ಯತಿಶ್ರೇಷ್ಠನು ಜಗದ್ವಂದ್ಯನಾಗಿರುವನು. ೨೮. ಪಾಪಗಳನ್ನು ಸಹಿಸದವನು; ಶ್ರೇಷ್ಠವಾದ ತಪಸ್ಸನ್ನು ಆಚರಿಸುವವನು; ಜಿನಭಕ್ತರ ಸಂತೋಷವನ್ನು ವೃದ್ಧಿಪಡಿಸುವವನು; ಕಾಮನನ್ನು ಗೆದ್ದವನು; ಅನೇಕ

ದೇಶಂ ಧರ್ಮೋಪದೇಶಂ ಶ್ರುತಬಲಮೆ ಬಲಂ ಕೋಶಮುದ್ಬೋಧ ಕೋಶಂ ।
ಸೌಶೀಲ್ಯಂ ಸತ್ಸಹಾಯಂ ಸಚಿವನುಪಶಮಂ ಜೈನಮಾರ್ಗಂ ಸುದುರ್ಗಂ ॥
ಭೂಶಸ್ತಾಗಾರಮಾದತ್ತೆನೆ ತನಗೆ ಜಗತ್ಸಿದ್ಧರಾದ್ಧಾಂತಚಕ್ರಾ ।
ಧೀಶಂ ಸಪ್ತಾಂಗಸಾಮ್ರಾಜ್ಯದಿನಿಳೆಗೆಸೆದು ವೀರನಂದಿವ್ರತೀಂದ್ರಂ ॥ ೨೯

ಮಾದ್ಯದ್ವಾದ್ಯುತ್ಕರತ್ರಾಸಕಮಖಿಲಕಲಾಪ್ರೌಢಿ ದೂರೀಭವತ್ಸಾ ।
ವದ್ಯಂ ಚಾರಿತ್ರಮುರ್ವೀಪತಿತತಿವಿನುತಂ ಸತ್ತಪೋವೃತ್ತಿ ಚೇತ ॥
ಸ್ಸದ್ಯಪ್ರೀತಿಪ್ರದಂ ಪಾವನತರನಿಜಸನ್ಮೂರ್ತಿಯೆಂಬನ್ನೆಗಂ ತ್ರೈ ।
ವಿದ್ಯೇಶಂ ಮಾಘಣಂದಿವ್ರತಿ ಪೆಸರ್ವಡೆದಂ ವರ್ಣ್ಯನೀಕಪ್ರವೇಕಂ ॥ ೩೦

ಕ್ಷಿತಿನಾಥವ್ರಜಪೂಜ್ಯಪಾದತೆ ನಿಜಾಚಾರಪ್ರತೀತಾಕಳಂ ।
ಕತೆ ವಿದ್ವನ್ನುತವೀರಸೇನತೆ ನಿಜಂ ತಾನೆಂದೊಡಿಂ ಶಾಬ್ದನೇ ॥
ತೃತೆ ಷಟ್ತರ್ಕವಿತರ್ಕಭೇತ್ತೃತೆಯಹಾರಾಧ್ವಾಂತತತ್ತ್ವಪ್ರಮಾ ।
ತೃತೆಯೇಂ ಚೋದ್ಯಮೆ ವರ್ಧಮಾನಮುನಿಯೊಳ್ ವಿದ್ಯಾತ್ರಯಾಧೀಶನೊಳ್ ॥ ೩೧

ಸದ್ಗುಣಗಳಿಂದ ಶೋಭಿಸುವವನು– ಹೀಗೆ ಪ್ರಖ್ಯಾತನಾದವನು ಉದಯಚಂದ್ರ ಮುನೀಶ್ವರನು. ೨೯. ಧರ್ಮೋಪದೇಶವೆ ದೇಶ : ಶ್ರುತಸಮೂಹವೆ ಬಲ ; ಶ್ರೇಷ್ಠ ಜ್ಞಾನವೆ ಭಾಂಡಾರ ; ಉತ್ತಮವಾದ ಚಾರಿತ್ರವೆ ಸನ್ಮಿತ್ರ ; ಶಾಂತಿಯೆ ಸಚಿವ; ಜೈನ ಮಾರ್ಗವೆ ಕೋಟೆ ; ಭೂಮಿಯೆ ಪ್ರಶಸ್ತವಾದ ನಿವಾಸ – ಹೀಗೆ ಸಪ್ತಾಂಗಗಳನ್ನೊಡಗೂಡಿದ ಸಾಮ್ರಾಜ್ಯವನ್ನು ಆಳುತ್ತ ಸಿದ್ಧಾಂತಚಕ್ರವರ್ತಿಯಾದ ವೀರನಂದಿ ಯತೀಶ್ವರನು ಶೋಭಿಸಿದನು. ೩೦. ಸೊಕ್ಕೇರಿದ ವಾದಿಗಳ ಸಮೂಹಕ್ಕೆ ಭೀಕರನು; ಸಮಸ್ತಕಲೆಗಳಲ್ಲಿ ಪರಿಣತನು; ನಿಷ್ಕಳಂಕ ಚರಿತ್ರನು; ಅನೇಕಾನೇಕ ರಾಜರಿಂದ ಪೂಜೆಗೊಂಡವನು; ಉತ್ತಮವಾದ ತಪಶ್ಚರಣೆಯಲ್ಲಿ ತೊಡಗಿದವನು; ಕಂಡೊಡನೆ ಮನಸ್ಸಿನಲ್ಲಿ ಪ್ರೀತಿಯನ್ನುಂಟು ಮಾಡುವವನು; ಪರಮಮಂಗಳವಾದ ರೂಪವುಳ್ಳವನು – ಹೀಗೆ ಹೊಗಳಿಸಿಕೊಳ್ಳುತ್ತ ತ್ರೈವಿದ್ಯಾಗ್ರಣಿಯಾದ ಮಾಘಣಂದಿ ಮುನಿಯು ಯತಿಗಳಲ್ಲೆಲ್ಲ ಶ್ರೇಷ್ಠನಾಗಿ ಪ್ರಖ್ಯಾತನಾದನು. ೩೧. ಅನೇಕ ಭೂಪತಿಗಳಿಂದ ಪಾದಪೂಜೆ ಮಾಡಿಸಿಕೊಳ್ಳುವ ಯೋಗ್ಯತೆ, ಶೀಲದ ನಿಷ್ಕಳಂಕತೆ, ವಿದ್ವಾಂಸರಿಂದ ಪ್ರಶಸ್ತಿಪಾತ್ರವಾಗುವ ಪಾಂಡಿತ್ಯ. (ಶ್ಲೇಷೆಯಿಂದ ಪೂಜ್ಯಪಾದರ ಯೋಗ್ಯತೆ, ಅಕಳಂಕಮುನಿಯ ಸಾಮರ್ಥ್ಯ ಹಾಗೂ ವೀರಸೇನರ ವಿದ್ವತ್ತೆ) ತನಗೆ ಸಹಜವಾದುವು; ಎಂದ ಮೇಲೆ ಶಬ್ದಶಾಸ್ತ್ರದಲ್ಲಿ ಅಗ್ರಗಣ್ಯತೆಯೂ, ಷಟ್ತರ್ಕಗಳನ್ನು ಭೇದಿಸುವ ಸಾಮರ್ಥ್ಯವೂ ಸಿದ್ಧಾಂತ ತತ್ವಗಳಿಗೆ ನೆಲೆಯಾಗಿರುವ ಮಹಿಮೆಯೂ ಈತನಿಗೇನು ಆಶ್ಚರ್ಯದ ವಿಷಯವೆ? ಎಂದು ವಿದ್ಯಾತ್ರಯದಲ್ಲಿ ನಿಷ್ಣಾತನಾದ ವರ್ಧಮಾನ ಮುನಿ ಪ್ರಸಿದ್ಧನಾದನು. [ಈ ಪದ್ಯದ ಮೂರನೆಯ ಪಾದದಲ್ಲಿರುವ "ಅಹಾರಾಧ್ವಾಂತ" ಎಂಬುದರ ಅರ್ಥ

ಅತಿಸೂಕ್ಷ್ಮತತ್ತ್ವಮು ಕಾ ।
ಣ್ಬತನುವನೊಟ್ಟಯಿಸಿ ಕಟ್ಟುವೀದರ್ಶನಶು ॥
ದ್ಧತೆಗಂ ದೃಢಗುಣಸುಸಮ ।
ರ್ಥತೆಗಂ ಸಲೆ ದೇವಚಂದ್ರಯತಿಪತಿ ನೋಂತಂ ॥ ೩೨

ಆತ್ರೇಯದ್ಯುತಿಯಂ ಪಳಂಚಲೆದು ಕುಂದಚ್ಛಾಯೆಯಂ ಮಿಕ್ಕುನ ।
ಕ್ಷತ್ರಜ್ಯೋತಿಯನೈದೆ ತೂಳ್ದಿ ಹಿಮವಚ್ಛೈಲಾಂಶುವಂ ಮೀಱಿದಿ ॥
ಗ್ಧಾತ್ರೀವ್ಯೋಮವಿಭಾಗಗಾಮಿಯೆನಿಸಿತ್ತುಚ್ಛೃಂಖಳಂ ದಾಮನಂ ।
ದಿತ್ರೈವಿದ್ಯಮುನೀಂದ್ರ ನಿರ್ಮಳಯಶಶ್ರೀ ಶುಭ್ರತಾವಿಭ್ರಮಂ ॥ ೩೩

ವಿತತಗುಣಮಾರ್ಗಣಾಸ ।
ಕ್ತತೆಯಿಂದನವರತಮೋಕ್ಷಸಂಧಾನಮನ ॥
ಸ್ಕತೆಯಿಂ ಧಾರ್ಮಿಕವೃತ್ತಿಯಿ ।
ನತಿಶಯಿಪಂ ನೇಮಿಚಂದ್ರಸೈದ್ಧಾಂತೀಶಂ ॥ ೩೪

ಕ್ಲಿಷ್ಟವಾಗಿದೆ]. ೩೨. ಧರ್ಮತತ್ತ್ವದ ಸೂಕ್ಷ್ಮತೆಯನ್ನು ಕಾಣಬಲ್ಲ ಸಮ್ಯಗ್‌ದರ್ಶನ ಶುದ್ಧಿಯನ್ನೂ, ಕಾಮನನ್ನು ಕಟ್ಟಿ ನಿಲ್ಲಿಸುವಂತಹ ನಿಗ್ರಹದ ದೃಢತೆಯನ್ನೂ ದೇವಚಂದ್ರ ಯತೀಶ್ವರನು ಪುಣ್ಯ ಸಂಪಾದನೆಯಿಂದ ಪಡೆದು ಬಂದಿದ್ದನು. (ಶ್ಲೇಷೆಯಿಂದ–ಕಣ್ಣಿಗೆ ಕಾಣದೆನಿಸುವಷ್ಟು ಸೂಕ್ಷ್ಮವಾದ ವಸ್ತುಗಳನ್ನೂ ಜೀವಗಳನ್ನೂ ನೋಡಬಲ್ಲ ಕಣ್ಣಿನ ಶಕ್ತಿ ಹಾಗು, ಕಾಮನನ್ನು ಕಟ್ಟಿಹಾಕುವಂತಹ ಗಟ್ಟಿಯಾದ ಹಗ್ಗ(ಗುಣ)ವನ್ನೂ ಪಡೆದು ಬಂದಿದ್ದನು). ೩೩. ಶ್ರೀ ದಾಮನಂದಿ ತ್ರೈವಿದ್ಯಮುನಿಗಳ ಪರಿಶುದ್ಧವಾದ ಯಶಸ್ಸು ತನ್ನ ಶುಭ್ರತೆಯ ಆಧಿಕ್ಯದಿಂದ ಚಂದ್ರನ ಕಾಂತಿಯನ್ನು ಸೋಲಿಸಿ, ಕುಂದಪುಷ್ಪದ ವರ್ಣವನ್ನು ಮೀರಿ, ನಕ್ಷತ್ರಗಳ ಪ್ರಭೆಯನ್ನು ಹಿಮ್ಮೆಟ್ಟಿಸಿ, ಹಿಮಗಿರಿಯ ಧವಳತೆಯನ್ನು ಕೆಳಗೆನಿಸಿ, ಅಡೆತಡೆಯಿಲ್ಲದೆ ದಿಕ್ಕುಗಳನ್ನೂ ಆಕಾಶವನ್ನೂ ವ್ಯಾಪಿಸುತ್ತ ನಡೆಯಿತು. ೩೪. [ಬಿಲ್ಗಾರನಿಗೂ ಅನ್ವಯಿಸುವಂತೆ ಈ ಪದ್ಯದಲ್ಲಿ ಶ್ಲೇಷವನ್ನು ಬಳಸಲಾಗಿದೆ. ಮೊದಲನೆಯ ಅರ್ಥವನ್ನು ನೇಮಿಚಂದ್ರನಿಗೂ, ಎರಡನೆಯದನ್ನು ಬಿಲ್ಗಾರನಿಗೂ ಅನ್ವಯಿಸಿಕೊಳ್ಳಬೇಕು] "ವಿತತ ಗುಣಮಾರ್ಗಣಾಸಕ್ತಿ" (೧. ಶ್ರೇಷ್ಠವಾದ ಗುಣಸ್ಥಾನ ಹಾಗು ಮಾರ್ಗಣಾಸ್ಥಾನಗಳಲ್ಲಿರುವ ಆಸಕ್ತಿ. ೨. ಬಿಗಿದು ಉದ್ದವಾದ ಹೆದೆ ಹಾಗು ಬಾಣಗಳಲ್ಲಿ ಆಸಕ್ತಿ)ಯಿಂದ, ಯಾವಾಗಲೂ "ಮೋಕ್ಷಸಂಧಾನಮನಸ್ಕತೆ" (೧. ಮುಕ್ತಿಧ್ಯಾನದಲ್ಲಿ ನಿರತವಾದ ಚಿತ್ತವೃತ್ತಿ. ೨. ಬಾಣಗಳನ್ನು ಹೂಡುವ ಹಾಗೂ ಬಿಡುವ ಕ್ರಿಯೆಯಲ್ಲಿ ತೊಡಗಿರುವ ಮನಸ್ಸು)ಯಿಂದ ಹಾಗು 'ಧಾರ್ಮಿಕವೃತ್ತಿ' (೧. ಧರ್ಮನಿಷ್ಠವಾದ ನಡವಳಿಕೆ. ೨. ಬಿಲ್ಗಾರತನ)

ರತಿವನಿತೆಗೆ ವಿಧವತೆಯಂ ।
ಶ್ರುತದೇವಿಗೆ ಚತುರವೃತ್ತಿಯಂ ಮಾಟ್ಪಿ ತಪ ॥
ಶ್ರುತಮೆರಡುಂ ನಿರುಪಮಮೀ ।
ಕ್ಷಿತಿಯೊಳ್ ಶ್ರುತಕೀರ್ತಿದೇವಭಟ್ಟಾರಕರಾ ॥ ೩೫

ಗುರುಕುಲಮಂ ಬೆಳಗುವ ಭಾ ।
ಸುರದೀಪಂ ಚರಿತಮೆಂಬುದಂ ಪೇಟಿವೆ ಬಂ ॥
ಧುರಪಾತ್ರಸ್ನೇಹಗುಣೋ ।
ತ್ಕರಮೆಂಬಿವು ಮಾಘನಂದಿಭಟ್ಟಾರಕರಾ ॥ ೩೬

ಅಮಲತರಪ್ರದೀಪಕಲಿಕಾಕೃತಿಯಿಂ ಸ್ವಪರಪ್ರಕಾಶನ ।
ಕ್ಷಮಮೆನಿಸಿರ್ದ ತಮ್ಮ ಮತಿಯಿಂ ಜಿನರಾಜಚರಿತ್ರಮಂ ಪವಿ ॥
ತ್ರಮನೊಲವಿಂದೆ ಪೇಟ್ದು ಭಯಲೋಕಶುಭಾಸ್ಪದರಾದ ಪಂಡಿತೋ ।
ತ್ತಮರ ಗುಣಂ ಗುಣಾಕೃತಿಯಿನಿರ್ಕೆ ಮದೀಯಮನೋಮೃಣಾಳದೊಳ್ ॥ ೩೭

ಅತಿಮಧುರೋಕ್ತಿಯುಕ್ತನಮಲಂ ವಿದಿತಾಖಿಲಮಾರ್ಗನಪ್ಪ ವಿ ।
ಶ್ರುತಕವಿರಾಜಹಂಸನಡೆವಂತೆವೊಲೇನಡೆಯಲ್ಕೆ ಯೋಗ್ಯನೇ ॥

ಯಿಂದ ನೇಮಿಚಂದ್ರ ಸೈದ್ಧಾಂತಿಯು ಅಧಿಕನೆನಿಸಿದನು. ೩೫. ರತಿದೇವಿಗೆ ವೈಧವ್ಯವನ್ನುಂಟು ಮಾಡುವಂತಹ ತಪಸ್ಸು ಹಾಗು ವಾಗ್ದೇವಿಗೆ ಚಾತುರ್ಯ ವನ್ನುಂಟು ಮಾಡುವ ಶ್ರುತಪ್ರಾವೀಣ್ಯ –ಇವೆರೆಡೂ ಶ್ರುತಕೀರ್ತಿದೇವ ಭಟ್ಟಾರಕ ನಲ್ಲಿ ಅಪ್ರತಿಮವಾಗಿದ್ದುವು. ೩೬. ಮಾಘಣಂದಿ ಭಟ್ಟಾರಕರು ತಮ್ಮ ನಡತೆ ಯಿಂದ ಗುರುಕುಲವನ್ನು ಬೆಳಗುವ ಉಜ್ವಲದೀಪವೆಂದು ಹೇಳುವುದಕ್ಕೆ ಅವರಲ್ಲಿ ರುವ ಯೋಗ್ಯತೆ ಹಾಗು ದಯಾಪರತೆಯೆ ಮೊದಲಾದ ಗುಣಗಳೇ ಸಾಕು. [ದೀಪಕ್ಕೆ ಬೇಕಾದ ಪಾತ್ರ (ಪಣತಿ), ಸ್ನೇಹ (ಎಣ್ಣೆ), ಹಾಗು 'ಗುಣ' (ಬತ್ತಿ) ಇವು ಮೂರನ್ನು ಶ್ಲೇಷೆಯಿಂದ ಸೂಚಿಸಲಾಗಿದೆ. ಪಣತಿ, ಎಣ್ಣೆಬತ್ತಿಗಳಿದ್ದರೂ ಅವು 'ಚರಿತ' (ಹೊತ್ತಿ ಉರಿಯುವ ಕ್ರಿಯೆ) ಮೂಲಕವೆ ಬೆಳಗುವ ಸಾಮರ್ಥ್ಯ ವನ್ನು ಪಡೆಯುವಂತೆ ವ್ಯಕ್ತಿಯಲ್ಲಿರುವ ಗುಣಾದಿ ಯೋಗ್ಯತೆಗಳು 'ಚರಿತ' ದಲ್ಲಿ (ನಡತೆಯಲ್ಲಿ) ಕ್ರಿಯಾಶೀಲವಾದಾಗಲೆ ಬೆಳಗಬಲ್ಲುವು]. ೩೭. ತನ್ನನ್ನು ಬೆಳಗಿಕೊಳ್ಳುವುದಲ್ಲದೆ ಇತರರಿಗೂ ಬೆಳಕು ಕೊಡುವ ಸಾಮರ್ಥ್ಯವುಳ್ಳ ನಿರ್ಮಲ ದೀಪದ ಕುಡಿಯಂತೆ, ತಮ್ಮ ಬುದ್ಧಿ ಕೌಶಲದಿಂದ ಪವಿತ್ರವಾದ ಜಿನೇಂದ್ರ ಚರಿತ್ರೆಯನ್ನು ಪ್ರೇಮಪುರಸ್ಸರವಾಗಿ ಹೇಳಿ ಇಹಪರಗಳೆರಡರ ಕಲ್ಯಾಣವನ್ನೂ ಸಾಧಿಸಿಕೊಂಡ ಪಂಡಿತೋತ್ತಮರ ಗುಣವು ನನ್ನ ಮನಸ್ಸೆಂಬ ತಾವರೆ ಬೇರಿನಲ್ಲಿ ಅದರ ಒಳನಾರಿನಂತೆ ನೆಲಸಿರಲಿ. ೩೮. ಚತುರರಾದ ಕವಿಗಳನೇಕರು ರಚಿಸಿದ ಶ್ರೇಷ್ಠವಾದ ಕೃತಿಗಳನ್ನು ಒಟ್ಟುಗೂಡಿಸಿ ಅವುಗಳಲ್ಲಿಯ ಗುಣಗಳಾವುವು, ದೋಷಗಳಾವುವು ಎಂಬುದನ್ನು ಹಂಸಕ್ಷೀರ ನ್ಯಾಯದಿಂದ ವಿಂಗಡಿಸಿ

ಚತುರಕವಿಪ್ರತಾನರಚಿತಾದ್ಭಕೃತಿಪ್ರಕರೈಕಪಾತ್ರಸಂ ।
ಸ್ಥಿತಗುಣದೋಷದುಗ್ಧಜಳಭೇದನಮಂ ಕವಿನಾಮಧಾರಕಂ ॥ ೩೮

ಸುಳಲಿತಕವಿಕೃತಿಗಮಳಿನ ।
ನೆಳಸುವವೋಲ್ ಮಲಿನನೆಳಸನತಿವಿಶದಹಿಮೋ ॥
ಪಳಮೊಸರ್ವವೊಲಿಂದುಕರಾ ।
ವಳಿಗೆ ತೃಣಗ್ರಾಹಿನೀಳಮಣಿಯೊಸರ್ದಪುದೇ ॥ ೩೯

ಇದು ಜತುಮುದ್ರಾಮುದ್ರಿತ ।
ಮಿದು ನಿಬಿಡಸ್ಯೂತಮಿದು ಮಹಾಗ್ರಹಧೃತಮಿಂ ॥
ತಿದು ಲೋಹಪಿನದ್ಧಮೆನಿ ।
ಪ್ಪುದು ಪರಕೃತಿನುತಿಯೊಳಖಿಳಖಳಜನವಕ್ತ್ರಂ ॥ ೪೦

ಪೊಗಟ್ಟಿ ಬಗೆಯುಳ್ಳೊಡಂ ನಾ ।
ಲಗೆ ಪೊಡರದು ಖಳರ್ಗೆ ಮದವಿಶೇಷದಿನುಸಿರಲ್ ॥
ಬಗೆವೊಡಮಕಾಲದೆಸಕದಿ ।
ನಗಲದವೊಲ್ ಪರಭೃತಕ್ಕೆ ಮೂಕೀಭಾವಂ ॥ ೪೧

ನೋಡುವುದಕ್ಕೆ ಅತ್ಯಂತ ಮಧುರವಾದ ಮಾತುಗಳುಳ್ಳವನೂ, ನಿರ್ಮಲನೂ ಕಾವ್ಯದ ಸಕಲಮಾರ್ಗಗಳನ್ನು ಬಲ್ಲವನೂ ಆದ ಪ್ರಖ್ಯಾತ ಕವಿಶ್ರೇಷ್ಠನೇ ಯೋಗ್ಯನಲ್ಲದೆ, 'ಕವಿ'ಯೆಂಬ ಹೆಸರಿಟ್ಟುಕೊಂಡವನು ಯೋಗ್ಯನಾದಾನೆಯೆ? [ಶ್ಲೇಷೆಯಿಂದ ರಾಜಹಂಸಪರವಾದ ಅರ್ಥ–ಅತ್ಯಂತ ಇಂಪಾದ ಧ್ವನಿಯುಳ್ಳದೂ, ಪರಿಶುಭ್ರವಾದುದೂ, ಆಕಾಶವನ್ನು ಭೇದಿಸಿಕೊಂಡು ["ವಿದಿತ"] ಹೋಗುವ ಎಲ್ಲ ಮಾರ್ಗಗಳನ್ನು ತಿಳಿದುಕೊಂಡಿರುವುದೂ, ಜಲಪಕ್ಷಿಗಳಲ್ಲಿ ರಾಜ ("ಕವಿರಾಜ")ನೆನಿಸಿಕೊಂಡುದೂ ಆದ ಹಂಸಪಕ್ಷಿಗೆ ನೀರುಹಾಲುಗಳನ್ನು ವಿಂಗಡಿಸುವ ಯೋಗ್ಯತೆ ಇರುವುದಲ್ಲದೆ ಕೇವಲ ಜಲಪಕ್ಷಿ ಎಂಬ ಹೆಸರು ಹೊತ್ತ (ಕವಿನಾಮಧಾರಕ) ಪಕ್ಷಿಗೆ ಉಂಟೆ?] ೩೯. ಸುಂದರವಾದ ಕಾವ್ಯಕ್ಕೆ ನಿರ್ಮಲಹೃದಯನು ಮನಸೋಲುವಂತೆ, ಮಲಿನ ಹೃದಯದವನು ಮನಸೋಲನು. ಚಂದ್ರಕಿರಣಗಳಿಗೆ ಪರಿಶುಭ್ರವಾದ ಚಂದ್ರಕಾಂತಶಿಲೆ ಕರಗಿ ನೀರೊಸರುವಂತೆ, 'ತೃಣಗ್ರಾಹಿ'ಯೆನಿಸಿದ ನೀಲಮಣಿ ಒಸರುವುದೆ ? ೪೦. ಇತರರು ರಚಿಸಿದ ಕಾವ್ಯಗಳನ್ನು ಹೊಗಳಬೇಕೆಂದರೆ ದುರ್ಜನರ ಬಾಯಿ ಇದಕ್ಕೇನು ಅರಗಿನಿಂದ ಮುದ್ರೆ ಹಾಕಿದೆಯೊ, ದಟ್ಟವಾದ ಹೊಲಿಗೆ ಬಿದ್ದಿದೆಯೊ, ಮಹಾಭೂತ ಹಿಡಿದುಕೊಂಡಿದೆಯೊ, ಅಥವಾ ಲೋಹದ ಕೀಲಿ ಜಡಿದಿದೆಯೊ" ಎಂಬಂತಾಗುವುದು. ೪೧. ಕೋಗಿಲೆಗೆ (ವಸಂತ ವಲ್ಲದ ಕಾಲದಲ್ಲಿ) ಮೂಕತನ ಬಿಡದಂತೆ (ಇತರರ ಕಾವ್ಯವನ್ನು) ಹೊಗಳ

ಪರಿಕಿಪೊಡವಿಚಾರಿ ಏತೇ ।
ತರಗತಿಯಾದಂ ಪ್ರಭಂಜನಪ್ರಿಯನತಿನಿ ॥
ಷ್ಠುರಜಿಹ್ವನುಷರ್ಬುಧನಂ ।
ತಿರೆ ದುರ್ಬುಧನಾರೊಳೊಂದಿ ಪಡೆಯಂ ನೋವಂ ॥ ೪೨

ಕುಕವಿಯನಲೆದಂಜಿಪ ಜಾಣ್ ।
ಸುಕವಿಯೊಳೇನುಂಟೆ ದುರ್ಜನಾಳಿಗೆ ಶಕುಳ ॥
ಪ್ರಕರಮನೆರ್ದೆಗಿಡಿಪುಗ್ರತೆ ।
ಬಕನಿಕರಕ್ಕುಂಟೆ ತಿಮಿತಿಮಿಂಗಿಲಗಿಲದೊಳ್ ॥ ೪೩

ಖರಶಾಣಕಷಣದಿಂ ಮಣಿ ।
ಗುರುತೇಜೋವೃತ್ತಿ ನೆಗಟ್ಟಿವೋಲಕ್ಕುಂ ನಿ ॥
ಷ್ಠುರವಾಕ್ಪಾಷಾಣಪರಿ ।
ಸ್ಫುರಿತಂ ಕೃತಿರತ್ನದೊಳ್ ಸಮುಜ್ಜ್ವಲಭಾವಂ ॥ ೪೪

ಪರಪೀಡಾಮುಖದುಷ್ಟದುರ್ಜನನಿಕಾಯಾತಂಕದಿಂ ಸದ್ಗುಣಾ ।
ಕರಮಂ ಸದ್ರಸಭಾವಮಂ ಸಮೆವುದಂ ಮಾಣಲ್ಕದೇಕಾಯ್ತೊ ಬಂ ।

ಬೇಕೆಂದು ಮನಸ್ಸಾದರೂ, ತಮ್ಮ ಮದಾಧಿಕ್ಯದ ಮೂಲಕ ದುರ್ಜನರಿಗೆ ನಾಲಗೆಯೆ ಏಳದು. ೪೨. ವಿಚಾರ ಮಾಡಿನೋಡಿದರೆ ದುರ್ಬುದ್ಧಿಯಾದವನು ಅಗ್ನಿಯಂತೆ, 'ಅವಿಚಾರಿ' (೧. ಅವಿವೇಕಿ. ೨. ತಗರಿನ ವಾಹನವುಳ್ಳವನು); 'ಸಿತೇತರಗತಿ' (೧. ಕಳಂಕದ ಹಾದಿ ಹಿಡಿದವನು. ೨. ಕಪ್ಪಾದ ಹೊಗೆಯೊಡನೆ ಹಬ್ಬುವವನು); "ಪ್ರಭಂಜನಪ್ರಿಯ" (೧. ಹರಿದು, ಮುರಿದು ಹಾಕುವುದರಲ್ಲಿಯೆ ಸಂತೋಷಪಡು ವವನು, ೨. ಗಾಳಿಯ ಸ್ನೇಹಿತ) ; "ಅತಿನಿಷ್ಠುರ ಜಿಹ್ವ" (೧. ಬಹಳ ಕಠೋರವಾಗಿ ನುಡಿಯುವವನು, ೨. ತುಂಬ ಉಗ್ರವಾದ ಜ್ವಾಲೆಯುಳ್ಳವನು); ಯಾರನ್ನು ಜೊತೆ ಗೂಡಿದರೂ ತಾನು ನೋಯುವುದಿಲ್ಲ (ಅವನಿಗೆ ಮಾತ್ರ ಬಾಧೆಯುಂಟು ಮಾಡು ತ್ತಾನೆ) [ಇದರಲ್ಲಿ ಮೊದಲನೆಯ ಅರ್ಥ ದುರ್ಬುದ್ಧಿಗೆ, ಎರಡನೆಯದು ಅಗ್ನಿಗೆ-ಹೀಗೆ ಅನ್ವಯಿಸಿಕೊಳ್ಳಬೇಕು.] ೪೩. ದುಷ್ಟಜನರು ತಮ್ಮ ಜಾಣ್ಮೆಯಿಂದ ಕುತ್ಸಿತವಾದ ಕವಿಯನ್ನು ಅಂಜಿಸುವರಲ್ಲದೆ, ಉತ್ತಮ ಕವಿಯನ್ನು ಅಂಜಿಸಬಲ್ಲರೆ? ಚಿಕ್ಕಪುಟ್ಟ ಮೀನು ಗಳನ್ನು ಎದೆಗೆಡಿಸುವ ಬಕಪಕ್ಷಿಗೆ ತಿಮಿಂಗಿಲಗಳನ್ನು ಬೆದರಿಸುವ ಶಕ್ತಿಯುಂಟೆ? ೪೪. ಕರ್ಕಶವಾದ ಸಾಣೆಕಲ್ಲಿಗೆ ಹಿಡಿದು ಮಸೆಯುವುದರಿಂದ ರತ್ನಕ್ಕೆ ಶ್ರೇಷ್ಠವಾದ ಹೊಳಪು ಬರುವಂತೆ, ಕಠೋರವಾದ, ಟೀಕೆಯ ಮಾತುಗಳಿಗೆ ಗುರಿಯಾಗಿ, ಕೃತಿ ರತ್ನವು ಇನ್ನಷ್ಟು ಉಜ್ವಲವಾಗುತ್ತದೆ. ೪೫. ಅನ್ಯರನ್ನು ಪೀಡಿಸುವುದೆ ಸ್ವಭಾವವಾಗಿರುವ ದುರ್ಜನಸಮೂಹದ ಮಾತಿಗೆ(ಹೆದರಿ), ಉತ್ತಮವಾದ(ಕಾವ್ಯ)ಗುಣಗಳಿಂದಲೂ, ರಸಭಾವ

ಧುರಮಂ ಕಾವ್ಯನಿಬಂಧಮಂ ಬಗೆಯೆ ಯೂಕಾಭೀತಿಯಿಂದಂಬರಂ ।
ಪರಿಹರ್ತವ್ಯಮೆ ಮೇಣಜೀರ್ಣಭಯದಿಂದಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ ॥ ೪೫

ಪರುಸದೊರೆಗಲ್ ಸುವರ್ಣ ।
ಕ್ಕೊರೆಪಕ್ಕೆಡೆಯಾಗಿ ತೋರ್ಪವೊಲ್ ಕವಿಗಂ ಬಂ ॥
ಧುರಕಾವ್ಯರಚನೆ ತದ್ಗುಣ ।
ಪರೀಕ್ಷೆ ನಿರಪೇಕ್ಷಮೆನಿಸೆ ನೆಣಿದಿರವೇಡಾ ॥ ೪೬

ಅತಿಶಯಪದಾರ್ಥನಿಕರ ।
ಪ್ರತೀತಿಯಂ ಪಡೆವ ಪಾದವಿನ್ಯಾಸಂ ಭೂ ॥
ನುತಮಾಗದಲ್ತೆ ನಿರ್ದೋ ।
ಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ ॥ ೪೭

ಜೀಯೆನೆ ಬಲ್ಲವರ್ ನೆಱೆಯೆ ಸತ್ಕೃತಿವೇಟದೆ ಪೇೞ್ ಘುಣಾಕ್ಷರ ।
ನ್ಯಾಯದೆ ಶಬ್ದಮೊಂದೆರಡು ಮತ್ತೆ ವಿಚಾರಿಸಿ ನೋಡೆ ಕಾಕತಾ ।
ಳೀಯದೆ ವಾಚ್ಯಮೊಂದೆರಡು ಕೂಡೆ ನಿಘರ್ಷಿಪೊಡಂಧಲಾವುಕ ।
ನ್ಯಾಯದೆ ಭಾವಮೊಂದೆರಡು ಲೇಸೆನೆ ಪೇೞ್ದುಱದಿರ್ಪುದೊಪ್ಪಮೇ ॥ ೪೮

ಗಳಿಂದಲೂ ಕೂಡಿ ಸುಂದರವಾದ ಕಾವ್ಯ ರಚನೆಯನ್ನೇಕೆ ಬಿಡಬೇಕು ? ಕೂರೆಗಳಾದಾವೆಂಬ ಭಯದಿಂದ ಬಟ್ಟೆಗಳನ್ನೆ ಬಿಡಬೇಕೆ ? ಅಜೀರ್ಣವಾದೀತೆಂದು ಅಂಜಿಕೊಂಡು ಸೊಗಸಾದ ತುಪ್ಪವನ್ನೆ ತೊರೆಯಬೇಕೆ?. ೪೬. ಒರೆಗಲ್ಲು ಚಿನ್ನವನ್ನು ಒರೆದು ನೋಡುವಾಗ ಹೇಗೆ ನಿರಪೇಕ್ಷ (ತನ್ನ ಕಾರ್ಯಕ್ಕೆ ಬೇರೆ ಯಾವ ಸಹಾಯವನ್ನೂ ಅಪೇಕ್ಷಿಸದುದು)ವಾಗಿರುವುದೊ ಹಾಗೆ ಕವಿಯು ಕೂಡ ನಿರ್ಮಿಸುವ ಸುಂದರ ಕಾವ್ಯವಾಗಲಿ, ಅದರ ಗುಣ ಪರೀಕ್ಷೆಯಾಗಲಿ–ಎರಡರಲ್ಲೂ ನಿರಪೇಕ್ಷನಾಗಿರಬೇಕು. ೪೭. ಕವಿಗೂ ಮತ್ತು ಸೂರ್ಯನಿಗೂ ಅತಿಶಯವಾದ "ಪದಾರ್ಥನಿಕರಪ್ರತೀತಿ" (೧. ಶಬ್ದಾರ್ಥಗಳ ನಿಶ್ಚಿತ ಜ್ಞಾನ. ೨. ಸಮಸ್ತಪ್ರಪಂಚಕ್ಕೂ ಸಂತೋಷ)ವನ್ನುಂಟು ಮಾಡುವ 'ಪಾದವಿನ್ಯಾಸ'ವು (೧. ಛಂದೋಗತಿಯ ಜಾಣ್ಮೆ. ೨. ಕಿರಣಗಳ ಪ್ರಸಾರ) ನಿರ್ದೋಷತೆಯಿಂದಲ್ಲದೆ ಜಗತ್ತಿನಲ್ಲಿ ಶ್ರೇಷ್ಠವೆನಿಸದು. [ಒಂದನೆಯ ಎರಡನೆಯ ಅರ್ಥಗಳನ್ನು ಕವಿಗೆ ಹಾಗು ಸೂರ್ಯನಿಗೆ ಅನುಕ್ರಮವಾಗಿ ಅನ್ವಯಿಸಿಕೊಳ್ಳಬೇಕು]. ೪೮. ಕಾವ್ಯವನ್ನು ರಚಿಸುವುದಾದರೆ ಬಲ್ಲವರು 'ಭಲೆ' ಎನ್ನುವಂತೆ ಸಮಗ್ರವಾಗಿ ಸತ್ಕೃತಿಯನ್ನು ರಚಿಸಬೇಕು. ಅದನ್ನು ಬಿಟ್ಟು, ಘುಣಾಕ್ಷರ ನ್ಯಾಯದಿಂದ (ಹುಳುಕೊರೆದ ಗುರುತು ಆಕಸ್ಮಿಕವಾಗಿ ಅಕ್ಷರಾಕಾರ ಹೊಂದುವಂತೆ) ಎಲ್ಲೋ ಒಂದೆರಡು ಶಬ್ದ, ಕಾಕತಾಳೀಯ(ಅನಿರೀಕ್ಷಿತವಾಗಿ, ಆಯಾಚಿತವಾಗಿ ಒದಗಿ ಬಂದುದು)ದಿಂದ ಒಂದೆರಡು ವಾಚ್ಯಾರ್ಥ, ಕುರುಡನ ಕೈಯಲ್ಲಿ ಆಕಸ್ಮಿಕವಾಗಿ ಸಿಕ್ಕಿದ ಹಕ್ಕಿಯಂತೆ ಎಲ್ಲಿಂಯೊ ಒಂದೆರಡು ಭಾವ 'ಚೆನ್ನಾಗಿದೆ' ಎಂಬಂತೆ ಬಂದುವೆಂದರೆ ಅದು ಕಾವ್ಯವಾದೀತೆ? ಹೀಗೆ ಕೃತಿರಚನೆ ಮಾಡುವುದು

ಇದು ಪಿರಿದುಂ ಬುಧಾವಳಿಗೆ ಕರ್ಣರಸಾಯನಮಾತ್ತಚಿತ್ತಸ ।
ಮ್ಮದಜನಕಂ ಮುದಶ್ರುಜಲಕರ್ತೃ ಲಸತ್ಪುಳಕಪ್ರಭೇದನ ॥
ಪ್ರದಗುರು ಮಸ್ತಕಪ್ರಚುರಕಂಪನಶಿಕ್ಷಕನೆಂಬಿನಂ ಪ್ರಯ ।
ತ್ನದೆ ಕೃತಿವೇಳ್ವುದಲ್ಲದೊಡೆ ತಕ್ಕೃತಿ ಧಿಕ್ಕೃತಿಯಿಂ ನಿಮಿರ್ಚದೇ ॥ ೪೯

ಕವಿಕುಳಸೇವ್ಯಮಾನಕವಿತಾಕಳಹಂಸೆಗೆ ಕೇಳಿಲೀಲೆ ಸಂ ।
ಭವಿಪೊಡನಾಮಲಂ ಜಿನಕಥಾರಸಮಾನಸದಲ್ಲಿ ಕೂಡೆ ಸಂ ॥
ಭವಿಕುಮದಲ್ಲದಂತೆ ದೊರೆಕೊಳ್ಗುಮೆ ದುಷ್ಕೃತಸೈರಿಭಪ್ರಜಾ ।
ವಿವರಮೆನಿಪ್ಪ ರಾಜವಿಟಚೋರಕಥೋಲ್ಬಣಪಲ್ವಲಂಗಳೊಳ್ ॥ ೫೦

ಕಿವಿಯಂ ಜಕ್ಕುಲಿಪಂತೆ ನುಣ್ಪಡರ್ದ ಶಬ್ದಂ ಶಬ್ದಸಂದರ್ಭದೊಳ್ ।
ಸವಿಯಂ ಮುಂದಿಡುವರ್ಥಮರ್ಥದೊಳೊಡಂಬಟ್ಟೊಳ್ಪನೋರಂತೆ ಬೀ ॥
ಱುವ ಭಾವಂ ಸಲೆ ಭಾವದಿಂದೊದವಿ ಚಿತ್ತಂ ಕೂಡೆ ತೇಂಕಾಡೆ ಪೊ ।
ಣ್ಮುವ ನಾನಾರಸಮಿರ್ಪ ವಸ್ತುಕೃತಿಯಂ ಪೇಟ್ದಗ್ಗಳಂ ಮೆಚ್ಚಿಪಂ ॥ ೫೧

ಸುರರಾಜಾರ್ಚಿತನಿಂಗಳೇಶ್ವರಪುರಶ್ರೀತೀರ್ಥಚಂದ್ರಪ್ರಭಂ ।
ಪರಮೇಶಂ ಶ್ರುತಕೀರ್ತಿದೇವಮುನಿಪಂ ತ್ರೈವಿದ್ಯಚಕ್ರಾಧಿಪಂ ॥

ಯೋಗ್ಯವೆ ? ೪೯. "ಇದು ಬಲ್ಲವರ ಕಿವಿಗೆ ಉತ್ತಮವಾದ ರಸಾಯನ, ಚಿತ್ತಗೊಟ್ಟು ಕೇಳಿದವರಿಗೆ ಸಂತೋಷವುಂಟು ಮಾಡುವಂತಹುದು, ಆನಂದಾಶ್ರುಗಳನ್ನು ಪ್ರೇರಿಸುವಂತಹುದು, ಮೈಗೆ ರೋಮಾಂಚನವನ್ನು ಕಲಿಸತಕ್ಕ ಗುರು, ತಲೆದೂಗುವುದನ್ನು ಸರಿಯಾಗಿ ಹೇಳಿಕೊಡುವ ಶಿಕ್ಷಕ" ಎಂದೆನಿಸುವಂತೆ ಪ್ರಯತ್ನಪೂರ್ವಕವಾಗಿ ಕಾವ್ಯವನ್ನು ಹೇಳಬೇಕು, ಅಲ್ಲವಾದರೆ ಆ ಕಾವ್ಯ ತಿರಸ್ಕಾರಕ್ಕೆ ಯೋಗ್ಯವಾಗುತ್ತದೆ. ೫೦. ಕವಿಕುಲಕ್ಕೆ ಪ್ರಿಯವಾಗಿ ಅವರಿಂದ ಸೇವೆ ಪಡೆಯುತ್ತಿರುವ ಕಾವ್ಯವೆಂಬ ಕಲಹಂಸೆಗೆ ಜಿನಕಥೆಯೆಂಬ ಮಾನಸಸರೋವರದಲ್ಲಿ ಸಂತೋಷದ ಕ್ರೀಡೆ ದೊರೆವುದಲ್ಲದೆ, ದುಷ್ಕರ್ಮಗಳೆಂಬ ಕೋಣಗಳಾಡುವ ತಗ್ಗುಗಳಂತಿರುವ ದೊರೆ, ಹಾದರಿಗ, ಕಳ್ಳಕಾಕರ ಕಥೆಗಳುಳ್ಳ ಕಥೆಯೆಂಬ ಕೊಚ್ಚೆಕುಳಿಗಳಲ್ಲಿ ದೊರೆಯಬಲ್ಲದೆ? ೫೧. ಕಿವಿಯನ್ನು ಮರುಳುಗೊಳಿಸುವಂತಹ ಇಂಪಾದ ಶಬ್ದ, ಶಬ್ದಗಳಲ್ಲಿ ಸವಿಯನ್ನು ಮುಂದಾಗಿ ನೀಡುವ ಅರ್ಥ, ಅರ್ಥದಲ್ಲಿ ಸಾಲಾಗಿ ಸೊಗಸನ್ನು ಬೀರುವ ಭಾವ, ಭಾವದಿಂದ ಚಿತ್ತವನ್ನು ಮುಳುಗಿಸುವ ನಾನಾ ರಸಗಳು–ಹೀಗಿರುವ ವಸ್ತುಕಾವ್ಯವನ್ನು ರಚಿಸಿ ಅಗ್ಗಳನು (ರಸಿಕರನ್ನು) ಮೆಚ್ಚಿಸುವನು. ೫೨. ದೇವೇಂದ್ರನಿಂದ ಪೂಜೆಗೊಂಡ ಇಂಗಳೇಶ್ವರದ ಶ್ರೀ ಚಂದ್ರಪ್ರಭತೀರ್ಥಂಕರನೆ ತನಗೆ ದೈವ, ತ್ರೈವಿದ್ಯಚಕ್ರವರ್ತಿಯಾದ ಶ್ರುತಕೀರ್ತಿದೇವ ಮುನಿಯೆ ಗುರು, (ಜಿನ) ಭಕ್ತರೇ ಬಾಂಧವರು ಎಂಬ ಅತ್ಯಧಿಕವಾದ ಪುಣ್ಯವನ್ನು ಪಡೆದು, ಜಿನಮತವೆಂಬ ಭಾಂಡಾರದಿಂದ ಶ್ರೀಮಂತನಾದ ಅಗ್ಗಳನು ಭಾಗ್ಯವಂತನಾಗಿರುವನು. ೫೩. ಅಗ್ಗಳದೇವನು ಗುಣವಂತನು; ಮೂಲಸಂಘದ ಪುಸ್ತಕಗಚ್ಛದ ಕೊಂಡಕುಂದಾನ್ವಯ

ಗುರು ಭವ್ಯರ್ ಪ್ರಿಯಬಾಂಧವರ್ ತನಗೆನಿಪ್ಪನ್ಯೂನಮಂ ಪುಣ್ಯದೇ।
ಳ್ತ ರಮಂ ತಾಳ್ದಿದನಗ್ಗಳಂ ಜಿನಮತಶ್ರೀಕೋಶವೇಸ್ಮಾರ್ಗಳಂ॥ ೫.೨

ಗುಣಿ ಮೂಲಸಂಘದೇಶೀ।
ಗಣಪುಸ್ತಕಗಚ್ಛ ಕೊಂಡಕುಂದಾನ್ವಯದೊಳ್॥
ಗಣನೆವಡೆದೆಸೆವ ವಿನಯಾ।
ಗ್ರಣಿ ವಿಮಲತರಸ್ವಭಾವನಗ್ಗಳದೇವಂ॥ ೫೩

ಶಾಂತೀಶನಂದನಂಗುಪ।
ಶಾಂತತೆ ವಾಚಾಂಬಿಕಾತನೂಜಂಗೆ ಜಗ॥
ತ್ಕಾಂತವಚಶ್ಚತುರತೆಯೆಂ।
ದಿಂತಿವು ಭಾವಿಸುವೊಡಗ್ಗಳಂಗೆ ನಿಸರ್ಗಂ॥ ೫೪

ಉಭಯಕವಿತಾವಿಶಾರದ।
ನುಭಯಭವಾತ್ಮಕ್ತಹೇತುಚರತಂ (?) ನೋಟ್ಪಿಂ॥
ದುಭಯಕುಲಶುದ್ಧತಾಯುತ।
ನುಭಯನಯಾಯತ್ತಚಿತ್ತನಗ್ಗಳದೇವಂ॥ ೫೫

ನಾರೀನಯನೋತ್ಪಲಹ್ಯ।
ನ್ನೀರೆಜಮನೊಡನಲರ್ಚೆ ಶಶಿಸೂರ್ಯಸಮಾ॥
ಹಾರದಿನಾದವೊಲತುಳಾ।
ಕಾರಂ ಸೌಭಾಗ್ಯಸಾರಮಾಯ್ತಗ್ಗಳನಾ॥ ೫೬

ದಲ್ಲಿ ಶ್ರೇಷ್ಠನೆನಿಸಿದವನು; ತುಂಬ ವಿನಯಶಾಲಿ, ಅತ್ಯಂತ ನಿರ್ಮಲವಾದ ಸ್ವಭಾವವುಳ್ಳವನು. ೫೪. ಶಾಂತೀಶನ ಮಗನಾದುದರಿಂದ ಶಾಂತವೃತ್ತಿಯೂ, ವಾಚಾಂಬಿಕೆಯೆ ತಾಯಾಗಿರುವುದರಿಂದ ಜಗತ್ತನ್ನೆ ಬೆಳಗುವ ವಾಕ್ಚಾತುರ್ಯವೂ ಅಗ್ಗಳದೇವನಿಗೆ ಸ್ವಾಭಾವಿಕವೇ ಸರಿ. ೫೫. ಅಗ್ಗಳದೇವನು (ಸಂಸ್ಕೃತ ಮತ್ತು ಕನ್ನಡವೆಂಬ) ಎರಡು ಭಾಷೆಗಳ ಕವಿತ್ವದಲ್ಲಿಯೂ ನಿಷ್ಣಾತನು; ಇಹ-ಪರವೆರಡಕ್ಕೂ ಸ್ತುತ್ಯವಾದ ಚಾರಿತ್ರವುಳ್ಳವನು; (ತಂದೆಯ ಹಾಗು ತಾಯಿಯ) ಎರಡೂ ವಂಶಗಳು ಶುದ್ಧವಾಗಿರುವವನು; (ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕ ಎಂಬ) ಎರಡು ಬಗೆಯ ನಯಗಳನ್ನೂ ಚಿತ್ತದಲ್ಲಿ ಅಳವಡಿಸಿಕೊಂಡಿರುವವನು. ೫೬. ಸ್ತ್ರೀಯರ ಕಣ್ಣುಗಳೆಂಬ ಬೆಳ್ದಾವರೆಗಳನ್ನೂ, ಹೃದಯವೆಂಬ ಕೆಂದಾವರೆಯನ್ನೂ ಏಕಕಾಲಕ್ಕೆ ಅರಳಿಸುವುದರಿಂದ ಚಂದ್ರ ಸೂರ್ಯರಿಬ್ಬರನ್ನೂ ಕೂಡಿಸಿ ರಚಿತವಾಯಿತೊ ಏನೊ ಎಂಬಂತೆ ಅಗ್ಗಳನ ಅಸಮಾನ

ಗಳಪರ್ ಪವಣಱಿಯದೆ ಬೆಸ ।
ಗೊಳೆ ಸೆಣಸಿಂ ಲೋಕದೊಳಗೆ ವರ್ತಿಪ ವಿಲಸ ॥
ತ್ಕಳೆಗಳೆನಿತನಿತಱಿಕೊಳಮ ।
ಗ್ಗಳಗಣ್ಣಿಂ ತೋರ್ಪನಗ್ಗಳಂ ನೃಪಸಭೆಯೊಳ್ ॥ ೫೭

ಪ್ರಕಟತರಂ ಶಬ್ದಂ ಶಾ ।
ಬ್ದಿಕಸಮ್ಮತಮರ್ಥಮರ್ಥದೃಷ್ಟಿ ಮನಃಕೌ ॥
ತುಕಜನಕಂ ಭಾವಂ ಭಾ ।
ವುಕಭಾವ್ಯಂ ಕಾವ್ಯತತಿಯೊಳಗ್ಗಳ ನಿನ್ನಾ ॥ ೫೮

ತಿಂಗಳ ತಣ್ಣನಪ್ಪ ಕದಿರ್ಗಳೊಳಭ್ಯಸಿಸಿತ್ತೋ ಕಾಮಬಾ ।
ಣಂಗಳೊಳಾದಮೋದಿದುದೊ ಬಂದ ಬಸಂತದ ಕಮ್ಮನಪ್ಪಲರ್ ॥
ತಾಂ ಗುರುವಾಗೆ ಕಲ್ತುದೊ ವಿಳಾಸವತೀನಯನತ್ರಿಭಾಗದೊಳ್ ।
ಸಂಗಳಿಸಿತ್ತೊ ಮೋಹನಮನಗ್ಗಳ ನಿನ್ನಯ ವಾಕ್ಪ್ರಗುಂಭನಂ ॥ ೫೯

ಎಂದು ವಿನೇಯವಿಪಶ್ಚಿ ।
ದ್ವೃಂದಂ ಕೇವಣಿಸು ವಾಕ್ಸುವರ್ಣದೊಳೊಲವಿಂ ॥
ಸಂದ ಜಿನಚರಿತರತ್ನಮ ।
ನೆಂದೊಡೆ ತದನುಜ್ಞೆಯಿಂದಮಾಂ ಬಗೆದಂದಂ ॥ ೬೦

ವಾದ ರೂಪ, ಸೌಂದರ್ಯಸಾರವೆನಿಸಿತು. ೫೭. ರಾಜನ ಒಡ್ಡೋಲಗದಲ್ಲಿ ವಾಚಾಳರಾದ ಕೆಲವರು ಈರ್ಷೆಯಿಂದ ಹವಣು ಮೀರಿ ಏನೇನನ್ನೊ ಕೇಳಲಾಗಿ, ಲೋಕದಲ್ಲಿ ಸತ್ಕಲೆಗಳೆಷ್ಟಿರುವುವೊ ಅಷ್ಟೆಲ್ಲದರಲ್ಲಿಯೂ ತನ್ನ ದೃಷ್ಟಿವೈಶಾಲ್ಯವನ್ನು ಅಗ್ಗಳನು ಪ್ರಕಟಿಸುವನು [ಇವನು ಕಾಣದಿರುವ ವಿಷಯವೇ ಇಲ್ಲ]. ೫೮. ಅಗ್ಗಳನೇ ನಿನ್ನ ರಚನೆಯಲ್ಲಿ ಸುಸ್ಪಷ್ಟವಾದ ಶಬ್ದ, ಶಬ್ದಕ್ಕೆ ಸಮುಚಿತವಾದ ಅರ್ಥ. ಅರ್ಥದೃಷ್ಟಿಯಲ್ಲಿ ಚಮತ್ಕಾರವಾದ ಭಾವ, ಭಾವದಲ್ಲಿ ರಸಸೃಷ್ಟಿ– ಹೀಗೆ ಕಾವ್ಯಸಮೂಹದಲ್ಲಿ ನಿನ್ನ ಕಾವ್ಯ ಶ್ರೇಷ್ಠವಾದುದು. ೫೯. ಚಂದ್ರನ ತಂಪಾದ ಕಿರಣಗಳಲ್ಲಿ ಅಭ್ಯಾಸ ಮಾಡಿತ್ತೊ, ಕಾಮನ ಬಾಣಗಳಿಂದಲೆ ಚೆನ್ನಾಗಿ ವಿದ್ಯಾರ್ಜನೆ ಮಾಡಿತೊ, ವಸಂತದಲ್ಲಿ ಅರಳಿದ ಸುಗಂಧ ಪುಷ್ಪಗಳೆ ಗುರುಗಳಾಗಿ ಕಲಿಸಿಕೊಟ್ಟುವೊ ಅಥವಾ ವಿಲಾಸವತಿಯರ ಕಡೆಗಣ್ಣಿಂದ ಮೋಹಕಶಕ್ತಿಯನ್ನು ಸಂಪಾದಿಸಿತೊ ಏನೊ ಎಂಬಂತೆ ಅಗ್ಗಳದೇವ, ನಿನ್ನ ಮಾತಿನ ಬಂಧವಿರುವುದು. ೬೦. ಹೀಗೆಂದು ನುಡಿದ ಸಜ್ಜನರಾದ ಪಂಡಿತರು, "ನಿನ್ನ ವಾಣಿಯೆಂಬ ಚಿನ್ನದಲ್ಲಿ ಪ್ರಸಿದ್ಧವಾದ ಜಿನಚರಿತ್ರೆಯೆಂಬ ರತ್ನವನ್ನು ಕುಂದಣಿಸು" ಎಂದು ಹೇಳಿದರು. ಅವರ ಅಪ್ಪಣೆಯ ಮೇರೆಗೆ ನಾನು (ಜಿನಚರಿತ್ರೆ

ಒಗೆದಲ್ಪಮತಿಯ ಬಲದಿಂ ।
ದಗಣಿತಜಿನನಾಥಸತ್ಕಥಾಕಥನಕ್ಕು ॥
ಜ್ಜಗಿಸಿದೆನಾಂ ತವೆ ಪೀರಲ್ ।
ಬಗೆದಂತೆ ಮೃಣಾಳನಾಳದಿಂ ವಾರಿಧಿಯಂ ॥ ೬೧

ಕಿಱಿದೇಂ ಪಿರಿದೇಂ ಮತಿ ಮತಿ ।
ಯಱಿಯಮೆ ಪಶುಗಂ ಫಣೀಶ್ವರಂಗಂ ಜಿನನಂ ॥
ಕುಱಿತುಸಿರೆ ಸೈಪು ಸರಿಯ ।
ಲ್ತೆಱಗಿದೊಡದಱಿಂದೆ ಪೇೞದಂ ಮರುಳಲ್ತೇ ॥ ೬೨

ಕವಿತಾಭಿಮಾನದಿಂ ಮೇ ।
ಣವಿರಳವೇಳಾಪಸರಣಲೀಲೆಯಿನಲ್ತೇ ॥
ಭವಹರಚರಿತಂ ಪುಣ್ಯಾ ।
ಶ್ರವಕಾರಣಮೆಂದೆ ಪೇೞಲುದ್ಯತನಾದೆಂ ॥ ೬೩

ಗಣಭೃದ್ವಿಸ್ಮಾಪಕಂ ತೀರ್ಥಕರಪರಮದೇವಪ್ರಭಾವಂ ದಲೆಂದೀ ।
ಗಣಿದಂ ಮಚ್ಚಿತ್ತದೊಳ್ ತಳ್ತಿರೆಯಿರೆಯುಮದಂ ಮೀಱಿ ಭಕ್ತಿಪ್ರಿಯಾಪ್ರೇ ॥
ರಣದಿಂ ತದ್ವರ್ಣನೋಪಕ್ರಮದೊಳೆಳಸಿದೆಂ ಭ್ರಾಂತನೆಂ ನೋೞ್ಪೊಡೆಂತುಂ ।
ಪ್ರಣಯಿನ್ಯಾಸಕ್ತಿಯುಕ್ತಂ ಗಗನಗಹನಸದ್ಯುಕ್ತಿಯವ್ಯಕ್ತಮಲ್ತೇ ॥ ೬೪

ಯನ್ನು ರಚಿಸಲು) ಮನಸ್ಸು ಮಾಡಿದೆನು. ೬೧. ತಾವರೆಯ ದಂಟಿನಿಂದ ಸಮುದ್ರವನ್ನೆ ಹೀರಲು ಬಯಸಿದಂತೆ, ನನ್ನಲ್ಲಿರುವ ಅಲ್ಪಬುದ್ಧಿಶಕ್ತಿಯ ಬಲದಿಂದಲೆ ಅಸೀಮವಾದ ಜಿನೇಂದ್ರಕಥೆಯನ್ನು ಹೇಳುವುದಕ್ಕೆ ನಾನು ತೊಡಗಿದೆನು. ೬೨. ಬುದ್ಧಿಶಕ್ತಿ ಕಿರಿದಾದರೇನು, ಹಿರಿಯದಾದರೇನು? ಪಶುವಾಗಲಿ, ನಾಗೇಂದ್ರನಾಗಲಿ, ಅವರವರ ಅಜ್ಞಾನ ಹಿರಿಕಿರಿದಾಗಿದ್ದರೂ, ಜಿನನಿಗೆ ಬಾಗಿ, ಆತನ ಸ್ತುತಿ ಮಾಡಿದಾಗ, ಇಬ್ಬರಿಗೂ ಬರುವ ಪುಣ್ಯ ಸಮಾನವೆ ಅಲ್ಲವೆ ? ಆದುದರಿಂದ (ತನಗೆ ಬಲವಿಲ್ಲವೆಂದು ಜಿನಕಥೆಯನ್ನು) ಹೇಳದವನು ದಡ್ಡನಲ್ಲವೆ ? ೬೩. ಸಂಸಾರದಿಂದ ಮುಕ್ತಿಯನ್ನೀಯುವ ಈ ಜಿನಚರಿತ್ರೆಯನ್ನು ನಾನು ಹೇಳತೊಡಗಿದುದು ಪುಣ್ಯಪ್ರಾಪ್ತಿಗೆಂದೇ ಹೊರತು ಕವಿತ್ವದ ಅಭಿಮಾನದಿಂದಾಗಲಿ, ಹೊತ್ತುಕಳೆಯುವ ಆಟವೆಂದಾಗಲಿ ಅಲ್ಲ. ೬೪. ತೀರ್ಥಂಕರ ಪರಮೇಶ್ವರನ ಮಹಿಮೆಯು ಗಣಧರರಿಗೂ ವಿಸ್ಮಯವನ್ನುಂಟುಮಾಡುವಂತಹುದು ಎಂಬ ಈ ವಿಚಾರವನ್ನು ನಾನು ಪೂರ್ಣವಾಗಿ ಮನಗಂಡವನಾದರೂ, ಅದನ್ನು ಮೀರಿ ಭಕ್ತಿಯೆಂಬ ಪ್ರಿಯೆಯಿಂದ ಪ್ರೇರಿತನಾಗಿ ಆತನ ವರ್ಣನೆಗೆ ಹೊರಟ ಭ್ರಾಂತ ನಾನು. ವಿಚಾರಮಾಡಿ ನೋಡಿದರೆ ಪ್ರಣಯಿನಿಯ ಆಸಕ್ತಿಯಿಂದ ಕೂಡಿದ "ಗಗನಗಹನಸದ್ಯುಕ್ತಿ"(?)

ಆರಯೆ ಸೂರ್ಯನಂತೆ ನಭಮಂ ಬೆಳಪೊಂದಳವಿಲ್ಲದಿರ್ದೊಡಂ।
ತಾರಗೆಯಲ್ಲಿ ಸಂಭವಿಸಿ ತನ್ನನೆ ತಾಂ ಬೆಳಪಂದದಿಂದೆ ಮ॥
ದ್ಭಾರತಿಗಾದ್ಯಸೂರಿವಚದಂತೆ ಜಿನಸ್ತುತಿದಕ್ಷವೃತ್ತಿ ಕೈ।
ಸಾರದೊಡಂ ಪವಿತ್ರಮಿದೆನಿಪ್ಪುದು ತನ್ನನೆ ತತ್ಪ್ರಸಂಗದಿಂ॥ ೬೫

ನಯದಿಂ ಪಂಪನೊಱಲ್ದು ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇೞ್ದಭ।
ಕ್ತಿಯಿನಾ ರತ್ನಕವೀಶ್ವರಂ ಸಮೆದ ತತ್ಕಾವ್ಯತ್ರಯಕ್ಕಂ ಜಗ॥
ತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತೆನೆ ಬೞಿಕ್ಕಾಂ ಪೇೞ್ದ ಚಂದ್ರಪ್ರಭೋದಯ
ವಿಸ್ತಾರಿಯೆನಿಪ್ಪ ಕಾವ್ಯಮಿದಮೂಲ್ಯತ್ವಕ್ಕೆ ಪಕ್ಕಾಗದೇ॥ ೬೬

ವ॥ ಆದೊಡಂ,

ಆ ಚಂದ್ರಪ್ರಭಜಿನನ ಮ।
ಹಾಚರಿತಪಯೋಧಿಪಾರಯಾನಕ್ಕಾನಾ॥
ಲೋಚಿಸಿದೆಂ ಪ್ರಾಕ್ತನಪರ।
ಮಾಚಾರ್ಯಶ್ರೌತಸೇತುಬಲದಿಂದೀಗಳ್॥ ೬೭

ಸ್ಕಂಧದವೋಲ್ ಜಿನೇಶ್ವರಮುಖೋದ್ಗತವಾಗ್ವಧುಗೊಪ್ಪುವಾಶ್ರುತ।
ಸ್ಕಂಧಮನೊಂದಿ ತೋಱುವನು ಯೋಗಚತುಷ್ಟಯಮೆಂಬ ಕೈಗಳೊಳ್॥

ಅವ್ಯಕ್ತವಲ್ಲವೆ ? ೬೫. ವಿಚಾರಿಸಿ ನೋಡಿದರೆ ಸೂರ್ಯನಂತೆ ಆಕಾಶವನ್ನೆಲ್ಲ ಬೆಳಗುವ ಸಾಮರ್ಥ್ಯ ತನಗಿಲ್ಲದಿದ್ದರೂ, ನಕ್ಷತ್ರವೊಂದು ಅದರಲ್ಲಿ ಹುಟ್ಟಿ ತನ್ನನ್ನೆ ಬೆಳಗಿಕೊಳ್ಳುವುದು. ಅದರಂತೆ ಆರ್ಯ ಸೂರಿಗಳ ವಾಣಿಗಿದ್ದಂತೆ ನನ್ನ ವಾಣಿಗೆ ಜಿನಸ್ತುತಿಯನ್ನು (ಸಮರ್ಪಕವಾಗಿ) ಮಾಡುವ ಶಕ್ತಿಯಿಲ್ಲದಿದ್ದರೂ, ಸ್ತುತಿಮಾಡುವ ಪ್ರಯತ್ನದಿಂದ ತನ್ನನ್ನೆ ಪವಿತ್ರಗೊಳಿಸಿಕೊಳ್ಳುವುದು. ೬೬. ಪಂಪನು ಪ್ರೀತಿಯಿಂದ ಸೊಗಸಾಗಿ ರಚಿಸಿದ, ಪೊನ್ನನು ಅಕ್ಕರೆಯಿಂದ ನಿರ್ಮಿಸಿದ, ಕವೀಶ್ವರನಾದ ರನ್ನನು ಭಕ್ತಿಯಿಂದ ಹೇಳಿದ ಮೂರು ಪುರಾಣಕಾವ್ಯಗಳಿಗೆ ಮೂರುಲೋಕ ಬೆಲೆಯಾಗಿ ಹೋಯಿತು. ಎಂದ ಮೇಲೆ ಅವರ ಅನಂತರ ನಾನು ಹೇಳಿದ ಚಂದ್ರಪ್ರಭಜಿನನ ವಿಸ್ತಾರವಾದ ಕಾವ್ಯ 'ಅಮೂಲ್ಯತ್ವ'ಕ್ಕೆ ಗುರಿಯಾಗದೆ? [ಇದಕ್ಕೆ ಏನೂ ಬೆಲೆಯೆ ಇಲ್ಲ ಎಂಬುದು ವಿನಯಪೂರ್ವಕವಾಗಿ ಹೇಳುವ ವಾಚ್ಯಾರ್ಥ. ಧ್ವನಿಯಿಂದ ಇದರ ಬೆಲೆಯನ್ನು ನಿರ್ಧರಿಸಲಾಗದೆಂಬಷ್ಟು ಈ ಕಾವ್ಯ ಶ್ರೇಷ್ಠವಾಗಿದೆಯೆಂದೂ ಅರ್ಥವಿರುವುದು ಸಾಧ್ಯ]. ವ॥ ಆದರೂ, ೬೭. ಪುರಾತನರಾದ ಆಚಾರ್ಯಶ್ರೇಷ್ಠರು ಶ್ರುತಗಳ ಸೇತುವೆಯನ್ನು ನಿರ್ಮಿಸಿಕೊಟ್ಟಿರುವರು; ಅವರ ಬಲದಿಂದ ಚಂದ್ರಪ್ರಭ ತೀರ್ಥಕರನ ಮಹಾಚರಿತ್ರೆಯೆಂಬ ಸಮುದ್ರವನ್ನು ಹೊಕ್ಕು ಆಚೆಯ ದಂಡೆಯನ್ನು ಮುಟ್ಟಲು ನಾನು ಆಲೋಚಿಸಿದೆನು. ೬೮. ಜಿನೇಂದ್ರನ ಮುಖದಿಂದ ಉತ್ಪನ್ನವಾದ ವಾಣಿಯೆಂಬ ದೇವಿಗೆ ಹೆಗಲಿನಂತಿರುವ ಶ್ರುತಸ್ಕಂಭಕ್ಕೆ ಹೊಂದಿಕೊಂಡು ತೋರುವ (ಪ್ರಥಮ, ಕರಣ, ಚರಣ ಮತ್ತು ದ್ರವ್ಯ

ಬಂಧುರಮಪ್ಪ ಪೂರ್ವದನುಯೋಗಕರಕ್ಕುರುಶಕ್ತಿಯಂತೆ ಸಂ ।
ಬಂಧಿಸಿ ತೋರ್ಪುದೀ ಕಥೆ ವಿನೇಯಜನೋದ್ಧರಣೈಕಕಾರಣಂ ॥ ೬೮

ವ॥ ಅದೆಂತೆಂದೊಡೆ

ಮಿಗೆವಂದ ಪೆರ್ಮೆಗಂ ಸ್ಥಿರ ।
ತೆಗಮಾಶ್ರಯಮಾದ ಗಗನಲಕ್ಷ್ಮಿಯ ಮಧ್ಯಾ ॥
ಧಿಗತವಳಿತ್ರಯಮೆನೆ ಸಲೆ ।
ಸೊಗಯಿಪುದು ಜಗತ್ತ್ರಯಂ ಮರುತ್ತ್ರಯವಿಧೃತಂ ॥ ೬೯

ಅದಱೊಳ್ ಮಧ್ಯಮಮೆನಿಸಿಯು ।
ಮುದಾತ್ತನಿಜಶೋಭೆಯಿಂದಮುತ್ತಮಮಾಯ್ತೆಂ ॥
ಬುದನೆನಿಸಿ ನಾಡೆ ಸೊಗಯಿಸು ।
ವುದು ತಿರ್ಯಗ್ಲೋಕಮೇಕರಜ್ಜು ವಿಶಾಲಂ ॥ ೭೦

ಅಂತಸಂಖ್ಯಾತದ್ವೀಪಸಮುದ್ರಭದ್ರತಾಮುದ್ರಿತಮಪ್ಪ ಮಧ್ಯಮಲೋಕದೊಳ್ ೭೧

ಅಣಕಂ ತುಚ್ಛತರಂಗೆ ಮತ್ತೆ ತನಗೀಮುಖ್ಯಾಖ್ಯೆ ತನ್ನಿಂ ಚತು ।
ರ್ಗುಣವಿಸ್ತಾರವಿಲಾಸವಿಶ್ರುತನೆನಾನಿರ್ದಂತಿರೆಂದುದ್ಗತೋ ।
ಲ್ಬಣರೋಷಂ ಪರಿಯಿಟ್ಟು ಮುತ್ತಿದವೊಲಿರ್ಕುಂ ಧಾತಕೀಷಂಡಮೀ ।
ಕ್ಷಣಭದ್ರಂ ಸಸಮುದ್ರಮಂ ಬಳಸಿ ಜಂಬೂದ್ವೀಪವಿನ್ಯಾಸಮಂ ॥ ೭೨

ವೆಂಬ) ನಾಲ್ಕು ಅನುಯೋಗಗಳೆಂಬುವು ನಾಲ್ಕು ಕೈಗಳು : ಅವುಗಳಲ್ಲಿ ಪ್ರಥಮಾನುಯೋಗವೆಂಬ ಕೈಗೆ ಮಹಾಶಕ್ತಿಯಂತೆ ತೋರುವುದು ಈ ಕಥೆ : ಇದು ಭಕ್ತಜನರನ್ನು ಉದ್ಧಾರಮಾಡುವ ಏಕೈಕ ಕಾರಣವಾಗಿದೆ. ವ॥ ಅದು (ಆ ಕಥೆ) ಹೇಗೆಂದರೆ -- ೬೯. ಅತಿಶಯವಾದ ಹಿರಿಮೆಗೂ ದೃಢತೆಗೂ ಆಶ್ರಯವಾದ ಆಕಾಶವೆಂಬ ಲಕ್ಷ್ಮಿಯ ನಾಭಿಯ ಮೇಲಿರುವ ವಳಿತ್ರಯಗಳೋ ಏನೊ ಎಂಬಂತೆ, (ಘನೋದಧಿ, ಘನವಾತ ಮತ್ತು ತನುವಾತಗಳೆಂಬ) ಮೂರು ಗಾಳಿಗಳಿಂದ ಆವೃತವಾದ ಮೂರುಲೋಕಗಳು ಶೋಭಿಸುವುವು. ೭೦. ಅದರಲ್ಲಿ ಸ್ಥಾನದೃಷ್ಟಿಯಿಂದ ಮಧ್ಯಮವೆನಿಸಿದರೂ ತನ್ನ ಅತಿಶಯ ಶೋಭೆಯಿಂದ ಉತ್ತಮವಾದುದೇ ಎಂದು ಖಚಿತಪಡಿಸಿ, ಒಂದು ರಜ್ಜುವಿಸ್ತೀರ್ಣವಾದ ತಿರ್ಯಗ್ಲೋಕವು ತುಂಬ ಸೊಗಸಾಗಿ ಕಂಗೊಳಿಸುವುದು. ೭೧. ಎಣಿಸಲಾಗದ ದ್ವೀಪಗಳಿಂದಲೂ, ಸಮುದ್ರಗಳಿಂದಲೂ ಕೂಡಿದ ಮಧ್ಯಮಲೋಕದಲ್ಲಿ– [ಈ ಕಾವ್ಯದಲ್ಲಿ ವಚನಗಳಿಗೂ ಸಂಖ್ಯೆ ಹಾಕಿದೆ, ಆದುದರಿಂದ ವ॥ ಎಂದು ಗುರುತಿಸಿಲ್ಲ]. ೭೨. "ಇದಕ್ಕಿಂತ ನಾಲ್ಕು ಮಡಿ ವಿಸ್ತಾರವೈಭವವುಳ್ಳ ನಾನು ಪ್ರಸಿದ್ಧನಾಗಿರುವಾಗ, ನನ್ನೆದುರಿಗೇ ಈ ಅಲ್ಪದ್ವೀಪಕ್ಕೆ ಇಷ್ಟೊಂದು ಮುಖ್ಯತೆಯೆ?" ಎಂದುಕೊಂಡು ಅತ್ಯುಗ್ರವಾದ ಕೋಪದಿಂದ ಧಾತಕಿಷಂಡವು ಮಹಾಕಾರವಾಗಿ ಸಮುದ್ರಸಹಿತವಾದ ಜಂಬೂದ್ವೀಪವನ್ನು

ಧೃತಪೂರ್ವಾಪರಮೇರುಯುಗ್ಮಕುಚಯುಗ್ಮಂ ರುಗ್ಮಿಭೂಭೃದ್ದ್ವಯಾ
ಯತನೇತ್ರದ್ವಯಮುದ್ಘಹೈಮ್ಯಕುಹರದ್ವಂದ್ವದ್ವಿಪದ್ವಂಸದ್ವಸಂ ॥
ಚಿತಗಂಗದವಯವಾಳ್ಪದ (?) ದ್ವಯಮದೇಂ ಮಾಡಿತ್ತೊ ತದ್ವೀಪಮಾ ।
ದೃತವಾಳೋದಕವಾರಿರಾಶಿವಸನಂ ಸ್ತ್ರೀವಿಭ್ರಮಭ್ರಾಂತಿಯಂ ॥ ೭೩

ಅದಲ್ಲದೆಯುಂ,

ಬಳಸುವ ಚಂದ್ರಭಾನುಭಗಣಪ್ರತಿಬಿಂಬಕದಂಬಮೆತ್ತಲುಂ ।
ವಿಳಿಖಿತಸೋಮಸೂರ್ಯನಿಬಿಡಾಕ್ಷರಮಾಳಿಕೆಯಂದದಿಂ ಮನಂ ॥
ಗೊಳಿಸೆ ಜಿನಪ್ರಶಸ್ತಿಯುತಭರ್ಮಚತುರ್ಮುಖಶಾಸನಂಬೊಲು ।
ಜ್ವಳಿಪುದು ನಂದನೋಪಚಿತಕಂದರಮಲ್ಲಿಯ ಪೂರ್ವಮಂದರಂ ॥ ೭೪

ಆ ನಗೇಂದ್ರದೈಂದ್ರದಿಶಾಭಾಗದೊಳ್ ನಿಷಧನೀಳನಗಯುಗಾಂತರಪ್ರದೇಶವಿಳಾಸಮಂ ಭದ್ರ ತಾಳೋದಕ ಶಾಳತಾಳೋದಕ ವನಧಿಪ್ರಾಂತಪರ್ಯಂತಾಯತಮುಮಾಗಿ ೭೫

ಅತಿದೂರಂ ಕಾಲಕಲ್ಪೋಚಿತವಿಕೃತಿ ಖಪುಷ್ಪೋಪಮಂ ಜೈನಧರ್ಮ ।
ಚ್ಯುತಿ ನಿತ್ಯಂ ಕ್ಷತ್ರಸಾರಸ್ಥಿತಿಯವಿಚಳಿತಂ ಪೂರ್ವಕೋಟ್ಯಾಯತಾಯು ॥

ಸುತ್ತಲೂ ಮುತ್ತಿಕೊಂಡಿತೋ ಏನೊ ಎಂಬಂತಿರುವುದು. ೭೩. ಪೂರ್ವಮೇರು ಮತ್ತು ಪಶ್ಚಿಮಮೇರುವೆಂಬ ಎರಡು ಕುಚಗಳು, ಚಿನ್ನದ ಬೆಟ್ಟಗಳೆಂಬ ಎರಡು ವಿಶಾಲವಾದ ಕಣ್ಣುಗಳು, ಶ್ರೇಷ್ಠವಾದ ಚಿನ್ನದ ಎರಡು ಕೊಳ್ಳಗಳೆಂಬ ದ್ವೀಪ(?)ಗಳು, ಎರಡು ಗಂಗೆಗಳೆಂಬ "ವಾಳ್ಪಪ" (?), ಸಮುದ್ರವೆಂಬ ಸೀರೆ-ಇವುಗಳಿಂದ ಆ ದ್ವೀಪವು ಒಂದು ಹೆಣ್ಣೆಂಬ ಭ್ರಾಂತಿಯನ್ನುಂಟು ಮಾಡಿತ್ತು. ಅದಲ್ಲದೆ- ೭೪. ಪ್ರದಕ್ಷಿಣೆ ಹಾಕುತ್ತಿರುವ ಸೂರ್ಯ, ಚಂದ್ರ ನಕ್ಷತ್ರಗಳ ಪ್ರತಿಬಿಂಬಸಮೂಹವು ಸುತ್ತಲೂ ಮೂಡಿ, (ಶಾಸನಗಳ ಮೇಲ್ಭಾಗದಲ್ಲಿ ಕೊರೆದ) ಸೂರ್ಯ ಚಂದ್ರ ಚಿಹ್ನೆಗಳಂತೆಯೂ, ಸಾಂದ್ರವಾಗಿ ಅಳವಡಿಸಿದ ಅಕ್ಷರಗಳ ಸಾಲುಗಳಂತೆಯೂ ಮನೋಹರವಾಗಲಾಗಿ ನಂದನಗಳಿಂದ ತುಂಬಿದ ಕೊಳ್ಳಗಳುಳ್ಳ ಪೂರ್ವಮಂದರ ಗಿರಿಯು ನಾಲ್ಕು ಮೈಯುಳ್ಳ ಜಿನಪ್ರಶಸ್ತಿಯ ಚಿನ್ನದ ಶಾಸನದಂತೆ ಪ್ರಜ್ವಲವಾಗಿ ಕಂಗೊಳಿಸುವುದು. ೭೫. ಆ ಮಹಾಪರ್ವತದ ಪೂರ್ವದಿಕ್ಕಿಗೆ ನಿಷಧ ಹಾಗು ನೀಳ ಎಂಬೆರಡು ಬೆಟ್ಟಗಳ ನಡುವೆ ಸುಂದರವಾಗಿ, ಭದ್ರ ತಾಳೋದಕ ಹಾಗು ಶಾಳ ತಾಳೋದಕ ಸಮುದ್ರಗಳ ತೀರದವರೆಗೆ ವಿಸ್ತಾರವಾಗಿ (ವಿದೇಹವೆಂಬ ಭೂಮಿ ಹರಡಿಕೊಂಡಿದೆ). ೭೬. ಕಾಲಭೇದದಿಂದಾಗುವ ಯಾವ ವಿಕಾರಗಳಿಗೂ ಇಲ್ಲಿ ಅವಕಾಶವಿಲ್ಲ. (ಇಲ್ಲಿ ಸದಾಕಾಲ ಸುಸ್ಥಿತಿಯೆ); ಜೈನಧರ್ಮಕ್ಕೆ ಭಂಗವೆಂಬುದು ಆಕಾಶಪುಷ್ಪ (ಎಂದರೆ ಅಸಂಭವ); ಕ್ಷಾತ್ರವೃತ್ತಿಗೆ ನಿತ್ಯಸ್ಥಿತಿ; ಇಲ್ಲಿ ಇರುವವರಿಗೆ ಒಂದು ಪೂರ್ವಕೋಟಿ ಸಂಖ್ಯೆಯ ನಿರ್ಬಾಧ ಆಯುಷ್ಯ; (ಅತಿವೃಷ್ಟಿ, ಅನಾವೃಷ್ಟಿ, ಮಿಡಿಚಿ, ಇಲಿ, ಮೊದಲಾದುವುಗಳಿಂದ ಉಪದ್ರವ, ಪರಕೀಯರಿಂದ ದಾಳಿ

ರ್ಮಿತಿ ವೃತ್ತಂ ಷಡ್ವಿಧೇತಿಪ್ರತತಿನಿಯತಮೈನೂಱು ಬಿಲ್ ಮರ್ತ್ಯಮೂರ್ತ್ಯು ।
ನ್ನತಿಯೆಂದುಂ ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ ॥ ೭೬

ಜಿನನಾಥರುಮೆಂದುಂ ಚ ।
ಕ್ರನಾಥರುಂ ಕುಂದರೆನೆ ತದುರ್ವರೆಯವೊಲಾ ॥
ವ ನೆಲಂ ನೋಂತುದೊ ನಿರುಪಮ ।
ಮೆನಿಪ ಪವಿತ್ರತೆಗಮನಿತು ನಕ್ಷತ್ರತೆಗಂ ॥ ೭೭

ಒಂದಂದದಿನಡಕಿಲ್ಗೊಂ ।
ಡೊಂದೊಂದಂ ಪೊತ್ತಿರಲ್ಕೆ ಬೇಸತ್ತಿದಱಿಕೊಳ್ ॥
ಬಂದು ನೆಲೆಸಿದುವೊ ಪದಿನಾ ।
ಱುಂದಿವಮೆನೆ ನಾಟ್ಕಳಲ್ಲಿ ಪದಿನಾಱೆಸೆಗುಂ ॥ ೭೮

ಇಂತಿದೆ ನೆಲೆಯೆನಗೆಂದು ಪ ।
ದಾಂತರದಿಂದತನು ತನ್ನ ಪೆಸರನದರ್ಕಂ ॥
ಸಂತಸದಿನಿಟ್ಟನೆನೆ ಚೆ ।
ಲ್ವಂ ತಳೆದ ವಿದೇಹನಾಮಮಾ ಮಹಿಗೆಸೆಗುಂ ॥ ೭೯

ಮೊದಲಾದ) ಆರುಬಗೆಯ ಈತಿ ಬಾಧೆಗಳಿಲ್ಲ; ಮನುಷ್ಯರಿಗೆಲ್ಲ ಐನೂರು ಬಿಲ್ಲಳತೆಯ ದೇಹ- ಇವೆಲ್ಲ ತನ್ನ ವಿಶೇಷವೆಂದು ಸೌಖ್ಯದ ನೆಲೆಯಾದ ವಿದೇಹವು ಹೊಗಳಿಸಿಕೊಳ್ಳುವುದು. ೭೭. ಇಲ್ಲಿ ತೀರ್ಥಂಕರರೂ, ಚಕ್ರವರ್ತಿಗಳೂ ತಪ್ಪದೆ ಇದ್ದೇ ಇರುವರು. ಅಸದೃಶವಾದ ಪಾವನತೆಗೂ, ಅವಿಚ್ಛಿನ್ನವಾದ ಕ್ಷಾತ್ರ ಪರಂಪರೆಗೂ ನೆಲೆಯಾಗಿರುವ ಇಂತಹ ಪುಣ್ಯವನ್ನು ಇನ್ನಾವ ಭೂಮಿ ಪಡೆದಿದೆ? [ನ = ಅಖಂಡವಾದ, ಅವಿಚ್ಛಿನ್ನವಾದ]. ೭೮. ಅಡಕಿಲಂತೆ ಒಂದರ ಮೇಲೊಂದನ್ನು ಹೊತ್ತುಕೊಂಡು ನಿಲ್ಲುವುದಕ್ಕೆ ಬೇಸತ್ತು, ಹದಿನಾರು ಸ್ವರ್ಗಗಳೂ ಬಂದು ಇಲ್ಲಿ ಬಿಡಿಬಿಡಿಯಾಗಿ ನೆಲಸಿದುವೊ ಏನೊ ಎಂಬಂತೆ ಅಲ್ಲಿ ಹದಿನಾರು ನಾಡುಗಳು ಶೋಭಿಸುವುವು. ೭೯. ಇದು ತನಗೆ ಆಶ್ರಯಸ್ಥಾನವೆಂದು 'ಅತನು' (ದೇಹವಿಲ್ಲದವ)ನಾದ ಮನ್ಮಥನು ಸಂತೋಷಪಟ್ಟು, ಇದಕ್ಕೆ ಇನ್ನೊಂದು ಪದದಿಂದ ತನ್ನದೇ ಹೆಸರಿಟ್ಟನೊ ಏನೊ ಎಂಬಂತೆ ಚೆಲುವಾದ "ವಿದೇಹ"ವೆಂಬ ಹೆಸರು ಆ ಭೂಮಿಗೆ ಶೋಭಿಸುವುದು. ೮೦. ಉತ್ತರಕುರು ಮತ್ತು ದೇವಕುರು ಗಳೆಂಬ ಎರಡೂ ಭೂಮಿಗಳು ಸುಮೇರು ಪರ್ವತಕ್ಕೆ ಹೊಂದಿಕೊಂಡು ಎರಡು "ಗಜದಂತ" ಗಿರಿಗಳಿಂದ ಅಗಲಿಸಲ್ಪಟ್ಟಿವೆ- ಎಂದರೆ ಈಚೆಗೊಂದು ಹಾಗು ಆಚೆಗೊಂದು ಗಜದಂತವೆಂಬ ಗಿರಿಗಳು ಅವೆರಡರ ಮಧ್ಯದಲ್ಲಿ ಗೋಡೆಗಳಂತೆ ನಿಂತಿವೆ. [ಇಷ್ಟರಿಂದಲೆ ಮುಂದಿನ ವಾಕ್ಯಕ್ಕೆ ಸಂಬಂಧವಾಗುವುದಿಲ್ಲ. ಆದುದರಿಂದ ಈ ವಾಕ್ಯದಲ್ಲಿ ಶ್ಲೇಷಾರ್ಥವನ್ನು ಹೇಗೆ ಹೇಳಬೇಕು-ಸ್ವರ್ಗದ ಆಗಮನವನ್ನು ಹೊಂದಿ - ಸ್ವರ್ಗ ಇಲ್ಲಿಗೇ ಇಳಿದು ಬಂದಂತಾಗಿ - ಎರಡು ಚಿಕ್ಕಗೂಟ (ಗಜದಂತ)ಗಳಿಂದ ಮಾತ್ರ ಅವು ಒಂದನ್ನೊಂದು ಬಿಟ್ಟುಕೊಂಡಿವೆ]

ಕುರುಧರೆಗಳ್ ಪಿರಿದುಂ ಮಂ ।
ದರಾಗಮಂ ಪೊರ್ದಿ ಮತ್ತೆ ಗಜದಂತಯುಗಾಂ ॥
ತರಿತಂಗಳಾದುವೆನೆ ಪೇೞ್ ।
ದೊರೆಯೆ ವಿದೇಹಕ್ಕೆ ಸೌಖ್ಯಸೌಸ್ಥ್ಯೋನ್ನತಿಯಿಂ ॥ ೮೦

ಎಂಬಿನಮಪೂರ್ವಸಂಪತ್ಸಾರಸರ್ವಸ್ವಗೇಹಮಾದ ಪೂರ್ವವಿದೇಹಮ
ಹೀಮಧ್ಯದೊಳ್ ೮೧

ರೋಧಮನೈದೆ ನೀಳ್ದಿರಡುವಂ ಪುದಿದೊಪ್ಪುವ ನಂದನಾಳಿಯ ।
ಗ್ರಾಧರಪಕ್ಷ್ಮಪಾಳಿ ಪೊಳೆವಾಲಿ ವಿನಿರ್ಮಲಪೂರವಾರಿಯಾ ॥
ಗೌಧರಣೀವಿಳಾಸಿನಿಯ ಬಳ್ವಳ ನೀಳ್ದಲರ್ಗಣ್ಪೊಲೈದೆ ಸೀ ।
ತಾಧುನಿ ರಂಜಿಕುಂ ನಿಭೃತನೀರಜಕೈರವಮೀನಜಾರವಂ (?) ॥ ೮೨

ಇದಪೂರ್ವಂ ವಾರ್ಧಿಯಡ್ಡಂಪರಿದುದಿಳೆಯೊಳೆಂಬಂತೆ ತಾಂ ಗುಣ್ಪುಪೆಂಪಂ
ಪುದಿದತ್ಯಾಶ್ಚರ್ಯಮೆಂಬಂತುಭಯತಟಹಟದ್ವಜ್ರವೇದೀವಿಳಾಸಾ ।
ಸ್ಪದಮಚ್ಛಸ್ಫಾಟಿಕಾದ್ರಿಪ್ರತಿಮಲಹರಿಕಾಜಾಲಸಂಕೀರ್ಣಮಂತಾ ।
ನದಿ ಚೆಲ್ವಾದತ್ತು ನೀಳಾಚಳತಟಶಶಿಕಾಂತೋಪಳಾರ್ಣಃಪ್ರಪೂರ್ಣಂ ॥ ೮೩

ಬೇರಿಂ ಪೀರ್ದುಂ ತಣಿಯದೆ ।
ನೀರಜಗಂಧಾನುಬಂಧಿಜಳಮಂ ಕೊಂಬಿಂ ॥
ಪೀರಲ್ಕೊಡರಿಸಿದಪುದೆನೆ ।
ತೀರದ್ರುಮವಿತತಿಯೆಱಗಿ ತುಱುಗಿದುದದಱಕೊಳ್ ॥ ೮೪

ಎಂದ ಮೇಲೆ ವಿದೇಹಕ್ಕೆ ಸೌಖ್ಯ–ಸುಸ್ಥಿತಿಗಳಲ್ಲಿ ಇನ್ನಾವ ಭೂಮಿ ಸಮನಾದೀತು? ಹೇಳು. ೮೧. ಹೀಗೆ ಅಪೂರ್ವವಾದ ಸಾರಸಂಪತ್ತಿಗೆ ನೆಲೆವೀಡಾದುದು ಪೂರ್ವ ವಿದೇಹ. ಅದರ ಮಧ್ಯದಲ್ಲಿ – ೮೨. ಎರಡೂ ದಂಡೆಗಳ ಗುಂಟ ಸಾಂದ್ರವಾಗಿ ಬೆಳೆದಿರುವ ತೋಟಗಳ ಸಾಲುಗಳೆ ಕಣ್ಣಿನ ಮೇಲೆವೆ ಹಾಗು ಕೆಳ ಎವೆ ; ಸ್ವಚ್ಛವಾದ ನೀರಿನ ಪ್ರವಾಹವೆ ಉಜ್ವಲವಾದ ಕಣ್ಣಿನ ಗೊಂಬೆ – ಹೀಗೆ ಆ ಭೂಮಿಯೆಂಬ ಚೆಲುವೆಯ ನೀಳವಾದ ಕಣ್ಣೆಂಬಂತೆ ಸೀತಾನದಿಯು ಕೆಂದಾವರೆ ಬೆಳ್ದಾವರೆ ಹಾಗು ಮೀನುಗಳಿಗೆ ಸುಖದ ಬೀಡಾಗಿ ಶೋಭಿಸುವುದು. ೮೩. "ಭೂಮಿಯಲ್ಲೊಂದು ಸಮುದ್ರ ಅಡ್ಡಬಿದ್ದು ಹರಿಯುತ್ತಿದೆ, ಇದೇನು ವಿಚಿತ್ರ!" ಎಂಬಂತೆ ಆಳವಾಗಿಯೂ ಅಗಲವಾಗಿಯೂ, ಎರಡೂ ಬದಿಯ ವಜ್ರಮಯ ತಟಗಳನ್ನು ಸೂಸಿ ಹರಿಯುತ್ತ, ಪರಿಶುಭ್ರ ಸ್ಫಟಿಕ ಪರ್ವತಗಳಂತಹ ತರಂಗ ಮಾಲೆಗಳಿಂದ ತುಂಬಿ, ನೀಲಾಚಲ ತಟದಲ್ಲಿರುವ ಚಂದ್ರಕಾಂತಶಿಲೆಗಳಿಂದ ಒಸರುವ ನೀರನ್ನೂ ಒಳಗೊಂಡು ಆ ನದಿ ಚೆಲುವಾಗಿತ್ತು. ೮೪. ಬೇರುಗಳಿಂದ ಕುಡಿದರೂ ತೃಪ್ತಿಯಾಗದೆ, ತಾವರೆಗಳಿಂದ ಸುಗಂಧವಾದ ಆ ನೀರನ್ನು ತಮ್ಮ ಕೊಂಬೆಗಳಿಂದಲೂ ಹೀರಲು ಪ್ರಯತ್ನಿಸುವುವೊ ಏನೋ ಎಂಬಂತೆ ನದೀ ತೀರದ ಮರಗಳ ಸಾಲು ದಟ್ಟವಾಗಿ ಅದರ ಮೇಲೆ ಬಾಗಿರುವುದು.

ಮತ್ತಮಾ ವಾಹಿನೀಪ್ರವಾಹಮೊಂದೊಂದೆಡೆಯೊಳಂದಂದಿಂಗೆ ಬಂದುಬಂದು ನೀರೂಡುವ ದೇವರಮಣೀವನಚರಕರೀಂದ್ರಕಟನಿಕಟನಿರ್ಯತ್ತಮಾಲಪಲ್ಲವರಸಾನುಕಾರಿದಾನಧಾರಾಪೂರದಿಂ ಕಾಳಿಂದಿಯ ಕೂಡಲಾದಂತೆಯುಂ, ಒಂದೊಂದೆಡೆಯೊಳೆಡೆವಿಡದೆ ಜಳಕ್ರೀಡೆಯಾಡುವ ವಿದೇಹ ವಿಜಯಾರ್ಧ ವಿದ್ಯಾಧರವಿಳಾಸಿನೀಸ್ತನಭರಕಾಶ್ಮೀರಪರಾಗರಾಗದಿಂ ರಕ್ತೋದಾ ನದೀಸಂಭೇದ ಮಾದಂತೆಯುಂ, ಒಂದೊಂದೆಡೆಯೊಳುನ್ನಿದ್ರಭದ್ರಶಾಳನಂದನಪ್ರಚುರಕುಸುಮಾಪಚಯ ವಿಹರಣಪರಿಶ್ರಾಂತಿವಿಪ್ಲವಪ್ಲವನಕೇಳೀದೋಹಳಸುರಕುಮಾರಪ್ರಕರಾನುಲಿಪ್ಯಮಾನ ಸರ್ವಾಂಗೀಣಚಂದನದ್ರವನಿವೇಶದಿಂ ಗಂಗಾಸಂಗಮಮಾದಂತೆಯುಂ ಎಸೆವುದು. ಅಂತು ಮಲ್ಲದೆಯುಂ, ॥ ೮೫

ಸತತಂ ಮಾರ್ಗೋಲ್ಲಂಘನ ।
ಗತಿ ಹಯದೊಳವಗ್ರಹಂ ಮದೇಭಸಮೂಹಾ ॥
ಕೃತಿಯೊಳ್ ಸಮರಾಗಮನ ।
ಸ್ಥಿತಿ ನಲ್ಲರೊಳಲ್ಲದಿಲ್ಲ ಪೆಱತೊಂದೆಡೆಯೊಳ್ ॥ ೮೬

೮೫. ಮತ್ತು ಆ ನದಿಯ ಪ್ರವಾಹವು ಒಂದೊಂದು ಪ್ರದೇಶದಲ್ಲಿ ಆಗಾಗ ಬಂದು ನೀರು ಕುಡಿಯುವ ದೇವವನದ ಗಂಡಾನೆಗಳ ಕುಂಭಸ್ಥಳಗಳಿಂದ ಸೋರುವ ತಮಾಲದೆಲೆಯ ರಸದಂತೆ ಕಪ್ಪಾದ ಮದೋದಕದ ವಿಪುಲ ಧಾರೆಗಳಿಂದಾಗಿ, ಇಲ್ಲಿ ಯಮುನಾನದಿಯ ಸಂಗಮವಾಯಿತೊ ಏನೊ ಎಂಬಂತೆ ತೋರುವುದು; ಒಂದೊಂದು ಕಡೆಗೆ ನಿರಂತರವಾಗಿ ಜಲಕ್ರೀಡೆಯಾಡುತ್ತಿರುವ ವಿಜಯಾರ್ಧಪ್ರದೇಶದ ವಿದ್ಯಾಧರ ಸುಂದರಿಯರ ಮೊಲೆಗಳಿಂದ ತೊಳೆದು ಬಂದ ಕುಂಕುಮ ಪರಾಗದಿಂದಾಗಿ, ಇಲ್ಲಿ ರಕ್ತೋದಾನದಿಯ ಸಂಗಮವಾಯಿತೊ ಏನೋ ಎಂದೆನಿಸುವುದು; ಒಂದೊಂದೆಡೆಯಲ್ಲಿ ಅರಳಿ ನಿಂತ ಭದ್ರಶಾಲವನದಲ್ಲಿ ಪುಷ್ಪಾಪಚಯಕ್ಕೆಂದು ವಿಹಾರ ಮಾಡುತ್ತಿರುವ ದೇವಕುಮಾರರು, ದಣಿವಾರಿಸಿಕೊಳ್ಳಲು ಇದರಲ್ಲಿಳಿದು ಸಂತೋಷದಿಂದ ಆಟವಾಡಲಾಗಿ, ಅವರು ಮೈತುಂಬ ತೊಡೆದುಕೊಂಡಿದ್ದ ಚಂದನದ್ರವ ಈ ನೀರಲ್ಲಿ ಬೆರೆತು, ಇಲ್ಲಿ ಗಂಗಾನದಿಯ ಸಂಗಮವಾಯಿತೋ ಏನೋ ಎಂದೆನಿಸುವುದು. ಅಷ್ಟೇ ಅಲ್ಲದೆ–

೮೬. ಸತತವಾಗಿ "ಮಾರ್ಗೋಲ್ಲಂಘನ"ವೆಂಬುದು (ಹಾದಿಯಲ್ಲಿ ಕುಪ್ಪಳಿಸುತ್ತ ಹೋಗುವಿಕೆ) ಕುದುರೆಗಳ ವಿಷಯದಲ್ಲಿ, "ಅವಗ್ರಹ" ವೆಂಬುದು (ಗಜಸಮೂಹ) ಮದದಾನೆಗಳ ಹಿಂಡೆಂಬ ಅರ್ಥದಲ್ಲಿ "ಸಮರಾಗಮನ" ವೆಂಬುದು (ಸಮ–ರಾಗ–ಮನ ಎಂದರೆ ಸಮಾನವಾದ ಪ್ರೇಮದಿಂದ ಕೂಡಿದ ಮನಸ್ಸು) ಪ್ರಿಯ–ಪ್ರೇಯಸಿಯರಲ್ಲಿ ಉಂಟು. ಆದರೆ ಸತತವಾಗಿ ಪದ್ಧತಿಸಂಪ್ರದಾಯಗಳನ್ನು ಮೀರುವುದು (ಮಾರ್ಗೋಲ್ಲಂಘನ) ಬೈದಾಡುವ ಮಾತು (ಅವಗ್ರಹ), ಯುದ್ಧ ಉಂಟಾಗುವುದು (ಸಮರ+ಆಗಮನ) ಎಂಬರ್ಥಗಳು

ನವಪುತ್ರಪ್ರೀತಿಯಿಂದಂ ರತಿಯೆ ಸಲಪಿದಿಮ್ಮಾವು ಮೀನಾಂಕಿತಂ ಕೇ ।
ತುವಡರ್ಪಾಗಂಗಜಂ ಪರ್ವಿಸಿದ ಲತೆ ಸುಧಾಸೂತಿ ಪೀಯೂಷಧಾರಾಂ ॥
ಬುವೆ ಪೊಯ್ನೀರಾಗೆ ಮುದ್ದಿಂ ಬಳೆಯಿಸಿದೆಳದೆಂಗೆಯ್ದೆ ಮಂದಾನಿಲಂತೋಂ ।
ಟವೆಸಂಗೆಯ್ದಟ್ಟಿಜಿಂ ಪೆರ್ಚಿಸಿದ ವಿಚಕಿಳಂ ರಯ್ಯಮಲ್ಲಲ್ಲಿಗೆಲ್ಲಂ ॥ ೮೭

ನಾಡುಗಳರಸನಿದೆಂಬೊಂ ।
ದಾಡಂಬರದಿಂದೆ ಸತ್ತಿಗೆತ್ತಿದುವೆನೆ ಕ ॥
ಣ್ಗಾಡುಂಬೊಲನಾದುವು ಬೆ ।
ಳ್ಗಾಡಿನೊಳಲರ್ದೆಸೆವ ಬಯಲ ಬೆಳ್ದಾವರೆಗಳ್ ॥ ೮೮

ಪರಿಣಮಿಸಿದುದಿಲ್ಲಿ ಜಳ ।
ಸ್ವರೂಪದಿಂ ತಿಂಗಳದಱ ನುಣ್ಗಱೆ ನೀಳಾಂ ॥
ಬುರುಹತೆಯನಾಂತುವೆನಿಪುವು ।
ಪಿರಿದುಂ ನೆಯ್ದಿಲ್ಗೊಳಂಗಳಾ ಜನಪದದೊಳ್ ॥ ೮೯

ಭೂತಲವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀ ।
ಮಾತೃಕದೇವಮಾತೃಕಮೆ ತದ್ವಿಷಯಂ ನವನಾಳಿಕೇರವಾ ॥
ರ್ಮಾತೃಕಮಿಂದುಕಾಂತಜಳ ಮಾತೃಕಮಿಕ್ಷುಲಸದ್ರಸಾವಳೀ ।
ಮಾತೃಕಮಾಮ್ರ ಕಮ್ರಪರಿಪಕ್ವಫಲೋತ್ಕರಸಾರಮಾತೃಕಂ ॥ ೯೦

ಆ ದೇಶದಲ್ಲಿ ಇಲ್ಲ. ೮೭. ತನ್ನ ಎಳೆಯ ಮಗುವೆಂಬ ವಾತ್ಸಲ್ಯದಿಂದ ರತಿದೇವಿಯೆ ಸಲಹಿದ ಇಮ್ಮಾವು, ತನ್ನ ಮೀನಧ್ವಜಕ್ಕೆ ಊರೆಯಾಗಲೆಂದು ಮನ್ಮಥನೆ ಬೆಳೆಸಿದ ಬಳ್ಳಿ, ತನ್ನ ಅಮೃತವನ್ನು ನೀರಾಗಿ ಸುರಿದು ಚಂದ್ರನು ಅಕ್ಕರೆಯಿಂದ ಬೆಳೆಸಿದ, ಎಳೆಯ ತೆಂಗು, ಮೆಲುಗಾಳಿಯೆ ತೋಟಿಗನಾಗಿ ಕೆಲಸಮಾಡಿ ವೃದ್ಧಿಗೊಳಿಸಿದ ಮಲ್ಲಿಗೆ– ಇವು ಅಲ್ಲೆಲ್ಲ ರಮ್ಯವಾಗಿ ತೋರುವುವು. ೮೮. ನಾಡುಗಳಿಗೆಲ್ಲ ಈ ನಾಡು ಅರಸನೆಂದು ವಿಜೃಂಭಣೆಯಿಂದ ಛತ್ರಗಳನ್ನು ಎತ್ತಿ ಹಿಡಿದುವೊ ಏನೋ ಎಂಬಂತೆ ಬಯಲಲ್ಲಿ ಬೆಳ್ಳಗೆ ಅರಳಿ ನಿಂತ ನೆಲದಾವರೆಗಳು ಕಂಗೊಳಿಸುವುವು. ೮೯. ಚಂದ್ರಬಿಂಬವೆ ಕರಗಿ ಇಲ್ಲಿ ನೀರಾಗಿದೆ; ಅದರ ಮಧ್ಯದಲ್ಲಿದ್ದ ಸುಂದರವಾದ ಕಪ್ಪು ಕಲೆಯೆ ಇಲ್ಲಿ ಕನ್ನೈದಿಲೆಗಳ ಆಕಾರವನ್ನು ತಾಳಿದೆ–ಎಂದೆನಿಸುವಂತೆ ಆ ದೇಶದಲ್ಲಿ ವಿಶಾಲವಾದ ನೈದಿಲೆಕೊಳಗಳು ಶೋಭಿಸುವುವು. ೯೦. ದೇಶಗಳಲ್ಲಿ ಸಾಮಾನ್ಯವಾಗಿ ಮಳೆ ನೀರಿನಿಂದ ಬೆಳೆಯುವ (ದೇವಮಾತೃಕ) ಭೂಮಿಗಳುಂಟು, ನದೀಜಲದಿಂದ ಬೆಳೆಯುವ (ನದೀಮಾತೃಕ) ಭೂಮಿಗಳುಂಟು; ಈ ನಾಡಿನಲ್ಲಿ ತೆಂಗಿನ ನೀರಿನಿಂದ ಬೆಳೆವ, ಚಂದ್ರಕಾಂತಜಲದಿಂದ ಬೆಳೆಯುವ, ಕಬ್ಬಿನ ಹಾಲಿಂದಲೆ ಬೆಳೆಯುವ, ಮಾವಿನಹಣ್ಣುಗಳ ಮಧುರರಸದಿಂದಲೆ

ಲೀಲೆಯಿನದಱ ನೆಲಂ ಪರಿ ।
ಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ॥
ಶಾಲೇಯಂ ವ್ರೈಹೇಯಂ ।
ತೈಲೀನಂ ಕೌದ್ರವೀಣಮೌಮ್ಯಂ ಯವ್ಯಂ ॥ ೬೧

ತಿಳಿದ ತಡಿದಡಿಯ ಮಡಿಗಳ ।
ಜಳದೊಳ್ ರಂಜಿಸುವ ಧಾನ್ಯಮಂಜರಿಯ ನೆೞಲ್ ॥
ಪೊಳೆಯೆ ತೆನೆವೋದುವಿವು ಬೇ ।
ರ್ಗಳಿನೆನಿಪುವು ಬೆಳೆದ ಕೞವೆ ಭೂಸಾರತೆಯಿಂ ॥ ೬೨

ಆಕಳಮಧಾತ್ರಿ ಕಣಿಶಕು ।
ಚಾಕಲಿತಪಯಃಪ್ರತಾನದಿಂ ಬಳೆಯಿಸೆ ನಿ ॥
ರ್ವ್ಯಾಕುಳಮೆನೆ ರಾಜಶುಕಾ ।
ನೀಕಶಿಶುಪ್ರತತಿ ಬಳೆವುದುಚಿತಸ್ಥಿತಿಯಿಂ ॥ ೬೩

ತೊಲಗದೆ ಗಂಧಶಾಲಿವನಮಂ ತಟಜೋತ್ಪಳಗಂಧದೊಳ್ ತಡಂ ।
ಗಲಸಿದ ಕಂಪಿನಾಸೆಗೆ ಮುಸುಂಕಿದ ಭೃಂಗಕದಂಬಕಂ ಕೃಷೀ ॥
ವಲತತಿ ಕೀರಪೋತಪರಿಸಂಖ್ಯೆಯಿನಾವನ ನೀಲಚೇಲಸಂ ।
ಕುಲದೊಳೆ ಕೂಡೆ ಬಾಸಣಿಸಿತೆಂಬಭಿಶಂಕೆಯನುಂಟುಮಾಡುಗುಂ ॥ ೬೪

ಬೆಳೆಯುವ ಸಾರವತ್ತಾದ ಭೂಮಿಗಳುಂಟು. ೬೧. ಹೆಸರು, ಉದ್ದು, ಬಿಳಿನೆಲ್ಲು, ಕೆಂಪುಭತ್ತ, ಎಳ್ಳು, ಹಾರಕ, ಅಗಸೆ ಹಾಗು ಜವೆಗೋಧಿಯನ್ನು ಸೊಗಸಾಗಿ ಬೆಳೆಯುವ ಹೊಸಗದ್ದೆಗಳಿಂದ ಆ ನೆಲ ಕಣ್ಣಿಗೆ ಹಬ್ಬವನ್ನುಂಟು ಮಾಡುವುದು. ೬೨. ತಿಳಿನೀರಿನಿಂದ ತುಂಬಿದ ಮಡಿಗಳಲ್ಲಿ ತೆನೆಗಳ ಪ್ರತಿಬಿಂಬ ಉಜ್ವಲವಾಗಿ ಮೂಡಲಾಗಿ, ಇಲ್ಲಿಯ ಭೂಮಿಯ ಕಸುವಿನಿಂದ ಭತ್ತದ ಸಸಿಗಳು ಬೇರಿನಲ್ಲಿಯೂ ತೆನೆಬಿಟ್ಟಿವೆಯೊ ಏನೊ ಎಂದೆನಿಸುವುದು. ೬೩. ಆ ಭತ್ತದ ಗದ್ದೆಯೆಂಬ ದಾದಿ ತನ್ನ ತೆನೆಗಳೆಂಬ ಮೊಲೆಗಳ ಹಾಲನ್ನುಣಿಸಿ ಬೆಳೆಸಲಾಗಿ, ಅಲ್ಲಿಯ ಅರಗಿಳಿಯ ಮರಿಗಳು ನಿರಾತಂಕವಾಗಿ ಬೆಳೆಯುವುವು. ೬೪. ಪಕ್ಕದಲ್ಲಿ ಅರಳಿದ ತಾವರೆಗಳ ಪರಿಮಳದೊಡನೆ ಕೂಡಿಕೊಂಡು ಇನ್ನಷ್ಟು ಸುವಾಸವಾದ ಸುಗಂಧಿ ನೆಲ್ಲಿನ ಗದ್ದೆಗಳಿಗೆ ಆಸೆಪಟ್ಟು ಬೆಳೆಕಾಣದಂತೆ ದುಂಬಿಗಳು ಮುಸುರಿಕೊಂಡಿರುವವು. ಅವುಗಳನ್ನು ನೋಡಿದರೆ, ಹಿಂಡುಹಿಂಡಾಗಿ ಇರುವ ಗಿಳಿಮರಿಗಳ ಅಂಜಿಕೆಯಿಂದ ಒಕ್ಕಲಿಗರು ಗದ್ದೆಗಳನೆಲ್ಲ ಕರಿಯ ಬಟ್ಟೆಯಿಂದ ಮುಚ್ಚಿಬಿಟ್ಟಿರುವರೊ

ಗಗನದೊಳಲ್ಲಿ ಮಂಡಳಿಸಿ ಬರ್ಪ ಶುಕಾಳಿಯನಂದು ಬೆರ್ಚಿಪು ।
ಜ್ಜುಗದೊಳೆ ನೋೞ್ಪ ಪಾಮರಿಯ ಚಾರುಕಟಾಕ್ಷಮರೀಚಿ ನೀಳ್ದು ಶೋ ॥
ಭೆಗೆ ನೆಲೆಯಾಯ್ತು ತತ್ಕಳಮಭೂರಮೆಗೆತ್ತಿದ ಪಚ್ಚನಪ್ಪ ಸ ।
ತ್ತಿಗೆಗಳವಟ್ಟು ತೋರ್ಪ ಶಶಿಕಾಂತದ ಕಾಂತದ ಕಾವಿದೆಂಬಿನಂ ॥ ೯೫

ಅದಲ್ಲದೆಯುಂ,
ಕೂರಿದುವೆನಿಪೆಲೆಗಳ ಬಾ ।
ಯ್ದಾರೆಗಳೆಲರಲೆಯೆ ತಾಗಿ ತಜಿದುಗುವ ರಸಾ ॥
ಸಾರಮೆ ಕೊಳಗೊಂಡೆಂದುಂ ।
ನೀರೂಟಕ್ಕೆಳಸವಲ್ಲಿ ಕರ್ಬಿನ ಕೆಯ್ಗಳ್ ॥ ೯೬

ಎನಿಸೆ ಸೊಗಯಿಸುವನೇಕಸಸ್ಯಸಂಪತ್ಸಾರಕೇದಾರಲಕ್ಷ್ಮೀಸೀಮಂತಿನಿಯ ಸೀಮಂತರೇಖಾ ವಿಲಾಸಮನುಂಟುಮಾಡುವ ಘಂಟಾಪಥಂಗಳ ಕೆಲದೊಳಧ್ವನ್ಯಜನಮನೋಲತೆಗಡರ್ಪಾದ ಪಾನೀಯ ಮಂಡಪಂಗಳೊಳ್ ೯೭

ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ।
ತೊಲಗಿಸೆ ನೋಡಿ ನುಣ್ಪೊಗರನೀಂಬ ಕುಚದ್ವಯಮೂಲಮಂ ಸಮು ॥
ಜ್ಜ್ವಲಭುಜಮೂಲಮಂ ನೆಱೆಯೆ ಕಂಡೆರ್ದೆಯಾಱೆದೊಡಂ ನಿರೀಕ್ಷಣಾ ।
ಕುಲತೆಯಿನೀಂಟುವರ್ ಪಥಿಕರಾ ಕಲಶಾಂಬುವೆ ಸೀಮೆಯೆಂಬಿನಂ ॥ ೯೮

ಏನೊ ಎಂಬ ಸಂಶಯವುಂಟಾಗುವುದು ೯೫. ಆಕಾಶದಲ್ಲಿ ಸುತ್ತಿ ಬರುವ ಗಿಳಿಗಳ ಹಿಂಡನ್ನು ಬೆದರಿಸಲೆಂದು ಅವುಗಳನ್ನು ನೋಡುತ್ತಿರುವ ಒಕ್ಕಲು ಹೆಣ್ಣುಗಳ ಚೆಲುವಾದ ಕಡೆಗಣ್ಣ ಕಾಂತಿ ನೀಳವಾಗಿ ಹಬ್ಬುವುದು; (ಹಸಿರು ಬಣ್ಣದ ಗಿಳಿಗಳ ಮಂಡಲಗಳೂ, ಈ ಚೆಲುವೆಯರ ಕಣ್ಣಿಂದ ಅವುಗಳವರೆಗೆ ಬೆಳೆದ ಕಡೆಗಣ್ಣಿನ ಬಿಳಿಯ ಕಾಂತಿ ರೇಖೆಗಳೂ ಕೂಡಿಕೊಳ್ಳಲಾಗಿ) ಆ ನೆಲ್ಲುಗದ್ದೆಯೆಂಬ ಲಕ್ಷ್ಮಿಗೆ ಎತ್ತಿ ಹಿಡಿದ ಹಸಿರು ಕೊಡೆಗೆ ಅಳವಡಿಸಿದ ಚಂದ್ರಕಾಂತದ ಕಾವೊ ಏನೊ ಎಂಬಂತೆ ಆ ದೃಷ್ಟಿಪ್ರಭೆ ಕಂಗೊಳಿಸುವುದು. ಅದಲ್ಲದೆ ೯೬. ಹರಿತವಾದ ಗರಿಗಳ ಬಾಯಂಚು ಗಾಳಿಯಲ್ಲಿ ಅಲೆದಾಡಿ ತಾಗಿದೊಡನೆ (ಸಿಪ್ಪೆ) ಹರಿದು ಚಿಮ್ಮುವ ರಸದ ಸೋನೆ ಇಳಿದಿಳಿದು ತಳದಲ್ಲಿ ಮಡುಗಟ್ಟುವುದು; ಆ ರಸವೆ (ಸಾಕಷ್ಟಾಗುವುದರಿಂದ) ಕಬ್ಬಿನ ತೋಟಗಳು ಬೇರೆ ನೀರನ್ನು ಬಯಸುವುದಿಲ್ಲ. ೯೭. ಹೀಗೆ ಶೋಭಿಸುವ ಹೇರಳವಾದ ಸಸ್ಯಸಂಪತ್ತಿನಿಂದ ತುಂಬಿದ ಗದ್ದೆಗಳೆಂಬ ಲಕ್ಷ್ಮೀದೇವತೆಯು ಬೈತಲೆಗೆರೆಯಂತೆ ರಾಜಮಾರ್ಗಗಳು ಶೋಭಿಸುವುವು; ಅವುಗಳ ಪಕ್ಕದಲ್ಲಿ (ಅಲ್ಲಲ್ಲಿಗೆ) ದಾರಿಕಾರರ ಮನೋರಥಕ್ಕೆ ನೆಲೆಗಳಾದ ಅರವಟ್ಟಿಗೆಯ ಮಂಟಪಗಳಿರುವುವು; ಅವುಗಳಲ್ಲಿ – ೯೮. ಬಿಂದಿಗೆಯನ್ನೆತ್ತಿ ನೀರು ಹನಿಸುತ್ತಿರುವ ಚೆಲುವೆಯ ತೋಳಿನ ಚಲನೆಯಿಂದ ಆಕೆಯ ಸೆರಗು ಸರಿಯಲಾಗಿ ನುಣ್ಣಗೆ ಕಂಗೊಳಿಸುವ ಅವಳ ಸ್ತನಮೂಲಗಳನ್ನು, ಕಾಂತಿಮಯವಾದ ಕಂಕುಳಗಳನ್ನೂ ಚೆನ್ನಾಗಿ ಕಂಡು ದಾರಿಕಾರರು, ತಮ್ಮ

ಮತ್ತಮಲ್ಲಿ
ಜಳಪಾನಚ್ಚಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾ ।
ಜಳಮಂ ಕಣ್ಗಳಿನೀಂಟಿ ಮಂದಪರಿಹಾಸಾಳಾಪಮಾಳಾಮೃತಾ ॥
ವಳಿಯಂ ಕರ್ಣದಿನೀಂಟಿ ಭಾವರತಕೇಳೀಸೌಖ್ಯಪೀಯೂಷಸಂ ।
ಕುಳಮಂ ಚಿತ್ತದಿನೀಂಟಿ ತದ್ವಿಷಯದಧ್ವನ್ಯರ್ ಮನಂಬೆರ್ಚುವರ್ ॥ ೯೯

ಒಂದೊಂದಱ ಸಿರಿಯಂ ನಡೆ ।
ದಂದೀಕ್ಷಿಸಲೆಂದು ಬಂದುದೆನೆ ಚಂದ್ರಿಕೆ ಪಾ ॥
ತಂದಲೆನೀಪಂದರದೊಳ್ (?) ।
ನಿಂದೂರ್ಗಳದೇಂ ಬೆಡಂಗನವಟಯಿಸಿದುವೋ ॥ ೧೦೦

ಅಂತನೂನಶೋಭಾವಿಭವಾನುಷಂಗಿಯಾದ ಮಂಗಳಾವತೀಮಧ್ಯದೇಶದೊಳ್ ॥ ೧೦೧

ಸುರುಚಿರಮಪ್ಪ ತದ್ವಿಷಯನೂತ್ನ ಕುಶೇಶಯಪತ್ರಮಾಳೆಯಂ ।
ತಿರೆ ಬಳಸಿರ್ದನೇಕಪುರಮಾಲೆಯ ಮಧ್ಯದೊಳೈದೆ ಲೀಲೆಯಿಂದ ॥
ಸಿರಿಗೆಡೆಯಾಗಿ ತಾಂ ತಳೆದ ಕರ್ಣಿಕೆಯಂದದೆ ರತ್ನಸಂಚಯಂ ।
ಪುರಮೆಸೆದಿರ್ದುದಾತ್ತಮಣಿವಜ್ರಸುಪುಂಜಿತರತ್ನಸಂಚಯಂ ॥ ೧೦೨

ನೆಲೆವೀಡು ರತಿಗೆ ತಿಱುವಾ ।
ಯ್ದಲೆವೀಡಂಗಜಶರಕ್ಕೆ ಕಾಮನ ಕಿಸುಗ ॥
ಣ್ಮಲವೀಡು ವಿಯೋಗಿಗೆ ಸಂ ।
ಕಲೆವೀಡು ವಸಂತದಂತಿಗುಪನಗರವನಂ ॥ ೧೦೩

ಬಾಯಾರಿಕೆ ತೀರಿದರೂ, ಅವುಗಳನ್ನು ಇನ್ನಷ್ಟು ನೋಡಬೇಕೆಂಬ ಹಂಬಲದಿಂದ ಕಲಶದ ನೀರು ಪೂರ್ತಿ ಮುಗಿಯುವವರೆಗೆ ಕುಡಿಯುತ್ತಲೆ ಇರುವರು. ಮತ್ತು ಅಲ್ಲಿ – ೯೯. ನೀರು ಕುಡಿಯುವ ನೆವದಿಂದ, ನೀರು ಹನಿಸುವ ಪ್ರಣಯಿನಿಯ ಶೃಂಗಾರಲೀಲೆಯು ಅಮೃತವನ್ನು ಕಣ್ಣುಗಳಿಂದ ಕುಡಿದು, ಮೆಲುನಗೆಯು ಸವಿಮಾತುಗಳೆಂಬ ಸುಧೆಯನ್ನು ಕಿವಿಗಳಿಂದ ಕುಡಿದು ಭಾವರತಿಯ ಸುಖವೆಂಬ ಅಮೃತರಸವನ್ನು ಮನಸ್ಸಿನಿಂದ ಕುಡಿದು ಆ ರಾಜ್ಯದ ದಾರಿಕಾರರು ಸಂತೋಷಪಡುವರು. ೧೦೦. ಒಂದೊಂದರ ಸೌಂದರ್ಯವನ್ನು ನೋಡಲೆಂದು ಬೆಳುದಿಂಗಳೆ ಬಂದಿತೊ ಏನೊ ಎಂಬಂತೆ ಇರುವ ಊರುಗಳು ಎಂತಹ ಬೆಡಗನ್ನು ಉಂಟು ಮಾಡಿದವು! ["ಪಾಡಂದನೀ ಪಂದರದೊಳ್" ಎಂಬುದರ ಅರ್ಥ ಸ್ಪಷ್ಟವಿಲ್ಲ] ೧೦೧. ಹೀಗೆ ಸಂಪೂರ್ಣ ಸೌಂದರ್ಯ ವೈಭವದಿಂದ ತುಂಬಿದ ಮಂಗಳಾವತೀ ಮಧ್ಯದೇಶದಲ್ಲಿ – ೧೦೨. ಬಹು ಸುಂದರವಾದ ಆ ರಾಜ್ಯವೆಂಬ ಕಮಲದ ದಳಗಳಂತೆ ಅನೇಕ ಪಟ್ಟಣಗಳು ಕಂಗೊಳಿಸುವುವು: ಅವುಗಳ ನಡುವೆ ಕಮಲದ ಬೀಜಕೋಶದಂತೆ ಲಕ್ಷ್ಮಿಗೆ ನೆಲೆವೀಡಾಗಿ ರತ್ನಸಂಚಯವೆಂಬ ಪುರವು ಅನರ್ಘವಾದ ರತ್ನ ರಾಶಿಗಳಿಂದ ತುಂಬಿ ಶೋಭಿಸುವುದು ೧೦೩. ಅದರ ಉಪನಗರದ ವನವು ರತಿದೇವಿಗೆ ನಿವಾಸಸ್ಥಾನ; ಕಾಮನು ಬಾಣಗಳನ್ನು ಹೂಡುವುದಕ್ಕೆ ಅಣಿಗೊಳಿಸಿಟ್ಟ

ಮದನಂ ಕೊಂಬುಗೊಳಲ್ಕೆ ನಚ್ಚುವ ನವಾಮ್ರಂ ಕಂತು ಚಾಪಕ್ಕೆಚಿ ।
ತ್ತದೊಳಾಳ್ದಿರ್ಪ ಸಿತೇಕ್ಷುಮಾಲೆ ವಿಷಮಾಸ್ತ್ರಂ ಪಂಚಬಾಣಕ್ಕೆ ಮಾ ॥
ಣದೆ ಕಣ್ಗಾದಿರಿಸಿಟ್ಟ ಮಲ್ಲಿಗೆ ಮನೋಜಂ ಸ್ವಚ್ಛವಾಃಕೇಳಿಸ ।
ಮ್ಮದಕೆಂದೋವಿದ ಪದ್ಮಷಂಡಮೆಸೆಗುಂ ತನ್ನಂದನೋಪಾಂತದೊಳ್ ॥ ೧೦೪

ಅಗಜಾನವರತಶೋಭಾ ।
ಧಿಗತಂ ಭೃತಕಾಲಕಂಠಮುರುಶಿಖಿನಯನಂ ॥
ನಗರೋಪವನಂ ಭವನಂ ।
ನಗುವುದು ರಕ್ಷೀಕೃತಸ್ಮರಂ ಸವಿಶಾಖಂ ॥ ೧೦೫

ಎಂಬಿನಂ ನಯನಶೋಭಾವಳಂಬನಂಗಳಾದ ಬನಂಗಳೊಳ್ ವಿರಹಿಜನ ಮನೋದಾರು ವಿದಾರಣದಕ್ಷಕಾಮತಕ್ಷಕತ್ರ ಕಚನಿಚಯದಂತಗುರ್ವುವೆತ್ತೆಲೆಯ ಪರ್ವಿನಿಂ ಸುರ್ವುಗೊಂಡು ಬಾಟಿಕ್ವೀಲಿಯಾಗಿ ಬಳಸಿದ ಕೇತಕೀಪಜ್ತೆಗಳುಂ, ಪಥಿಕಮೃಗಮೃಗಯಾಪರಿಶ್ರಾನ್ತಕಂತುರಾಜತೃ ಷಾಪಕರ್ಷಣಾರ್ಥಂ ವನದೇವತೆಯರಮೃತಸಾರವಾರಿಯಂ ಪಚ್ಚಿವರಲ ಕರಗಂಗಳೊಳ್ ತೀವಿ ತೆಂಬೆಲರ ಪೊಯ್ಲಿನಿಂ

ಬಿಲ್ಲಿನ ಹೆದೆ; ವಿಯೋಗಿಗಳಿಗೆ ಕಾಮನ ಕಣ್ಣು ಕೆಂಡ ಕಾರುವ ಕ್ಷೇತ್ರ; ವಸಂತವೆಂಬ ಆನೆಯನ್ನು ಕಟ್ಟಿ ನಿಲ್ಲಿಸುವ ಸಂಕೋಲೆ, ೧೦೪. ಮನ್ಮಥನು ಆಸರೆ ಪಡೆಯಲೆಂದು ನೆಚ್ಚಿದ ಹೊಸಮಾವು, ತನ್ನ ಬಿಲ್ಲಿಗೆ ಇದು ಸರಿಯಾದುದೆಂದು ಕಾಮನು ಮನಸ್ಸಿಟ್ಟು ಕಾಯ್ದಿರಿಸಿದ ಬಿಳಿಕಬ್ಬುಗಳ ಸಾಲು, ತನ್ನ ಐದು ಬಾಣಗಳಿಗೂ ಬೇಕೆಂದು ಮದನನು ಕಣ್ಗಾವಲಾಗಿ ಇಟ್ಟುಕೊಂಡ ಮಲ್ಲಿಗೆ, ತನ್ನ ಸೊಗಸಾದ ಜಲಕೇಳಿಗೆ ಉತ್ತಮವೆಂದು ಮನ್ಮಥನು ಕಾಪಾಡಿಕೊಂಡು ಬಂದ ತಾವರೆಗೊಳ–ಇವೆಲ್ಲವೂ ಆ ನಂದನದಲ್ಲಿ ಕಂಗೊಳಿಸುವುವು. ೧೦೫. ಈ ಬನವು ಶಿವನನ್ನು ನೋಡಿ ಹೀಯಾಳಿಸಿ ನಗುವುದು. ಏಕೆಂದರೆ ಶಿವನು ಈ ಬನದಂತೆ "ಅಗಜಾನವರತ ಶೋಭೆ" (೧. ಪಾರ್ವತಿಯೊಡನೆ ಕೂಡಿ ಯಾವಾಗಲೂ ಶೋಭೆ; ೨. ಮರಗಳಿಂದ ಯಾವಾಗಲೂ ಉಂಟಾಗಿರುವ ಚೆಲುವು) ಯುಳ್ಳವನು, "ಭೃತಕಾಲ ಕಂಠ" (೧. ಕಪ್ಪಾದ ಕೊರಳುಳ್ಳವನು, ೨. ಗುಬ್ಬಿಗಳಿಂದ ತುಂಬಿರುವುದು), "ಉರು ಶಿಖಿನಯನ" (೧. ಉಗ್ರವಾದ ಬೆಂಕಿಗಣ್ಣುಳ್ಳವನು. ೨. ಶ್ರೇಷ್ಠವಾದ ನವಿಲುಗರಿಗಳ ಕಣ್ಣುಗಳಿಂದ ತುಂಬಿದುದು); ಮತ್ತು "ಸವಿಶಾಖ" (೧. ಷಣ್ಮುಖನೊಡನೆ ಇರುವವನು. ೨. ವಿಸ್ತೀರ್ಣವಾದ ಕೊಂಬೆಗಳುಳ್ಳುದು) ; ಹೀಗಿದ್ದರೂ ಮನ್ಮಥನಿಗೆ ನಾನು ರಕ್ಷಣೆಯೊದಗಿಸಿರುವೆನು (ಶಿವನಿಗೆ ಅದನ್ನು ಮಾಡಲಾಗಲಿಲ್ಲ). [ಶ್ಲೇಷಾರ್ಥಗಳಲ್ಲಿ ಮೊದಲನೆಯದು ಶಿವನಿಗೂ, ಎರಡನೆಯದು ವನಕ್ಕೂ ಅನ್ವಯಿಸುವುದು]. ೧೦೬. ಹೀಗೆ ನಯನ ಮನೋಹರವಾದ ಶೋಭೆಯುಳ್ಳ ಬನಗಳಲ್ಲಿ ವಿರಹಿಗಳ ಮನಸ್ಸೆಂಬ ಮರವನ್ನು ಕೊಯ್ಯುವುದಕ್ಕೆ ಸಮರ್ಥವಾದ ಮನ್ಮಥನ ಕರಗಸದ ಅಲಗುಗಳಂತೆ ಭೀಕರವಾದ ಗರಿಗಳನ್ನು ಹಬ್ಬಿಸಿಕೊಂಡು ಸುತ್ತುಗೊಂಡು ಬೇಲಿಯಾಗಿ ನಿಂತ ಕೇದಗೆಯ ಸಾಲುಗಳು; ದಾರಿಕಾರರೆಂಬ ಜಿಂಕೆಗಳನ್ನು ಬೇಟೆಯಾಡಿ ದಣಿದ

ತಣ್ಪುವಡೆಯಲೆಂದು ನೆಱಪಿದಂತಿರ್ದ ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ, ವಿವಿಧನಿಜ ಕುಜವ್ರಜದ ಬೆಳಸಿಂಗೆಡೆಯಾದ ಗಗನಲಕ್ಷ್ಮಿಗೆತ್ತಿದುದ್ದಂಡಚಂದ್ರಕಚ್ಛತ್ರಷಂಡದಂತೆ ಸಂದಣಿಸಿ ಬಳ್ವಳ ಬೆಳೆದೆಳಗೌಂಗಿನ ಸಸಿಯ ಸಾಲ್ಗಳುಂ, ತಳಿರ ಕಳಿಕೆಯ ಮಿಡಿಯ ಪೂಗುಡಿಯ ಪಣ್ಣ ದೋರೆವಣ್ಣ ಬೆರಕೆವಣ್ಣದೊಳ್ದಳಿರ ಪುದುವಿನಿಂ ಬೆಡಂಗುವಡೆದು ಕಾಮುಕಮಿಥುನತತಿಗ ಪೂರ್ವಶ್ರೇಷ್ಠಿಯಾಗಿ ಮದನಂ ಸಮೆದ ನಂದನಭೋಗಭೂಮಿಯ ರತ್ನಮಯಭೂಷಣಾಂಗತರು ಗಳಂತಿರ್ದ ಮಾಕಂದಾನೋಕಹಂಗಳುಂ, ಮಂಜೀರಿಕಾಪುಂಜ ಮಂಜುಶಿಂಜಾನಮೊದವುವಿನಮೊದೆವ ಪದದೊಳೊಳಕೆಯ್ದು ಸುದತಿಯರ ಮೃದುಪದಾಲಕ್ತಕರಸವಿಸರಮಂ ತಳಿರ ಬೆಳಗೆಂಬ ನೆಪದಿಂ ಮಗುಳುಗುಟ್ವಂತೆ ಕೆಂಕಮಾದ ಕಂಕೆಲ್ಲೀವಲ್ಲರಿಗಳುಂ, ಮದನಮಂಗಳಶಾತಕುಂಭ ಕುಂಭಂಗಳಂತಳವಿಗಗ್ಗಳ ಮಾಗಿ ಬೆಳೆದೊಳಗೆ ತೀವ್ಪಿದ ಸರಸಕೇಸರಪ್ರಸರಭಾರದಿಂ ತೂರಿ ನೆಲನಂ ತಾಗುವ ತೋರಗಾಯ್ಗಳಿಂ ಜನನಿಯಪ್ಪವನಿಯಂ ಮುದ್ದಿಂ ಮುಂಡಾಡುವಂತಿರಿರ್ದ ಮಾತುಲುಂಗಸಂಘಾತಂಗಳುಂ, ಪರಿಮ ಳಾತಿಲಂಪಟಷಟ್ಚರಣಪಟಲಪಾತಕುಟ್ಮಲಾವಳೀಸ್ಯಂದಮಾನಮಕರಂದಬಿಂದುಸಂದೋಹಜನಿತದುರ್ದಿ ನಂಗಳಿಂ ವಿರಹ ವಿಧುರ ಪೌರಸೌಂದರೀಬೃಂದ ವದನಾರವಿಂದಂಗಳಂ ಕಂದಿಸುವ ವಿಕಟಪಾಟಲೀ

ಕಾಮರಾಜನ ಬಾಯಾರಿಕೆಯನ್ನು ಹಿಂಗಿಸುವುದಕ್ಕಾಗಿ ವನದೇವತೆಯರು ಅಮೃತ ರಸವನ್ನು ಮರಕತರತ್ನದ ಕಲಶಗಳಲ್ಲಿ ತುಂಬಿ ದಕ್ಷಿಣದ ಗಾಳಿಯಿಂದ ತಂಪಾಗಲೆಂದು ಕೂಡಿಟ್ಟಿರುವರೊ ಏನೊ ಎಂಬಂತೆ ಎಳನೀರುಗಳ ದಟ್ಟವಾದ ಗೊಂಚಲುಗಳಿಂದ ಬಾಗಿರುವ ತೆಂಗಿನಮರಗಳು; ಬಗೆಬಗೆಯಾದ ತನ್ನ ಮರಗಳ ಸಮೂಹ ಅಭಿವೃದ್ಧಿ ಪಡೆಯಲು ಆಸ್ಪದವಾದ ಆಕಾಶಲಕ್ಷ್ಮಿಗೆ (ಭೂಮಿದೇವಿ) ಎತ್ತಿ ನಿಲ್ಲಿಸಿದ ಉನ್ನತವಾದ ಸತ್ತಿಗೆಗಳ ಕಾವುಗಳೊ ಏನೊ ಎಂಬಂತೆ ದಟ್ಟಣಿಸಿ ಬೆಳೆದ ಎಳೆಯಡಕೆಯ ಸಸಿಗಳ ಸಾಲುಗಳು; ಚಿಗುರು, ಮೊಗ್ಗು, ಮಿಡಿ, ಹೂಗೊಂಚಲು, ದೋರೆ, ಹಣ್ಣು – ಇವೆಲ್ಲವುಗಳ ಮಿಶ್ರವರ್ಣವಾದ ಸುಂದರ ತಳಿರ ತೊಂಗಲುಗಳಿಂದ ಚೆಲುವಾಗಿ ನಿಂತು, – ಕಾಮುಕರ ಜೋಡಿಗಳಿಗೆ ಮನ್ಮಥನೆ ನಿರ್ಮಿಸಿಕೊಟ್ಟ ನಂದನವೆಂಬ ಭೋಗಭೂಮಿಯ ರತ್ನಮಯ ಭೂಷಣಾಂಗ ಕಲ್ಪವೃಕ್ಷಗಳೊ ಏನೊ ಎಂಬಂತೆ – ಕಂಗೊಳಿಸುವ ಮಾವಿನ ಮರಗಳು; ಅಂದುಗೆಯ ಮಂಜುಳ ಜಣಜಣನಾದದೊಡನೆ ಸುಂದರಿಯರು ಒದೆಯುವ ಸಂದರ್ಭದಲ್ಲಿ ಅವರ ಮೃದುವಾದ ಪಾದಗಳಿಂದ ತಮಗೆ ಅಂಟಿಕೊಂಡ ಅಲತಿಗೆ ರಸವನ್ನು ತಮ್ಮ ಚಿಗುರುಗಳ ಕಾಂತಿಯೆಂಬ ನೆಪದಲ್ಲಿ ಮರಳಿ ಹೊರದೂಡುತ್ತಿರುವುವೊ ಏನೊ ಎಂಬಂತೆ ಕೆಂಪಾಗಿ ಕಂಗೊಳಿಸುವ ಅಶೋಕದ ಬಳ್ಳಿಗಳು; ಮನ್ಮಥನ ಸುವರ್ಣಮಯ ವಾದ ಮಂಗಲಕಲಶಗಳಂತೆ ಅತಿಶಯವಾಗಿ ಬೆಳೆದು ಒಳಗೆ ತುಂಬಿದ ಕೇಶರವರ್ಣದ ರಸಭಾರದಿಂದ ಬಾಗಿ ನೆಲಕ್ಕೆ ತಾಕುತ್ತಿರುವ ದೊಡ್ಡ ದೊಡ್ಡ ಕಾಯಿಗಳಿಂದ ತಾಯಿ ಯಾದ ಭೂಮಿಯನ್ನು ಪ್ರೀತಿಯಿಂದ ಮುಂಡಾಡುತ್ತಿರುವುವೊ ಏನೊ ಎಂಬಂತೆ ತೋರುವ ಮಾದಳದ ಸಮೂಹಗಳು; ಪರಿಮಳಲಂಪಟತೆಯಿಂದ ಮುತ್ತಿಕ್ಕುವ

ವಿಟಪಿಗಳುಂ, ಚಾತಕ ಪೋತಕಪ್ರತಾನಚೇತೋವೃತ್ತಿಯೊಳಪೂರ್ವಜಲಧರಕರ್ಬುರಾಭ್ರವಿಭ್ರಮಮನೊಳಪೊಯ್ದು ಕಟ್ಟಿಲೆಯ ಕಾರಾಗಾರದಂತೆ ಬಿತ್ತರಂಬೆತ್ತು ಬಿಚ್ಚತಂ ಪರ್ವಿದ ತಮಾಳ ಮಾಳಾಪರಂಪರೆಗಳುಂ, ನಿಷ್ಪ್ರತ್ಯೂಹಮೋಹರಸಪರವಶತೆಯಿಂ ನೆರೆವ ನಗರದಂಪತೀಶತೋತ್ತಾರ ರಣಿತಕುಹರಣಸೂತ್ರಮಮಂ ಕಲ್ತು ಪರಿವಿಡಿಗೆಯ್ವ ಪಾರಾವತಪ್ರಕರಕ್ಕೆ ಮಕರಕೇತುಶಾಸ್ತ್ರಾಭ್ಯಾಸ ಪ್ರಾಸಾದಂಗಳಾದ ಮಣಿಮಯಕೃತಕಗಿರಿಗಳುಂ, ಸಂಪನ್ನವನಮಹತ್ತರಕನ್ಯಕೆಯರಟ್ಟೆಯಿಂ ಸಮೆದೊಡೇಜೆಯಾದಕಿಂಜಲ್ಕಪುಂಜದಿರ್ತಡಿಯೊಳಂ ಮಡಲ್ತ ಮರುಗದ ಮಡಿಯ ಗಾಡಿಯನೊಳಕೆಯ್ದು ಮತ್ತಿನ ಮಣಲ ಪುಳಿನದೊಳ್ ನಿರವಿಸಿದ ದೀವದಂಚೆವಜೆಯಿಂದಂಚಿರಮಲ್ಲದೆಸೆದು ಪಾಸಿಸಲ್ಕೆ ಪಸರಿಸಿದ ಪಲವುಮಲರ ನೆರವಿಯ ನೀರ್ಪೂಗಳೊಳಗೆ ಪರಿವ ಚಂದನರಸಪ್ರವಾಹಕೃತಕವಾಹಿನಿಗಳುಂ, ರತಿಯ ಮದನನ ಮದುವೆಯೊಳ್ ಪೊಸಯಿಸಿದ ಪಸುರ್ವಂದರಂತೆ ಮಿಸುಪ ಮೃದ್ವೀಕಾಲತೆಯ ನಾಗಲತೆಯ ನವಮಾಲಿಕಾಲತೆಯ ಜಾತೀಲತೆಯ ಯೂಥಿಕಾಲತೆಯ ವಿಚಕಿಳಲತೆಯ ಮಂಡಪಂಗಳುಂ, ಮನೋಹರಂಗಳೆನಿಸಿರ್ದುವು. ಅಲ್ಲದೆಯುಂ ೧೦೬

ಪಣ್ಗಾಯ್ ತೀವಿದ ಬಾಟಿಯ ।  
ಬಿಣ್ಗೊನೆ ನಿಜಭರದಿನಿರದೆ ಬಾಟ್ವೇಲಿಯ ಪಿಂ ॥  
ದಣ್ಗಾಗಿ ಜೋಲ್ದು ಪಥಿಕರ ।  
ಕಣ್ಗೊಳ್ಪಂ ಮನಕೆ ಬಯಕೆಯಂ ಪುಟ್ಟಿಸುಗುಂ ॥ ೧೦೭

ದುಂಬಿಗಳ ತಾಕಲಾಟದಿಂದ ಮೊಗ್ಗುಗಳು ಒಡೆದು ಹನಿಯುತ್ತಿರುವ ರಸದ ಮಳೆಗಳಿಂದ ವಿರಹಾಕುಲೆಯರಾದ ಪೌರಸುಂದರಿಯರ ಮುಖಕಮಲಗಳನ್ನು ಕೊರಗಿಸುವ ವಿಗಡ ಪಾದರಿಮರಗಳು; ಮರಿ ಚಾತಕಗಳ ಮನಸ್ಸಿಗೆ ಅಪೂರ್ವವಾದ ಕಾರ್ಮೋಡದ ಭ್ರಾಂತಿಯನ್ನೊದಗಿಸಿ ಕತ್ತಲೆಯ ಕಾರಾಗೃಹದಂತೆ ವಿಸ್ತಾರವಾಗಿ ಹಬ್ಬಿಕೊಂಡ ತಮಾಲವೃಕ್ಷಗಳ ಸಮುದಾಯಗಳು ; ನಿರಾತಂಕವಾದ ಮೋಹದಿಂದ ಪರವಶರಾಗಿ ಕೂಡಿಕೊಳ್ಳುವ ನಗರದ ನೂರಾರು ದಂಪತಿಗಳ ಕೂಟದಲ್ಲಿ ಹೊರಡುವ ಸುರತ ಧ್ವನಿಗಳನ್ನು ಕಲಿತುಕೊಂಡು, ಅವುಗಳನ್ನು ಪಾರಿವಾಳಗಳು ಪಡಿನುಡಿಯುತ್ತಿರುವುವು: ಹೀಗೆ ಪಾರಿವಾಳಗಳಿಗೆ ಕಾಮಶಾಸ್ತ್ರವನ್ನು ಕಲಿಸುವ ಮಹಲುಗಳಾದ ಕೃತಕ ಕ್ರೀಡಾಶೈಲಗಳು; ತೋಟಗಳನ್ನು ನೋಡಿಕೊಳ್ಳುವ ಕನ್ಯೆಯರು ಆಸಕ್ತಿಯಿಂದ ನಿರ್ಮಿಸಿದ ಪುಷ್ಪ ಪರಾಗದ ಏರಿಯ ಎರಡೂ ಪಕ್ಕಗಳಲ್ಲಿ ಹಬ್ಬಿದ ಮರುಗದ ಮಡಿಗಳ ಚೆಲುವನ್ನು ಒಳಗೊಂಡು, ಮುತ್ತಿನ ಮರಳ ಹರವಿನಲ್ಲಿ ಇರಿಸಿದ ದೀವದ ಮರಿಹಂಸಗಳಿಂದ ಅತಿಶಯವಾಗಿ ಕಂಗೊಳಿಸಿ, ಅಲ್ಲಿ ಹರಡಿದ ಹಲವಾರು ಹೂಗಳೊಡನೆ ತಾವರೆಗಳ ಮಧ್ಯದಲ್ಲಿ ಹರಿಯುವ ಗಂಧದ ರಸದ ಕೃತಕ ನದಿಗಳು; ಕಾಮರತಿಯರ ಮದುವೆಗೆಂದು ನಿರ್ಮಿಸಿದ ಹಸಿರು ಚಪ್ಪರದಂತೆ ಶೋಭಿಸುವ ದ್ರಾಕ್ಷಿಯ ಬಳ್ಳಿಯ, ವೀಳ್ಯದೆಲೆ ಬಳ್ಳಿಯ, ಜಾಜಿ ಬಳ್ಳಿಯ, ಮಲ್ಲಿಗೆ ಬಳ್ಳಿಯ, ವಿಚಕಿಳವೆಂಬ ಮೊಲ್ಲೆಬಳ್ಳಿಯ ಮಂಟಪಗಳು – ಮನೋಹರವಾದುವು. ಅದಲ್ಲದೆ ೧೦೭. ಹಣ್ಣುಗಾಯಿಗಳಿಂದ ತುಂಬಿದ ಬಾಳೆಯ ಬಲವಾದ ಗೊನೆಗಳು ಭಾರವಾಗಿ ಬೇಲಿಯ ಹೊರಭಾಗಕ್ಕೆ

ವಿಧಿ ಬೀಜಪೂರಸಾರ್ಥಾ ।
ಭಿಧಾನಮಂ ಮಾತುಲುಂಗದೊಳ್ ನಿರವಿಸಿದಂ ॥
ಮುಧೆಯಾಗಾವಿರ್ದಂತೆಂ ।
ದಧರಿಸಿ ನಗುವಂತೆ ಬಿರಿದ ದಾಡಿಮಮೆಸೆಗುಂ ॥ ೧೦೮

ಇಲ್ಲಿಯದೆ ಚೈತ್ರರಥದೊ ।
ಳ್ಪೆಲ್ಲಮುಮೆಂದಜನೆ ಹಂಸಪದನಂ ತಪ್ಪೆಂ ॥
ದಲ್ಲಿಟ್ಟನೆನಿಮವಾ ಬನ ।
ದಲ್ಲೊಕ್ಕ ಪರಾಗದಲ್ಲಿ ಹಂಸಪದಂಗಳ್ ॥ ೧೦೯

ಅಭಿಸರದುನ್ಮದಭ್ರಮರಸಂಕುಳಝುಂಕೃತಿವಾವದೂಕನಾ ।
ತ್ತಭಯವಿಯೋಗಿನೀಜನಸಖೀಜನವೀಜನಪದ್ಮಪತ್ರಿಕಾ ॥
ಪ್ರಭವಸಮೀರಮಾಂಸಳನನಂತಲತಾಳಿಲತಾಂತವಾಂತಸೌ ।
ರಭಭರಮಂಥರಂ ಸೊಗಯಿಕುಂ ಪುರನಂದನಮಂದಮಾರುತಂ ॥ ೧೧೦

ಅಲರ್ಗಣೆದಿಂಬಿದೆಂಬುಜದ ಮೊಗ್ಗೆಯ ಮೂಡಿಗೆ ನೀಳ್ದ ಕೇತಕೀ ।
ದಳದಲ ಗ್ರಾಮದೊಳ್ದಳಿರ ಕೈಪೊಡೆ ಕರ್ಬಿನ ಬಿಲ್ ತದಗ್ರದೊಳ್ ॥
ಮಿಳಿರ್ವ ತಮಾಳಪಲ್ಲವದ ಚಾಮರದುಪ್ಪರವಟ್ಟಮೊಪ್ಪೆ ಬಂ ।
ದಲೆದಿಸುವೊಂ ಬನಂಬಿಡಿದು ಪಾಂಥರನಾ ಪರಿಪಂಥಿ ಮನ್ಮಥಂ ॥ ೧೧೧

ಬಾಗಿ ನಿಂತು ಹಾದಿಕಾರರ ಕಣ್ಣಿಗೆ ಸುಖವನ್ನೂ ಮನಸ್ಸಿಗೆ ಬಯಕೆಯನ್ನೂ ಹುಟ್ಟಿಸುವುವು. ೧೦೮. 'ಬೀಜಪೂರ'ವೆಂಬ ಹೆಸರಿಗೆ ಅನ್ವರ್ಥಕವಾಗಿ ನಾವಿದ್ದರೂ, ಮಾದಳದ ಹಣ್ಣಿಗೆ ಬ್ರಹ್ಮನು ವ್ಯರ್ಥವಾಗಿ ಆ ಹೆಸರನ್ನು ಕೊಟ್ಟನಲ್ಲವೆ? ಎಂದು ಅಪಹಾಸ್ಯ ಮಾಡಿ ನಗುವಂತೆ ಬಿರಿದುಕೊಂಡ ದಾಳಿಂಬೆಗಳು ಅಲ್ಲಿ ಕಂಗೊಳಿಸುವುವು. ೧೦೯. "(ಕುಬೇರನ) 'ಚೈತ್ರರಥ'ವೆಂಬ ಬನದ ಸೌಂದರ್ಯವೆಲ್ಲವೂ ಇಲ್ಲಿಯೆ ಇದೆ : ಆದುದರಿಂದ ಆ ಬನವನ್ನು ಕುಬೇರಲೋಕದಲ್ಲಿ ಇಟ್ಟುದು ತಪ್ಪು : ಅದು ಇಲ್ಲಿರಬೇಕು" ಎಂದು ಸೂಚಿಸಲು ಬ್ರಹ್ಮನೇ ಹಾಕಿದ ಹಂಸಪಾದ ಚಿಹ್ನೆಗಳಂತೆ, ಆ ಬನದಲ್ಲಿ ಹರಡಿದ ಪುಷ್ಪಪರಾಗದಲ್ಲಿ ಹಂಸಪಕ್ಷಿಗಳ ಹೆಜ್ಜೆಗಳು ಮೂಡಿರುವುವು ೧೧೦. ಪ್ರಣಯಕ್ಕಾಗಿ ಸಂಚರಿಸುವ ಉನ್ಮತ್ತ ದುಂಬಿಗಳ ಗುಂಜಾರವದಿಂದ ಶಬ್ದಮಯನಾಗಿ, ಭಯಾಕುಲೆಯರಾದ ವಿರಹಿಣಿಯರಿಗೆ ಅವರ ಸಖಿಯರು ಬೀಸುವ ತಾವರೆಯೆಲೆಯ ಬೀಸಣಿಕೆಯ ಗಾಳಿಯಿಂದ ಪರಿಪುಷ್ಟನಾಗಿ, ಅಸಂಖ್ಯವಾದ ಬಳ್ಳಿಗಳ ಹೂಗಳಿಂದ ಹೊರಡುವ ಪರಿಮಳಭಾರವನ್ನು ಹೊತ್ತುಕೊಂಡು ನಡೆಯಲಾರದೆ, ಮೆಲ್ಲಮೆಲ್ಲಗೆ ಹೆಜ್ಜೆಯಿಡುತ್ತಾ ಆ ಪುರೋಪವನದ ಮಾರುತನು (ಗಾಳಿಯು) ರಂಜಿಸುವನು. ೧೧೧. ಹೂಬಾಣಗಳಿಂದ ತುಂಬಿದ ತಾವರೆಮೊಗ್ಗಿನ ಬತ್ತಳಿಕೆ, ನೀಳವಾದ ಕೇದಗೆ ಗರಿಯ ಖಡ್ಗ, ಮಾವಿನ ಎಲೆಯ ತಳಿರಿಂದ ರಚಿಸಿದ ಮುಂಗೈಯ ರಕ್ಷಾಕವಚ, ಕಬ್ಬಿನ ಬಿಲ್ಲು, ಅದರ ತುದಿಯಲ್ಲಿ ಅಲೆದಾಡುವ ತಮಾಲದ ಚಿಗುರಿನ ಚಾಮರ,-

ಧೃತನಾನಾವರ್ಣಪರ್ಣಚ್ಛವಿಸಮುದಯಸಂದರ್ಶನೀಯಂ ದಳತ್ಪು ।
ಷ್ಪತತಿಘ್ರಾಣೀಯಮುದ್ಯತ್ಫಲರಸಪಿಸರಸ್ವಾದನೀಯಂ ದ್ವಿರೇಫೋ ॥
ದಿತನಾದಾಕರ್ಣನೀಯಂ ಸಿಕತಿಲತಲಶಯ್ಯಾಚಯಸ್ಪರ್ಶನೀಯಂ ।
ಸತತಂ ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಳ್ಪುದೆಂದುಂ ॥ ೧೧೨

ಅಂತವಿಶ್ರಾಂತವಿಳಸನವಿಶ್ರಮಣಭೂಮಿಯಾಮುದ್ಯಾನಮಾಳಾವಳಯದಿಂದೊಳಗೆ ॥ ೧೧೩

ಸುರನಗಮಂ ನಿಮಿರ್ಚಿ ತೆರೆಸುತ್ತಿದನಲ್ತೆ ಸರೋಜಸಂಭವಂ ।
ಪುರಕೆನೆ ಚೆಲ್ವನಪ್ಪ ನವಹಾಟಕನಿರ್ಮಿತಮಪ್ಪ ಕೋಂಟೆ ಮು ॥
ಟ್ಟಿರೆ ಮುಗಿಲಂ ರಥಕ್ಕೆ ಪಥಮಿಲ್ಲದೆ ಬಿಟ್ಟೆರಡುಂ ಕೆಲಂಗಳಿಂ ।
ಚರಿಯಿಪನಲ್ಲದಂದು ರವಿಗೆತ್ತಣದುತ್ತರದಕ್ಷಿಣಾಯನಂ ॥ ೧೧೪

ಎನ್ನಂತೆ ರತ್ನವಿತತಿಗೆ ।
ತಾನ್ನೆಲೆಯಾಯ್ತೆಂಬ ಸಮಗುಣಪ್ರಣಯದಿನಾ ॥
ಮುನ್ನೀರ್ ಬಂದಪ್ಪಿದುದೆನೆ ।
ತನ್ನ ಗರಮಸಮಲಪರಿಖೆ ಬಳಸಿದುದೆತ್ತಂ ॥ ೧೧೫

ಕಳಹಂಸೆಗಳುಂ ಫೇನಂ ।
ಗಳುಮಬ್ಜಪರಾಗಮುಂ ನಿಮಜ್ಜನ್ನಗರೀ ॥

ಇವುಗಳಿಂದ ಶೋಭಿತನಾದ ಮನ್ಮಥನು ಬನದಿಂದ ಬನಕ್ಕೆ ಅಲೆಯುತ್ತ ಬಂದು ದಾರಿಕಾರರನ್ನು ಅಡ್ಡಗಟ್ಟಿ ತನ್ನ ಬಾಣಗಳಿಂದ ಹೊಡೆಯುವನು. ೧೧೨. ಬಗೆಬಗೆಯ ಬಣ್ಣಗಳುಳ್ಳ ಎಲೆಗಳ ಸೊಬಗಿನಿಂದ ಕಣ್ಣಿಗೆ ಸುಖಕರ; ಹೂಗಳ ಸಮುದಾಯದಿಂದ ಮೂಗಿಗೆ ಹಿತಾವಹ; ಉತ್ತಮವಾದ ರಸಭರಿತ ಹಣ್ಣುಗಳಿಂದ ನಾಲಿಗೆಗೆ ಆಪ್ಯಾಯಮಾನ; ದುಂಬಿಗಳ ಮಧುರನಾದದಿಂದ ಕಿವಿಗೆ ಆನಂದಕರ; ಮರಳಿನ ಹಾಸಿಗೆಯಿಂದ ಸ್ಪರ್ಶೇಂದ್ರಿಯಕ್ಕೆ ಸೊಗಸು – ಹೀಗೆ ಆ ತೋಟವು ಅಲ್ಲಿಯ ಪೌರರಿಗೆ ಪಂಚೇಂದ್ರಿಯಗಳೂ ತಣಿಯುವಂತಹ ಸುಖವನ್ನು ಒದಗಿಸುವುದು ೧೧೩. ಹೀಗೆ ಅಪಾರವಾದ ವಿಲಾಸಕ್ಕೆ ನೆಲೆಯಾದ ಉದ್ಯಾನಗಳ ಸಾಲುಗಳನ್ನು ದಾಟಿ, ಅದರಿಂದ ಒಳಗೆ–೧೧೪. ಬ್ರಹ್ಮನು (ಸುವರ್ಣಮಯವಾದ) ಮೇರುಪರ್ವತವನ್ನು ಎಳೆದು ಹಿಗ್ಗಿಸಿ ಈ ಪಟ್ಟಣಕ್ಕೆ ಸುತ್ತು ಕಟ್ಟಿದನೊ ಏನೊ ಎಂಬಂತೆ ಹೊಸಚಿನ್ನದ ಕೋಟೆಯು ಆಕಾಶವನ್ನು ಮುಟ್ಟಿಕೊಂಡು ನಿಂತುದರಿಂದ, ತನ್ನ ರಥಕ್ಕೆ ಹಾದಿ ಕಾಣದೆ ಸೂರ್ಯನು ಎಡಕ್ಕೊಮ್ಮೆ ಬಲಕ್ಕೊಮ್ಮೆ ಸುತ್ತಾಡುವನು; ಅದಿಲ್ಲದಿದ್ದರೆ ಸೂರ್ಯನಿಗೆ ಉತ್ತರಾಯಣ ದಕ್ಷಿಣಾಯನಗಳು ಎಲ್ಲಿಂದ ಬರಬೇಕು? ೧೧೫. "ನನ್ನಂತೆ ಈ ಪಟ್ಟಣವೂ ರತ್ನಸಮೂಹಕ್ಕೆ ನೆಲೆವೀಡಾಯಿತು; ಇದು ಗುಣದಲ್ಲಿ ನನಗೆ ಸಮಾನ" ಎಂಬ ಪ್ರೀತಿಯಿಂದ ಸಮುದ್ರ ಬಂದು ಇದನ್ನು ಅಪ್ಪಿಕೊಂಡಿತೊ ಏನೊ ಎಂಬಂತೆ ಆ ಪುರವನ್ನು ಪರಿಶುದ್ಧವಾದ ಅಗಳ್ತೆ ಬಳಸಿಕೊಂಡಿರುವುದು. ೧೧೬. ಕಲಧ್ವನಿಯ ಹಂಸಪಕ್ಷಿಗಳೂ, ನೊರೆಯೂ, ತಾವರೆಗಳ ಪರಾಗವೂ, ಸ್ನಾನಮಾಡುತ್ತಿರುವ ಪೌರನಾರಿಯರ ಅಂಗರಾಗವೂ

ಲಳನಾಂಗರಾಗಮುಂ ಬೆರ ।
ಸಿ ಳೀಳೆಯಂ ತಳೆದುವದಱ ನಿರ್ಮಳಜಳದೊಳ್ ॥ ೧೧೬

ಬಳಸಿದುದು ಮೇರುಶಂಕಾ ।
ಕುಳಿತಂ ಜ್ಯೋತಿರ್ವಿಮಾನತತಿಯೆನೆ ಬಳಸಿ ॥
ತ್ತೆಳವಳಿಕಿನ ಮುಗಿಲಟ್ಟಳೆ ।
ವಳಗಂ ಮನಮೆಳಸಿ ಬಳಸಿ ನಿಲೆ ಘರ್ಮಜಳಂ ॥ ೧೧೭

ಪರಿವ ರವಿರಥರಥಾಂಗದ ।
ಖರನೇಮಿಯೊಳೊಂದಿ ತಳೆದ ಪೊಂದೆನೆಗೊನೆಯಿಂ ॥
ದೆ ರಜಂ ನಿಮಿರ್ದಪುವೆನಿಪುವು ।
ನಿರವಿಸಿದಟ್ಟಳೆಯ ನಿಮಿರ್ದ ಕೆಂಬಟಯಿಗೆಗಳ್ ॥ ೧೧೮

ತಾರಗೆಗಳ್ ತೆನೆಗೊನೆಗಳೊ ।
ಳೋರಂದದೆ ಬೆಳಪ ಸೊಡರ್ಗಳಂತಿರೆ ತತ್ಪ್ರಾ ॥
ಕಾರಂ ಭ್ರಮಮಂ ಪಡೆವುದು ।
ಪೌರರ್ಗಿರುಳಿರುಳಪೂರ್ವದೀಪೋತ್ಸವದಾ ॥ ೧೧೯

ಜನವಿರಹಿತಮಿಲ್ಲೊಂದೆಡೆ ।
ಜನಮುಂ ಧನಹೀನಮಿಲ್ಲ ಧನಮುಪಭೋಗಾ ॥

ಬೆರೆತುಕೊಂಡು ಅದರ ಶುಭ್ರವಾದ ನೀರಿನಲ್ಲಿ ಶೋಭೆಯನ್ನು ಹೊಂದುವುವು. [ತಿಳಿ ನೀರಿನ ಹಿನ್ನೆಲೆಯಲ್ಲಿ ಈ ಮಿಶ್ರವರ್ಣಗಳು ಎದ್ದು ಕಂಡು ಶೋಭಿಸುವುವು] ೧೧೭. ಇದು ಸುಮೇರುಪರ್ವತವೆಂಬ ಭ್ರಾಂತಿಯಿಂದ ಜ್ಯೋತಿರ್ವಿಮಾನಗಳು ಬಂದು ಸುತ್ತುಗಟ್ಟಿಕೊಂಡು ನಿಂತುವೊ ಏನೋ ಎಂಬಂತೆ ಮುಗಿಲು ಮುಟ್ಟುವಂತೆ ಎತ್ತರವಾದ ಉಪ್ಪರಿಗೆಗಳು ಸ್ಫಟಿಕಮಯವಾಗಿ, ಬಯಸಿ ಬಂದು ನಿಂತವರ ಬೆವರನ್ನು ಆರಿಸುತ್ತಾ ಸಾಲು ಸಾಲಾಗಿ ಸುತ್ತಲೂ ಕಂಗೊಳಿಸುವುವು ೧೧೮. ಸಾಗಿ ಹೋಗುತ್ತಿರುವ ಸೂರ್ಯರಥದ ಗಾಲಿಗಳ ಘರ್ಷಣೆಯಿಂದಾಗಿ ಕೋಟೆಯ ಚಿನ್ನದ ತೆನೆಗಳಿಂದ ಏಳುವ ಧೂಳಿಯೊ ಏನೋ ಎಂಬಂತೆ ಅಟ್ಟಳೆಗಳ ಮೇಲೆ ಹಾರಾಡುವ ಕೆಂಪು ಧ್ವಜಗಳು ಕಂಗೊಳಿಸುವುವು. ೧೧೯. ನಕ್ಷತ್ರಗಳು ತೆನೆಯ ತುದಿಯಲ್ಲಿ ಹಚ್ಚಿಟ್ಟ ದೀಪಗಳಂತೆ ಇರಲಾಗಿ, ಆ ಪ್ರಾಕಾರದ ಗೋಡೆಯು ಪೌರನಿವಾಸಿಗಳಿಗೆ ಇದೊಂದು ಅಪೂರ್ವವಾದ ದೀಪೋತ್ಸವವೊ ಏನೋ ಎಂಬ ಭ್ರಮೆಯುಂಟಾಗುವುದು. ೧೨೦. ಆ ಪಟ್ಟಣದಲ್ಲಿ ನಿರ್ಜನವಾದ ಸ್ಥಳಗಳಿಲ್ಲ; ಧನಿಕರಲ್ಲದ ಜನವಿಲ್ಲ; ಉಪಭೋಗಕ್ಕೆ ಬಳಸದ ಧನವಿಲ್ಲ

ರ್ಜನಶೂನ್ಯಮಿಲ್ಲ ಭೋಗಮು ।
ಮನಿರಂತರಮೆನಿಪುದೆಂದುಮಿಲ್ಲಾ ಪುರದೊಳ್ ॥ ೧೨೦

ಇವು ಭವ್ಯಜನಸಮೂಹಾ ।
ರ್ಣವಗಾಮಿಗಳೆನಿಪ ಪುಣ್ಯವಾಹಿನಿಗಳ್ ಸಂ ॥
ಭವಿಸಿದ ಕುಲಗಿರಿಗಳೆನಿಸು ।
ವುವು ರತ್ನೋತ್ತುಂಗಶೃಂಗಚೈತ್ಯಗೃಹಂಗಳ್ ॥ ೧೨೧

ಪಸರಿಪ ಚಂದ್ರಿಕೆಯಿಂದಿರು ।
ಳೊಸರ್ದು ಸಲಿಲಾಭಿಷೇಕಮಂ ತಮ್ಮೊಳ್ ರಂ ॥
ಜಿಸುವ ಜಿನಪ್ರತಿಮಾಳಿಗೆ ।
ಪೊಸಯಿಪುವವಜೆಂದುಕಾಂತಮಣಿಕೂಟಂಗಳ್ ॥ ೧೨೨

ಅಮಲಜ್ಞಾನಮಯರ್ ದೇ ।
ಹಮಾತ್ರಪರಿಕರರತರ್ಕ್ಯಸಾಮರ್ಥ್ಯರ್ ನಿ ॥
ರ್ಮಮರೆನಿಪ ಮುಮುಕ್ಷುಗಳು ।
ತ್ತಮರೊಪ್ಪುವರವಜ ಪಟ್ಟಶಾಳಾವಳಿಯೊಳ್ ॥ ೧೨೩

ಅದಲ್ಲದೆಯುಂ

ಪುರವನಿತಾಜನಂ ರುಚಿರಹರ್ಮ್ಯಗೃಹಾಗ್ರತಳಂಗಳಲ್ಲಿ ಗಾ ।
ವರಿಸುವ ಪಂಚಮಂಬೊರೆದ ನುಣ್ಚರಮಂ ನಸುಗೇಳ್ದು ಸೋಲ್ತು ಕ ॥

ನಿರಂತರವಲ್ಲದೆ ಭೋಗವಿಲ್ಲ. ೧೨೧. ಭಕ್ತಜನವೆಂಬ ಸಮುದ್ರಕ್ಕೆ ಹೋಗಿ ಕೂಡುವ ಪುಣ್ಯ ನದಿಗಳಿಗೆ ಉಗಮಸ್ಥಾನವಾದ ಕುಲಪರ್ವತಗಳೊ ಏನೊ ಎಂಬಂತೆ ಉಜ್ವಲವಾದ ರತ್ನ ಪ್ರಭೆಗಳಿಂದ ಕೂಡಿದ ಉನ್ನತವಾದ ಜಿನಬಸದಿಗಳು ಕಂಗೊಳಿಸುವುವು. ೧೨೨. ಅವುಗಳ ಚಂದ್ರಕಾಂತಶಿಲೆಯ ಶಿಖರಗಳು ಬೆಳ್ದಿಂಗಳಲ್ಲಿ ನೀರೊಡೆದು ತಮ್ಮೊಳಗೆ ಶೋಭಿಸುವ ಜಿನವಿಗ್ರಹಗಳಿಗೆ ರಾತ್ರಿಯ ಜಲಾಭಿಷೇಕವನ್ನು ರಚಿಸುವುವು. ೧೨೩. ಆ ದೇವಾಲಯದ ಪಟ್ಟಶಾಲೆಗಳಲ್ಲಿ ಪರಿಶುದ್ಧವಾದ ಜ್ಞಾನವುಳ್ಳವರೂ, ತಮ್ಮ ದೇಹವಲ್ಲದೆ ಬೇರಾವ ಪರಿಕರವಿಲ್ಲದವರೂ (ಅಕಿಂಚನರಾದ ದಿಗಂಬರಸಂನ್ಯಾಸಿಗಳೂ), ಊಹಾತೀತವಾದ ಸಾಮರ್ಥ್ಯಶಾಲಿಗಳೂ, ನಿರಹಂಕಾರಿಗಳೂ ಎನಿಸುವ ಮೋಕ್ಷಸಾಧಕರು ಒಪ್ಪುವರು. ಅದಲ್ಲದೆ- ೧೨೪. ಆ ಪುರದ ವನಿತೆಯರು ರಾತ್ರಿಕಾಲದಲ್ಲಿ ಸುಂದರವಾದ ಮಹಲುಗಳ ಮೇಲುಮಚ್ಚದಲ್ಲಿ ಪಂಚಮ ಸ್ವರದಿಂದ ಗಾಯನ ಮಾಡುತ್ತಿರಲಾಗಿ, ಆ ಧ್ವನಿಮಾಧುರ್ಯಕ್ಕೆ ಮರುಳಾಗಿ ಅರೆಗಣ್ಣು ಮುಚ್ಚಿಕೊಂಡು ಜಿಂಕೆಯೊಂದು ನೆಗೆಯುತ್ತ ಅಲ್ಲಿಗೆ ಬರುವುದು; ಚಂದ್ರನು ಅದನ್ನು ಎತ್ತಿಕೊಂಡು ತನ್ನ

ಣ್ಮರಲರೆಮುಚ್ಚೆ ಕಂಡು ಕೊಣಕಿಟ್ಟಪುದಲ್ಲಿಗೆ ಗೋರಿಗೊಂಡದೊಂ ।
ದೆರಳೆಯನಲ್ಲಿರುಳ್ ಶಶಿ ತೊಡರ್ಚುವನಾತ್ಮವಟಪ್ರರೋಹದೊಳ್ ॥ ೧೨೪

ಹರಿನೀಲಚ್ಛದರುಜ್ಞ್ಮಂ ।
ಜರಿಶಬಳಿತಹರ್ಮ್ಯದುಪರಿತಳದೊಳ್ ಕೇಕಾ ॥
ವಿರುತಿಯಿನಲ್ಲದೆ ನಿಟ್ಟೆಸ ।
ಲರಿದಾ ಪುರವರದ ಗೃಹಕಳಾಪಿಕಳಾಪಂ ॥ ೧೨೫

ತೊಲಗುವ ಪಳಿಕಿನ ಮಾಡಂ ।
ಗಳೊಳಿನಿಯರೊಳೊಂದೆ ಪೊಱಗೆ ಮೆಱೆವುದು ಕೇಳೀ ॥
ವಿಳಸನಮೆಂದೊಲ್ಲದೆ ಬಿ ।
ಟ್ಟೆಳಸುವುದಬಳಾಳಿ ಧವಳಗೃಹದೋವರಿಯೊಳ್ ॥ ೧೨೬

ಅಭ್ರಂಕಷಹರ್ಮ್ಯಾಗ್ರತ ।
ಳಭ್ರಾಜಿತಮತ್ತವಾರಣಸ್ಥಿತಕಾಂತಾ ॥
ವಿಭ್ರಮನಿರೀಕ್ಷಣೋಪಗ ।
ತಭ್ರಮದಿಂದಮರಸಮಿತಿಗಾಯ್ತನಿಮೇಷಂ ॥ ೧೨೭

ಬಗೆಯದೊಳಕೆಯ್ದುದೆನ್ನಯ ।
ಪಗೆಯುಂ ಸಂಪತ್ತಿಯಂ ನಿರಂತರಮೆಂಬು ॥

ಎದೆಯಲ್ಲಿರುವ ಆಲದ ಮರದಲ್ಲಿ ಕಟ್ಟಿ ಬಿಡುವನು. (ಚಂದ್ರನ ಮಧ್ಯದಲ್ಲಿರುವ ಕಪ್ಪುಕಲೆಯನ್ನು ವಟವೃಕ್ಷವೆಂದೂ, ಜಿಂಕೆಯೆಂದೂ ಹೇಳುವುದು ಕವಿಸಮಯ). ೧೨೫. ಇಂದ್ರನೀಲ ರತ್ನಗಳ ಪ್ರಕಾಶದಿಂದ ನೀಲವಾದ ಮಹಲುಗಳ ಮೇಲ್ಭಾಗದಲ್ಲಿ ಸಾಕಿದ ನವಿಲುಗಳು ನಿಂತಿರುವುವು : ಅವುಗಳ ಧ್ವನಿಯಿಂದ ಅವುಗಳನ್ನು ಗುರುತಿಸಬಹುದೆ ವಿನಾ ನೋಡಿ ತಿಳಿಯುವುದಕ್ಕೆ ಆಗದು. [ನವಿಲುಗಳ ಬಣ್ಣವೂ, ಇಂದ್ರನೀಲದ ಬಣ್ಣವೂ ಒಂದೇ ಆಗಿರುವುದರಿಂದ ಒಂದರೊಳಗೊಂದು ಬೆರೆತು ಹೋದವೆಂಬುದು ಅಭಿಪ್ರಾಯ. ಇದು ಮೀಲಿತವೆಂಬ ಅಲಂಕಾರ]. ೧೨೬. ಥಳಥಳಿಸುವ ಸ್ಫಟಿಕದ ಉಪ್ಪರಿಗೆಗಳಲ್ಲಿ ಪ್ರಿಯಕರರನ್ನು ಕೂಡಿಕೊಂಡರೆ, ತಮ್ಮ ಶೃಂಗಾರಲೀಲೆಯೆಲ್ಲವೂ ಹೊರಗೆ ತೋರಿಬಿಡುವುದು ಎಂದು ಅದನ್ನು ಮೆಚ್ಚದೆ, ಅಲ್ಲಿಯ ಸ್ತ್ರೀಯರು ಒಳಕೋಣೆಯನ್ನೆ ಅಪೇಕ್ಷಿಸುವರು. ೧೨೭. ಮುಗಿಲನ್ನು ಮುಟ್ಟುವ ಉಪ್ಪರಿಗೆಗಳ ಬಾಗಿಲ್ವಾಡದ ಮುಂದೆ ನಿಂತ ಸ್ತ್ರೀಯರ ಒಯ್ಯಾರವನ್ನು ಕಣ್ಣರಳಿಸಿ ನೋಡುತ್ತ ನಿಂತು ನಿಂತು, ದೇವತೆಗಳಿಗೆ ರೆಪ್ಪೆ ಹೊಯ್ಯುವುದೆ ಇಲ್ಲವಾಯಿತು. [ದೇವತೆಗಳ ಕಣ್ಣುಗಳು ರೆಪ್ಪೆ ಹೊಯ್ಯುವುದಿಲ್ಲ ಎಂಬ ನಂಬಿಕೆಯಿದೆ]. ೧೨೮. "ನನ್ನ ಕಡುವೈರಿಯಾದ 'ಸಂಪತ್ತು' ಎಂಬುದಕ್ಕೆ ಸದಾಕಾಲ ಆಶ್ರಯವಿತ್ತಿತು ಈ ವ್ಯಾಪಾರಿಗಳ ಅಂಗಡಿಸಾಲು"

ಭ್ಬೆಗದಿಂ ವಿಪತ್ತಿ ನೋಡದು ।
ನಗರವಣಿಗ್ವಾಟಕೋಟಿಯಂ ಮಱಿಕೆದೆಂದುಂ ॥ ೧೨೮

ಮತ್ತಮುತ್ಪಾದಿತಘ್ರಾಣೇಂದ್ರಿಯಪ್ರಾಪಣಂಗಳಪ್ಪ ಗಂಧಾಪಣಂಗಳೊಳ್ ೧೨೯

ಚಳನಯನಾಂಶುಚಂದ್ರಿಕೆಯಿನೊಯ್ಯನೊಸರ್ತಱಿಪಕ್ಕೆ ತಾನೆ ನೀ ।
ರ್ದಳಿಯೆ ಪಳಚ್ಚನಪ್ಪ ಶಶಿಕಾಂತದ ಸಣ್ಣಿಗೆ ನೋಡಲೀಯದ ॥
ವ್ವಳಿಸೆ ಕುಚದ್ವಯಂ ಪದನಿನುಣ್ಮುವ ಸುಯ್ವೆಲರ್ಗಂಪುಗಳ್ ದಳಂ ।
ಗಳನಧಿವಾಸಿಸುತ್ತುಮಿರೆ ಘಟ್ಟಿ ಮಗುಳ್ಚುವುದಂಗನಾಜನಂ ॥ ೧೩೦

ಜನವಕ್ತ್ರೋನ್ಮುಕ್ತನಿರ್ಯದ್ಧಿಮಪರಿಮಳತಾಂಬೂಲಸಂಸಂಗಿಭೃಂಗೀ ।
ಸ್ವನದಿಂ ಪ್ರತ್ಯಂತರಾಜಾತ್ಮಜವಿಭವಸಮಾಕರ್ಣಿತೋತ್ತಾನಗಾನ ॥
ಧ್ವನಿಯಂ ವಾಃಪಾನಮುಕ್ತದ್ವಿರದನಿಗಡನಿರ್ಘೋಷದಿಂ ಸಂಚರತ್ಪೌ ।
ರನಿತಂಬಿನ್ಯಂದುಕಾರಾವದಿನತಿಮುಖರಂ ತತ್ಪುರೀಪಟ್ಟಮಾರ್ಗಂ ॥ ೧೩೧

ತಳಿರ್ದೊಂಗಲ್ ಪುದಿದಂದದಿಂದಿರೆ ತಳಪ್ರದ್ಯೋತಿಯಿಂದುದ್ಗಮೋ ।
ಜ್ಜ್ವಳದಾಮಂ ತದುದಾರಸೌರಭಚಯಂ ಸುಯ್ಗಂಪಿನಿಂದಾವಗಂ ॥
ದಳವೇಱುತ್ತಿರೆ ಪೂತ ಜಂಗಮಲತಾಸಂದೋಹಮೆಂಬಂತೆ ಕ ।
ಣ್ಗೊಳಿಸುತ್ತಿರ್ಪುದು ಮಾಲೆವೂವಳೆದ ಮಾಳಾಕಾರನಾರೀಜನಂ ॥ ೧೩೨

ಎಂಬ ರೋಷದಿಂದ ವಿಪತ್ತು ಎಂಬುದು ಮರೆತು ಕೂಡ ಆ ಬೀದಿಯತ್ತ ಕಣ್ಣು ಹಾಯಿಸುವುದಿಲ್ಲ. ೧೨೯. ಮತ್ತು ಘ್ರಾಣೇಂದ್ರಿಯಕ್ಕೆ (ಮೂಗಿಗೆ) ಸಂತೋಷ ವನ್ನುಂಟು ಮಾಡುವ ಗಂಧದಂಗಡಿಗಳಲ್ಲಿ– ೧೩೦. ಚಂಚಲವಾದ ಕಣ್ಣುಗಳ ಬೆಳಕೆಂಬ ಬೆಳ್ದಿಂಗಳಿಂದ ಚಂದ್ರಕಾಂತದ ಒರಳು ನೀರೊಡೆದು ಅರೆಯುವ ಗಂಧಕ್ಕೆ ನೀರೂಡುವುದು; ಆದರೆ ಅದನ್ನು ನೋಡಬೇಕೆಂದರೆ ಉಬ್ಬಿದ ಕುಚಗಳು ಅಡ್ಡಬರುವುವು; ಹದವಾಗಿ ಬರುವ ಬಾಯುಸಿರಿನ ಪರಿಮಳವು ಗಂಧದ ದಳಗಳಿಗೆ ಇನ್ನಷ್ಟು ಸುವಾಸನೆಯನ್ನು ಒದಗಿಸುತ್ತಿರುವುದು;– ಹೀಗೆ ಅಲ್ಲಿಯ ಸ್ತ್ರೀಯರು ಗಂಧವನ್ನು ಅರೆಯುತ್ತಿರುವರು. ೧೩೧. ಜನರು ಉಗುಳಿದ ಕರ್ಪೂರ ತಾಂಬೂಲದ ಪರಿಮಳಕ್ಕೆ ಎರಗಿ ಗುಂಯಿಗುಡುತ್ತಿರುವ ಹೆಣ್ದುಂಬಿಗಳ ಗುಂಜಾರವದಿಂದಲೂ, ಪಕ್ಕದಲ್ಲಿರುವ ರಾಜಕುಮಾರರ ವೈಭವೋತ್ಸವದಲ್ಲಿ ಕಿವಿಗಿಂಪಾಗಿ ಹೊಮ್ಮುತ್ತಿರುವ ಗಾಯನಧ್ವನಿಯಿಂದಲೂ, ನೀರುಕುಡಿದು ಹೊರಟ ಆನೆಗಳ ಕಾಲ ಸರಪಳಿಯ ಘೋಷದಿಂದಲೂ, ನಡೆದಾಡುತ್ತಿರುವ ಪೌರಾಂಗನೆಯರ ಅಂದುಗೆಗಳ ಜಣಜಣತ್ಕಾರದಿಂದಲೂ ಆ ಪಟ್ಟಣದ ರಾಜಮಾರ್ಗಗಳು ತುಂಬ ಶಬ್ದಮಯವಾಗಿರುವುವು. ೧೩೨. ತಮ್ಮ ಅಂಗೈಗಳ ಕಾಂತಿಯಾದ ಕೆಂದಳಿರು ಮುಚ್ಚಿದಂತೆ ತೋರುವ ಉತ್ತಮವಾದ ಹೂವಿನ ಹಾರಗಳನ್ನು ತಮ್ಮ ಉಸಿರಿನ ಸುಗಂಧದಿಂದ ಅವುಗಳ ಪರಿಮಳ ಇನ್ನಷ್ಟು ಹೆಚ್ಚುವಂತೆ ಮಾಡುತ್ತ ಹಿಡಿದುಕೊಂಡು ನಿಂತ ಮಾಲೆ

ಅಂತು ರಾಜಿಸುವ ರಾಜಮಾರ್ಗದಾದಲೆಯೊಳ್ ॥ ೧೩೩

ಮಕರಾಂಕಧ್ವಜಮಾಳಿಕಾಪ್ರಕಟಿತಪ್ರದ್ಯುಮ್ನಪಕ್ಷಕ್ರಮಂ ।
ಶುಕಶಾರಿಪ್ರಕರಪ್ರಕಾಶಿತರತವ್ಯಾಪಾರಚಾತುರ್ಯಮು ॥
ತ್ಸುಕಭೂಪಾಲಭುಜಂಗತಾಡಿತಹಟದ್ಘಂಟಾರವಾವಿಷ್ಕೃತಾ ।
ಧಿಕಸೌಭಾಗ್ಯಮದೇಂ ಬೆಡಂಗಮರ್ದುದೋ ಗಾಣಿಕ್ಯಸೌಧೋತ್ಕರಂ ॥ ೧೩೪

ಒಳಗೆ ವಿಟರಂ ಸ್ಮರಂ ದೋ ।
ರ್ವಳದೊರ್ವಣೆ ಬಂದಿವಿಡಿದು ಬಿಡದಿಸೆ ಸರಲು ॥
ಚ್ಚಳಿಪವೊಲುಣ್ಮುವುವಲ್ಲಿ ।
ರ್ಪೆಳವೆಂಡಿರ ನಯನರುಚಿ ಗವಾಕ್ಷಾವಳಿಯಿಂ ॥ ೧೩೫

ಮತ್ತಮಾ ಪುರಂ ಪದ್ಮರಾಗಾರುಣೀಕೃತನಿಶಾಂತಮಾಗಿಯುಂ ಅಸ್ತಮಿತರಾಜಲೀಲಾವಿಲಾಸ ಮಲ್ತು; ಅಗಣ್ಯಪುಣ್ಯಜನನಿವೇಶಮಾಗಿಯುಂ ಸದೋಷಾಚರಪ್ರಚಾರಮಲ್ತು; ಸದಾನಭೋಗಾನ್ವಿತ ಮಾಗಿಯುಂ ಅಕುಲೀನವೃತ್ತಿಪ್ರವರ್ತನಮಲ್ತು ; ಅನೇಕಭೂಮಿಕಾಶ್ರಯಮಾಗಿಯುಂ ಕ್ಷಣಭಂಗಿ

ಗಾರ್ತಿಯರು ನಡೆಯಲು ಕಲಿತ ಹೂಬಳ್ಳಿಗಳಂತೆ ಕಂಗೊಳಿಸುತ್ತಿರುವರು. ೧೩೩. ಹಾಗೆ ಶೋಭಿಸುವ ರಾಜಮಾರ್ಗದ ಆಚೆಯ ತುದಿಯಲ್ಲಿ – ೧೩೪. ಮಕರ ಚಿಹ್ನೆಯ ಧ್ವಜಗಳ ಸಾಲುಗಳಿಂದ, ತಾನು ಮನ್ಮಥನ ಪಕ್ಷವೆಂದು ಪ್ರಕಟಿಸುತ್ತ, ಸಾರಿದ ಗಿಳಿ–ಶಾರಿಕಗಳ ಮುಖಗಳಿಂದ ರತಿವ್ಯಾಪಾರದ ಚತುರತೆಯನ್ನು ಪ್ರಕಾಶಗೊಳಿಸುತ್ತ, ಉತ್ಸಾಹದಿಂದ ದೊರೆಗಳೆ ಮೊದಲಾದ ವಿಟಪುರುಷರು ಬಂದು ಬಾರಿಸುವ ಉಜ್ವಲ ಗಂಟೆಗಳ ನಾದದಿಂದ ತನ್ನ ಅತಿಶಯವಾದ ವೈಭವವನ್ನು ವ್ಯಕ್ತಪಡಿಸುತ್ತ ವೇಶ್ಯಾವಾಟದ ಆ ಸೌಧಗಳು ಅದೆಷ್ಟು ರಮಣೀಯವಾಗಿರುವುವು! ೧೩೫. ಒಳಗೆ ಮನ್ಮಥನು ತನ್ನ ತೋಳ್ಬಲದಿಂದ ವಿಟರನ್ನು ಹಿಡಿದು ಹಾಕಿ ಸತತವಾಗಿ ಅವರ ಮೇಲೆ ಬಿಡುತ್ತಿರುವ ಬಾಣಗಳು ಸೀಳಿಕೊಂಡು ಹೊರಬೀಳುತ್ತಿವೆಯೊ ಏನೊ ಎಂಬಂತೆ ಕಿಟಿಕೆಗಳೊಳಗಿಂದ ನವಯುವತಿಯರ ಕಣ್ಬೆಳಗಿನ ಕಿರಣಗಳು ಹೊಮ್ಮುತ್ತಿರುವುವು. ೧೩೬. [ಈ ಗದ್ಯದಲ್ಲಿ ವಿರೋಧಾಭಾಸದಿಂದ ಪಟ್ಟಣವನ್ನು ಬಣ್ಣಿಸಲಾಗಿದೆ. ಮೊದಲು ವಿರೋಧಪರವಾದ ಅರ್ಥವನ್ನು ಹೇಳಿ, ಅದರ ಪರಿಹಾರವನ್ನು ಕಂಸಗಳಲ್ಲಿ ಕೊಡಲಾಗಿದೆ]. ಆ ಪಟ್ಟಣವು ಮಾಣಿಕರತ್ನದಂತೆ ಕೆಂಬಣ್ಣದ ಪ್ರಾತಃಕಾಲವನ್ನು ಹೊಂದಿದ್ದರೂ ವಿಲಾಸಮಯವಾದ ಚಂದ್ರನು ಅಸ್ತವಾಗಿರಲಿಲ್ಲ. (ಮಾಣಿಕದ ಕಾಂತಿಗಳಿಂದ ಬೆಳಗುವ ಮನೆಗಳುಳ್ಳದಾಗಿತ್ತು : ರಾಜವೈಭವವು ಕುಂದಿರಲಿಲ್ಲ): ಪುಣ್ಯಹೀನ ಜನರ ವಾಸಸ್ಥಾನವಾಗಿದ್ದರೂ ದುಷ್ಟವಾದ ಆಚರಣೆಗಳಿಂದ ಕೂಡಿರಲಿಲ್ಲ (ಅಗಣ್ಯವಾದ ಎಂದರೆ ಅಪಾರವಾದ ಪುಣ್ಯವನ್ನು ಗಳಿಸಿದ ಜನರಿಗೆ ನೆಲೆವೀಡಾಗಿತ್ತು; ಆದುದರಿಂದ ದುಷ್ಟಾಚಾರಗಳಿಗೆ ಅವಕಾಶವಿರಲಿಲ್ಲ): ಸದಾಕಾಲ ನಭೋಗಾನ್ವಿತ (ಆಕಾಶಸಂಚಾರವುಳ್ಳದು) ಆಗಿದ್ದರೂ, ಅಕುಲೀನ (ಭೂಮಿಯ ಸಂಪರ್ಕವಿಲ್ಲದ) ನಡೆ ಅದಕ್ಕಿರಲಿಲ್ಲ

ಶೋಭಾಸಂಗತಮಲ್ತು ; ವಿವಿಧವರ್ಣಶ್ರೇಣೀಸಂಚೀಯಮಾನನವೀನಾರ್ಥನಿಚಯಮಾಗಿಯುಂ ವಾಗ್ವಿಷಯವಿಳಸನಮಲ್ತು ; ವಿಶಿಷ್ಟಪಕ್ಷಭೂಭೃನ್ನಿಕರಮಾಗಿಯುಂ ಜಡಾಕರತ್ವೋಪೇತಮಲ್ತು ; ಆಖ್ಯಾತ ಸೂತ್ರವಿಧಿಸನಾಥಮಾಗಿಯುಂ ಮಧ್ಯಮಪುರುಷಕ್ರಿಯಾನಿಯುಕ್ತಮಲ್ತು ; ಅಲ್ಲದೆಯುಂ ॥

೧೩೬

ತ್ರಿದಶಜನಾನ್ವಿತಂ ಗಡ ಮಹೀರುಹಪಂಚಕಸಂಚಿತಂ ಗಡಂ ।
ತದು ದಿಟದಿಂದಮಾನಪರಿಮೇಯವಿದಗ್ಧಬುಧಾಶ್ರಯಂ ರಸಾ ॥
ಸ್ವದಬಹುವೃಕ್ಷಕೇಳಿವನಸಂಗತಮೆಂದು ನಗುತ್ತುಮಿರ್ಪುದಾ ।
ತ್ರಿದಿವದ ಲಕ್ಷ್ಮಿಯಂ ನಿಯತಲಕ್ಷ್ಮಿ ಪುರಂ ನವಸೌಧರೋಚಿಯಿಂ ॥ ೧೩೭

ತನ್ಮಧ್ಯದೊಳ್

ಪರವೃತಪುರವರನರಸಾ ।
ಗರದೊಳಗಣ ತಡಿಯ ವಜ್ರವೇದಿಕೆಯೆಂಬಂ ॥

(ಸ+ದಾನ+ಭೋಗ = ದಾನ ಮಾಡುತ್ತಲೂ ಸ್ವತಃ ಉಪಯೋಗಿಸುತ್ತಲೂ ಇರುವ ಸ್ವಭಾವದಿಂದಾಗಿ ಅ+ಕುಲೀನ ಎಂದರೆ ಹೀನವಾದ ನಡತೆ ಅಲ್ಲಿ ಇರಲಿಲ್ಲ); ಹಲವಾರು ಭೂಮಿಕೆ (ಪಾತ್ರ)ಗಳಿಗೆ ಆಶ್ರಯವಾದರೂ (ನಾಟಕದಂತೆ) ಕೇವಲ ಅಲ್ಪಕಾಲದ ಶೋಭೆಯುಳ್ಳದಲ್ಲ. (ಹಲವಾರು ಉಪ್ಪರಿಗೆಗಳ ಮನೆಗಳುಳ್ಳದು, ಇಲ್ಲಿಯ ಚೆಲುವು ಕ್ಷಣಿಕವಾಗಿರದೆ ಸತತವಾಗಿ ಇರುವುದು); ಹಲವಾರು ವರ್ಣ (ಅಕ್ಷರ)ಗಳ ಸಾಲುಗಳಿಂದ ಕೂಡಿಕೊಂಡು ಹೊಸ ಹೊಸ "ಅರ್ಥ"ಗಳ ನ್ನೊಡಗೊಂಡಿದ್ದರೂ ಇದು ವಾಙ್ಮಯ ಶೋಭೆಯನ್ನು ಪಡೆದಿಲ್ಲ (ಬಗೆಬಗೆಯ ಬಣ್ಣಗಳಿಂದ ಕೂಡಿಕೊಂಡು, ಹೊಸ ಹೊಸದಾಗಿ ಸಂಪತ್ತನ್ನು ಪಡೆದುಕೊಳ್ಳುತ್ತಾ ಇರುವುದು: ಅದು ಎಷ್ಟೆಂಬುದು ವಾಗ್ವಿಳಸನ ವಿಷಯವಲ್ಲ ಎಂದರೆ ಬಣ್ಣಿಸಿ ಹೇಳಲಾಗುವುದಿಲ್ಲ). ವಿಶೇಷವೆನಿಸಿಕೊಂಡ ಪರ್ವತಗಳನ್ನು ಒಳಗೊಂಡಿದ್ದರೂ ಸಮುದ್ರದ ಸ್ವಭಾವವನ್ನು ಪಡೆದಿಲ್ಲ. (ಮೇಲಾದ ರಾಜರನ್ನು ಉಳ್ಳದು: "ಜಡಾಕರತ್ವ" ಎಂದರೆ ಮೂರ್ಖರಿಗೆ ಆಶ್ರಯವಾಗಿರುವಿಕೆ ಇದರಲ್ಲಿ ಇಲ್ಲ); (ವ್ಯಾಕರಣದಲ್ಲಿ ನಿರೂಪಿತವಾದ) ಆಖ್ಯಾತಸೂತ್ರದಂತೆ ವಿಧ್ಯರ್ಥವುಳ್ಳು ದಾಗಿದ್ದರೂ ಮಧ್ಯಮಪುರುಷದ ಕ್ರಿಯಾಪದವಾಗಿಲ್ಲ. (ಶ್ರೇಷ್ಠವಾದ ಆಚಾರದ ಸೂತ್ರ ಎಂದರೆ ನಿಯಮಗಳನ್ನು ಅನುಸರಿಸುವುದರಿಂದ, ಇಲ್ಲಿಯ ಜನರ ನಡತೆ ಶ್ರೇಷ್ಠವೆ ಆಗಿದೆಯಲ್ಲದೆ, ಮಧ್ಯಮ ತರಗತಿಯ ಜನರ ನಡವಳಿಕೆಯಗಿಲ್ಲ). ಅದಲ್ಲದೆ– ೧೩೭. "ಸ್ವರ್ಗದ ಹಿರಿಮೆಯೇನು ಬಂದಿತು? ಅದರಲ್ಲಿರುವುದು "ತ್ರಿದಶ" ಜನ (೧. ಮೂವತ್ತುಮೂರು ಜನ. ೨. ದೇವತೆಗಳು); ಮರಗಳೆಂದರೆ ಐದೇ ಐದು. ಆದರೆ ಅದೇ ನನ್ನನ್ನು ನೋಡಿ. ನಿಷ್ಣಾತರಾದ ಯಾವ ಮಾನದಿಂದಲಾದರೂ ಎಣಿಸಲಾಗದಷ್ಟು ಜನ 'ಬುಧ' (೧. ಪಂಡಿತ ೨. ದೇವತೆ)ರಿಗೆ ನಾನು ಆಶ್ರಯವಾಗಿದ್ದೇನೆ.

ತಿರೆ ಸೊಗಯಿಸುವುದು ಧರಣೀ ।
ಶ್ವರಗೇಹವಿಶಾಲವಜ್ರನಿರ್ಮಿತಶಾಳಂ ॥ ೧೩೮

ಅದರ್ಕೆ ಗಂಗಾದ್ವಾರಮಿರ್ಪಂತಿರ್ದ ಮಣಿಮಯದಿಂದ್ರಗೋಪಪೇಶಲದ್ವಾರದಿಂದೊಳಗೆ ೧೩೯

ವಿಗಳನ್ನಿರ್ಝರಹರಿನೀ ।
ಳಗಿರೀಂದ್ರಮನೊಳಗುಮಾಡಿದುಜ್ಜ್ವಳತಾರಾ ॥
ನಗಮೆನಿಪುದು ನಿರ್ಯದ್ವಾ ।
ನಗಜಂಗಳ ಸೌಧಶಾಲೆ ನೃಪಮಂದಿರದೊಳ್ ॥ ೧೪೦

ಕಾಂತಕನಕಾದ್ರಿವಿಪುಳಗು ।
ಹಾಂತರದೊಳ್ ನಿಂದ ತರುಣಕೇಸರಿವಿಸರ ॥
ಭ್ರಾಂತಿಯನೊದವಿಸುವುದು ಹಯ ।
ಸಂತತಿ ನೆಲಸಿರ್ದ ಹೊನ್ನ ಹೊಸ ಮಂದುರೆಯೊಳ್ ॥ ೧೪೧

ಮತ್ತಮಲ್ಲಿಂದತ್ತ ಸಪ್ತಕಕ್ಷಪರಿಕ್ಷಿಪ್ತಮಾಗಿ

ಅಡಕಿಲ್ಗೊಂಡಿರ್ದುವೇೞುಂಕುಳನಗಮೆನೆ ತದ್ಭೂಮಿಕಾಸಪ್ತಕಂ ಮುಂ ।
ದಿಡೆ ಚೆಲ್ವಂ ನಾಡೆ ಚೂಡಾಮಣಿಕಳಶಶಿರೋಭಾಗದೊಳ್ ಭಾಸ್ಕರಂ ಕ ॥

ಸರಸವಾದ (ಹೂ ಹಣ್ಣುಗಳನ್ನೊದಗಿಸುವ) ಅನೇಕಾನೇಕ ಮರಗಳಿಂದ ನಾನು ಸಮೃದ್ಧನಾಗಿದ್ದೇನೆ" ಹೀಗೆಂದು ಸಂಪತ್‌ಸಮೃದ್ಧವಾದ ಆ ಪಟ್ಟಣವು ಸ್ವರ್ಗದ ಸಂಪತ್ತನ್ನು ಅಪಹಾಸ್ಯ ಮಾಡಿ ನಗುತ್ತಿರುವಂತೆ ಅದರ ಸೌಧಗಳ ಬಿಳಿ ಬೆಳಕು ಹೊಮ್ಮುತ್ತಿರುವುದು. ಅದರ ನಟ್ಟನಡುವೆ–೧೩೮. ಸುತ್ತುಗಟ್ಟಿದ ಜನವೆಂಬ ಸಮುದ್ರದ ಒಳಗೆ ದ್ವೀಪದ ವಜ್ರವೇದಿಕೆಯೆಂಬಂತೆ ಅರಸನ ವಿಶಾಲವಾದ ವಜ್ರ ಖಚಿತವಾದ ಅರಮನೆಯು ಶೋಭಿಸುವುದು. ೧೩೯. ಆ ಅರಮನೆಗೆ ಗಂಗಾದ್ವಾರದಂತೆ ಇರುವ ಹೊನ್ನೆ ಹುಳುಗಳಂತೆ ಮಿರುಗುವ ರತ್ನಗಳಿಂದ ತುಂಬಿದ ಅಗಸೆ ಬಾಗಿಲಿರುವುದು ; ಅದನ್ನು ದಾಟಿ ಒಳಗೆ ಹೋಗಲಾಗಿ ಅಲ್ಲಿ – ೧೪೦. ಕೆಳಕ್ಕೆ ದುಮುಕುವ ಪ್ರವಾಹಗಳನ್ನೊಡಗೊಂಡ ನೀಲಪರ್ವತವನ್ನು ತನ್ನ ಒಳಗೆ ಇಟ್ಟುಕೊಂಡು ಉಜ್ವಲವಾಗಿ ಹೊಳೆಯುತ್ತಿರುವ ಬೆಳ್ಳಿಯ ಬೆಟ್ಟವೋ ಏನೊ ಎಂಬಂತೆ ಮದೋದಕವನ್ನು ಸುರಿಸುತ್ತಿರುವ ಆನೆಗಳ ಸೌಧಗಳ ಸಾಲು ಅರಮನೆಯಲ್ಲಿ ಕಂಗೊಳಿಸುವುದು. ೧೪೧. ಮಿರುಗುವ ಚಿನ್ನದ ಬೆಟ್ಟದೊಳಗಿನ ವಿಶಾಲವಾದ ಗವಿಗಳಲ್ಲಿ ನಿಂತ ಹರಯದ ಸಿಂಹಗಳೊ ಏನೊ ಎಂಬ ಸಂಶಯವನ್ನುಂಟು ಮಾಡುವಂತೆ ಚಿನ್ನದ ಲಾಯಗಳಲ್ಲಿ ನಿಂತಿರುವ ಕುದುರೆಗಳ ಸಮೂಹವು ಶೋಭಿಸುವುದು. ಅಲ್ಲಿಂದ...... ೧೪೨. ಅಡಕಿ ಲಿಟ್ಟಂತೆ ಒಂದರ ಮೇಲೊಂದಾಗಿ ಏಳು ಕುಲಪರ್ವತಗಳು ನಿಂತಿವೆಯೊ ಏನೊ ಎಂಬಂತೆ ಉಪ್ಪರಿಗೆಗಳು ಸುಂದರವಾಗಿರಲಾಗಿ, ತುತ್ತುತುದಿಯ ರತ್ನಖಚಿತ ವಾದ ಕಳಸದಲ್ಲಿ ಮಧ್ಯಾಹ್ನದ ಸೂರ್ಯನು ಕನ್ನಡಿಯಂತೆ ಒಪ್ಪುತ್ತಿರಲಾಗಿ

ನ್ನಡಿಯಂ ಪೋಲ್ತೊಪ್ಪೆ ಮಧ್ಯಂದಿನದೊಳತುಳಗೋಪಾನಸೀಕಂಗಳೊಳ್ ।
ಮೈ। ದೊಡವಪ್ಪನ್ನಂ ಮುಗಿಲ್ ಕನ್ನಡಿಪುದು ಕರುಮಾಡಂ ನೃಪಶ್ರೀಯ ಪೆರ್ಚಂ ॥

೧೪೨

ಅದಱ ಹರಿನೀಲಕೂಟಾ ।
ಗ್ರದೀಧಿತಿಪ್ರತತಿ ಬೆರಸೆ ನಿಜಕರದೊಳ್ ತ ॥
ನ್ನುದರಕಳಂಕಮನೆತ್ತಂ ।
ಕೆದಱುವವೋಲಿರುಳೊಳಲ್ಲಿ ಶಶಿಯೆಸೆದಿರ್ಪಂ ॥ ೧೪೩

ಅದಲ್ಲದೆಯುಂ ವಿವಿಧಪ್ರದೇಶಂಗಳೊಳ್ ವಿರಚಿಸಿದ

ಕಡೆಪದ ಕಾಂತಿ ಕಂಡರಣೆಯುನ್ನತಿ ಚಿತ್ರದ ಚಿತ್ರವೃತ್ತಿ ಬೇ ।
ಗಡೆವೆಸದೇಟಿಗ್ಗಿಯಲ್ಲಿ ಪೊಸತಾದುದೆನುತ್ತದುಗಂಡು ವಿಸ್ಮಯಂ ॥
ಬಡನೆ ಮಯಂ ಬೆರಲ್ಮಿಡಿಯನೇ ಸುರವರ್ಧಕಿ ರೋಮಹರ್ಷದೊಳ್ ।
ತೊಡರನೆ ಚೀರಘಟ್ಟಿ ನಲವಿಂ ತಲೆದೂಗನೆ ಪದ್ಮಸಂಭವಂ ॥ ೧೪೪

ತತ್ಪುರೋಭಾಗದೋಳ್

ನವಮಲ್ಲೀಜಾಲಮೋಹಾಕುಳಮಧುಕರಲೇಲಿಹ್ಯಮಾನೋದ್ಧಮುಕ್ತಾ ।
ನಿವಹಂ ಕೃಷ್ಣಾಹಿಶಂಕಾತುರಗೃಹಶಿಖಿಚೋಚುಂಬ್ಯಮಾನೇಂದ್ರ ಲೀಲಾಂ ॥
ಶುವಿಶೇಷಂ ಚಂದ್ರಿಕಾಸಂಶಯಚಟುಳಚಕೋರೌಘಪೇಪೀಯಮಾನಾ ।
ಗ್ರವಿಭಾಗಸ್ಥೇಂದುಕಾಂತದ್ಯುತಿ ಸೊಗಯಿಸುಗುಂ ಕಾಯಮಾನಂ ಸಮಾನಂ ॥ ೧೪೫

ಮಾಳಿಗೆಯ ಲೋವೆಗಳಿಗೆ ಮೋಡಗಳು "ಮೈತೊಡವು" (ತೊಡುವ ಬಟ್ಟೆ) ಆಗಲಾಗಿ– ಹೀಗೆ ಉನ್ನತವಾದ ಅರಸನ ಭವ್ಯಪ್ರಾಸಾದವು ರಾಜವೈಭವದ ಏಳಿಗೆಯನ್ನು ಪ್ರಕಟಪಡಿಸುವುದು. ೧೪೩. ಇಂದ್ರನೀಲರಚಿತವಾದ ಅದರ ಶಿಖರದ ಪ್ರಭೆ ತನ್ನ ಕಿರಣಗಳಲ್ಲಿ ಬೆರೆತುಕೊಳ್ಳಲಾಗಿ, ಚಂದ್ರನು (ಬೆಳ್ದಿಂಗಳ ಜೊತೆಗೆ) ತನ್ನ ಒಳಗಿರುವ ಕಪ್ಪುಕಲೆಯನ್ನೂ ಎಲ್ಲ ಕಡೆಗೆ ಹರಡುತ್ತಿರುವಂತೆ ಕಂಗೊಳಿಸುವನು. ಅದಲ್ಲದೆ ಬೇರೆ ಬೇರೆ ಎಡೆಗಳಲ್ಲಿ ನಿರ್ಮಿಸಿದ– ೧೪೪. ಕೆತ್ತನೆ ಕೆಲಸದ ಕಾಂತಿ, ಚಿತ್ರಗಳನ್ನು ಕೊರೆದ ಕುಶಲತೆ, ಬರೆದ ಚಿತ್ರಗಳ ವಿನೂತನತೆ, ವೆಜ್ಜವಮಾಡಿ ಕೂಡಿಸಿದ ಕುಸುರಿಕೆಲಸದ ಪರಿಣತಿ– ಇವೆಲ್ಲ ಅಪೂರ್ವವಾದುವೆಂದು ಮನಗಂಡು (ಮಹಾಶಿಲ್ಪಿಯಾದ) ಮಯನು ಚಕಿತನಾಗನೆ? ಸ್ವರ್ಗದ ಶಿಲ್ಪಿಯು ಮೆಚ್ಚಿಕೆಯಿಂದ ಬೆರಳೆತ್ತನೆ? ಚೀರಘಟ್ಟಿಯು ಪುಲಕಿತನಾಗನೆ? ಬ್ರಹ್ಮನು (ಮೆಚ್ಚಿ) ತಲೆದೂಗನೆ ? ಅದರ ಮುಂಭಾಗದಲ್ಲಿ– ೧೪೫. ವಿಸ್ತೀರ್ಣವಾದ ಮಂಡಪವು ಶೋಭಿಸುವುದು; ಅದರಲ್ಲಿರುವ ಉಜ್ವಲವಾದ ಮುತ್ತುಗಳನ್ನು ಕಂಡು ಇದೊಂದು ಹೊಸಬಗೆಯ ಮಲ್ಲಿಗೆಯ ಅರಳೆಂಬ ಮೋಹದಿಂದ ದುಂಬಿಗಳು ಬಂದು ನೆಕ್ಕುತ್ತಿರುವುವು; ಅದರ ಇಂದ್ರನೀಲಗಳಿಂದ ಹೊಮ್ಮುವ ಕಿರಣಾವಳಿಗಳನ್ನು ಕರಿಯ ಸರ್ಪವೆಂಬ ಭ್ರಮೆಯಿಂದ ಅಲ್ಲಿಯ

ಗಿರಿಪತಿಸೇವಾರ್ಥಂ ಕುಳ ।
ಗಿರಿಗಳ್ ಬಂದೆಳಸಿ ಬಳಸಿ ನಿಂದವೊಲಂತಾ ॥
ಕರುಮಾಡಮನೆತ್ತಲುಮಾ ।
ವರಿಸಿದ ವರಶಿಖರರತ್ನಹರ್ಮ್ಯಾವಳಿಗಳ್ ॥ ೧೪೬

ಅಲ್ಲಿ

ಘನದೂರ್ವಾಸಕ್ತಿಯಂ ಗಾರುಡಮಣಿರುಚಿಯೊಳ್ ದಾವವಿಭ್ರಾಂತಿಯಂ ಕಾಂ ।
ಚನಭಿತ್ತಿವ್ರಾತದೊಳ್ ನಿರ್ಮಳಜಳರುಚಿಯಂ ಸ್ಫಾಟಿಕಗ್ರಾವಬದ್ಧಾ ॥
ವನಿಯೊಳ್ ವಾನೇಚರಸ್ತ್ರೀಭ್ರಮಮನತುಳನೀಳಾಶ್ಮಪಾಂಚಾಳಿಕಾದ ।
ರ್ಶನದೊಳ್ ತಾಳುತ್ತುಮೆತ್ತಂ ಸುಟಿವುದುಮಹಿಭೃದ್ಗೇಹದೇಣೀಸಮೂಹಂ ॥ ೧೪೭

ಮತ್ತಂ ತದ್ರಾಜಭವನದೇಕದೇಶದೊಳ್

ಒಳಗೆ ತಳತಳಿಪ ರತ್ನಂ ।
ಗಳಿನೊಪ್ಪುವ ನಿಸ್ತರಂಗಮೀಂಗಡಲೆಂಬ ॥
ಗ್ಗಳಿಕೆಗೆಡೆಯಾಗಿ ತೊಳಗುವ ।
ಪಳಿಕಿನ ಮಾಣಿಕ್ಯಕೋಶಮಂದಿರಮೆಸೆಗುಂ ॥ ೧೪೮

ಆಶೀವಿಷವಿಷಮೋರಗ ।
ರಾಶಿಯನೊಳಕೆಯ್ದು ವಿಪುಳಪಾತಾಳನಿವಾ ॥

ಸಾಕಿದ ನವಿಲುಗಳು ಬಂದು ಕುಕ್ಕುತ್ತಿರುವುವು; ಮೇಲ್ಭಾಗದಲ್ಲಿ ಅಳವಡಿಸಿದ ಚಂದ್ರಕಾಂತಶಿಲೆಯ ಬೆಳಗನ್ನು ಕಂಡು ಬೆಳುದಿಂಗಳೆಂಬ ಭ್ರಾಂತಿಯಿಂದ ಚಕೋರ ಪಕ್ಷಿಗಳು ಅದನ್ನು ಕುಡಿಯಲು ಪ್ರಯತ್ನಿಸುವುವು. ೧೪೬. ಪರ್ವತರಾಜನನ್ನು ಓಲೈಸಲೆಂದು ಕುಲಪರ್ವತಗಳೆಲ್ಲ ಉತ್ಸುಕತೆಯಿಂದ ಬಂದು ಅದರ ಸುತ್ತಲೂ ನಿಂತುವೊ ಏನೊ ಎಂಬಂತೆ ಆ ಅರಮನೆಯ ಎಲ್ಲ ಕಡೆಗೂ ರತ್ನಕಲಶಗಳುಳ್ಳ ಭವ್ಯಭವನಗಳು ಸುತ್ತುಗಟ್ಟಿ ನಿಂತಿರುವುವು. ಅಲ್ಲಿ– ೧೪೭. ಹಸಿರು ರತ್ನಗಳ ಕಿರಣಗಳನ್ನು ಹಸಿಹುಲ್ಲೆಂತಲೂ, ಚಿನ್ನದ ಗೋಡೆಗಳ ಪ್ರಭೆಯನ್ನು ಕಾಡುಗಿಚ್ಚೆಂತಲೂ, ಸ್ಫಟಿಕದ ನೆಲಗಟ್ಟನ್ನು ಬಿಳಿ ನೀರೆಂತಲೂ, ನೀಲರತ್ನಗಳಿಂದ ನಿರ್ಮಿಸಿದ ಪುತ್ಥಳಿಗಳನ್ನು ಶಬರಸ್ತ್ರೀಯರೆಂತಲೂ, ಭ್ರಮಿಸಿ ಅರಮನೆಯಲ್ಲಿ (ಸಾಕಿದ) ಹೆಣ್ಣು ಜಿಂಕೆಗಳು ಎತ್ತೆತ್ತಲೂ ಓಡಾಡುತ್ತಿರುವುವು. ಮತ್ತು ಆ ಅರಮನೆಯ ಒಂದು ಪ್ರದೇಶದಲ್ಲಿ – ೧೪೮. ತನ್ನೊಳಗೆ ಥಳಥಳಿಸುವ ರತ್ನಗಳನ್ನಿಟ್ಟುಕೊಂಡು ಶೋಭಿಸುವ ಪ್ರಶಾಂತವಾದ (ಅಲೆಗಳಿಲ್ಲದ) ಹಾಲ್ಗಡಲೇ ಇದು ಎಂಬಂತೆ ಅತಿಶಯವಾದ ಹಿರಿಮೆಯನ್ನು ಪಡೆದುಕೊಂಡಿರುವ ಸ್ಫಟಿಕದ ರತ್ನಭಂಡಾರವು (ತನ್ನೊಳಗೆ ಹೊಳೆಯುವ ಮಾಣಿಕ್ಯಗಳಿಂದ) ಶೋಭಿಸುವುದು. ೧೪೯. ಅತ್ಯಂತ ಉಗ್ರವಿಷವುಳ್ಳ ಸರ್ಪಸಮೂಹವನ್ನೊಳಗೊಂಡ ಪಾತಾಳಲೋಕವು ಏನೊ ಇದು

ಸಾಶಂಕೆಯನೀವುದು ನಿಚ ।
ತಾಶೇಷಾಸ್ತ್ರಾಳಿ ಜಯನಶಾಲಿಕೆಯದಱಕೊಳ್ ॥ ೧೪೯

॥ ಮಾಲಿನೀವೃತ್ತಂ ॥

ಸತತಸವನದುಗ್ಧಸ್ನಿಗ್ಧ ಕೇಳೀಮರಾಳಾ ।
ನ್ವಿತಮ ವಿರಳಧೂಪಾಮೋದಸಂಸಂಗಿಭೃಂಗಾಂ ॥
ನ್ವಿತಮುದಿತಮೃದಂಗಧ್ವಾನನೃತ್ಯನ್ಮಯೂರಾಂ ।
ಚಿತಮೆಸೆವುದು ಕಾಂತಂ ದೇವಪೂಜಾನಿಶಾಂತಂ ॥ ೧೫೦

ಅದಲ್ಲದೆಯುಂ

ವಿಕಿರತ್ಪುಷ್ಪಕದಂಬತಾರಕಿತಮಾಯಾತಪ್ರಯಾತಾಂಗನಾ ।
ನಿಕರೋದ್ಯಚ್ಚರಣಾಂಶುಪಲ್ಲವಿತಮನ್ಯೋರ್ವೀಶ್ವರವ್ರಾತದೂ ॥
ತಕುಳಸ್ಥೂಪಿತರತ್ನರುಕ್ಛಬಳಿತಂ ಯಾಮದ್ವಿಪೇಂದ್ರ ಪ್ರತಾ ।
ನಕಟೋನ್ಮುಕ್ತಮದೌಘಕರ್ದಮಿತಕಾಂತಂ ರಾಜಗೇಹಾಜಿರಂ ॥ ೧೫೧

ಮತ್ತಂ

ಅದಱಕೊಳ್ ಸಾಮ್ರಾಜ್ಯ ಸೌಖ್ಯೋಲ್ಲಸಿತಹೃದಯನಿರ್ಪಂ ಧರಾಧೀಶ್ವರಂ ದು ।
ರ್ಮದಭೂಭೃತ್ಪಾತಿಖಡ್ಗಾಶನಿವಿಳಸನಮೇಘಾಗಮಂ ವಂದಿವಾಂಛಾ ॥

ಎಂಬ ಭ್ರಾಂತಿಯುಂಟು ಮಾಡುವಂತೆ ಪ್ರಚಂಡವಾದ ಎಲ್ಲ ಬಗೆಯ ಶಸ್ತ್ರಗಳ ಸಮೃದ್ಧಿಯಿಂದ ಆಯುಧಶಾಲೆಯಿರುವುದು. ೧೫೦. ಸತತವಾಗಿ ನೆರವೇರಿಸುವ ಅಭಿಷೇಕದ ಹಾಲಿಗೆ ಮರುಳಾಗಿ, ಅದರಲ್ಲಿ ಆಟವಾಡುವ ಹಂಸಪಕ್ಷಿಗಳಿಂದಲೂ, ನಿರಂತರವಾದ ಧೂಪದ ಪರಿಮಳಕ್ಕೆ ಎರಗುವ ದುಂಬಿಗಳ ಹಿಂಡಿನಿಂದಲೂ, (ಪೂಜಾರ್ಥವಾಗಿ) ನುಡಿಸುತ್ತಿರುವ ಮದ್ದಳೆಯ ನಾದಕ್ಕೆ ಮನಸೋತು ಕುಣಿಯುತ್ತಿರುವ ನವಿಲುಗಳಿಂದಲೂ ಸುಂದರವಾದ ದೇವಪೂಜಾಪ್ರಸಂಗವು ಸದಾಕಾಲ ಶೋಭಿಸುವುದು. ಅದಲ್ಲದೆ– ೧೫೧. ಹರಡಿದ ಹೂವಿನ ಕುಚ್ಚುಗಳಿಂದ ನಕ್ಷತ್ರಖಚಿತವಾದಂತೆಯೂ, ಹೋಗುವ ಬರುವ ಸ್ತ್ರೀಯರ ಅಂಗಾಲುಗಳ ಪ್ರಭೆಯಿಂದ ಕೆಂದಳಿರುಗಳನ್ನು ಹೊಚ್ಚಿದಂತೆಯೂ ಪರದೇಶಗಳ ರಾಜದೂತರು ಕಾಣಿಕೆಯಾಗಿ ತಂದು ಒಪ್ಪಿಸಿದ ರತ್ನಗಳ ರಾಶಿಯಿಂದ ಹೊಮ್ಮುವ ಅನೇಕ ಬಗೆಯ ಪ್ರಭೆಗಳಿಂದ ಮಿಶ್ರವರ್ಣಮಯವಾಗಿಯೂ, ಜಾವದ ಆನೆಗಳು ಸುರಿಸಿದ ಮದೋದಕದಿಂದ ಕೆಸರಾಗಿಯೂ, ಆ ಅರಮನೆಯ ಅಂಗಳವು ಕಂಗೊಳಿಸುವುದು ಮತ್ತು ೧೫೨. ಆ ಅರಮನೆಯಲ್ಲಿ, ಸಾಮ್ರಾಜ್ಯ ಸೌಖ್ಯದಿಂದ ಪ್ರಸನ್ನಚಿತ್ತನಾದ ಅರಸನು ವಾಸಿಸುತ್ತಿರುವನು ; ಆತನು ಸೊಕ್ಕಿಗೆ ಬಂದ (ಶತ್ರು) ರಾಜರೆಂಬ

ಪ್ರದವಾಯೌದಾರ್ಯಕಲ್ಪದ್ರುಮಕನಕನಗಂ ಕೀರ್ತಿಗಂಗಾಪ್ರವಾಹಾ।
ಭ್ಯುದಯಪ್ರಾಲೇಯಶೈಲಂ ಕವಿಕುಳಕಳಭವ್ರಾತಯೂಥಾಧಿನಾಥಂ ॥ ೧೫೨

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿ ಪದಪದ್ಮನಿಧಾನದೀಪವರ್ತಿ

## ಶ್ರೀ ಮದಗ್ಗಳದೇವ

ವಿರಚಿತಮಪ್ಪ

## ಚಂದ್ರಪ್ರಭಪುರಾಣದೊಳ್

ಕಥಾವತರಣ ವರ್ಣನಂ

ಪ್ರಥಮಾಶ್ವಾಸಂ

ಬೆಟ್ಟಗಳಿಗೆ ಸೀಳುವ ಸಿಡಿಲನ್ನೊಳಗೊಂಡ ಮಳೆಗಾಲದಂತಿರುವವನು ; ಸ್ತುತಿಪಾಠಕರ ಮನೋರಥಗಳನ್ನೆಲ್ಲ ಪೂರೈಸುವಲ್ಲಿ ; ಕಲ್ಪವೃಕ್ಷದಂತೆ, ಚಿನ್ನದ ಬೆಟ್ಟದಂತೆ ಇರುವವನು; ಕೀರ್ತಿಯೆಂಬ ಗಂಗೆಯು ಅಭ್ಯುದಯಕ್ಕೆ ಕಾರಣನಾದ ಹಿಮವಂತ ಗಿರಿಯಾಗಿರುವನು; ಕವಿಕುಲವೆಂಬ ಆನೆಗಳ ಸಮೂಹಕ್ಕೆ ನಾಯಕ ಗಜವಾಗಿರುವನು.

ಒಂದನೆಯ ಆಶ್ವಾಸ ಮುಗಿಯಿತು.

# ದ್ವಿತೀಯಾಶ್ವಾಸಂ

ಶ್ರೀಗೆರ್ದೆವತ್ತುಗೆ ವರವಾ ।
ಕ್ಟೀಗೆ ನಿಜಂ ಸುಮುಖವೃತ್ತಿ ತೋಳ್ಗೆರಗು ಜಯ ॥
ಶ್ರೀಗೊಲವನೀಯೆ ನೆಗಟ್ದಿಂ ।
ಭೂಗಧಿಪತಿ ಜೈನಜನಮನೋಹರಚರಿತಂ ॥ ೧

ಒಳಕೆಯ್ದು ತೋರ್ಪುದನಿಮಿಷ ।
ಕುಳಮಂ ಕುವಳಯಮನುಚಿತಮೆನೆ ಪುಷ್ಕರಮಂ ॥
ಡಳಮಂ ತದ್ಧರಣೀಮಂ ।
ಡಳನಾಥನಪಾರಕೀರ್ತಿಗಂಗಾಪೂರಂ ॥ ೨

ಧೃತಶೈತ್ಯಂ ಧಾರಾಜಲ ।
ಯುತಮನುಕಂಪಾನ್ವಿತಂ ದಲೆನಿಸಿಯುವಂತಾ ॥
ಕ್ಷಿತಿಪತಿಯ ವಿಜಯಭುಜವಸಿ ।
ಲತೆ ರಿಪುನೃಪರ್ಗೀವುದಧಿಕತಾಪೋದಯಮಂ ॥ ೩

ಅತುಳಪ್ರಭನಾಗಿಯುಮಾ ।
ಕ್ಷಿತಿಪತಿ ಕನಕಪ್ರಭಾಭಿಧಾನಮನಾಂತಂ ॥
ವಿತತಾನೂನಕರಂ ದಶ ।
ಶತಕರನಾಮಮನಶೀತರುಚಿ ತಾಳ್ದುವವೋಲ್ ॥ ೪

೧. ತನ್ನ ಎದೆ ಲಕ್ಷ್ಮಿಗೆ, ಮುಖ ವಾಗ್ದೇವತೆಗೆ, ಭುಜ ಜಯಲಕ್ಷ್ಮಿಗೆ ಮೆಚ್ಚಿಗೆಯಾಗಿರಲಾಗಿ ಜೈನಜನರ ಮನಕ್ಕೊಪ್ಪುವ ಶೀಲವುಳ್ಳ ಆ ರಾಜನು ಖ್ಯಾತನಾದನು. ೨. ಆ ಅರಸನ ಕೀರ್ತಿಯೆಂಬ ಗಂಗಾಪ್ರವಾಹವು 'ಅನಿಮಿಷಕುಳ' (೧. ದೇವತೆಗಳ ಸಮೂಹ, –ಸ್ವರ್ಗಲೋಕ ; ೨. ಮೀನುಗಳ ಸಮುದಾಯ)ವನ್ನು, "ಕುವಳಯ" (೧. ಭೂಮಂಡಲ ; ೨. ನೈದಿಲೆಗಳು)ವನ್ನು, 'ಪುಷ್ಕರ' (೧. ಆಕಾಶ ೨. ಕೆಂದಾವರೆ)ವನ್ನು ಒಳಗೊಂಡು ಕಂಗೊಳಿಸುವುದು. ೩. ಆ ರಾಜನ ಸದಾ ವಿಜಯಿಯಾದ ಕೈಯಲ್ಲಿರುವ ಖಡ್ಗವು ತಂಪಾಗಿದ್ದು, ಧಾರೆಯಾಗಿ ಸುರಿವ ಮಳೆಯುಳ್ಳದಾಗಿ, ದಯಾಪೂರ್ಣವಾಗಿದ್ದರೂ ಶತ್ರುರಾಜರಿಗೆ ಅತ್ಯಧಿಕ ತಾಪವನ್ನುಂಟು ಮಾಡುವುದು. [ಇದು ವಿರೋಧ. ಇದಕ್ಕೆ ಪರಿಹಾರ ಹೀಗೆ – ಧೃತಶೈತ್ಯಂ = ಉಕ್ಕಿನ ಖಡ್ಗ ಮುಟ್ಟುವುದಕ್ಕೆ ತಣ್ಣಗಿರುವುದು; ಧಾರಾಜಲಯುತಂ = ಹರಿತವಾದ ಅಲಗಿನ ಹೊಳಪುಳ್ಳದು. ಹೀಗಿರುವ ಖಡ್ಗವು ಶತ್ರುಗಳಿಗೆ ತಾಪದಾಯಕವಾಗಿರುವುದು ಸೋಜಿಗವಲ್ಲ.] ೪. ಆ ಭೂಪತಿಯು ಅಸದೃಶವಾದ ಪ್ರಭೆಯುಳ್ಳವನಾಗಿದ್ದರೂ ಕನಕಪ್ರಭ (ಚಿನ್ನದಂತೆ

ಆರಾಜಶಿರೋರತ್ನನ ।
ವೀರದ ವಿತರಣದ ಪೆರ್ಮೆಯಂ ರಿಪುಭೂಭೃ ॥
ದ್ದಾರಿದ್ರ್ಯಮುಮುಪಚುತಪರಿ ।
ವಾರಜನಾನೂನಲಕ್ಷ್ಮಿಯುಂ ಪ್ರಕಟಿಸುಗುಂ ॥ ೫

ಉಪಕೃತಿಯೆಂಬಿನಂ ನೆನೆವುದೂರ್ಜಿತಮಂಗಳದಂದದಿಂದೆ ಮ ।
ನ್ನಿಪುದುಪದೇಶದಂತಿರೊಳಕೆಯ್ವುದು ಮನ್ತ್ರಪದಂಬೊಲೊರ್ಮೆಯುಂ ॥
ಜಪಿಯಿಪುದೆಯ್ದೆ ಪುಣ್ಯಕಥೆಯಂದದೆ ಭಾವಿಸಿ ಕೇಳ್ವುದಾ ಧರಾ ।
ಧಿಪನ ಶರನ್ನಿಶಾಕರಕಳೋಜ್ಜ್ವಳಮಂ ಜಸಮಂ ಜಗಜ್ಜನಂ । ೬

ಮನದೊಲವಿಂದೆ ಕಿನ್ನರಚಯಂ ನರನಾಥನ ಗೀತಮಂ ಮುದಂ ।
ಜನಿಯಿಸೆ ಪಾಡುವಲ್ಲಿ ನಿಜರತ್ನವಿಮಾನದೊಳ್ಳೆದೆ ಪೊಣ್ಮೆ ಮಾ ॥
ರ್ದನಿ ಕಿವಿಯಂ ಪಳಂಚಲೆಯೆ ಕಾಯ್ದದನೊಲ್ಲದೆ ಬಂದು ತತ್ಪುರಾ ।
ವನಿತಳದೊಳ್ ಸಭಾವಿಭವಮಂ ಸತತಂ ಶತಮನ್ಯು ಮಾಡುವಂ ॥ ೭

ಮತ್ತಮಾ ಮೂರ್ಧಾಭಿಷಿಕ್ತಮುಖ್ಯಂ ವಿಖ್ಯಾತದಾನನಾಗಿಯುಮಮದ ವೃತ್ತಿವರ್ತನನುಂ ಅಹೀನತಾನ್ವಿತನಾಗಿಯುಂ ಅನುಕ್ರಮಸಮೇತನುಂ, ಅತಿಮೃದುಕರವಿರಾಜಿತನಾಗಿಯುಂ ಉಗ್ರತೇಜೋವಿರಾಜನುಂ, ಅನೂನವಾಹಿನೀಪತಿಯಾಗಿಯುಂ ಅಭಂಗಾನುಷಂಗನುಂ, ವಿನೀತವಿನತಾನಂದನನಾ

ಕಾಂತಿಯುಳ್ಳವನು) ಎಂಬ ಹೆಸರನ್ನು ಪಡೆದಿದ್ದನು. ಅತಿಶಯವಾದ ಅನೇಕ ಕಿರಣಗಳನ್ನು ಹೊಂದಿದ ಸೂರ್ಯನಿಗೆ 'ಸಹಸ್ರಕಿರಣ' ಎಂಬ ಹೆಸರಿಲ್ಲವೆ? ಇದೂ ಹಾಗೆಯೆ. ೫. ಆತನ ಶತ್ರುರಾಜರ ದರಿದ್ರತೆ ಹಾಗು ಆತನನ್ನು ಆಶ್ರಯಿಸಿದ ಪರಿವಾರಜನದ ಅಧಿಕ ಸಂಪತ್ತೂ ಇವೆರಡೂ ಆ ರಾಜೋತ್ತಮನ ಪರಾಕ್ರಮ ಹಾಗು ದಾನಗುಣಗಳ ಹಿರಿಮೆಯೆಂತಹದೆಂಬುದನ್ನು ಸ್ಪಷ್ಟವಾಗಿ ತೋರುವುವು. ೬. ಶರತ್ಕಾಲದ ಬೆಳ್ದಿಂಗಳಂತೆ ಪರಿಶುಭ್ರವಾದ ಆ ರಾಜನ ಯಶಸ್ಸನ್ನು ಜಗತ್ತಿನ ಜನವೆಲ್ಲ ಉಪಕಾರವೆಂಬಂತೆ ನೆನೆಯುವುದು; ಶ್ರೇಷ್ಠವಾದ ಮಂಗಳವೆಂದು ಗೌರವಿಸುವುದು: ಉಪದೇಶವೆಂಬಂತೆ ಸ್ವೀಕರಿಸುವುದು; ಮಂತ್ರವೆಂಬಂತೆ ಜಪಿಸುವುದು; ಪುಣ್ಯದ ಕಥೆಯೆಂಬಂತೆ ಆದರದಿಂದ ಕೇಳುವುದು. ೭. ಕಿನ್ನರ ಸಮೂಹಗಳು ಸಂತೋಷದಿಂದ ಆ ರಾಜನ ಗುಣವನ್ನು ಬಣ್ಣಿಸಿ ಹಾಡುತ್ತಿರಲಾಗಿ ಅದು ತನ್ನ ರತ್ನವಿಮಾನದಲ್ಲಿ ಪ್ರತಿಧ್ವನಿಗೊಳ್ಳುತ್ತಿರುವುದನ್ನು ಕೇಳಿ, ಸಹಿಸಲಾರದೆ ಇಂದ್ರನು ಎದ್ದುಬಂದು ಆ ದೇಶದ ರಾಜಧಾನಿಯಲ್ಲಿ ಸತತವಾಗಿ ತನ್ನ ಓಲಗವನ್ನು ವೈಭವದಿಂದ ನಡೆಸುತ್ತಿರುವನು. ೮. ಆ ಅಭಿಷಿಕ್ತರಾಜನು "ವಿಖ್ಯಾತದಾನ"ನು (೧. ಪ್ರಸಿದ್ಧನಾದ ದಾನಿ ೨. ಅತಿಶಯವಾಗಿ ಮದೋದಕ ಸುರಿಸುತ್ತಿರುವುಘು) ಆಗಿದ್ದರೂ ಮದಸ್ವಭಾವದಿಂದ ವರ್ತಿಸುವವನಲ್ಲ (೧. ತಾನು ಅಧಿಕನೆಂಬ ಅಹಂಕಾರ ಅವನಿಗಿಲ್ಲ. ೨. ಆನೆಯಂತೆ ಮದವೇರಿಲ್ಲ) ; "ಅಹೀನತಾನ್ವಿತ"ನು (೧. ಹೀನವಲ್ಲದ ಎಂದರೆ ಉತ್ತಮವಾದ ಗುಣವುಳ್ಳವನು. ೨. ಸರ್ಪರಾಜನ ಸ್ವಭಾವವುಳ್ಳುದು– ಎಂದರೆ ಹೊಟ್ಟೆಹೊಸೆದುಕೊಂಡು ಹೋಗುವ

ಗಿಯುಂ ಅಪಕ್ಷಪಾತಪ್ರಚಾರನುಂ, ವಿದೇಹಜಾನುಬಂಧಲೀಲಾಶ್ರಯನಾಗಿಯುಂ ಅಖಿರದೂಷಣಾನ್ವೇಷಣನುಮೆನಿಪಂ. ಅಂತುಮಲ್ಲದೆಯುಂ ॥ ೮

ಸಮಮಂ ಮಾಡೆ ಸಮಂತ್ರಿವರ್ಗಮರಿಷಡ್ವರ್ಗಕ್ಕೆ ಪಂಚಾಂಗಮಂ ।
ತ್ರಮೆ ಸಪ್ತಾಂಗಸಮೃದ್ಧಿಯಂ ಕುಡೆ ನಿಜೈಕಂ ದೋರ್ಬಳಂ ಶತ್ರುದು ॥
ರ್ದಮಚಾತುರ್ಬಳನಾಶಮಂ ಪಡೆಯೆ ಚಾರಿತ್ರಂ ನಯಂ ಶೌರ್ಯಮಾ ।
ವಮೆ ತನ್ನೊಳ್ ದಳವೇಱಿದತ್ತೆನಿಸಿದಂ ಶಕ್ತಿತ್ರಯಾಧೀಶ್ವರಂ ॥ ೯

ಅಯ್ಸರಲನ ಚೆಲ್ವಿಂದಂ ।
ಮೆಯ್ಸಿರಿ ಪಿರಿದಾದುದೆಂದು ನೋಟ್ಟರ ಕಣ್ಣಂ ॥
ಕೆಯ್ಸೆಱೆವಿಡಿದುಂ ಮತ್ತವ
ಟಯ್ಸುವುದು ಮನಕ್ಕಮೊಲವನಾ ನೃಪರೂಪಂ ॥ ೧೦

ಗುಣವುಳ್ಳುದು) ಆಗಿದ್ದರೂ "ಅನುಕ್ರಮಸಮೇತನು (೧. ಸರಿಯಾಗಿ ನಡೆದುಕೊಳ್ಳುವವನು. ೨. ಸಮನಾದ ಕಾಲುಗಳುಳ್ಳುದು) ; "ಅತಿಮೃದುಕರ ವಿರಾಜಿತನು" (೧. ತುಂಬ ಮೆದುವಾದ ಕೈಗಳಿಂದ ಶೋಭಿಸುವವನು. ೨. ಸೌಮ್ಯವಾದ ಕಿರಣಗಳುಳ್ಳವನು–ಚಂದ್ರ) ಆಗಿದ್ದರೂ "ಉಗ್ರತೇಜೋವಿರಾಜ"ನು (೧. ಪ್ರಚಂಡವಾದ ಪರಾಕ್ರಮವುಳ್ಳವನು. ೨. ಪ್ರಖರವಾದ ತೇಜಸ್ಸುಳ್ಳವನು ಸೂರ್ಯ): "ಅನೂನವಾಹಿನೀಪತಿ"ಯು (೧. ಸಮೃದ್ಧವಾದ ಸೈನ್ಯಕ್ಕೆ ಒಡೆಯನು ೨. ಅನೇಕ ನದಿಗಳ ಒಡೆಯ–ಸಮುದ್ರ) ಆಗಿದ್ದರೂ "ಅಭಂಗಾನುಷಂಗ"ನು (೧. ಸೋಲಿಲ್ಲದವನು. ೨. ತೆರೆಗಳ ಸಂಪರ್ಕವಿಲ್ಲದವನು) ; "ವಿನೀತ ವಿನತಾನಂದನ"ನು (೧. ಸಜ್ಜನರಿಗೂ ಶರಣಾದವರಿಗೂ ಆನಂದವನ್ನುಂಟುಮಾಡುವವನು. ೨. ಸುಂದರನಾದ ಗರುಡನು) ಆಗಿದ್ದರೂ "ಅಪಕ್ಷಪಾತಪ್ರಚಾರ"ನು (೧. ಪಕ್ಷಪಾತ ಬುದ್ಧಿಯಿಲ್ಲದವನು. ೨. ರೆಕ್ಕೆ ಬಡಿಯದಿರುವವನು) [ಇದರಲ್ಲಿ ಎರಡನೆಯ ಅರ್ಥದಿಂದ ವಿರೋಧವೂ, ಒಂದನೆಯ ಅರ್ಥಾನ್ವಯದಿಂದ ಪರಿಹಾರವೂ ಉಂಟಾಗುತ್ತವೆ.] ೯. ತನ್ನ ಮನಸ್ಸು, ಮೈ ಮತ್ತು ಮಾತುಗಳೆಂಬ 'ತ್ರಿವರ್ಗ'ವನ್ನು 'ಸಮ'ನಾಗಿ ನಿಗ್ರಹಿಸಿಕೊಂಡು ಕಾಮಕ್ರೋಧಾದಿ ಅರಿಷಡ್ವರ್ಗವನ್ನು ಶಮನಗೊಳಿಸಿರುವನು; (ಕಾರ್ಯೋಪಾಯ, ಸಾಧನೋಪಾಯ, ದೇಶಕಾಲ ವಿಭಾಗ, ವಿನಿಪಾತ ಪ್ರತೀಕಾರ ಮತ್ತು ರಾಜ್ಯಸುಖ ಸಿದ್ಧಿ ಎಂಬ) ಐದು ಬಗೆಯ ಮಂತ್ರದಿಂದ (ದೇಶ, ಬಲ, ಕೋಶ, ಮಿತ್ರ, ಭಾಂಡಾರ, ದುರ್ಗ, ಸ್ವಾಮಿ ಎಂಬ) ಸಪ್ತಾಂಗ ರಾಜ್ಯದ ಅಭಿವೃದ್ಧಿಯನ್ನು ಸಾಧಿಸಿರುವನು; ತನ್ನ ತೋಳ್ಬಲವೊಂದರಿಂದಲೆ ಶತ್ರುಗಳ ಅದಮ್ಯವೆನಿಸಿದ ಚತುರಂಗಬಲವನ್ನು ನಾಶಪಡಿಸಿರುವನು; ಹೀಗೆ ಚಾರಿತ್ರ, ರಾಜನೀತಿ ಮತ್ತು ಪರಾಕ್ರಮ ಎಂಬ ಮೂರೂ ತನ್ನಲ್ಲಿ ಸಮೃದ್ಧವಾದುವೆನಿಸಿ (ಪ್ರಭು, ಮಂತ್ರ ಹಾಗೂ ಉತ್ಸಾಹ ಎಂಬ) ಮೂರು ಶಕ್ತಿಗಳಿಂದ ಸಂಪನ್ನನಾದ ಆ ರಾಜನು ಕಂಗೊಳಿಸಿದನು. ೧೦. "ಮನ್ಮಥನ ಸೌಂದರ್ಯಕ್ಕಿಂತಲೂ ಈತನ ಚೆಲುವೆ ಮಿಗಿಲೆಂದು" ನೋಡುವವರ ಕಣ್ಣುಗಳನ್ನು ಸೆರೆಹಿಡಿದು ಆತನ ರೂಪವು ಮನಸ್ಸಿಗೆ

ಅಂತುಮಲ್ಲದೆಯುಂ
ಕುಪಿತಪ್ರಮದಾಜನವಾ ।
ಮಪದಾಲಕ್ತಕದೆ ಪಲ್ಲವಿಪ್ಪುದಶೋಕಂ ॥
ನೃಪತಿಲಕಂ ಮುಗ್ಧಾಪಾಂ ।
ಗಪಾತದಿಂದಲರ್ವನಂಗಜಕ್ರೀಡೆಗಳೊಳ್ ॥ ೧೧

ಅದಲ್ಲದೆಯುಂ ಸಿದ್ಧಪದವೀಪ್ರಾಪ್ತನಂತಪಗತವಿಗ್ರಹನುಂ ಅವ್ಯಾಬಾಧಪ್ರಕೃತಿಯುಮಶೇಷಗುಣಾವಗಾಹನಸಮರ್ಥನುಮಖಂಡಿತಸುಖೋನ್ಮುಖನುಮೆನಿಸಿದಾ ಮಹೀಕಾಂತನಂತಃಪುರಪ್ರಧಾನಭೂತೆ ॥ ೧೨

ಸುಲಲಿತಶೃಂಗಾರಾಮೃತ ।
ಸಲಿಲಾಕರವೇಲೆ ಮದನವಿಜಯಮಹಾಮಂ ॥
ಗಲಲೀಲೆಯಷ್ಟಮೀಂದೂ ।
ಜ್ವಲಭಾಲೆ ಸುವರ್ಣಮಾಲೆಯೆಂಬಳ್ ಪೆಸರಿಂ ॥ ೧೩

ಆ ರಮಣಿಯ ದೇಹದ್ಯುತಿ ।
ವಾರಿಯಿನವಿರಳವಿಸಾರಿಯಿಂ ತೊಳೆದಂತಾ ॥
ಚಾರಮೆನಿತ್ತನಿತುಂ ವಿ ।
ಸ್ತಾರಿಸಿದುದು ವಿಮಲವೃತ್ತಿಯಿಂದನವರತಂ ॥ ೧೪

ಸಂತೋಷವನ್ನುಂಟು ಮಾಡುವುದು. ಅಷ್ಟೇ ಅಲ್ಲದೆ–೧೧. ಕೋಪಗೊಂಡ ಚೆಲುವೆಯರು ಎಡಗಾಲಿಂದ ಒದೆದಾಗ ಅವರ ಅಂಗಾಲಿನ ಅಲತಗೆಯ ರಸದಿಂದ ಅಶೋಕವೃಕ್ಷವು ಚಿಗುರುವುದು : ಈ ನೃಪನೆಂಬ ತಿಲಕವೃಕ್ಷವು (ಅರಸುಗಳಿಗೆಲ್ಲ ಭೂಷಣಪ್ರಾಯನಾದವನು) ಮನ್ಮಥಲೀಲೆಯಲ್ಲಿ ಮುಗ್ಧವನಿತೆಯರ ಕಡೆಗಣ್ಣ ನೋಟದಿಂದ ಹೂಬಿಡುವುದು. ೧೨. ಅದಲ್ಲದೆ, ಸಿದ್ಧಪದವಿಯನ್ನು ಹೊಂದಿದವನಂತೆ "ಅಪಗತವಿಗ್ರಹನು" (೧. ವೈರಿಗಳನ್ನೆಲ್ಲ ಗೆದ್ದುದರಿಂದ ಯುದ್ಧವೇ ಇಲ್ಲದವನು. ೨. ಸಿದ್ಧಪದಕ್ಕೆ ಮುಟ್ಟಿದುದರಿಂದ ದೇಹವಿಲ್ಲದವನು), "ಅವ್ಯಾಬಾಧ ಪ್ರಕೃತಿ"ಯು (ತನ್ನ ಪ್ರಜೆಗಳಿಗೆ ಯಾವ ತೊಂದರೆಯೂ ಇಲ್ಲದಂತೆ ಮಾಡಿದವನು. ೨. ಮುಕ್ತನಾದುದರಿಂದ ಆತ್ಮ ಸ್ಥಿತಿಗೆ ಯಾವುದೇ ಬಾಧೆಯಿಲ್ಲದವನು), "ಅಶೇಷಗುಣಾವಗಾಹ"ನು (೧. ಸಮಸ್ತ ಸದ್ಗುಣಗಳಿಂದ ಕೂಡಿದವನು. ೨. ಅನೇಕ ಸಿದ್ಧರ ಆತ್ಮಗಳೊಡನೆ ಒಂದೇ ಅವಕಾಶದಲ್ಲಿ ಲೀನವಾಗಿರುವವನು) ; "ಅಖಂಡಿತ ಸುಖೋನ್ಮುಖ"ನು (೧. ನಿರಂತರವಾದ ಸುಖೋಪಭೋಗವುಳ್ಳವನು. ೨. ಶಾಶ್ವತವಾದ ಅನಂತಸುಖವುಳ್ಳವನು) : ಹೀಗೆ ಇರುವ ಆ ಭೂಪತಿಯ ಹೆಂಡಿರಲ್ಲಿ ಮುಖ್ಯಳಾದವಳು– ೧೩. ಸುವರ್ಣಮಾಲೆಯೆಂಬವಳು; ಶೃಂಗಾರವೆಂಬ ಅಮೃತಸರೋವರದ ತೀರದಂತಿರುವಳು; ಮನ್ಮಥವಿಜಯದ ಮಹಾಮಂಗಳದ ವಿಲಾಸದಂತಿರುವಳು; ಅಷ್ಟಮಿಯ ಚಂದ್ರನಂತೆ ಕಾಂತಿಮಯವಾದ ಹಣೆಯುಳ್ಳವಳು. ೧೪. ಆ ಮನೋಹರಿಯ ಅತಿಶಯವಾದ ದೇಹಕಾಂತಿಯೆಂಬ

ಪ್ರಿಯೆಯಧರಸ್ಥಳೀಮಧುರಿಮಂ ತನಗೊತ್ತೆನೆ ವರ್ತಿಸಿತ್ತು ಧಾ ।
ತ್ರಿಯೊಳಮೃತಂ ವಿಳೋಚನಮರೀಚಿಗಳಂ ಮಱಿಪೆತ್ತು ಚಂದ್ರಿಕಾ ॥
ಚಯಮೆಳಸಿತ್ತು ವಾಸರಮುಮಂ ದರಹಾಸವಿಭಾಸಿತವಕ್ತ್ರಶೋ ।
ಭೆಯ ನೆವದಿಂದೆ ಚಂದ್ರವಳಯಂ ತಳೆದತ್ತನಿಶಂ ದ್ವಿರೂಪಮಂ ॥ ೧೫

ಸುಟಿಸುಟಿದಿರ್ದ ನಾಭಿ ವಳಿಗಳ್ ತೆರೆಗಳ್ ಜಘನಂ ಪೊದಟ್ಟಿ ನು ।
ಣ್ಬುಟಿಲೆಸೆದಿರ್ದ ಬಾಸೆ ಜಳನೀಳಿಕೆ ಕಣ್ಗಳೆ ಮೀಂಗಳಾಗೆ ಪೊಂ ॥
ಪುಟಿಯೆನೆ ರಾಜಹಂಸನ ಮನಕ್ಕನುಕೂಲತೆಯಿಂ ಲತಾಂಗಿ ಮೆ ।
ಯ್ವಟಿಯೊಲವಂ ನಿಮಿರ್ಚಿದಳನಂಗವಿನೋದನದೀವಿಳಾಸದಿಂ ॥ ೧೬

ಅದಲ್ಲದೆಯುಮಾ ಮಹೀವಲ್ಲಭಂ ಸುವರ್ಣಮಾಲಾಮಹಾದೇವೀರೂಪಸ್ತವಸ್ತುತಾನೇಕಹೃದ್ಯ ಗದ್ಯಪದ್ಯಕಥನದಿಂದಾತ್ಮೀಯವಸ್ತುಕವಿತಾಪ್ರೌಢಿಯಂ ರೂಢಂಮಾಡಿಯುಂ, ಆ ಸೌಭಾಗ್ಯನಿಧಿಯ ಸೌಭಾಗ್ಯವರ್ಣನೋಪರಚಿತ ಬಹುವಿಧಪ್ರಬಂಧಗೀತಂಗಳಿಂದಾತ್ಮೀಯಕವಿತಾಪ್ರಾಗಲ್ಭ್ಯಮಂ ಪ್ರಕಟಿಸಿಯುಂ, ಆ ಶೃಂಗಾರರಸತರಂಗಿಣಿಯ ತುಂಗಸ್ತನಕಪೋಲಕ ವಿಲಿಖಿತ ಮೃಗಮದಪತ್ರಭಂಗಂಗಳಿಂ ಚಿತ್ರಕಳಾಕೌಶಲಮಂ ಪ್ರಕಾಶಿಸಿಯುಂ, ಆ ಭರತವಿದ್ಯಾಭಾರತಿಯ ಲೀಲಾಲಾಸ್ಯಸಮಯಸಂವಾದಿತ

ನೀರಿನಿಂದ ತೊಳೆದಿಟ್ಟಂತೆ ಆಕೆಯ ಶೀಲವೆಲ್ಲ ಸದಾಕಾಲ ಪರಿಶುದ್ಧವಾಗಿರುವುದು. ೧೫. ಈ ಪ್ರಿಯೆಯ ಕೆಳದುಟಿಯ ಮಾಧುರ್ಯವೆ ಈ ಭೂಮಿಯಲ್ಲಿ ತನಗೆ ಆಶ್ರಯಸ್ಥಾನವೆಂದು ಅಮೃತವು ಬಂದು ನೆಲಸಿತ್ತು; ಈಕೆಯ ಕಣ್ಣುಗಳ ಕಾಂತಿಯ ಮರೆಯಲ್ಲಿ ಅಡಗಿಕೊಂಡು ಬೆಳುದಿಂಗಳು ಹಗಲು ಹೊತ್ತಿನಲ್ಲಿಯೂ ಇರುವುದಕ್ಕೆ ಬಯಸಿತು; ಮೆಲ್ನಗೆಯ ಸೊಬಗಿನಿಂದ ಕೂಡಿದ ಈಕೆಯ ಮುಖಸೌಂದರ್ಯವೆಂಬ ನೆವದಿಂದ ಚಂದ್ರಬಿಂಬವು (ಇವಳಲ್ಲಿ ನೆಲಸಿ) (ತನ್ನ ನಿಜವಾದ ಆಕಾಶದಲ್ಲಿಯ ರೂಪವೊಂದು, ಈಕೆಯ ಮುಖರೂಪ ಇನ್ನೊಂದು ಹೀಗೆ) ಎರಡು ರೂಪಗಳನ್ನು ತಾಳಿತು ೧೬. ಸುಳಿಗೊಂಡ ಹೊಕ್ಕುಳೇ ಸುಳಿ, ವಳಿರೇಖೆಗಳೆ ತೆರೆಗಳು, ಜಘನಪ್ರದೇಶವೆ ಮರಳ ದಿಣ್ಣೆಗಳು, ಒಡಲ ಮೇಲಿನ 'ಬಾಸೆ' (ತೆಳುವಾದ ಕೂದಲು ಸಾಲಿನ ಗರೆ) ಯೆ ಹಾವಸೆ, ಕಣ್ಣುಗಳೆ ಮೀನು- ಹೀಗೆ ರಾಜಶ್ರೇಷ್ಠನಾದ ತನ್ನ ಪತಿಯೆಂಬ ಹಂಸನ ಮನಕ್ಕೊಪ್ಪುವಂತೆ ಆಕೆಯು ತನ್ನ ಮೈಯಲ್ಲಿ ಮನ್ಮಥ ವಿನೋದದ ನದಿಯ ಚೆಲುವನ್ನು ನಿರ್ಮಿಸಿದಳು. ೧೭. ಆ ಭೂಪಾಲನು ಸುವರ್ಣಮಾಲಾ ಮಹಾರಾಣಿಯ ರೂಪವರ್ಣನಮಯವಾದ ಹಲವಾರು ಗದ್ಯಪದ್ಯ ಕಾವ್ಯಕೃತಿಗಳನ್ನು ನಿರ್ಮಿಸಿ ತನ್ನ ಕಾವ್ಯರಚನ ಪ್ರೌಢಿಯನ್ನು ರೂಢಿಗೊಳಿಸಿಕೊಳ್ಳುವನು; ಸೌಭಾಗ್ಯದ ನಿಧಾನವಾದ ಆಕೆಯ ಸೊಬಗನ್ನು ವರ್ಣಿಸುವ ನಾನಾಬಗೆಯ ಪ್ರಬಂಧಗೀತಗಳನ್ನು ರಚಿಸಿ ತನ್ನ ಕವಿತಾ ಚಾತುರ್ಯವನ್ನು ಪ್ರಕಾಶಗೊಳಿಸುವನು; ಶೃಂಗಾರರಸದ ನದಿಯಂತಿರುವ ಅವಳ

ಸ್ವಹಸ್ತವಾದ್ಯಮಾನಮಧುರತರಮೃದಂಗಪಾಟಪ್ರಹರಣಂಗಳಿಂ ವಾದ್ಯವಿದ್ಯಾವಿಶಾರದತ್ವಮಂ ವಿಶದೀ ಕರಿಸಿಯುಂ, ಆ ಕಂದರ್ಪಕಲ್ಪಲತೆಯ ಸಮಸಮಾಯೋಗಸಮುಪಕ್ರಮಿತಕಾಲಧಾತುವಯೋನುರೂಪ ಕರಣಪರಿರಂಭಚುಂಬನಕಳಾಸಾಮಗ್ರಿಯಿಂ ಕಾಮತಂತ್ರವಿಜ್ಞಾನಮಂ ಸುಜ್ಞಾನಂಮಾಡಿಯುಂ, ಇಂತು ತಾದಾತ್ಮ್ಯ ಮನೋಹರಂಗಳುಮಾಯತ್ಯವಿರುದ್ಧಂಗಳುಮಪ್ಪ ವಿನೋದಪರಂಪರೆಗಳಿಂ ಕಾಲಮಂ ಸಲಿಸುತ್ತುಮಿರೆಯಿರೆ ॥ ೧೭

ಒಗೆತರ್ಪಂತಮೃತಂ ಹಿಮಾಂಶುಕಲೆಯಿಂದಂತಾಮಹೀಕಾಂತಕಾಂ ।
ತೆಗೆ ಸಂದಾರ್ಪೊಡವುಟ್ಟೆ ಪುಟ್ಟಿದನತರ್ಕ್ಯಂ ನಂದನಂ ತಾನೆ ಲ ॥
ಕ್ಷ್ಮಿಗಧೀಶಂ ಸಸುದರ್ಶನಂ ಬಳಯುತಂ ಕಂಜಾಕ್ಷನೆಂಬಿಂತಿದಂ ।
ಜಗದೊಳ್ ಗೋಸಣೆಮಾಡೆ ತನ್ನ ವಿಹಿತಾರ್ಥಂ ಪದ್ಮನಾಭಾಹ್ವಯಂ ॥ ೧೮

ಶಶಿಯೊಳ್ ಪ್ರಕಾಶಗುಣಮತಿ ।
ವಿಶದಂ ಸೊಗಯಿಸುವವೊಲ್ ನವೋದಯದೊಳವಾ ॥
ಪ್ರಶಮಿತತಮನೊಳ್ ನೆಱೆದುದು ।
ಶಿಶುತೆಯೊಳಂ ನಾಡೆ ರೂಢಿವೆತ್ತ ವಿವೇಕಂ ॥ ೧೯

ಉನ್ನತವಾದ ಕುಚಗಳ ಮೇಲೆಯೂ ಕೆನ್ನೆಗಳ ಮೇಲೆಯೂ ಕಸ್ತೂರಿಯಿಂದ ಅಲಂಕಾರಗಳನ್ನು ಬರೆದು ತನ್ನ ಚಿತ್ರಕಲಾಕೌಶಲ್ಯವನ್ನು ಪ್ರಕಟಿಸುವನು; ನಾಟ್ಯವಿದ್ಯಾಸರಸ್ವತಿಯೆನಿಸಿದ ಆಕೆಯ ಲಾಸ್ಯಪ್ರಸಂಗದಲ್ಲಿ, ಆಕೆಯ ನರ್ತನಕ್ಕೆ ಮೇಳವಾಗಿ ಮೃದಂಗವನ್ನು ಸ್ವಹಸ್ತದಿಂದಲೆ ನುಡಿಸುತ್ತ ತನ್ನ ವಾದ್ಯವಿದ್ಯಾ ನಿಷ್ಣಾತತೆಯನ್ನು ತೋರಿಕೊಡುವನು; ಮನ್ಮಥನ ಕಲ್ಪಲತೆಯಾದ ಆಕೆಯೊಡನೆ ಕೂಡಿ ಕಾಲ, ಧಾತು, ವಯಗಳಿಗೆ ಅನುರೂಪವಾಗಿ ಆಲಿಂಗನ, ಚುಂಬನ ಮೊದಲಾದ ಕಲಾಕ್ರಿಯೆಗಳಿಂದ ತನ್ನ ಕಾಮಶಾಸ್ತ್ರಜ್ಞಾನವನ್ನು ಚೆನ್ನಾಗಿ ಬಳಕೆಗೆ ತರುವನು. ಹೀಗೆ ತಾದಾತ್ಮ್ಯವನ್ನುಂಟು ಮಾಡಿ ಮನಮೋಹಕವೂ ನಿಯಮಕ್ಕೆ ಅವಿರೋಧವೂ ಆದ ಅನೇಕ ವಿನೋದಗಳಿಂದ ಕಾಲ ಕಳೆಯುತ್ತಿರಲಾಗಿ–೧೮. ಚಂದ್ರಕಲೆಯಿಂದ ಅಮೃತವು ಹುಟ್ಟುವಂತೆ ಆ ಮಹಾರಾಣಿಯ ಹೊಟ್ಟೆಯಲ್ಲಿ ಪರಾಕ್ರಮಶಾಲಿಯಾದ ಮಗನು ಹುಟ್ಟಿದನು; ಆತನೊಡನೆ ಸಾಮರ್ಥ್ಯವೂ ಹುಟ್ಟಿ ಕೊಂಡಿತು; ತಾನು "ಸಸುದರ್ಶನ"ನೂ(೧.ನಯನ ಮನೋಹರವಾದ ರೂಪುಳ್ಳ ವನು. ೨. ಸುದರ್ಶನವೆಂಬ ಚಕ್ರಾಯುಧವುಳ್ಳವನು), "ಕಂಜಾಕ್ಷ"ನೂ (೧. ಕಮಲ ದಂತೆ ಕಣ್ಣುಗಳುಳ್ಳವನು, ೨. ವಿಷ್ಣು) ಆದುದರಿಂದ "ಲಕ್ಷ್ಮಿ"ಗೆ (೧. ಸಂಪತ್ತಿಗೆ. ೨. ಲಕ್ಷ್ಮೀದೇವಿಗೆ) ಒಡೆಯನೆಂದು ಜಗತ್ತಿಗೆ ಸಾರುವಂತೆ ಪದ್ಮನಾಭನೆಂಬ ಸಾರ್ಥಕವಾದ ಹೆಸರನ್ನು ಪಡೆದನು. ೧೯. ಚಂದ್ರನಿಗೆ ಉದಯಕಾಲದಲ್ಲಿಯ ಪ್ರಕಾಶ ಗುಣವು ಸ್ಪಷ್ಟವಾಗಿ ಇರುವಂತೆ, ತಮೋಗುಣವಿಲ್ಲದ ಆ ಕುಮಾರನಿಗೆ ಶೈಶವ

ತರುಣತ್ವದುರ್ಲಭಂಗಳ್ ।
ಪರಿಣತಿಸುಖದಂಗಳೆನಿಪ ಸತ್ಕ್ರಿಯೆಗಳನಾ ॥
ಧರಣೀಶಸುತಂ ಪಲಿತಾಂ ।
ಕುರಮಿಲ್ಲದ ವೃದ್ಧನಂದದಿಂದಾಚರಿಪಂ ॥ ೨೦

ಓಜಸ್ಸಂಯುತನುನ್ನತ ।
ಭಾಜನನಾಕಳಿತವಿನಯನಾಯತಕರನಾ ॥
ರಾಜಸುತಕುಂಜರಂ ರಾ ।
ರಾಜಿಸಿದಂ ಗುರುವಚೋಂಕುಶೈಕಾನುವಶಂ ॥ ೨೧

ಎನಿಸಿ ನಿಜಸುಹೃಜ್ಜನವೈರಿಜನಮನೋನುರಾಗಹೃದ್ರೋಗಂಗಳೊಡನೆ ಬಳೆಯೆವಳೆಯೆ ॥ ೨೨

ಪಡೆವನ್ನಂ ಪಕ್ವಬಿಂಬಕ್ಕಧರಮಧರತಾವಾಪ್ತಿಯಂ ನೇತ್ರಯುಗ್ಮಂ ।
ಪಡೆವನ್ನಂ ವೈರಮಂ ಕೈರವದೊಳುರುಭುಜಂಗಳ್ ಭುಜಂಗಾಧಿಪಂಗಂ ॥
ಪಡೆವನ್ನಂ ಸೋಲಮಂ ಭಾಸುರದಶನಚಯಂ ಕುಂದಕೊಳ್ ಕುಂದನೆಂದುಂ ।
ಪಡೆವನ್ನಂ ಯೌವನಶ್ರೀ ಪಡೆದುದು ನೃಪಪುತ್ರಾಂಗದೊಳ್ ನಾಡೆ ಚೆಲ್ವಂ

ಮತ್ತಮಾ ಕುಮಾರನಂ ॥ ೨೩

ಕಾಲದಲ್ಲಿಯೆ ಪ್ರೌಢವಿವೇಕವು ನೆಲೆಗೊಂಡಿತ್ತು. ೨೦. ಚಿಕ್ಕ ವಯಸ್ಸಿನವರಿಗೆ ದುಃಸಾಧ್ಯಗಳೂ, ಪರಿಣತಿಯಲ್ಲಿ ಮಾತ್ರ ಸುಖಪ್ರದಗಳೂ ಆದ ಸತ್ಕರ್ಮಗಳನ್ನು ಆ ರಾಜಕುಮಾರನು ನರೆಹಾಯದ ಮುದುಕನೊ ಏನೊ ಎಂಬಂತೆ ಆಚರಿಸುವನು. ೨೧. ಶಕ್ತಿಶಾಲಿಯೂ, ಶ್ರೇಷ್ಠರಾದ ಹಿರಿಯರ ಆದರಕ್ಕೆ ಪಾತ್ರನೂ, ವಿನಯಶಾಲಿಯೂ ದೀರ್ಘವಾದ ಬಾಹುಗಳುಳ್ಳವನೂ ಆದ ಆ ರಾಜಕುಮಾರನೆಂಬ ಆನೆಯು ಹಿರಿಯರ ಮಾತೆಂಬ ಅಂಕುಶವೊಂದಕ್ಕೆ ಮಾತ್ರ ಅಧೀನನಾಗಿ ವರ್ತಿಸುವನು. ೨೨. ಹೀಗೆ ಖ್ಯಾತನಾದ ಆತನ ಮಿತ್ರರಿಗೆ ಆನಂದವನ್ನೂ, ವೈರಿಗಳಿಗೆ ಹೃದ್ರೋಗವನ್ನೂ ಬೆಳಸುತ್ತಾ ತಾನೂ ಬೆಳೆಯುತ್ತಿರಲಾಗಿ–೨೩. ಆತನ ಕೆಳದುಟಿ ತೊಂಡೆಹಣ್ಣಿಗೆ ಕೀಳುತನವನ್ನೊದಗಿಸಿತು, ಕಣ್ಣುಗಳನ್ನು ಕಂಡು ನೈದಿಲೆಗಳು ವೈರವನ್ನು ತಾಳಿದುವು; ಬಲಿಷ್ಠವಾದ ಬಾಹುಗಳನ್ನು ಕಂಡು ಸರ್ಪರಾಜನು ಸೋತುಹೋದನು; ಉಜ್ವಲವಾಗಿ ಹೊಳೆಯುವ ಸುಂದರವಾದ ಹಲ್ಲುಗಳೆದುರಿಗೆ ಮೊಲ್ಲೆಗಳು ಹೀನವೆನಿಸಿದುವು; ಹೀಗೆ ಅಭಿವೃದ್ಧಿಗೊಂಡ ಯೌವನದ ಸಂಪತ್ತು ಆ ರಾಜಕುಮಾರನಲ್ಲಿ ಶೋಭೆಯನ್ನು ಪಡೆಯಿತು ಮತ್ತು ಆ ಕುಮಾರನನ್ನು–

ನೋಡಿ ಮರುಳ್ದು ಕೂಡಿ ಬಿಡದಿರ್ದರನಾನಱಿಯೆಂ ವಿಯೋಗಮಂ ।
ಮಾಡಿದ ವಾಮಲೋಚನೆಯರಂಗದೊಳಾಲಿಯ ಸೂಸುನೀರ್ಗಳ ॥
ಬ್ಕಾಡದೆ ತಂದು ಪೆರ್ಮೊಲೆಯೊಳೊತ್ತಿದ ಪಂಕಜಪತ್ರಜಾಳಮಿ ।
ರ್ಪೊಡದೆ ಪಾಸಿದೊಳ್ದಳಿರ್ಗಳುಂ ನೆಱೆ ಬಾಡದೆ ಸೈತು ಪೋಕುಮೇ ॥ ೨೪

ತನಯರ್ ಪಲರುಳ್ಳೊಡಮಾ ।
ಜನಪತಿ ರಂಜಿಸುವನಾ ಕುಮಾರಕನಿಂ ಮ ॥
ತ್ತೆನಿತು ಜಳವಿಹಗಮಿರೆಯುಂ ।
ವನಜವನಂ ರಾಜಹಂಸನಿಂ ರಾಜಿಪವೋಲ್ ॥ ೨೫

ಅಂತು ಸಂತತೋಪಚೀಯಮಾನಪದ್ಮನಾಭಪ್ರಭಾವಭಾವನಾನಂದಿತಮಾನಸಂ ಕನಕಪ್ರಭ ಮಹಾರಾಜಂ ಸುಖದಿನಿರ್ದೊಂದು ದಿವಸಂ ಯಾಮತ್ರಯವಿರಾಮಸಮಯದೊಳ್ ತಾಂಬೂಲಕರಂಕ ವಾಹಿಕಾದ್ವಿತೀಯನುತ್ತುಂಗಸೌಧಶಿಖರನಿರ್ಯೂಹಪರ್ಯಂಕದೊಳ್ ಕುಳ್ಳಿರ್ದು ಬಹಿಃಪುರಶ್ರೀಯಂ ಹೇಳಾವಲೋಕನದಿನಲಂಕರಿಸುತ್ತುಮಿರ್ಪನ್ನೆಗಂ ಉಪವನೋಪಾಂತದ ವಿಪುಳತರತಟಾಕತಟದೊಳ್॥ ೨೬

ಏರಿಯನೀಡಿಱಿವೋಳಿಯೆ ।
ನೀರುಣ್ಬ ಕನಲ್ವ ಪೋರ್ವ ಮೆಲ್ಕೊತ್ತುವ ತ ॥
ತ್ತೀರದ ಕಱುಂಕೆಗೆಳಸುವ ।
ಗೋರಾಜಿಯ ಲೀಲೆ ಕಣ್ಗೆ ಪಡೆದುದು ಚೆಲ್ವಂ ॥ ೨೭

೨೪. ನೋಡಿ ಮರುಳಾಗಿ, ಕೂಡಿಬಿಡದೆ ಉಳಿದವರನ್ನು ನಾನು ಅರಿಯೆನು. ಆತನಿಂದ ಅಗಲಿ ಹೋದ ಚೆಲುವೆಯರ ದೇಹಗಳಲ್ಲಿ ಮಾತ್ರ ಸೂಸಿದ ನೀರೆಲ್ಲ (ಉಗಿಯಾಗಿ) ಮಾಯವಾಗವೆ? ಅವರ ಉನ್ನತ ಕುಚಗಳಿಗೆ ತಂದು ತಂದು ಒತ್ತಿಕೊಂಡ ತಾವರೆಯೆಲೆಗಳು ಒಣಗಿಹೋಗವೆ? ಹಾಸಿದ ಕೋಮಲವಾದ ತಳಿರುಗಳು ಬಾಡದೆ ಹೋಗವೆ? ೨೫. ಎಷ್ಟೋ ಜಲಪಕ್ಷಿಗಳಿದ್ದರೂ ರಾಜಹಂಸವೊಂದರಿಂದಲೆ ಕಮಲಸರೋವರವು ಶೋಭಿಸುವಂತೆ, ತನಗೆ ಹಲವರು ಮಕ್ಕಳಿದ್ದರೂ ಆ ರಾಜನು ಈ ಕುಮಾರನೊಬ್ಬನಿಂದಲೆ ರಂಜನೆ ಪಡೆಯುವನು. ೨೬. ಹೀಗೆ ಪದ್ಮನಾಭನ ಪ್ರಭಾವದಿಂದಾದ ಸಂತೋಷದಿಂದ ಪ್ರಸನ್ನ ಚಿತ್ತದಿಂದಿರುತ್ತ ಕನಕಪ್ರಭ ಮಹಾರಾಜನು ಒಂದು ದಿನ ಸಾಯಂಕಾಲಸಮಯದಲ್ಲಿ ತಾಂಬೂಲದ ಕರಡಿಗೆಯನ್ನು ಹಿಡಿದ ದಾಸಿಯೊಬ್ಬಳೊಡನೆ ತನ್ನ ಉಪ್ಪರಿಗೆಯ ಹಜಾರದಲ್ಲಿ ಮಂಚದ ಮೇಲೆ ಕುಳಿತುಕೊಂಡು ತನ್ನ ಪಟ್ಟಣದ ಹೊರವಲಯದ ಶೋಭೆಯನ್ನು ಸಹಜವಾಗಿ ನೋಡುತ್ತಿದ್ದನು; ಆಗ ಉದ್ಯಾನದ ಬಳಿಯಿದ್ದೊಂದು ವಿಶಾಲ ವಾದ ಕೊಳದ ತೀರಪ್ರದೇಶದಲ್ಲಿ–೨೭. ಕೊಳದ ಏರಿಯನ್ನು ತಮ್ಮ ಕೊಂಬು ಗಳಿಂದ ತಿವಿಯುವ, ನೀರು ಕುಡಿಯುವ, ಕೋಪಗೊಂಡು ಇರಿದಾಡುವ, ಮೆಲುಕಾಡುವ, ದಂಡೆಯ ಹುಲ್ಲಿಗೆ ಬಯಸಿ ಸಾಗುವ ಗೋವುಗಳ ಹಿಂಡಿನ ಬಗೆ ಬಗೆಯ ಆಟವು ಕಣ್ಣಿಗೆ ಸೊಗಸನ್ನುಂಟುಮಾಡಿತು. ಅದನ್ನು ಕಣ್ಣಾರಳಿಸಿ ಸಂತೋಷ

ಅದಂ ವಿನೋದವಿಕಸಿತವಿಳೋಚನಂ ನೋಡುತ್ತುಮಿರೆ ।

ಚಳಗಳಕಂಬಳಂ ಚಳನಕಂಪಿತತುಂಗಕಕುದ್ಧರಂ ಧರಾ ।
ತಳಪರಿಳಂಬಿವಾಳಧಿ ನವಕ್ಷತಲಕ್ಷಿತಕಂಧರಂ ಖುರೋ ॥
ಚ್ಚಳದುರುರೇಣುಧೂಸರಿತನಗ್ರವಿಶೀರ್ಣವಿಷಾಣನಾತ್ತಮಾಂ ।
ಸಳತನು ಬಂದುದಂದು ಮುಹುರುತ್ಥಬೃಹದ್ರವನೊಂದು ಪುಂಗವಂ ॥ ೨೮

ಅಂತು ಬಂದು

ನಸೆವಣಕದೆ ಬೆನ್ನಂ ಸಂ ।
ಧಿಸುವುದುಮಸವಸದಿನೆಡೆಗೆ ಪುಗಲೊಡನಂತಾ ॥
ಬಸವಂ ಪಾಯ್ದೊಡೆ ಕೆಸಱಿಳೊಳ್ ।
ಬಸವಟೆದಿರ್ದೊಂದು ಗೊಂದೆ ಪೊಂದಿತ್ತಾಗಳ್ ॥ ೨೯

ಅದಂ ಕಂಡು ವೃಷಭನ ಅನಿಮಿತ್ತರೋಷಾವೇಶವಿಷಮತೆಗಮಾಜರಾದುರ್ಬಲಬಲೀವರ್ಧ ದುರ್ದರ್ಶಮರಣಾಯಾಸಪರಿಣತಿಗಂ ವಿಸ್ಮಯಂಬಟ್ಟು ಸಂಸೃತಿಕೃತಾನುಶಯನುಂ ಜಾತನಿರ್ವೇದಾಶಯ ನುಮಾಗಿ ತನ್ನೊಳಿಂತೆಂದಂ ೩೦

ಕ್ಷಣಭಂಗವೃತ್ತಿ ತನುಭೃ ।
ದ್ಗಣಜೀವನಮಲ್ಲಿ ಸಂಶಯಂ ನೋಟಿಕ್ಕೊಡಿನಿ ॥
ತ್ತಣಮಿಲ್ಲದನಜೆದುಮಿದೇ ।
ನಣಕಮೊ ಮತಿವಂತರುಂ ವಿಮೋಹಿಸುತಿರ್ಪರ್ ॥ ೩೧

ದಿಂದ ನೋಡುತ್ತಿರಲಾಗಿ–೨೮. ಗಂಗೆದೊಗಲನ್ನು ತೂಗಾಡಿಸುತ್ತ, ಹೆಜ್ಜೆಯಿಡುವ ರಭಸಕ್ಕೆ ಉನ್ನತವಾದ ಇಣಿ ಆಚೆಯೀಚೆ ಒನೆಯುತ್ತಿರಲಾಗಿ, ನೆಲಮುಟ್ಟುವಂತೆ ಬಾಲವನ್ನು ಇಳಿ ಬಿಟ್ಟುಕೊಂಡು, ಹೊಸಗಾಯುಗಳ ಕಲೆಗಳನ್ನು ಕತ್ತಿನಲ್ಲಿ ಧರಿಸಿ ಕೊಂಡು, ಕೊಳಗಗಳಿಂದ ಕೆದರಿದ ಧೂಳು ಮೈಯೆಲ್ಲ ಮುಸುಕಿ, ತುದಿಯಲ್ಲಿ ಸೀಳಿದ ಕೊಂಬುಗಳನ್ನೆತ್ತಿಕೊಂಡು, ಪುನಃ ಪುನಃ ಡುರುಕೆ ಹಾಕುತ್ತ ದಷ್ಟಪುಷ್ಟ ವಾದೊಂದು ಹೋರಿ ಅಲ್ಲಿಗೆ ಬಂದಿತು. ಹಾಗೆ ಬಂದು – ೨೯. ನಸೆಯೇರಿದಂತೆ ಅಲ್ಲಿದ್ದೊಂದು ಮುದಿ ಎತ್ತಿನ ಬೆನ್ನ ಮೇಲೆ ಅಡರಿತು ; ಆ ಎತ್ತು ಸರಿಯಲಾಗಿ ಈ ಬಸವನು ಅದನ್ನು ತಿವಿಯಿತು; ಕೂಡಲೆ ಎತ್ತು ಕೆಸರಲ್ಲಿ ಬಿದ್ದು ಪ್ರಾಣಬಿಟ್ಟಿತು. ೩೦. ಅದನ್ನು ನೋಡಿ, ಹೋರಿಯ ನಿಷ್ಕಾರಣವಾದ ಕ್ರೋಧಾವೇಶಕ್ಕೂ, ಮುಪ್ಪಿನಿಂದ ಹಣ್ಣಾದ ಎತ್ತಿನ ನೋಡಲಾಗದಂತಹ ಸಾವಿನ ಸಂಕಟಕ್ಕೂ ವಿಸ್ಮಯಗೊಂಡು, ಸಂಸಾರದ ದುಃಖಕ್ಕೆ ಮರುಗಿ ವೈರಾಗ್ಯ ಭಾವದಿಂದ ತನ್ನಲ್ಲಿಯೆ ಹೀಗೆಂದುಕೊಂಡನು – ೩೧. ದೇಹಧಾರಿಗಳ ಬಾಳು ಕ್ಷಣದಲ್ಲಿ ನಾಶವಾಗುವಂತಹುದು ; ಇದರಲ್ಲಿ ಎಷ್ಟೂ ಸಂದೇಹವಿಲ್ಲ : ಇದನ್ನು ತಿಳಿದೂ ತಿಳಿದೂ ಬುದ್ಧಿವಂತರು ಕೂಡ ಸಂಸಾರದ ಮೋಹಕ್ಕೆ ಒಳಗಾಗುವರಲ್ಲ – ಇದೆಂತಹ ವಿಚಿತ್ರ ಅಪಹಾಸ್ಯ !

ಉಸಿರೆ ಗಡ ಸೀಮೆ ಬಾಟಿಕ್ಕೆಯ ।
ದೆಸೆಯೊಳ್ ಗಾಳಿಯೆ ಗಡದುವುಮದಱಿಸಕಂ ಭಾ ॥
ವಿಸುವೊಡೆ ಚಲತೆ ಗಡಿನ್ನೇ ।
ವೆಸರ್ಗೊಂಡಪುದಣ್ಣ ನರರ ಚಿರಜೀವಿತೆಯಂ ॥ ೩೨

ಅನಿಮಿತ್ತಂ ಕೊಲುತಿರ್ಪ ಮಿೞ್ತು ನರರಂ ಶೀತಾತಪಾನ್ನಾಂಬುವಾ ।
ಯ್ವಲನಕ್ಷ್ವೇಡನಿಯುದ್ಧ ಯುದ್ಧ ವನಭೂತಕ್ರೂರಸತ್ವಾಮಯಾ ॥
ಶನಿದಾರಿದ್ರ್ಯವಿಯೋಗಶೋಕರತಚಿಂತಾಯಾಸಚೌರ್ಯಪ್ರವ ।
ರ್ತನದೋಷಾದಿಗಳಂ ನೆರಂಬಡೆದವಂ ಮತ್ತೇಕೆ ಕೈವಾರ್ದಪಂ ॥ ೩೩

ಬೆಸನಂಗಳ್ ಮನಮಂ ಮೋ ।
ಹಿಸಿ ಕಣ್ಗಂಧತೆಯನಿತ್ತು ಸತ್ಕ್ರಿಯೆಯೊಳ್ ಚೇ ॥
ಷ್ಟಿಸಲೀಯವು ನಿದ್ರೆಯವೋಲ್ ।
ನಿಸದಂ ನರರಂ ಪ್ರಬೋಧಮಪ್ಪನ್ನೆವರಂ ॥ ೩೪

ಹಿತಮನಱಿಯದೆ ಕೆಲರ್ ಕೆಲ ।
ರತಿಸಂಶಯದಿಂದಮಲ್ಲಿ ಕೆಲಬರ್ ವಿಪರೀ ॥
ತತೆಯಿಂದಿಂತಜ್ಞಾನ ।
ತ್ರಿತಯತಮೋವಿಕೃತಿಯಿಂದೆ ವಿಹ್ವಲರಪ್ಪರ್ ॥ ೩೫

೩೨. ಬಾಳುವೆಯ ಅಸ್ತಿತ್ವಕ್ಕೆ ಉಸಿರೇ ಸೀಮೆ ; ಎಂದರೆ ಗಾಳಿಯೆ ಗತಿ. ಗಾಳಿಯ ಕಾರ್ಯವೇನು ? ಬೀಸಿಕೊಂಡು ಹೊರಟು ಹೋಗುವುದು ಎಂದ ಮೇಲೆ, ಅಣ್ಣ, ಮನುಷ್ಯರಿಗೆ "ಚಿರಕಾಲದ ಆಯುಷ್ಯ" ಎಂದು ಹೆಸರೆತ್ತುವುದಕ್ಕಾದರೂ ಅವಕಾಶವುಂಟೆ? ೩೩. ಮೃತ್ಯುದೇವತೆ ಮನುಷ್ಯರನ್ನು ನಿಷ್ಕಾರಣವಾಗಿ ಕೊಲ್ಲುತ್ತಲೆ ಇರುವನು. ಚಳಿ, ಬಿಸಿಲು, ಅನ್ನ, ನೀರು, ಗಾಳಿ, ಬೆಂಕಿ, ವಿಷ, ಜಗಳ, ಯುದ್ಧ, ಕ್ರೂರ ಪ್ರಾಣಿಗಳು, ರೋಗ, ಸಿಡಿಲು, ಬಡತನ, ವಿರಹದುಃಖ, ರತಿಚಿಂತೆ, ಆಯಾಸ, ಕಳವು ಮೊದಲಾದ ದೋಷಗಳು ಅವನಿಗೆ ಸಹಾಯವಾಗಿ ಇರುವುವು; ಎಂದ ಮೇಲೆ ಅವನೇಕೆ ತಡಮಾಡುವನು? ೩೪. ವ್ಯಸನಗಳು ಮನವನ್ನು ಮರುಳುಗೊಳಿಸಿ, ರಾತ್ರಿಯಂತೆ ಕಣ್ಣುಗಳನ್ನು ಕುರುಡಾಗಿಸಿ, ಸತ್ಕರ್ಮಗಳನ್ನು ಮಾಡಗೊಡು ವುದಿಲ್ಲ. ಎಚ್ಚರಾಗುವವರೆಗೆ ಮನುಷ್ಯರಿಗೆ ಇದೇ ಗತಿ. ೩೫. ತಮಗೆ ಹಿತವಾವುದೆಂಬುದನ್ನು ತಿಳಿದುಕೊಳ್ಳದೆ ಕೆಲವರು, ಅತಿ ಸಂಶಯ ವೃತ್ತಿಯಿಂದ ಕೆಲವರು, ವಿಪರೀತ (ತಪ್ಪಾದ) ತಿಳಿವಳಿಕೆಯಿಂದ ಇನ್ನು ಕೆಲವರು _ಹೀಗೆ ಮೂರು ಬಗೆಯ ಅಜ್ಞಾನಾಂಧಕಾರದ ವಿಕಾರಕ್ಕೊಳಗಾಗಿ ದುಃಖಪಡುವರು.

ಭಾವಿಯೆನಿಸಿರ್ದ ಭೋಗದೊ ।
ಳಾವುದು ನಿಶ್ಚಯಮತೀತಮದತೀತಮೆ ದಲ್ ॥
ಜೀವಂ ತದಾತ್ವಸುಖಲವ ।
ಸೇವೆಗೆ ಕಳವಳಿಪುದದಱಿಕೊಳೇಂ ಪುರುಳುಂಟೇ ॥ ೩೬

ಸಿರಿಗೆ ದರಿದ್ರತೆ ಬಾಟಕ್ಕೆಗೆ ।
ಮರಣಂ ಜರೆ ಯೌವನಕ್ಕಮಭಿಘಾತಮೆನು ॥
ತ್ತಿರೆ ಕಂಡುಂ ಕೇಳ್ದುಂ ಗಡ ।
ಪರಿವರ್ತಿಸರಾತ್ಮಹಿತದೊಳತಿದುರ್ಮತಿಗಳ್ ॥ ೩೭

ಎನಿತಿಷ್ಟಯೋಗದೊಳ್ ಸುಖ ।
ಮನಿತೆ ಮನೋದುಃಖಮದಱಗಲ್ಕೆಯೊಳೆಂದ ॥
ಲ್ತೆ ನಿವೃತ್ತಿಯೊಳೆಸೆವರ್ ಸ ।
ಜ್ಜನರಾತ್ಮಜ್ಞತೆಗೆ ನೋಟಿಕ್ಕೊಡದು ಫಲಮೆ ವಲಂ ॥ ೩೮

ಪರಿಣತಿಸುಖಮಂ ಭಾವಿಸೆ ।
ಶರೀರಿಗರ್ಹತ್ಪ್ರವಚನಮಲ್ಲದೆ ಪೆಱತಿ ॥
ಲ್ಲರುಚಿಯದಱಿಲ್ಲಿ ಸಮನಿಸೆ ।
ಸರುಜಂಗೌಷಧವಿರಕ್ತಿಯಾದಂತಕ್ಕುಂ ॥ ೩೯

ಎಂದು ಬಗೆದು ಮತ್ತಮಿಂತೆಂದಂ :–

೩೬. "ಇನ್ನು ಮುಂದೆ ಬರಲಿದೆಯೆಂಬ ಭೋಗದಲ್ಲಿ ಏನು ನಿಶ್ಚಯ ? ಈಗಾಗಲೆ ಕಳೆದು ಹೋದುದಂತೂ ಕೈಮೀರಿದುದೆ. ಆದುದರಿಂದ ಈಗ ಸದ್ಯಕ್ಕೆ ದೊರೆವ ಸುಖ ಎಷ್ಟೇ ಅಲ್ಪವಾದರೂ ಅದನ್ನೆ ಭೋಗಿಸುವೆನು" ಎಂದು ಜೀವ ಚಡಪಡಿಸುವುದು. ಆದರೆ ಈ ಸುಖದಲ್ಲಿ ಏನಾದರೂ ಹುರುಳಿದೆಯೆ ? ೩೭. ಶ್ರೀಮಂತಿಕೆಗೆ ಬಡತನವೂ, ತಾರುಣ್ಯಕ್ಕೆ ಮುಪ್ಪೂ, ಜೀವನಕ್ಕೆ ಮರಣವೂ ನಾಶಕಾರಣವೆಂಬುದನ್ನು ಕಂಡು, ಕೇಳಿ ತಿಳಿದರೂ ಕೂಡ ಅತ್ಯಂತ ಬುದ್ಧಿಗೇಡಿಗಳಾದ ಜನರು ಆತ್ಮಕಲ್ಯಾಣಕ್ಕಾಗಿ ಪ್ರಯತ್ನಿಸುವುದಿಲ್ಲ. ೩೮. ಇಷ್ಟವಾದುದು ಬಂದಾಗ ಎಷ್ಟು ಸುಖಕೊಡುವುದೊ, ಹೋದಾಗ ಅಷ್ಟೇ ದುಃಖವುಂಟುಮಾಡುವುದು. ಇದನ್ನು ತಿಳಿದವರಾದುದರಿಂದಲೆ ಸಜ್ಜನರು ವೈರಾಗ್ಯ ಹೊಂದಿ ಸುಖದಿಂದಿರುವರು. ಆತ್ಮಜ್ಞಾನಕ್ಕೆ ಅದೇ ಅಲ್ಲವೆ ಫಲ ? ೩೯. ಪರಮ ಸುಖ ದೊರೆಯ ಬೇಕಾದರೆ ಅರ್ಹಂತನ ಬೋಧವಚನವಲ್ಲದೆ ಬೇರೆ ಮಾರ್ಗವಿಲ್ಲ. ಆ ವಚನದಲ್ಲಿ ಆಸಕ್ತಿಯಿಲ್ಲವೆಂದರೆ ರೋಗಿಯಾದವನು ಔಷಧವನ್ನು ಬಿಟ್ಟು ಕೊಟ್ಟಂತೆಯೆ ಸರಿ. ಹೀಗೆ ವಿಚಾರಮಾಡಿ ಮತ್ತೆ ಇಂತೆಂದನು– ೪೦. ಆಗಮ

॥ ಹರಿಣೀವೃತ್ತಂ ॥

ಶ್ರುತದೊಳತಿತಾತ್ಪರ್ಯಂ ಸದ್ಬೋಧಸಾಧುಜನಂಗಳೊಳ್ ।
ಕೃತಸಮುಚಿತಾಭ್ಯಾಸಂ ಜನ್ಮಸ್ವರೂಪದೊಳಂ ವಿವೇ ॥
ಕಿತೆಯಿವಿನಿತುಂ ಮೆಯ್ವೆತ್ತಿರ್ದುಂ ವಿಚಾರಿಪೊಡೆನ್ನವೋ ।
ಲಿತರನೃಪನಿಂತಾವೊಂ ಪ್ರೋನ್ಮತ್ತವೃತ್ತಿಯಿನಿರ್ದಪಂ ॥ ೪೦

ಕಣ್ಬರಿ ಪುತ್ರಮಿತ್ರವನಿತಾಜನದೊಳ್ ಸಮಸಂದು ರಾಜ್ಯಮಂ ।
ಜಾಣ್ಬಿಡೆ ದುಃಖಹೇತುವನಿದಂ ನೆಱೆ ತಾಳ್ದಿ ಪರತ್ರಸೌಖ್ಯಮಂ ॥
ಪೂಣ್ಬ ತಪೋನಿಯೋಗಮನದಂ ಮಱೆದಿಂತಳಿಪಿಂದೆ ಬಿಟ್ಟಿನ ।
ಟ್ಟುಣ್ಬ ನರಂಗೆ ಸಂಗಡಿಗನಪ್ಪೆನೆ ತಪ್ಪೆನೆ ಹಾಸ್ಯಭಾರಮಂ ॥ ೪೧

ನೆಯ್ದಿಲೆಸಳೆಂಬ ಬಗೆ ತ ।
ಳ್ಪೊಯ್ದಿರೆ ಕೂರ್ವಾಳ ಮೊನೆಗೆ ಪಾಯ್ವಳಿಯಳಿಪಂ ॥
ಮಾಯ್ದೆನ್ನ ಮನಂ ತಳೆದೇ ।
ನೆಯ್ದಿದುದೋ ಸುಖದಮೆಂದು ದುಃಖಪ್ರದಮಂ ॥ ೪೨

ಸ್ಫುರದಾಶಾಜ್ವಳನಂ ದು ।
ರ್ಧರಸುತಪಸ್ತೀರ್ಥವಾರಿಪರಿಷೇಕದಿನೆಂ ॥
ತಿರೆ ಕಿಡುಗುಂ ಭೋಗಾಜ್ಯೋ ।
ತ್ಕರಪಾತದಿನೆಂತುಮಂತದೇಂ ಮುಟ್ಟುಗುಮೇ ॥ ೪೩

ಗಳ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡಿರುವೆನು ; ಉತ್ತಮವಾಗಿ ಬೋಧೆ ಮಾಡುವ ಸಾಧುಜನರಲ್ಲಿ ಯೋಗ್ಯವಾಗಿ ಅಭ್ಯಾಸ ಮಾಡಿರುವೆನು; ಜನ್ಮಸ್ವರೂಪದ ಜ್ಞಾನವನ್ನು ಪಡೆದಿರುವೆನು. ಹೀಗಿದ್ದೂ ಮೈಮರೆತು ಉನ್ಮತ್ತನಾಗಿ ನಡೆದುಕೊಳ್ಳುವ ನನ್ನಂತಹ ಇನ್ನೊಬ್ಬ ಅರಸನು ಯಾವನಾದರೂ ಉಂಟೆ? ೪೧. ಗೆಳೆಯರು ಹೆಂಡಿರು ಮಕ್ಕಳು ಎಂಬ ಜನರಲ್ಲಿಯೆ ಕಣ್ಣಿಟ್ಟುಕೊಂಡು, ದುಃಖಕಾರಣವಾದ ಈ ರಾಜ್ಯಪದವಿಗೆ ಬುದ್ಧಿಗೇಡಿತನದಿಂದ ಅಂಟಿಕೊಂಡು, ಪರಲೋಕಸೌಖ್ಯವನ್ನು ತಂದುಕೊಡುವ ತಪಶ್ಚರಣೆಯನ್ನು ಮರೆತುಬಿಟ್ಟು ದುರಾಶೆಯಿಂದ ಬಿತ್ತುವ ಬೀಜಗಳನ್ನೇ ಕುದಿಸಿ ತಿಂದು ಬಿಡುವ (ಮೂರ್ಖ) ಮನುಷ್ಯನಿಗೆ ನಾನು ಸಂಗಡಿಗನಾಗಲೆ ? ಅಪಹಾಸ್ಯವನ್ನು ತಪ್ಪಿಸಿಕೊಳ್ಳಲಾರೆನೆ ? ೪೨. ನೈದಿಲೆಯ ದಳವೆಂಬ ಭ್ರಾಂತಿಯಿಂದ ಹರಿತವಾದ ಖಡ್ಗದ ಧಾರೆಗೆ ಹಾಯುವ ದುಂಬಿಯಂತೆ, ನನ್ನ ಮನಸ್ಸು ದುಃಖಕಾರಣವಾದುದನ್ನು ಸುಖಪ್ರದವೆಂಬ ಭ್ರಾಂತಿಯಿಂದ ಹಿಡಿದುಕೊಂಡಿದೆಯಲ್ಲವೆ ? ೪೩. ಉರಿದೇಳುತ್ತಿರುವ ಆಶೆಯೆಂಬ ಬೆಂಕಿ ಕಠೋರವಾದ ತಪಸ್ಸೆಂಬ ತೀರ್ಥಜಲವನ್ನು ಸುರಿದಾಗಲೆ ಆರುವುದಲ್ಲದೆ,

ಎಂದು ಸಂಸಾರಶರೀರಭೋಗವೈರಾಗ್ಯರಸವಿಸರಪ್ಲಾವಿತಾಶಯಕುಶೇಶಯನಾಗಿರ್ಪನ್ನೆಗಂ ॥ ೪೪

ಸತತಂ ರಾಗಾವಿಳಂ ಪೀಡಿತಕುವಲಯನುನ್ಮಾರ್ಗಸಂಸಕ್ತನುನ್ಮೊ ।
ಲಿತಸಾದ್ರ್ರತ್ವಂ ಸದುರ್ದರ್ಶನರುಚಿ ಖರದಂಡಪ್ರಿಯಂ ತಾನೆನಿಪ್ಪಾ ॥
ಕ್ಷಿತಿಪಂಗೆನ್ನಂದದಿಂದಂ ಸಮನಿಸುಗುಮಧಃಪಾತಮಸ್ತಾಬ್ಧಿಯೊಳ್ ನಿ ।
ಶ್ಚಿತಮೆಂಬಂತಾ ಪ್ರತೀಚೀಜಲಧಿಗಿಳಿದನಂಭೋಜಿನೀಜೀವಿತೇಶಂ ॥ ೪೫

ಆಗಳ್

ಭೂವರನ ಹೃದಯಮಂ ಮು ।
ನ್ನಾವರಿಸಿರ್ದಖಿಳಭೋಗರಾಗಂ ಪೊಱಮ ॥
ಟ್ಟಾವಗಮಾಶಾಂತರಮಂ ।
ತೀವಿದುದೆನಿಸಿತ್ತು ಸಾಂದ್ರಸಂಧ್ಯಾರಾಗಂ ॥ ೪೬

ಅನಂತರಮಾ ಮಹಾತ್ಮನ ಆತ್ಮೀಯಸಾಂಸಾರಿಕಮನೋರಥಂಗಳೊಡನೆ ರಥಾಂಗಂಗಳ್ ವಿಘಟಿಸೆಯುಂ, ವೈರಾಗ್ಯಮತಿಯೊಡನೆ ಕುಮುದ್ವತಿಗಳ್ ವಿಕಾಸಮನೆಯ್ದೆಯುಂ, ಮನಃಪ್ರಿಯೆಯಾದ

ಭೋಗವೆಂಬ ತುಪ್ಪವನ್ನು ಹುಯ್ಯುವುದರಿಂದ ಆರಬಲ್ಲುದೆ ? ೪೪. ಹೀಗೆಂದು ವಿಚಾರಿಸಿ ಸಂಸಾರದಲ್ಲಿಯೂ ದೇಹ ಭೋಗದಲ್ಲಿಯೂ ಉಂಟಾದ ವೈರಾಗ್ಯಭಾವದಿಂದ ಮನಮುಳುಗಿದನು. ೪೫. ಯಾವ ರಾಜನು ನನ್ನಂತೆ ಸದಾ "ರಾಗಾವಿಳನು" (೧. ಮೋಹದಲ್ಲಿ ತೊಡಕಿಕೊಂಡವನು. ೨. ಕೆಂಬಣ್ಣದಿಂದ ಕೂಡಿದವನು) "ಪೀಡಿತ ಕುವಲಯನು" (೧. ಭೂಮಿಯ ಜನವನ್ನೆಲ್ಲ ಹಿಂಸಿಸುವವನು ೨. ನೈದಿಲೆಗಳಿಗೆ ಪೀಡೆಯಾದವನು) "ಉನ್ಮಾರ್ಗಸಂಸಕ್ತ"ನು (೧. ತಪ್ಪುದಾರಿಯಲ್ಲಿ ನಡೆಯುವವನು. ೨. ಮೇಲೇರುವ ಹಾದಿಯನ್ನೇ ಹಿಡಿದವನು) "ಸದುರ್ದರ್ಶನರುಚಿ"ಯು (೧. ನೋಡಲಾಗದಂತಹ ಕೆಟ್ಟ ವಿಷಯಗಳಲ್ಲಿಯೆ ಅಭಿರುಚಿಯುಳ್ಳವನು. ೨. ನೋಡಲಾಗದಂತಹ ಪ್ರಕಾಂಡವಾದ ತೇಜಸ್ಸುಳ್ಳವನು), "ಖರದಂಡಪ್ರಿಯ"ನು (೧. ಪ್ರಜೆಗಳಿಗೆ ಕಠೋರವಾದ ದಂಡ ಶಿಕ್ಷೆಗಳನ್ನು ವಿಧಿಸುವುದರಲ್ಲಿ ಸಂತೋಷಪಡುವವನು. ೨. ತಾವರೆಗಳಿಗೆ ಪ್ರಿಯನಾದವನು) ಎನಿಸಿರುವನೊ ಆತನು ನನ್ನಂತೆಯೆ ಕೆಳಕ್ಕೆ ಬಿದ್ದು, ಮುಳುಗಿ ಹೋಗುವನು. ಇದು ನಿಶ್ಚಿತ. ಎಂದು ಹೇಳುವಂತೆ ಕಮಲಪ್ರಿಯನಾದ ಸೂರ್ಯನು ಪಶ್ಚಿಮ ಸಮುದ್ರಕ್ಕೆ ಇಳಿದನು. ಆಗ– ೪೬. ಆ ಅರಸನ ಹೃದಯವನ್ನು ಈ ಮುಂಚೆ ಆವರಿಸಿದ್ದ ಸಮಸ್ತಭೋಗವೆಂಬ ರಾಗ (ಬಣ್ಣ) ವೆಲ್ಲ ಹೊರಬಿದ್ದು ದಿಗಂತ ಪ್ರದೇಶವನ್ನು ತುಂಬಿಕೊಂಡಿತೊ ಏನೋ ಎಂಬಂತೆ ದಟ್ಟವಾದ ಸಂಧ್ಯಾರಾಗವು ತೋರಿತು. ೪೭. ಬಳಿಕ ಆ ಮಹಾತ್ಮನ ಸಾಂಸಾರಿಕ ಅಪೇಕ್ಷೆಗಳೊಡನೆ ಚಕ್ರವಾಕ ಪಕ್ಷಿಗಳು ಅಗಲಿ ಹೋದುವು; ಆತನ ವೈರಾಗ್ಯ ಬುದ್ಧಿಯೊಡನೆ ಬೆಳ್ದಾವರೆಗಳು ಅರಳಿದುವು ; ಆತನ ಮನವೆಚ್ಚಾದ ರಾಜ್ಯಲಕ್ಷ್ಮಿಯು ಮುಖಕಮಲದೊಡನೆ

ರಾಜ್ಯಶ್ರೀಯ ಮುಖಕಮಲದೊಡನೆ ಕಮಲಂಗಳ್ ಸಂಕೋಚಿಸೆಯುಂ, ಇಂತನುರೂಪಮಾದ ರಜನೀಮುಖದೊಳಲ್ಲಿಂ ತಳರ್ದು ನಿರ್ವರ್ತಿತಸಂಧ್ಯೋಚಿತಜಿನೇಂದ್ರವಂದನಂ ಶಯ್ಯಾಗೃಹಕ್ಕೆ ವಂದನಲ್ಪತಲ್ಪತಲಗತನಾಗಿರೆ ॥ ೪೭

ನೆರೆಯಲ್ಕೆಂದು ತಪಶ್ರೀ ।
ವಿರಾಗಮತಿದೂತಿಯಂ ಸಮಂತಟ್ಟಿದಳಾ ॥
ದರಿಸಿದಪನವಳನೆಂದೀ ।
ಪುರುಡಿಂ ನಿದ್ರಾವಧೂಟಿ ಪೊರ್ದಳೆ ನೃಪನಂ ॥ ೪೮

ಅಂತು ಅಂದಿನಿರುಳಂ ಕಳೆದು ಮಱುದೆವಸಮಾಸ್ಥಾನಮಂಟಪಮಧ್ಯಸ್ಥಿತನುಮಶೇಷಮಂತ್ರಿ ಪ್ರಧಾನಪರಿವಾರಪರಿವೃತನುಮಾಗಿ ಕುಮಾರನಂ ಬರಿಸಿ ನಿಜಮಣಿಮಯಪೀಠಿಕಾಪಾರ್ಶ್ವಸ್ಥಿತಚಂಚತ್ಕಾಂಚನಾಸಂಧಿಯೊಳ್ ಕುಳ್ಳಿರಿಸಿ ॥ ೪೯

ಮೊದಲೊಳ್ ತಾಂ ಯೌವರಾಜ್ಯಂ ಬೞಿಕೆ ನಡುವೆಸಂದಾಧಿರಾಜ್ಯಂ ಬೞಿಕ್ಕಂ ।
ತುದಿಯೊಳ್ಕೈವಲ್ಯಸೌಖ್ಯಪ್ರದಮೆನಿಪ ತಪೋರಾಜ್ಯಮೆಂದೆಂತುಮೀಯಂ ॥
ದದೆ ಸೇವ್ಯಂಗಳ್ ಮದೀಯಾನ್ವಯನೃಪರ್ಗದನಾಂ ತಪ್ಪಿ ರಾಜ್ಯೈಕಸೇವಾ
ಮದದಿಂದಿರ್ದಂದುಂಕೀರ್ತಿಂದುಗೆ ಸಮನಿಸದೇ ದುರ್ಯಶೋರಾಹುರೋಧಂ ॥ ೫೦

ಕೆಂದಾವರೆಗಳು ಮುದುಡಿಕೊಂಡವು; ಹೀಗೆ ತನ್ನಂತೆ ಸಾಯಂಕಾಲವೂ ವರ್ತಿಸುತ್ತಿರಲಾಗಿ, ಅಲ್ಲಿಂದ ಹೊರಟು, ಸಂಧ್ಯಾಕಾಲಕ್ಕೆ ಉಚಿತವಾದ ಜಿನೇಂದ್ರ ವಂದನೆಯನ್ನು ಮಾಡಿ, ಶಯನಗೃಹಕ್ಕೆ ಬಂದು ವಿಶಾಲವಾದ ಹಾಸುಗೆಯ ಮೇಲೆ ಮಲಗಿದನು. ೪೮. "ತಪೋಲಕ್ಷ್ಮಿಯು ತನ್ನ ಬಳಿಗೆ ಕರೆಯಿಸಿಕೊಳ್ಳಲೆಂದು ವೈರಾಗ್ಯ ಬುದ್ಧಿಯೆಂಬ ದೂತಿಯನ್ನು ಈತನೆಡೆಗೆ ಕಳುಹಿಸಿರುವಳು, ಈತನು ಅವಳನ್ನು ಆದರಿಸುತ್ತಿರುವನು" ಎಂಬ ಅಸೂಯೆಯಿಂದ ನಿದ್ರಾದೇವಿಯು ಆ ಅರಸನ ಸಮೀಪಕ್ಕೆ ಸುಳಿಯದಾದಳು. ೪೯. ಹಾಗೆ ಆ ರಾತ್ರಿಯನ್ನು ಕಳೆದು ಮರುದಿನ, ಓಲಗಶಾಲೆಯ ಮಧ್ಯದಲ್ಲಿ ಕುಳಿತು, ಎಲ್ಲ ಮಂತ್ರಿಪ್ರಧಾನ ಪರಿವಾರದೊಡನಿದ್ದು ಕುಮಾರನನ್ನು ಕರೆತರಿಸಿ, ತನ್ನ ರತ್ನಸಿಂಹಾಸನದ ಪಕ್ಕದಲ್ಲಿದ್ದ ಚಿನ್ನದ ಪೀಠದಲ್ಲಿ ಆತನನ್ನು ಕುಳ್ಳಿರಿಸಿ (ಹೀಗೆ ನುಡಿದನು) – ೫೦. "ಆರಂಭದಲ್ಲಿ ಯುವರಾಜ ಪದವಿ, ಮಧ್ಯದಲ್ಲಿ ಅಧಿರಾಜ ಪದವಿ, ಅಂತ್ಯದಲ್ಲಿ ಮೋಕ್ಷಕಾರಣವಾದ ತಪೋರಾಜ್ಯ ಪದವಿ– ಈ ರೀತಿಯಾಗಿ ನಮ್ಮ ವಂಶದ ಅರಸರಿಗೆಲ್ಲ ನಡೆದು ಬಂದ ಸಂಪ್ರದಾಯವುಂಟು. ಅದಕ್ಕೆ ವ್ಯತಿರಿಕ್ತವಾಗಿ ನಾನು ರಾಜ್ಯ ಪದವಿಯ ಮದದಿಂದ ಅದೊಂದಕ್ಕೇ ಅಂಟಿಕೊಂಡು ಉಳಿದರೆ ಚಂದ್ರನಂತಿರುವ ನಮ್ಮ

ಮತ್ತಂ

ಬಳಮಱೆದಿರ್ದ ತೋಳನಿಱೆಕೆಯ್ವಳಿಪಿಂದೆ ಪುರುಳ್ ಧುರಕ್ಕೆ ಕಂ (?) ।
ಟಳಿಸೆ ಕನಲ್ದು ಪೋಗೆ ಸಿರಿ ಬಂಧುವಧೂತತಿ ವೃದ್ಧರಾಜ್ಯಮಂ ॥
ದೆಳಸದೆ ಕೂಡೆ ಬೇರ್ಪಡೆ ಬೞಿಕ್ಕಿವನಾನುೞೆವೊಂದು ಮಾತು ಭೂ ।
ತಳಭರಧಾರಣಕ್ಷಮಭುಜಾಬಳ ಪೇೞ್ ಪುನರುಕ್ತಮಲ್ಲವೇ ॥ ೫೧

ಅದುಕಾರಣದಿಂ

ಸುರಪತಿಸೇವ್ಯಮಾನಮೆನಿಸಿರ್ದುದನೆನ್ನಯ ಸತ್ತ್ವಮಾತಪೋ ।
ಭರಮನಡುರ್ತು ತಾಳ್ದಲೆಳಸಿರ್ದುದಣಂ ಬೞೆಗಯ್ಯೊಳಾನಿದಂ ॥
ಧರಿಯಿಪುದಾಯ್ತಶಕ್ಯಮುದಜೆಂ ಧರಣೀಭರಮಂ ತ್ವದೀಯದೋಃ ।
ಪರಿಘದಿನಾಂತು ಪಿಂಗಿಪುದು ನಂದನ ದುರ್ವಹಭಾರಖೇದಮಂ ॥ ೫೨

ಎನಲೊಡಮದಂ ಪ್ರತಿಷೇಧಿಸುವ ಬಗೆಯಿಂ ಕುಮಾರನಿಂತೆಂದಂ :-

ಜೀವದಯಾಪರಂ ಪರಮದೀಕ್ಷೆಯದಂ ತಳೆಯಲ್ಕೆ ನೀವಿದಂ ।
ದೇವಿಳೆಯಂ ಸಮಂತಿೞೆಯವಿಟ್ಟೊಡೆ ಶೇಷಫಣೌಘವಾತ್ಮಕಂ ॥
ಶಾವಧಿಯಾಗೆ ತಗ್ಗಿದಪುದಾಕಮಠಾಧಿಪಖರ್ಪರಂ ಸ್ವವ ।
ಕ್ಷೋವಧಿಯಾಗೆ ಮೞ್ಗಿದಪುದೇನಿದು ಸಚ್ಚರಿತಾನುರೂಪಮೇ ॥ ೫೩

ವಂಶಕೀರ್ತಿಯನ್ನು ದುರ್ಯಶವೆಂಬ ರಾಹು ನುಂಗದಿರಬಹುದೆ ? ಮತ್ತು ೫೧. (ನಾನು ಹೀಗೆಯೆ ರಾಜನಾಗಿ ಮುಂದುವರಿದೆನಾದರೆ) ಶಕ್ತಿಗುಂದಿದ ನನ್ನ ತೋಳನ್ನು ಅಪಹಾಸ್ಯ ಮಾಡುವಂತೆ ನನ್ನ ಬಲ ಯುದ್ಧಕ್ಕೆ ಸಲ್ಲದೆ ಹಿಮ್ಮೆಟ್ಟುವುದು; ಆಗ ಲಕ್ಷ್ಮಿ ಕೋಪಗೊಂಡು ನನ್ನಿಂದ ತೊಲಗುವಳು; ಈ ಮುದುಕನ ರಾಜ್ಯವೇಕೆಂದು ಬಂಧುಗಳೂ ವಧುಗಳೂ ನನ್ನಿಂದ ಅಗಲುವರು; ಹೀಗಾದ ಬಳಿಕ ನಾನು ಎಲ್ಲವನ್ನು ತೊರೆಯುವೆನೆಂದರೆ ಅದು (ಈಗಾಗಲೆ ನಡೆದು ಹೋದ ಸಂಗತಿಯಾಗಿರುವುದರಿಂದ) ಪುನರುಕ್ತವಾಗುವುದಿಲ್ಲವೆ? ಭೂಮಂಡಲದ ಭಾರವನ್ನು ನಿರ್ವಹಿಸಲು ಸಮರ್ಥನಾದ ಕುಮಾರನೆ, ನೀನೇ ಹೇಳು. ಆದುದರಿಂದ– ೫೨. ದೇವೇಂದ್ರನು ಅಪೇಕ್ಷಿಸುವಂತಹ ಸಾಮರ್ಥ್ಯ ನನ್ನದು; ಈಗ ಅದು ತಪಸ್ಸಿನ ಉಗ್ರತೆಯನ್ನು ತಾಳಲು ಬಯಸಿದೆ; (ವೈರಾಗ್ಯ ಹೊಂದಿರುವುದರಿಂದ) ಈ ಭೂಮಿಭಾರವನ್ನು ನಾನು ಬರಿಗೈಯಿಂದ ಹೊರುವುದು ಅಸಾಧ್ಯ ; ಆದುದರಿಂದ ಈ ಭಾರವನ್ನು ನೀನು ವಹಿಸಿಕೊಂಡು, ನನ್ನ ಶ್ರಮವನ್ನು ದೂರಗೊಳಿಸು" ಹೀಗೆನ್ನಲಾಗಿ ಅದನ್ನು ವಿರೋಧಿಸುವ ಅಭಿಪ್ರಾಯದಿಂದ ಕುಮಾರನು ಹೀಗೆ ನುಡಿದನು– ೫೩. "ದೇವ, ನೀವು ಈಗ ತಾಳಬೇಕೆಂದಿರುವ ದೀಕ್ಷೆ ಜೀವದಯಾಪೂರ್ಣವಾದುದು. ಹೀಗಿರುವಾಗ ನೀವು ಈ ಭೂಮಿಯನ್ನು ನಿಮ್ಮ ಕೈಯಿಂದ ಇಳಿಸಿಬಿಟ್ಟರೆ, (ಅದರ ಭಾರದಿಂದ) ಆದಿಶೇಷನ ಹೆಡೆ ಕುಸಿದು ಕಂಠದಲ್ಲಿ ಸಿಕ್ಕಿಕೊಳ್ಳುವುದು, ಆದಿಕಮಠನ ಬೆನ್ನು ಹತ್ತಿಕ್ಕಿ ಎದೆಗೆ ಅಂಟಿಕೊಳ್ಳುವುದು. (ಹೀಗೆ ಪ್ರಾಣಿಗಳಿಗೆ ಹಿಂಸೆ

ಎಂಬುದುಮರಸನದನೆ ಪಿಡಿದದುಕಾರಣದಿಂ ನೀಂ ಕುವಳಯಮಂ ನಿಜಕರಕ್ಕೆ ಲೀಲಾಕುವಳಯಂ ಮಾಡಿ, ಶೇಷಾದಿಗಳ್ಗಸಹ್ಯಭಾರಸಂಹಾರಮುಮನೆನಗೆ ಪಾವನತಪೋವನಪ್ರಯಾಣಮಾಂಗಲ್ಯಾನುಕೂಲಮುಮಂ ನೀನೆ ಮಾಟ್ಪುದೆಂದು ಮತ್ತುತ್ತರಕ್ಕೆಡೆಯಿಲ್ಲದಂತು ನುಡಿಯೆ ೩೪

ಈಡಿತಮೆನಗೆ ಸಮಂತಾ ।
ಮ್ರೇಡಿತಮುಂ ಮಹಿಪ ಬಗೆವೊಡೆಂದು ಮುಹುರ್ವಾ ॥
ಕ್ರೀಡೆಯನುಳಿದು ಕುಮಾರಕ ।
ಚೂಡಾಮಣಿ ತಂದೆಯೆಂದುದರ್ಕೆರ್ದೆಗೊಂಡಂ ॥ ೩೫

ವಿಭು ತನ್ನಾತ್ಮೋತ್ತಮಾಂಗಸ್ಥಿತಮನತುಳರೋಮಾಂಚದೋರ್ಯುಗ್ಮದಿಂದಾ। ತ್ಮಭವಪ್ರೋತ್ತುಂಗಮೂರ್ಧಾಗ್ರದೊಳಿಟಿಪಲೊಡಂ ಪೂರ್ವಶೈಲೇಂದ್ರಚೂಡಾ ॥ ನಿಭೃತೋದಗ್ರಾರ್ಕಬಿಂಬಪ್ರತಿನಿಧಿಯೆನಿಸಲ್ ಸಾಲ್ದು ದೇದಿಪ್ಯಮಾನ । ಪ್ರಭಮೇಂ ಕಣ್ಗೆಂಬುವೆತ್ತಿರ್ದುದೊ ವಿಕಟಹಟದ್ರತ್ನಕೂಟಂ ಕಿರೀಟಂ ॥ ೩೬

ಅಂತು ನಿಜಸಾಮ್ರಾಜ್ಯಭಾರಮನಿಳಿಪುವಂತಿಳಿಪಿ

ಅರಮನೆಯಂ ವಧೂವಿತತಿಯಂ ಸುತರಂ ಪರಿವಾರಮಂ ಮಹಾ ।
ಕರಿಕುಳಮಂ ತುರಂಗಬಳಮಂ ಪಟದೊಳ್ ದಿಟಮಾಗಿ ಚಿತ್ರಿಕಂ ॥
ಬರೆದನೆಗೆತ್ತು ಬಾಟತ್ತಿಗೆಯದಾ ಮಹಿಪಂ ಪೊಱಮಟ್ಟನಂತೆ ಸ ।
ತ್ಪುರುಷರದೇಕೆ ಬಂಜೆವಡಿಪರ್ ಗಡ ದುರ್ಲಭಕಾಲಲಬ್ಧಿಯಂ ॥ ೩೭

ಯುಂಟು ಮಾಡುವುದು) ನಮ್ಮ ಒಳ್ಳೆಯ ಚಾರಿತ್ರಕ್ಕೆ ಸಂಗತವೆ?" ೩೪. ಹೀಗೆನ್ನಲು ಅರಸನು ಆ ಮಾತನ್ನೆ ಹಿಡಿದು " ಆ ಕಾರಣದಿಂದಲೆ, ಈ ಭೂಮಂಡಲವನ್ನು ನಿನ್ನ ಕೈಯಲ್ಲಿ ಕ್ರೀಡಾ ಕಮಲದಂತೆ ಸುಲಭವಾಗಿ ಧರಿಸಿ, ಶೇಷ ಕಮಠರಿಗೆ ಭಾರ ಪರಿಹಾರವನ್ನೂ, ನನ್ನ ಪವಿತ್ರ ತಪೋವನ ಪ್ರಯಾಣಕ್ಕೆ ಮಂಗಳೋತ್ಸವವನ್ನೂ ನೀನೇ ಮಾಡು" ಎಂದು ಬೇರೆ ಮಾತಿಗೆ ಅವಕಾಶವೇ ಇಲ್ಲದಂತೆ ನಿರ್ಧಾರವಾಗಿ ನುಡಿದನು. ೩೫. ದೊರೆಯು ಹೇಳಿದುದನ್ನೆ ಮತ್ತೆ ಹೇಳಲಾಗಿ ಅದು ತನಗೆ ಗೌರವಾಸ್ಪದವಾದುದೆಂದು ಭಾವಿಸಿ ಆ ಕುಮಾರಕನು ಮತ್ತೆ ಮಾರ್ನುಡಿಯದೆ ತಂದೆಯ ಮಾತಿಗೆ ಒಪ್ಪಿಕೊಂಡನು. ೩೬. ಅರಸನು ತನ್ನ ತಲೆಯ ಮೇಲಿದ್ದ ಕಿರೀಟವನ್ನು ಪುಲಕಿತವಾದ ಕೈಗಳಿಂದ ಎತ್ತಿ ಮಗನ ಉನ್ನತವಾದ ಶಿರದ ಮೇಲಿಟ್ಟನು; ಪೂರ್ವಾಚಲದ ಶಿಖರದಲ್ಲಿ ಹೊಳೆಯುವ ಸೂರ್ಯಬಿಂಬದ ಪ್ರತಿನಿಧಿಯೊ ಏನೊ ಎಂಬಂತಿದ್ದ ಆ ಉಜ್ವಲ ರತ್ನಕಿರೀಟವು ಥಳಥಳಿಸುತ್ತ ಕಣ್ತುಂಬುವಂತೆ ಶೋಭಿಸಿತು. ಹಾಗೆ ತನ್ನ ಸಾಮ್ರಾಜ್ಯದ ಭಾರವನ್ನೆ ಇಳಿಸಿಕೊಳ್ಳುವಂತೆ ಕಿರೀಟವನ್ನು ಇಳಿಸಿ–೩೭. ಅರಮನೆ, ಹೆಂಡಿರು, ಮಕ್ಕಳು, ಪರಿವಾರ, ಮಹಾಗಜಗಳ ಸಮೂಹ, ಕುದುರೆಯ ದಳ–ಇವೆಲ್ಲವನ್ನೂ ಚಿತ್ರಗಾರನೊಬ್ಬನು ಬರೆದಿಟ್ಟ ಚಿತ್ರಗಳೊ ಏನೊ ಎಂಬಂತೆ ಲಕ್ಷಿಸದೆ ಆ ಅರಸನು ಹೊರಬಿದ್ದನು. ಅತ್ಯಂತ ದುರ್ಲಭವಾದ ಕಾಲಲಬ್ಧಿ ಪ್ರಾಪ್ತವಾದಾಗ ಸತ್ಪುರುಷ

ಅಂತು ಪೋಱಮಟ್ಟು ಪಲಂಬರರಸುಗಳ್ವೆರಸು ಶ್ರೀಧರತಪೋನಿಧಿಯ ಸನ್ನಿಧಿಯೊಳ್ ॥ ೫೮

ಪರಿಹರಿಸಿ ಜಾತರೂಪೋ ।
ತ್ಕರಮಂ ಮತ್ತೊಂದು ಜಾತರೂಪಮನರಸಂ ॥
ಧರಿಯಿಸಿದಂ ನಾಡೆ ಗುಣಾಂ ।
ತರಮಱಿವರದೆಂತು ನೆಗಟ್ಟೊಡಂ ಲೇಸಲ್ತೇ ॥ ೫೯

ಅಂತು ದುರ್ಧರತಪೋಧರನಾದಂ, ಇತ್ತ ಪದ್ಮನಾಭಮಹೀಭುಜಂ

ಗುರುವಿರಹಜನಿತಚಿಂತಾ ।
ತರಂಗಿಣೀರಯಮನಾತ್ಮಕುಲವೃದ್ಧವಚ ॥
ಸ್ತರಣಿಯಿನೆಂತಾನುಮಧಃ ।
ಕರಿಯಿಸಿದಂ ಪಿತೃವಿಯೋಗಮೇಂ ದುಸ್ತರಮೋ ॥ ೬೦

ಅಂತು ವಿಷಾದವಿಮುಖನುಂ ರಾಜ್ಯಾನುಷ್ಠಾನಾಭಿಮುಖನುಮಾಗಿ ಕ್ಷಯ ಲೋಭವಿರಾಗ ಕಾರಣಂಗಳನೊಡರ್ಚಿದುಭಯಪ್ರಕೃತಿಯುಮನನುರಕ್ತಂ ಮಾಡಿಯುಂ, ವಾಕ್ರಂದಪಾರ್ಷ್ಣಿಗ್ರಾಹ ತಾತ್ಯಂತರ್ಧಿಗಳಂ ಪಾಡ್ಗುಣ್ಯದೊಳುಚಿತಗುಣಪ್ರಯೋಗದಿಂ ವಿಧೇಯತೆಯನೈದಿಸಿಯುಂ, ಸಹಜ

ರಾದವರು ಅದನ್ನೇಕೆ ವ್ಯರ್ಥಗೊಳಿಸಿಯಾರು? ೫೮. ಹಾಗೆ ಹೊರಬಿದ್ದು ಅನೇಕ ಅರಸುಗಳೊಡನೆ ಶ್ರೀಧರರೆಂಬ ತಪಸ್ವಿಗಳ ಬಳಿಯಲ್ಲಿ–೫೯. "ಜಾತರೂಪೋತ್ಕರ" (ಚಿನ್ನದಾಭರಣಗಳು) ಗಳನ್ನು ತೊರೆದು ಇನ್ನೊಂದು "ಜಾತರೂಪ"ವನ್ನು (ದಿಗಂಬರತ್ವವನ್ನು) ಧರಿಸಿದನು, ಗುಣಭೇದವನ್ನು ತಿಳಿದವರು ಹೇಗೆ ಮಾಡಿದರೂ ಅದು ಒಳ್ಳೆಯದೇ ಅಲ್ಲವೆ? ಹೀಗೆ ಆತನು ಕಠೋರವಾದ ತಪಸ್ಸಿಗೆ ತೊಡಗಿದನು. ಇತ್ತ ಪದ್ಮನಾಭರಾಜನು–೬೦. ತಂದೆಯ ಅಗಲಿಕೆಯಿಂದುಂಟಾದ ಚಿಂತೆಯೆಂಬ ನದೀಪ್ರವಾಹವನ್ನು ತನ್ನ ಕುಲವೃದ್ಧರ ಸಮಾಧಾನ ವಚನಗಳೆಂಬ ದೋಣಿಯಿಂದ ಹೇಗೊ ದಾಟಿದನು. ತಂದೆಯ ಅಗಲಿಕೆಯ ದುಃಖ ಎಷ್ಟೊಂದು ದುಃಸ್ಸಹವಾದುದು! ೬೧. ಹಾಗೆ ಆತನು ದುಃಖವನ್ನು ಬಿಟ್ಟು, ರಾಜ್ಯದ ಆಡಳಿತಕ್ಕೆ ತೊಡಗಿದನು. ಕೊರತೆ, ದುರಾಸೆ, ಉದಾಸೀನತೆಯೆಂಬ ಕಾರಣಗಳನ್ನು ತೋರ್ಪಡಿಸಿದ ಪ್ರಜಾವರ್ಗವನ್ನೂ, ಅಧಿಕಾರಿವರ್ಗವನ್ನೂ ಉಪಾಯದಿಂದ ತನ್ನಲ್ಲಿ ನಿಷ್ಠರಾಗುವಂತೆ ಮಾಡಿಕೊಂಡನು; ತಾನು ದಂಡೆತ್ತಿ ಹೋದ ಸಂದರ್ಭದಲ್ಲಿ ತನ್ನ ಶತ್ರುಗಳಿಗೆ ಅನುಕೂಲವಾಗುವಂತೆ ಹಿಂಬದಿಯಿಂದ ಆಕ್ರಮಣ ಮಾಡಬಹುದಾದ ಶತ್ರು (ಪಾರ್ಷ್ಣಿಗ್ರಾಹ) ಗಳನ್ನೂ, ಪಾರ್ಷ್ಣಿಗ್ರಾಹನಿಗೆ ಬೆಂಬಲವಾಗಿ ಬರಬಹುದಾದ ಶತ್ರು(ಆಕ್ರಂದ) ಗಳನ್ನೂ, ಕಣ್ಣು ತಪ್ಪಿಸಿ ಗುಪ್ತವಾಗಿ ವೈರ ಸಾಧಿಸುವ ಶತ್ರು (ಅಂತರ್ಧಿ) ಗಳನ್ನೂ ಸಂಧಿವಿಗ್ರಹ ಮೊದಲಾದ ಆರು ಬಗೆಯ ಗುಣಗಳಿಂದ, ತನಗೆ ವಿಧೇಯರಾಗಿ ಮಾಡಿಕೊಂಡನು; ಮತ್ತು ನೆರೆನಾಡುಗಳ ರಾಜರೇ ಮೊದಲಾದ ಸಹಜ ಶತ್ರು (ದಾಯಾದ) ಮತ್ತು ಕಾರಣಾಂತರದಿಂದ ದ್ವೇಷಿಗಳಾದ (ಕೃತ್ರಿಮ) ಶತ್ರುಗಳ ರಾಜ್ಯಗಳಲ್ಲಿರುವ ಹದಿನೆಂಟು

ಕೃತ್ರಿಮವಿದ್ವಿಷ್ಟಾಷ್ಟಾದಶತೀರ್ಥಂಗಳೊಳ್ ವಿವಿಧವೇಷವಿದ್ಯಾವಿಶಾರದಪ್ರಚ್ಛನ್ನಪ್ರಣಿಧಿಗಳಂ ಪ್ರಯೋಗಿಸಿಯುಂ, ಅಭಿತಾಪಮಾನಪ್ರಭೃತಿಭೃತ್ಯರನಭಯಸನ್ಮಾನಾದಿಗಳಿಂ ಸ್ವೀಕರಿಸಿಯುಂ, ಪ್ರತ್ಯಕ್ಷಾನುಮಾನಂಗಳಿಂ ಕಾರ್ಯಾಕಾರ್ಯಂಗಳನುಪಧಾವಿಶುದ್ಧಮಂತ್ರಿಮಂಡಳದೊಳವಿರತಂ ನಿರ್ಘರ್ಷಿಸಿಯುಂ, ದಿವಸದಾಯವ್ಯಯಸಂಭಾಷಣಂಗಳಿಂ ಕುಲ್ಯರಂ ಸೌಶೀಲ್ಯವೃತ್ತಿಗೆ ಸಲಿಸಿಯುಂ, ಅತಿವ್ಯಸನಕ್ಷೀಣಧನಜನಂಗಳಂ ಮೂಲಧನದಾನದಿಂ ಸಂಭಾವಿಸಿಯುಂ, ಸನ್ಮಾನದಾನದರ್ಶನಾಪಾದನಂಗಳಿಂದಂತಃಪುರಮಂ ಸಂತೋಷಂಬಡಿಸಿಯುಂ, ನಿತ್ಯಪರೀಕ್ಷಣಸ್ಥಳವಿಪರ್ಯಯಪ್ರತಿಪತ್ತಿದಾನಂಗಳಿಂ ನಿಯೋಗಿಗಳಂ ಕಾಮದುಘರ್ ಮಾಡಿಯುಂ, ಸ್ತ್ರೀಪುತ್ರದಾಯಾದ್ಯರತ್ತಣಿಂದಾತ್ಮರಕ್ಷಣೆಯಂ ವಿವಕ್ಷಿಸಿಯುಂ, ವರ್ಣಾಶ್ರಮವ್ಯವಸ್ಥೆಗಳಂ ಸ್ವಸ್ಥಂಮಾಡಿಯುಂ, ತುಳಾಮಾನವಿಶುದ್ಧಿಯಂ ವಿಚಾರಿಸಿಯುಂ, ಅರಿಷಡ್ವರ್ಗಮನದಿರ್ಪಿಯುಂ, ತ್ರಿವರ್ಗಮಂ ಸಮೀಕರಿಸಿಯುಂ, ಮೂಳರಂ ಪಾಳಿಸಿಯುಂ, ಕೋಶಮಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ ನಿಷ್ಕಂಟಕಮುಂ ನಿರಾತಂಕಮುಂ ನಿಜಾಯತ್ತಮುಮೆನಿಸಿದನಲ್ಲದೆಯುಂ

ಬಗೆಯ ಅಧಿಕಾರಿಗಳ ಚಲನವಲನಗಳನ್ನು ಗೂಢಚಾರರ ಮುಖಾಂತರವಾಗಿ ತಿಳಿದುಕೊಂಡನು; ತಪ್ಪು ಮಾಡಿ (ಶಿಕ್ಷೆಯಾದೀತೆಂದು) ಭಯಪಡುತ್ತಿರುವವರನ್ನು ಅಭಯ ದಾನ ಸನ್ಮಾನಗಳಿಂದ ತನ್ನತ್ತ ಒಲಿಸಿಕೊಂಡನು; ಪ್ರತ್ಯಕ್ಷ (ಸ್ಪಷ್ಟವಾಗಿ ತೋರುವ) ಹಾಗೂ ಅನುಮಾನ (ಹೀಗೆಯೆ ಇರಬೇಕೆಂದು ತರ್ಕದಿಂದ ತಿಳಿದುಕೊಂಡ) ವಿಷಯಗಳಲ್ಲಿ ಮಾಡತಕ್ಕುದಾವುದು, ಬಿಡತಕ್ಕುದಾವುದು ಎಂಬುದನ್ನು ನಾಲ್ಕು ಬಗೆಯ ಗುಣ ಪರೀಕ್ಷೆಗಳಿಂದ ಪರಿಶುದ್ಧರೆಂದು ಸಿದ್ಧರಾದ ಮಂತ್ರಿಮಂಡಳದೊಡನೆ ಸತತವಾಗಿ ಚರ್ಚೆಮಾಡಿ ನಿರ್ಧರಿಸುತ್ತಿದ್ದನು. ಪ್ರತಿದಿನದ ಆದಾಯ-ವೆಚ್ಚಗಳನ್ನು ವಿಚಾರಿಸುತ್ತಿದ್ದನು. ಕುಲೀನರನ್ನು ಸದಾಚಾರಗಳಲ್ಲಿ ತೊಡಗಿಸಿ, ವ್ಯಸನಲಂಪಟರಾಗಿ ಧನವನ್ನೆಲ್ಲ ಕಳೆದುಕೊಂಡ ಜನಕ್ಕೆ ಹೊಸತಾಗಿ ವ್ಯವಹಾರಕ್ಕೆ ಬಂಡವಾಳವನ್ನೊದಗಿಸಿದನು; ಚೆನ್ನಾಗಿ ಮನ್ನಣೆ ಮಾಡುತ್ತಲೂ, ಕಂಡು ಮೆಚ್ಚಿಸುತ್ತಲೂ ರಾಣಿವಾಸವನ್ನು ತೃಪ್ತಿಗೊಳಿಸಿದನು; ಪ್ರತಿನಿತ್ಯ ಪರೀಕ್ಷಿಸುತ್ತಲೂ ಕೆಲಸದ ಸ್ಥಳಗಳನ್ನು ಬದಲಿಸುತ್ತಲೂ, ಯೋಗ್ಯವಾಗಿ ಮನ್ನಿಸುತ್ತಲೂ ಬೇರೆ ಬೇರೆ ಸೇವೆಗಳಲ್ಲಿ ನಿಯುಕ್ತರಾದ ಜನವನ್ನು ಕಾಮಧೇನುಗಳಂತೆ (ಬೇಡಿದ ಇಷ್ಟಾರ್ಥವನ್ನು ಕೂಡಲೆ ನೆರವೇರಿಸಿಕೊಡಬಲ್ಲವರಂತೆ) ಮಾಡಿದನು; ಹೆಂಡಂದಿರು, ಮಕ್ಕಳು, ದಾಯಾದ್ಯರು ಮೊದಲಾದವರಿಂದ ಅಪಾಯವಾಗದಂತೆ ಎಚ್ಚರವಹಿಸಿ ತನ್ನ ರಕ್ಷಣೋಪಾಯವನ್ನು ಕೈಕೊಂಡನು; ವರ್ಣಾಶ್ರಮಗಳನ್ನು ಸಮರ್ಪಕವಾಗಿರುವಂತೆ ಏರ್ಪಡಿಸಿದನು; (ವ್ಯಾಪಾರದಲ್ಲಿ) ಅಳತೆ ತೂಕಗಳು ಸರಿಯಾಗಿರುವಂತೆ ವ್ಯವಸ್ಥೆ ಮಾಡಿದನು; ಶಕ್ತಿ, ಮಂತ್ರ, ಮತ್ತು ಉತ್ಸಾಹವೆಂಬ ಮೂರರ ವರ್ಗವನ್ನು ಸರಿಯಾಗಿ ಹೊಂದಿಸಿಕೊಂಡನು; ಮೂಲ ಧನವನ್ನು ಕಾಪಾಡಿಕೊಂಡು, ಕೋಶವನ್ನು ವೃದ್ಧಿಪಡಿಸಿದನು. ಹೀಗೆ ತನ್ನ ಸಾಮ್ರಾಜ್ಯವನ್ನು ಶತ್ರುರಹಿತ

ಕೋಪಪ್ರಸಾದಮಂ ತ ।
ದ್ಭೂಪತಿ ದುಷ್ಟರೊಳದುಷ್ಟರೊಳ್ ತಳೆದಂ ಸಂ ॥
ತಾಪಪ್ರಿಯಕೃತಿಯಂ ತಾ ।
ರಾಪತಿ ವಿರಹಿಯೊಳವಿರಹಿಯೊಳ್ ತಾಳ್ದುವವೋಲ್ ॥ ೬೨

ಜ್ಯಾಪ್ರತಿಪಾಳನಮಂ ಧ ।
ರ್ಮಪ್ರೀತಿಯಿನೈದೆ ಮಾಡಿದಂ ಸುಕರತೆಯಿಂ ॥
ದಾಪ್ರಭು ಮಾರ್ಗಣಕುಶಲಾ ।
ಭಿಪ್ರಾಯನೆನಿಪ್ಪವಂಗೆ ತಾನುಚಿತಮೆ ದಲ್ ॥ ೬೩

ಪಗಲರ್ಕಂ ತಳೆದಬ್ಜಮಸ್ತಮಯಸಂಧ್ಯಾರಾಗವಿಭ್ರಾಂತಿಯಿಂ ।
ಮುಗಿವನ್ನಂ ದಿಗಿಭೋತ್ಕರಂ ದವಭವಜ್ವಾಳಾವಳೀಶಂಕೆಯಿಂ ॥
ದಗಿವನ್ನಂ ರಿಪುಗಳ್ ದಿನಪ್ರಪತದುಳ್ಕೋದ್ಯತ್ತ್ರಭಾಭೀತಿಯಿಂ ।
ಸುಗಿವನ್ನಂ ನಿಮಿರ್ದತ್ತು ತನ್ನೃಪಮಹಾತೇಜಃಪ್ರಭಾಮಂಡಳಂ ॥ ೬೪

ಅಂತಲಂಘ್ಯತೇಜನುಮವನತರಿಪುಸಮಾಜನುಂ ಸಫಲೀಕೃತಾರ್ಥಿನಿಚಯಾಶನುಂ ವಿಶದಯಶಃ ಕಬಳಿತಾಶನುಮೆನಿಸಿ ೬೫

ವಾಗಿಯೂ, ನಿಶ್ಚಿಂತವಾಗಿಯೂ, ತನ್ನ ಅಧೀನವಾಗಿಯೂ ಮಾಡಿಕೊಂಡನು. ಅದಲ್ಲದೆ ೬೨. ಪ್ರಿಯರನ್ನು ಅಗಲಿದವರಿಗೆ ತಾಪ, ಅಗಲದೆ ಇರುವವರಿಗೆ ಸಂತೋಷ–ಇವೆರಡನ್ನೂ ಚಂದ್ರನೊಬ್ಬನೆ ಮಾಡುವಂತೆ, ದುಷ್ಟರ ಮೇಲೆ ಕೋಪ ಹಾಗೂ ಸಜ್ಜನರ ಮೇಲೆ ಪ್ರಸನ್ನತೆ–ಎರಡನ್ನೂ ಆತನು ತಾಳಿದನು. ೬೩. ಆ ರಾಜನು 'ಸುಕರತೆ'ಯಿಂದ (೧.ಸುಲಭವಾಗಿ ೨ ಪಳಗಿದ ಹಸ್ತಕೌಶಲದಿಂದ). "ಧರ್ಮಪ್ರೀತಿ"ಯಿಂದ (೧, ಧರ್ಮದಲ್ಲಿ ಆದರ ಭಾವದಿಂದ ೨. ಬಿಲ್ಲಿಗೆ ಹೊಂದಿಕೊಂಡಿರುವ ಗುಣದಿಂದ) "ಜ್ಯಾಪ್ರತಿಪಾಳನ"ವನ್ನು (೧. ಭೂಮಿಯ ರಕ್ಷಣೆಯನ್ನು ೨. ಬಿಲ್ಲಿನ ಹೆದೆಯ ಪ್ರಯೋಗವನ್ನು) ಮಾಡಿದನು. "ಮಾರ್ಗಣಕುಶಲ" (೧, ವಿಮರ್ಶಾನಿಪುಣ ೨, ಬಾಣಪ್ರಯೋಗದಲ್ಲಿ ಪರಿಣತ) ನಾದವನಿಗೆ ಅದು ಯೋಗ್ಯವೇ ಸರಿ. ೬೪. ಹಗಲಿನ ಸೂರ್ಯನಿನ್ನೂ ಇದ್ದರೂ, ಸಾಯಂಕಾಲದ ಕೆಂಬಣ್ಣ ಮುಸುಕಿತೆಂಬ ಭ್ರಮೆಯಿಂದ ಕೆಂದಾವರೆಗಳು ಮುಚ್ಚಿಕೊಳ್ಳುವಂತೆ, ಕಾಡುಗಿಚ್ಚಿನ ಜ್ವಾಲೆ ತಮ್ಮ ಬಳಿಗೂ ಹಬ್ಬೀತೆಂದು ದಿಗ್ಗಜಗಳು ಹೆದರಿ ಹಿಂಜರಿಯುವಂತೆ, ಹಗಲು ಹೊತ್ತಿನಲ್ಲಿಯೆ ಉಲ್ಕೆಗಳು ಬೀಳುತ್ತವೆ (ಇದೇನೊ ಉತ್ಪಾತ ಸೂಚನೆ) ಎಂದು ಶತ್ರುಗಳು ಗಾಬರಿಗೊಳ್ಳುವಂತೆ–ಆ ಅರಸನ ಪ್ರಖರವಾದ ತೇಜಸ್ಸು ಹಬ್ಬಿತು. ೬೫. ಹಾಗೆ ಅತಿಕ್ರಮಿಸಲಾರದ (ಪರಾಕ್ರಮದ) ತೇಜಸ್ಸುಳ್ಳವನಾಗಿ, ಶತ್ರು ಸಮೂಹವನ್ನೆಲ್ಲ ಬಾಗಿಸಿ, ತನ್ನಲ್ಲಿ ಯಾಚಕ ರಾಗಿ ಬಂದವರ ಬಯಕೆಗಳನ್ನೆಲ್ಲ ಪೂರ್ಣಗೊಳಿಸುತ್ತ, ತನ್ನ ಯಶಸ್ಸಿನಿಂದ ಆತನು

ಅನಿಶಂ ಸೋಮಪ್ರಭಾದೇವಿಯ ವದನಸುಧಾಸೂತಿಯಿಂದುಳ್ಳಲರ್ತಂ।
ದ ನಿಜಸ್ವಾಂತೋತ್ಪಲಕ್ಕತ್ಯಧಿಕವಿಕಸನಶ್ರೀಯನಾದೇಯಕಾಯಂ॥
ತನುಜಾತಂ ಸ್ವರ್ಣನಾಭಂ ತುಹಿನಪವನಸಂಸ್ಪರ್ಶದಂತೀಯೆ ಪುಣ್ಯಾ।
ರ್ಚನವಿಶ್ರಾಂತಾತಿಲೋಭಂ ಸುಖದರಸುಗೆಯುತ್ತಿರ್ದನಾ ಪದ್ಮನಾಭಂ॥ ೬೬

ಅಂತು ಕತಿಪಯಸಂವತ್ಸರಂಗಳ್ ಸಲ್ವಿನಂ ಪ್ರರೂಢಯೌವನಮನೋಹರನುಂ ಕವಚಹರನುಂ ಆದ ನಿಜತನೂಜನಂ ನೋಡಿ ೬೭

ಧರಣೀಚಕ್ರೋರುಭಾರೋದ್ಧರಣವಿಧಿಯೊಳಸ್ಮದ್ಭುಜಕ್ಕೀಕುಮಾರಂ।
ನೆರವಾಗಲ್ ಸಾಲ್ವನೀತಂ ಬಜೆದಿರೆ ಪುರುಳೇನೆಂದು ಮಂತ್ರಿಪ್ರಧಾನೋ॥
ತ್ಕರಯುಕ್ತಂ ವ್ಯಕ್ತಹರ್ಷಂ ಶುಭದಿನದೊಳಿಳಾಧೀಶ್ವರಂ ಮಾಡೆ ತೂರ್ಯಸ್ವರದೊಳ್
ತಳ್ದೊಯ್ದದೇಂ ಶೋಭಿಸಿದುದೊ ಪಿರಿದುಂ ಯೌವರಾಜ್ಯಾಭಿಷೇಕಂ॥ ೬೮

ಅನಂತರಂ ಮನೋಹರಮಂಗಳಾಳಂಕಾರಾಳಂಕೃತನಂ ಮಾಡಿ

ಸಕಲಧರಾಧಿರಾಜ್ಯ ಪದಚಿಹ್ನ ಕಿರೀಟಸಮರ್ಪಣಕ್ಕೆ ಸಂ।
ಚಕರಮಿದೆಂಬಿನಂ ಪ್ರಿಯಕುಮಾರನ ಕಂಠದೊಳುದ್ಧರತ್ನಕಂ॥
ಠಿಕೆಯನನೂನಹರ್ಷರಸಗದ್ಗದಕಂಠನಿಳೇಶನುತ್ಸವೋ।
ತ್ಸುಕಕಳಕಂಠಿಕಾಮಧುರಮಂಗಳಗೀತಿಗಳುಣ್ಮೆ ಕಟ್ಟಿದಂ॥ ೬೯

ದಿಕ್ಕುಗಳನ್ನೆಲ್ಲ ತುಂಬಿದನು. ೬೬. ಸೋಮಪ್ರಭಾದೇವಿಯ ಮುಖವೆಂಬ ಚಂದ್ರನಿಂದ ಸಂಪೂರ್ಣವಾಗಿ ಅರಳಿದ ಆತನ ಮನಸ್ಸೆಂಬ ನೈದಿಲೆಗೆ ಸುಂದರಾಕಾರನಾದ ಸ್ವರ್ಣನಾಭನೆಂಬ ಮಗನು ತಂಗಾಳಿಯಂತೆ ಸುಖವನ್ನೀಯಲು ಪುಣ್ಯಪೂಜೆಗಳಿಂದ ಅತಿಲೋಭವನ್ನುಳಿದು ಪದ್ಮನಾಭರಾಜನು ಸುಖದಿಂದ ರಾಜ್ಯವಾಳುತ್ತಿದ್ದನು. ೬೭. ಹೀಗೆ ಕೆಲವರ್ಷಗಳು ಕಳೆಯಲಾಗಿ ಯೌವನವನ್ನು ತಾಳಿ (ಅಧಿಕಾರಕ್ಕೆ) ಪ್ರಾಪ್ತವಯಸ್ಕನಾದ ತನ್ನ ಮಗನನ್ನು ನೋಡಿ–೬೮. "ಭೂಮಂಡಲದ ಮಹಾಭಾರವನ್ನು ನಿರ್ವಹಿಸುವ ಕಾರ್ಯದಲ್ಲಿ ನನ್ನ ತೋಳುಗಳಿಗೆ ಈ ಕುಮಾರನು ನೆರವು ನೀಡಲು ಸಮರ್ಥನಾಗಿರುವನು. ಇವನಿಗೆ ಅಧಿಕಾರ ಕೊಡದಿದ್ದರೆ ಏನರ್ಥ?" ಹೀಗೆಂದುಕೊಂಡು ಮಂತ್ರಿಮುಖ್ಯರನ್ನೊಡಗೊಂಡು ಸಂತೋಷದಿಂದ ಶುಭದಿನದಲ್ಲಿ ಮಂಗಳವಾದ್ಯಪೂರ್ವಕವಾಗಿ ಆತನಿಗೆ ಮಾಡಿದ ಯುವ ರಾಜಾಭಿಷೇಕವು ಎಷ್ಟೊಂದು ಶೋಭಿಸಿತು! ಆಮೇಲೆ ಮನೋಹರವಾಗಿ ಆತನಿಗೆ ಮಂಗಳಾಲಂಕಾರಮಾಡಿ– ೬೯. ಸಮಸ್ತ ರಾಜ್ಯಾಧಿಕಾರದ ಚಿಹ್ನವಾದ ಕಿರೀಟ ಸಮರ್ಪಣೆಗೆ ಇದು ಸಂಚಕಾರವೆಂಬಂತೆ – ಸಂತೋಷದಿಂದ ಮಧುರ ಕಂಠಗಳ ಮಂಗಳಗೀತೆಗಳು ಹೊಮ್ಮುತ್ತಿರಲಾಗಿ, ಸಂತೋಷಾಧಿಕ್ಯದಿಂದ ಗದ್ಗದಕಂಠನಾದ ರಾಜನು ತನ್ನ ಅಕ್ಕರೆಯ ಕುಮಾರನ ಕೊರಳಿಗೆ ಶ್ರೇಷ್ಠ

ಆಗಳ್

ಬಿಡದೆ ನಮೇರುವನಡರ್ದೊಡ ।
ಮೊಡನೆಯೆ ಸಂತಾನಕಕ್ಕೆ ಕಲ್ಪಲತಿಕೆ ದಾಂ ॥
ಗುಡಿಯಿಟ್ಟ ಲೀಲೆಯಂ ಸಿರಿ ।
ಪಡೆದುದಧೀಶ್ವರಿಯುಪೇಶ್ವರಾಳಂಬನದಿಂ ॥ ೭೦

ಅಂತು ಸುವರ್ಣನಾಭಕುಮಾರಂ ಭೂರಿಭುಜಮಂಡಳನಿವೇಶಿತಾರ್ಧರಾಜ್ಯಭರನಾಗಿ

ಎಣಿಪಾಗಳ್ ಕೃತ್ಯಶೇಷಂ ಪರಮಮುನಿಮನಸ್ತರ್ಪಣಂ ಶೀಲಸಂರ ।
ಕ್ಷಣಮಾಸಂಪನ್ನಭವ್ಯೋದ್ಧರಣಮತುಳಚೈತ್ಯಾಲಯಾನೀಕನಿರ್ಮಾ ॥
ಪಣಮರ್ಹತ್ಸೂಕ್ತಯುಕ್ತಿಶ್ರವಣಮಿವೆ ದಲೆಂದಿಂತವಂ ತನ್ನ ಚಿತ್ತಂ ।
ತಣಿವನ್ನಂ ಮಾಡಿ ನಿಚ್ಚಂ ಪೊಗಳಿಸಿದನಿಳಾಚಕ್ರದಿಂ ಶಕ್ರಲೀಲಂ ॥ ೭೧

ಅಂತು ನಿಜನಿರ್ಮಲಸ್ವಭಾವಾನುರೂಪವ್ಯಾಪಾರಂಗಳಿಂ ಪೊಟ್ತುಗಳೆಯುತಿರ್ದೊಂದು ಪುಣ್ಯವಾಸರಪ್ರಥಮಪ್ರಹರದೊಳ್ ॥ ೭೨

ಲಲನಾಲಾವಣ್ಯವಾರಿಪ್ರಸರದೊಳಬಲಾಪಾಂಗರೋಚಿರ್ಮೃಣಾಲೀ ।
ಕುಲದೊಳ್ ಕಾಂತಾನನಾಂಭೋರುಹಪರಿಕರದೊಳ್ ಕಾಮಿನೀಹಾಸಫೇನಾ
ವಲಿಯೊಳ್ ಸೀಮಂತಿನೀಕುಂತಲಮಧುಕರದೊಳ್ ಪ್ರೇಯಸೀದೋಸ್ತರಂಗಾ
ಕುಲದೊಳ್ ತಾನಿರ್ದನಾಸ್ಥಾನಿಯೊಳಮಳಸರಃಕಲ್ಪದೊಳ್ ರಾಜಹಂಸಂ ॥ ೭೩

ವಾದ ರತ್ನಕಂಠಿಕೆಯನ್ನು ತೊಡಿಸಿದನು. ಆಗ–೭೦. ನಮೇರು ವೃಕ್ಷವನ್ನು ಏರಿದ ಕಲ್ಪಲತೆಯು ಸಂತಾನಕವೃಕ್ಷಕ್ಕೆ ದಾಂಗುಡಿಯನ್ನು ಚಾಚಿದಂತೆ ಅಧಿರಾಜನ ರಾಜ್ಯಲಕ್ಷ್ಮಿಯು ಈ ಉಪೇಶ್ವರನ ನೆರವನ್ನು ಪಡೆದಳು. ಹಾಗೆ ಸುವರ್ಣನಾಭ ರಾಜಕುಮಾರನು ತನ್ನ ವಿಶಾಲವಾದ ಬಾಹುಗಳ ಮೇಲೆ ಅರ್ಧರಾಜ್ಯದ ಭಾರವನ್ನು ವಹಿಸಿಕೊಂಡನು. ೭೧. ಶ್ರೇಷ್ಠರಾದ ಯತಿಗಳ ಮನಸ್ಸಿಗೆ ಸಂತೋಷ ವನ್ನುಂಟುಮಾಡುವುದು, ತನ್ನ ಚಾರಿತ್ರವನ್ನು ಕಾಪಾಡಿಕೊಳ್ಳುವುದು, ಧರ್ಮ ನಿಷ್ಠರನ್ನೂ ಭಕ್ತರನ್ನೂ ಉದ್ಧರಿಸುವ ಹಲವಾರು ಅಸದೃಶ ಜಿನಬಸದಿಗಳನ್ನು ನಿರ್ಮಿಸುವುದು, ಅರ್ಹಂತರ ಉತ್ತಮವಾದ ಪ್ರವಚನಗಳನ್ನು ಕೇಳುವುದು–ಇವೇ ತಾನು ಮಾಡಬೇಕಾದ ಮೇಲಾದ ಕಾರ್ಯಗಳೆಂದು ಯೋಚಿಸಿ ತನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಅವುಗಳನ್ನು ನೆರವೇರಿಸಿ ಇಂದ್ರವೈಭವದ ಆತನು ಭೂಮಂಡಲದಿಂದ ಹೊಗಳಿಸಿಕೊಂಡನು. ೭೨. ಹೀಗೆ ತನ್ನ ಪರಿಶುದ್ಧವಾದ ಸ್ವಭಾವಕ್ಕೆ ತಕ್ಕಂತೆ ಕೆಲಸಮಾಡುತ್ತ ಹೊತ್ತುಗಳೆಯುತ್ತಿರಲಾಗಿ, ಒಂದು ಪವಿತ್ರವಾದ ದಿವಸ ಮೊದಲನೆಯ ಪ್ರಹರದಲ್ಲಿ– ೭೩. ವನಿತೆಯರ ಸೌಂದರ್ಯವೆಂಬ ನೀರಿನ ಹರಹಿನಿಂದಲೂ, ಹೆಣ್ಣುಗಳ ಕಡೆಗಣ್ಣ ಕಾಂತಿಗಳೆಂಬ ತಾವರೆ ನಾಳಗಳ ಸಮೂಹದಿಂದಲೂ, ಕಾಂತೆಯರ ಮುಖಗಳೆಂಬ ತಾವರೆಗಳ ಸಮುದಾಯದಿಂದಲೂ, ಕಾಮಿನಿಯರ ನಗೆಯೆಂಬ ನೊರೆವಿಂಡಿನಿಂದಲೂ,

ಆ ಪ್ರಸ್ತಾವದೊಳ್

ಧೃತವೇತ್ರಂ ಚಾರುಚೀನಾಂಬರರಚಿತಶಿರೋವೇಷ್ಟನಂ ಘಂಟಿಕಾಲಂ ।
ಬಿತಕೂರ್ಪಾಸಂ ಜರಾನಿರ್ಮಳಸರಳತರಶ್ಮಶ್ರುಕೂರ್ಚಂ ನಿಯುಕ್ತ ॥
ದ್ರುತಯಾನೋತ್ಕಂಪಿಪೀನೋದರನವನಿಪನೊಡ್ಡೋಲಗಕ್ಕೈದೆ ವಂದಂ ।
ಪ್ರತಿಹಾರಂ ಕೌತುಕಪ್ರಸ್ತುತಯುತಪುರುಷಾವಾಪ್ತಿ ವಿಜ್ಞಾಪನೋತ್ಕಂ ॥ ೭೪

ಅನಂತರಂ ನಿಟಿಲನಿಹಿತಕರಕುಟ್ಮಳಂ–ದೇವ, ವನಮಹತ್ತರಂ ವಿಚಿತ್ರಪುಷ್ಪಫಲಹಸ್ತಂ ಬಂದು ಬಾಗಿಲೊಳಿರ್ದಪನೆಂಬುದುಂ ಬರವೇಟೆನೆ, ಮಹಾಪ್ರಸಾದಮೆಂದೊಡಗೊಂಡು ಬಂದೊಡವನ ವನತಿಪುರಸ್ಸರಂ ವಿವಿಧಪತ್ರಪುಟಿಕಾನಿಹಿತಂಗಳಂ ತಂದು ಮುಂದಿಟೆಪಿ ॥ ೭೫

ಇವು ಜಂಬೂಫಲಮಂಜರಿ ।
ಯಿವು ಫಲಿನೀಫಲದ ಗುಚ್ಛಮಿವು ಚೂತಫಲ ॥
ಸ್ತವಕಂ ದಲೆಂದು ತೋಱಿದ ।
ನವನೀಪಾಲಂಗೆ ಲೀಲೆಯಿಂ ವನಪಾಲಂ ॥ ೭೬

ಇವು ಕಂಕೆಲ್ಲಿದಳತ್ಪ್ರಸೂನಮಿವು ಮಲ್ಲೀಸ್ಮೇರಪುಷ್ಪಂ ಪೊದ ।
ಟ್ಟಿವು ನೀಪಪ್ರಸವಂ ಬಟಿಕ್ಕಿವಸನಪ್ರೋತ್ಫುಲ್ಲಪುಷ್ಪಂ ಸಮಂ ॥
ತಿವು ಮಂದಸ್ಮಿತಸಿಂಧುವಾರಕುಸುಮಂ ನೋಟ್ಪಿಂದಿವಿಂತೈದೆ ಲೋ ।
ಧ್ರವಿನಿದ್ರೋದ್ಗಮಮೆಂದು ತೋಱಿದನನೂನಾಶ್ಚರ್ಯಮಪ್ಪನ್ನೆಗಂ ॥ ೭೭

ಲಲನೆಯರ ಸುಳಿಗುರುಳೆಂಬ ದುಂಬಿಗಳಿಂದಲೂ ಪ್ರೇಯಸಿಯರ ತೋಳುಗಳೆಂಬ ತೆರೆಗಳಿಂದಲೂ ಸರೋವರ ಸ್ವರೂಪವಾಗಿದ್ದ ಒಡ್ಡೋಲಗದಲ್ಲಿ ಆ ರಾಜಶ್ರೇಷ್ಠನು ರಾಜಹಂಸದಂತೆ (ಒಪ್ಪುತ್ತ) ಇದ್ದನು. ಆ ಸಮಯದಲ್ಲಿ–೭೪. ಸುಂದರವಾದ ರೇಷ್ಮೆವಸ್ತ್ರವನ್ನು ತಲೆಗೆ ಸುತ್ತಿಕೊಂಡು, ಕಿರುಗಂಟೆಗಳಿಂದೊಡಗೂಡಿದ ಉದ್ದನೆಯ ಕಂಚುಕವನ್ನು ತೊಟ್ಟುಕೊಂಡು, ಮುಪ್ಪಿನಿಂದ ನರೆತು ಇಳಿಬಿದ್ದ ಗಡ್ಡಮೀಸೆಗಳುಳ್ಳ ಪ್ರತೀಹಾರನು ಕೈಯಲ್ಲಿ ಕೋಲು ಹಿಡಿದು, ತನ್ನ ದೊಡ್ಡ ಹೊಟ್ಟೆ ನಡುಗುವಂತೆ ಲುಟುಲುಟು ನಡೆಯುತ್ತ, ಯಾರೋ ಬಂದಿದ್ದಾರೆಂದು ಬಿನ್ನವಿಸುವುದಕ್ಕಾಗಿ ಬಂದನು. ೭೫. ಬಳಿಕ, ಹಣೆಗೆ ಕೈಜೋಡಿಸಿಕೊಂಡು, "ದೇವ, ಉದ್ಯಾನದ ಪೆರ್ಗಡೆಯು ವಿಚಿತ್ರವಾದ ಹೂಗಳನ್ನೂ ಹಣ್ಣುಗಳನ್ನೂ ಕೈಯಲ್ಲಿ ಹಿಡಿದುಕೊಂಡು ಬಂದು ಬಾಗಿಲಲ್ಲಿ ನಿಂತಿರುವನು" ಎಂದನು. ಆತನನ್ನು ಬರಹೇಳೆನ್ನಲಾಗಿ, "ಹಾಗೆಂಯೆ ಆಗಲಿ ಮಹಾಸ್ವಾಮಿ" ಎಂದು ಹೋಗಿ ಅವನನ್ನು ಕರೆತಂದನು. ಉದ್ಯಾನದ ಅಧಿಕಾರಿಯು ನಮಸ್ಕಾರಪೂರ್ವಕವಾಗಿ ಬಗೆಬಗೆ ಎಲೆಯ ಪೊಟ್ಟಣಗಳನ್ನು ತಂದು ಮುಂದಿಟ್ಟು–೭೬. "ಇವು ನೇರಿಳೆ ಹಣ್ಣುಗಳ ಗೊಂಚಲು; ಇವು ಮಾವಿನ ಹಣ್ಣುಗಳ ಗುಚ್ಚ" ಎಂದು ಅರಸನಿಗೆ ಸಂತೋಷದಿಂದ ತೋರಿಸಿದನು. ೭೭. "ಇವು ಅಶೋಕದ ಹೂಗಳು; ಇವು ಮಲ್ಲಿಗೆಯ ಅರಳು; ಇವು ಬಂದುಗೆ ಹೂವು; ಇವು ಹೊನ್ನೆ; ಮೆಲ್ನಗೆಯಂತೆ ಅರಳಿದ ಇವು ನಿರ್ಗುಂಡಿ (ಸಿಂಧುವಾರ) ಕುಸುಮಗಳು

ಆಗಳವಂ ಕಂಡು ಕಾಲತ್ರಯಋತುಷಟ್ಕೋಚಿತಂಗಳಪ್ಪ ಫಲಪ್ರಸವಂಗಳೇಕಸಮಯಪ್ರಸವ ಮೆಂತಾದುದೆಂದು ವಿಸ್ಮಯಂಬಟ್ಟು ತನ್ನೊಳೆ ವಿಚಾರಿಸಿ ಬಟಿಕ್ಕರಸನವನನಿಂತೆಂದಂ :- ೭೮

ಇದು ಸಮವಸರಣಸಂಸಂ ।
ಗದಿನಲ್ಲದೊಡಮಲಬೋಧಮುನಿಜನಸಾಮ ॥
ರ್ಥ್ಯದಿನಕ್ಕುಮಲ್ಲದಂದಾ ।
ಗದು ಸಕಲರ್ತುಪ್ರಭಿನ್ನಗುಣಸಮವಾಯಂ ॥ ೭೯

ಎಂಬುದುಂ ವನಮಹತ್ತರನಿಂತೆಂದು ಬಿನ್ನವಿಸಿದಂ :- ದೇವರ್ ಬೆಸಸಿದಂದದಿಂದಿಂದು ಮನೋಹರೋದ್ಯಾನಮನನವದ್ಯಚರಿತ್ರನೊರ್ವ ಮುನಿಮುಖ್ಯಂ ಬಂದು ಪೊಕ್ಕಂ ಆನುಮಾ ಸಮಯದೊಳ್ ೮೦

ತ್ರೈಕಾಲ್ಯಯೋಗಿ ಬಂದುದ ।
ನೀಕುಸುಮಫಳಂಗಳಿಂದಮಸಮಯಕೃತಭೃಂ ॥
ಗೀಕೀರಕೇಕಿಕೋಕಿಳ ।
ಕಾಕಳಿಯಿಂದಜಿದು ಬನದೊಳಱಸಿದೆನಾಗಳ್ ॥ ೮೧

ಅನಂತರಮೊಂದು ಪಾವನಪ್ರದೇಶದೊಳ್

ಯತಿಪಂ ಪಂಚಾತಿಚಾರಪ್ರಕೃತನಿಯಮದಿಂ ತುಂಗಶಾಖಾಚ್ಛದಚ್ಛ ।
ನ್ನತರುಚ್ಛಾಯಾವನೀಭಾಗದೊಳಳವಡೆ ಕೈಯಿಕ್ಕಿಕೊಂಡಿರ್ದು ಚೈತ್ಯ ॥

ಇಲ್ಲಿ ನೋಡಿ, ಇವು ಲೋಧ್ರ ಪುಷ್ಪಗಳು"-ಹೀಗೆ ತುಂಬ ಆಶ್ಚರ್ಯವಾಗುವಂತೆ ಎಲ್ಲವನ್ನೂ ಆತನು ತೋರಿಸಿದನು. ೭೮. ಆಗ ಅವುಗಳನ್ನು ನೋಡಿ, ಮೂರು ಕಾಲಗಳಲ್ಲಿ, ಆರು ಋತುಗಳಲ್ಲಿ ಬೇರೆಬೇರೆಯಾಗಿ ಆಯಾಕಾಲಕ್ಕೆ ಮಾತ್ರ ಹೂಗಳನ್ನೂ ಹಣ್ಣುಗಳನ್ನೂ ಬಿಡುವುದು ಸಸ್ಯಗಳ ಸ್ವಭಾವ; ಹೀಗಿರುವಾಗ ಈ ಎಲ್ಲ ಹೂಹಣ್ಣುಗಳು ಒಂದೇ ಸಮಯಕ್ಕೆ ಹೇಗೆ ಹುಟ್ಟಿಕೊಂಡುವು ? ಎಂದು ಸೋಜಿಗಗೊಂಡು ಅರಸನು ತನ್ನ ಮನಸ್ಸಿನಲ್ಲಿಯೇ ಯೋಚಿಸಿ ನೋಡಿ ಬಳಿಕ ಆತನಿಗೆ ಹೀಗೆ ನುಡಿದನು-೭೯. "ಹೀಗಾಗಬೇಕಾದರೆ ಸಮವಸರಣ ಬಂದಿರಬೇಕು; ಇಲ್ಲವೆ ಕೇವಲಜ್ಞಾನಿಗಳಾದ ಮುನಿಗಳ ಸಾಮರ್ಥ್ಯವಿರಬೇಕು. ಇವೆರಡರಿಂದಲ್ಲದೆ ಬೇರೆ ಏತರಿಂದಲೂ ಎಲ್ಲ ಋತುಗಳ ಹೂಹಣ್ಣುಗಳು ಹೀಗೆ ಏಕಕಾಲಕ್ಕೆ ಸಂಭವಿಸುವುದು ಸಾಧ್ಯವಿಲ್ಲ." ೮೦. ಆಗ ಉದ್ಯಾನಪಾಲಕನು ಹೀಗೆಂದನು- "ತಾವು ಹೇಳಿದಂತೆ, ಈ ದಿವಸ ನಮ್ಮ ಚೆಲುವಾದ ಉದ್ಯಾನವನ್ನು ನಿಷ್ಕಳಂಕ ಚರಿತ್ರನಾದ ಯತಿಯೊಬ್ಬನು ಬಂದು ಹೊಕ್ಕನು. ನಾನು ಕೂಡ ಆ ಹೊತ್ತಿನಲ್ಲಿ- ೮೧. ತ್ರಿಕಾಲ ಜ್ಞಾನಿಯಾದ ಯೋಗಿ ಬಂದುದನ್ನೂ, ಆ ಸಮಯದಲ್ಲಿ ಉಂಟಾದ ಈ ಹೂಹಣ್ಣುಗಳಿಂದಲೂ ದುಂಬಿ, ಗಿಳಿ, ಕೋಗಿಲೆಗಳ ಮಧುರ ಧ್ವನಿ ಯಿಂದಲೂ ಅರಿತುಕೊಂಡು ತೋಟದಲ್ಲೆಲ್ಲಾ ಹುಡುಕಿದೆನು. ಆಮೇಲೆ ಒಂದು ಪರಿಶುದ್ಧವಾದ ಸ್ಥಳದಲ್ಲಿ-೮೨. ಮುನೀಂದ್ರನು ಐದೂ ಅತಿಚಾರಗಳನ್ನು ನಿಗ್ರಹಿಸಿ ಎತ್ತರವಾದೊಂದು ಮರದ ನೆರಳಲ್ಲಿ ಕೈಬಿಟ್ಟುಕೊಂಡು ನಿಂತು ಅರಳಿಮರದ

ಕ್ಷಿತಿಜಾತಪ್ರಾಂತದೇಶಸ್ಥಿತಕನಕಮಯಪ್ರಾತಿಹಾರ್ಯಾಷ್ಟಕಾರ್ಹ।
ತ್ಪ್ರತಿಬಿಂಬಭ್ರಾಂತಿಯಂ ಮಾಡಿದನವಯವದಿಂದೀಕ್ಷಣಕ್ಕಾಗಳೆನ್ನಾ॥ ೮೨

ಅತಿಸೌಮ್ಯಾಕೃತಿಯುಮನು।
ಗ್ರತಪಸ್ತೇಜಮುಮನಾದಮೊಳಕೆಯ್ದಂತಾ।
ಪ್ರತಿಪತಿ ಶಶಿಸೂರ್ಯಸಮಾ।
ಹೃತಿಯಿಂ ನಿಷ್ಪನ್ನನಾದ ತೆಱದಿಂದಿರ್ದಂ॥ ೮೩

ಸಕಲವ್ಯಾಪಿನಿಯಂ ಭ।
ವ್ಯಕಮಲನಿಕರಪ್ರಮೋದದಾಯಿನಿಯಂ ತಿ॥
ಗ್ಮಕರಂ ಪ್ರಭೆಯಂ ತಳೆವಂ।
ತಕಳಂಕಂ ಶ್ರೀಧರಾಖ್ಯೆಯಂ ಮುನಿ ತಳೆದಂ॥ ೮೪

ಮುಕುರದೊಳಾ ಪ್ರತಿಬಿಂಬಂ।
ನಿಕಾಮಮೆಸೆವಂತೆ ತದ್ವಚೋವಿಸ್ತರದೊಳ್॥
ಸಕಲಜಗಂ ಸೊಗಯಿಸುಗುಂ।
ತ್ರಿಕಾಲಗೋಚರಮನಂತಪರ್ಯಾಯಯುತಂ॥ ೮೫

ದಂತರುಚಿನಿಚಯಮುಕ್ತಾ।
ಕ್ರಾಂತಂ ಭಾಸುರಸುವರ್ಣರಚಿತಂ ತದ್ವಾ॥
ಕ್ಸಂತತಿ ವಿಬುಧಜನಕ್ಕೆ ನಿ।
ರಂತರಕಮನೀಯಮಾಯ್ತು ಕರ್ಣಾಭರಣಂ॥ ೮೬

ಬಳಿಯಲ್ಲಿ ಅಷ್ಟಪ್ರಾತಿಹಾರ್ಯ (ಅಶೋಕವೃಕ್ಷ, ಮುಕ್ಕೊಡೆ, ರತ್ನಸಿಂಹಾಸನ, ಭಕ್ತಿಯುಕ್ತರಾದ ಗಣಗಳ ಮಂಡಲಿ, ದುಂದುಭಿನಾದ, ಪುಷ್ಪವೃಷ್ಟಿ, ಪ್ರಭಾಮಂಡಲ, ಮತ್ತು ೬೪ ಚಾಮರ) ಗಳನ್ನೊಡಗೊಂಡು ಶೋಭಿಸುವ ಅರ್ಹಂತನ ಪ್ರತಿಬಿಂಬವೋ ಏನೊ ಎಂಬ ಭ್ರಾಂತಿಯನ್ನುಂಟುಮಾಡಿದನು. ೮೩. ಅತ್ಯಂತ ಸೌಮ್ಯವಾದ ರೂಪವನ್ನೂ ಪ್ರಚಂಡವಾದ ತಪಸ್ಸಿನ ತೇಜವನ್ನೂ ಕೂಡಿಯೆ ತಾಳಿದ ಆ ಮುನೀಶ್ವರನು ಸೂರ್ಯಚಂದ್ರರಿಬ್ಬರನ್ನೂ ಕೂಡಿಸಿ ಈತನನ್ನು ಸೃಷ್ಟಿ ಮಾಡಿದರೊ ಏನೊ ಎಂಬಂತೆ ಇದ್ದನು. ೮೪. ಸೂರ್ಯನು ಪ್ರಕಾಶವನ್ನು ಹೊಂದಿರುವಂತೆ, ಸರ್ವತ್ರ ವ್ಯಾಪಿಸುವ ಹಾಗೂ ಭಕ್ತಜನರಿಗೆಲ್ಲ ಸಂತೋಷವನ್ನು ಉಂಟುಮಾಡುವ 'ಶ್ರೀಧರ' ಎಂಬ ಹೆಸರನ್ನು ಆ ನಿಷ್ಕಳಂಕ ಯತಿಯು ಹೊಂದಿರುವನು. ೮೫. ಕನ್ನಡಿಯಲ್ಲಿ ಪ್ರತಿಬಿಂಬವು ಸ್ಪಷ್ಟವಾಗಿ ಮೂಡಿ ತೋರುವಂತೆ, ಆತನ ವಚನವಿಸ್ತಾರದಲ್ಲಿ ಸಮಸ್ತ ಜಗತ್ತು ತ್ರಿಕಾಲ ಗೋಚರವಾಗಿಯೂ, ಅನಂತ ವಿವರ ಸಹಿತವಾಗಿಯೂ ತೋರುವುದು. ೮೬. ಶುಭ್ರವಾದ ಹಲ್ಲುಗಳ ಕಾಂತಿಯೆಂಬ ಮುತ್ತುಗಳಿಂದೊಡಗೂಡಿ, ಸುಂದರವಾದ "ಸುವರ್ಣ" (೧. ಉತ್ತಮವಾದ ಅಕ್ಷರ ೨. ಚೊಕ್ಕ ಚಿನ್ನ) ಗಳಿಂದ ನಿರ್ಮಿತವಾದ ಆತನ ಮಾತು

ಬಳಸಿ ಭುವನಂಗಳಂ ನಿ।
ಶ್ಚಳಂಗಳೆನಿಸಿದುವು ಮತ್ತೆ ಗಣನೀಯತೆಯಂ॥
ತಳೆದಿರ್ದುಮಸಂಖ್ಯೇಯಂ।
ಗಳೆನಿಸಿದುವು ತನ್ಮುನೀಶನಮಲಗುಣಂಗಳ್॥ ೮೭

ಏವೇೞ್ವುದೊ ತತ್ಪದರಾ।
ಜೀವರಜೋವ್ರಾತದಿಂದಳಂಕರಿಸಿ ಶಿರೋ॥
ಜಾವಳಿಯಂ ನರಸುರಖಚ।
ರಾವಳಿ ಮಾಣ್ದತ್ತು ತಳೆವ ಪುಡಿಗತ್ತುರಿಯಂ॥ ೮೮

ಆ ಮುನಿಪನ ಪರಮತಪ।
ಸ್ಸಾಮರ್ಥ್ಯದಿನಾದ ವನದ ಮರಗಳ ಸಿರಿಯು॥
ದ್ದಾಮತೆಯಂ ಪೊಗೞ್ವಂದೆನ।
ಗೇಮಾತೊ ಫಣೀಶವೃತ್ತಿ ಸಮನಿಸವೇೞ್ಕುಂ॥ ೮೯

ಆದೊಡಮೆನ್ನಱಿವನಿತನಱಿಪಿದಪೆನದೆಂತೆಂದೊಡೆ

ಪಾರದೆ ವಸಂತಮಂ ಕೈ।
ವಾರದೆ ತೆಂಬೆಲರನಾ ಮುನೀಶನ ಬರವಿಂ॥
ಪಾರೈಸಿದಂಪದಿಂ ಸಹ।
ಕಾರಂ ತಾಳ್ದಿತ್ತು ಪುಳಕಮೆನೆ ಕಳಿಕೆಗಳಂ॥ ೯೦

ತಿಳಿವಳಿಕೆಯುಳ್ಳ ಜನರಿಗೆ ಸತತ ಸುಂದರ ಕರ್ಣಾಭರಣವಾಯಿತು. ೮೭. ಆ ಮುನೀಂದ್ರನ ಪರಿಶುದ್ಧವಾದ ಗುಣಗಳು ಲೋಕಗಳನ್ನೆಲ್ಲ ಸುತ್ತಿಕೊಂಡಿದ್ದರೂ, ಅಚಲವಾಗಿದೆ; "ಗಣನೀಯತೆ" (೧. ಗಣ್ಯತೆ ಅಥವಾ ಮುಖ್ಯತೆ ೨. ಎಣಿಕೆಗೆ ಒಳಪಟ್ಟುದು, ಸಂಖ್ಯೆ) ಯನ್ನೂ ಪಡೆದಿದ್ದರೂ "ಅಸಂಖ್ಯೇಯ" (ಎಣಿಸಲಾಗದುವು) ಎನಿಸಿದುವು. ೮೮. ಆತನ ಪಾದಧೂಳಿಯನ್ನು ತಮ್ಮ ತಲೆಗಳಲ್ಲಿಟ್ಟು ಅಲಂಕರಿಸಿಕೊಂಡ ಮನುಷ್ಯರೂ, ದೇವತೆಗಳೂ, ಖೇಚರರೂ ಪುಡಿಗತ್ತುರಿಯಿಟ್ಟುಕೊಳ್ಳುವುದನ್ನು ಬಿಟ್ಟುಕೊಟ್ಟರು. ಎಂದ ಮೇಲೆ ಇನ್ನೇನು ಹೇಳುವುದು ? ೮೯. ಆ ಯತೀಂದ್ರನ ಶ್ರೇಷ್ಠವಾದ ತಪಃಪ್ರಭಾವದಿಂದ ಉದ್ಯಾನದ ಮರಗಳಿಗೆ ಒದಗಿದ ಪರಮ ಸೌಂದರ್ಯವನ್ನು ಹೊಗಳಬೇಕೆಂದರೆ ನಾನು ಆದಿಶೇಷನೆ ಆಗಬೇಕು. ಆದರೂ ನನ್ನ ಅರಿವಿಗೆ ಸಾಧ್ಯವಾದಷ್ಟನ್ನು ಹೇಳುವೆನು. ಅದೇನೆಂದರೆ–೯೦. ವಸಂತಮಾಸವನ್ನು ಬಯಸದೆ, ಮಲಯಾನಿಲನ ಸಹಾಯವನ್ನು ಬೇಡದೆ, ಆ ಯತೀಂದ್ರನ ಆಗಮನವಾದೊಡನೆ, ಅದನ್ನೇ ಹಾರೈಸಿತ್ತೊ ಏನೊ ಎಂಬಂತೆ ಮಾವಿನ ಮರವು ರೋಮಾಂಚ ತಾಳಿದ ಹಾಗೆ ಮೈತುಂಬ ಮೊಗ್ಗುಗಳನ್ನು

ಯತಿಪತಿಸನ್ನಿಧಿಯಿಂ ಶಾಂ ।
ತತೆಯಂ ತಳೆದಂತೆ ಕಾಮಿನೀವಾಮಪದಾ ॥
ಹತಿಯಂ ಬಯಸದೆಯುಂ ಪು ।
ಷ್ಪಿತಮಾದುದು ಲಲಿತಪಲ್ಲವಂ ಕಂಕೆಲ್ಲಿಂ ॥ ೯೧

ನಿರುತಮಣುವ್ರತವಂ ಮುನಿ ।
ವರನೊಳ್ ಕೈಕೊಂಡ ತೆಱದೆ ಮಧುಸೇಕಮನಾ ॥
ದರಿಸದೆ ವಕುಳಂ ಮುಕುಳಮ ।
ನರಲಂ ಧರಿಸಿದುದು ಕೊಂಬುಕೊಂಬಿನೊಳೆಲ್ಲಂ ॥ ೯೨

ತಿಲಕಂ ಕಾಣಲೊಡಂ ಭೂ ।
ತಿಲಕನನೊಲವಿಂದಮಲರ್ದುದಂತುಟೆ ವಸುಧಾ ॥
ತಲದೊಳ್ ಸ್ವಪಕ್ಷದರ್ಶನ ।
ವಿಲಾಸಮೊದವಿಸದೆ ಮುದಮನಾರ್ಗಂ ಮನದೊಳ್ ॥ ೯೩

ಅವಿವೇಕಂ ತದ್ಧರ್ಮ ।
ಶ್ರವಣದಿನೋಸರಿಸಿದಂತಿರಾಶ್ರಯಮಣಮಾ ॥
ಗವೆ ಚಂಪಕಧಾತ್ರೀರುಹ ।
ನಿವಹಂಗಳ್ ಮುಖರಮಲಿನಮಧುಪವ್ರಜದಾ ॥ ೯೪

ಜಯಜಯರುತಿಯಂ ಖಗಸಂ ।
ಚಯರುತಿಯಿಂದ್ಯೈದೆ ಮಾಳ್ಪ ವನಲಕ್ಷ್ಮೀಕಾಂ ॥
ತೆಯ ಕಾಂತಧವಳದಂತಾ ।
ಳಿಯವೊಲ್ ಸೊಗಯಿಸಿತು ಕುಂದಕುಟ್ಮಲನಿಕರಂ ॥ ೯೫

ಧರಿಸಿತು. ೯೧. ಮುನೀಂದ್ರನ ಸಾಮೀಪ್ಯದಿಂದ ಶಾಂತವೃತ್ತಿಯನ್ನು ಪಡೆಯಿತೋ ಏನೊ ಎಂಬಂತೆ, ಕಾಮಿನಿಯರ ಎಡಗಾಲ ಒದೆತವನ್ನು ಅಪೇಕ್ಷಿಸದೆಯೆ ಕೋಮಲವಾದ ಚಿಗುರುಗಳುಳ್ಳ ಅಶೋಕವು ಹೂಬಿಟ್ಟಿತು. ೯೨. ಮುನೀಂದ್ರನ ಬಳಿಯಲ್ಲಿ ಅಣುವ್ರತವನ್ನು ಕೈಕೊಂಡಿತೋ ಏನೊ ಎಂಬಂತೆ ಮದ್ಯಸಿಂಚನಕ್ಕೆ ಹಾತೊರೆಯದೆ ಬಕುಳ ವೃಕ್ಷವು ಕೊಂಬೆ ಕೊಂಬೆಗಳಲ್ಲಿ ಮೊಗ್ಗುಗಳನ್ನೂ ಹೂಗಳನ್ನೂ ತಾಳಿತು. ೯೩. ತಿಲಕವೃಕ್ಷವು ಈ ಭೂಮಿಗೆ ತಿಲಕ (ಶ್ರೇಷ್ಠ) ನಾದ ಈ ಮುನಿಯನ್ನು ಕಂಡೊಡನೆ ಪ್ರೇಮದಿಂದ ಅರಳಿರಬೇಕು. ಭೂಮಿಯಲ್ಲಿ ತಮ್ಮವರನ್ನು ಕಂಡಾಗ ಮನಸ್ಸಿಗೆ ಸಂತೋಷವುಂಟಾಗುವುದಿಲ್ಲವೆ? ೯೪. ಆ ಮುನಿಯ ಬಾಯಿಂದ ಧರ್ಮವನ್ನು ಕೇಳಿ, ಅವಿವೇಕವೆಲ್ಲ ಹೊರಟು ಹೋಯಿತೆಂದು ತೋರುವಂತೆ ಸಂಪಗೆ ಮರಗಳಿಂದ ಕಪ್ಪು ಮುಖದ ದುಂಬಿಗಳೆಲ್ಲ ದೂರವಾದುವು. (ಸಂಪಗೆ ಮರಗಳು ಅವುಗಳಿಗೆ ಎಷ್ಟೆಷ್ಟೂ ಆಶ್ರಯ ಕೊಡಲಿಲ್ಲ) ೯೫. ಪಕ್ಷಿಗಳ ಧ್ವನಿಯ ಮೂಲಕ ಆ ಮುನಿಗೆ ಜಯಜಯಕಾರ ಮಾಡುತ್ತಿರುವ ಉದ್ಯಾನಲಕ್ಷ್ಮಿಯ ಸುಂದರವಾದ ಧವಳ ದಂತಗಳಂತೆ ಮೊಲ್ಲೆಯ

ಶುಚಿಸಂಗದಿಂದರಲ್ವುದಿ ।
ದುಚಿತಮೆನಗೆ ನೋಟಕ್ಕೊಡೀ ಮುನೀಂದ್ರನುಮಾದಂ ॥
ಶುಚಿಯೆಂದರಲ್ವುದೊಲವಿಂ ।
ವಿಚಕಿಲನಿಚಯಂ ನವೀನಗಂಧೋಪಚಯಂ ॥ ೯೬

ಆಡುವ ಸೋಗೆನವಿಲ್ಗಳ ।
ಗಾಡಿಯನೊಲವಿಂದೆ ಪಲವು ಕಣ್ಮಲರ್ಗಳಿಸೇಂ ॥
ನೋಡಿದಪುದೆಂಬ ಸಂದೆಗ ।
ದಾಡುಂಬೊಲನಾಯ್ತು ಪಲವುಮಲರಿಂ ಕುಟಜಂ ॥ ೯೭

ಮುನಿ ಪೊಕ್ಕನೆಂಬ ಭಯದಿಂ ।
ಬನದೊಳಗೆ ಬಿಸುಟ್ಟು ಪೋದ ವಿಷಮಾಸ್ತ್ರನ ನ ॥
ಚ್ಚಿನ ಬಾಣಾವಳಿಯೆನಿಸಿದು ।
ವನೂನಕುಸುಮಾವಕೀರ್ಣಬಾಣಾವಳಿಗಳ್ ॥ ೯೮

ಧರಣೀವಲ್ಲಭ ತನ್ಮುನಿ ।
ನಿರೀಕ್ಷಣಕ್ಷಣದೊಳಲರ್ದು ಕಡವಿನ ಮರಗಳ್ ॥
ಪರಿಗತರೋಮಾಂಚತೆಯಿಂ ।
ದೊರೆಮಾಡಿದುದೆನ್ನ ತನುವುಮಂ ನೆಱೆ ತನ್ನೊಳ್ ॥ ೯೯

ಎಂದುಂ ತಪಃಪ್ರಭಾವದೊ ।
ಳೊಂದಿಯೆ ಕುಸುಮಿಸುವುವಂತದಂ ಮಾಣ್ದಲರಂ ॥
ಸೆಂದುರಮಂ ಲೋಧ್ರಮುಮಿರ ।
ದಿಂದು ತಪಸ್ವಿಪ್ರಭಾವದಾಂತುದು ಚಿತ್ರಂ ॥ ೧೦೦

ಮೊಗ್ಗುಗಳ ಸಮುದಾಯುವು ಶೋಭಿಸಿತು. ೯೬. "ಪರಿಶುದ್ಧರಾದವರ ಸಹವಾಸ ದಿಂದ ಅರಳುವುದು ನನಗೆ ಯೋಗ್ಯ; ಹಾಗೆ ನೋಡಿದರ ಈ ಮುನಿ ಅತ್ಯಂತ ಶುದ್ಧನಾದವನು" ಹೀಗೆಂದು ಸಂತೋಷದಿಂದ ಹೊಸ ಪರಿಮಳದೊಂದಿಗೆ ಗಿರಿಮಲ್ಲಿಗೆ ಅರಳಿತು. ೯೭. ಕುಣಿದಾಡುವ ಗಂಡು ನವಿಲುಗಳ ಚೆಲುವನ್ನು ಹಲವು ಕಣ್ಣುಗಳಿಂದ ಹಿಗ್ಗಿ ನೋಡುತ್ತಿರುವುದೊ ಏನೊ ಎಂಬ ಸಂಶಯುವುಂಟಾ ಗುವಂತೆ ಕೊಡಸಿಗೆ ಹಲವಾರು ಹೂಗಳಿಂದ ಶೋಭಿಸಿತು. ೯೮. ಇಲ್ಲಿ ಮುನಿ ಬಂದು ಹೊಕ್ಕನೆಂಬ ಭೀತಿಯಿಂದ ಓಡಿಹೋಗುವಾಗ ಮನ್ಮಥನು ಬಿಸಾಕಿ ಹೋದ ಆತನ ಮೆಚ್ಚಿನ ಬಾಣಗಳ ಸಮೂಹವೊ ಏನೊ ಎಂಬಂತೆ ಶ್ರೇಷ್ಠವಾದ ಹೂಗಳಿಂದ ತುಂಬಿದ ನೀಲಿ ಗೋರಟೆಗಳು ಕಂಗೊಳಿಸಿದುವು. ೯೯. ಆ ಮುನಿಯು ದರ್ಶನದಿಂದ ಹಿಗ್ಗಿ ಅರಳಿದ ಕದಂಬವೃಕ್ಷ ಮೈತುಂಬ ರೋಮಾಂಚವನ್ನೊದಗಿಸಿ ನನ್ನನ್ನೂ ತಮಗೆ ಸದೃಶವಾಗುವಂತೆ ಮಾಡಿದುವು. ೧೦೦. ತಪಃಪ್ರಭಾವ ದಿಂದ ಮರ ಹೂಬಿಡುವುದು ಸ್ವಾಭಾವಿಕ. ಆದರೆ ಈಗ ಲೋಧ್ರ ವೃಕ್ಷವು ಹೂವಿಲ್ಲದೆ ತಪಸ್ವಿಯು ಪ್ರಭಾವದಿಂದ ಸಿಂಧೂರ (ಕುಂಕುಮ) ವನ್ನು ತಾಳಿತು.

ಅಲರ್ಗಳ ಕೀೞ್ಸಿಸಳ್ ಕಱಲದಂತು ಲತಾಳಿಯ ತಳ್ಪು ಬಿರ್ಚದಂ।
ತೆಲೆಯ ತೊಡಂಬೆಗಳ್ ಪಱೆಯದಂತು ಸರೋರುಹಿಣೀವನಂಗಳೊಳ್ ॥
ವಲಿ ತಲೆದೋಱದಂತು ನಲಿದಾಡುವ ಸೋಗೆಯ ಸೋಗೆ ಸೂಸದಂ।
ತೆಲರೊಲವುಣ್ಮೆ ತೀಡಿದುದು ತಣ್ಣನೆ ಪಣ್ಣನೆ ತದ್ವನಾಂತದೊಳ್ ॥ ೧೦೧

ಬನದೊಳಗುಬ್ಬರಂ ಪರಿವ ಶಾಂತರಸಾಮೃತದಿಂದಮೆಯ್ದೆ ತ।
ಣ್ಣನೆ ತಣಿದಂತೆ ಚುಂಬಿಸವೆ ಪೂಗುಡಿಯಂ ಮಱೆದುಂ ಮದಾಳಿಗಳ್ ॥
ಕನರ್ಗೊನರಂ ಕರ್ದುಂಕವೆ ವಿನೋದದೊಳಂ ಕಳಕೋಕಿಳಂಗಳೊಂ।
ದಿನಿತುಮನಪ್ಪೊಡಂ ಗಿಳಿಗಳುಣ್ಣವೆ ಪಣ್ಣನದೆಲ್ಲಿ ನೋೞ್ಪೊಡಂ ॥ ೧೦೨

ಮತ್ತಂ

ಆತ್ತವಿರಾಗವರ್ತನೆ ಧೃಢೀಕೃತಮೂಲಗುಣಂ ನಿರೀಹತಾ।
ವೃತ್ತಿಯಸಂಗಭಾವಭಜನಂ ಸುಮನಃಪ್ರತಿಪತ್ತಿ ಮಾನಸಂ ॥
ಪತ್ತಿ ಕರಂ ವಿರಾಜಿಸೆ ವನಸ್ಥಿತಶಾಖಿನಿಕಾಯಮಾವಗಂ।
ಪೆತ್ತುದು ಚೆಲ್ವನಾ ಮುನಿಪನೊಳ್ ತಳೆದಂತೆ ತಪೋನಿಯೋಗಮಂ ॥ ೧೦೩

ಅದಲ್ಲದೆಯುಂ ನಿರ್ಭರಭಕ್ತಿರಸರಸಿಕವನದೇವತಾಪ್ರೇರಣದಿಂ

ಇದು ವಿಚಿತ್ರ. ೧೦೧. ಹೂಗಳ ಕೆಳಗಿನ ದಳಗಳು ಕೂಡ ಅಲುಗಿ ಉದಿರದಂತೆ, ಬಳ್ಳಿಗಳ ಅಪ್ಪುಗೆ ಸಡಿಲದಂತೆ, ಎಲೆಯ ಗೊಂಚಲು ಹರಿಯದಂತೆ, ಕಮಲ ಸರೋವರದಲ್ಲಿ ಚಿಕ್ಕ ಅಲೆಯೂ ಏಳದಂತೆ, ಕುಣಿದಾಡುವ ನವಿಲುಗಳ ಸೋಗೆ ಕೆದರದಂತೆ, ಅತ್ಯಂತ ಪ್ರೇಮದಿಂದ ಮೆಲ್ಲಗೆ, ತಣ್ಣಗೆ, ಹಿತವಾದ ಗಾಳಿ ಆ ಉದ್ಯಾನದಲ್ಲಿ ಬೀಸಿತು.* ಮತ್ತು–೧೦೩. ಅಲ್ಲಿಯ ಮರಗಳ ಸಮೂಹವು ಆ ಮುನೀಂದ್ರನಿಂದ ತಪೋದೀಕ್ಷೆಯನ್ನು ವಹಿಸಿತೋ ಏನೊ ಎಂಬಂತೆ "ಆತ್ತವಿರಾಗವರ್ತನೆ" (೧. ವೈರಾಗ್ಯಯುಕ್ತವಾದ ನಡವಳಿಕೆ. ೨. ಪಕ್ಷಿಗಳಿಗೆ ಪ್ರಿಯವಾಗಿರುವಿಕೆ) ಯಿಂದಲೂ, "ದೃಢೀಕೃತ ಮೂಲಗುಣ" (೧. ಸಾಧುವಿನಲ್ಲಿರುವ ಅಚಲವಾದ ೨೮ ಮೂಲಗುಣಗಳನ್ನು ಹೊಂದಿರುವಿಕೆ. ೨. ಬೇರು ಹಾಗು ಕಾಂಡಗಳು ಭದ್ರವಾಗಿರುವಿಕೆ) ದಿಂದಲೂ, "ನಿರೀಹತಾವೃತ್ತಿ" (೧. ಯಾವ ಆಸೆಯೂ ಇಲ್ಲದಿರುವಿಕೆ. ೨. ನಿಶ್ಚಲತೆ) ಯಿಂದಲೂ, "ಸುಮನಃಪ್ರವೃತ್ತಿ" (೧. ಶುದ್ಧವಾದ ಮನಸ್ಸಿನಿಂದಿರುವಿಕೆ; ೨. ಹೂ ಬಿಡುವ ಸ್ವಭಾವ) ಯಿಂದಲೂ ವಿಶೇಷವಾದ "ಮಾನಸಂಪತ್ತಿ" (೧. ಗೌರವ ಸಂಪನ್ನತೆ ೨. ವಿಸ್ತೀರ್ಣತೆ) ಯಿಂದಲೂ ಶೋಭಿಸಿದುವು. ಅಷ್ಟೆ ಅಲ್ಲದೆ ಭಕ್ತಿರಸ ಪರವಶರಾದ

* ೧೦೨ನೇ ಪದ್ಯದ ಅನುವಾದ ಮೂಲದಲ್ಲೇ ಬಿಟ್ಟುಹೋಗಿದೆ.

ಬಳಸಿ ಮುನಿಗರ್ಘ್ಯಮಂ ಮರ ।
ಗಳೆ ಕುಡುವಂತೆಸೆವ ತಳಿರ ಮಱಿಯಂ ಪೊಸವೂ ॥
ಗಳ ತಂದಲನೊಪ್ಪುವ ಪ ।
ಣ್ಗಳ ಸರಿಯಂ ಸುರಿಯುತಿರ್ದುವಿರ್ದಿರ್ದೆಡೆಯೊಳ್ ॥ ೧೦೪

ಆನವಱಿಕೊಳಾಯ್ದು ತಂದ ನ ।
ವೀನಫಲಪ್ರಸವಮಿವು ದಲೆಂದಱಿಪಿದನು ॥
ದ್ಯಾನಮಹತ್ತರನರಸಂ ।
ಗಾನತಭುವನನ ಸಮಾಗಮಪ್ರಸ್ತುತಮಂ ॥ ೧೦೫

ಅದಂ ಕೇಳ್ದು ಹರ್ಷರಸವಿಸರ ಮಕರಂದಸಂದೋಹಭರಿತಹೃದಯಾರವಿಂದನುಂ, ಪುಳಕನಿಕರಕಳಿಕಾವಳೀಕಳಿತನಿಜಶರೀರೋದಾರಪಾರಿಜಾತನುಂ, ಪ್ರಮೋದಬಾಷ್ಪಜಲಲುಳಿತನಯನ ಪಾಠೀನನುಮಾಗಿ ೧೦೬

ನಾಮಱಿಸಿ ಪೋಗಿ ಪೂಜಿಸು ।
ವಾ ಮುನಿಪತಿ ತಾನೆ ದಯೆಯಿನೆೞ್ತಂದಂ ಮ ॥
ತ್ತೇಮಾತೊ ನಮ್ಮ ಪುಣ್ಯದ ।
ಸಾಮರ್ಥ್ಯಮನೂನಮನುಪಮಾನಮದಲ್ತೇ ॥ ೧೦೭

ಎಂದು ಮಣಿಮಯನಿಜೋಪವಿಷ್ಟವಿಷ್ಟರಾಗ್ರದಿಂದೆ

ಇೞಿದಾದೆಸೆಗೇೞಡಿಯಂ ।
ಗಱಗಱನವನಿಪತಿ ಮುಗಿದ ಕೈಯಂ ನೊಸಲಿಂ ॥
ದಿೞಿಪಿದನಡಿಗೆಱಗಿದನೋ ।
ಕುಱಿಯಾಡೆ ಪೊದಱ್ದ ರಾಗರಸದಿಂ ಚಿತ್ತಂ ॥ ೧೦೮

ವನದೇವತೆಗಳ ಪ್ರೇರಣೆಯಿಂದ– ೧೦೪. ಸುತ್ತಲೂ ನಿಂತುಕೊಂಡು ಮರಗಳು ಮುನಿಗೆ ಅರ್ಘ್ಯ ಕೊಡುತ್ತಿರುವಂತೆ ಚಿಗುರುಗಳ ಮಳೆಯುನ್ನೂ ಹೊಸಹೂಗಳ ಸೋನೆಯನ್ನೂ, ಹಣ್ಣುಗಳ ಸುರಿಮಳೆಯನ್ನೂ ನಿಂತುನಿಂತಲ್ಲಿಯೆ ಕರೆಯುತ್ತಿದ್ದುವು. ೧೦೫. ಹಾಗೆ ಸುರಿದುದರಲ್ಲಿ ನಾನು ಆರಿಸಿ ತಂದ ಹೊಸ ಹೂ–ಹಣ್ಣುಗಳು ಇವು" ಎಂದು ಉದ್ಯಾನಪಾಲಕನು ಲೋಕಪೂಜ್ಯನಾದ ಮುನಿಯು ಆಗಮನ ವೃತ್ತಾಂತವನ್ನು ರಾಜನಿಗೆ ಅರಿಕೆ ಮಾಡಿಕೊಂಡನು. ೧೦೬. ಅದನ್ನು ಕೇಳಿ ಸಂತೋಷದಿಂದ ಎದೆ ತುಂಬಿ, ಮೊಗ್ಗುಗಳಿಂದ ತುಂಬಿದ ಪಾರಿಜಾತದಂತೆ ಮೈತುಂಬ ರೋಮಾಂಚ ಹೊರದಿ, ಆನಂದ ಬಾಷ್ಪಗಳ ಪ್ರವಾಹದಲ್ಲಿ ಕಣ್ಣುಗಳು ಮೀನುಗಳಂತೆ ತೇಲಾಡುತ್ತಿರಲಾಗಿ (ಆ ರಾಜನು ಹೀಗೆಂದನು) –೧೦೭. "ನಾವೇ ಹುಡುಕಿಕೊಂಡು ಹೋಗಿ ಪೂಜಿಸಬೇಕಾಗಿದ್ದ ಯತೀಂದ್ರನು ತಾನೆ ಕರುಣೆಯಿಂದ ನಮ್ಮಲ್ಲಿಗೆ ಬಂದಿರುವನು. ಎಂದ ಮೇಲೆ ನಮ್ಮ ಪುಣ್ಯದ ಸಾಮರ್ಥ್ಯ ಎಷ್ಟು ಸಮೃದ್ಧವಾದುದು ! ಅದು ಅಸದೃಶವಾದುದಲ್ಲವೆ ?" ಹೀಗೆಂದು ರತ್ನಮಯವಾದ ತನ್ನ ಸಿಂಹಾಸನದ ಮೇಲಿಂದ– ೧೦೮. ಇಳಿದು ಹಣೆಗೆ ಕೈಜೋಡಿಸಿಕೊಂಡು ಆ (ಮುನಿಯಿರುವ) ದಿಕ್ಕಿಗೆ ಏಳು ಹೆಜ್ಜೆ ಲಗುಬಗೆಯಿಂದ ನಡೆದು,

ಆಗಳ್

ಧಾತ್ರೀಶಾಜ್ಞೆಯಿನುಣ್ಮೆದತ್ತು ಪೊಱಲೊಳ್ ಪಾಪಪ್ರತೀಪದ್ವಿಪೈ।
ಕತ್ರಾಸಪ್ರದಪುಣ್ಯಕೇಸರಿರವಂ ಭವ್ಯಾವಳೀಸೌಖ್ಯಸ ॥
ಸ್ಯತ್ರಾಣಾಮೃತವರ್ಷಧರ್ಮಘನಘೋಷಂ ಬಂಧುರಂ ವಂದನಾ।
ಯಾತ್ರೋತ್ಸಾಹನಿವೇದಕಂ ಕನಕಕೋಣಾಘಾತಭೇರೀರವಂ ॥ ೧೦೯

ಅನಂತರಂ

ಬಳೆದ ಮುನಿನಾಥವಾರ್ತಾ।
ವಿಳಸತ್ಕಲ್ಪಲತೆ ಫಲಿತವಾದತ್ತೆನೆ ಭೂ ॥
ತಳಪಾಲಂ ವನಪಾಲಂ।
ಗಳತೆಗೆ ಮಿಗಿಲೆನಿಸಿ ಪಾರಿತೋಷಕಮಿತ್ತಂ ॥ ೧೧೦

ಅಂತನೇಕಾಳಂಕಾರವಸನವಸುವಿಸ್ತರದಿಂ ಸಂತಸಂಬಡಿಸಿ ಭೇರೀರವಾಕರ್ಣನನಿಮೀಳಿತನಾನಾರ್ಚನಾವ್ಯಗ್ರಹಸ್ತಪರಿವಾರಪರಿವೃತಾನೇಕರಾಜಲೋಕಸಂಕೀರ್ಣಮಪ್ಪ ರಾಜಮಂದಿರದ್ವಾರದೊಳ್ ಪಣ್ಣಿಬಂದಿರ್ದ ಪಟ್ಟವರ್ಧನಗಂಧಸಿಂಧುರಸ್ಕಂಧಾರೂಢನಾಗಿ ಪುರಮಂ ಪೊಱಮಟ್ಟು ೧೧೧

ಸಸುತಂ ಸಸ್ತ್ರೀನಿಕರಂ।
ಸಸುಹೃತ್ಪ್ರಕರಂ ಸಪೌರಲೋಕಂ ಸಬಲ ॥
ಪ್ರಸರಂ ಸಮಂತ್ರಿವಿಸರಂ।
ವಸುಧಾಪತಿ ನಡೆದನಧಿಕವಿಭವಸಮೇತಂ ॥ ೧೧೨

ಕೈಗಳನ್ನು ಕೆಳಗಿಳಿಸಿ ಕೆಳಗೆ ಬಾಗಿ ನಮಸ್ಕರಿಸಿದನು. ಭಕ್ತಿರಸದಿಂದ ಆತನ ಮನಸ್ಸು ಓಕುಳಿಯಾಡಿತು. ಆಗ_ ೧೦೯. ಪಾಪವೆಂಬ ಆನೆಗಳನ್ನು ಬೆದರಿಸುವ ಪುಣ್ಯಸಿಂಹದ ಗರ್ಜನೆಯಂತೆ, ಭಕ್ತರೆಂಬ ಸಸಿಗಳನ್ನು ಪೋಷಿಸುವ ಧರ್ಮಾಮೃತದ ಮಳೆಯಂತೆ ಭೋರೆಂದು ಧ್ವನಿಮಾಡುತ್ತ, ಚಿನ್ನದ ಕುಡುಗಳಿಂದ ಬಾರಿಸಿ ನುಡಿಸಿದ ಭೇರೀನಾದವು, ಅರಸನ ಅಪ್ಪಣೆಯ ಮೇರೆಗೆ ಎಲ್ಲರೂ ಮುನಿಗಳ ವಂದನಾಯಾತ್ರೆಗೆ ಹೋಗಬೇಕೆಂದು ಊರಲ್ಲೆಲ್ಲ ಸಾರಿತು. ಆ ಬಳಿಕ– ೧೧೦. ಮುನೀಂದ್ರನ ವಾರ್ತೆಯೆಂಬ ಸುಂದರವಾದ ಕಲ್ಪಲತೆಯ ಹಣ್ಣು ಬಿಟ್ಟಿತೆಂಬಂತೆ ಅರಸನು ವನಪಾಲಕನಿಗೆ ಅಳತೆಮೀರುವಂತೆ ಬಹುಮಾನವಿತ್ತನು. ೧೧೧. ಹಾಗೆ ಅನೇಕ ಬಗೆಯ ಆಭರಣ, ವಸ್ತ್ರ ಹಾಗು ಚಿನ್ನವನ್ನು ಹೇರಳವಾಗಿ ಕೊಟ್ಟು ಆತನನ್ನು ಸಂತೋಷಗೊಳಿಸಿದನು. ಭೇರಿಯ ಶಬ್ದವನ್ನು ಕೇಳಿ ಹಲವಾರು ಬಗೆಯ ಪೂಜಾದ್ರವ್ಯ ಸಮೇತವಾಗಿ ಸಿದ್ಧರಾದ ಪರಿವಾರದೊಡನೆ ಬಂದ ಅನೇಕ ರಾಜಕುಲದವರು ಅರಮನೆಯ ಹೆಬ್ಬಾಗಿಲಲ್ಲಿ ನೆರೆದಿದ್ದರು. ಅರಸನು ಅಲ್ಲಿಗೆ ಬಂದು ಪಟ್ಟದಾನೆಯ ಮೇಲೆ ಏರಿ ಕುಳಿತು ಪಟ್ಟಣದಿಂದ ಹೊರಟನು. ೧೧೨. ಮಕ್ಕಳು, ಹೆಂಡಿರು, ಮಿತ್ರರು, ಪೌರಜನರು, ಸೈನ್ಯದಳಗಳು, ಮಂತ್ರಿಗಳು – ಇವರೆಲ್ಲರನೊಡಗೊಂಡು

ಆ ಪ್ರಯಾಣದೊಳ್

ಕಾರ ಮುಗಿಲ್ಗಳಿಂ ಪೊಳೆವ ಮಿಂಚುಗಳಿಂ ಸುರಕಾರ್ಮುಕಂಗಳಿಂ।
ಪೂರಿಸಿದಂದದಿಂದವನಿಮಂಡಲಮಷ್ಟದಿಶೋರುಮಂಡಳಂ॥
ನೀರದಮಾರ್ಗಮಂಡಲಮದೇನೆಸೆದತ್ತೊ ಮದದ್ವಿಪಾವೃತಂ।
ವೀರಭಟಾಸ್ತ್ರರುಕ್ಪರಿವೃತಂ ಮಣಿಭೂಷಣಕಾಂತಿಸಂವೃತಂ ೧೧೩

ಅಂತು ನಡೆದು

ನುತಕಮಳಾಕರಮಂ ಪರಿ।
ವೃತಪುನ್ನಾಗಮನುದಾತ್ತ ಚಂದನತಿಲಕಾ॥
ನ್ವಿತಮಂ ವಿರಾಜಿತಮನಾ।
ಕ್ಷಿತಿಪತಿ ಸಾರ್ತಂದಸಾತ್ಮಸಮಮಂ ವನಮಂ॥ ೧೧೪

ಆಗಳಾ ಮುನೀಂದ್ರಪ್ರಭಾವದೂತಾಹೂತವಸಂತವಲ್ಲಭನವೀನಸಂಯೋಗದಿಂ ಪರಿಶ್ರಾಂತೆಯಾದುದ್ಯಾನಲಕ್ಷ್ಮಿಯ ನಱುಸುಯ್ಯೆದೆನಿಸಿ ಪಸರಿಸುವ ತಣ್ಗಾಳಿಯುಂ, ತೆಣ್ಗಾಳಿಯಲೆಪದಿಂದೊಲೆದು ಪುಣ್ಯಪಣ್ಯಾರ್ಥಿಭವ್ಯಸಾರ್ಥಮನಿತ್ತಲೆಟ್ತೆರ್ಪುದೆಂದು ಕೈಸನ್ನೆಯಿಂ ಕರೆವಂತೆ ಕರಮೆ ಸೊಗಯಿಸುವ ತಳಿರ್ಗೊಂಬುಗಳುಂ, ತಳಿರ್ಗೊಂಬುಗಳೊಳಿರ್ದು ಮುನ್ನಿನಂದದಿಂದಿಂದು ಪೊಕ್ಕೆಡೆ ಪೊಲ್ಲದಕ್ಕುಮೆಂದು

ಅರಸನು ವೈಭವದಿಂದ ನಡೆದನು. ಆ ಪ್ರಯಾಣದಲ್ಲಿ– ೧೧೩. ಮದಗಜಗಳಿಂದಲೂ ವೀರಯೋಧರ ಆಯುಧಗಳ ಪ್ರಭೆಯಿಂದಲೂ, ರತ್ನಾಭರಣಗಳ ಕಾಂತಿಯಿಂದಲೂ ಅಷ್ಟದಿಕ್ಕುಗಳು ಹಾಗು ಆಕಾಶ ಮಂಡಲವು ಆವೃತವಾಗಿ ಮಳೆಗಾಲವು ಮೋಡಗಳಿಂದಲೂ, ಹೊಳೆಯುವ ಮಿಂಚುಗಳಿಂದಲೂ, ಕಾಮನ ಬಿಲ್ಲುಗಳಿಂದಲೂ ತುಂಬಿಕೊಂಡಂತೆ ತುಂಬಾ ಸುಂದರವಾಗಿ ಕಂಗೊಳಿಸಿದುವು ಹಾಗೆ ನಡೆದು – ೧೧೪. ಶ್ರೇಷ್ಠವಾದ "ಕಮಳಾಕರವೂ" (೧. ಕಮಲ ಸರೋವರದಿಂದ ಕೂಡಿದುದು, ೨. ಲಕ್ಷ್ಮಿಗೆ ನೆಲೆವೀಡಾದವನು) "ಪರಿವೃತ ಪುನ್ನಾಗವೂ" (೧. ನಾಗಕೇಸರ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟುದು. ೨. ಶ್ರೇಷ್ಠ ಪುರುಷರ ಮಧ್ಯದಲ್ಲಿರುವವನು) "ಉದಾತ್ತ ಚಂದನ ತಿಲಕಾನ್ವಿತ"ವೂ (೧. ಉತ್ತಮವಾದ ಗಂಧದ ಮರ ಹಾಗು ತಿಲಕವೃಕ್ಷ ಸಹಿತವಾದುದು ೨. ಉತ್ತಮವಾದ ಶ್ರೀಗಂಧದಿಂದ ಹಣೆ ಬೊಟ್ಟು ಇಟ್ಟುಕೊಂಡವನು) "ವಿರಾಜಿತ"ವೂ (೧. ಪಕ್ಷಿಗಳಿಂದ ಶೋಭಿಸುವುದು. ೨. ಸೌಂದರ್ಯದಿಂದ ಶೋಭಿಸುವವನು) ಆಗಿ ತನಗೆ ಸಮನಾಗಿರುವ ಉದ್ಯಾನಕ್ಕೆ ಅರಸನು ಬಂದನು. ೧೧೫. ಆಗ ಆ ಮುನೀಶ್ವರನ ಪ್ರಭಾವದಿಂದ ಕರೆತರಲಾದ ವಸಂತನೆಂಬ ತನ್ನ ನಲ್ಲನ ಸಮಾಗಮದಿಂದ ತಣಿದು ದಣಿದ ಉದ್ಯಾನಲಕ್ಷ್ಮಿಯು ಸುಗಂಧಮಯವಾದ ಉಚ್ಛ್ವಾಸವೊ ಏನೋ ಎಂಬಂತೆ ತಂಪಾದ ಗಾಳಿ ಪಸರಿಸಿತ್ತು; ತಂಗಾಳಿಯ ಚಲನೆಯಿಂದ ಒಲೆದು, ಪುಣ್ಯಾರ್ಥಿಗಳ ಸಮೂಹವನ್ನು "ಇತ್ತ ಬನ್ನಿ, ಇತ್ತ ಬನ್ನಿ" ಎಂದು ಕೈ ಬೀಸಿ ಕರೆಯುತ್ತಿರುವಂತೆ ತಳಿರು ತುಂಬಿದ ಕೊಂಬೆಗಳು ಶೋಭಿಸಿದವು; ತಳಿರ ಕೊಂಬೆಗಳಲ್ಲಿ ಕುಳಿತು "ಮೊದಲಿನಂತೆ ನೀನು ಇಲ್ಲಿ

ಕಂದರ್ಪನಂ ಪುಗಲ್ ಪುಗಲೆಂಬಂದದಿಂ ಸರಂಗೆಯ್ವ ಗಂಡುಗೋಗಿಲೆಯ ದನಿಗಳುಂ, ಗಂಡುಗೋಗಿಲೆಯ ದನಿಯ ವಾದ್ಯನಿನದಮಪ್ಪಿನಮಾಗಳೆ ಬಂದ ಮುನಿವೃಂದಾರಕನ ಬರವಿನೊಸಗೆಯೊಳ್ ಮಂಗಳಂಬಾಡುವಂತಿನಿಯ ದನಿಯಂ ನೆರೆದು ಮೊರೆವ ಪೆಣ್ದುಂಬಿಗಳುಂ, ಅಸದಳಂ ಸೊಗಯಿಸುವ ಬನದ ಬಾಗಿಲೊಳ್ ಸೇನಾಪತಿ ಪ್ರಮುಖಚತುರಂಗಪೃತನಾಪ್ರತಾನಮನಿಲ್ಲಿಯೆ ನಿಲ್ಕೆಂದು ಬೆಸಸಿ ವಿಗತಧವಲಚ್ಛತ್ರಚಾಮರಾದಿರಾಜಚಿಹ್ನಸಮಾಜನುಂ, ಕತಿಪಯಭವ್ಯಪಾರ್ಥಿವಪ್ರಧಾನಪರಿವಾರನುಂ, ಸಜ್ಜನಸಜ್ಜೀಕೃತಾನೇಕಪೂಜಾಪರಿಕರನುಂ ವನಮಹತ್ತರಪುರಸ್ಸರನುಮಾಗಿ ೧೧೫

ಪುರುಷೋತ್ತಂ ಪ್ರೀತಿಯಿಂ ನಂದನವನಕೆ ಮಹೋತ್ಸಾಹದಿಂ ಚೈತ್ರದೊಳ್ ಚೈ ।
ತ್ರರಥೋದ್ಯಾನಕ್ಕೆ ವಿತ್ತಾಧಿಪನತುಳವಿಳಾಸಾನ್ವಿತಂ ಬರ್ಪವೋಲ್ ತ ।
ದ್ಧರಣೀಚಕ್ರೇಶನಂತಾ ಬನಕೆ ಸವಿಭವಂ ಬಂದು ಯೋಗೀಂದ್ರಪೂಜಾ ।
ತುರಚಿತ್ತಂ ಪೊಕ್ಕನುದ್ಯತ್ಪುಳಕತನುಲತಂ ಕಾವ್ಯನೌಕರ್ಣಧಾರಂ ॥ ೧೧೬

ಗದ್ಯಂ

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿ ತ್ರೈವಿದ್ಯಾಚಕ್ರವರ್ತಿ ಪದಪದ್ಮನಿಧಾನದೀಪವರ್ತಿ
ಶ್ರೀಮದಗ್ಗಳದೇವ
ವಿರಚಿತಮಪ್ಪ
**ಚಂದ್ರಪ್ರಭಪುರಾಣದೊಳ್**
ಪದ್ಮನಾಭಮುನಿವಂದನಾಯಾತ್ರೋತ್ಸವಂ
ದ್ವಿತೀಯಾಶ್ವಾಸಂ.

ಹೊಕ್ಕರೆ ನಿನಗೆ ಕೇಡಾಗದಿರದು, ಆದುದರಿಂದ ಇಲ್ಲಿಗೆ ಬರಬೇಡ, ಬರಬೇಡ" ಎಂದು ಕಾಮನಿಗೆ ಎಚ್ಚರ ನೀಡುವಂತೆ ಕೋಗಿಲೆಗಳು ಕೂಗುತ್ತಿದ್ದುವು; ಗಂಡು ಕೋಗಿಲೆಗಳ ಧ್ವನಿಯ ವಾದ್ಯವಾಗುತ್ತಿದ್ದಂತೆಯೆ ಆಗಲೆ ಬಂದಿರುವ ಮುನಿಶ್ರೇಷ್ಠನ ಆಗಮನೋತ್ಸವಕ್ಕಾಗಿ ಮಂಗಳವನ್ನು ಹಾಡುವಂತೆ ಮಂಜುಳವಾದ ಧ್ವನಿಯಿಂದ ದುಂಬಿಗಳು ಮೊರೆಯುತ್ತಿದ್ದುವು. ಹೀಗೆ ಅತ್ಯಧಿಕವಾಗಿ ಶೋಭಿಸುತ್ತಿರುವ ಉದ್ಯಾನದ ಬಾಗಿಲಿಗೆ ಬಂದು, ಅರಸನು ಸೇನಾಪತಿ ಸಹಿತವಾದ ತನ್ನ ಚತುರಂಗ ಸೈನ್ಯವನ್ನು ಅಲ್ಲಿಯೆ ನಿಲ್ಲಲು ಆಜ್ಞಾಪಿಸಿ, ಬೆಳ್ಗೊಡೆಯೆ ಮೊದಲಾದ ತನ್ನ ರಾಜಚಿಹ್ನೆಗಳನ್ನೆಲ್ಲ ಹಿಂದಿರಿಸಿ, ಕೆಲವೇ ಜನ ಭಕ್ತರಾದ ಅರಸುಗಳು ಹಾಗು ಪ್ರಧಾನ ಪರಿವಾರದವರನ್ನೊಡಗೊಂಡು ಸಜ್ಜನರು ಸಿದ್ಧಪಡಿಸಿ ತಂದ ಅನೇಕ ಪೂಜಾಸಾಮಗ್ರಿಸಹಿತನಾಗಿ ವನಪಾಲಕನನ್ನು ಮುಂದಿಟ್ಟುಕೊಂಡು– ೧೧೬. ಚೈತ್ರಮಾಸದಲ್ಲಿ ಇಂದ್ರನು ಪ್ರೀತಿಯಿಂದ ತನ್ನ ನಂದನವನಕ್ಕೆ ಬರುವಂತೆ, ಕುಬೇರನು ತನ್ನ ಚಿತ್ರರಥವೆಂಬ ಉದ್ಯಾನಕ್ಕೆ ವಿಲಾಸದಿಂದ ಬರುವಂತೆ, ಆ ಭೂಪತಿಯು ವೈಭವದೊಡನೆ ಆ ಉದ್ಯಾನಕ್ಕೆ ಬಂದು ಆ ಮಹಾಯೋಗಿಯ ಪೂಜಾಕಾರ್ಯಕ್ಕೆ ಆತುರನಾಗಿ, ಸಂತೋಷದಿಂದ ಪುಲಕಿತನಾಗಿ ಒಳಗೆ ಪ್ರವೇಶ ಮಾಡಿದನು.

**ಎರಡನೆಯ ಆಶ್ವಾಸ ಮುಗಿಯಿತು.**

# ತೃತೀಯಾಶ್ವಾಸಂ

ಶ್ರೀಪತಿನಿರ್ಮಲಭಕ್ತಿ ।
ವ್ಯಾಪಿತಮನನೆಯ್ದೆವಂದನಾ ಮುನಿಮುಖ್ಯ ॥
ಶ್ರೀಪಾದೋಪಾಂತಮನವ ।
ನೀಪಾಲಂ ಜೈನಜನಮನೋಹರಚರಿತಂ ॥ ೧

ವಿಸ್ತೀರ್ಣಮೆನಿಪ ನೀಲ ।
ಪ್ರಸ್ತರದೊಳ್ ಮುನಿಪನಿರ್ದನಪಗತಜೀಮೂ ॥
ತಸ್ತೋಮಮಾಗಿ ವಿಮಳನ ।
ಭಸ್ತಳದೊಳ್ ತೊಳಪ ಚಂದ್ರನಂದದಿನಾಗಳ್ ॥ ೨

ಅಂತಿರ್ದನಂ ತ್ರಿಪ್ರದಕ್ಷಿಣಂಗೆಯ್ದು ವಿವಿಧಪೂಜಾಪುರಸ್ಸರಂ ಗುರುಭಕ್ತಿಯಿಂ ವಂದಿಸಿ ತದಾಶೀರ್ವಚನಾಮೃತಭರಿತಕರ್ಣಕುಹರನುಂ ಪಾದಪ್ರದೇಶನಿಷಣ್ಣನುಮಾಗೆ,

ಪಿರಿದುಂ ಜಿನೇಂದ್ರದಿವಿಜೇಂ ।
ದ್ರರಿರ್ವರಿಂದೆಸೆವ ಸಮವಸರಣಸ್ಥಳಿಯೊಳ್ ॥
ಸರಿಯಾದುದಾಪ್ರದೇಶಂ ।
ಪರಮಮುನೀಶಕ್ಷಿತೀಶರಿಂ ತತ್ಕ್ಷಣದೊಳ್ ॥ ೩

## ತೃತೀಯಾಶ್ವಾಸಂ

೧. ಜೈನಜನರ ಮನಸ್ಸಿಗೆ ಸಂತೋಷಕರವಾದ ನಡತೆಯುಳ್ಳ ವೈಭವಶಾಲಿಯಾದ ಆ ಅರಸನು ಭಕ್ತಿರಸಭರಿತನಾಗಿ ಮುನೀಂದ್ರನ ಪಾದಸನ್ನಿಧಿಗೆ ಬಂದನು. ೨. ಮೋಡಗಳೆಲ್ಲ ಹೊರಟು ಹೋಗಿ ನಿರ್ಮಲವಾಗಿರುವ ಆಕಾಶದಲ್ಲಿ ತೊಳಗುವ ಚಂದ್ರನಂತೆ ವಿಸ್ತಾರವಾದ ಕರಿಯ ಕಲ್ಲಿನ ಮೇಲೆ ಆ ಮುನೀಂದ್ರನು ಇದ್ದನು. ಹಾಗಿರುವ ಮುನಿಗೆ ಮೂರುಸಲ ಪ್ರದಕ್ಷಿಣೆ ಹಾಕಿ ವಿವಿಧವಾದ ಪೂಜೆಗಳನ್ನು ಅರ್ಪಿಸಿ ಪರಮಭಕ್ತಿಯಿಂದ ನಮಸ್ಕಾರ ಮಾಡಿ, ಆತನ ಆಶೀರ್ವಾದ ವಚನವೆಂಬ ಅಮೃತವನ್ನು ಕಿವಿಗಳಲ್ಲಿ ತುಂಬಿಕೊಂಡು, ಆತನ ಪಾದಗಳ ಬಳಿ ಕುಳಿತನು. ೩. ಆ ಮುನೀಂದ್ರನೂ ಈ ರಾಜನೂ ಕೂಡಿ ಕುಳಿತಿರುವ ಪ್ರದೇಶವು ಜಿನೇಂದ್ರ ಹಾಗೂ ದೇವೇಂದ್ರರು ಕೂಡಿ

ಕ್ಷಿತಿಪತಿಯ ಕರಸರೋಜ ।
ದ್ವಿತಯಮನಡಿಗಡಿಗೆ ಮುಕುಲತೆಯನ್ನೈದಿಸಿ ತ ॥
ದ್ಯತಿಪತಿ ನಿಜಕುವಲಯಬಂ ।
ಧುತೆಯಂ ಪ್ರಕಟಿಸಿದನಾ ಸಭಾಭ್ಯಂತರದೊಳ್ ॥ ೪

ಆಗಳ್ ಮುನಿನಾಯಕನಂ ।
ಭೂಗಧಿಪತಿ ಭವ್ಯತುಮುಲಜಯಜಯನಿನದಾ ॥
ವೇಗಂ ಮಾಣ್ದನಿಸುಂ ತೆಱ ।
ಪಾಗಿರೆ ಬೆಸಗೊಂಡು ಜೀವತತ್ತ್ವಸ್ಥಿತಿಯಂ ॥ ೫

ಅಪಗತಸಂಶಯನಾಗಿ ಮತ್ತಮಿಂತೆಂದಂ :–

ವಿಗತಾಲೋಕಂ ಶಿವಪದ ।
ವಿಗಳಿತಮೆನಿಸಿದ ಜನಕ್ಕೆ ಕೃತಸನ್ಮಾರ್ಗಾ ॥
ನುಗತೋಪದೇಶದಿಂದೀ ।
ಜಗದೊಳ್ ನೀನಾದೆ ನಾಥ ಕಣ್ಣುಂ ಗತಿಯುಂ ॥ ೬

ದೇವ ನಿರವಧಿಗುಣಾತಿಶ ।
ಯಾವಧಿಲೋಚನನ ನಿನ್ನ ಕಾಣ್ಕೆಗೆ ಪೊಱಗಾ ।
ದಾವಸ್ತು ಭುವನದೊಳ್ ಪರಿ ।
ಭಾವಿಸೆ ವಂಧ್ಯಾಸ್ತನಂಧಯೋಪಮಮಲ್ತೇ ॥ ೭

ಕುಳಿತ ಸಮವಸರಣದ ಹಾಗೆ ಶೋಭಿಸಿತು. ೪. ಆ ಭೂಪತಿಯು ಹಸ್ತಕಮಲಗಳೆರಡನ್ನು ಮತ್ತೆ ಮತ್ತೆ ಮೊಗ್ಗುಗಳಾಗುವಂತೆ (ಜೋಡಿಸುವಂತೆ) ಮಾಡುವುದರ ಮೂಲಕ ಆ ಯತೀಂದ್ರನು ತಾನು "ಕುವಲಯ ಬಂಧು" (೧. ನೈದಿಲೆಗಳ ಬಂಧುವಾದ ಚಂದ್ರ. ೨. ಭೂಮಂಡಲದ ಬಂಧು) ಎಂಬುದನ್ನು ಪ್ರಕಟಿಸಿದನು. ೫. ಭಕ್ತಜನರ ಜಯ ಜಯಕಾರದ ಉಬ್ಬರವಿಳಿದ ಬಳಿಕ ಆ ಅರಸನು ಅವಕಾಶವನ್ನು ಕಂಡು ಮುನಿಗಳಿಗೆ "ಜೀವತತ್ತ್ವಸ್ಥಿತಿಯನ್ನು ತಿಳಿಸಿ ಹೇಳಿ" ಎಂದು ಬಿನ್ನವಿಸಿಕೊಂಡು– ಸಂದೇಹಗಳೆಲ್ಲ ಪರಿಹಾರವಾಗಲಾಗಿ ಮತ್ತೆ ಹೀಗೆ ನುಡಿದನು– ೬. "ಕಣ್ಣು ಕಳೆದುಕೊಂಡು ಶುಭವಾದ (ಮೋಕ್ಷ) ಪದವಿಗೆ ದೂರವಾಗಿದ್ದ ಜನಕ್ಕೆ ಸನ್ಮಾರ್ಗದ ಉಪದೇಶವನ್ನಿತ್ತು ನೀನೇ ಅವರಿಗೆ ಕಣ್ಣಾದೆ, ಗತಿಯೂ ಅದೆ. ೭. ದೇವ, ಅಪಾರವಾದ ಗುಣಗಳುಳ್ಳ ನಿಮ್ಮ ಜ್ಞಾನದೃಷ್ಟಿಗೆ ಗೋಚರವಾಗಲಾರದಂತಹ ವಸ್ತು ಈ ಲೋಕದಲ್ಲಿದೆಯೆಂದರೆ ಅದು

ಅದು ಕಾರಣದಿಂ,

ಮನದೊಳೆನಗೀಶ ಮತ್ಪ್ರಾ।
ಕ್ತನಜನ್ಮಾವಳಿಯನೆಯ್ದೆ ಕೇಳ್ವಟ್ಟೆ ಕರಂ ॥
ಜನಿಯಿಸಿದಪುದದನುಸಿರ್ವುದು ।
ವಿನೇಯಕುಮುದಪ್ರಮೋದಕರತುಹಿನಕರಾ ॥ ೮

ಎನೆ ಜನ್ಮಪರಂಪರೆಯುಂ ।
ಮುನಿಪತಿ ಪೇೞಲ್ಕೆ ತೊಡಗೆ ಮಧುರಧ್ವನಿಯಿಂ ।
ಮನದವಧಾನಪರಂಪರೆ ।
ಯನಶೇಷಂ ತಾಳ್ದಿದತ್ತು ಭವ್ಯವ್ಯೂಹಂ ॥ ೯

ಅದೆಂತೆಂದೊಡೆ ಪುಷ್ಕರಾರ್ಧದ ಮೂಡಣ ಮಂದರದಪರವಿದೇಹದ ಸೀತಾನದಿಯ ಬಡಗಣ ತಡಿಯೊಳ್ ಸುಗಂಧಿಯೆಂಬ ವಿಷಯಮುಂಟದಱೊಳ್ ಕರಪೀಡನಂ ಧೇನುಕುಚದೊಳ್, ಬಂಧನಂ ಕಚದೊಳ್, ವಿರೋಧಂ ಪಂಜರದೊಳ್, ಗಳಿತದಾನತೆ ಕುಂಜರದೊಳ್, ಅವಗ್ರಹಂ ನಿತ್ಯವ್ರತದೊಳ್ ಆಸವಾಸಕ್ತಿ ಮಧುವ್ರತದೊಳ್, ಕಲ್ಯಾಣಹೀನತೆಯನಗಾರಕೇವಳಿಯೊಳ್, ಗಳಗ್ರಾಹಿತ್ವಮೇಕಾವಳಿ

ಬಂಜೆಗೆ ಮಗನಿರುವನೆಂಬಂತೆಯೆ ಸರಿ. ಆದುದರಿಂದ– ೮. ಒಡೆಯನೆ, ನನ್ನ ಪೂರ್ವ ಭವಾವಳಿಯನ್ನು ಪೂರ್ಣವಾಗಿ ಕೇಳಿ ತಿಳಿಯಬೇಕೆಂಬ ಇಚ್ಛೆ ನನ್ನ ಮನದಲ್ಲಿ ಬಲವತ್ತರವಾಗಿದೆ. ಭಕ್ತಜನರೆಂಬ ಬೆಳ್ದಾವರೆಗಳಿಗೆ ಚಂದ್ರಸ್ವರೂಪನಾದ ನೀನು, ದಯವಿಟ್ಟು ನನ್ನ ಭವಾವಳಿಯನ್ನು ತಿಳಿಸಬೇಕು" ೯. ಹೀಗೆನ್ನಲಾಗಿ, ಅರಸನ ಜನ್ಮಾವಳಿಗಳನ್ನು ಮುನೀಂದ್ರನು ಮಧುರಧ್ವನಿಯಿಂದ ಹೇಳತೊಡಗಿದನು: ಭಕ್ತಸಮೂಹವು ಸಮಗ್ರವಾಗಿ ಚಿತ್ತಗೊಟ್ಟು ಕೇಳತೊಡಗಿತು. (ಮುನೀಂದ್ರನು ಹೀಗೆ ಹೇಳಿದನು) "ಪುಷ್ಕರಾರ್ಧದ ಪೂರ್ವ ಮಂದರದ ಪಶ್ಚಿಮ ವಿದೇಹದ ಸೀತಾನದಿಯ ಉತ್ತರ ತೀರದಲ್ಲಿ ಸುಗಂಧಿಯೆಂಬ ರಾಜ್ಯವುಂಟು. ಅದರಲ್ಲಿ "ಕರಪೀಡನ" (೧. ಕೈಗಳಿಂದ ಹಿಂಡುವುದು. ೨. ತೆರಿಗೆಗಳಿಂದ ಜನರನ್ನು ಬಾಧಿಸುವುದು) ಗೋವುಗಳ ಕೆಚ್ಚಲಲ್ಲಿ, "ಬಂಧನ" (೧. ಹೆಣೆದು ಕಟ್ಟುವುದು. ೨. ಸೆರೆಯಿಡುವುದು) ತಲೆಗೂದಲಲ್ಲಿ, "ವಿರೋಧ" (೧. ಪಕ್ಷಿಗಳಿಗೆ ಆತಂಕ. ೨. ವೈರ) ಪಂಜರದಲ್ಲಿ, "ಗಳಿತದಾನತೆ" (೧. ಸುರಿಯುತ್ತಿರುವ ಮದೋದಕ. ೨. ದಾನ ಕೊಡದೆ ಇರುವಿಕೆ) ಆನೆಯಲ್ಲಿ, "ಅವಗ್ರಹ" (೧. ನಿಗ್ರಹ, ೨. ಬೈಗುಳು) ನಿತ್ಯ ಆಚರಿಸುವ ವ್ರತಗಳಲ್ಲಿ, "ಆಸವಾಸಕ್ತಿ" (೧. ಮಕರಂದದಲ್ಲಿ ಆಸಕ್ತಿ. ೨. ಮದ್ಯಪಾನದ ಗೀಳು) ದುಂಬಿಗಳಲ್ಲಿ, "ಕಲ್ಯಾಣಹೀನತೆ" (೧. ಚಿನ್ನ ಮೊದಲಾದುವು ಇಲ್ಲದಿರುವಿಕೆ, ಅಕಿಂಚನತೆ. ೨. ಉತ್ಸವವಿಲ್ಲದಿರುವುದು) ಕೇವಲಜ್ಞಾನಿಗಳಲ್ಲಿ, "ಗಳಗ್ರಾಹಿತ್ವ" (೧. ಕೊರಳನ್ನು ಬಳಸಿಕೊಂಡಿರುವುದು. ೨. ಕತ್ತು ಹಿಸುಕುವುದು) ಒಂಟೆಳೆಯ ಮುತ್ತಿನ ಹಾರದಲ್ಲಿ, "ಕಂಟಕವಕ್ರಿಮ" (೧. ಬಾಗಿದ ಮುಳ್ಳುಗಳಿರುವುದು. ೨. ಇತರರಿಗೆ ಹಿಂಸೆ ಕೊಡುವ ಮೋಸಗಾರಿಕೆ)

ಯೊಳ್, ಕಂಟಕವಕ್ರಿಮಂ ಬದರದೊಳ್, ಅಧಃಕೃತಸನಾಭಿತೆಯುದರದೊಳ್, ಅಧರತೆಯೋಷ್ಠದೊಳ್ ದಂಡಭ್ರಮಂ ಕುಲಾಲಚಕ್ರದೊಳ್, ಜಡಸ್ಥಿತಿ ನಕ್ರದೊಳ್, ಪ್ರಹರಣಶ್ರಮಂ ಖುರಳಿಯೊಳ್, ಮುಖರತೆ ಪುರಳಿಯೊಳ್, ಚಾಪಲತಾಯೋಗಂ ಜೀವೆಯೊಳ್, ಪ್ರತಾರಣಂ ನಾವೆಯೊಳ್, ರುಕ್ಸಮಾಕುಲತೆ ಮಣಿಯೊಳ್, ಮಹಾಮಾತ್ರವರ್ತನಂ ಸೃಣಿಯೊಳಲ್ಲದಿಲ್ಲಮೆಲ್ಲಿಯುಂ,

ಸರ್ವರ್ತುಕಮೆ ಬನಂ ನೆಲ ।
ನುರ್ವರೆಯೆ ಕೊಳಂ ಸಮಂತು ಪೂಗೊಳನೆ ಬೞಿ ॥
ಕ್ಕುರ್ವೀಧ್ರಂ ರೋಹಣಮೆ ಗ ।
ಡಾರ್ವರ್ಣಿಸಲೞವರಣ್ಣ ತಜ್ಜನಪದಮಂ ॥ ೧೦

ಪರಿಣತಗಂಧಶಾಲಿವನಗಂಧದಿನುಲ್ಲಸಿತಾಂಬುಜಾಕರೋ ।
ತ್ಕರನವಗಂಧದಿಂ ಪ್ರಚುರಚಂದನನಂದನಗಂಧದಿಂ ದಿಶಾ ॥

ಎಲಚಿಯು (ಬೋರೆಯು) ಮರದಲ್ಲಿ, "ಅಧಃಕೃತಸನಾಭಿತೆ" (೧. ಹೊಕ್ಕಳು ಒಳಸೇರಿ ಕುಳಿಯಾಗಿರುವಿಕೆ. ೨. ಬಂಧುಗಳನ್ನು ತಿರಸ್ಕರಿಸುವಿಕೆ) ಹೊಟ್ಟೆಯಲ್ಲಿ, "ಅಧರತೆ" (೧. ಅಧರವೆಂಬ ಹೆಸರಿರುವುದು. ೨. ಹೀನವಾಗಿರುವಿಕೆ) ತುಟಿಯಲ್ಲಿ, "ದಂಡಭ್ರಮ" (೧. ಕೋಲಿನಿಂದ ತಿರುಗಿಸುವುದು. ೨. ಶಿಕ್ಷೆ ವಿಧಿಸುವುದರಲ್ಲಿ ಭ್ರಾಂತಿಮೂಲಕವಾಗಿ ತಪ್ಪು ಮಾಡುವುದು) ಕುಂಬಾರನ ತಿಗುರಿಯಲ್ಲಿ, "ಜಡಸ್ಥಿತಿ" (೧. ನೀರಲ್ಲಿ ಇರುವುದು. ೨. ಮೂರ್ಖತನ) ಮೊಸಳೆಯಲ್ಲಿ, "ಪ್ರಹರಣಶ್ರಮ" (೧. ಹೊಡೆದು ನೋಡುವ ಅಭ್ಯಾಸ. ೨.ಹೊಡೆದು ಆಯಾಸ ಪಡಿಸುವುದು) ಶಸ್ತ್ರಾಭ್ಯಾಸದಲ್ಲಿ, "ಮುಖರತೆ"(೧. ಧ್ವನಿಮಾಡುವಿಕೆ. ೨. ಬಯ್ದಾಡುವುದು) ಗಿಳಿಗಳಲ್ಲಿ, "ಚಾಪಲತಾಯೋಗ" (೧. ಬಿಲ್ಲಿಗೆ ಹೊಂದಿಕೊಂಡಿರುವಿಕೆ. ೨. ಚಂಚಲತೆ) ಹೆದೆಯಲ್ಲಿ, "ಪ್ರತಾರಣ" (೧. ದಾಟಿಸುವ ಕ್ರಿಯೆ. ೨. ಮೋಸಗಾರಿಕೆ) ನಾವೆಯಲ್ಲಿ, "ರುಕ್ಸಮಾಕುಲತೆ" (೧. ಉಜ್ವಲವಾದ ಪ್ರಭೆಯಿಂದ ಕೂಡಿರುವಿಕೆ. ೨. ರೋಗಪೀಡೆಗೆ ಒಳಗಾಗಿರುವಿಕೆ) ರತ್ನದಲ್ಲಿ "ಮಹಾಮಾತ್ರವರ್ತನ" (೧. ಮಾವುತನ ಕೆಲಸ. ೨. ಮಿತಿಮೀರಿದ ನಡೆವಳಿ) ಅಂಕುಶದಲ್ಲಿ– ಹೀಗಿಲ್ಲದೆ ಬೇರೆ ಯಾವ ಅರ್ಥದಲ್ಲಿಯೂ ಈ ಶಬ್ದಗಳ ಪ್ರಯೋಗವಿಲ್ಲ [ಇಲ್ಲಿ ಕಂಸಗಳಲ್ಲಿ ಕೊಟ್ಟ ಮೊದಲನೆಯ ಅರ್ಥದಲ್ಲಿ ಮಾತ್ರ ಆ ಶಬ್ದಗಳ ಬಳಕೆಯಿತ್ತೆ ಹೊರತಾಗಿ, ಎರಡನೆಯ ಅರ್ಥದಲ್ಲಿ ಇರಲಿಲ್ಲ.] ೧೦. ಅಲ್ಲಿಯ ಉದ್ಯಾನಗಳೆಲ್ಲ ಸಾರ್ವರ್ತುಕವೆ (ಎಲ್ಲ ಋತುಗಳಲ್ಲಿಯೂ ಹೂಹಣ್ಣುಗಳಿಂದ ಸಮೃದ್ಧವಾಗಿರುವುವು), ಭೂಮಿಯೆಲ್ಲ ಫಲವತ್ತಾದ ನೆಲವೆ, ಕೊಳಗಳೆಲ್ಲ ಹೂಗೊಳಗಳೆ, ಬೆಟ್ಟ ರೋಹಣ ಗಿರಿಯೆ– ಎಂದಮೇಲೆ ಆ ರಾಜ್ಯವನ್ನು ಬಣ್ಣಿಸಬಲ್ಲವರಾರು? ೧೧. ಪರಿಪಕ್ವವಾದ ಸುಗಂಧಿ ಬತ್ತದ ಗದ್ದೆಗಳಿಂದ ಹೊಮ್ಮುವ ಸುವಾಸನೆಯಿಂದಲೂ; ಅರಳಿದ ತಾವರೆಗೊಳಗಳ ಹೊಸ ಕಂಪಿನಿಂದಲೂ, ಶ್ರೇಷ್ಠವಾದ ಶ್ರೀಗಂಧೋದ್ಯಾನಗಳ

ಪರಿಧಿಯನೆಯ್ದೆ ಬಾಸಣಿಸುತಿರ್ಪುದು ಸಾರ್ಥತೆಯಂ ನಿಜಾಖ್ಯೆಯೊಳ್ ॥
ನೆರಪಿ ಸುಗಂಧಿಮಂಡಲಮಿಳಾರಮಣೀಯಕುಂಡಲಂ ॥ ೧೧

ಕಳ್ಪದ್ರುಮಾನ್ವಿತಂಗಳ್ ।
ನೋಟಕ್ಕೊಡೆ ಕುರುಧರೆಗಳೆಂಬ ಪುರುಡೊದವಿದವೋಲ್ ॥
ಮಾಟ್ಪುದು ಜನಕ್ಕೆ ಮುದಮಂ ।
ಬೇಟ್ಪುದನೋರಂತೆ ಬೆಳೆದುದವನೀವಳಯಂ ॥ ೧೨

ಆ ಮಹಿಮಹಿಳೆಗೆ ಲೀಲಾ ।
ತಾಮರಸಮಿದೆನಿಸಿ ರುಚಿರಮಣಿತೋರಣಮಾ ॥
ಲಾಮಯಗೋಪುರಲಕ್ಷ್ಮೀ ।
ಧಾಮಂ ಸುರಪುರಸಮಾಹ್ವಯಂ ಪುರಮೆಸೆಗುಂ ॥ ೧೩

ತತ್ಪುರೀಪರಿಸರದೊಳ್–

ಆವಾಸಂ ಮದನಂಗೆ ಜನ್ಮಭವನಂ ಚೈತ್ರಕ್ಕೆ ಲಾಸ್ಯೈಕಲೀ ।
ಲಾವೇಶ್ಮಂ ರತಿಗಾಸವಾವಸಥಮುನ್ಮತ್ತಾಳಿಗೆಂಬಂದದಿಂ ॥
ಮಾವಿಂ ಮಾಧವಿಯಿಂ ತಮಾಲಲತೆಯಿಂ ಪುನ್ನಾಗದಿಂ ನಂದನ ।
ಶ್ರೀ ವಿಸ್ತಾರಮನಾಂತುದುಚ್ಛ್ರತದಳಚ್ಛಾಯಾತ್ತಪೀತಾತಪಂ ॥ ೧೪

ಸುಗಂಧದಿಂದಲೂ ದಿಗಂತಗಳವರೆಗೂ ಭೂಮಿಯನ್ನು ಆವರಿಸಿ, ಭೂದೇವಿಯ ಸುಂದರ ಕರ್ಣಕುಂಡಲದಂತಿರುವ ಆ ಸುಗಂಧಿ ವಿಷಯವು ತನ್ನ ಹೆಸರನ್ನು ಅನ್ವರ್ಥಕಗೊಳಿಸುತ್ತಿರುವುದು. ೧೨. ಕುರುಭೂಮಿಗಳು (ಉತ್ತರಕುರು ಮತ್ತು ದೇವಕುರು ಎಂಬೆರಡು ರಾಜ್ಯಗಳು) ಕಲ್ಪವೃಕ್ಷಗಳಿಂದ ಕೂಡಿದುವಾಗಿವೆ (ಜನಕ್ಕೆ ಬೇಡಿದುದನ್ನೆಲ್ಲ ಕೂಡಲೆ ಒದಗಿಸುತ್ತವೆ). ಇದಕ್ಕೆ ಹುರುಡುಗೊಂಡಂತೆ ಅಲ್ಲಿಯ ಭೂಮಿ ಬೇಡಿದ ಬೆಳೆಯನ್ನು ಬೆಳೆಸಿ ಕೊಟ್ಟು ಜನಕ್ಕೆ ಸಂತೋಷವುಂಟು ಮಾಡುವುದು. ೧೩. ಆ ರಾಜ್ಯವೆಂಬ ಮಹಿಳೆಗೆ ಅಲಂಕಾರದ ಕಮಲವೆನಿಸಿದ ಸುರಪುರವೆಂಬ ಪಟ್ಟಣವು ಉಜ್ವಲವಾದ ರತ್ನತೋರಣಗಳಿಂದಲಂಕೃತವಾದ ಗೋಪುರದ ಶೋಭೆಯಿಂದ ಕಂಗೊಳಿಸುವುದು. ಆ ಪಟ್ಟಣದ ಸಮೀಪದಲ್ಲಿ– ೧೪. "ಇದು ಮನ್ಮಥನಿಗೆ ಆಶ್ರಯಸ್ಥಾನ, ವಸಂತಕ್ಕೆ ಜನ್ಮಸ್ಥಾನ, ರತಿಯ ಲಾಸ್ಯಕ್ಕೆ ಏಕೈಕವಾದ ನರ್ತನಗೃಹ, ಸೊಕ್ಕಿದ ದುಂಬಿಗಳಿಗೆ ನಿತ್ಯವಾಸಸ್ಥಾನ" ಎಂಬಂತೆ ಮಾವಿನಿಂದಲೂ, ಮಾಧವೀ ಬಳ್ಳಿಗಳಿಂದಲೂ, ತಮಾಲ ವೃಕ್ಷಗಳಿಂದಲೂ, ನಾಗಕೇಸರ ವೃಕ್ಷಗಳಿಂದಲೂ ಸಮೃದ್ಧವಾಗಿ, ದಟ್ಟವಾಗಿ ಬೆಳೆದ ಎಲೆಗಳಿಂದ ಬಿಸಿಲನ್ನೆಲ್ಲ ಹೀರಿಕೊಂಡು ನೆಳಲನ್ನು ಹರಡುವ ಉದ್ಯಾನವು ಅಧಿಕವಾದ ಶೋಭೆ

ಅಲ್ಲಿ,

ತನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ಟಿಯೆ ಮೆಲ್ದು ಸೋರ್ವ ತೆಂ।
ಗಿನ ತಿಳಿನೀರನೀಂಟಿ ಲತೆಯಿಂದುಗುತಂದಲರೊಳ್ ಮಲಂಗಿ ಮೆ ॥
ಲ್ಲನೆ ತೊನೆಯುತ್ತುಮಿರ್ಪೆಲೆಯ ತಣ್ಣೆಲರಿಂ ಬೆಮರಾಜಿ ಪೌರನಂ।
ದನದೊಳಗಿಂತಯತ್ನಸುಖಮಂ ಪಥಿಕರ್ ಪಡೆವರ್ ನಿರಂತರಂ ॥ ೧೫

ಅದಲ್ಲದೆಯುಂ,

ಬೇಱಿಕೊಂಡಮರಾವತಿವೋಲ್ ।
ತೋಱುವುದತುಳಾಪ್ಸರಃಪ್ರತಾನದಿನೊಲವಂ ॥
ಬೀಱುವ ನಂದನದಿಂ ಬಗೆ ।
ಗೇಱುವ ವಿಬುಧಾಲಯಂಗಳಿಂದಾ ನಗರಂ ॥ ೧೬

ಹರಿನೀಲಾಟ್ಟಾಳಜಾಲಾಳಕಿ ವಿಶದಗವಾಕ್ಷಾಕ್ಷಿ ಚಂಚತ್ಪತಾಕಾ ।
ಕರೆ ವೃತ್ತೋತ್ತುಂಗಚೈತ್ಯಾಯತನಕುಚೆ ಕೃತಾಗಾರಪಾರಾವತೇಂದೀ ॥
ವರಕರ್ಣೋತ್ತಂಸೆಯುತ್ತೋರಣಪರಿಖಚಿತಾದರ್ಶಬಿಂಬಾಸ್ಯೆ ವೇಲ್ಲ ।
ತ್ಪರಿಖಾಂಬುಕ್ಷೌಮೆ ಪಾಂಥಪ್ರತತಿಗೊದವಿಕುಂ ತತ್ಪುರೀಲಕ್ಷ್ಮಿ ಚೆಲ್ವಂ ॥ ೧೭

ಯನ್ನು ಪಡೆದಿತ್ತು. ಅಲ್ಲಿ–೧೫. ಪಕ್ವವಾಗಿ ತೊಟ್ಟು ಕಳಚಿ ಉದಿರುವ ಹಣ್ಣುಗಳನ್ನು ಸಂತೋಷದಿಂದ ತಿಂದು, ಸೋರುವ ತೆಂಗಿನ ತಿಳಿನೀರನ್ನು ಕುಡಿದು, ಬಳ್ಳಿಗಳಿಂದ ಉದುರಿದ ಹೂಗಳ ಹಾಸುಗೆಯಲ್ಲಿ ಮಲಗಿ, ಮೆಲ್ಲಗೆ ಅಲುಗುತ್ತಿರುವ ಎಲೆಗಳ ತಂಗಾಳಿಯಿಂದ ಬೆವರಾರಿಸಿಕೊಂಡು, ಹಾದಿಕಾರರು ಎಷ್ಟೆಷ್ಟೂ ಕಷ್ಟಪಡದೆ ನಿರಂತರ ವಾಗಿ ಆ ಪುರೋದ್ಯಾನದಲ್ಲಿ ಸುಖಪಡುವರು. ಅದಲ್ಲದೆ– ೧೬. ಅಸದೃಶವಾದ "ಅಪ್ಸರಃ ಪ್ರತಾನ" (೧. ಸರೋವರಗಳ ಸಮೂಹ, ೨. ಅಪ್ಸರೆಯರ ಸಮುದಾಯ) ದಿಂದಲೂ ಸಂತೋಷವನ್ನು ಬೀರುವ "ನಂದನ" (೧. ತೋಟ, ೨. ಅಮರಾವತಿ ಯಲ್ಲಿರುವ ದೇವೇಂದ್ರನ ತೋಟ) ಗಳಿಂದಲೂ, ಮನೋಹರವಾದ "ವಿಬುಧಾ ಲಯ" (೧. ಪಂಡಿತರ ನಿವಾಸ, ೨. ದೇವತೆಗಳ ವಾಸಸ್ಥಾನ) ಗಳಿಂದಲೂ ಆ ಪಟ್ಟಣವು ಇನ್ನೊಂದು ಅಮರಾವತಿಯೆಂಬಂತೆ ತೋರುವುದು. ೧೭. ಅಲ್ಲಿ ರುವ ಇಂದ್ರನೀಲ ನಿರ್ಮಿತವಾದ ಉಪ್ಪರಿಗೆಗಳ ಸಾಲೆಂಬ ಕೇಶಪಾಶ ದಿಂದ, ಸುಂದರವಾದ ಕಿಟಿಕಿಗಳೆಂಬ ಕಣ್ಣುಗಳಿಂದ, ಚಂಚಲವಾದ ಧ್ವಜಗಳೆಂಬ ಕೈಗಳಿಂದ, ಮಂಡಲಾಕಾರವಾಗಿ ಉನ್ನತವಾಗಿರುವ ಚೈತ್ಯಾಲಯಗಳೆಂಬ ಸ್ತನಗಳಿಂದ, ಮನೆಮನೆಗಳಲ್ಲಿ ಸಾಕಿರುವ ಪಾರಿವಾಳಗಳೆಂಬ ಕರ್ಣಾಲಂಕಾರದ ಬೆಳ್ದಾವರೆಗಳಿಂದ, ಎತ್ತರವಾಗಿ ಕಟ್ಟಿದ ತೋರಣದ ಕನ್ನಡಿಗಳೆಂಬ ಮುಖ ಮಂಡಲದಿಂದ, ತರಂಗಿತವಾದ ಅಗಳ್ತೆಯ ನೀರೆಂಬ ರೇಷ್ಮೆಸೀರೆಯಿಂದ ಶೋಭಿ ಸುವ ಆ ಪಟ್ಟಣವೆಂಬ ಲಕ್ಷ್ಮಿ ಹಾದಿಕಾರರ ಕಣ್ಣಿಗೆ ತನ್ನ ಚೆಲುವನ್ನು ಬೀರುವಳು

ಬಗೆಯೆ ಬಹುಭೂಮಿಕಂ ಮಾ ।
ನಗುಣೋನ್ನತಿಸಂಯುತಂ ಮಹಾಭೋಗಂ ತ ॥
ನ್ನಗರಜನಾವಳಿಯುಂ ಹ ।
ರ್ಮ್ಯಗೃಹಾಳಿಯುಮೆಂದೊಡೊಳ್ಪನೇವಣ್ಣಿಪುದೋ ॥ ೧೮

ಆ ಪುರಪತಿ ಸಿರಿಯಿಂದಳ ।
ಕಾಪುರಪತಿಗಸಮವಿಭವವಿಳಸನಲೀಲಾ ॥
ವ್ಯಾಪಾರದಿಂದೆ ಭೋಗವ ।
ತೀಪುರಪತಿಗಧಿಕನೆನಿಸುವಂ ಶ್ರೀಷೇಣಂ ॥ ೧೯

ನೇರ್ವಟ್ಟಾ ನರನಾಥನ ।
ಕೂರ್ವಾಳೊಳಳಂಕೆಗೊಂಡ ಧಾರಾಜಲದೊಳ್ ॥
ಬೇರ್ವರಿದಿರೆ ಮನದೆಱಕಂ ।
ನೀರ್ವಾನಸೆಯಂತೆ ವಿಜಯವಧು ನೆಲಸಿರ್ಪಳ್ ॥ ೨೦

ತಳಮನಹೀಂದ್ರರುಂದ್ರಫಣಮೆಂದು ಧನುರ್ಗುಣವೇಗತಾಢನಾ ।
ಕಳಿತವಿಕೀರ್ಣಕೋಷ್ಠಮನೆ ಕೂರ್ಮವಿನಿಷ್ಠುರಪೃಷ್ಠಭಾಗಮೆಂ ॥
ದಳಘುತರಾಂಸಮಂ ದಿಗಿಭಕುಂಭಮಿದೆಂದು ಧರಿತ್ರಿ ಬಂದು ನಿ ।
ಶ್ಚಳತೆಯಿನಿರ್ಪಳಲ್ತೆ ಭುಜಮಂಡಳದೊಳ್ ವಸುಧಾಧಿನಾಥನಾ ॥ ೨೧

೧೮. ಅಲ್ಲಿಯ ಜನಗಳೂ, ಭವ್ಯಭವನಗಳೂ "ಬಹುಭೂಮಿಕ" (೧. ಅನೇಕ ಅಲಂಕಾರ ಭೂಷಿತರು. ೨. ಹಲವಾರು ಅಂತಸ್ತುಗಳುಳ್ಳವು), "ಮಾನಗುಣೋನ್ನತಿ ಸಂಯುತ" (೧. ಗೌರವಾರ್ಹವಾದ ಗುಣಗಳಿಂದ ಕೂಡಿದವರಾಗಿ ಶ್ರೇಷ್ಠರೆನಿಸಿದವರ. ೨. ಪ್ರಮಾಣಬದ್ಧವಾದ ರಚನೆಯಿಂದ ಉತ್ತಮವೆನಿಸಿದುವು), "ಮಹಾಭೋಗ" (೧. ಅತಿಶಯವಾದ ಸುಖೋಪಭೋಗವುಳ್ಳವರು. ೨. ಅತ್ಯಧಿಕವಾದ ವಿಸ್ತೀರ್ಣವುಳ್ಳುವು) ಎಂದ ಮೇಲೆ ಆ ಪುರದ ಶ್ರೇಷ್ಠತೆಯನ್ನು ಎಷ್ಟೆಂದು ಬಣ್ಣಿಸಿದರೂ ಸಾಲದು. ೧೯. ಆ ಪಟ್ಟಣದ ಪ್ರಭುವಾದ ಶ್ರೀಷೇಣ ನೆಂಬವನು ಐಶ್ವರ್ಯದಲ್ಲಿ ಕುಬೇರನಿಗೂ, ವೈಭವವಿಲಾಸದಲ್ಲಿ ಪಾತಾಳದ ಅಧಿಪತಿ (ಆದಿಶೇಷ)ಗೂ ಅಧಿಕನೆನಿಸುವನು. ೨೦. ಆ ಭೂಪಾಲನನ್ನು ಮೆಚ್ಚಿಕೊಂಡಿ ರುವ ಜಯಲಕ್ಷ್ಮಿಯು ಬೇರುಬಿಟ್ಟ ಪ್ರೇಮದಿಂದ ಆತನ ಹರಿತವಾದ ಖಡ್ಗದ ಧಾರೆಯೆಂಬ ನೀರಿನಲ್ಲಿ ಜಲಕನ್ಯೆಯಂತೆ ನೆಲಸಿರುವಳು. ೨೧. ಈತನ ಭುಜದ ತಳವೆ (ಹೆಗಲೆ) ಆದಿಶೇಷನ ವಿಸ್ತಾರವಾದ ಹೆಡೆಯೆಂದೂ, ಬಿಲ್ಲಿನ ಹೆದೆ ವೇಗವಾಗಿ ಬಡಿಬಡಿದು ಜಡ್ಡುಗಟ್ಟಿದ ಮುಂಗೈಯೆ ಕೂರ್ಮನ ಬಿರುಸಾದ ಬೆನ್ನೆಂದೂ, ವಿಶಾಲವಾದ ಭುಜಾಗ್ರವೆ ದಿಗ್ಗಜದ ಕುಂಭಸ್ಥಳವೆಂದೂ ಭಾವಿಸಿ ಭೂ ದೇವಿಯು ಬಂದು ಆ ಭೂಪತಿಯ ಬಾಹುಮಂಡಲದಲ್ಲಿ ನಿಶ್ಚಿಂತಳಾಗಿರುವಳು.

ಚತುರಂಗಸೈನಿಕಂ ಭೂ ।
ಪತಿಪರಿಕರಮೆನಿಪುದನಿತು ಸಪ್ತಾಂಗಮನಾ ॥
ಕ್ಷಿತಿಪಾಲಕನೇಕಾಂಗದಿ ।
ನತುಳಯಶಂ ಗೆಲ್ದು ತನಗೆ ಮಾೞ್ಪುದಜೆಂದಂ ॥ ೨೨

ಪರಿಕಿಪೊಡತಿವೃದ್ಧಂ ನಿ ।
ಷ್ಠುರವೃತ್ತಿ ಸದಾನುವರ್ತಿ ನೀತಿಯುತಂ ಭಾ ।
ಸುರತೇಜಂ ಕಂಚುಕಿಯಂ ।
ತಿರೆ ನಿಶ್ಚಲೆಮಾಡಿತಾ ನೃಪಶ್ರೀವಧುವಂ ॥ ೨೩

ಪ್ರಿಯದಿಂದೊಂದೆಡೆಯಿರವಂ ॥
ಬಯಸಿದ ಶೌರ್ಯಾದಿಸಕಲಪಾರ್ಥಿವಗುಣಸಂ ।
ಚಯದಭ್ಯರ್ಥನದಿಂದಾ ।
ಶ್ರಯರೂಪನನಾ ಮಹೀಶನಂ ಬಿದಿ ಪಡೆದಂ ॥ ೨೪

ಎನಿಪಂ. ಅಂತುಮಲ್ಲದೆಯುಂ,

ಸತತಂ ನಿಜದೇಹದಿನ ।
ವ್ಯತಿರಿಕ್ತೆಯೆನಿಪ್ಪ ಹೃದಯವಲ್ಲಭೆಯೊಳ್ ತತ್ ॥
ಕ್ಷಿತಿಪಂ ಶ್ರೀಕಾಂತೆಯೊಳೊಂ ।
ದಿ ತೋಱುವಂ ಕಳೆಯೊಳೊಂದಿದಿಂದುವ ತೆಱದಿಂ ॥ ೨೫

೨೨. ರಾಜ್ಯದ ಸಪ್ತಾಂಗಗಳನ್ನೂ ಅಸಮಾನ ಖ್ಯಾತಿಯ ಆ ರಾಜನು ಅಸಹಾಯಶೂರನಾಗಿ ತಾನೊಬ್ಬನೆ ಗೆದ್ದು, ಅಧೀನಪಡಿಸಿಕೊಳ್ಳುವನು; ಅದರಿಂದ ಚತುರಂಗ ಬಲವೆಂಬುದು ಅವನಿಗೆ ಕೇವಲ ಪರಿವಾರಜನವೆನಿಸುವುದು. ೨೩. ಆ ರಾಜನ ಉಜ್ವಲವಾದ ತೇಜಸ್ಸು ಕಂಚುಕಿಯಂತೆ "ಅತಿವೃದ್ಧವೂ" (೧. ಅಧಿಕವಾಗಿ ಹಬ್ಬಿದುದು. ೨. ತುಂಬ ವಯಸ್ಸಾದವನು) "ನಿಷ್ಠುರವೃತ್ತಿಯೂ" (೧. ದುರಾಚಾರಿಗಳಿಗೂ, ಶತ್ರುಗಳಿಗೂ ಕಠೋರವಾಗಿರುವುದು. ೨. ಅಂತಃಪುರದ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವನು), "ಸದಾನುವರ್ತಿ"ಯೂ (೧. ಸತ್ಪರಂಪರೆಯನ್ನು ಅನುಸರಿಸುವುದು. ೨. ಯಾವಾಗಲೂ ಬೆನ್ನು ಹಿಂದೆಯೆ ಇದ್ದು ಕಾಯುತ್ತಿರುವವನು) "ನೀತಿಯುತ"ವೂ (೧. ರಾಜನೀತಿಗೆ ಹೊಂದಿಕೊಂಡಿರುವುದು. ೨. ಸದಾಚಾರವುಳ್ಳವನು) ಆಗಿ ಆ ರಾಜನ ಐಶ್ವರ್ಯವೆಂಬ ವಧುವಿಗೆ ಚಂಚಲತೆಯನ್ನು ತಪ್ಪಿಸಿ ಸ್ಥಿರವಾಗಿರುವಂತೆ ಮಾಡಿತು. ೨೪. ಪರಾಕ್ರಮವೆ ಮೊದಲಾದ ಸಮಸ್ತಕ್ಷಾತ್ರ ಗುಣಗಳು ಬ್ರಹ್ಮನೆಡೆಗೆ ಬಂದು "ಪ್ರೇಮದಿಂದ ಒತ್ತಟ್ಟಿಗೆ ಇರುವ ಅವಕಾಶವನ್ನು ನಮಗೆ ಅನುಗ್ರಹಿಸು" ಎಂದು ಬೇಡಿಕೊಳ್ಳಲಾಗಿ, ಬ್ರಹ್ಮನು ಅವುಗಳಿಗೆಲ್ಲ ಆಶ್ರಯನಾದ ಆ ಭೂಪತಿಯನ್ನು ಸೃಷ್ಟಿಮಾಡಿದನೋ ಏನೊ ಎಂದೆನಿಸುವನು. ಅಷ್ಟೇ ಅಲ್ಲದೆ– ೨೫. ಸದಾಕಾಲ ತನ್ನನ್ನು ಅಗಲದೆ ಇರುವ ಮನಃಪ್ರಿಯೆಯಾದ ಶ್ರೀಕಾಂತೆಯೆಂಬ ಅರಸಿಯೊಡನೆ ಕೂಡಿದ ಆ ರಾಜನು ತುಂಬುಕಳೆ

ಆ ವಧು ಯೌವನೋದಯರಸಾಯನಸಿದ್ಧಿ ಮನೋವಿಮೋಹಸಂ ।
ಭಾವನವಿದ್ಯೆ ಕಂಜಭವಕೌತುಕಸೃಷ್ಟಿ ಮನೋಜಸಿದ್ಧಸಂ ॥
ಜೀವನೆ ನೇತ್ರಪಾತ್ರನಟನಸ್ಥಳಿ ವಿಶ್ವಜಗದ್ವಿಲಾಸಜ ।
ನ್ಮಾವನಿ ಯೋಷಿದಾತ್ಮಗುಣನಾಮಮೆನಿಪ್ಪಳದೇಂ ಸುರೂಪೆಯೋ ॥ ೨೬

ಶರದಿಂದುಪ್ರಭೆಯೊಳ್ ಪ್ರಕಾಶನಮುಮಾಸೇವ್ಯತ್ವಮುಂ ಚೂತಮಂ ।
ಜರಿಯೊಳ್ ಸೌರಭಮುಂ ವಿಕಾಸಮುಮುದನ್ವದ್ವೀಚಿಯೊಳ್ ಸ್ವಾಚ್ಛಮುಂ ॥
ಪಿರಿದುಂ ಗೌರವಮುಂ ಬೆಡಂಗಿಡಿದು ತೋರ್ಪೊಂದಂದದಿಂ ನಾಡೆ ಬಂ ।
ಧುರಮಾಯ್ತಾ ನೃಪಕಾಂತೆಯೊಳ್ ಬಹುಕಲಾನೈಪುಣ್ಯಮುಂ ಪುಣ್ಯಮುಂ ॥ ೨೭

ಧಾತ್ರೀಶನ ಸಾಂದ್ರಮನ ।
ಸ್ಸೂತ್ರದೊಳಾಸತಿಯ ಗುಣಗಣೋದ್ಗಮತತಿಯಂ ॥
ಚಿತ್ರವಿಧದಿಂದ ತೊಡರ್ಚಿದ ।
ಧಾತ್ರಂ ಮುಂ ಮಾಲೆಗಾಱರೊಡನಾಡಿದನೋ ॥ ೨೮

ಎಂಬಿನಂ ನಿಜಮನಃಪ್ರಸಾದಭೂಮಿಯಾದ ಮಹಾದೇವಿಯುಂ ತಾನುಮೋರೊರ್ಮೆ ವಿಕಚಕೋಕನದಮಕರಂದಶೀಕರನಿಕರಾಕುಲಕೇಳೀಕಾಸಾರಂಗಳೊಳ್ ಕಳಹಂಸಮಿಥುನದಂತೆ ಜಲಕ್ರೀಡೆಯನೊಡರ್ಚಿಯುಂ, ಒರ್ಮೆ ಸುರಭಿಪರಿಮಳೋದ್ಗಾರಿಸ್ಮೇರಕುಸುಮಮಂಜರೀನಿಕರಭರವಿನತಲತಿಕಾಗೃಹಂಗಳೊಳ್ ಭ್ರಮರಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ, ಒರ್ಮೆ

ಯಿಂದೊಡಗೂಡಿದ ಚಂದ್ರನಂತೆ ಕಂಗೊಳಿಸುವನು. ೨೬. ಆ ರಮಣಿಯು ತಾರುಣ್ಯೋದಯವನ್ನುಂಟುಮಾಡುವ ರಸಾಯನ ಸಿದ್ಧಿ ; ಮನಸ್ಸಿಗೆ ಮೋಹವನ್ನು ಉಂಟು ಮಾಡುವ ವಿದ್ಯೆ ; ಮನ್ಮಥನ ಆಶ್ಚರ್ಯಕರವಾದ ಸೃಷ್ಟಿ ; ಮನ್ಮಥನು ಸಿದ್ಧಪಡಿಸಿಕೊಂಡ ಸಂಜೀವನ ಶಕ್ತಿ : (ಕಂಡವರೆಲ್ಲರ) ಕಣ್ಣುಗಳು ಕುಣಿದಾಡುವ ರಂಗಸ್ಥಳ ; ಸಮಸ್ತ ಜಗತ್ತಿನ ವಿಲಾಸಗಳಿಗೆ ಜನ್ಮಭೂಮಿ; ಸ್ತ್ರೀಕುಲಕ್ಕೆ ಆತ್ಮಸ್ವರೂಪಳು ಎಂದೆನಿಸಿದಳು; ಅವಳೆಂತಹ ರೂಪವತಿ ! ೨೭. ಶರತ್ಕಾಲದ ಬೆಳ್ದಿಂಗಳಲ್ಲಿ ಪ್ರಕಾಶವೂ, ಹಿತಕಾರಿಗುಣವೂ ಇರುವಂತೆ, ಮಾವಿನ ಗೊಂಚಲಲ್ಲಿ ಸುಗಂಧವೂ, ವಿಕಾಸವೂ ಇರುವಂತೆ, ಸಮುದ್ರದ ತೆರೆಯಲ್ಲಿ ಸ್ವಚ್ಛತೆಯೂ ಮಹತಿಯೂ ಒಟ್ಟಿಗೆ ಶೋಭಿಸುವಂತೆ ಆ ಮಹಾರಾಣಿಯಲ್ಲಿ ಅನೇಕ ಕಲೆಗಳ ನೈಪುಣ್ಯವೂ ಪುಣ್ಯವೂ ಸುಂದರವಾಗಿ ಬೆಸೆದುಕೊಂಡಿದ್ದುವು. ೨೮. ಆ ರಾಜನ ಮನಸ್ಸೆಂಬ ದಾರದಲ್ಲಿ ಆ ಸಜ್ಜನೆಯ ಗುಣಗಳೆಂಬ ಮಣಿಗಳನ್ನು ಆಶ್ಚರ್ಯಕರವಾಗಿ ಪವಣಿಸಿದ ಬ್ರಹ್ಮನು ಮೊದಲು ಮಾಲೆಗಾರರೊಡನೆ ಸಹವಾಸ ಮಾಡಿದ್ದನೊ ಏನೊ ! ತನ್ನ ಮನಸ್ಸಿಗೆ ಆನಂದನಿಲಯವಾದ ಆ ಮಹಾರಾಣಿಯೂ ತಾನೂ ಒಮ್ಮೊಮ್ಮೆ ಅರಳಿದ ಕಮಲಗಳ ಮಕರಂದರಸದ ತುಷಾರಗಳಿಂದ ಕೂಡಿದ ಕೊಳದಲ್ಲಿ ಹಂಸದಂಪತಿಗಳಂತೆ ಜಲಕ್ರೀಡೆಯಾಡುವರು ; ಒಮ್ಮೊಮ್ಮೆ ನವಸುಗಂಧವನ್ನು ಬೀರುವ ಹೂಗೊಂಚಲುಗಳಿಂದ ಸಮೃದ್ಧವಾದ ಬಳ್ಳಿ

ಮೃದುಳಕದಳೀವನವಳಯಿತೋತ್ತುಂಗಮಣಿಶೃಂಗಸಂಗತಕೃತಕಕುತ್ಕೀಲಂಗಳೊಳ್ ಕಿನ್ನರಮಿಥುನದಂತೆ ದಿಗವಲೋಕನವಿನೋದದಿಂ ರಮಿಯಿಸಿಯುಂ, ಓರೊರ್ಮೆ ರಾಜದ್ರಜತಶೈಲಶಂಕಾಕಾಶಪ್ರಾಂಶುಸೌಧ ಮೂರ್ಧಂಗಳೊಳ್ ಚಕೋರಮಿಥುನದಂತೆ ಚಾರುಚಂದ್ರಿಕಾಸೇವನೆಯಂ ಸಂಭಾವಿಸಿಯುಂ, ಓರೊರ್ಮೆ ಸಮುನ್ನತಶಾತಕುಂಭಸ್ತಂಭಸಂಭೃತಾಂದೋಳಲೇಖನವಿಳಾಸಮಿಷದಿಂ ವಿದ್ಯಾಧರಮಿಥುನದಂ ತಾಕಾಶಸಂಚಾರಮಂ ವಿಸ್ತಾರಿಸಿಯುಮಿಂತು ವಿವಿಧವಿನೋದಯಾನಪಾತ್ರೋತ್ತಾರಿತಾನೇಕವತ್ಸರ ಸರಿತ್ಸಂದೋಹರಾಗಿರ್ಪಿನಮೊಂದುದಿವಸಮಾ ಶ್ರೀಕಾಂತಾಮಹಾದೇವಿಗೆ ದೇವಪೂಜಾವಸಾನದೊಳ್ ಧರ್ಮಕಥಾಪ್ರಸಂಗದಿನಾಹಾರದಾನಮಾಹಾತ್ಮ್ಯಪ್ರಸ್ತುತಮಾಗೆ ಸುಶ್ರುತನೆಂಬ ಪುರೋಹಿತ ನಿಂತೆಂದಂ :–

> ಉಪಚಿತವಿಧಿದಾತೃದ್ರ।
> ವ್ಯಪಾತ್ರಫಲಭೇದದಿಂದಮಯ್ದು ತೆಱಂ ಭಾ ॥
> ವಿಪೊಡನ್ನದಾನಮದಱೊಳ್।
> ಪ್ರಪಂಚಿಪೊಡೆ ವಿಧಿಯದೊಂದೆ ನವವಿಧಮಕ್ಕುಂ ॥ ೨೯

ಅದೆಂತೆಂದೊಡೆ :–

> ಇದಿರ್ಗೊಂಡುಚ್ಚದೊಳಿರಿಸುವ।
> ಪದಯುಗಮಂ ತೊಳೆವ ಪೂಜಿಪೆಱಪಂಗವಚೋ।

ಮಂಟಪಗಳಲ್ಲಿ ಭ್ರಮರಗಳ ಜೋಡಿಯಂತೆ ಹೂಗಳನ್ನಾಯುವ ಲೀಲೆಯಲ್ಲಿ ಅಲೆದಾಡುವರು ; ಒಮ್ಮೊಮ್ಮೆ ಕೋಮಲವಾದ ಬಾಳೆಯ ವನದಿಂದ ಸುತ್ತುಗಟ್ಟಿದ, ಎತ್ತರವಾದ ರತ್ನಖಚಿತ ಕೃತಕ ಗಿರಿಗಳಲ್ಲಿ ಕಿನ್ನರ ಮಿಥುನದಂತೆ ಕುಳಿತು ಸುತ್ತಲಿನ ದೃಶ್ಯಗಳನ್ನು ನೋಡುವ ವಿನೋದದಿಂದ ಸುಖಿಸುವರು; ಒಮ್ಮೊಮ್ಮೆ ಹೊಳೆಯುವ ಬೆಳ್ಳಿಬೆಟ್ಟಗಳಂತೆ ತೋರುವ ಉನ್ನತವಾದ ಸೌಧದ ಮೇಲ್ನೆಲೆಯಲ್ಲಿ ನಿಂತು ಚಕೋರ ದಂಪತಿಗಳಂತೆ ಬೆಳ್ದಿಂಗಳ ಸುಖವನ್ನು ಅನುಭವಿಸುವರು; ಒಮ್ಮೊಮ್ಮೆ ಎತ್ತರವಾದ ಚಿನ್ನದ ಕಂಬಗಳಿಂದ ಶೋಭಿಸುವ ಉಯ್ಯಾಲೆಯಲ್ಲಿ ಕುಳಿತು ಜೀಕಾಟದ ನೆವದಿಂದ ವಿದ್ಯಾಧರ ಮಿಥುನದಂತೆ ಆಕಾಶ ಸಂಚಾರವನ್ನು ಪಡೆಯುವರು; ಹೀಗೆ ಬಗೆಬಗೆಯ ವಿನೋದಗಳೆಂಬ ನಾವೆಗಳಿಂದ ಅನೇಕ ವರ್ಷಗಳೆಂಬ ಪ್ರವಾಹಗಳನ್ನು ದಾಟುತ್ತಿರಲಾಗಿ ಒಂದು ದಿವಸ ಶ್ರೀಕಾಂತಾ ಮಹಾರಾಣಿ ದೇವಪೂಜೆಯನ್ನು ನೆರವೇರಿಸಿದ ಬಳಿಕ ಧರ್ಮಕಥೆಯನ್ನು ಕೇಳುತ್ತಿದ್ದಳು; ಆ ಸಂದರ್ಭದಲ್ಲಿ ಆಹಾರದಾನದ ಮಹಿಮೆಯನ್ನು ವಿವರಿಸುತ್ತ ಸುಶ್ರುತನೆಂಬ ಪುರೋಹಿತನು ಹೀಗೆ ಹೇಳಿದನು – ೨೯. ದಾನಮಾಡುವವನು ದ್ರವ್ಯ, ದಾನಪಾತ್ರ, ಅದರಿಂದುಂಟಾ ಗುವ ಫಲ–ಇವುಗಳ ಭೇದದಿಂದ ಅನ್ನದಾನವು ಐದು ಬಗೆಯಾಗಿದೆ. ಆದರೂ ಅನುಸರಿಸತಕ್ಕ ವಿಧಾನ ಒಂದೇ – ಅದು ಒಂಭತ್ತು ಅಂಗಗಳನ್ನೊಡಗೊಂಡಿದೆ. ಅವು ಯಾವುವೆಂದರೆ – ೩೦. (ಆಹಾರಕ್ಕಾಗಿ ಬಂದ) ಅತಿಥಿಯನ್ನು ಇದಿರುಗೊಳ್ಳುವುದು, ಉನ್ನತವಾದ ಪೀಠದಲ್ಲಿ ಕುಳ್ಳಿರಿಸುವುದು, ಪಾದಗಳನ್ನು

ಹೃದಯಾನ್ನಶುದ್ಧಿಯಂ ನೆಱೆ ।
ಪದವಡಿಸುವ ಭೇದದಿಂದೆ ಪರಮಾಗಮದೊಳ್ ॥ ೩೦

ಭಕ್ತಿಜ್ಞಾನಶ್ರದ್ಧಾ ।
ಶಕ್ತಿತಿತಿಕ್ಷಾದಯಾಮಹೌದಾರ್ಯಸಮಾ ॥
ಯುಕ್ತಂ ಸಪ್ತಗುಣಂ ಜೈ ।
ನೋಕ್ತಿಯಿನಾ ದಾತೃವೆನಿಪ ಭವ್ಯಂಗಕ್ಕುಂ ॥ ೩೧

ಮತ್ತಂ ದ್ರವ್ಯಮೆಂಬುದು ಯೋಗ್ಯಾಯೋಗ್ಯಭೇದದಿಂದಿರ್ತೆಱಂ. ಅಲ್ಲಿ ಯೋಗ್ಯಮಾಹಾರಾದಿ ಕಮಯೋಗ್ಯಂ ಕನಕಾದಿಕಂ. ಅಲ್ಲದೆಯುಂ;

ಉತ್ತಮಪಾತ್ರಂ ಸಕಲನಿ ।
ವೃತ್ತಂ ವಿರತಾವಿರತನೆ ಮಧ್ಯಮಪಾತ್ರಂ ॥
ಮತ್ತಮಸಂಯುತಸಮ್ಯ ।
ಗ್ವೃತ್ತಮನಂ ತಾಂ ಜಘನ್ಯಪಾತ್ರಮೆನಿಕ್ಕುಂ ॥ ೩೨

ಫಲಂ ಸ್ವರ್ಗಭೋಗಭೂಮಿಸಂಭವಂ. ಅಲ್ಲಿ ಸ್ವರ್ಗಮೆಂಬಿನಂ ಸೌಧರ್ಮೇಶಾನಾದಿಗಳ ವರವಿಮಾನಂಗಳಿಂದ್ರಕಶ್ರೇಣಿಬದ್ಧಪ್ರಕೀರ್ಣಕಂಗಳೆಂದು ಮೂದೆಱಂ, ಅಲ್ಲಿಯುಪಪಾದಭವನದಮಳ್ವಾಸಿನೆಡೆಯೊಳ್ ಸಹಜಯೌವನರುಂ ವಿಭೂಷಿತಮಕುಟಕಟಕಮಾಲ್ಯಾಂಬರಾದಿಭೂಷಣರಾಗಿ ಪುಟ್ಟು

ತೊಳೆಯುವುದು, ಪೂಜಿಸುವುದು, ದೇಹಶುದ್ಧಿ, ವಚನಶುದ್ಧಿ, ಚಿತ್ತಶುದ್ಧಿ, ಆಹಾರ ಶುದ್ಧಿ ಮತ್ತು ಏಷಣಾಶುದ್ಧಿ (ಅತಿಥಿ ಸಂತೋಷದಿಂದ ಆಹಾರವನ್ನು ಸೇವಿಸುವಂತೆ ಮಾಡುವುದು)– ಎಂದು ಒಂಬತ್ತು ಅಂಗಗಳು ೩೧. ಆಹಾರದಾನ ಮಾಡುವವನಲ್ಲಿ, ಭಕ್ತಿ, ಜ್ಞಾನ, ಶ್ರದ್ಧೆ, ಶಕ್ತಿ, ಶಾಂತಿ, ದಯೆ ಮತ್ತು ಮಹಾ ಔದಾರ್ಯ ಎಂಬ ಏಳು ಗುಣಗಳಿರಬೇಕೆಂಬುದು ಜಿನೋಕ್ತವಾಗಿದೆ. ಮತ್ತು ದ್ರವ್ಯವೆಂಬುದು ಯೋಗ್ಯ ಹಾಗೂ ಅಯೋಗ್ಯ ಎಂದು ಎರಡು ಬಗೆಯಾಗಿದೆ; ಆಹಾರಾದಿಯಾದುದು ಯೋಗ್ಯ, ಚಿನ್ನ ಮೊದಲಾದ ಧನದಿಂದೊಡಗೂಡಿದುದು ಅಯೋಗ್ಯ. ಅದಲ್ಲದೆ– ೩೨. ಸಂಪೂರ್ಣ ವೈರಾಗ್ಯ ಹೊಂದಿದ ಮುನಿಯು ಉತ್ತಮ ಪಾತ್ರ; ಸಮ್ಯಗ್‌ದೃಷ್ಟಿಯುಕ್ತನಾದ ಶ್ರಾವಕನು ಮಧ್ಯಮ ಪಾತ್ರ; ಸಮ್ಯಗ್ ದೃಷ್ಟಿಯಿದ್ದರೂ ವ್ರತರಹಿತನಾಗಿರುವವನು ಜಘನ್ಯ ಪಾತ್ರ. ಆಹಾರ ದಾನದಿಂದ ದೊರೆಯುವ ಫಲವೆಂದರೆ ಭೋಗಭೂಮಿಯಲ್ಲಿ ಜನನ. ಅಲ್ಲಿ ಸ್ವರ್ಗವೆ ಎಂಬಂತೆ ಸೌಧರ್ಮ, ಈಶಾನಾದಿಗಳ ಶ್ರೇಷ್ಠವಾದ ವಿಮಾನಗಳು ಇಂದ್ರಕ, ಶ್ರೇಣೀಬದ್ಧ ಮತ್ತು ಪ್ರಕೀರ್ಣಕಗಳೆಂದು ಮೂರು ಬಗೆಯಾಗಿವೆ. ಅಲ್ಲಿಯ ಉಪಪಾದ ಭವನ (ಆಹಾರದಾನ ಫಲದಿಂದ ಗರ್ಭವಿಲ್ಲದೆ, ದೇವತೆಗಳಾಗಿ ಹುಟ್ಟುವ ಸ್ಥಳ)ದ ಜೋಡಿ ಹಾಸುಗೆಯಲ್ಲಿ ಜನ್ಮತಃ ಯೌವನವಂತರಾಗಿಯೂ ಕಿರೀಟ, ಕಡಗ, ವಸ್ತ್ರ, ಪುಷ್ಪಮಾಲೆ ಮೊದಲಾದ ಅಲಂಕಾರ ಸಹಿತರಾಗಿಯೂ ಹುಟ್ಟುವ ದೇವತೆಗಳಿಗೆ ದೇವತಾ ಲೋಕದಲ್ಲಿ ಕಳೆಯಬೇಕಾದ ಆಯುಷ್ಯ, ಸುರತ, ಉಸಿರಾಟ– ಇವು ಅವರವರ

ವಮರರ್ಗೆ ದೇವಪ್ರಾಣಾಯುಷ್ಯಪ್ರವಿಚಾರೋಚ್ಛ್ವಾಸನಿಶ್ವಾಸಲೇಪ್ಯಭೇದಂಗಳುಮಕ್ಕುಂ. ಭೋಗಭೂಮಿಗಳ್ ಜಘನ್ಯಮಧ್ಯಮೋತ್ತಮನಾಮಯುತಂಗಳಧ್ಯರ್ಧದ್ವೀಪದ ಹೈಮವತ ಹೈರಣ್ಯವತಂಗಳೆಲ್ಲಂ ಜಘನ್ಯಭೋಗಭೂಮಿಗಳಕ್ಕುಂ; ಹರಿವರ್ಷರಮ್ಯಕಂಗಳೆಲ್ಲಂ ಮಧ್ಯಮಭೋಗಭೂಮಿಯಕ್ಕುಂ; ದೇವೋತ್ತರ ಕುರುಗಳೆಲ್ಲಂ ಉತ್ತಮಭೋಗಭೂಮಿಗಳಕ್ಕುಂ. ಅಲ್ಲಿ–

> ಇಳೆ ಚಂಚತ್ಪಂಚರತ್ನಾಂಚಿತಮಮಳಸರಿತ್ಸಂಕುಳಂ ಕೈರವಾ।
> ಕುಳಮುದ್ಯಾನಂ ಕನತ್ಕೋಕಿಳರವಮುಖರಂ ಶೈತ್ಯಸೌರಭ್ಯಮಾಂದ್ಯಾ॥
> ಕಳಿತಂ ವಾತಂ ನಿಶಾಹಶ್ಶಿಶಿರಜಳಧರಗ್ರೀಷ್ಮಕಾಲಂ ವಿಹೀನಂ।
> ಸಳಿಳಂ ಚಂದ್ರದ್ರವಾಭಂ ತರುಣತೃಣಗಣಂ ಮುಷ್ಟಿಮಾತ್ರಂ ಸುಪತ್ರಂ॥ ೩೩.

ಮತ್ತಮಲ್ಲಿ,

> ವಸನಾಂಗಾತೋದ್ಯಾಂಗ।
> ಪ್ರಸವಾಂಗಜ್ಯೋತಿರಂಗದೀಪಾಂಗಾನ್ನಾಂ॥
> ಗಸುರಾಂಗಭಾಜನಾಂಗಾ।
> ವಸಥಾಂಗವಿಭೂಷಣಾಂಗದಶಕಲ್ಪಕುಜಂ॥ ೩೪

ಸೊಗಯಿಸುವುವಲ್ಲದೆಯುಂ –

> ಹುಸಿ ಹಸಿವಾಮಯಮಾಯಿಲ।
> ಮಸುರಾಹಿಕ್ರೂರಸತ್ವಬಾಧೆಗಳಿವು ವ॥
> ರ್ತಿಸವೆನೆ ಭೋಗಕ್ಷಿತಿಗಳೆ।
> ನಿಸದಂ ಸಗ್ಗಕ್ಕಮಗ್ಗಳಂ ತಾಮಲ್ತೇ॥ ೩೫

ದರ್ಜೆಗೆ ಅನುಸರಿಸಿ ಬೇರೆಬೇರೆಯಾಗಿರುತ್ತವೆ. ಭೋಗಭೂಮಿಯಲ್ಲಿ ಜಘನ್ಯ, ಮಧ್ಯಮ ಮತ್ತು ಉತ್ತಮ ಎಂಬ ಮೂರು ಭೇದಗಳುಂಟು. ಎರಡೂವರೆ ದ್ವೀಪದ ಹೈಮವತ ಹೈರಣ್ಯವತಗಳೆಲ್ಲ ಜಘನ್ಯ ಭೋಗಭೂಮಿಗಳು; ಹರಿವರ್ಷ–ರಮ್ಯಕಗಳೆಲ್ಲ ಮಧ್ಯಮ ಭೋಗಭೂಮಿಗಳು; ದೇವಕುರು–ಉತ್ತರ ಕುರುಗಳೆಲ್ಲ ಉತ್ತಮ ಭೋಗ ಭೂಮಿಗಳು. ಅಲ್ಲಿ–೩೩. ಭೂಮಿ ಪಂಚರತ್ನಗಳಿಂದ ಶೋಭಿಸುವುದು; ಜಲಾಶಯಗಳೆಲ್ಲ ನೈದಿಲೆಗಳಿಂದ ತುಂಬಿರುವುವು; ಉದ್ಯಾನಗಳು ಕೋಗಿಲೆಗಳ ಕೂಜಿತದಿಂದ ರಮ್ಯವಾಗಿರುವುವು; ಗಾಳಿ ಹಗಲಿರುಳು, ತಂಪಾಗಿಯೂ ಸುಗಂಧವಾಗಿಯೂ, ಮಂದವಾಗಿಯೂ ಬೀಸುವುದು; ಚಳಿಗಾಲ, ಮಳೆಗಾಲ ಮತ್ತು ಬೇಸಗೆ ಎಂಬ ಕಾಲಭೇದಗಳು ಅಲ್ಲಿಲ್ಲ; ನೀರು ಕರಗಿದ ಬೆಳ್ದಿಂಗಳಂತಿರುವುದು; ಹುಲ್ಲು ಒಳ್ಳೆಯ ಗರಿಸಹಿತವಾಗಿ ಒಂದು ಮುಷ್ಟಿಯಷ್ಟು (ನಾಲ್ಕು ಅಂಗುಲ) ಎತ್ತರವಾಗಿರುವುದು. ಮತ್ತು ಅಲ್ಲಿ – ೩೪. ವಸ್ತ್ರಾಂಗ, ವಾದ್ಯಾಂಗ, ಪುಷ್ಪಾಂಗ, ಜ್ಯೋತಿರಂಗ, ದೀಪಾಂಗ, ಅನ್ನಾಂಗ, ಮಾಲ್ಯಾಂಗ, ಭಾಜನಾಂಗ, ಭವನಾಂಗ, ಭೂಷಣಾಂಗ– ಎಂಬ ಹತ್ತು ಬಗೆಯ ಕಲ್ಪವೃಕ್ಷಗಳು ಶೋಭಿಸುವುವು. ಅದಲ್ಲದೆ– ೩೫. ಸುಳ್ಳು, ಹಸಿವು, ರೋಗ, ಕೊಳ್ಳೆ, ಪಿಶಾಚಿಗಳು, ಹಾವು ಮೊದಲಾದ ಕ್ರೂರ ಜೀವಗಳ ಬಾಧೆಗಳಿಲ್ಲ. ಎಂದ ಮೇಲೆ ಭೋಗ

ಪಿರಿದುಂ ವಿವೇಕದಿಂ ಮೆಯ್ ।
ಸಿರಿಯಿಂದಾಯುಷ್ಯದಿಂ ವಿಳಾಸೋದಯದಿಂ ॥
ಪರಿಣತೆಯಿಂ ತನ್ನೊಳ್ ಸರಿ ।
ದೊರೆ ಸುರರೇಂ ಭೋಗಭೂತಲಂ ಸುಖಮಯಮೋ ॥ ೩೬

ಆ ಭೋಗಭೂಮಿಯೊಳ್ ಪಾತ್ರತ್ರಿತಯದಾನಫಲಂಗಳಿಂದೇಕದ್ವಿತ್ರಿಪಲ್ಯೋಪಮಾಯುಷ್ಯರುಮೇಕದ್ವಿತ್ರಿದಿವಸಾಂತರಿತಾಮಳಕಾಕ್ಷಬದರಮಾತ್ರಾಹಾರರುಂ ವ್ಯಪಗತನೀಹಾರರುಂ ದ್ವಿಚತುಷ್ಷಟ್ಸಹಸ್ರಚಾಪೋತ್ಸೇಧರುಂ ನಿಷ್ಕಷಾಯರುಮಾರ್ಯಾಭಿಧಾನರುಮಾಗಿ ದಂಪತಿಸ್ವರೂಪದಿಂ ಪುಟ್ಟಿ, ೩೭

ನಿಸದಮೆನಿಪ್ಪ ಪುಟ್ಟಿಸೆವ ಜವ್ವನದಿಂದೆ ಮನಕ್ಕೆ ನಿಚ್ಚಲುಂ ।
ಪೊಸತೆನಿಸಿರ್ದ ರೂಪೊಲವನೋಸರಿಸಲ್ಕಣಮೀಯದಿರ್ಪಿನಂ ॥
ಪಸರಿಪ ಕಾಮರಾಗರಸವಾರಿಧಿಯೊಳ್ ನಲವಿಂದೆ ದಂಪತಿ ।
ಪ್ರಸರಮೆ ನಾಡೆ ಮೂಡಿ ಮುಳುಗಾಡುವುದೀಡಿತಭೋಗಭೂಮಿಯೊಳ್ ॥ ೩೭ಅ

ಮತ್ತಂ

ಭವನಾಂಗಂ ಕಲ್ಪಭೂಜಂ ಸಮೆದ ಬಹುವಿಧೋತ್ತುಂಗಹರ್ಮ್ಯಾವಳೀಗ ।
ರ್ಭವಿಲಾಸಾವಾಸದೊಳ್ ಬಾಟಿಸ್ಕೊದಲಿದು ಬಸನಕ್ಕೆಂಬಿನಂ ಚೆಲ್ವುವೆತ್ತೊ ॥

ಭೂಮಿಗಳು ನಿಶ್ಚಯವಾಗಿ ಸ್ವರ್ಗಕ್ಕಿಂತಲೂ ಮಿಗಿಲಲ್ಲವೆ ? ೩೬. ಅಧಿಕವಾದ ವಿವೇಕ, ದೇಹಸೌಂದರ್ಯ, ಆಯುಷ್ಯ, ವಿಲಾಸ, ಹಾಗೂ ಸಂತೋಷ– ಇವುಗಳಲ್ಲಿ ದೇವತೆಗಳು ಇಲ್ಲಿಯ ಜನಕ್ಕೆ ಸರಿಸಮಾನರಾಗಿರುವುದರಿಂದ ಭೋಗಭೂಮಿ ಎಷ್ಟೊಂದು ಸುಖಮಯವಾದುದು ! ೩೭. ಜಘನ್ಯ–ಮಧ್ಯಮ–ಉತ್ತಮ ಪಾತ್ರಗಳಿಗೆ ಮಾಡಿದ ಆಹಾರದಾನದ ಫಲವಾಗಿ ದಾನಿಗಳು ಅನುಕ್ರಮದಿಂದ ಒಂದು ಪಲ್ಯ, ಎರಡು ಪಲ್ಯ ಮತ್ತು ಮೂರು ಪಲ್ಯೋಪಮ ಆಯುಷ್ಯವುಳ್ಳವರಾಗಿ, ದಿನಕ್ಕೊಮ್ಮೆ, ಎರಡು ದಿನಕ್ಕೊಮ್ಮೆ ಮತ್ತು ಮೂರು ದಿನಕ್ಕೊಮ್ಮೆ ನೆಲ್ಲಿಕಾಯಿಯಷ್ಟು, ತಾರೆಕಾಯಿಯಷ್ಟು ಹಾಗೂ ಬೋರೆಕಾಯಿಯಷ್ಟು ಪ್ರಮಾಣದ ಆಹಾರವನ್ನು ಸೇವಿಸುವವರಾಗಿ, ಮಲ ಪ್ರವೃತ್ತಿಯಿಲ್ಲದವರೂ, ಎರಡು ಸಾವಿರ ಬಿಲ್ಲಳತೆ, ನಾಲ್ಕು ಸಾವಿರ ಬಿಲ್ಲಳತೆಯ ಹಾಗೂ ಆರುಸಾವಿರ ಬಿಲ್ಲಳತೆಯ ದೇಹವುಳ್ಳವರೂ, ಕಷಾಯರಹಿತರೂ, ಆದ ಆರ್ಯರೆಂಬ ಹೆಸರಿನೊಡನೆ ದಂಪತಿಗಳಾಗಿಯೆ ಹುಟ್ಟುವರು. ೩೭ಅ. ಹುಟ್ಟುತ್ತಲೆ ಬಂದ ಯೌವನದಿಂದ ಮನಸ್ಸಿಗೆ ನಿತ್ಯನೂತನವೆನಿಸುವ ದೇಹಸೌಂದರ್ಯವು, ಸ್ವಲ್ಪಕಾಲವಾದರೂ ಬಿಡದಂತೆ ಅಂಟಿಕೊಂಡಿರುವ ಪ್ರಣಯ ಸ್ವಭಾವವೂ ಕೂಡಿಕೊಂಡುದರಿಂದ ಆ ದಂಪತಿಗಳು ಸಂತೋಷದಿಂದ ಶೃಂಗಾರರಸ ಸಮುದ್ರದಲ್ಲಿ ಮೂಡಿ ಮುಳುಗುತ್ತಿರುವರು. ಮತ್ತು – ೩೭ಆ. ಭವನಾಂಗವೆಂಬ ಕಲ್ಪವೃಕ್ಷವು ನಿರ್ಮಿಸಿಕೊಡುವ ನಾನಾ ಬಗೆಯಾದ ಉನ್ನತವಾದ ಭವ್ಯ ಭವನಗಳೊಳಗೆ ಸುರತ ವ್ಯಸನಕ್ಕೇ ಇದೇ ಜನ್ಮಸ್ಥಾನ

ಪ್ಪುವ ಶಯ್ಯೋದ್ದೇಶದೊಳ್ ಪೆರ್ಚಿದ ಸಮರತಲೀಲಾವಿನೋದಂಗಳಿಂದು ।
ತ್ಸವಮಂ ತಾಳ್ದುತ್ತುಮಿರ್ಪುವಜ್ಜುಗಮೆ ಬವಸೆ ತದ್ಭೂಮಿಜರ್ಗೆಲ್ಲಮೆಂದುಂ ॥ ೩೭

ಅಂತನಲ್ಪ ಕಂದರ್ಪಸುಖಸಮಾಸ್ವಾದನತತ್ಪರತೆಯಿಂದಿರ್ದು ನವಮಾಸಾವಶೇಷಾಯುಷ್ಯರಾಗಿ ನೆಲಸಿರ್ದ ಗರ್ಭಂ ತದವಸಾನದೊಳ್ ಪುಟ್ಟಲೊಡಂ ಪಿತೃದ್ವಂದ್ವಂ ಕ್ಷುತಜೃಂಭಣವ್ಯಾಜದಿಂ ಪರಾಸುಗಳಕ್ಕುಮೆಂದು ಪೇೞೆ ಕೇಳ್ದು ಸುಶ್ರುತನಂ ತಾಂಬೂಲದಾನಪುರಸ್ಸರಂ ವಿಸರ್ಜಿಸಿ, ೩೮

ಗೞಿಗೞಿನಮೃತವಿಷಂಗಳ ।
ಮೞೆಯೊರ್ಮೆಯೆ ಕರೆದ ತೆಱದೆ ತನುಜೋದಯಮುಂ ॥
ಬೞಿಯೊಳೆ ಜನನೀಜನಕ ।
ರ್ಗೞಿವುಂ ಸಮನಿಸಿದುದಿಂತಿದೇಂ ವಿಸ್ಮಯಮೋ ॥ ೩೯

ಎಂದಾತ್ಮಗತದೊಳೆ ಬಗೆಯುತಿರ್ದನಂತರಂ ಕಲದೊಳಿರ್ದ ಕಳಭಾಷಿಣಿಯೆಂಬ ಕೆಳದಿಯ ಮೊಗಮಂ ನೋಡಿ,

ಫಳಪಾಕಾಂತತೆಯೋಷಧಿ ।
ಗಳ ತೆಱದಿಂದೆಯ್ದೆ ಸಮನಿಸಿತ್ತಕ್ಕಟ ಸಂ ॥
ಗಳಿಸದೆ ತನಯನ ಲೀಲಾ ।
ವಿಲೋಕನಪ್ರಭವಸೌಖ್ಯಮಾ ದಂಪತಿಯೊಳ್ ॥ ೪೦

ವೆಂಬಂತೆ ಸೊಗಸಾಗಿರುವ ಶಯ್ಯೆಯಲ್ಲಿ ಅತ್ಯಧಿಕವಾದ ಸಮರತಿಯ ಕ್ರೀಡಾ ವಿಲಾಸಗಳಿಂದ ಸಂತೋಷ ಪಡುತ್ತಿರುವುದೊಂದೇ ಉದ್ಯೋಗವಾಗಿರುವುದು– ಅಲ್ಲಿಯ ಜನರೆಲ್ಲರಿಗೂ. ೩೮. ಹೀಗೆ ಅತಿಶಯವಾದ ಕಾಮಸುಖವನ್ನು ಅನುಭವಿಸುವುದರಲ್ಲಿಯೆ ಆಸಕ್ತರಾಗಿದ್ದು, ತಮ್ಮ ಆಯುಷ್ಯ ಇನ್ನು ಒಂಬತ್ತು ತಿಂಗಳೆಂಬಾಗ ಗರ್ಭಧರಿಸಿ, ಆ ಕಾಲ ಮುಗಿಯುತ್ತಲೆ ಶಿಶುಜನನವಾಗುವುದು ; ಆ ಕೂಡಲೆ ತಂದೆ ತಾಯಿಗಳಾದವರಿಬ್ಬರೂ ಒಂದು ಸೀನಿನ ನೆವದಿಂದ ಒಂದು ಆಕಳಿಕೆಯ ನೆವದಿಂದ ಪ್ರಾಣತ್ಯಾಗ ಮಾಡುವರು– ಹೀಗೆಂದು ವಿವರಿಸಲಾಗಿ ಅದನ್ನು ಕೇಳಿ ಸುಶ್ರುತನನ್ನು ತಾಂಬೂಲ ಕೊಟ್ಟು ಕಳುಹಿಸಿದಳು. ೩೯. "ಅಮೃತದ ಮಳೆಯೂ ವಿಷದ ಮಳೆಯೂ ಒಮ್ಮೆಲೆ ಜೊತೆಯಾಗಿ ಸುರಿದಂತೆ ಮಗುವಿನ ಜನನದೊಂದಿಗೆ ತಾಯ್ತಂದೆಗಳ ಮರಣವೂ ಆಗುವುದೆಂದರೆ ಇದೇನು ಸೋಜಿಗ!" ಎಂದು ತನ್ನೊಳಗೆ ಎಂದುಕೊಂಡು, ಬಳಿಕ ಬಳಿಯಲ್ಲಿದ್ದ ಕಳಭಾಷಿಣಿಯೆಂಬ ಗೆಳತಿಯ ಮುಖವನ್ನು ನೋಡಿ– ೪೦. "ಹಣ್ಣು ಪಕ್ವವಾದೊಡನೆ ಸಸ್ಯ ಸತ್ತು ಹೋಗುವಂತೆ (ಭೋಗಭೂಮಿಯ) ಆ ದಂಪತಿಗಳಿಗೆ ಆಯಿತು; ಮಗುವಿನ ಆಟವನ್ನು ನೋಡಿ

ಅವರೊಳ್ ಸಂಸಾರಸೌಖ್ಯಕ್ಕಿದುವೆ ಮೊದಲೆನಿಪ್ಪಾತ್ಮಜಾಲಿಂಗನಂ ಪೊರ್ದುವುದಲ್ತೆಂದಂದ ದೆಂದುಂ ತವದ ತರುಣಿಮಂ ಬೇಟ್ಟುದಂ ಮಾಟ್ಟಿ ಕಲ್ಪ ॥ ದ್ರುವಿತಾನಂ ವೀತವಿಶ್ವಾಮಯತೆಯುಚಿತ ಪಲ್ಯೋಪಮಂ ಜೀವನಂ ವ್ಯೋಮವಿಭಾಗವ್ಯಾಪ್ತಿಯಪ್ಪುನ್ನತತನುವಿನಿತುಂ ನಿಶ್ಚಯಂ ವ್ಯರ್ಥಮಲ್ತೇ ॥ ೪೧

ಬೇಟಕ್ಕೆ ತವದ ಕೂಟಂ ।
ಕೂಟಕ್ಕೆ ತನೂಜರಾತನೂಜರೊಳಂ ಮು ॥
ದ್ದಾಟಂ ಫಲಮದೆ ತಮ್ಮೊಳ್ ।
ನಾಟದು ಗಡ ಪೆಱವು ಸುಖಲವಂಗಳೊಳೇನೋ ॥ ೪೨

ಸುತರಿಲ್ಲದ ಸಿರಿ ತುಹಿನೋ ।
ದ್ಗತಿಯಿಲ್ಲದ ವಾರಿ ಬೇಟಮಿಲ್ಲದ ಕೂಟಂ ॥
ವ್ರತಮಿಲ್ಲದಱಿವು ಮೃದುಪದ ।
ಗತಿಯಿಲ್ಲದ ಲಾಸ್ಯಮಿಂತದೇಂ ಮೆಱೆದಪುದೇ ॥ ೪೩

ಅದು ಕಾರಣದಿಂ,

ಚುಂಬಿಸಿ ಲೋಳೆವಾಯ್ದೆಱೆಯನೀಕ್ಷಿಸಿ ಮಕ್ಕಳ ಮುದ್ದುಗೆಯ್ತದೊ ।
ಳ್ಪಂ ಬಿಡದಪ್ಪಿ ಕೋಮಲತರಾಂಗಮನಾಲಿಸಿ ನುಣ್ದೊದಳ್ ಪೊದ ॥
ಟ್ದೆಂಬಿನಿವಾತನಟ್ಟಿಱಿಸೊಳೆ ವಾಸಿಸಿ ನೆತ್ತಿಯನಿಂತು ಸೌಖ್ಯಮಂ ।
ತುಂಬಿ ನಿಜಾಖಿಲೇಂದ್ರಿಯದೊಳಂ ತಣಿವೆಯ್ದುವರೇಂ ಕೃತಾರ್ಥರೋ ॥ ೪೪

ಸಂತೋಷಪಡುವ ಭಾಗ್ಯ ಅವರಿಗಿಲ್ಲವಾಯಿತಲ್ಲವೆ ? ೪೧. ಸಂಸಾರ ಸುಖಕ್ಕೆ ಮೊದಲೆನಿಸುವುದು ಮಗುವನ್ನು ಆಲಂಗಿಸಿ ಸಂತೋಷಪಡುವುದು. ಅದೇ ಸಾಧ್ಯವಿಲ್ಲವೆಂದ ಮೇಲೆ ಕುಗ್ಗದ ಯೌವನವಾಗಲಿ, ಬೇಡಿದುದನ್ನು ತಂದೊದಗಿಸುವ ಕಲ್ಪವೃಕ್ಷಗಳ ಸಮೂಹವಾಗಲಿ ರೋಗರಹಿತವಾದ ಪಲ್ಯೋಪಮ ಆಯುಷ್ಯವಾಗಲಿ–ಮುಗಿಲು ಮುಟ್ಟುವಂತಹ ಉನ್ನತ ಶರೀರವಾಗಲಿ–ಇವೆಲ್ಲ ಇದ್ದು ಏನು ಪ್ರಯೋಜನ? ಅವರ ಜೀವನ ವ್ಯರ್ಥವಲ್ಲವೆ? ೪೨. ಪ್ರಣಯಕ್ಕೆ ಫಲ ಅಕ್ಷಯವಾದ ಸುರತ, ಸುರತಕ್ಕೆ ಫಲ ಪುತ್ರಪ್ರಾಪ್ತಿ, ಪುತ್ರಪ್ರಾಪ್ತಿಗೆ ಫಲ ಮುದ್ದಾಟ. ಈ ಫಲ ಸುಖವೆ ದೊರೆಯದೆಂದ ಮೇಲೆ ಇತರ ಅಲ್ಪ ಸುಖಗಳಿಂದೇನು ಲಾಭ? ೪೩. ಮಕ್ಕಳಿಲ್ಲದ ಐಶ್ವರ್ಯ, ತಂಪಿಲ್ಲದ ನೀರು, ಪ್ರಣಯವಿಲ್ಲದ ಕೂಟ, ವ್ರತಾಚರಣೆಯಿಲ್ಲದ ಜ್ಞಾನ, ಮೃದುವಾದ ಪಾದವಿನ್ಯಾಸವಿಲ್ಲದ ನರ್ತನ–ಇವು ಎಂದಾದರೂ ಶೋಭಿಸುವುವೆ? ಆದುದರಿಂದ ೪೪. ಜೊಲ್ಲು ಬಾಯನ್ನು ಮುದ್ದಿಸಿ, ಮಕ್ಕಳ ಮುದ್ದಾಟವನ್ನು ಕಣ್ತುಂಬ ನೋಡಿ, ಅವುಗಳ ಅತಿ ಕೋಮಲವಾದ ದೇಹಗಳನ್ನು ಆಲಿಂಗಿಸಿಕೊಂಡು, ಮಧುರವಾದ ತೊದಲು ಮಾತುಗಳನ್ನು ಅಕ್ಕರೆಯಿಂದ ಆಲಿಸಿ, ನೆತ್ತಿಯನ್ನು ಆಘ್ರಾಣಿಸಿ, ಆನಂದದಿಂದ ಸಕಲ ಇಂದ್ರಿಯಗಳನ್ನೂ ತುಂಬಿಸಿ ತೃಪ್ತಿಹೊಂದುವವರು ಎಂತಹ ಭಾಗ್ಯವಂತರು!"

ಎಂದು ಪುತ್ರದೋಹಳಾಕುಲೀಕೃತಮನೋವೃತ್ತಿಯಾಗಿ ಮತ್ತಮಿಂತೆಂದಳ್-

ಮಱಿಯದೆ ಬೆಚ್ಚುನೀರೆಱಿದು ತೊಟ್ಟಿಲೊಳಿಟ್ಟು ಬಸಿರ್ಗೆ ಚೀನದೊ ।
ರ್ಚಱಿಗನೆ ತಂದು ಸೂನುಗೊಲವಿಂ ಸೊಡರ್ವಕ್ಕಿನ ಬೊಟ್ಟನಿಟ್ಟು ತೂ ॥
ಪಿಱಿದು ಪಲರ್ಮೆಯುಂ ಪರಸಿ ಸೋಗಿಲೊಳಿಟ್ಟುರೆ ನಿಚ್ಚನಿಚ್ಚಮ ।
ಟ್ಕಱಿನೊಳೆ ಮೆಚ್ಚನಿತ್ತು ತನಿವರ್ಚುವ ಸೈಪೆನಗೆಂದು ಸಾರ್ಗುಮೋ ॥ ೪೫

ಅರಸಂ ಕರತಳತಾಡನ ।
ಪುರಸ್ಸರಂ ದೇವ ಬನ್ನಿಮೆಂದೊಲವಿಂದೊ ॥
ಡ್ಡಿರೆ ಕೈಯನೊಲ್ಲದೆನ್ನಯ ।
ಕೊರಲಂ ತಟ್ಟೈಪ ತನಯನೆಂದಾದಪನೋ ॥ ೪೬

ಎತ್ತಿದೊಡೆನ್ನಂಗದೊಳೊಗೆ ।
ದೆತ್ತುವ ಪುಳಕಕ್ಕೆ ಸೌಕುಮಾರ್ಯದಿನೇವೈ ॥
ಸುತ್ತುಂ ಕೈಯಿಂದಿಟಿಯ ।
ಲ್ಕುತ್ತವಳಿಪ ಸುತನ ಪರಿಯನೆಂದೀಕ್ಷಿಪೆನೋ ॥ ೪೭

ಮಾಂಗಾಯ್ ಕದಪಂ ಚುಂಬಿಸೆ ।
ಪೊಂಗವಡಿಕೆ ನೊಸಲೊಳಲೆಯೆ ಗೆಜ್ಜೆಗಳುಲಿಪಂ ॥
ಸಂಗಳಿಸೆ ಚಲನದೊಳ್ ಭವ ।
ನಾಂಗಣದೊಳ್ ಕಂದನೆಂದು ದಟ್ಟಡಿಯಿಡುವಂ ॥ ೪೮

ಹೀಗೆಂದು ಮಕ್ಕಳಾಗಬೇಕೆಂಬ ಹಂಬಲದಿಂದ ಕೊರಗುತ್ತ ಮತ್ತು ಹೀಗೆಂದಳು- ೪೫. ಮರೆಯುದೆ ಎರೆದು ತೊಟ್ಟಿಲಲ್ಲಿ ಮಲಗಿಸಿ, ಹೊಟ್ಟೆಗೆ ಸೀರೆಯ ಸೆರಗನ್ನು ಮರೆಮಾಡಿ ಮಗುವಿಗೆ ಪ್ರೀತಿಯಿಂದ ಕಾಡಿಗೆ ಬೊಟ್ಟನ್ನಿಟ್ಟು, ಹಲವಾರು ಬಗೆಯಿಂದ ಹರಸಿ, ಉಡಿಯಲ್ಲಿಟ್ಟುಕೊಂಡು ನಿತ್ಯ ನಿತ್ಯ ಅಕ್ಕರೆಯಿಂದ ಮೆಚ್ಚುಗೊಟ್ಟು (ಹಾಲುಣಿಸಿ) ಸಂತೋಷದಿಂದ ಮೈಯುಬ್ಬುವ ಭಾಗ್ಯ ನನಗೆಂದು ಬಂದೀತು! ೪೬. ಅರಸನು ಚಪ್ಪಳೆಯಿಕ್ಕುತ್ತ "ದೇವ, ಇತ್ತ ಬನ್ನಿ" ಎಂದು ಪ್ರೇಮದಿಂದ ಕೈನೀಡಿರಲಾಗಿ ಆತನ ಕೈಯನ್ನೊಲ್ಲದೆ ನನ್ನ ಕೊರಳಿಗೇ ತೆಕ್ಕೆ ಬೀಳುವ ಮಗುವನ್ನು ನಾನು ಎಂದು ಹೆಡೆದೇನು? ೪೭. ಮಗುವನ್ನು ಎತ್ತಿಕೊಂಡೊಡನೆ ನನ್ನ ಮೈತುಂಬ ಏಳುವ ರೋಮಾಂಚಗಳಿಗೆ, ಸಹಿಸಲಾರದೆ ಸುಕುಮಾರವಾದ ಚಡಪಡಿಸಿ ಕೈಯಿಂದ ಇಳಿಯಲು ಆತುರಪಡುವ ಮಗನ ಈ ಸ್ಥಿತಿಯನ್ನು ನಾನು ಎಂದು ನೋಡಿಯೇನು? ೪೮. ಮಾಗಾಯಿ ಕೆನ್ನೆಯುನ್ನು ಮುತ್ತಿಡುತ್ತಿರಲಾಗಿ, ಹೊನ್ನ ಕವಡಿಕೆ ಹಣೆಯ ಮೇಲೆ ಅಲುಗಾಡುತ್ತಿರಲಾಗಿ ಕಾಲಗೆಜ್ಜೆಗಳು ಗಿಲಗಿಲಗುಟ್ಟುತ್ತಿರಲಾಗಿ ನನ್ನ

ಅಂಜನಕರ್ಬುರಕಾಯಂ।
ರಂಜಿತಕರಪುಷ್ಕರಂ ರದದ್ವಿತಯಯುತಂ॥
ಗುಂಜತ್ಪದಾಂದುಕಂ ನವ।
ಕುಂಜರಮೆನೆ ತನಯನೆಂದು ಕಣ್ಬೊಲನಪ್ಪಂ॥ ೪೯

ನಂದನನುತ್ಸಂಗದೊಳಿ।
ರ್ದೊಂದ್ಯೆರಡೊಂಬತೆಂದು ತೊದಳಿಸೆವಿನಮೋ॥
ರೊಂದನೆ ಕುಡುವೆರಲಿಂದಮ।
ದೆಂದೆಣಿಸುಗುಮೆನ್ನ ಕೊರಲ ಹಾರದ ಮುತ್ತಂ॥ ೫೦

ಎಂದು ಭಾವೆ ಭಾವಿತನೂಭವಾನುಕ್ರಮಪ್ರಭವಭಾವಂಗಳಂ ಭಾವಿಸಿ ಪಲುಂಬಿ ಪಂಬಲಿಸಿಯುಂ, ಅಪರಿಪೂರ್ಣಮನೋರಥೆಯ ಮಪ್ಪುದಱಿಂ ಸಮಸ್ತಸನಾಭಿಸಂಯುಕ್ತೆಯಾಗಿಯುಮೇಕಾಕಿನಿಯಂತೆಯುಂ, ರಾಜಸದನಸಂಸ್ಥೆಯಾಗಿಯುಂ ಶೂನ್ಯಾರಣ್ಯಸಂಸ್ಥೆಯಂತೆಯುಂ, ಸಾಮ್ರಾಜ್ಯಲೀಲಾಸಮೇತೆಯಾಗಿಯುಂ ವಿಪನ್ನಿಪೀಡಿತೆಯಂತೆಯುಂ, ಪತಿಪ್ರಸಾದಭೂಮಿಯಾಗಿಯುಂ ಅನಾಥೆಯಂತೆಯುಂ, ಸನ್ನಿಹಿತದೈವೆಯಾಗಿಯುಮದೈವೆಯಂತೆಯುಂ, ಕುಮುದದಳದೀರ್ಘಲೋಚನೆಯಾಗಿಯುಮಂಧೆಯಂತೆಯುಂ, ಪವಿತ್ರಪಾರ್ಥಿವಕುಲಪ್ರಸೂತೆಯಾಗಿಯುಂ ಅಜನ್ಮೆಯಂತೆಯುಂ, ತನ್ನಂ ಬಗೆದುಬ್ಬೆಗದಿನಲ್ಲಿಂ

ಕಂದನು ಅಂಗಳಲ್ಲಿ ದಟ್ಟಡಿಯಿಡುವ ದಿನ ಎಂದು ಬಂದೀತು? ೪೯. ಕಾಡಿಗೆಯನ್ನು (ತಿಕ್ಕಿಕೊಂಡು) ಕಪ್ಪಾದ ಮೈಯುಳ್ಳವನಾಗಿ, "ರಂಜಿತಕರಪುಷ್ಕರ" (ಕಮಲದಂತೆ ಶೋಭಿಸುವ ಕೈಗಳುಳ್ಳವನು. ೨. ಸುಂದರವಾದ ಸೊಂಡಿಲ ತುದಿಯುಳ್ಳದು) ನಾಗಿ, "ರದ ದ್ವಿತಿಯ" (೧. ಎರಡೇ ಹಲ್ಲು ಮೂಡಿರುವ ಮಗು. ೨. ಕೋರೆಗಳುಳ್ಳದು) ನಾಗಿ, "ಗುಂಜತ್ಪದಾಂದುಕ" (೧. ಕಾಲಲ್ಲಿ ಜಣಜಣಿಸುವ ಅಂದುಗೆಯುಳ್ಳವನು. ೨. ಕಾಲಿಗೆ ಜಣಜಣಗುಟ್ಟುವ ಸರಪಳಿಯುಳ್ಳದು) ನಾಗಿ ಆನೆಯಂತೆ ಮಗನು ಎಂದು ನನ್ನ ಕಣ್ತುಂಬುವನು ! ೫೦. ಮಗನು ನನ್ನ ತೊಡೆಯ ಮೇಲೆ ಕುಳಿತುಕೊಂಡು ತನ್ನ ಬೆರಳನ್ನು ಬಾಗಿಸಿ "ಒಂದು, ಎರಡು, ಒಂಬತ್ತು, ಐದು" ಎಂದು ತೊದಲು ನುಡಿಯುತ್ತ ನನ್ನ ಕೊರಳಹಾರದ ಮುತ್ತುಗಳನ್ನು ಎಣಿಸುವುದು ಎಂದು?" ವ॥ ಈ ಮೇರೆಗೆ ಆ ವನಿತೆ ಹುಟ್ಟಲಿರುವ ಮಗುವಿನ ಹಾಗು ಆತನಿಂದಾಗುವ ಭಾವಗಳನ್ನು ಅನುಕ್ರಮವಾಗಿ ಊಹಿಸುತ್ತ, ಹಂಬಲಿಸಿ ಹಾರೈಸುತ್ತ, ತನ್ನ ಬಯಕೆ ನೆರವೇರದೆ ಇದ್ದುದರಿಂದ, ಸಂಬಂಧಿಕರೆಲ್ಲರಿಂದ ಕೂಡಿಕೊಂಡಿದ್ದರೂ ಒಬ್ಬಂಟಿಗಳಾದಂತೆಯೂ, ಅರಮನೆಯಲ್ಲಿದ್ದರೂ ಶೂನ್ಯವಾದ ಕಾಡಿನಲ್ಲಿದ್ದಂತೆಯೂ, ಸಾಮ್ರಾಜ್ಯವೈಭವ ಸಂಪನ್ನೆಯಾಗಿದ್ದರೂ, ಬಡತನದಿಂದ ಬಳಲುವಂತೆಯೂ, ಪತಿಯ ಅನುಗ್ರಹಕ್ಕೇ ಪಾತ್ರಳಾಗಿದ್ದರೂ ಅನಾಥೆಯಂತೆಯೂ, ಸುದೈವ ಸಹಿತಳಾಗಿಯೂ ದುರ್ದೈವಿಯಂತೆಯೂ, ತಾವರೆಯೆಸಳಂತೆ ವಿಶಾಲವಾದ ಕಣ್ಣುಗಳುಳ್ಳವಳಾದರೂ ಕುರುಡಿಯಂತೆಯೂ,

ತಳರ್ದು ನಿಜನಿವಾಸಕ್ಕೆ ವಂದು ಮುಂದಣ ಮೌಕ್ತಿಕಮಂಡಪದ ನಡುವಣ ಮರಕತಪರ್ಯಂಕದೊಳ ವಿರಳಾಶ್ರುಬಿಂದುಸಂದೋಹದಂತುರಿತಪಕ್ಷ್ಮಮಾಲಾಲುಳಿತನೇತ್ರೆಯುಂ, ಕಪೋಲಮೂಲಕೀಲಿತ ವಾಮಕರಶತಪತ್ರೆಯುಂ, ಆಕ್ರಾಂತಚಿಂತಾಭರಸ್ತಿಮಿತಗಾತ್ರೆಯುಂ, ಆಶ್ವಾಸನಪರಾಂತಃಪುರವೃದ್ಧಾಂಗನಾ ನಿಷೇವ್ಯಮಾಣೆಯುಂ, ಮ್ಲಾನವದನಸಖೀಪ್ರಕರಪರಿಚಾರಿಕಾಪರಿಷ್ಕೃತೆಯುಂ, ದೂರದೂರೋಪವಿಷ್ಟ ಮೂಕಮುಖಕುಬ್ಜ ವಾಮನಕಿರಾತವರ್ಷಧರಕಂಚುಕಿಪ್ರಪಂಚೆಯುಮಾಗಿರ್ಪಿನೆಗಂ,

ಪಲವು ವಿಧಂಗಳಿಂ ತುಱುಗಿ ಮೆಟ್ಟುವ ವಾರುವದೊಂದು ವಲ್ಗನ ।
ಕ್ಕಲುಗೆ ಕದಂಪಿನೊಳ್ ಕನಕಕುಂಡಲವಡ್ಡತರಕ್ಕೆ ವಂದು ನಿ ।
ಶ್ಚಲಮೆನಿಪಂಘ್ರಿಯೊಂದೆಸೆಯೆ ಸನ್ನೆಯೆ ಸನ್ನೆಯನೊಂದುಮಾಡೆ ಭೂ ।
ತಲಪತಿ ಬಂದನುಚ್ಛ್ರಿತಸಿತಾತಪವಾರಣಪುಷ್ಪಿತಾಂಬರಂ ॥ ೫೧

ಅಂತು ವೈಹಾಳಿಯಿಂದರಸಿಯ ಮನೆಗೆ ಬಂದುಚ್ಚೈಶ್ರವದಿನವನಿಗವತರಿಸುವ ಮಹೇಂದ್ರನಂತೆ ತುಂಗತುರಂಗದಿಂದಮಿೞಿತಂದು ಅಂತಃಪುರಪ್ರವೇಶೋಚಿತಪರಿಜನಂ ಜನಪನೊಳಪೊಕ್ಕು,

ಭೋಂಕನೆ ಕಂಡಿನಿವಿರಿದಾ ।
ತಂಕಮನರಸಿಯ ಮನಕ್ಕೆ ಮಾಡಿದರಾರೆಂ ॥
ದುಂ ಕಾಣೆನಿನಿತನೆಂದೆರ್ದೆ ।
ಶಂಕಿಸೆ ನವಸೇವಕಂಬೊಲೊಯ್ಯನೆ ಸಾರ್ದಂ ॥ ೫೨

ಪವಿತ್ರವಾದ ಕ್ಷತ್ರಿಯ ಕುಲದಲ್ಲಿ ಹುಟ್ಟಿದವಳಾದರೂ ಹೀನ ಕುಲದವಳಂತೆಯೂ, ತನ್ನನ್ನು ಭಾವಿಸಿಕೊಂಡಳು. ಮತ್ತು ಅಲ್ಲಿಂದ ಹೊರಟು ತನ್ನ ಮಾಡಕ್ಕೆ ಬಂದು ಮುಂದಿನ ಮುತ್ತಿನ ಮಂಟಪದ ನಡುವಿನ ಪಚ್ಚೆಯ ಮಂಚದಲ್ಲಿ ಎಡೆಬಿಡದೆ ಸುರಿವ ಕಂಬನಿಗಳಲ್ಲಿ ಕಣ್ಣು ತೇಲಾಡುತ್ತಿರಲಾಗಿ, ಎಡಗೈ ಮೇಲೆ ಕೆನ್ನೆಯೂರಿಕೊಂಡು, ಚಿಂತಾಪರವಶಳಾಗಿ ಮೈಮರೆತು ಕುಳಿತಳು. ಅವಳನ್ನು ಸಮಾಧಾನಪಡಿಸುತ್ತ ರಾಣಿವಾಸದ ಹಿರಿಯ ಹೆಂಗಳೆಯರು ಸುತ್ತಲೂ ಆರೈಕೆ ಮಾಡುತ್ತಿದ್ದರು ; ಆಕೆಯ ಸಖಿಯರು ಮ್ಲಾನಮುಖರಾಗಿ ಆಕೆಯನ್ನು ಬಳಸಿಕೊಂಡರು ; ಕುಬ್ಜ, ವಾಮನ, ಕಿರಾತ, ನಪುಂಸಕ, ಕಂಚುಕಿ ಮೊದಲಾದವರೆಲ್ಲ ಮೂಕರಾಗಿ ದೂರದೂರದಲ್ಲಿ ಕುಳಿತುಬಿಟ್ಟರು. ಹೀಗಿರುವ ಸಮಯದಲ್ಲಿ – ೫೧. ಹಲವು ಬಗೆಯ ನಡಗೆಗಳಿಂದ ಸಾಗುವ ಕುದುರೆಯ ಗತಿಯಿಂದ, ಕರ್ಣಕುಂಡಲಗಳು ಕೆನ್ನೆಯ ಮೇಲೆ ತೂಗಾಡುತ್ತಿರಲಾಗಿ, ಅಡ್ಡವಾಗಿ ತಂದು ಸ್ಥಿರವಾಗಿ ನಿಲ್ಲಿಸಿದ ಪಾದ ಶೋಭಿಸುತ್ತಿರಲಾಗಿ, ಪುಷ್ಪವಸ್ತ್ರಭೂಷಣನಾಗಿ, ತಲೆಯ ಮೇಲೆ ಕೊಡೆ ಹಿಡಿಸಿಕೊಂಡು ಭೂಪತಿ ಬಂದನು ವ॥ ಹಾಗೆ ಕುದುರೆಯೇರಿ ಅರಸಿಯ ಮಾಡಕ್ಕೆ ಬಂದು ಉಚ್ಚೈಶ್ರವದಿಂದ ಇಳಿಯುವ ದೇವೇಂದ್ರನಂತೆ ತನ್ನ ದಿವ್ಯವಾದ ಕುದುರೆಯಿಂದಿಳಿದು, ರಾಣಿವಾಸಪ್ರವೇಶಕ್ಕೆ ಯೋಗ್ಯರಾದ ಪರಿಜನದೊಂದಿಗೆ ಅರಸನು ಒಳಗೆ ಬಂದು–– ೫೨. ಒಮ್ಮೆಲೆ (ಅರಸಿಯ ಸ್ಥಿತಿಯನ್ನು) ಕಂಡು "ರಾಣಿಗೆ ಇಷ್ಟೊಂದು ವ್ಯಥೆಯನ್ನುಂಟು ಮಾಡಿದವರು ಯಾರು? ಇಂತಹ ಅವಸ್ಥೆಯನ್ನು ನಾನೆಂದೂ ಕಂಡವನಲ್ಲ"

ಅಂತೆಯ್ದೆವಂದು ಪರ್ಯಂಕತಲದೊಳ್ ಕುಳ್ಳಿರ್ದು,

ಜಗದಧಿಪತಿ ಸಮದುಃಖಿಂ ।
ಮೃಗನಯನೆಯ ಮನದ ಖೇದಮಂ ಪಚ್ಚುಗೊಳಲ್ ॥
ಬಗೆದಂತಾಕುಳಚಿತ್ತಂ ।
ದೃಗಂಬುವಂ ತೊಡೆದು ಮೆಲ್ಲನಂದಿಂತೆಂದಂ ॥ ೫೩

ಕರತಲಕಾಂತಿಯಿಂ ವದನಚಂದ್ರಮನೊಳ್ ನವಸಂಧ್ಯರಾಗಮಂ ।
ಸುರಿವ ನಿರಂಜನಾಶ್ರುಕಣದಿಂ ಕುಚದೊಳ್ ಪೊಸಮುತ್ತಿನಾರಮಂ ॥
ಸರಳತರೋಷ್ಣನಿಶ್ವಸಿತಮಾರುತನಿಂದೆ ನಿಜೋತ್ತರೀಯದೊಳ್ ।
ತರಳತೆಯಂ ನಿಯೋಜಿಪ ನೆಗಟ್ತೆಗೆ ಕಾರಣಮೇನೊ ಕಾಮಿನೀ ॥ ೫೪

ಅದಲ್ಲದೆಯುಂ,

ಚರಣಾಂಗುಲಿಗಳ್ ಮಣಿನೂ ।
ಪುರಂಗಳಿಂದೆಸೆದು ತೋಱುತಿರ್ದಪುವಿಲ್ಲೇ ॥
ಕರಸಿ ಪರಾಗಾರುಣಷ ।
ಟ್ಚರಣಂಗಳ್ ನೆಲಸದಬ್ಜದೆಸೆವೆಸಳ್ಗಳವೋಲ್ ॥ ೫೫

ಮನಸಿಜಫಣಿವಲ್ಮೀಕಮಿ ।
ದೆನಿಪ ನಿತಂಬದೊಳುದಗ್ರಮಣಿರಶನಾರ ॥
ಶ್ಮಿನಿಕರಸುರಚಾಪಂ ಪೊ ।
ಣ್ಮೆ ನಿಮಿರ್ಚದಿದೇಕೆ ಮನ್ಮನಶ್ಮಿಖಿಗೊಲವಂ ॥ ೫೬

ಎಂದುಕೊಳ್ಳುತ್ತ ಹೊಸಸೇವಕನಂತೆ ಅವಳ ಬಳಿಗೆ ಮೆತ್ತಗೆ ಬಂದನು. ವ॥ ಹಾಗೆ ಬಂದು ಮಂಚದ ಮೇಲೆ ಕುಳಿತುಕೊಂಡು, ೫೩. ಜಗತ್ಪತಿಯಾದ ಆತನು ಸಮದುಃಖಿಯಾಗಿ ಆ ಮೃಗಾಕ್ಷಿಯ ಮನೋವ್ಯಥೆಯಲ್ಲಿ ಪಾಲುಗೊಳ್ಳಲು ಬಯಸಿ, ಮನನೊಂದು ಅವಳ ಕಣ್ಣೀರನ್ನು ಒರಸಿ ಮೆಲ್ಲನೆ ಹೀಗೆಂದನು– ೫೪. ಅಂಗೈಯ ಕಾಂತಿಯಿಂದ ಮುಖಚಂದ್ರನಲ್ಲಿ ಹೊಸ ಸಂಧ್ಯಾಕಾಲದ ಕೆಂಬಣ್ಣವನ್ನು ಸುರಿಯುತ್ತಿರುವ ಕಾಡಿಗೆಯಿಲ್ಲದ ಕಂಬನಿಗಳಿಂದ ಸ್ತನಗಳಿಗೆ ಹೊಸ ಮುತ್ತಿನ ಹಾರವನ್ನು, ಬಿಸಿಯಾಗಿ ಬಿಡುತ್ತಿರುವ ನಿಟ್ಟುಸಿರಿನಿಂದ ಸೆರಗಿನಲ್ಲಿ ಅಲುಗಾಟವನ್ನು ಉಂಟುಮಾಡುವ ಈ ನಿನ್ನ ಕ್ರಿಯೆಗೆ ಕಾರಣವೇನು ? ಅದಲ್ಲದೆ – ೫೫. ಪುಷ್ಪಪರಾಗದಿಂದ ಕೆಂಪೊರೆದ ಕಾಲುಗಳುಳ್ಳ ದುಂಬಿಗಳು ನೆಲಸದೆ ಇರುವ ತಾವರೆಯ ಎಸಳುಗಳಂತೆ ನಿನ್ನ ಪಾದದ ಬೆರಳುಗಳು ರತ್ನನೂಪುರಗಳಿಂದ ಶೋಭಿಸದೆ ಇವೆಯಲ್ಲ– ಏಕೆ ? ೫೬. ಮನ್ಮಥಸರ್ಪಕ್ಕೆ ಹುತ್ತದಂತಿರುವ ನಿನ್ನ ನಿತಂಬದಲ್ಲಿ ಶ್ರೇಷ್ಠವಾದ ರತ್ನಕಟಿಸೂತ್ರದ ಇಂದ್ರಧನು ಹೊಮ್ಮಿ ನನ್ನ ಮನೋಮಯೂರನಿಗೆ ಸಂತೋಷವನ್ನು ಉಂಟು

ಕಾಮನ ಕೃತಕಾದ್ರಿಗಳೆನಿ ।
ಪೀ ಮೊಲೆಗಳ ಮೇಲೆ ವಿಮಲನಿರ್ಝರಪೂರೋ ॥
ದ್ದಾಮತೆಯಂ ನವಮೌಕ್ತಿಕ ।
ದಾಮದಿನೊಡರಿಸದ ತೆಱನಿದೇನಿಂದುಮುಖೀ ॥ ೫೭

ಸರಸೀರುಹನಾಳಮನಾ ।
ವರಿಸಿದ ಶೈವಾಲಮೆನೆ ಹರಿದ್ರತ್ನಮಯ ॥
ಸ್ಫುರಿತಕಟಕಂ ಪ್ರಕೋಷ್ಠದೊ ।
ಳರುಣಾಧರೆ ತೊಳಗಿ ಬೆಳಗದಿರ್ಪುದಿದೇನೋ ॥ ೫೮

ಎರಡುಂ ಕರ್ಣದೊಳಂ ಪೊಳೆ ।
ವ ರತ್ನಮಯಪತ್ರದಿಂದಮಿನಬಿಂಬಯುಗಾಂ ॥
ತರಿತಮೆನಿಪಿಂದುಬಿಂಬದ ।
ಪರಿಜಂ ಪರಿಭವಿಸದೇಕೆ ನಿನ್ನಯ ವದನಂ ॥ ೫೯

ತರದೆ ಪೆಱ ತನ್ನ ಕಱೆಯಂ ।
ಶಿರದೊಳ್ ತಾಳ್ದಿರ್ದುದೆನಿಸೆ ನಿಜನಿಟಲಂ ತ ॥
ಳ್ತುರುಳಿಗುರುಳ್ಗಳನಾತ್ಮೋ ।
ಪರಿದೇಶದೊಳಾಂತುದಿಲ್ಲದೇಕಾರಣದಿಂ ॥ ೬೦

ಮದನಪರಿವಾದಿನೀನಾ ।
ದದಿನಗ್ಗಳಮೆನಿಪ ನಿನ್ನ ನುಣ್ನುಡಿ ಪೊಱಪೊ ॥
ಣ್ಮದೊಡೇಕಾಯತ್ತಮದಾ ।
ಗದೆ ಕಳರವಲಕ್ಷ್ಮಿ ಸಮದಕೋಕಿಲಕುಲದೊಳ್ ॥ ೬೧

ಮಾಡಬೇಕಲ್ಲವೆ ? ಅದೇಕೆ ಇಲ್ಲವಾಗಿದೆ ? ೫೭. ಕಾಮನ ಕ್ರೀಡಾಶೈಲಗಳೆನಿಸುವ ಈ ನಿನ್ನ ಮೊಲೆಗಳ ಮೇಲೆ ತಿಳಿನೀರಿನ ಬೆಟ್ಟದ ತೊರೆಯಂತೆ ಮುತ್ತಿನಹಾರವು ಶೋಭೆಯನ್ನೊದಗಿಸದೆ ಇರುವುದಕ್ಕೆ ಕಾರಣವೇನು? ೫೮. ತಾವರೆಯ ನಾಳವನ್ನಾವರಿಸಿದ ಹಾವಸೆಯೆಂಬಂತೆ ಹಸಿರು ರತ್ನಗಳಿಂದ ತುಂಬಿದ ಕಡಗವು ನಿನ್ನ ಮುಂಗೈಯಲ್ಲೇಕೆ ಉಜ್ವಲವಾಗಿ ಶೋಭಿಸುತ್ತಿಲ್ಲ? ೫೯. ಎರಡೂ ಕಿವಿಗಳಲ್ಲಿ ಹೊಳೆಯುವ ರತ್ನಖಚಿತ ಆಭರಣಗಳಿಂದ, ಎರಡು ಸೂರ್ಯಗಳ ನಡುವಿನ ಚಂದ್ರನಂತೆ ನಿನ್ನ ಮುಖವೇಕೆ ಸೌಂದರ್ಯವನ್ನು ತಾಳದಿದೆ ? ೬೦. ಚಂದ್ರನು ತನ್ನ ಕರೆಯನ್ನು ತಲೆಯಲ್ಲಿಟ್ಟುಕೊಂಡನೊ ಏನೊ ಎಂಬಂತೆ, ನಿನ್ನ ಹಣೆ ಸುಳಿಗುರುಳನ್ನು ತನ್ನ ಮೇಲ್ಭಾಗದಲ್ಲೇಕೆ ಇರಿಸಿಕೊಂಡಿಲ್ಲ? ೬೧. ಮನ್ಮಥವೀಣೆಗಿಂತಲೂ ಶ್ರೇಷ್ಠವೆನಿಸುವ ನಿನ್ನ ಮಧುರವಾಣಿಯು ಹೊರಹೊಮ್ಮದಿದ್ದರೆ, ಕಲಧ್ವನಿಯ ಸಂಪತ್ತೆಲ್ಲವೂ ಮತ್ತೆ ಕೋಗಿಲೆಗಳಿಗೆ ಮೀಸಲಾಗಿ

ಆಮ್ಮಱಿದೊರ್ಮೆಯುಂ ನಿನಗೆಯಪ್ರಿಯಮಂ ನೆಗಱೆಂ ಮನಕ್ಕಿನಿ ।
ತ್ತುಮ್ಮಱಿಮಾದುದಾರಿನಿದು ದೇವಿ ನಿವೇದಿಪುದೆಂದು ಜೀವಿತೇ ॥
ಶಮ್ಮಿಗೆ ತನ್ನನಾಗ್ರಹಿಸೆ ಸೊಲ್ಲಿಸಲೊಲ್ಲದೆ ನಾಣ್ಚಿ ನೋಡಿದಳ್ ।
ತಾಮ್ಮನದನ್ನಳಪ್ಪ ಕಳಭಾಷಿಣಿಯಂ ನಯನತ್ರಿಭಾಗದಿಂ ॥ ೬೨

ಅಂತಶ್ರುಮಿಶ್ರಕಟಾಕ್ಷದಿಂದೀಕ್ಷಿಸುವುದುಮೆಲ್ಲಮಾಕೆಯ ಮನಮನಱಿದು ಪುತ್ರದೋಹಳಕಾರಣಮಂ ಧಾರಿಣೀಪತಿಗೆ ಸವಿಸ್ತರಂ ಬಿನ್ನವಿಸೆ ಕೇಳ್ದರಸನುಂ ತತ್ಕ್ಷಣೋಪಗತತನೂಭವಾಲಾಭ ಚಿಂತಾಪಾರತಂತ್ರತೆಯಿಂ ಮ್ಲಾನಮನನುಂ ದೀನಾನನನುಮಾಗಿ

॥ ಪೃಥ್ವೀವೃತ್ತಂ ॥

ಸರೋಜಸಖನಿಲ್ಲದಂಬರಮನಾದಮುದ್ದ್ಯೋತಿಸಲ್ ।
ಸರೋಜರಿಪುವಂಚೆಯಿಲ್ಲದ ಸರೋವರೋದ್ದೇಶಮಂ ॥
ಸರೋರುಹಮೆ ಭೂಷಿಸಲ್ನೆರೆಗುಮನ್ಯನಾವಂ ದಿಟಂ ।
ತೆರಳ್ಚುಗುಮಪತ್ಯಮಿಲ್ಲದ ಕುಲಕ್ಕೆ ಸಂಪತ್ತಿಯಂ ॥ ೬೩

ಎಂದು ತನ್ನೊಳ್ ಬಗೆದು ಬೞಿಯಮರಸನರಸಿಯಂ ಸಂತೈಸಲೆಂದಿಂತೆಂದಂ :-

ಇದು ದೈವಸಾಧ್ಯಮೆನಿಸಿ ।
ರ್ದುದಱಿಕೊಳ್ ನಿನಗಿನಿತು ದೇವಿ ಬಗೆವೊಡಯುಕ್ತಂ ॥
ಹೃದಯಶರೀರೇಂದ್ರಿಯಶೋ ।
ಷದಾಯಕಂ ತಾನೆನಿಪ್ಪ ಶೋಕೋದ್ರೇಕಂ ॥ ೬೪

ಸೇರಿ ಹೋಗುವುದಿಲ್ಲವೆ ? ೬೨. ನಾನು ಮರೆತು ಕೂಡ ನಿನಗೆ ಪ್ರಿಯವಲ್ಲದುದನ್ನು ಮಾಡುವವನಲ್ಲ. ನಿನ್ನ ಮನಸ್ಸಿಗೆ ಇಷ್ಟೊಂದು ಆತಂಕವಾದುದು ಯಾರಿಂದ ? ದೇವಿ, ಹೇಳು. ಈ ಮೇರೆಗೆ ಹೃದಯೇಶ್ವರನು ತನ್ನನ್ನು ಒತ್ತಾಯಪಡಿಸಲಾಗಿ, ಮಾತಾಡಲೊಲ್ಲದೆ, ನಾಚಿ ಆಕೆ ತನ್ನ ಮನಃಪ್ರಿಯೆಯಾದ ಕಳಭಾಷಿಣಿಯತ್ತ ಕಡೆಗಣ್ಣು ಹಾಯಿಸಿದಳು. ವ॥ ಹಾಗೆ ಕಂಬನಿದುಂಬಿದ ಕಣ್ಣಿಂದ ಆಕೆ ನೋಡಲಾಗಿ, ಕಳಭಾಷಿಣಿಯು ಆಕೆಯ ಅಭಿಪ್ರಾಯವನ್ನೆಲ್ಲ ಅರಿತುಕೊಂಡು, ಪುತ್ರದೋಹಳ (ಮಕ್ಕಳನ್ನು ಪಡೆಯಬೇಕೆಂಬ ಹಂಬಲು) ಕಾರಣವನ್ನು ರಾಜನಿಗೆ ವಿಸ್ತಾರವಾಗಿ ಬಿನ್ನವಿಸಿದಳು. ಅದನ್ನು ಕೇಳಿ ಅರಸನು ಮಕ್ಕಳಿಲ್ಲದ ಕೊರಗನ್ನು ಆ ಕ್ಷಣದಲ್ಲಿ ಮನಸ್ಸಿಗೆ ತಂದುಕೊಂಡು ಚಿಂತೆಯಿಂದ ಮುಖದಲ್ಲಿ ಮ್ಲಾನತೆಯನ್ನೂ ದೀನತೆಯನ್ನೂ ಹೊಂದಿದವನಾಗಿ -- ೬೩. ಸೂರ್ಯನಿಲ್ಲದ ಆಕಾಶವನ್ನು ಚಂದ್ರನು ಬೆಳಗಬಲ್ಲನು ; ಹಂಸವಿಲ್ಲದ ಕೊಳವನ್ನು ತಾವರೆಯು ಬೆಳಗಬಲ್ಲುದು. ಮಕ್ಕಳಿಲ್ಲದವರಿಗೆ ಸಂಪತ್ತಿಯನ್ನು ತಂದು ಒದಗಿಸುವವರು ಇನ್ನಾರು?" ವ॥ ಹೀಗೆಂದು ತನ್ನಲ್ಲಿಯೆ ಯೋಚಿಸಿ, ಬಳಿಕ ಅರಸಿಯನ್ನು ಸಮಾಧಾನಪಡಿಸಲು ಹೀಗೆ ನುಡಿದನು -- ೬೪. ದೇವಿ ಇದು ದೈವಸಾಧ್ಯವಾದುದು. ಹೃದಯವನ್ನೂ ಶರೀರವನ್ನೂ ಒಣಗಿಸಿಬಿಡುವಂತಹ ಇಂತಹ ಶೋಕೋದ್ರೇಕಕ್ಕೆ ನೀನು ಒಳಗಾಗುವುದು

ಈ ತೆಱದಿಂದೆ ನೀನಿರೆ ಸಮಂತೆನಗಂ ದೊರಕೊಳ್ಗುಮಲ್ತೆ ದುಃ ।
ಖಾತಿಶಯಂ ಬಟಿಕ್ಕದುವೆ ಮಾಳ್ಕುಮಶೇಷಜನಕ್ಕಮಯ್ದೆ ಚಂ ॥
ತಾತರಳತ್ವಮಂ ತೊಱೆವುದೆಂತದಱಿಂ ತರಳಾಯತಾಕ್ಷಿ ನಿ ।
ರ್ಹೇತುಕಮಪ್ಪ ಖೇದಮನಿದಲ್ತು ಕೃಪಾವತಿಯರ್ಗೆ ಚೇಷ್ಟಿತಂ ॥ ೬೫

ಪರಿಣಾಮವಶದೆ ಜನ್ಮಾಂ ।
ತರದೊಳ್ ಶುಭಮಶುಭಮೆಂಬ ಕರ್ಮಂಗಳೊಳಾರ್ ॥
ದೊರೆಕೊಳಿಸಿದರಾವುದನಾ ।
ದೊರೆಯದೆ ಫಲಮಕ್ಕುಮವರ್ಗೆ ಪೆಱತಾದಪುದೇ ॥ ೬೬

ಅದಱೆನಿಷ್ಟಾನಿಷ್ಟಂಗಳಾತ್ಮ ಶುಭಾಶುಭಕರ್ಮಾಯತ್ತಂಗಳದಱಿಕೊಳ್ ಮನೋರಾಗಕ್ಕಂ ಹೃದ್ರೋಗಕ್ಕಮವಕಾಶಮಿಲ್ಲ. ಅದಲ್ಲದೆಯುಂ,

ಆರಯೆ ದುರ್ಘಟವೆನ್ನ ಮ ।
ನೋರಥವೆಂದಲಸಗಮನೆ ಮನದೊಳ್ ಪಿರಿದುಂ ॥
ದೂರಿಸಲದೇಕೆ ಬಿದಿ ಕೈ ।
ವಾರಿಸಿದೊಡೆ ತೀರದಿರ್ಪುದಾವುದುಮುಂಟೇ ॥ ೬೭

ಅಂತುಮಲ್ಲದೆಯುಂ,

ವಿಷ್ಟಪಮೊರ್ಮೆಯುಂ ತಮಗೆ ಹಸ್ತತಲಾಮಲಕಂಬೊಲೆಯ್ದೆ ವಿ ।
ಸ್ಪಷ್ಟಮೆನಿಪ್ಪ ಬೋಧಯುತರಿಂ ತಿಳಿದಿಲ್ಲಿಗೆ ತಕ್ಕುದೇನುಮಂ ॥
ಚೇಷ್ಟಿಪಮನ್ನೆಗಂ ಮನದೊಳುಮ್ಮಳಿಸಲ್ಕಣಮಾಗದೆಂದು ವಾ ।
ಗ್ವೃಷ್ಟಿಯಿನಾ ಲತಾಂಗಿಯ ಮನೋಲತೆಗಿತ್ತನಪೂರ್ವತುಷ್ಟಿಯಂ ॥ ೬೮

ತರವಲ್ಲ. ೬೫. ನೀನು ಹೀಗೆ ಇದ್ದರೆ ನನಗೂ ಅತ್ಯಂತ ದುಃಖವಾಗುವುದಿಲ್ಲವೆ ? ಸಮಸ್ತ ಜನಕ್ಕೂ ಅದೇ ಚಿಂತೆಯನ್ನುಂಟು ಮಾಡುವುದು. ಆದುದರಿಂದ, ಚಂಚಲಾಕ್ಷಿಯೆ, ನಿಷ್ಕಾರಣವಾದ ಈ ಖೇದವನ್ನು ತೊರೆದುಬಿಡು. ದಯಾವತಿಯರೆನಿಸಿದವರಿಗೆ ಈ ಬಗೆಯ ನಡತೆ ಸಲ್ಲದು. ೬೬. ಜನ್ಮಾಂತರಗಳಲ್ಲಿ ಪುಣ್ಯಪಾಪಗಳನ್ನು ಯಾರು ಯಾರು ಮಾಡಿರುವರೊ ಅವರವರಿಗೆ ಆಯಾ ಕರ್ಮದ ಮೇರೆಗೆ ಶುಭಾಶುಭ ಫಲಗಳು ದೊರೆಯುತ್ತವಲ್ಲದೆ, ಬೇರೆಯೇನೂ ಆಗದು. ವ॥ ಅದರಿಂದ ಇಷ್ಟವಾಗಲಿ ಅನಿಷ್ಟವಾಗಲಿ ನಮಗೆ ಒದಗುವ ಫಲಗಳಿಗೆ ನಮ್ಮ ಪೂರ್ವಜನ್ಮಗಳ ಪುಣ್ಯ–ಪಾಪಗಳೆ ಕಾರಣಗಳು. ಮನಸ್ಸು ಹಿಗ್ಗುವುದಕ್ಕಾಗಲಿ, ಚಿಂತಿಸಿ ಕೊರಗುವುದಕ್ಕಾಗಲಿ ಅವಕಾಶವಿಲ್ಲ. ಅದಲ್ಲದೆ– ೬೭. ವಿಚಾರ ಮಾಡಿ ನೋಡಿದರೆ, ನಿನ್ನ ಬಯಕೆ ನೆರವೇರುವುದು ದುಃಸ್ಸಾಧ್ಯವೆಂದೇಕೆ ಕೊರಗುವೆ? ದೈವ ಸಹಾಯಕ್ಕೆ ಬಂದರೆ ಕೈಗೂಡದೆ ಇರುವುದಾವುದು? ಅಷ್ಟೆ ಅಲ್ಲದೆ – ೬೮. ಈ ಜಗತ್ತು ಅಂಗೈನಲ್ಲಿಯಂತೆ ನಮಗೆ ವಶವಾಗಿದೆ. ಇಲ್ಲಿ ನಾವು ಹೇಗೆ ನಡೆದುಕೊಂಡರೆ ಸರಿಯೆಂಬುದನ್ನು ತಿಳಿದವರಿಂದ ಕೇಳಿ ಸುಸ್ಪಷ್ಟವಾಗಿ ಅರಿತುಕೊಂಡು ನಡೆಯೋಣ. ಮನಸ್ಸಿನಲ್ಲಿ ಎಷ್ಟೆಷ್ಟೂ ಕೊರಗಕೂಡದು". ಹೀಗೆಂದು

ಅಂತುಮೆಂತಾನುಮಾ ಕಾಂತೆಯಂ ಸಂತೈಸಿ ಕೆಲವು ದಿವಸಂ ಸಲುತ್ತುಮಿರೆಯಿರೆ,

ಪೌರವನಾಂತರಾಳದೊಳಗೊರ್ಮೆ ವಸಂತವಿಲಾಸಕೌತಕ ।
ಪ್ರೇರಿತಮಾನಸಂ ತೊಳಗುತಿರ್ದು ವಿಯತ್ತಳದಿಂದ ತಮಾಲಧಾ ॥
ತ್ರೀರುಹಮೂಲಭೂತಲಕೆ ವರ್ಪನನಾಗಳನಂತಸಂಜ್ಞನಂ ॥
ಚಾರಣಯೋಗಿಯಂ ನೃಪತಿ ಕಂಡನಖಂಡಸುಖೈಕಭಾಗಿಯಂ ॥ ೧೯

ಕಂಡೆಯ್ದೆವೋಗಿ,

ಆತುಳತಪಶ್ರೀಕರನನನು ।
ನ್ನತರಾಜ್ಯಶ್ರೀಕನವಧಿದರ್ಶನನಂ ಸ ॥
ನ್ನುತಶುದ್ಧದರ್ಶನಂ ತ ।
ದ್ವ್ರತಿಪತಿಯಂ ನೃಪತಿ ಭಕ್ತಿಯಿಂ ವಂದಿಸಿದಂ ॥ ೭೦

ಆಗಳ್,

ಮಿಸಿಸಿದಪಂ ಕರುಣಾಮೃತ ।
ವಿಸರದಿನವನಿಪನನೆಂಬವೋಲ್ ಕಾಯೋತ್ಸ ॥
ರ್ಗಸಮಾಪ್ತಿಯೊಳೀಕ್ಷಣರುಚಿ ।
ಪಸರಿಸೆ ಮುನಿ ನೋಡಿ ಪರಸಿದಂ ಮೃದುರವದಿಂ ॥ ೭೧

ಅಂತು ಪರಿಸಿ ಕುಳ್ಳಿರೆ, ತನ್ಮುನೀಂದ್ರಪಾದಪಾರ್ಶ್ವದೊಳ್ ಮುಕುಳಿತಕರಸರೋಜನುಂ ಪ್ರಶ್ರಯಾವನತಶಿರಸ್ಸರೋಜನುಮಾಗಿ ಕುಳ್ಳಿರ್ದು

ತನ್ನ ಸಂತೈಕೆಯ ನುಡಿಗಳೆಂಬ ಮಳೆಯಿಂದ ಆ ಬಳ್ಳಿ ಮೈಯ ಕಾಂತೆಯ ಮನೋಲತೆಗೆ ಅಪೂರ್ವವಾದ ತೃಪ್ತಿಯನ್ನುಂಟು ಮಾಡಿದನು. ವ॥ ಹೀಗೆ ಆ ಕಾಂತೆಯನ್ನು ಸಮಾಧಾನಪಡಿಸಿದ ಮೇಲೆ ಕೆಲವು ದಿನಗಳು ಕಳೆಯಲಾಗಿ--- ೬೯. ವಸಂತಮಾಸದಲ್ಲಿ ವಿನೋದಾರ್ಥವಾಗಿ ಪುರವನದಲ್ಲಿ ಸಂಚರಿಸುತ್ತಿರುವಾಗ, ಅನಂತಜ್ಞಾನಿಯೂ ಅಖಂಡಸುಖಿಯೂ ಆದ ಚಾರಣಮುನಿಯೊಬ್ಬನು ಆಕಾಶಮಾರ್ಗದಿಂದ ತಮಾಲವೃಕ್ಷದ ಕೆಳಗಿನ ಭೂಮಿಗೆ ಇಳಿದು ಬರುವುದನ್ನು ಅರಸನು ಕಂಡನು. ವ॥ ಹಾಗೆ ಕಂಡೊಡನೆ ಬಳಿಗೆ ಹೋಗಿ- ೭೦. ಅವಧಿಜ್ಞಾನಿಯಾದ ಆ ತಪೋನಿಧಿಯನ್ನು ಶುದ್ಧಚಿತ್ತನಾಗಿ ವಂದಿಸಿದನು. ಆಗ - ೭೧. ತನ್ನ ಕಾಯೋತ್ಸರ್ಗವನ್ನು ಮುಗಿಸಿದ ಮುನಿಯು, ಅರಸನನ್ನು ತನ್ನ ದಯಾಮೃತರಸದಿಂದ ಮೀಯಿಸುವನೊ ಏನೊ ಎಂಬಂತೆ ಕಣ್ಣುಗಳ ಬೆಳಕನ್ನು ಹರಡುತ್ತ, ನೋಡಿ ಮೃದುಧ್ವನಿಯಿಂದ ಆಶೀರ್ವದಿಸಿದನು. ವ॥ ಹಾಗೆ ಆಶೀರ್ವಾದ ಮಾಡಿ ಕುಳಿತುಕೊಳ್ಳಲಾಗಿ, ಆ ಮುನಿಪತಿಯ ಪಾದಸನ್ನಿಧಿಯಲ್ಲಿಯೆ ಕೈಮುಗಿದು ಕೊಂಡು, ಗೌರವಪೂರ್ವಕವಾಗಿ ತಲೆಬಾಗಿ ಕುಳಿತುಕೊಂಡು- ೭೨. ಅರಸನು ಮುನೀಂದ್ರನ ಅಡಿದಾವರೆಗಳಿಗೆ ತನ್ನ ಹಸನಾದ ಹಲ್ಲುಗಳ ಕಾಂತಿಯಿಂದ ಗಂಧಲೇಪನ

ಅರಸಂ ಮುನಿಪತಿಪಾದಾಂ ॥
ಬುರುಹಕ್ಕತಿವಿಶದದಶನರುಚಿನಿಚಯಪರಂ ॥
ಪರೆಯಿಂ ಚಂದನಚರ್ಚಾ ।
ವಿರಚನೆಯಂ ಮಾಬ್ಬಿ ತೆಱದಿನಂದಿಂತೆಂದಂ ॥ ೭೨

ಅಱಿನಂ ಪೆರ್ಚಿಸುವಱಿವಂ ।
ನೆಱಪುವ ದುಃಖಮನದಿರ್ಪುವುತ್ಸವಮಂ ಕ ॥
ಣ್ದೆಱೆಯಿಪ ನಿಮ್ಮಯ ದರ್ಶನ ।
ಕಱಿದೆಂ ಕಾರಣಮನೆನ್ನ ಪುಣ್ಯಮೆ ಪೆಱತೇಂ ॥ ೭೩

ಭಾವಿಭವದ್ಭೂತಮೆನಿ ।
ಪ್ಪಾ ವಸ್ತುಗೆ ನೀಂ ಪ್ರಮಾಣಮಱಿಯಿಪುದದಱಿಂ ॥
ದೇವ ಭವಸ್ಥಿತಿಯಂ ಪರಿ ।
ಭಾವಿಸಿಯುಂ ವಿರತಿಭಾವಮೆನಗಾಗದುದೇಂ ॥ ೭೪

ಎನೆ ಮುನಿಪತಿ ತನ್ಮಹಿಪತಿ ।
ಮನೋಗತಮನಱಿದು ಬಱಿಕಮಿಂತೆಂದಂ ನಂ ॥
ದನಲಾಭವಾಂಛೆ ನಿನಗು ।
ಳ್ಳಿನೆಗಂ ಸಮನಿಸದಣಂ ವಿರತಿಪರಿಣಾಮಂ ॥ ೭೫

ಸುತಜನ್ಮಕ್ಕಂ ಪಿರಿದುಂ ।
ಪ್ರತಿಬೋಧಕಮೊಂದು ಪೂರ್ವಜನ್ಮಾಂತರಸಂ ॥
ಗತಮುಂಟದನುಸಿರ್ದಪ್ಪೆಂ ।
ಕ್ಷಿತಿಪತಿ ಕೇಳ್ ಮುನ್ನೆ ನಿನ್ನ ವಧುವೀ ಪುರದೊಳ್ ॥ ೭೬

ಮಾಡುತ್ತಿರುವನೋ ಏನೊ ಎಂಬಂತೆ ಹೀಗೆ ನುಡಿದನು– ೭೩. "ಧರ್ಮವನ್ನು ವೃದ್ಧಿಪಡಿಸುವ, ಅರಿವನ್ನು ಒದಗಿಸುವ, ದುಃಖವನ್ನು ನಿವಾರಿಸುವ, ಸಂತೋಷವನ್ನು ಉಂಟುಮಾಡುವ ನಿಮ್ಮನ್ನು ಕಾಣುವ ಭಾಗ್ಯಕ್ಕೆ ನನ್ನ ಪುಣ್ಯವೇ ಕಾರಣವಲ್ಲದೆ ಬೇರೇನು ಅಲ್ಲ ಇದನ್ನು ನಾನು ಅರಿತೆನು. ೭೪. ಹಿಂದಿನ, ಇಂದಿನ, ಮುಂದಿನ ಎಲ್ಲವನ್ನೂ ತಿಳಿಸುವುದರಲ್ಲಿ ಪ್ರಮಾಣಪುರುಷರು ನೀವು. ಆದುದರಿಂದ ದೇವ, ನನಗೆ ಈ ಒಂದು ವಿಷಯವನ್ನು ತಿಳಿಸಿಹೇಳಿ ಏನೆಂದರೆ –ಸಂಸಾರಸ್ಥಿತಿಯನ್ನು ನೋಡಿ ತಿಳಿದವನಾಗಿದ್ದರೂ ನನಗೆ ವೈರಾಗ್ಯಭಾವವೇಕೆ ಇನ್ನೂ ಆಗಿಲ್ಲ?" ೭೫. ಈ ಮಾತನ್ನು ಕೇಳಿ ಮುನೀಂದ್ರನು ಆ ಅರಸನ ಅಭಿಪ್ರಾಯವನ್ನರಿತು ಬಳಿಕ ಹೀಗೆಂದನು– "ಮಗನನ್ನು ಪಡೆಯಬೇಕೆಂಬ ಬಯಕೆ ನಿನಗೆ ಇರುವವರೆಗೆ ವೈರಾಗ್ಯಭಾವ ಹುಟ್ಟಲಾರದು. ೭೬. ನಿನಗೆ ಮಗನಾಗುವುದನ್ನು ತಿಳಿಸು ವುದಕ್ಕೆ ಪೂರ್ವಜನ್ಮದ ಕಥೆಯೊಂದುಂಟು ಅದನ್ನು ಹೇಳುವೆನು ಕೇಳು. ಈಗ ನಿನ್ನ ಹೆಂಡತಿಯಾಗಿರುವವಳು ಪೂರ್ವಜನ್ಮದಲ್ಲಿ ಇದೇ ಊರಿನೊಳಗೆ –

ದೇವಾಂಗದನೆಂಬ ವಣಿಗ್ವರಂಗಂ ಆತನ ಕುಟುಂಬಿನಿ ಶ್ರೀನಿತಂಬಿನಿಗಂ ಸುನಂದೆಯೆಂಬ ಮಗಳಾಗಿ ಪುಟ್ಟಿ ನಿರ್ಭರಪ್ರಥಮಗರ್ಭಭಾರಪರಿಕ್ಲೇಶಾಯಾಸಿತಸ್ವಾಂತೆಯುಮಂಗವೈರಾಸ್ಯಾಕ್ರಾಂತೆಯು ಮಾಗಿರ್ದ ವೈಶ್ಯಕಾಂತೆಯನೊರ್ವಳಂ ಕಂಡು,

ಮನದೊಳತಿಭೀತಿಯಂ ಭೋಂ ।
ಕನೆ ತಳೆದಾ ಭೀರುವಾವ ಜನ್ಮದೊಳಂ ಮ ॥
ತ್ತೆನಗೆ ನವವಯಸದೊಳ್ ತಾಂ ।
ಜನಿಯಿಸದಿರ್ಕೆಮ ವಿಷಾದಗರ್ಭಂ ಗರ್ಭಂ ॥ ೭೭

ಎಂದು ನಿಧಾನಂಗೆಯ್ದು ನಿಜಾಯುರ್ವ್ಯಪಾಯದೊಳಾಚರಿತಾಣುವ್ರತಫಲದಿಂದಂ

ಸೌಧರ್ಮದೊಳಮರತ್ವ ।
ಶ್ರೀಧಾರಿಣಿಯಾಗಿ ಮತ್ತೆ ಬಂದೀಗಳ್ ದು ॥
ರ್ಯೋಧನಸುತೆಯುಂ ಭವದವ ।
ರೋಧಜನಾಗ್ರಣಿಯುಮಾದಳದುಕಾರಣದಿಂ ॥ ೭೮

ಇನ್ನೆವರಂ ಸುತಜನ್ಮವಿ ।
ಪನ್ನತೆ ಭವದೀಯಸತಿಯೊಳಾಯ್ತುದಯಿಸಿದ ॥
ಪ್ಪಂ ನಿಜಕುಲದೀಪಕನಿ ।
ನ್ನುನ್ನತಮತಿ ರಿಪುಲತಾಲವಿತ್ರಂ ಪುತ್ರಂ ॥ ೭೯

ವ॥ ದೇವಾಂಗದನೆಂಬ ವರ್ತಕನಿಗೂ ಆತನ ಹೆಂಡತಿ ಶ್ರೀನಿತಂಬಿನಿಗೂ ಸುನಂದೆಯೆಂಬ ಮಗಳಾಗಿದ್ದಳು. ಒಂದು ದಿನ, ತುಂಬ ಬೆಳೆದ ಮೊದಲ ಬಸಿರಿನ ಭಾರದಿಂದ ಆಯಾಸಗೊಂಡು, ಮೈಯೆಲ್ಲ ಜಡವಾಗಿ ಬಳಲುತ್ತಿರುವ ವೈಶ್ಯಸ್ತ್ರೀಯೊಬ್ಬಳನ್ನು ಕಂಡಳು. ೭೭. ಕೂಡಲೆ ಅತಿಯಾಗಿ ಭಯಹುಟ್ಟಿದ ಆಕೆ "ಯಾವ ಜನ್ಮದಲ್ಲಿಯಾದರೂ ನನಗೆ ನವಯೌವನ ಕಾಲದಲ್ಲಿ ಇಂತಹ ದುಃಖಕರವಾದ ಗರ್ಭವುಂಟಾಗದಿರಲಿ" ವ॥ ಎಂದು ನಿಧಾನ ಮಾಡಿ, ತನ್ನ ಆಯುಷ್ಯಾಂತದಲ್ಲಿ, ಅಣುವ್ರತಾಚರಣೆಯ ಫಲವಾಗಿ– ೭೮. ಸೌಧರ್ಮಕಲ್ಪದಲ್ಲಿ ದೇವತ್ವ ಸುಖವನ್ನು ಅನುಭವಿಸಿದಳು. ತರುವಾಯ ಇಲ್ಲಿಗೆ ಬಂದು ದುರ್ಯೋಧನನ ಕುಮಾರಿಯಾಗಿ, ನಿನ್ನ ಪಟ್ಟಮಹಿಷಿಯಾಗಿರುವಳು. ಆದುದರಿಂದ – ೭೯. ಈವರೆಗೆ ನಿನ್ನ ಹೆಂಡತಿಗೆ ಮಕ್ಕಳಿಲ್ಲದಾಯಿತು. ಆದರೆ ಇನ್ನು ಮೇಲೆ ನಿನ್ನ ಕುಲವನ್ನು ಬೆಳಗುವ, ಶ್ರೇಷ್ಠಮತಿಯಾದ, ಶತ್ರುವಿನಾಶಕನಾದ ಮಗನು ನಿಮಗೆ

ಆತನ ಭುಜಶಿಖರದೊಳೀ ।
ಭೂತಳಮಂ ನಿಱಿಸಿ ಬೞಿಕ ನೀಂ ಜಿನದೀಕ್ಷಾ ॥
ಪೂತತನುವಾಗಿ ಮೋಕ್ಷಮ ।
ರಾತಿಥಿಯಾದಪ್ಪೆ ಘಾತ್ಯಘಾತಿಚ್ಯುತಿಯಿಂ ॥ ೮೦

ಎಂದಾ ಮಹರ್ಷಿ ಪೇೞೆ ಕೇಳ್ದು ನಿಜಚಿಂತಾಪಹಾರಿಚಂದನನಂದನನಭ್ಯುದಯಮವಶ್ಯಮೆಂದು ಆನಂದಮನೆಯ್ದಿ ಬೀೞ್ಕೊಂಡರಮನೆಗೆ ವಂದು ಅರಸಿಗಮಱಿಪಿ ಬೞಿಯಮಿರ್ವರುಂ ಮನದೆ ಸಮೀಹಿತಾವಾಪ್ತಿನಿಮಿತ್ತಂ ಸಕಲಜಗದೇಕಕಲ್ಪವೃಕ್ಷಮಪ್ಪ ಧರ್ಮಮನೊಡರ್ಚಲುದ್ಯುಕ್ತರಾಗಿ

ಪಗಲುಂ ಬೆಳ್ದಿಂಗಳಂ ಬೀಱುವ ಸೊದೆವೆಳಗಂ ತಾಳ್ದು ನೀಳ್ಪಿಂದಮೆತ್ತಂ ।
ಮುಗಿಲಂ ಪೊತ್ತಿರ್ಪ ಕೂಟಪ್ರಕರದಿನಿವು ದಲ್ ಜೈನಜನ್ಮಾಭಿಷೇಕ ॥
ಸ್ಥಗಿತಕ್ಷೀರಾಂಬುಫೇನಪ್ರಕರದೆ ಕಡುವೆಳ್ಪೇಱಿದಿಂದ್ರಾದ್ರಿಯೆಂಬ ।
ನ್ನೆಗಮೊಪ್ಪಂಬೆತ್ತುವಂ ಮಾಡಿಸಿದರತುಲಚೈತ್ಯಂಗಳಂ ಭಕ್ತಿಯಿಂದಂ ॥ ೮೧

ಅದಲ್ಲದೆಯುಂ

ದಾನಕ್ಕುತ್ತಮಪಾತ್ರಸಂತತಿ ಮಹಾಪೂಜಾವಿಧಾನಕ್ಕೆ ಚೈ ।
ತ್ಯಾನೀಕಂ ನಿಜಶೀಲವರ್ತನೆಗೆ ಸಾಗಾರವ್ರತವ್ರಾತಮ ॥
ನ್ಯೂನೋಪಕ್ರಮಿತೋಪವಾಸವಿಸರಕ್ಕಾಪುಣ್ಯತಿಥ್ಯುತ್ಕರಂ ।
ತಾನೆಯ್ದಿತ್ತಣಮಿಲ್ಲದೇಂ ನಿರತರೋ ಭೂಕಾಂತನುಂ ಕಾಂತೆಯುಂ ॥ ೮೨

ಹುಟ್ಟುವನು. ೮೦. ಆತನ ತೋಳುಗಳ ಮೇಲೆ ಈ ರಾಜ್ಯಭಾರವನ್ನು ಇರಿಸಿದ ಬಳಿಕ ನೀನು ಜಿನದೀಕ್ಷೆಯಿಂದ ಪವಿತ್ರದೇಹನಾಗಿ, ಘಾತಿ–ಅಘಾತಿಕರ್ಮಗಳನ್ನು ನಾಶಮಾಡಿಕೊಂಡು ಮೋಕ್ಷವನ್ನು ಪಡೆಯುವೆ". ವ॥ ಹೀಗೆಂದು ಆ ಮಹಾಯತಿ ಹೇಳಲಾಗಿ ಕೇಳಿ, ತನ್ನ ಚಿಂತೆಯೆಂಬ ತಾಪಕ್ಕೆ ಮಗನು ಶ್ರೀಗಂಧಲೇಪನವಾಗಿ ಅದನ್ನು ನಿಶ್ಚಿತವಾಗಿ ಪರಿಹರಿಸುವನೆಂದು ತಿಳಿದು ಆನಂದಿತನಾಗಿ, ಯತಿಯನ್ನು ಬೀಳ್ಕೊಂಡು ಅರಮನೆಗೆ ಬಂದು ಅರಸಿಗೂ ಈ ವಿಷಯವನ್ನು ತಿಳಿಸಿದನು. ಬಳಿಕ ಆ ದಂಪತಿಗಳಿಬ್ಬರೂ ತಮ್ಮ ಮನದ ಬಯಕೆ ನೆರವೇರಲೆಂದು ಸಮಸ್ತಜಗತ್ತಿಗೆ ಏಕೈಕ ಕಲ್ಪವೃಕ್ಷವಾದ ಧರ್ಮಕಾರ್ಯವನ್ನು ಆಚರಿಸಬೇಕೆಂದು ತೊಡಗಿ ೮೧. ಹಗಲು ಹೊತ್ತಿನಲ್ಲಿಯೂ ಬೆಳ್ದಿಂಗಳನ್ನು ಬೀರುವ (ಸುಣ್ಣದ ಲೇಪದಿಂದ) ಧವಳಕಾಂತಿಯನ್ನು ಹೊಂದಿ, ಉನ್ನತಿಯಿಂದ ಆಕಾಶವನ್ನೆ ಹೊತ್ತು ನಿಂತಿವೆಯೊ ಏನೊ ಎಂಬಂತಿರುವ ಶಿಖರಗಳಿಂದ ಶೋಭಿಸುತ್ತ ಅರ್ಹಂತನ ಜನ್ಮಾಭಿಷೇಕದಲ್ಲಿ ಹೊಮ್ಮಿದ ಕ್ಷೀರದ ನೊರೆಯಿಂದ ಕಡುಬಿಳಿದಾಗಿರುವ ಮೇರುಪರ್ವತವೆಂಬಂತೆ ಚೆಲುವಾಗಿರುವ ಅಸದೃಶವಾದ ಬಸದಿಗಳನ್ನು ಭಕ್ತಿಯಿಂದ ಕಟ್ಟಿಸಿದರು. ಅದಲ್ಲದೆ– ೮೨. ಅವರು ಮಾಡುವ ದಾನಕ್ಕೆ ಉತ್ತಮ ಪಾತ್ರರು ಒದಗಿಬಂದರು; ಮಹಪೂಜೆಗಳಿಗೆ ಹಲವಾರು ಜಿನ ಚೈತ್ಯಗಳಾದವು; ಚಾರಿತ್ರ ನಿರ್ವಹಣೆಗೆ ಶ್ರಾವಕ ವ್ರತಗಳು ಹಲವಾರು ಒದಗಿದುವು; ಪರಿಶುದ್ಧವಾದ ಉಪವಾಸಗಳಿಗೆ ಅನೇಕಾನೇಕ

ಅಂತನೇಕಸತ್ಕ್ರಿಯಾನಿಯತರಾಗಿರ್ಪಿನಮೊಂದುದೆವಸಂ

ಋತುಸಮಯೋಪಯುಕ್ತೆ ಸತಿ ನೂತ್ನವಸಂತಋತುಪ್ರಮೋದಸಂ।
ಗತವನಲಕ್ಷ್ಮಿಯಂತೆ ನಯನೋತ್ಸವಮಂ ದಯೆಗೆಯ್ದು ಮಾಧವೀ ॥
ವಿತತಿಯ ಬಳ್ಳಳಪ್ಪ ಸೆಳೆಯಂ ಪಿಡಿದಂಗಜಲಾಸ್ಯಲೀಲೆಯಂ।
ಕ್ಷಿತಿಪನ ಚಿತ್ತವೃತ್ತಿಗುಪದೇಶಿಪ ಲಾಸಕಿಯಂತೆ ತೋಱಿದಳ್ ॥ ೮೩

ಅನಂತರಂ ಚತುರ್ಥಸ್ನಾನದೊಳ್ ಧವಳಮಂಗಳಾಲಂಕೃತೆಯಾಗಿ ನಿಜಮನಃಪ್ರಿಯನ ಸೂೞ್ಗೆ ವಂದು ಸುಖದಿನಿರೆ

ಅಮಳೋತ್ಪಳಿನಿಗೆ ಮಧ್ಯದೊ।
ಳಮೃತದ್ಯುತಿಬಿಂಬಭಾಸುರಪ್ರತಿಬಿಂಬಂ ॥
ಸಮನಿಪವೋಲುದರದೊಳಾ।
ರಮಣಿಗೆ ನೆಲಸಿತ್ತು ಹರ್ಷಗರ್ಭಂ ಗರ್ಭಂ ॥

ಅಂತು ನೆಲಸಿ,

॥ ಮಾಲಿನೀವೃತ್ತಂ ॥

ಮಸುಳೆ ತಿವಳಿ ಕರ್ಪಂ ಬಾಸೆ ಪೆತ್ತೊಪ್ಪೆ ಲೀಲಾ।
ಲಸಿಕೆ ಮನದೊಳಾದಂ ಪುಟ್ಟೆ ನೇರ್ವಟ್ಟ ಕೊರ್ವಿಂ ॥
ಬಸಿಱಿಸೆಯೆ ಮೊಗಂ ಬೆಳ್ಪೇಱಿ ಪೀನಸ್ತನಾಗ್ರ।
ಕ್ಕಸಿತಲಸಿತಭಾವಂ ಪೆರ್ಚೆ ಪೆರ್ಚಿತ್ತು ಗರ್ಭಂ ॥ ೮೫

ಪುಣ್ಯತಿಥಿಗಳಾದವು; ಹೀಗೆ ಆ ರಾಜನೂ ರಾಣಿಯೂ ಎಡೆಬಿಡದೆ ಧರ್ಮಕಾರ್ಯಗಳಲ್ಲಿ ನಿರತರಾಗಿದ್ದರು. ವ॥ ಹೀಗೆ ಹಲವಾರು ಸತ್ಕರ್ಮಗಳನ್ನು ಅನುಷ್ಠಾನ ಮಾಡುತ್ತಿರಲಾಗಿ ಒಂದು ದಿವಸ– ೮೩. ಋತುಮತಿಯಾದ ಆ ಕಾಂತೆ ನವವಸಂತನ ಆಗಮನದಿಂದ ಶೋಭಿಸುವ ವನಲಕ್ಷ್ಮಿಯಂತೆ, ನೇತ್ರಾನಂದಕರಳಾಗಿ, ಮಾಧವೀ ಲತೆಯ ತೆಳುವಾದ ಸೆಳೆಯನ್ನು ಕೈಯಲ್ಲಿ ಹಿಡಿದುಕೊಂಡು, ಮನ್ಮಥಲಾಸ್ಯವನ್ನು ಅರಸನ ಮನಸ್ಸಿಗೆ ವಿವರಿಸುವ ನೃತ್ಯಗಾತಿಯಂತೆ ಕಂಗೊಳಿಸಿದಳು. ವ॥ ಬಳಿಕ ನಾಲ್ಕನೆಯ ದಿನ ಎರೆದುಕೊಂಡು ಬಿಳಿಯ ಮಂಗಳವಸ್ತ್ರಾದಿಗಳಿಂದ ಅಲಂಕರಿಸಿಕೊಂಡು ತನ್ನ ಮನೋವಲ್ಲಭನ ಸಹವಾಸಕ್ಕೆ ಬಂದಳು. ೮೪. ಪರಿಶುದ್ಧವಾದ ನೈದಿಲೆಗೊಳದ ಮಧ್ಯದಲ್ಲಿ ಚಂದ್ರನ ಸುಂದರವಾದ ಪ್ರತಿಬಿಂಬವು ಮೂಡುವಂತೆ, ಆ ರಮಣಿಯ ಹೊಟ್ಟೆಯಲ್ಲಿ ಸಂತೋಷಕರವಾದ ಗರ್ಭ ನೆಲಸಿತು. ವ॥ ಹಾಗೆ ನೆಲೆಸಲಾಗಿ – ೮೫. ಉದರದ ಮೇಲಿನ ತ್ರಿವಳಿಗಳು ಮಾಯವಾದುವು; ಬಾಸೆ ಕಪ್ಪಾಗಿ ಶೋಭಿಸಿತು; ಆನಂದವೂ ಆಲಸ್ಯವೂ ಮನದಲ್ಲಿ ಹೆಚ್ಚಾದವು; ಹಿರಿದಾಗಿ ಬಸಿರು ಶೋಭಿಸಿತು; ಮುಖವು ಬಿಳುಪೇರಿತು; ಕೊಬ್ಬಿದ ಮೊಲೆಗಳ ತೊಟ್ಟುಗಳು ಚೆಲುವಾದ ಕಪ್ಪುವರ್ಣವನ್ನು ತಾಳಿದುವು; ಹೀಗೆ

ಮತ್ತಂ

ಸ್ತನಮುಖದಿಂ ಪೋದಪ್ಪುದು ।
ತನೂಭವಾಲಾಭಚಿಂತೆಯಿಂ ಕಂದಿದ ತ ॥
ದ್ವನಿತೆಯ ಹೃದಯದ ಕಾಳಿಕೆ ।
ಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್ ॥ ೮೬

ಉದರದೊಳಿರ್ದ ತನೂಜನ ।
ಸದಮಲಗುಣಗಣದ ಭರದೆ ಸಮನಿಸಿದತ್ತೆಂ ॥
ಬುದನೆನಿಸಿ ಚಂದ್ರಸುಂದರ ।
ವದನೆಯ ಮೃದುಗತಿಯೊಳೊಂದಿದತ್ತತಿಮಾಂದ್ಯಂ ॥ ೮೭

ಅಸಿತಪಯೋಧರಾನನಮುಪಾತ್ತವಿಜೃಂಭಮುಖಾಂಬುಜಂ ಸಮು ।
ಲ್ಲಸಿತಜಡತ್ವಮುಚ್ಛ್ವಸಿತಬಂಧುರಗಂಧಸಮೀರಣಂ ಮನ ॥
ಕ್ಕೆಸೆದುದು ಕಾರುಮಂ ಪೊಸಬಸಂತನುಮಂ ನೆಱೆ ಪೋಲ್ತು ನಾಡೆ ಭಾ ।
ವಿಸೆ ಮದವನ್ಮರಾಳಮೃದುಯಾನೆಯ ನಿರ್ಭರಗರ್ಭವಿಭ್ರಮಂ ॥ ೮೮

ತರಳಮನಾಂತ ಚಂದನದಳಂಕೃತಿ ಭಾವಮನಾಂತ ವಸ್ತುವಿ ।
ಸ್ತರಕೃತಿ ತತ್ವನಿಶ್ಚಯಮನಾಂತ ಲಸನ್ನುತಿ ಗಂಧಮಂ ಮನೋ ॥
ಹರತೆಯಿನಾಂತ ಚಂದನಘನದ್ರುತಿಯೆಂಬ ವಿಲಾಸಮಂ ಸಮು ।
ದ್ಧರಿಪವೊಲಾಂತಳಾ ಸತಿ ಮಹೋತ್ಸವಗರ್ಭಮನಂದು ಗರ್ಭಮಂ ॥ ೮೯

ಅವಳ ಗರ್ಭ ಅಧಿಕವಾಗಿ ವೃದ್ಧಿಗೊಂಡಿತು. ಮತ್ತು– ೮೬. ಮಕ್ಕಳಿಲ್ಲದ ಚಿಂತೆಯಿಂದ ಕೊರಗುತ್ತಿದ್ದ ಮನಸ್ಸಿನ ಕಂದೆಲ್ಲವೂ ಮೊಲೆತೊಟ್ಟುಗಳ ಮೂಲಕ ಹೊರಬಿದ್ದು ಹೋಗುತ್ತಿದೆಯೊ ಏನೋ ಎಂಬಂತೆ ಸ್ತನಾಗ್ರದ ಕಪ್ಪು ಶೋಭಿಸಿತು. ೮೭. ಹೊಟ್ಟೆಯೊಳಗಿರುವ ಮಗನ ಅನೇಕ ಸದ್ಗುಣಗಳ ಭಾರದಿಂದಲೊ ಏನೊ ಎಂಬಂತೆ ಆ ಚಂದ್ರಮುಖಿಯ ನಡಗೆ ತೀರ ಮೆತ್ತಗಾಯಿತು. ೮೮. "ಅಸಿತ ಪಯೋಧರಾನನ"ವೂ (೧. ಕಪ್ಪಾದ ಮೊಲೆತೊಟ್ಟು, ೨. ಕಪ್ಪಾದ ಮಳೆಮೋಡ), "ಉಪಾತ್ತವಿಜೃಂಭ ಮುಖಾಂಬುಜ"ವೂ (೧. ಆಗುಳಿಸುತ್ತಿರುವ ಚೆಲುವಾದ ಮುಖ. ೨. ಅರಳಿದ ತಾವರೆ ಹೂಗಳು), "ಸಮುಲ್ಲಸಿತಜಡತ್ವ"ವೂ (೧. ಉಲ್ಲಾಸದಿಂದ ಕೂಡಿದ ಆಲಸ್ಯ. ೨. ಹೆಚ್ಚಾದ ತೇವ), "ಉಚ್ಛ್ವಸಿತಗಂಧ ಸಮೀರಣ"ವೂ (೧. ಮುಖದಿಂದ ಹೊಮ್ಮುವ ಸುಗಂಧಮಯವಾದ ಉಸಿರು. ೨. ಸುಗಂಧ ಬೆರೆತು ಬೀಸುತ್ತಿರುವ ಗಾಳಿ) ಕೂಡಿಕೊಂಡು ಮದವೇರಿದ ಹಂಸದಂತೆ ಮೆದುವಾಗಿ ಹೆಜ್ಜೆಯಿಡುವ ಆ ತುಂಬುಬಸಿರಿಯ ಗರ್ಭವು ಮಳೆಗಾಲವನ್ನೂ, ವಸಂತಕಾಲವನ್ನೂ ಏಕಕಾಲದಲ್ಲಿ ಹೋಲುತ್ತ ಶೋಭಿಸಿತು. ೮೯. ಶೋಭೆಯನ್ನೊಡಗೊಂಡ ಶ್ರೀಗಂಧದ ಅಲಂಕಾರದಂತೆ, ಭಾವಸಂಪತ್ತಿಯಿಂದೊಡಗೂಡಿದ ವಸ್ತುಕಕಾವ್ಯದಂತೆ. ತತ್ತ್ವಸಾರವನ್ನಳವಡಿಸಿಕೊಂಡ ಪೂಜ್ಯಸ್ತೋತ್ರದಂತೆ, ಪರಿಮಳವನ್ನು ಮನೋಹರವಾಗಿ ಹೊಂದಿರುವ ಚಂದನದ ಸಾಂದ್ರವಾದ ದ್ರವದಂತೆ,

ಆ ಸಮಯದೊಳ್

ಅಲಸಿಕೆ ಪೆರ್ಚದಂತಿರೆ ವಿಪಂಚಿಯ ನುಣ್ಚರಮೊಂದೆ ಪಾಡಿ ಕೋ ।
ಮಲಮೆನೆ ಚಿತ್ರಮಂ ಬರೆದು ತೋಱಿ ಪದಂಬಡೆದೆಯ್ದೆ ಮೇಳದೊಳ್ ॥
ನೆಲಸಿದ ಮಾತನಾಡಿ ಪೊಸನಾಟಕಮಂ ರಸವೃತ್ತಿಯಾದ ನಾಳ್ ।
ಕಟಿಪಿನಮಾಡಿ ತತ್ಸತಿಯನೋಲಗಿಸಿತ್ತೊಲವಿಂ ಸಖೀಜನಂ ॥ ೯೦

ಸ್ಪಷ್ಟಂ ಗರ್ಭಾರ್ಭಕನಿಂ ।
ದಷ್ಟಮತೀರ್ಥಾದಿನಾಥನಾದಪನೆಂಬೊಂ ॥
ದಷ್ಟಾಹ್ನಿಕಜಿನಪೂಜಾ ।
ಸೃಷ್ಟಿಯೊಳಾ ವಧುವ ಬಯಕೆ ಬಳೆದತ್ತಾಗಳ್ ॥ ೯೧

ಸಮನಿಸಿತು ಪಂಚಕಲ್ಯಾ ।
ಣಮಹೋತ್ಸವವರ್ಣನಂಗಳಂ ಕೇಳ್ವಿಷ್ಟಂ ॥
ರಮಣಿಗೆ ತದ್ಭಾವಿಜಿನೋ ।
ತ್ತಮನಿಂ ಬಸಿಱಲ್ಲಿ ಬಯಕೆ ಪೆಱತಾದಪುದೇ ॥ ೯೨

ಅಂತು ತನೂಭವಪ್ರಭವಸೂಚಕಂಗಳಪ್ಪ ದೋಹಳಂಗಳಂಗನೆಗೆ ನೆಗೞೆ ನಿಜನಾಥಕಲ್ಪಿತಪುಂಸವನದ ಸೀಮಂತೋನ್ನಯನಾದಿಮಂಗಳಂಗಳನೊಳಕೆಯ್ದಂತರ್ವತ್ನೀತ್ವದಿಂ ನವಮಾಸಂ ನೆರೆಯೆ ಸುಖಪ್ರಸೂತಿಸಮಯದೊಳ್

ಮಹಾ ಉತ್ಸವಕ್ಕೆ ಕಾರಣವಾದ ಗರ್ಭವನ್ನು ಆ ಸತಿ ವಿಲಾಸದಿಂದ ಧರಿಸಿದಳು. ವ॥ ಆ ಸಮಯದಲ್ಲಿ – ೯೦. ಆಕೆಗೆ ಆಯಾಸವಾಗದಂತೆ ವೀಣೆಯ ಮಧುರನಾದಕ್ಕೆ ಮೇಳವಾಗಿ ಹಾಡುತ್ತ, ಕೋಮಲವಾಗಿ ಚಿತ್ರ ಬರೆದು ತೋರುತ್ತ, ಅವಕಾಶ ನೋಡಿ ಹದವರಿತು ಸುಖಾಲಾಪವಮಾಡುತ್ತ, ರಸಮಯವಾದ ನಾಟಕವನ್ನು ಆಡಿ ತೋರುತ್ತ ಸಖೀಜನರು ಪ್ರೇಮದಿಂದ ಅವಳನ್ನು ಓಲೈಸುತ್ತಿದ್ದರು. ೯೧. ತನ್ನ ಬಸಿರೊಳಗಿರುವ ಶಿಶು ಮುಂದೆ ಅಷ್ಟಮ ತೀರ್ಥಂಕರನಾಗುವುದು ಸ್ಪಷ್ಟವಾಗುವಂತೆ ಆಕೆಗೆ ಅಷ್ಟಾಹ್ನಿಕ ಜಿನಪೂಜೆಯನ್ನು ನೆರವೇರಿಸುವ ಬಯಕೆ ಅಧಿಕವಾಯಿತು. ೯೨. ಆಕೆಗೆ ಜಿನನ ಪಂಚಕಲ್ಯಾಣ ಮಹೋತ್ಸವಗಳ ವರ್ಣನೆಗಳನ್ನು ಕೇಳುವ ಬಯಕೆಯಾಯಿತು. ಬಸಿರಲ್ಲಿರುವವನು ಮುಂದೆ ತೀರ್ಥಂಕರನಾಗಲಿರುವವನೆ ಆಗಿದ್ದರಿಂದ ಬೇರೆ ಬಯಕೆಯಾಗುವುದುಂಟೆ ? ವ॥ ಹೀಗೆ ಗಂಡು ಮಗುವಿನ ಜನನ ಸೂಚಕವಾದ ಬಯಕೆಗಳಾಗುತ್ತಿರಲಾಗಿ, ತನ್ನ ಪತಿ ಮಾಡಿಸಿದ ಪುಂಸವನ, ಸೀಮಂತೋನ್ನಯನ ಮೊದಲಾದ ಮಂಗಳ ಸಂಸ್ಕಾರಗಳನ್ನು ಪಡೆದು, ಬಸಿರಿಗೆ ಒಂಬತ್ತು ತಿಂಗಳು ತುಂಬಲಾಗಿ, ಸುಖವಾದ

ಪುಟ್ಟಿದನಾಕೆಗೆ ಮಗನೊಡ ।
ವುಟ್ಟೆ ಮಹಾಭಾಗಧೇಯಲಕ್ಷಣನಿಕರಂ ॥
ಘುಟ್ಟೆ ಧರಾಭಾರಕೆ ನೆರ ।
ಪುಟ್ಟಿದುದೆಮಗೆಂಬ ನಲವು ದಿಗ್ದಂತಿಗಳೊಳ್ ॥ ೯೩

ಅನಂತರಂ

॥ ಅನವದ್ಯವೃತ್ತಂ ॥

ತಿಳಿದುದೆಯ್ದೆ ಜಲಾಶಯಮಾಕಾಶಂ ವಿಶದತ್ವಮನಾವಗಂ ।
ತಳೆದುದೂರ್ಜಿತಧೂಮಸಮಾಜಂ ದಕ್ಷಿಣವರ್ತನದಿಂದೆ ಪ ॥
ಜ್ಜಳಿಸುತಿರ್ದುದು ವಹ್ನಿ ಸಮಸ್ತಂ ವ್ಯಸ್ತರಜಸ್ತತಿಯಾಯ್ತಿಳಾ ।
ವಳಯಮುತ್ತಮಸೌರಭಮೂದಿತ್ತಣ್ಣನೆ ಪಣ್ಣನೆ ತಣ್ಣೆಲರ್ ॥ ೯೪

ಆಗಳಾ ನೃಪಸುತೇಂದೂದಯಕ್ಷೋಭಿತಪೌರರಾಗಸಾಗರನಿರ್ಘೋಷಾಯಮಾಣಯುಗಪದುತ್ಥಿತಮಂಗಳಮೃದಂಗಢಕ್ಕಾಭೇರೀಶಂಖಕಾಹಳಾರವದೊಡನೆ

ಕರಪರಿವೃತ್ತಿಯಿಂದೊಗೆಯೆ ಕಾಂಚನಕಂಕಣದೀಂಚರಂ ಪರಿ ।
ಸ್ಫುರಿತದಿನೊರ್ಮೆದಲ್ ನೆಗಟಿ ಕಾಂಚಿಯ ಸುಣ್ಚರಮೆಯ್ದೆ ಪಾದಸಂ ॥
ಚರಣದಿನುಣ್ಮೆ ನೂಪುರದ ಮೆಲ್ಚರಮಂದು ನೃಪೇಂದ್ರಮಂದಿರಾ ।
ಜಿರದೊಳಗೆತ್ತಲುಂ ನಲಿದು ನರ್ತಿಸಿದತ್ತು ವಿಲಾಸಿನೀಜನಂ ॥ ೯೫

ಹೆರಿಗೆ ಕಾಲಕ್ಕೆ ಸರಿಯಾಗಿ -- ೯೩. ಆಕೆಗೆ ಮಹಾಪುರುಷ ಲಕ್ಷಣಯುಕ್ತವಾದ ಮಗನು ಹುಟ್ಟಿದನು ; ಭೂಮಿಯು ಭಾರವನ್ನು ತಾಳುವುದಕ್ಕೆ ತಮಗೊಂದು ನೆರವು ದೊರೆಯಿತೆಂದು ದಿಗ್ದಂತಿಗಳು ಸಂತೋಷಪಟ್ಟವು. ಆ ಬಳಿಕ- ೯೪. ಜಲಾಶಯಗಳ ನೀರೆಲ್ಲ ತಿಳಿಯಾಯಿತು ; ಆಕಾಶವು ಸ್ವಚ್ಛವಾಯಿತು; ಅಗ್ನಿ ಬಲಗಡೆಗೆ ಸುಳಿಯಾಗಿ ಪ್ರಜ್ವಲಿಸಿತು ; ಭೂಮಿಯೆಲ್ಲ ಧೂಳಿರಹಿತ ವಾಯಿತು ; ಹಿತವಾಗಿ ಎಲ್ಲ ಕಡೆಗೆ ತಂಗಾಳಿ ಬೀಸಿತು. ವ॥ ರಾಜಪುತ್ರನ ಜನನದಿಂದ ಅರಸನ ಪರಿವಾರ ಜನಸಾಗರದ ಆನಂದಧ್ವನಿಗಳ ಘೋಷ ದೊಡನೆ ಮೃದಂಗ, ಢಕ್ಕೆ, ಶಂಖ, ಕಹಳೆ ಮೊದಲಾದ ಮಂಗಳ ವಾದ್ಯಗಳ ಧ್ವನಿಯೂ ಹೊಮ್ಮಿತು. ೯೫. ವಿವಿಧ ರೀತಿಯ ಹಸ್ತಚಲನೆಗಳಿಂದ ಚಿನ್ನದ ಬಳೆಗಳ ಕಿಂಕಿಣಿನಾದವೂ, ಉಜ್ವಲವಾದ ಕಟಿಸೂತ್ರದ ಮಧುರನಿನಾಧವೂ, ಪಾದ ಸಂಚಲನದಿಂದ ಹೊಮ್ಮುವ ಅಂದುಗೆಗಳ ಮೃದುರವವೂ ರಮ್ಯ ವಾಗಲಾಗಿ ಅರಮನೆಯ ಅಂಗಳದಲ್ಲೆಲ್ಲ ವಿಲಾಸಿನಿಯರು ಆನಂದದಿಂದ ನರ್ತಿಸಿ

ಆ ಸಮಯದೊಳ್

ರಾಗದ ಬಳ್ಳವಳ್ಳಿಯೆನೆ ರನ್ನದ ವಂದನಮಾಲೆಗಳ್ ಬೆಡಂ।
ಗಾಗೆ ವಿಯನ್ಮಹೀರುಹದ ಪೂಗುಡಿಯೊಳ್‌ಗುಡಿಗಳ್ ಪೊದಟ್ಟು ಚೆ॥
ಲ್ವಾಗೆ ಸಮಂತಿಳಾತಳದ ತಾರಗೆಯಂತುಪಹಾರಮಾದ ಚೆಂ।
ಬೂಗಳಳುಂಬಮಾಗೆ ನಯನೋತ್ಸವಮಾದುದು ತತ್ಪುರೋತ್ಸವಂ ೯೬

ಆಗಳರಸಂ ಸುಹೃನ್ಮಹೀಪಾಲಪೂರ್ಣಪಾತ್ರಾಹರಣಪರಿಣತಪ್ರಧಾನಪ್ರತೀಹಾರಪ್ರಕರಪಾದಪಾತಪ್ರಚಳಿತಪ್ರಘಣತಳಮುಂ, ಇತಸ್ತತಃಪ್ರಸರ್ಪನ್ಮಂಗಳೋಪಕರಣಸಂಪಾದನವ್ಯಗ್ರನಾನಾಪರಿಜನೋಪಜನಿತಸಮ್ಮರ್ದಸ್ಖಲಿತಗಮನಕುಬ್ಜವಾಮನಕಿರಾತಸಂಘಾತಮುಂ, ಉತ್ಸವೋನ್ಮತ್ತಧಾತ್ರೇಯಿಕಾನಿಕಾಯವಿಕೀರ್ಣಪಿಷ್ಟಾತಕಚೂರ್ಣಸಂಜಾತ ಪಿಂಜರವರ್ಣಪಲಿತಶ್ಮಶ್ರುಕೂರ್ಚೋಪವಿದ್ಧವೃದ್ಧಕಂಚುಕಿಸಂಚಯಮುಂ, ಅನೂನರತ್ನಕಂಠಿಕಾಸಮುದಯೋದ್ಗೀಯಮಾನಮಂಗಳಕೈಶಿಕನಾದಾಕರ್ಣನೋತ್ತಾನೈಕಕರ್ಣಸ್ಪಂದಿತಾಂಗಗೃಹಕುರಂಗಶಾಬಸಂದೋಹಮುಂ, ಉನ್ಮುಚ್ಯಮಾನಕೇಳೀಕೀರಪಾರಾವತಶಾರಿಕಾಜಾಲಹೆಲೋದಯನದದಂಬರಾಲೋಕನೊದ್ಗ್ರೀವಪರಿಚಾರಿಕಾಪೇಟಿಘಟಿತಸಂಕಟಮುಂ, ಅಪತ್ಯೋದಯಮುಹೂರ್ತಪಲಪ್ರಭಾವಭಾವನಾಜಾತವಿಸ್ಮಯಾಂದೋಳಿತಶಿರಸ್ಸರೋರುಹನನೇಕಕಾರ್ತಾಂತಿಕಸಂತಾನಸಂಘನಮುಮಪ್ಪಂತಃಪುರಮಂ ನಿವಾರಿತಾಶೇಷಪರಿಜನಂ ಪೊಕ್ಕು ಬಾಲಕವದನದರ್ಶನೋತ್ಸುಕನಿರ್ಪಾಗಳ್

ದರು. ೯೬. ಅನುರಾಗದ ಸಾಲು ಬಳ್ಳಿಗಳೆಂಬಂತೆ ರತ್ನದ ತೋರಣಗಳಿಂದ, ಎತ್ತಿಕಟ್ಟಿದ ಹೂಗೊಂಚಲುಗಳಿಂದ, ಉತ್ತಮವಾದ ಧ್ವಜಗಳಿಂದ, ನೆಲದ ಮೇಲೆ ಮೂಡಿದ ನಕ್ಷತ್ರಗಳಂತೆ ಶೋಭಿಸುವ ಕೆಂಪು ಹೂಗಳ ಅತಿಶಯದಿಂದ, ಚೆಲುವಾಗಿ ಪಟ್ಟಣದಲ್ಲೆಲ್ಲ ಉತ್ಸವಾಲಂಕಾರವು ಕಣ್ಣಿಗೆ ಹಬ್ಬವಾಯಿತು. ವ॥ ಮಿತ್ರರಾಜರೂ, ಉತ್ಸವದ ಉಡುಗೊರೆಯುನ್ನು ಎತ್ತಿಕೊಳ್ಳುವುದರಲ್ಲಿ ನಿಷ್ಣಾತರಾದ ಮುಖ್ಯಪಡಿಯರರೂ ನುಗ್ಗಾಟದಿಂದ ಅಂಗಳವೆಲ್ಲ ಗುಜುಗುಜುಗೊಂಡಿತ್ತು; ಮಂಗಳ ದ್ರವ್ಯಗಳನ್ನು ತಂದಿಡುವುದಕ್ಕಾಗಿ ಅತ್ತಿತ್ತ ಸಂಭ್ರಮದಿಂದ ಓಡಾಡುತ್ತಿರುವ ಸೇವಕಜನರ ಸಂದಣಿಯಲ್ಲಿ, ಕುಬ್ಜ, ಕುಳ್ಳ, ಕಿರಾತರಿಗೆ ನಡೆದಾಡುವುದೆ ಕಷ್ಟವಾಗಿತ್ತು; ಉತ್ಸವದ ಉನ್ಮಾದದಿಂದ ದಾದಿಯರ ಸಮುದಾಯವು ಹರಡಿದ ಸುವಾಸನೆಯ ಹುಡಿಯಿಂದ, ವೃದ್ಧಕಂಚುಕಿಗಳೆಲ್ಲರ ನರೆತ ಗಡ್ಡ ಮೀಸೆಗಳು ಹೊಂಬಣ್ಣವನ್ನು ಹೊಂದಿದ್ದವು; ಶ್ರೇಷ್ಠವಾದ ರತ್ನಹಾರಗಳನ್ನು ಧರಿಸಿ ಕೈಸಿಕರಾಗದಲ್ಲಿ ಹಾಡುತ್ತಿರುವ ಮಂಗಳಗೀತೆಯ ನಾದವನ್ನು ಕಿವಿಗೊಟ್ಟು ಕೇಳುತ್ತ (ಅರಮನೆಯಲ್ಲಿ ಸಾಕಿದ) ಜಿಂಕೆ ಮರಿಗಳು ತನ್ಮಯವಾಗಿದ್ದವು : ( ಈ ಗದ್ದಲದಲ್ಲಿ) ಬಂಧಮುಕ್ತವಾಗಿ ಗಿಳಿ, ಪಾರಿವಾಳ, ಶಾರಿಕೆಗಳು ಸಂತೋಷದಿಂದ ಮೇಲೆ ಹಾರಿ ವಿನೋದಿಸುತ್ತಿರಲಾಗಿ, ಕತ್ತೆತ್ತಿ ಆಕಾಶವನ್ನೇ ನೋಡುತ್ತ ಪರಿಚಾರಿಕೆಯರು ಗುಂಪುಗಟ್ಟಿದ್ದರು; ಶಿಶುಜನನದ ಮುಹೂರ್ತದ ಫಲವನ್ನು ಲೆಕ್ಕ ಹಾಕಿ ನೋಡಿ, ಬೆರಗಿನಿಂದ ತಲೆದೂಗುತ್ತ ಹಲವಾರು

ಪರಿಚಿತಭೂತಿರೇಖಮುಖದರ್ಶಿತಸರ್ಷಪಪುಂಜಮಂಜಸೋ।
ಪರಚಿತಖಡ್ಗ ಖೇಟಕಸಮುದ್ಘಟವಿದ್ಧಪಿನದ್ಧಭಿತ್ತಿ ಚಂ ॥
ಚುರಪಿಚುಮಂದಪಲ್ಲವಸಮುಲ್ಲಸಿತಂ ಮುಸಲೋರುಸೀರಡಂ।
ಬರಯುತಮೇಂ ಮನಕ್ಕೊಲವನಿತ್ತುದೊ ಬಾಗಿಲರಿಷ್ಟಸದ್ಮದಾ ॥ ೯೭

ಅನಂತರಂತತಕ್ಷಣಸಂಧುಕ್ಷ್ಯಮಾಣರಕ್ಷಾಧೂಪಧೂಮೋದ್ದಾಮಮುಂ, ಪ್ರಸೂತಿಕ್ರಿಯಾಪರಿಣತಾಂತಃಪುರಪರಿಚರಾತಿಸಂತಾನನಿರಂತರಮುಂ, ಉತ್ಖಾತತೀಕ್ಷ್ಣ ಕೌಕ್ಷೇಯಕಸನಾಥಶಯನಪಾರ್ಶ್ವಭಿತ್ತಿಭಾಗಮುಂ. ಚಂಚತ್ಕಾಂಚನಸ್ಥಾನದೀಪಿಕಾಗ್ರನಿರ್ವ್ಯಗ್ರದೇದೀಪ್ಯಮಾನದೀಪಪ್ರಭಾಭಿಭೂತತಮಸ್ತೋಮಮುಮಪ್ಪ ಗರ್ಭಗೃಹಮನಭ್ಯುಕ್ಷಿತೋಜ್ಜ್ವಲನಾಗಿ ಪೊಕ್ಕಾಗಳ್

ಐಂದ್ರೀನಿಕಟದ ನವದಿವ।
ಸೇಂದ್ರನವೊಲ್ ಮಾತೃನಿಕಟದರ್ಭಕನಾದಂ ॥
ಸಾಂದ್ರಾನಂದಮನಾಭೂ।
ಪೇಂದ್ರನ ಹೃನ್ನಯನಜಲರುಹಕ್ಕೊದವಿಸಿದಂ ॥ ೯೮

ಜನನಿಯ ಶರೀರದೊಳ್ ತೆ।
ಕ್ಕನೆ ತೀವಿದ ರಾಗರಸದೊಳೋಲಾಡಿಯೆ ಗ ॥
ರ್ಭನಿವಾಸದಲ್ಲಿ ಬಳೆವಂ।
ತೆ ನವಪ್ರಸವಾರುಣಾಂಗನೆಸೆದಂ ತನಯಂ ॥ ೯೯

ಜ್ಯೋತಿಷಿಗಳು ಅಂತಃಪುರದಲ್ಲಿ ನೆರೆದಿದ್ದರು; ಹೀಗಿರುವಾಗ ಅರಸನು ಪರಿಜನವನ್ನೆಲ್ಲ ಸರಿಸಿ ರಾಣಿವಾಸವನ್ನು ಪ್ರವೇಶಿಸಿ, ಮಗುವಿನ ಮುಖದರ್ಶನಕ್ಕೆ ಆತುರನಾಗಿರಲು–೯೭. ಬೂದಿಯ ಗೆರೆಯೆಳೆದು ಅದರ ಮೇಲೆ ಹರಡಿದ ಬಿಳಿ ಸಾಸುವೆಗಳಿಂದಲೂ, ಕಾಡಿಗೆಯನ್ನು ಲೇಪಿಸಿದ ಕತ್ತಿ, ಗುರಾಣಿ ಮೊದಲಾದ ಆಯುಧಗಳನ್ನು ಆನಿಸಿ ಇಟ್ಟ ಗೋಡೆಗಳಿಂದಲೂ, ಚಲುವಾದ ಬೇವಿನ ಚಿಗುರೆಲೆಗಳಿಂದ ಅಲಂಕರಿಸಿಟ್ಟ ಒನಕೆ, ನೇಗಿಲು ಕುಳಗಳಿಂದಲೂ ಬಾಣಂತಿ ಮನೆಯ ಬಾಗಿಲು ತುಂಬ ಮನೋಹರವಾಗಿತ್ತು. ವ॥ ಬಳಿಕ ಆ ಕ್ಷಣದಲ್ಲಿಯೆ ಹೊತ್ತಿಸಿದ ರಕ್ಷಾಧೂಪದ ದಟ್ಟವಾದ ಹೊಗೆಯಿಂದ ತುಂಬಿ, ಹೆರಿಗೆಯ ಕೆಲಸದಲ್ಲಿ ನಿಪುಣೆಯರಾದ ಅಂತಃಪುರ ಪರಿಚಾರಿಕೆಯರ ಸಮೂಹದಿಂದ ದಟ್ಟಣಿಸಿ, ಹಾಸುಗೆಯ ಪಕ್ಕದ ಗೋಡೆಗೆ; ಒರೆಗಳಚಿ ಇಟ್ಟ ಹರಿತವಾದ ಕತ್ತಿಯ ಶೋಭೆಯನ್ನೊಳಗೊಂಡು, ಮಿರುಗುತ್ತಿರುವ ಚಿನ್ನದ ಠಾಣಾ ದೀಪಗಳ ಪ್ರಜ್ವಲವಾದ ಕುಡಿವೆಳಕಿನಿಂದ ಕತ್ತಲೆಯನ್ನೆಲ್ಲ ಕಳೆದುಕೊಂಡು ಕಂಗೊಳಿಸುವ ಹೆರಿಗೆ ಕೋಣೆಯನ್ನು ನೀರು ಚಿಮುಕಿಸಿಕೊಂಡು ಅರಸನು ಪ್ರವೇಶಿಸಿದನು. ೯೮. ಪೂರ್ವ ದಿಗಂಗನೆಯ ಪಕ್ಕದಲ್ಲಿರುವ ನವೋದಿತ ಸೂರ್ಯನಂತೆ, ತಾಯ ಬಳಿಯ ಶಿಶು ಅರಸನ ಕಣ್ಮನಗಳಿಗೆ ಅಧಿಕವಾದ ಆನಂದವನ್ನುಂಟುಮಾಡಿದನು. ೯೯. ತಾಯಿಯ ದೇಹದಲ್ಲಿ ತುಂಬಿ ತುಳುಕುವ "ರಾಗರಸ" (ವಾತ್ಸಲ್ಯ ೨ ಕೆಂಪುಬಣ್ಣ) ದಲ್ಲಿ ಸಂಪೂರ್ಣವಾಗಿ

ನಾಳಂ ಸೊಗಯಿಪ ನಾಭೀ ।
ನಾಳಂ ಮೃದುಚರಣಕರತಳಂ ಕೋಮಳಪ ॥
ತ್ರಾಳಿಯಿದೆನೆ ನೆನೆಯಿಸಿದಂ ।
ಬಾಳಕನಿಂದಿರೆಯ ಕೈಯ ಕೆಂದಾವರೆಯಂ ॥ ೧೦೦

ವೀಣಾರಂಜಿತಮಂಜು ।
ಕ್ವಾಣಮನಿಟಿಕೆಯ್ದುದಲ್ಲಿನಿತ್ತೆಂಬಿನೆಗಂ ॥
ಕ್ಷೋಣೀಶನ ಕಿವಿಯಂ ಸವಿ ।
ಗಾಣಿಸಿದುದು ಬಾಲರೋದನೋದಿತನಾದಂ ॥ ೧೦೧

ಕೆಲದೊಳೆ ಕಿಟ್ಟು ಸಾರ್ಚಿದ ಕೃಪಾಣದ ಕರ್ಪು ನಿಜಾಂಗನಾಂಗದ ।
ಗ್ಗಲಿಪ ಬೆಳರ್ಪು ಬಾಲಕನ ಕೋಮಲದೇಹದ ಕೆಂಪುನಾಡೆಯುಂ ॥
ನಲವನಿಳಾಧಿಪಂಗೆ ನೆಲೆವೆರ್ಚಿಸಿದತ್ತು ಗೃಹಾಧಿದೇವತಾ ।
ವಿಲಸದಪಾಂಗದೊಳ್ ನೆರೆದು ಮೂದೆಱದೊಪ್ಪುವ ಬಣ್ಣದಂಡದಿಂ ॥ ೧೦೨

ಅಂತು ಸಂತೋಷಬಾಷ್ಪವಿಸರದಿಂ ಮೀಯಿಸುವಂತೆಯುಂ, ದಿಟ್ಟಿವೆಳಗಿನಿಂ ನಿವಳಿಸುವಂತೆಯುಂ, ಕಣ್ಣೊಳಗಿಟ್ಟು ಮುಚ್ಚುವಂತೆಯುಂ, ಬಗೆಯೊಳೆ ತೆಗೆದಪ್ಪುವಂತೆಯುಂ, ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರನಂಗಪ್ರತ್ಯಂಗಂಗಳಂ ನೀಡುಂ ಭಾವಿಸಿ ನೋಡಿ, ಸಂಸಾರಸುಖದ ಪರಮಕೋಟಿಯನೆಯ್ದಿದಂತಾಗಿ ಮುಖ್ಯಮಂಗಳಮನರ್ಹತ್ಪರಮೇಶ್ವರಂಗೆ ಮಹಾಮಹಮಂ ಮಾಡಲ್ವೇಟ್ಟು ಜಾತಕರ್ಮೋತ್ಸವ ಮನೊಡರ್ಚಿ ಬಟಿಯಂ ದಶಮದಿನದೊಳ್ ಅತ್ಯುದ್ಧಾಮಮಂ ಶ್ರೀವರ್ಮನಾಮಮನಿಟ್ಟು

ಮುಳುಗುತ್ತಿರುವ ಮಗು, ಇನ್ನೂ ಬಸಿರಲ್ಲಿಯೆ ಬೆಳೆಯುತ್ತಿರುವನೊ ಏನೊ ಎಂಬಂತೆ (ಅದೇ ಹುಟ್ಟಿದವನಾದುದರಿಂದ)ರಕ್ತವರ್ಣದಿಂದ ಶೋಭಿಸಿದನು. ೧೦೦. ಹೊಕ್ಕುಳ ಹುರಿಯೆ ನಾಳವಾಗಿ, ಕೋಮಲವಾದ ಅಂಗೈ-ಅಂಗಾಲುಗಳೆ ಸುಕುಮಾರವಾದ ದಳಗಳಾಗಿ, ಇದೇನು ಲಕ್ಷ್ಮಿಯ ಕೈಯಲ್ಲಿರುವ ಕೆಂಪುಕಮಲವೊ ಎಂಬ ಭಾವವನ್ನು ಆ ಶಿಶು ಉಂಟುಮಾಡಿದನು. ೧೦೧. ವೀಣೆಯಿಂದ ಹೊರಡುವ ಮಧುರನಾದವನ್ನು ಮೀರುವಂತಹ ಶಿಶುವಿನ ರೋದನಧ್ವನಿ ರಾಜನ ಕಿವಿಗೆ ಸಂತೋಷವನ್ನೊದಗಿಸಿತು. ೧೦೨. ಪಕ್ಕದಲ್ಲಿ ಒರೆಗಳಚಿ ಇಟ್ಟ ಖಡ್ಗದ ನೀಲವರ್ಣ, ತನ್ನ ರಾಣಿಯ ದೇಹದ ಧವಳವರ್ಣ, ಮಗುವಿನ ಸುಕುಮಾರ ದೇಹದ ಕೆಂಪುಬಣ್ಣ, ಇವು ಮೂರೂ ಜೊತೆಗೂಡಿ, ತನ್ನ ಮನೆಯ ಅಧಿದೇವತೆಯ ಕಣೆಗಣ್ಣೋಟದಲ್ಲಿ ಒಪ್ಪುವ ಮೂರು ಬಗೆಯ ಬಣ್ಣಗಳ ಮೇಳವೊ ಏನೊ ಎಂಬಂತೆ, ರಾಜನಿಗೆ ಸಂತೋಷವುಂಟುಮಾಡಿದುವು. ವ ॥ ಆನಂದಾಶ್ರುಗಳ ಪ್ರವಾಹದಿಂದ ಸ್ನಾನ ಮಾಡಿಸುವಂತೆಯೂ, ಕಣ್ಣಬೆಳಗಿನಿಂದ ನಿವಾಳಿಸಿದಂತೆಯೂ ಕಣ್ಣೊಳಗೆ ಇಟ್ಟು ಮುಚ್ಚಿಕೊಳ್ಳುವಂತೆಯೂ, ಮನಸ್ಸಿನಲ್ಲಿಯೆ ಎತ್ತಿಕೊಂಡು ಬಿಗಿಯಾಗಿ ಅಪ್ಪಿಕೊಳ್ಳುವಂತೆಯೂ,-ಯಾವ ನ್ಯೂನತೆಯೂ ಇಲ್ಲದ ಒಳ್ಳೆಯ ಲಕ್ಷಣಗಳಿಂದ ಒಪ್ಪುವ ತನ್ನ ಮಗನ ಪ್ರತಿಯೊಂದು ಅವಯವವನ್ನೂ ಅರಸನು ಚೆನ್ನಾಗಿ ಪರಿಶೀಲಿಸಿ ನೋಡಿ, ಸಂಸಾರಸೌಖ್ಯದ ಪರಮಾವಧಿಯನ್ನು ಮುಟ್ಟಿ

ಅಟಿಪಿ ನಿರಾಕುಳಂ ತನಗೆ ಕೀರ್ತಿಯನಾತ್ಮಭವಂಗೆ ನಲ್ಮೆಯಿಂ ।
ದುಟಿಪೆ ನಿಜಾತಪತ್ರ ಹರಿವಿಷ್ಟರಚಾಮರಮೆಂಬಿವಂ ಬಟಿ ॥
ಕ್ಕುಟಿಪಿದುದನಿತ್ತುಮೊಂದುಟಿದುದಿಲ್ಲನೆ ಕೊಟ್ಟನಿಳಾಧಿನಾಥನಾ ।
ರ್ಗುಟಿಯದೆ ಬೇಟ್ಪ ಬೇಡದವರ್ಗಂ ಸಲೆ ಕೀಟ್ಪಡೆ ಕಲ್ಪಭೂರುಹಂ ॥ ೧೦೩

ತನ್ಮಹೋತ್ಸವಾನಂತರದೊಳ್

ಸುರರಾಜೋದ್ಯಾನದೊಳ್ ಕಲ್ಪಕುಜದ ಸಿರಿದುಗ್ಧಾಬ್ಧಿಯೊಳ್ ನೂತ್ನರತ್ನಾಂ । ಕುರಮಾ ಗೋತ್ರಾದ್ರಿಯೊಳ್ ಸಿಂಗದ ಸಿಸು ಬಳೆವೊಂದಂದದಿಂ ದಾರ್ಪುತೇಜ ॥ ಸ್ಫುರಿತಂ ವಿಕ್ರಾಂತಮೆಂಬೀ ಗುಣಮೊಡವೆಳೆಯುತ್ತಿರ್ಪಿನಂ ನಂದನಂ ತ । ದ್ಧರಣೀಶಾವಾಸದೊಳ್ ಶೋಭಿಸುತಿರೆ ಬಳೆದಂ ಭಾರತೀ ಭಾಳನೇತ್ರಂ ॥ ೧೦೪

ಗದ್ಯಂ

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿ ಪದಪದ್ಮನಿಧಾನದೀಪವರ್ತಿ
ಶ್ರೀಮದಗ್ಗಳದೇವ
ವಿರಚಿತಮಪ್ಪ
ಚಂದ್ರಪ್ರಭ ಪುರಾಣದೊಳ್
ಶ್ರೀವರ್ಮೋದಯಪ್ರಮೋದವರ್ಣನಂ
ತೃತೀಯಾಶ್ವಾಸಂ.

ದಂತಾಗಿ, ಆಗ ಮಾಡಬೇಕಾದ ಮುಖ್ಯವಾದ ಮಂಗಳಕಾರ್ಯಗಳನ್ನೂ ಅರ್ಹಂತನಿಗೆ ಮಹಾಪೂಜೆಯನ್ನೂ ಮಾಡಲು ಹೇಳಿ, ಜಾತಕರ್ಮವನ್ನು ನೆರವೇರಿಸಿದನು; ಬಳಿಕ ಹತ್ತನೆಯ ದಿನ ಉತ್ಕೃಷ್ಟವಾದ "ಶ್ರೀವರ್ಮ" ಎಂಬ ಹೆಸರನ್ನು ಆ ಮಗುವಿಗೆ ಇಟ್ಟನು. ೧೦೩. ಅರಸನು (ಆ ಸಂತೋಷದಲ್ಲಿ) ತನಗೆ ಅನಿರ್ಬಾಧವಾದ ಕೀರ್ತಿ ಹಾಗು ಮಗನಿಗೆ (ರಾಜಚಿಹ್ನೆಗಳಾದ) ಬೆಳ್ಗೊಡೆ, ಸಿಂಹಾಸನ ಹಾಗೂ ಚಾಮರ–ಇವುಗಳನ್ನು ಮಾತ್ರ ಇಟ್ಟುಕೊಂಡು, ತನ್ನ ಸರ್ವಸ್ವದಲ್ಲಿ ಇನ್ನೇನೂ ಉಳಿಯದಂತೆ, ಬೇಡುವವರಿಗೂ ಬೇಡದವರಿಗೂ ಕೂಡ ದಾನ ಮಾಡಿ ಕಲ್ಪವೃಕ್ಷವನ್ನು ಮೀರಿಸಿದನು. ವ॥ ಹೀಗೆ ಆ ಮಹಾ ಉತ್ಸವ ನೆರವೇರಿದ ಬಳಿಕ–೧೦೪. ದೇವೇಂದ್ರನ ನಂದನವನದಲ್ಲಿ ಕಲ್ಪವೃಕ್ಷದ ವೈಭವ, ಕ್ಷೀರ ಸಾಗರದಲ್ಲಿ ನವರತ್ನಗಳ ಕಾಂತಿ, ಕುಲಗಿರಿಯಲ್ಲಿ ಸಿಂಹದ ಮರಿ ಬೆಳೆಯುವಂತೆ, ಬಲ, ತೇಜಸ್ಸು ಹಾಗೂ ಪರಾಕ್ರಮ ಗುಣಗಳೊಡನೆ ಆ ರಾಜಕುಮಾರನು ಅರಮನೆಯಲ್ಲಿ ಬೆಳೆಯುತ್ತಿದ್ದನು.

ಮೂರನೆಯ ಆಶ್ವಾಸ ಮುಗಿಯಿತು.

# ಚತುರ್ಥಾಶ್ವಾಸಂ

ಶ್ರೀಕೇಳೀನಿಲಯಂ ರ ।
ಮ್ಯಾಕೃತಿ ದಿವಸಾನುಸಾರದಿಂ ಪುದಿದೊಡವಂ ॥
ಸ್ವೀಕರಿಸಿದನಮಳಿನಕಮ ।
ಳಾಕರಮೆನೆ ಜೈನಜನಮನೋಹರಚರಿತಂ ॥ ೧

ಅಂತನುಕ್ರಮೋಪಚಿತಬಾಲಲೀಲಾಪೀಯೂಷವರ್ಷದಿಂ ಪಿತೃಜನಸುಹೃಜ್ಜನೋದಾರಶರೀರ ಕೇದಾರಂಗಳೊಳ್ ಪುಲಕಸಸ್ಯಸಮೃದ್ಧಿಯಂ ಮಾಡುತುಂ ಬಳೆಯೆವಳೆಯೆ

ಕಿಡುತಂದುದು ಮನದಜೆಯಮೆ ।
ನಡಿಯ ತೊದಳ್ ಪಿಂಗಿ ಪೋಯ್ತು ತಳರ್ವಡಿಯೊಳ್ ಬ ॥
ಲ್ಪಡರ್ದುದು ಬಳ್ವಳಿಕೆಗೆ ತನು ।
ವೆಡೆಗೊಟ್ಟುದು ನಾಡೆ ಶೈಶವಾತಿಕ್ರಮದೊಳ್ ॥ ೨

ಆ ಸಮಯದೊಳ್

ಜನನೀಸ್ತನ್ಯಾಮೃತಸೇ ।
ವನೆ ಮಾಣ್ದ ಬಟಿಕ್ಕಮಖಿಳವಿದ್ಯಾಮೃತಸೇ ॥
ವನೆಯೋಳೆ ಯೋಜಿಪುದುಚಿತಂ ।
ತನಯನನೆಂದವನಿಪಾಲಕಂ ಬಗೆದಂದಂ ॥ ೩

## ಚತುರ್ಥಾಶ್ವಾಸಂ

೧. ಲಕ್ಷ್ಮಿಗೆ ವಿಲಾಸ ಸ್ಥಾನವಾದ ಸುಂದರವಾದ ಕಮಲಗಳನ್ನು ದಿನದಿನಕ್ಕೆ ಹೊಸಹೊಸದಾಗಿ ಪರಿಶದ್ಧವಾದ ತಾವರೆಗೊಳವು ಹೊಂದುವಂತೆ, ವೈಭವೋಪೇತವಾದ ಆ ಕುಮಾರನ ದೇಹವು ದಿನದಿನಕ್ಕೆ ಹೊಸ ಹೊಸ ಸೌಂದರ್ಯ ವಿಕಾಸವನ್ನು ತಾಳಿತು. ವ॥ ಹಾಗೆ ಅನುಕ್ರಮವಾಗಿ ಬಾಲಕ್ರೀಡೆಯ ಅಮೃತವನ್ನು ಮಳೆಗರೆದು ತನ್ನ ತಾಯ್ತಂದೆಗಳ ದೇಹಗಳೆಂಬ ಉತ್ತಮ ಭೂಮಿಗಳಲ್ಲಿ ರೋಮಾಂಚವೆಂಬ ಸಸ್ಯವನ್ನು ಸಮೃದ್ಧವಾಗಿ ಬೆಳಸುತ್ತ ಉತ್ತರೋತ್ತರವಾಗಿ ಬೆಳೆಯಲಾಗಿ. ೨. ಮನಸ್ಸಿನ ಅಜ್ಞತೆ ಹೊರಟು ಹೋಯಿತು; ಮಾತಿನಲ್ಲಿ ತೊದಲು ಇಲ್ಲವಾಯಿತು: ದಟ್ಟಡಿಯ ನಡಗೆ ಬಲಿತು ನೇರವಾಯಿತು; ದೇಹ ಬಲಿಯ ತೊಡಗಿತು–ಹೀಗೆ ಶೈಶವಾವಸ್ಥೆಯನ್ನು ಆತನು ದಾಟಿದನು. ಆ ಸಮಯದಲ್ಲಿ–೩. ಮೊಲೆಹಾಲು ಕುಡಿಯುವ ಕಾಲ ಕಳೆದ ಮೇಲೆ, ತನ್ನ ಮಗನಿಗೆ ಇನ್ನು ವಿದ್ಯೆಯ ಅಮೃತವನ್ನು ಕುಡಿಸುವುದು

ವಿದ್ಯೋಪವಿದ್ಯೆಗಳನತಿ ।
ಹೃದ್ಯಂಗಳನಾತ್ಮಜಂಗೆ ಶಿಕ್ಷಿಸುವಂತಾ ॥
ತೋದ್ಯರವಮುಣ್ಮೆ ತತ್ತ ।
ದ್ವಿದ್ಯರನಪ್ಪೈಸಿದಂ ನೃಪಂ ಶುಭದಿನದೊಳ್ ॥ ೪

ಅನಂತರಮಾಕ್ಷತ್ರಪುತ್ರಂ ಸಿತಪಕ್ಷದತ್ರಿಪುತ್ರನಂತೆ ಕಳಾಕಳಾಪೋಪಚಯಮನಪ್ಪುಕೆಯ್ದಿರೆ ಕತಿಪಯವಾಸರಾಪಸರಣದೊಳ್.

ಅಮಲಸ್ವಭಾವನೊಳ್ ನಿ ।
ತ್ಯಮಹತ್ವನೊಳತುಳರಾಜವಿದ್ಯೆಗಳನಿತುಂ ॥
ಕ್ರಮದೆ ಸಮನಿಸಿದುವಾತನೊ ।
ಳಮಳಿನತಾರಾಳಿ ಗಗನದೊಳ್ ನೆಲಸುವವೊಲ್ ॥ ೫

ಅನ್ತುಪಾರ್ಜಿತೋಪಾರ್ಜಿತವಿದ್ಯಾವಿಳಾಸನಾಗಿರ್ಪಿನಂ

ಲಲನಾಸಂಮೋಹಲಗ್ನೋದಯಮಸಮಶರಾನೇಕಪೋದ್ದೀಪನಂ ದೇ ।
ಹಲತಾವಲ್ಲೀವಸಂತಂ ವಿಭವಶರಧಿಚಂದ್ರೋದ್ಗಮಂ ಶೌರ್ಯಸೂರ್ಯೋ ॥
ಪಲಭಾಸ್ವತ್ಸಂಪದಂ ತನ್ನೃಪತನಯನೊಳಂದೊಂದಿ ಚಿತ್ತಕ್ಕೆ ಮಾಡಿ ।
ತ್ತೊಲವಂ ತಾರುಣ್ಯಮಾಸಾಧಿತಬಹಳಿಮಲಾವಣ್ಯಶೋಭಾವರೇಣ್ಯಂ ॥ ೬

ಯೋಗ್ಯವೆಂದು ಅರಸನು ಯೋಚಿಸಿದನು. ೪. ಅತ್ಯಂತ ಹೃದಯಾಕರ್ಷಕವೆನಿಸುವ ಮುಖ್ಯವಿದ್ಯೆಗಳನ್ನೂ ಉಪವಿದ್ಯೆಗಳನ್ನು ಕಲಿಸಿಕೊಡಲೆಂದು ಆಯಾ ವಿದ್ಯೆಗಳಲ್ಲಿ ಪರಿಣತರಾದವರನ್ನು ಕರೆಯಿಸಿಕೊಂಡು ಮಂಗಳವಾದ್ಯಸಮೇತವಾದ ಉತ್ಸವ ಪೂರ್ವಕವಾಗಿ ಅವರಿಗೆ ತನ್ನ ಮಗನಿಗೆ ಶಿಕ್ಷಣವನ್ನು ಆರಂಭಿಸಿದನು. ವ॥ ಆನಂತರ ಆ ಕ್ಷತ್ರಿಯಕುಮಾರನು ಶುಕ್ಲಪಕ್ಷದ ಚಂದ್ರನಂತೆ ಎಲ್ಲ ಕಲೆಗಳನ್ನು (೧. ಚಂದ್ರನ ಹದಿನಾರು ಕಲೆಗಳನ್ನೂ ೨. ರಾಜಕುಮಾರನು ಕಲಿಯುವ ಅನೇಕ ವಿದ್ಯೆ ಗಳನ್ನು) ಅಳವಡಿಸಿಕೊಂಡನು. ಹೀಗೆ ಕೆಲವು ದಿನಗಳು ಕಳೆದ ಬಳಿಕ–೫. ನಿರ್ಮಲ ಸ್ವಭಾವದವನೂ, ನಿತ್ಯವಾದ ಮಹಿಮೆಯುಳ್ಳವನೂ ಆದ ಆ ಕುಮಾರನಲ್ಲಿ ಅಸದೃಶ ವಾದ ರಾಜವಿದ್ಯೆಗಳೆಲ್ಲವೂ ಕ್ರಮೇಣ ಕೂಡಿಕೊಂಡು, ಆಕಾಶದಲ್ಲಿ ನಿರ್ಮಲ ನಕ್ಷತ್ರ ಗಳು ನೆಲಸಿದಂತೆ ನೆಲಸಿ ಶೋಭಿಸಿದುವು. ವ॥ ಹಾಗೆ ವಿದ್ಯಾಸಂಪನ್ನನಾಗಿರಲಾಗಿ– ೬. ಹೆಣ್ಣುಗಳನ್ನು ಮರುಳುಗೊಳಿಸುವ, ಮನ್ಮಥನೆಂಬ ಗಜಕ್ಕೆ ಮದವನ್ನು ಉದ್ದೀಪಿ ಸುವ, ದೇಹವೆಂಬ ಬಳ್ಳಿಗೆ ವಸಂತದಂತೆ ಒದಗುವ, ವೈಭವ ಸಮುದ್ರಕ್ಕೆ ಚಂದ್ರೋದಯ ವೆನಿಸುವ, ಪರಾಕ್ರಮವೆಂಬ ಸೂರ್ಯಕಾಂತದ ಪ್ರಭೆಯಿಂದ ಶೋಭಿಸುವ, ಅತ್ಯಧಿಕ ವಾದ ಲಾವಣ್ಯದ ಶೋಭೆಯನ್ನು ತಾಳಿ ಶ್ರೇಷ್ಠವೆನಿಸುವ ಯೌವನವು ಆ ಕುಮಾರನಿಗೆ

ಕಳಧೌತಚ್ಛವಿ ಕುಂದಕುಟ್ಮಲರದಂ ಬಾಲಪ್ರವಾಳೋಷ್ಠನು ।
ತ್ಪಳಪತ್ರಾಂಬಕನಷ್ಟಮೀಂದುನಿಟಳಂ ಶೇಷೋಲ್ಲಸದ್ಬಾಹು ಕಾ ॥
ದಳಕಾಂಡೋರು ಗವೇಂದ್ರಕಂಧರನಿಭದ್ವಿಣ್ಮಧ್ಯನಿಂದಿಂದಿರೋ ।
ಜ್ಜ್ವಳಕೇಶಂ ಧರಣೀಶಸೂನು ತಳೆದಂ ಸಾಶ್ಚರ್ಯಸೌಂದರ್ಯಮಂ ॥ ೭

ಕಣ್ಗಳ್ಗೆ ಗೊತ್ತು ಮನಕೆ ಸ ।
ರಣ್ಗಾಡಿಗೆ ಗಡಿಯೆನಿಪ್ಪ ಕುವರನ ರೂಪೊ ॥
ಳ್ವೆಣ್ಗಳನೀಕ್ಷಣಮಾತ್ರದೆ ।
ನಾಣ್ಗೆಡಿಸಿದುದಾದಮೆಸೆವ ಪೊಸಜವ್ವನದೊಳ್ ॥ ೮

ಜನಕನೊಳನುರೂಪತೆಯಂ ।
ತನೂಭವಂ ತಾಳ್ದಿದಂ ತಮಸ್ಸಂಹೃತಿಯಿಂ ॥
ಘನತೇಜದಿನುನ್ನತಿಯಿಂ ।
ಕನತ್ಪ್ರದೀಪೋಪಜಾತದೀಪಾಕೃತಿಯಿಂ ॥ ೯

ಶ್ರೀವಕ್ಷಸ್ಸ್ಥಳದೊಳ್ ವಾ ।
ಕ್ಶ್ರೀವಕ್ತ್ರದೊಳತುಳಭುಜದೊಳೂರ್ಜಿತವಿಜಯ ॥
ಶ್ರೀವಿಸ್ತಾರಿಸೆ ನೆಗಟಿದಂ ।
ಶ್ರೀವರ್ಮಂ ಶ್ರೀಮಯಂ ಯಶಶ್ರೀನಿಳಯಂ ॥ ೧೦

ಪ್ರಾಪ್ತವಾಗಿ ಮನಸ್ಸಿಗೆ ಸಂತೋಷವನ್ನುಂಟುಮಾಡಿತು. ೭. ಚಿನ್ನದಂತಹ ದೇಹ ಕಾಂತಿ, ಮೊಲ್ಲೆಯ ಮೊಗ್ಗುಗಳಂತಹ ಹಲ್ಲುಗಳು, ಎಳೆಯ ಹವಳದಂತಹ ತುಟಿ, ನೈದಿಲೆಯಂತಹ ಕಣ್ಣು, ಅಷ್ಟಮಿಯ ಚಂದ್ರಸದೃಶವಾದ ಹಣೆ, ಶೇಷನಂತೆ ಶೋಭಿಸುವ ನಿಡುದೋಳು, ಬಾಳೆಕಂಬದಂತಹ ತೊಡೆ, ವೃಷಭದ ಹೆಗಲಂತಿರುವ ಭುಜಾಗ್ರ, ಸಿಂಹದ ನಡುವಿನಂತೆ ತೆಳುವಾದ ಸೊಂಟ, ದುಂಬಿಗಳಂತೆ ಕಪ್ಪಾಗಿ ಮಿರುಗುವ ಕೂದಲು–ಇವುಗಳನ್ನೊಡಗೊಂಡು ರಾಜಕುಮಾರನು ಆಶ್ಚರ್ಯ ಕರವಾದ ಸೌಂದರ್ಯವನ್ನು ತಾಳಿದನು. ೮. (ನೋಡುವವರ) ಕಣ್ಣುಗಳಿಗೆ ನೆಲೆವೀಡು, (ಕಂಡ) ಮನಸ್ಸು ಆಶ್ರಯ ಪಡೆಯುವ ಸ್ಥಾನ, ಚೆಲುವಿನ ಪರಮಸೀಮೆ– ಎಂದೆನಿಸುವ ಕುಮಾರನ ಹೊಸ ಹರಯದ ರೂಪವನ್ನು ಕಂಡ ಮಾತ್ರಕ್ಕೆಯೆ ಹೆಣ್ಣುಗಳು ಕಂಗೆಡುವಂತಾಯಿತು. ೯. "ತಮಸ್ಸಂಹೃತಿ" (೧. ಅಜ್ಞಾನದ ನಿವಾರಣೆ. ೨. ಕತ್ತಲೆಯ ನಾಶ) ಯಿಂದಲೂ, "ಘನತೇಜ" (೧. ಶ್ರೇಷ್ಠವಾದ ಪರಾಕ್ರಮ. ೨. ಅಧಿಕವಾದ ಬೆಳಕು) ದಿಂದಲೂ, "ಉನ್ನತಿ" (೧. ಮೇಲ್ಮೆ, ೨. ಎತ್ತರ) ದಿಂದಲೂ ಉಜ್ವಲವಾದ ದೀಪದಂತೆ ಶೋಭಿಸುವ ಕುಮಾರನು ತಂದೆಗೆ ತಕ್ಕ ಮಗನೆನಿಸಿದನು. ೧೦. ಎದೆಯಲ್ಲಿ ಸೌಭಾಗ್ಯ ಲಕ್ಷ್ಮಿಯೂ, ಬಾಯಲ್ಲಿ ವಾಕ್ಚಾತುರ್ಯವೂ, ಅಸಮಾನವಾದ ತೋಳಿನಲ್ಲಿ ವಿಜಯಲಕ್ಷ್ಮಿಯೂ ಸಲೀಲವಾಗಿ ನೆಲಸಿರಲಾಗಿ ಭಾಗ್ಯವಂತನಾದ ಶ್ರೀವರ್ಮನು ಯಶಸ್ಸಿಗೆ ನಿವಾಸಸ್ಥಾನವಾದನು.

ಅನಿತೊಂದು ಸಿರಿಯ ಮೈಮೆಯೊ ।
ಳನಿತೌದ್ಧತ್ಯಕ್ಕೆ ಸಲ್ಲದಾನೃಪತನಯಂ ॥
ವಿನಯೇನ ವಿನಾ ಕಾ ಶ್ರೀ ।
ಎನಿಪುಕ್ತಿಗೆ ಟೀಕುವರೆದ ತೆಱದಿಂ ನಡೆದಂ ॥ ೧೧

ಅದಲ್ಲದೆಯುಂ,

ಪಿತೃಸಂದೇಶದಿನಾಮಹೋನ್ನತಿಯುತಂ ಸಾದ್ರ್ರಾಂತರಂಗಂ ನಿರಾ ।
ಕೃತಭೂತಾಪಭರಂ ಕುಮಾರನಧಿಕೋತ್ಸಾಹಾವಗಾಹಂ ಪ್ರಭಾ ॥
ವತಿಯೆಂಬಗ್ಗದ ಕನ್ನೆಯಂ ಮದುವೆನಿಂದಂ ಸಾರ್ವಭೌಮಾನ್ವಯೋ ।
ದ್ಗತೆಯಂ ನೂತ್ನಘನಾಘನಂ ಪಡೆವವೊಲ್ ಸೌದಾಮಿನೀಸಂಗಮಂ ॥ ೧೨

ಅನಂತರಮೊಂದು ದಿವಸಂ ಪರಿಣತಭಾರ್ಯನುಮಾಶ್ಚರ್ಯಸೌಂದರ್ಯನುಮುಪಾರೂಢತಾರುಣ್ಯನುಮಾಸಾಧಿತಕಳಾನೈಪುಣ್ಯನುಮಾದ ಕುಮಾರನಂ ನಿಜಪದಸರೋಜಸೇವಾಸಮಾಗತಮನನನಾಸ್ಥಾನಸ್ಥಿತಂ ಶ್ರೀಷೇಣ ಮಹಾರಾಜಂ ದೂರದೊಳ್ ಕಂಡು,

ಚತುರಂತಕ್ಷಿತಿಭಾರಮಂ ತಳೆಯಲಾಂ ಸಾರ್ದಿರ್ದೊಡಂ ರಾಜ್ಯಮೋ ।
ಹಿತನಾಗಿರ್ದಪನಿಂದುಮೆಂದು ನಖರಚ್ಛಾಯಾಕಲಾಪಂಬಂಗಳಿಂ ॥
ಸುತಬಾಹಾಪರಿಘಂ ಸಮಂತು ನಗುವಂತಿರ್ದಪ್ಪುದಿನ್ನೆನ್ನ ಭೂ ।
ಪತಿವೃತ್ತಂ ದೊರೆಯಲ್ಲದೆಂಬ ಬಗೆಯಂ ತಂದಂ ನಿಜಸ್ವಾಂತದೊಳ್ ॥ ೧೩

೧೧. ಇಷ್ಟೊಂದು ವೈಭವ ಮಹಿಮೆಯುಳ್ಳವನಾಗಿದ್ದರೂ ಆ ರಾಜಕುಮಾರನಲ್ಲಿ ಅಹಂಕಾರವಿರಲಿಲ್ಲ. "ವಿನಯವಿಲ್ಲದ ಸೌಭಾಗ್ಯಕ್ಕೆ ಶೋಭೆಯಲ್ಲಿ ?" ಎಂಬ ಮಾತಿಗೆ ಬರೆದ ವ್ಯಾಖ್ಯಾನವೆಂಬಂತೆ ಆತನ ನಡತೆಯಿತ್ತು. ಅದಲ್ಲದೆ_ ೧೨. ಹೀಗೆ ಅತ್ಯಧಿಕವಾದ ಉನ್ನತಿಯನ್ನು ಪಡೆದು, ಭೂಮಿಯ ತಾಪವನ್ನು ಪರಿಹರಿಸಿದ ಆ ಕುಮಾರನು ತನ್ನ ತಂದೆಯ ಅಪ್ಪಣೆಯ ಮೇರೆಗೆ ಸಾರ್ವಭೌಮವಂಶದಲ್ಲಿ ಜನಿಸಿದ ಪ್ರಭಾವತಿಯೆಂಬ ಶ್ರೇಷ್ಠಕನ್ಯೆಯನ್ನು ಪ್ರೇಮದಿಂದಲೂ ಅತ್ಯಧಿಕವಾದ ಉತ್ಸಾಹದಿಂದಲೂ ಮದುವೆಯಾದನು. ಹೊಸಮಳೆ ಮೋಡಕ್ಕೆ ಮಿಂಚಿನ ಸಂಗಮವಾದಂತಾಯಿತು. ವ|| ಹೀಗೆ ವಿಸ್ಮಯಕರವಾದ ಸೌಂದರ್ಯವುಳ್ಳ, ತುಂಬು ಯೌವನದ, ಸಮಸ್ತಕಲೆಗಳಲ್ಲಿ ನಿಷ್ಣಾತನಾದ ಆ ಕುಮಾರನು ಮದುವೆಯ ಸುಖವನ್ನು ಹೊಂದುತ್ತಿದ್ದ, ಒಂದು ದಿವಸ, ತಂದೆಯ ಪಾದಕಮಲಗಳ ಸೇವೆಗೆಂದು ಒಡ್ಡೋಲಗಕ್ಕೆ ಬರುತ್ತಿರಲಾಗಿ, ಶ್ರೀಷೇಣಮಹಾರಾಜನು ದೂರದಿಂದಲೆ ಆತನನ್ನು ಕಂಡು– ೧೩. "ಚತುಃಸಮುದ್ರ ಪರ್ಯಂತವಾದ ಈ ಭೂಮಿಯ ಭಾರವನ್ನು ತಾಳಲು ನಾನು ಯೋಗ್ಯನಾಗಿದ್ದರೂ ಈತನು ಇನ್ನೂ ರಾಜ್ಯಾಧಿಕಾರದ ಮೋಹಕ್ಕೆ ಒಳಗಾಗಿರುವನು" ಎಂದು ತನ್ನನ್ನು ನೋಡಿ ಮಗನ ತೋಳು ನಗುತ್ತಿರುವುದೊ ಏನೋ ಎಂಬಂತೆ ಈತನ ಉಗುರುಗಳ ಕಾಂತಿಕಿರಣಗಳು ಹೊಮ್ಮುತ್ತಿವೆ. ಇನ್ನು ಮೇಲೆ ನಾನು ಅರಸನಾಗಿರುವುದು ಸರಿಯಲ್ಲ–

ಎಂದು ಬಗೆಯುತ್ತಿರ್ಪಿನಮೆಯ್ದೆವಂದು ಪೊಡೆಮಡಲೊಡಂ,

ಕಟ್ಟುವುದು ರಾಜ್ಯಪದವೀ ।
ಪಟ್ಟಮನೀಯೆಡೆಯೊಳೆಂದು ಕಂಕಣರವದಿಂ ॥
ನೆಟ್ಟನೆ ಪೇಟ್ದಾಯೆಡೆಯಂ ।
ಮುಟ್ಟಿಯೆ ತೋರ್ಪಂತೆ ನೊಸಲೊಳೆಸೆದುವು ಕೈಗಳ್ ॥ ೧೪

ಅಂತು ಪೊಡೆಮಟ್ಟು ಸಮುಚಿತಾಸನದೊಳ್ ಕುಳ್ಳಿರ್ದ ತನಯನಾನನಮನವನೀವಲ್ಲಭಂ ಮಂದೀಭೂತಮೋಹರಸಾನುಬಂಧಿಗಳಪ್ಪ ದೃಷ್ಟಿಗಳಿಂ ನೋಡಿ ಸಮಂತು ನಿಜಮನೋಗತಮನಿಂತೆಂದಂ–

ನೆಱೆದಧಿರಾಜಸೌಖ್ಯಹಿಮವಾಹಿನಿಯಂ ಸಮಸಂದಲಂಪಿನಿಂ ।
ಪೊಱಮಡದಿನ್ನೆಗಂ ನೆಲಸಿ ನೀರ್ ಸೆಱೆಗೊಂಡವೊಲಿರ್ದುದರ್ಕೆ ಮೈ ॥
ಬಱತವೊಲಾಗಿ ಪಾವನತಪೋವನಸಂಚರಣಕ್ಕೆ ತಾನೆ ಮ ।
ತ್ತೆಱಕಮನಾಂತುದೀಗಳನಿವಾರಣಮೆನ್ನಯ ಚಿತ್ತವಾರಣಂ ॥ ೧೫

ಅದು ಕಾರಣದಿಂ

ಜರೆ ಬಿಱುಗಾಳಿಯ ತೆಱದಿಂ ।
ದಿರದೆಯ್ದೆ ಮದೀಯಕಾಮತೃಣಕುಟಿಯಂ ಜ ॥
ರ್ಝರಿತಂ ಮಾಡದ ಮುನ್ನಮೆ ।
ಪರಮತಪೋಭರಮನಾಂಪ ಬಗೆಯಂ ಬಗೆದೆಂ ॥ ೧೬

ಹೀಗೆಂದು ರಾಜನು ಮನಸ್ಸಿನಲ್ಲಿಯೇ ಯೋಚಿಸಿದನು ವ॥ ಹೀಗೆ ಆತನು ಆಲೋಚನೆಯಲ್ಲಿ ತೊಡಗಿರುವಾಗಲೆ ಕುಮಾರನು ಬಂದು ನಮಸ್ಕರಿಸಲಾಗಿ– ೧೪. "ನೋಡು ರಾಜ್ಯಪದದ ಪಟ್ಟವನ್ನು ನೀನು ಕಟ್ಟಬೇಕಾದ ಸ್ಥಾನ ಇದು" ಎಂದು ತನ್ನ ಕಡಗಗಳ ಧ್ವನಿಯಿಂದ ಹೇಳುತ್ತ, ಆ ಸ್ಥಾನವನ್ನು ಮುಟ್ಟಿ ತೋರಿಸುವುವೊ ಏನೊ ಎಂಬಂತೆ ಹಣೆಗೆ ಜೋಡಿಸಿದ ಆತನ ಕೈಗಳು ಶೋಭಿಸಿದುವು ವ॥ ಹಾಗೆ ನಮಸ್ಕರಿಸಿ; ತನಗೆ ಯೋಗ್ಯವಾದ ಪೀಠದಲ್ಲಿ ಕುಳಿತ ಮಗನ ಮುಖವನ್ನು ಅರಸನು ಪ್ರೇಮಪೂರ್ವಕವಾಗಿ ನೋಡಿ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೀಗೆ ತಿಳಿಸಿದನು– ೧೫. ಅಧಿರಾಜ ಸೌಖ್ಯವೆಂಬ ತಂಪಾದ ಹೊಳೆಯಲ್ಲಿ ಒದಗಿದ ಸಂತೋಷಕ್ಕೆ ಮೆಚ್ಚಿ ಅಲ್ಲಿಂದ ಹೊರಬರದೆ, ನೀರಿನಲ್ಲಿ ಸೆರೆಯಿಟ್ಟಂತೆ ಇದ್ದುದರಿಂದ ಮೈ ಒರಟುಗೊಂಡು, ಈಗ ಪವಿತ್ರವಾದ ತಪೋವನದಲ್ಲಿ ಸಂಚರಿಸಬೇಕೆಂದು ನನ್ನ ಮನಸ್ಸೆಂಬ ಆನೆ ಬಯಸುತ್ತಲಿದೆ. ಅದನ್ನು ನಿರ್ಬಂಧಿಸಲಾಗದು. ಆದುದರಿಂದ– ೧೬. ಬಿರುಗಾಳಿಯಂತೆ ಬಂದು ಮುಪ್ಪು ನನ್ನ ದೇಹವೆಂಬ ಹುಲ್ಲಿನ ಗುಡಿಸಲನ್ನು ನುಗ್ಗು ಮಾಡುವುದಕ್ಕೆ ಮುಂಚಿತ

ಪ್ರವಚನಪರಿಪಠನಕ್ಷಮ ।
ತೆ ವಾಣಿಯಂ ತೀರ್ಥಯಾನದಕ್ಷತೆ ಪದಮಂ ॥
ಕಿವಿಯಂ ಜಿನವರಚರಿತ ।
ಶ್ರವಣಪಟುತೆ ಪಿಂಗದನ್ನಮಾರ್ಜಿಪೆನಱಿನೆಂ ॥ ೧೭

ಅದಲ್ಲದೆಯುಂ,

॥ ಪಿರಿಯಕ್ಕರಂ ॥

ತೊಱೆಯಲೆಂದಿರ್ಪ ರಾಜ್ಯಮನಾಳುತಿರ್ದುಂ ಮಱೆಯಲೆಂದಿರ್ದ ಬಂಧುಸಮೂಹಮಂ ।
ನೆಱಪಲೆಂದಿರ್ದ ಸತ್ತಪೋವೃತ್ತಿಯಂ ಮಱೆದಂತೆ ರಾಗವಿಹ್ವಳತೆಯಿಂದಂ ॥
ತೊಱೆಯದೆ ಮಱೆಯದೆ ನೆಱಪದಾಯುಷ್ಯಂ ಪಱಿಪಡುವಾಗಳೆ ಬೆರ್ಚಿದಂತೆ ।
ಮಱುಗುವ ಮರುಳಿಂಗಾರಯ್ಯ ವಿಭವಂ ಮಱುಭವಂ ನಾಡೆಯುಂ ವ್ಯರ್ಥಮಲ್ತೇ ॥

೧೮

ಅದಱಿನವಿರಳವಾತೂಳಿಕಾಭ್ರಮಣಪರಿಗತತೂಳಿಕಾತಳಮಪ್ಪ ಮನಕ್ಕೆಂತಾನುಂ ಕಾಲಲಬ್ಧಿವಶದಿಂದ ನಿವೃತ್ತಿಪರಿಣತಿಯೊಳ್ ಪರಿಣಮಿಸಿದ ಸುಸ್ಥತೆಯಂ ವ್ಯರ್ಥಂಮಾಡದೆ ತಪೋವನಾಭಿಮುಖನಾದೆನ್ನೀ ಪರಿನಿಷ್ಕ್ರಮಣದೊಳ್ ಪರಿಪಂಥಿಭಾವಮಂ ಪೊರ್ದದೊಡಂಬಡುವುದೆ ನಿನಗೆ ವಿನಯಮದಲ್ಲದೆಯುಂ,

ವಾಗಿ ಶ್ರೇಷ್ಠವಾದ ತಪಸ್ಸನ್ನು ಕೈಕೊಳ್ಳುವ ಯೋಚನೆ ಮಾಡಿರುವೆನು. ೧೭. ನಾಲಗೆ, ಕಾಲು, ಕಿವಿಗಳ ಶಕ್ತಿ ಕುಗ್ಗುವ ಮುನ್ನವೆ ಪ್ರವಚನಗಳನ್ನು ಪಠಿಸಿ, ತೀರ್ಥಯಾತ್ರೆಗೆಂದು ಸಂಚರಿಸಿ, ಜಿನೇಂದ್ರರ ಚರಿತ್ರೆಗಳನ್ನು ಕೇಳಿ ಧರ್ಮವನ್ನು ಗಳಿಸಿಕೊಳ್ಳುವೆನು. ಅದಲ್ಲದೆ – ೧೮. ಬಿಟ್ಟುಕೊಡಬೇಕೆಂದಿರುವ ರಾಜ್ಯವನ್ನು ಇನ್ನೂ ಆಳುತ್ತಲೆ ಇದ್ದು, ಮರೆಯಬೇಕೆಂದುಕೊಂಡಿದ್ದ ಬಂಧುಗಳ ಸಮುದಾಯವನ್ನು ಇನ್ನೂ ಅಂಟಿಕೊಂಡು, ಕೈಕೊಳ್ಳಬೇಕೆಂದುಕೊಂಡ ಉತ್ತಮವಾದ ತಪಶ್ಚರ್ಯೆಯನ್ನು ಮರತೇಬಿಟ್ಟಂತೆ, ಪ್ರಪಂಚದ ಮೋಹದಲ್ಲಿ ಸಿಕ್ಕಿಕೊಂಡು ಯಾವುದನ್ನೂ ತೊರೆಯದೆ, ಮರೆಯದೆ, ಹಾಗೆಯೆ ಉಳಿದು ಆಯುಷ್ಯ ಮುಗಿಯುತ್ತ ಬಂದಾಗ ಬೆಚ್ಚಿಬಿದ್ದಂತೆ ಪಶ್ಚಾತ್ತಾಪಪಡುವ ದಡ್ಡನಿಗೆ ಎಂತಹ ವೈಭವವಿದ್ದರೇನು? ಪುನರ್ಜನ್ಮ ಬಂದರೂ ಏನು? ಎಲ್ಲವೂ ವ್ಯರ್ಥವಲ್ಲವೆ? ವ॥ ಆದುದರಿಂದ ಬಲವಾದ ಸುಂಟರಗಾಳಿಯಲ್ಲಿ ಸಿಕ್ಕಿ ತಿರುಗುತ್ತಿರುವ ಅರಳೆಯಂತಿರುವ ಮನಸ್ಸು ಹೇಗೊ ಏನೊ ಕಾಲಲಬ್ಧಿಯಿಂದಾಗಿ ವೈರಾಗ್ಯಭಾವಕ್ಕೆ ಒಲಿದು, ಒಂದು ಸ್ಥಿರತೆಗೆ ಬಂದಿದೆ; ಇದನ್ನು ನಿರರ್ಥಕಗೊಳಿಸದೆ ತಪೋವನಕ್ಕೆ ಹೊರಡಬೇಕೆಂದಿರುವ ನನ್ನನ್ನು ಹೀಗೆ ಹೊರಡುವಾಗ ನಿರ್ಬಂಧಿಸದೆ,

ಪ್ರಣಯವಚೋವಿಲಾಸಮಣಮಲ್ತು ದಿಟಕ್ಕೆ ವಿಚಾರಿಪಂದು ದ ।
ಕ್ಷಿಣಭುಜಮಲ್ತೆ ನೀನೆನಗೆ ನಿನ್ನಯ ಸತ್ವಸಮೃದ್ಧಿಯಪ್ಪಿನಂ ॥
ಮಣಿಯದೆ ಪೊತ್ತುದಿನ್ನೆವರಮೀ ಪುಸಿಗೈಯದಱಿಕೊಂದು ಖೇದಮಂ ।
ಕ್ಷಣದೊಳೆ ತೂಳ್ದಿ ತಾಳ್ದುವುದು ಪಿಂಗದೆ ಪುತ್ರ ಸಮಸ್ತಧಾತ್ರಿಯಂ ॥ ೧೯

ಕುವಳಯಮಂ ಮೃದುಕರಪಾ ।
ತವಿಳಾಸದಿನೆಯ್ದೆ ನೀನಲರ್ಚಿ ನಿಮಿರ್ಚೀ ॥
ಭುವನಾಂತರಾಳದೊಳ್ ತನು ।
ಭವ ನಿನ್ನಯ ರಾಜನಾಮಮಂ ಸಾರ್ಥಕಮಂ ॥ ೨೦

ಅಸಮವಿಭೂತಿಗಳನುಪಾ ।
ರ್ಜಿಸುವೊಡೆ ಜನಮಂ ಸ್ವಕೀಯಮಂ ಮಾಳ್ಪುದು ಕೋ ॥
ಪಿಸದಂತವರ್ಕೆ ಪರಿಭಾ ।
ವಿಸೆ ಜನದನುರಾಗಮದೆ ನಿಬಂಧನೆಯಲ್ತೇ ॥ ೨೧

ಪೊರ್ದುವುದವ್ಯಗ್ರತೆಯಿಂ ।
ದಿರ್ದರಸನನಖಿಲವಿಭವಮಂತಾಯಿರವುಂ ॥
ಪೊರ್ದುವುದು ತನಗೆ ವಶಮಾ ।
ಗಿರ್ದೊಡೆ ಪರಿವಾರಮಾರಯಲ್ ಸರ್ವಸ್ವಂ ॥ ೨೨

ಒಡಂಬಡುವುದು ನಿನ್ನ ವಿನಯಕ್ಕೆ ತಕ್ಕದು. ಅದಲ್ಲದೆ– ೧೯. ಪ್ರೀತಿಯ ಮೂಲಕ ಹೊಗಳಿ ಹೇಳುವ ಮಾತಲ್ಲ ; ನಿಜವಾಗಿಯೂ ವಿಚಾರಮಾಡಿ ನೋಡಿದರೆ ನೀನು ನನಗೆ ಬಲಗೈಯಲ್ಲವೆ ? ನಿನ್ನ ಸಾಮರ್ಥ್ಯದ ಸಹಾಯ ಸಂಪೂರ್ಣವಾಗಿ ದೊರೆತುದರಿಂದಲೆ ಈ ಭೂಮಿಯ ಭಾರವನ್ನು ನನ್ನ ತೋಳು ಮಣಿಯದೆ ಈವರೆಗೆ ಹೊತ್ತುಕೊಂಡಿದೆ. ಆ ತೋಳಿನ ಆಯಾಸವನ್ನು ನೀನು ಇನ್ನು ಪರಿಹರಿಸು, ಮಗನೆ. ಸಮಸ್ತಭೂಮಿಯ ಭಾರವನ್ನು ಈ ಕ್ಷಣದಲ್ಲಿಯೆ ನೀನು ವಹಿಸಿಕೊ. ೨೦. "ಕುವಲಯ (೧. ಭೂಮಂಡಲ. ೨. ಬೆಳ್ದಾವರೆ) ವನ್ನು "ಮೃದುಕರಪಾತ" (೧. ಹಗುರಾದ ತೆರಿಗೆಗಳನ್ನು ವಿಧಿಸುವುದು. ೨. ಮೃದುವಾದ ಕಿರಣಗಳನ್ನು ಹರಡುವುದು) ದಿಂದ ಹಿಗ್ಗಿಸಿ ಲೋಕದಲ್ಲೆಲ್ಲ ನಿನ್ನ 'ರಾಜ' (೧. ಅರಸು. ೨. ಚಂದ್ರ) ಎಂಬ ಹೆಸರನ್ನು ಅನ್ವರ್ಥಗೊಳಿಸು. ೨೧. ಮಹಾವೈಭವವನ್ನು ಸಂಪಾದಿಸಬೇಕಾದರೆ ಜನರನ್ನು ಒಲಿಸಿ ತನ್ನವರಾಗಿ ಮಾಡಿಕೊಳ್ಳಬೇಕು. ಕೋಪತಾಪಗಳಿಲ್ಲದೆ ಜನರ ಪ್ರೇಮವನ್ನುಳಿಸಿಕೊಳ್ಳುವುದು ಅದಕ್ಕೆ ಮುಖ್ಯ ಉಪಾಯವಲ್ಲವೆ ? ೨೨. ಅರಸನು ಶಾಂತಮನಸ್ಕನಾಗಿದ್ದರೆ ಅವನಿಗೆ ಸಮಸ್ತ ವೈಭವಗಳೂ ಉಂಟಾಗುವುವು; ಹಾಗೆ ಶಾಂತತೆ ಉಳಿಯಬೇಕಾದರೆ

ಅನುರಕ್ತತೆಯಿಂ ನಿಜಪರಿ ।
ಜನದೊಳ್ ಮಾಟ್ಪೇಕೃತಜ್ಞತೆಯೆ ಮಾಟ್ಕುಂ ಮ ॥
ತ್ತೆನಿತು ಗುಣಮುಳ್ಳೊಡಂ ಸ ।
ಮ್ಮನಿಸದಣಂ ತಜ್ಜನಂ ಕೃತಘ್ನನನೆಂದುಂ ॥ ೨೩

ಕೃತಮಱಿವೊಡೆ ಸದ್ಗುರುಶಿ ।
ಕ್ಷಿತನಪ್ಪವನಱಿಗುಮಂತಱಿಂ ಸತತಂ ಸಂ ॥
ಗತಿ ಗುರುವಿನೊಳಾದೊಡೆ ನರ ।
ಪತಿ ಸುರಪತಿಲೀಲೆಯಂ ಸಮಂತೈದಿದಪಂ ॥ ೨೪

ಎಂದು ಶಿಕ್ಷಾಪುರಸ್ಸರಂ ಸಕಲಸಾಮ್ರಾಜ್ಯಶ್ರೀಯಂ ಶ್ರೀಷೇಣಭೂಪತಿ ನಿಜತನೂಜನೊಳ್ ನಿಯೋಜಿಸಿ ಸಮಸ್ತಸಾಮಂತಮಂತ್ರಿಸಂದೋಹಮಂ ಪಟ್ಟಬಂಧೋತ್ಸವಮಂ ಮಾಡಲ್ವೇೞ್ದು ಸಹಪಾಂಸುಕ್ರೀಡಿತರಪ್ಪ ಪಲಂಬರರಸುಗಳ್ವೆರಸು ಪುರಮಂ ಪೊಱಮಟ್ಟು ಪೋಗಿ ಶ್ರೀಪ್ರಭವ ಮುನಿಪ್ರಭುವ ಪಾದಮೂಲದೊಳ್ ನಿಷ್ಕೃತದಿಗಂಬರಶ್ರೀಕನಾಗಿ ನಿಖಿಲಕರ್ಮ ನಿರ್ಮುಕ್ತಿಯಿಂ ಪ್ರಾಪ್ತಸಪ್ತ ಪರಮಸ್ಥಾನನಾದನಿತ್ತಲ್.

ಗುರುಶಿಕ್ಷಾವಚನಂಗಳಂ ಹೃದಯದೊಳ್ ಮಾಂಗಲ್ಯಗೀತಾಮೃತ ।
ಸ್ವರಮಂ ಕರ್ಣದೊಳಾಂತು ರತ್ನಮಯಪಟ್ಟೋದ್ಯತ್ಪ್ರಭಾಮಂಜರೀ ॥
ಭರಮಂ ಭಾಳದೊಳಿಂದ್ರಶೈಳಮಣಿಶೃಂಗೋತ್ತುಂಗಮಂ ಮೌಳಿಯಂ ।
ಶಿರದೊಳ್ ತಾಳ್ದಿದನುತ್ತರೋತ್ತರತೆಯಿಂ ಶ್ರೀವರ್ಮಭೂಮೀಶ್ವರಂ ॥ ೨೫

ಆತನ ಪರಿವಾರ ಜನವೆಲ್ಲ ಅಧೀನವಾಗಿ ನಡೆದುಕೊಳ್ಳುತ್ತಿರಬೇಕು. ೨೩. ಪರಿವಾರ ಜನಕ್ಕೆ ರಾಜನು ಕೃತಜ್ಞನಾಗಿದ್ದರೆ ಅವರು ಆತನಲ್ಲಿ ಅನುರಕ್ತರಾಗಿರುವರು. ಇತರ ಗುಣಗಳು ಎಷ್ಟೇ ಇದ್ದರೂ ಕೃತಜ್ಞತೆಯಿಲ್ಲದ ಅರಸನನ್ನು ಅವರು ಎಂದೂ ಮೆಚ್ಚುವುದಿಲ್ಲ. ೨೪. ಕಾರ್ಯಾಕಾರ್ಯ ವಿವೇಕವು ಸದ್ಗುರುವಿನಿಂದ ಕಲಿತುಕೊಂಡವನಿಗೆ ಮಾತ್ರ ಸಾಧ್ಯ. ಆದುದರಿಂದ ಗುರುಗಳೊಡನೆ ಸದಾಕಾಲ ಸದ್ವಿನಯದಿಂದ ಹೊಂದಿಕೊಂಡಿದ್ದರೆ ಆ ಅರಸನು ಇಂದ್ರನಂತೆ ಸುಖವಾಗಿ ವೈಭವವನ್ನು ಅನುಭವಿಸಬಲ್ಲನು. ವ॥ ಹೀಗೆ ಉಪದೇಶಪೂರ್ವಕವಾಗಿ ತನ್ನ ಸಮಸ್ತ ಸಾಮ್ರಾಜ್ಯ ಸಂಪತ್ತನ್ನು ಶ್ರೀ ಷೇಣನು ಮಗನಿಗೆ ಒಪ್ಪಿಸಿ, ಆತನಿಗೆ ವಿಧಿವತ್ತಾಗಿ ಪಟ್ಟಕಟ್ಟಲು ಎಲ್ಲ ಸಾಮಂತ ಮಂತ್ರಿ ಮೊದಲಾದವರಿಗೆ ತಿಳಿಸಿ, ಬಾಲ್ಯದಿಂದಲೂ ತನ್ನ ಒಡನಾಡಿಗಳಾಗಿದ್ದ ಹಲವಾರು ಅರಸುಗಳೊಡನೆ ಪಟ್ಟಣದಿಂದ ಹೊರಟು ಹೋಗಿ ಶ್ರೀಪ್ರಭವ ಮುನೀಂದ್ರರ ಪಾದಸನ್ನಿಧಿಯಲ್ಲಿ ದಿಗಂಬರವ್ರತವನ್ನು ಕೈಕೊಂಡು ಸರ್ವ ಕರ್ಮ ತ್ಯಾಗದಿಂದ ಏಳನೆಯ ಗುಣಸ್ಥಾನವನ್ನು ಹೊಂದಿದನು. ೨೫. ತಂದೆಯ ಉಪದೇಶವನ್ನು ಹೃದಯದಲ್ಲಿಯೂ, ಮಂಗಳ ಗೀತೆಗಳ ಮಧುರಸ್ವರವನ್ನು ಕಿವಿಗಳಲ್ಲಿಯೂ, ತಾಳಿ, ರತ್ನಖಚಿತವಾದ ರಾಜಪಟ್ಟದ ಉಜ್ವಲ ಪ್ರಭೆಯನ್ನು ಹಣೆಯಲ್ಲಿಯೂ, ಇಂದ್ರನೀಲ ರತ್ನಗಳಿಂದ ಶೋಭಿಸುವ ಕಿರೀಟವನ್ನು ತಲೆಯಲ್ಲಿಯೂ ಧರಿಸಿ, ಶ್ರೀವರ್ಮರಾಜೇಂದ್ರನು

ಅನಂತರಂ

ಸಮನಿಸಿ ಮನದೊಳ್ ರತ್ಯು।
ತ್ಸವಮಂ ಕರಜಾತಹತಿಗೆ ಮೆಯ್ಯಾನಿಸಿದಂ॥
ಕ್ರಮದೆ ಬಟೆಕ್ಕಂ ಪ್ರಜೆಯಂ।
ಪ್ರಮದೆಯನೆಂತಂತೆ ನಯವಿದಂಗರಿದುಂಟೇ॥ ೨೬

ಅದುಮಲ್ಲದೆಯುಂ

ಕರಿಸೇನಾಕರಲೂನವೈರಿವನದುರ್ಗವ್ರಾತನಶ್ವಾವಳೀ।
ಖುರಟಂಕಾಹತಿಪಾತಿತಾರಿಗಿರಿದುರ್ಗವ್ರಾತನನ್ಯೋನ್ಯಸೈ॥
ನ್ಯರಜೋವ್ರಾತಸಮೀಕೃತಾನ್ಯಜಳದುರ್ಗವ್ರಾತನುತ್ತಾನತೂ।
ರ್ಯರವಾಕಂಪಿತಶತ್ರುದಿಗ್ವಿಜಯಯಾತ್ರಾಕ್ರೀಡೆಯಂ ಮಾಡುವಂ॥ ೨೭

ತುರಗಾರೋಹಣದಿಂದಮೊರ್ಮೆ ಗಜಶಿಕ್ಷಾಲೀಲೆಯಿಂದೊರ್ಮೆ ಕಾ।
ವ್ಯರಸಾಸ್ವಾದದಿನೊರ್ಮೆ ವೈಣಿಕಕೃತಪ್ರಸ್ತಾವದಿಂದೊರ್ಮೆ ಗ॥
ರ್ಘರಿಕಾಸ್ವಾದನದಿಂದದೊರ್ಮೆ ವನವಾರಿಕ್ರೀಡೆಯಿಂದೊರ್ಮೆ ಚಿ।
ತ್ರರುಚಿಪ್ರೀತಿಗಳಿಂದ ಪೊೞ್ತುಗಳೆವಂ ಶ್ರೀಗೋಮಿನೀವಲ್ಲಭಂ॥ ೨೮

ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದಿದನು. ಆ ನಂತರದಲ್ಲಿ– ೨೬. ಮನಸ್ಸಿನಲ್ಲಿ ಮೊದಲು "ರತ್ಯುತ್ಸವ" (೧. ರತಿಭಾವದ ಉದ್ವೇಗ, ೨. ಅನುರಾಗದ ಸಂತೋಷ) ವನ್ನು ಉಂಟುಮಾಡಿ ಆ ನಂತರ "ಕರಜಾತಹತಿ" (೧. ಉಗುರುಗಳ ಗಾಯ, ನಖಕ್ಷತ. ೨. ಸುಂಕ, ತೆರಿಗೆ ಮೊದಲಾದವುಗಳ ಭಾರ) ಮೈಗೊಡುವಂತೆ ಪ್ರಮದೆಯನ್ನು ಹೇಗೆ ಅಣಿಗೊಳಿಸಬೇಕೊ ಹಾಗೆ ಪ್ರಜೆಗಳನ್ನೂ ಅಣಿಗೊಳಿಸಿದನು. ನಯವನ್ನು ಬಲ್ಲವರಿಗೆ ಅಸಾಧ್ಯವಾದುದೇನು ? ಅದಲ್ಲದೆ– ೨೭. ತನ್ನ ಗಜಸೈನ್ಯದಿಂದ ವೈರಿಗಳ ವನದುರ್ಗವನ್ನೆಲ್ಲ ಕತ್ತರಿಸಿ, ಅಶ್ವದಳದ ಗೊರಸುಗಳೆಂಬ ಉಳಿಯಿಂದ ಶತ್ರುಗಳ ಗಿರಿದುರ್ಗಗಳನ್ನು ಸೀಳಿ, ತನ್ನ ಹಾಗು ಎದುರಾಳಿಗಳ ಸೈನ್ಯಗಳ ಕಾಲ್ತುಳಿತದಿಂದೆದ್ದ ಕಾಲ್ಧೂಳಿಯಿಂದ ವಿರೋಧಿಗಳ ಜಲದುರ್ಗಗಳನ್ನು ಹೂಳಿ, ತನ್ನ ಉತ್ಕಟವಾದ ಭೇರಿಗಳ ಧ್ವನಿಯಿಂದಲೆ ಶತ್ರುಗಳ ಎದೆಗಳನ್ನು ನಡುಗಿಸುತ್ತ (ಶ್ರೀವರ್ಮರಾಜನು) ದಿಗ್ವಿಜಯ ಕ್ರೀಡೆಯನ್ನು ಮಾಡುವನು. ೨೮. ಒಮ್ಮೊಮ್ಮೆ ಕುದುರೆಯೇರಾಟದಲ್ಲಿ ಒಮ್ಮೊಮ್ಮೆ ಆನೆಗಳಿಗೆ ಅಜ್ಞಾವಚನಗಳನ್ನು ಕಲಿಸುವುದರಲ್ಲಿ ಒಮ್ಮೊಮ್ಮೆ ಕಾವ್ಯವಿನೋದದಲ್ಲಿ, ಒಮ್ಮೊಮ್ಮೆ ವೀಣಾವಾದನ ಸೌಖ್ಯದಲ್ಲಿ, ಒಮ್ಮೊಮ್ಮೆ ಗರ್ಘರಿಕೆಯ ಸಂತೋಷದಲ್ಲಿ. ಒಮ್ಮೊಮ್ಮೆ ವನಕೇಳಿ, ಜಲಕೇಳಿಗಳಲ್ಲಿ, ಒಮ್ಮೊಮ್ಮೆ

ಅಂತರಂಗೀಕೃತಕಳಾವರ್ಗನುಂ, ಕೃತಾರ್ಥೀಕೃತವಂದಿವರ್ಗನುಂ, ವಶೀಕೃತವಧೂವರ್ಗನುಂ, ಪ್ರಸನ್ನೀಕೃತಗುರುವರ್ಗನುಂ, ತರಳೀಕೃತಾಶಾವರ್ಗನುಂ, ದೂರೀಕೃತಾರಿಷಡ್ವರ್ಗನುಂ, ಸಮೀಕೃತ ತ್ರಿವರ್ಗನುಂ, ದೃಢೀಕೃತತಳವರ್ಗನುಂ, ನಮೀಕೃತಸಾಮಂತವರ್ಗನುಮಾಗಿ ಪ್ರಭಾವತೀ ಮಹಾದೇವಿವೆರಸು ಇಷ್ಟವಿಷಯಕಾಮಭೋಗಾನುಭವನಿರತಂ ಪಲಕಾಲಮರಸುಗೆಯ್ಯುತುಮಿರೆ

ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲಕೀಲಾ ।
ವಳಿ ಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ ಪಶ್ಚಿಮಾಶಾ ॥
ನಿಳಪಾತೋಜ್ಜೃಂಭಿತಂ ಬಂದುದು ವಿರಹಿತರುವ್ರಾತಮಂ ಪರ್ವುವುಗ್ರಾ ।
ನಳನೆಂಬಂತಬ್ದ ಕಾಲಂ ಸ್ತನಿತಧಗಧಗಧ್ವಾನರೌದ್ರಾಯಮಾಣಂ ॥ ೨೯

ಆಗಳ್

॥ ಮಾಳಿನೀವೃತ್ತಂ ॥

ವರುಣಮಕರಹಸ್ತೋಚ್ಛೀಕರಾರ್ದ್ರಂ ಪ್ರತೀಚೀ ।
ಶರಧಿವಿಮಳಫೇನಾಪಾಂಡುವಸ್ತಾದ್ರಿಕುಂಜ ॥
ಸ್ಫುರಿತಕುಟಜಕುಂದಾಮೋದನಿಷ್ಯಂದಿ ತೀಡಿ ।
ತ್ತಿರದೆ ಮುದಿತವಿಶ್ವಂ ನಾಭಸಂ ಮಾತರಿಶ್ವಂ ॥ ೩೦

ಚಿತ್ರಕಲೆಯ ಆಸಕ್ತಿಯಲ್ಲಿ ರಾಜೇಂದ್ರನು ಹೊತ್ತುಗಳೆಯುವನು. ವ ॥ ಹಾಗೆ ಕಲಾವಿದರನ್ನೆಲ್ಲ ಒಳಗೊಂಡು, ವಂದಿಮಾಗಧರೆ ಮೊದಲಾದವರನ್ನು ಸಂತುಷ್ಟಗೊಳಿಸಿ, ತನ್ನ ವಧುಗಳನ್ನೆಲ್ಲ ಒಲಿಸಿಕೊಂಡು, ಗುರುಗಳನ್ನು ಮೆಚ್ಚಿಸಿ, ದಿಕ್ಕುದಿಕ್ಕುಗಳಲ್ಲಿರುವ ರಾಜರನ್ನು ತನ್ನ ಪ್ರತಾಪದಿಂದ ನಡುಗಿಸಿ, ಮದ, ಮೋಹ ಮೊದಲಾದ ಷಡ್ವರ್ಗವನ್ನು ದೂರಗೊಳಿಸಿ, ಮನ ವಚನ ಕಾಯಗಳೆಂಬ ಮೂರನ್ನೂ ನಿಗ್ರಹಿಸಿ, ತನ್ನ ಸೈನ್ಯವನ್ನು ಭದ್ರಪಡಿಸಿ, ಸಾಮಂತರನ್ನೆಲ್ಲ ಅಧೀನಗೊಳಿಸಿ, ಪ್ರಭಾವತೀ ಮಹಾರಾಣಿಯೊಡನೆ ಯಥೇಷ್ಟವಾಗಿ ದಾಂಪತ್ಯ ಸುಖವನ್ನು ಅನುಭವಿಸುತ್ತ ಹಲವಾರು ಕಾಲ ರಾಜ್ಯಭಾರ ಮಾಡುತ್ತಿರಲಾಗಿ– ೨೯. ಕಾರ್ಮೋಡಗಳೆಂಬ ಕರಿಯ ಹೊಗೆಯನ್ನು ಸಂದಣಿಸುತ್ತ, ಚಂಚಲವಾದ ಮಿಂಚೆಂಬ ಅಗ್ನಿಜ್ವಾಲೆಗಳನ್ನು ಚಿಮ್ಮುತ್ತ, ಹೊನ್ನೆಹುಳುಗಳೆಂಬ ಕಿಡಿಗಳನ್ನು ಹರಡುತ್ತ, ಪಡುವಣ ಗಾಳಿಯಿಂದ, ಹಿಗ್ಗಿ ಉರಿದೇಳುತ್ತ ವಿರಹಿಜನರೆಂಬ ವೃಕ್ಷಗಳನ್ನು ಭೀಕರವಾಗಿ ಆವರಿಸುವ ಪ್ರಚಂಡವಾದ ಅಗ್ನಿಯೊ ಏನೊ ಎಂಬಂತೆ ಧಗಧಗವೆಂದು ಗುಡುಗುತ್ತ ಮಳೆಗಾಲವು ರುದ್ರರೂಪ ತಾಳಿ ಬಂದಿತು. ೩೦. ವರುಣದೇವನ ಮಕರದ ಪಕ್ಕದಿಂದೆದ್ದ ತುಂತುರುಹನಿಗಳಿಂದ ತೊಯ್ದು, ಪಶ್ಚಿಮಸಮುದ್ರದ ನಿರ್ಮಲವಾದ ನೊರೆಯಿಂದ ಬೆಳ್ಳಗಾಗಿ, ಅಸ್ತಗಿರಿಯ ಪೊದೆಗಳಲ್ಲಿ ಅರಳಿದ ಕೊಡಸಿಗೆ ಹಾಗು ಮೊಲ್ಲೆಗಳ ಪರಿಮಳವನ್ನು ಸೂಸುತ್ತ, ಲೋಕಾನಂದಕರವಾದ ಮಳೆಗಾಲದ

ಘನವಹ್ನಿಜ್ವಾಲಧೂಮಾವಳಿಯೊ ಗಗನಗಂಗಾತಟೋದ್ವೃತ್ತಮಾಳೀ ।
ವನಮೋ ವಿದ್ಯುನ್ನಟೀಕರ್ಬುರಜವನಿಕೆಯೋ ಚಾರುಮೇಘಾಗಮಶ್ರೀ ॥
ವನಿತಾಪಿಂಛಾತಪತ್ರಪ್ರಕರಮೊ ವಿಯದುತ್ತುಂಗಮಾತಂಗಭೂಷಾ ।
ಜಿನಪಕ್ಷತ್ರಾಣಮೋ ಮೇಣೆನೆ ನೆಗೆದುದಳಿಶ್ಯಾಮಳಂ ಮೇಘಜಾಳಂ ॥ ೩೧

ಸ್ತನಿತಘನಬೃಂಹಿತಂ ದು ।
ರ್ದಿನಮದಪೂರಂ ಪಯೋದಗಜಘಟೆ ಸುಟಿದ ॥
ತ್ತಿನರುಚಿಪಲ್ಲವಕುಳಕಬ ।
ಳನಲೀಲೆಯಿನಂತರಿಕ್ಷಕಕ್ಷ್ಯಾಂತರದೊಳ್ ॥ ೩೨

ಮುಂ ಬಿಸಜೋದ್ಭವಂ ಸಮೆದನಂಬುದಮಂ ಪವಮಾನಧೂಮತೇ ।
ಜೋಂಬುಗಳಿಂದಮೆಂಬ ನುಡಿ ಸತ್ಯಮದಲ್ಲದೊಡುಂತೆ ಕಾರ ಕಾ ॥
ದಂಬಿನಿ ಮಾಳ್ಕುಮೇ ಬಿರಯಿಗಂಗಜವಹ್ನಿ ವಿಜೃಂಭಮಂ ವಿಳೋ ।
ಳಾಂಬಕವಾರಿಯಂ *ಹೃದಯತಾಪಮನುತ್ಕಳಿಕಾಪ್ರಪಂಚಮಂ ॥ ೩೩

ಇಂಬುಗಿಡಿಸಿದುವು ದೆಸೆಗಳ ।
ನಂಬರಮಂ ಪೀರ್ದುವಹಿಮಹಿಮಕರಕಿರಣಾ ॥
ಡಂಬರಮಂ ನೋಣೆದುವು ಪಿರಿ ।
ದುಂ ಬೇಸಟಿಸಿದುವು ಬಿರಯಿಯಂ ಜಳದಂಗಳ್ ॥ ೩೪

ಗಾಳಿ ನಿಲ್ಲದೆ ಬೀಸಿತು. ೩೧. ಇದೇನು ಪ್ರಚಂಡವಾದ ಅಗ್ನಿಜ್ವಾಲೆಯಿಂದ ಹೊಮ್ಮಿದ ಹೊಗೆಯ ದಟ್ಟಣೆಯೊ, ಆಕಾಶಗಂಗೆಯ ತೀರದಲ್ಲಿ ಬೆಳೆದ ತಮಾಲ ವೃಕ್ಷಗಳ ಸಮುದಾಯವೊ, ಮಿಂಚೆಂಬ ನರ್ತಕಿಯು ಹೊದೆದುಕೊಂಡು ಕರಿಯ ಮುಸುಕಿನ ವಸ್ತ್ರವೊ, ಸುಂದರವಾದ ಮಳೆಗಾಲದ ಲಕ್ಷ್ಮಿಗೆ ಎತ್ತಿಹಿಡಿದ ನವಿಲು ಗೊಡೆಗಳ ಸಮೂಹವೊ, ಅಥವಾ ಆಕಾಶವೆಂಬ ಅದ್ಭುತವಾದ ಆನೆಗೆ ಅಲಂಕಾರ ವಾಗಿ ಹೊಚ್ಚಿದ ಚರ್ಮದ ಪಕ್ಕರಕ್ಕೆಯೊ ಎಂಬಂತೆ ದುಂಬಿಗಪ್ಪಿನ ಮೋಡಗಳ ಹಿಂಡು ನೆರೆಯಿತು. ೩೨. ಮೋಡದ ಗುಡುಗೆಂಬ ಘೀಂಕಾರ ಮಾಡುತ್ತ, ಮಳೆಯೆಂಬ ಮದೋದಕಧಾರೆಯನ್ನು ಸುರಿಸುತ್ತ ಮೇಘಗಳೆಂಬ ಗಜಸಮೂಹವು ಆಕಾಶದ ಅಂಗಳದಲ್ಲಿ ಸೂರ್ಯಕಿರಣಗಳೆಂಬ ಚಿಗುರೆಲೆಗಳನ್ನು ಮೇಯುತ್ತಾ ಸುಳಿದಾಡಿತು. ೩೩. ಗಾಳಿ, ಹೊಗೆ ಹಾಗು ಬೆಂಕಿಗಳನ್ನು ಮೊದಲು ಬೆರಸಿಯೆ ಬ್ರಹ್ಮನು ಮೋಡಗಳನ್ನು ನಿರ್ಮಿಸಿದನೆಂಬ ಮಾತು ಸರಿಯಾದುದು; ಹಾಗಲ್ಲವಾದರೆ ಮಳೆಗಾಲದ ಮೋಡಗಳು ವಿರಹಿ ಜನಕ್ಕೆ ಕಾಮಾಗ್ನಿಯ ಹೆಚ್ಚಳವನ್ನೂ ಕಣ್ಣಲ್ಲಿ ನೀರನ್ನೂ, ಹೃದಯದಲ್ಲಿ ತಾಪವನ್ನು ಹಾಗು ಕಾತರತೆಯನ್ನು ಉಂಟುಮಾಡುವುದು ಸಾಧ್ಯವಿದ್ದಿತೆ ? ೩೪. ಮೋಡಗಳು ಆಕಾಶ ದಿಕ್ಕುಗಳನ್ನೆಲ್ಲ ಅವಕಾಶವಿರದಂತೆ ಆವರಿಸಿ, ಸೂರ್ಯಕಿರಣಗಳನ್ನು ಹೀರಿಕೊಂಡು, ಚಂದ್ರಕಿರಣಗಳನ್ನು

---

* ತನುವಿದಾಮಹ.

ಪಿಕಮೌನವ್ರತದುಂದುಭಿಧ್ವನಿ ಬಲಾಕಾದೃಶ್ಯಚೂಡೋದಯಾ।
ನಕರಾವಂ ಶಿಖಿನೃತ್ಯವಾದ್ಯರುತಿ ಪೋತಕ್ಯುದ್ಭಗರ್ಭೋತ್ಸವೋ॥
ತ್ಸುಕವಾದಿತ್ರರವಂ ಮರಾಳಗಮನಾತೋದ್ಯಸ್ವನಂ ಚಾತಕೋ।
ದಕಕೇಳೀಕೃತತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ॥ ೩೫

ಸಕಳಾಬ್ದಾಂಭಸ್ಸಿರಾಮೋಚನಸುನಿಶಿತಶಸ್ತ್ರಂ ಪ್ರಯಾಣೋತ್ಕಹಂಸ।
ಪ್ರಕರಪ್ರಸ್ಥಾನಭೇರೀಕನಕಮಯಕನತ್ಕೋಣಮಾಸಾರಲಕ್ಷ್ಮೀ॥
ಪ್ರಕಟಾಂಭೋದಾವಳೀವಿಶ್ಲಥಕಬರಿಭರಸ್ರಂಸಿದಾಮಂ ಚಳಚ್ಚಾ।
ತಕರಾಜ್ಯಶ್ರೀಕಟಾಕ್ಷದ್ಯುತಿಲತಿಕೆ ತಟಿನ್ಮಾಲೆ ಚೆಲ್ವಾದುದಾದಂ॥ ೩೬

ಘನಸಮಯಶಬರಕರಗತ।
ಕನತ್ತಟಿದಂಡಪಾತವಿಗಳನ್ನೀಳ॥
ಸ್ತನಯಿತ್ನುಕುಳತಮಾಳೀ।
ವನಪ್ರಸೂನಂಗಳೆನಿಸಿದುವು ಕರಕಂಗಳ್॥ ೩೭

ಕಱಿಸಿದುವು ಕಾಳಿಮಮಂ ಮುಂ।
ಕಱಿಸಿದುವು ಮಿಂಚಂ ಬಟಿಕ್ಕೆ ಕರಕೋಪಲಮಂ॥
ಕಱಿಸಿದುವು ಬಟಿಕಂ ಬಟಿಕಂ।
ಕಱಿಸಿದುವು ನುಣ್ಬನಿಯನೊಗೆದ ಮುಗಿಲೆಳಗಾರೊಳ್॥ ೩೮

ನುಂಗಿ, ವಿರಹಿಗಳಿಗೆ ತುಂಬ ಬೇಸರವನ್ನೊದಗಿಸಿದುವು. ೩೫. ಕೋಗಿಲೆಗಳ ಮೌನ ವ್ರತಾರಂಭಕ್ಕಾಗಿ ಬಾರಿಸುತ್ತಿರುವ ದುಂದುಭಿಧ್ವನಿಯೊ, ಮೋಡಗಳ ಅದೃಶ್ಯವಾದ ಚೌಲಸಂಸ್ಕಾರದಲ್ಲಿ ನುಡಿಸುವ ಮಂಗಳವಾದ್ಯನಿನಾದವೊ, ನವಿಲುಗಳ ನೃತ್ಯಕ್ಕೆ ಅಳವಡಿಸಿದ ಮೇಳವಾದ್ಯಧ್ವನಿಯೊ ಕೋಮಲವಾದ ಸಸ್ಯಗಳ ಗರ್ಭೋತ್ಸವದ ವಾದ್ಯರವವೊ, ಹಂಸಗಳ ಪ್ರಯಾಣಮಂಗಳದ ಭೇರೀನಾದವೊ, ಚಾತಕಪಕ್ಷಿಗಳ ಜಳಕೇಳಿಯ ಉತ್ಸವಕ್ಕೆಂದು ಬಾರಿಸುವ ತೂರ್ಯನಿನಾದವೊ– ಎಂಬಂತೆ ಮೋಡಗಳ ಗುಡುಗಾಟದ ನಾದವು ಶೋಭಿಸಿತು. ೩೬. ಸಮಸ್ತ ಮೇಘಗಳ ತಲೆಯಲ್ಲಿರುವ ನೀರನ್ನು ಮುಕ್ತಗೊಳಿಸುವುದಕ್ಕಾಗಿ ಬಳಸುವ ಹರಿತವಾದ ಶಸ್ತ್ರವೊ, (ಮಾನಸಸರೋವರಕ್ಕೆ) ಪ್ರಯಾಣ ಹೊರಟ ಹಂಸಸಮೂಹದ ಪ್ರಸ್ಥಾನೋತ್ಸವದಲ್ಲಿ ಭೇರಿಯನ್ನು ಬಾರಿಸುವ ಚಿನ್ನದ ವಾದನದಂಡವೊ, ಮಳೆಯೆಂಬ ಲಕ್ಷ್ಮಿಯ ತಲೆಗೂದಲಿಂದ ಕಳಚಿದ ಹೂಮಾಲೆಯೊ, ಚಾತಕಗಳ ರಾಜ್ಯಲಕ್ಷ್ಮಿಯ ಕಡೆಗಣ್ಣೋಟದ ಬಳ್ಳಿಯೊ ಎಂಬಂತೆ ಮಿಂಚುಗಳ ಮಾಲೆ ಚೆಲುವಾಯಿತು. ೩೭. ಮಳೆಗಾಲವೆಂಬ ಕಿರಾತನು ಮಿಂಚೆಂಬ ಕೋಲಿನಿಂದ ಬಡಿಯಲಾಗಿ, ಮೋಡಗಳೆಂಬ ತಮಾಲವನದಿಂದ ಉದುರಿಬೀಳುವ ಹೂಗಳೆಂಬಂತೆ ಆಲಿಕಲ್ಲುಗಳು ಕಂಗೊಳಿಸಿದುವು ೩೮. ಮಳೆಗಾಲದ ಆರಂಭ ಸಮಯದಲ್ಲಿ ಮೋಡಗಳು ಮೊದಲು ಕತ್ತಲೆಯನ್ನು ಸುರಿಸಿದುವು, ಆಮೇಲೆ ಮಿಂಚನ್ನು ಅನಂತರ ಆಲಿಕಲ್ಲುಗಳನ್ನು, ಆ ಬಳಿಕ

ಕಾರ್ಮುಗಿಲಿಂ ಜಲಲವತತಿ ।
ಕಾರ್ಮುಕದಿಂ ಸ್ಮರಶರಂ ವಿಯೋಗಿಗಳ ಮನೋ ॥
ಧರ್ಮದಿನೊಂದಿರ್ದಱಿಯಮೆ ।
ಯೊರ್ಮೆಯೆ ಬಿಡುತಂದುವೃದೆ ಜಲದಾಗಮದೊಳ್ ॥ ೩೯

ಅಧೃಢಾಗಾರವಿಪನ್ನಖಿನ್ನಗೃಹಿಣೀನಿಶ್ವಾಸದಿಂ ಕೂಡೆ ತೂ ।
ಱಿದುವಾವಾಸಪರಿಕ್ರಿಯಾಕುಲವಧೂವಕ್ಷೋಜದೊಳ್ ಬಿಟ್ಟು ಸೇ ॥
ಱಿದುವುತ್ಕಂಠವಿಯೋಗಿನೀಜನತೃಷಾತ್ಯುಷ್ಣಾಂಗಸಂಸಂಗದಾ ।
ಱಿದುವಾದಂ ನವನೀಲನೀರಧರಮುಕ್ತವ್ಯಕ್ತವಾರ್ಬಿಂದುಗಳ್ ॥ ೪೦

ಪುರಮಂತರ್ದ್ವೀಪಮೆಂಬಂತಿರೆ ವಿಪಿನಚರಾನೇಕಪಾನೀಕಮಂಭಃ ।
ಕರಿಯೂಥಂ ತಾನಿದೆಂಬಂತಿರೆ ನಗನಿಕರಂ ಪಕ್ಷಕುತ್ಕೀಳಮೆಂಬಂ ॥
ತಿರೆ ಮತ್ತಂ ಲೋಕಮೇಕಾರ್ಣವಮೆನಿಸಿದುದೆಂಬಂತಿರೆತ್ತೆತ್ತಲುಂ ಕಾ ।
ಟ್ಪುರಮಾದಂ ಕೊರ್ವೆಬಿರ್ದಂ ಕಱಿದುದುಬಹಳಾಸಾರಮಂ ನೀರದೌಘಂ ॥ ೪೧

ಮಿಳಿರ್ವ ಕುಡಿ ಮಿಂಚು ಸುರಧನು ।
ತಳಿರ್ದೋರಣವಾಲಿ ರಂಗವಲಿ ಬದ್ದವಣಂ ॥
ಜಳದರವಮಾಗೆ ಜಯಮಂ ।
ಗಳಸೂಚಕಮಾದುದತನುಗಾಘನಸಮಯಂ ॥ ೪೨

ಸೊಗಸಾದ ನೀರ ಹನಿಗಳನ್ನು ಕರೆದುವು. ೩೯. ಕಾರ್ಮೋಡಗಳಿಂದ ನೀರ ಹನಿಗಳೂ, ಮನ್ಮಥನ ಬಿಲ್ಲಿನಿಂದ ಬಾಣಗಳೂ, ವಿರಹಿಗಳ ಮನಸ್ಸಿನಿಂದ ಅಜ್ಞಾನವೂ ಒಮ್ಮೆಲೆ ಮಳೆಗಾಲದಲ್ಲಿ ಹೊರ ಹೊಮ್ಮಿದುವು. ೪೦. ಹೊಸ ಕಾರ್ಮೋಡಗಳಿಂದ ಚಿಮ್ಮಿದ ನೀರಹನಿಗಳು, ಶಿಥಿಲವಾದ ಮನೆಯೊಳಗೆ ಹೊಕ್ಕು ದುಃಖಿತರಾದ ಆ ಗೃಹಿಣಿಯರ ನಿಟ್ಟುಸಿರಿನಿಂದ ಹಾರಿಹೋದುವು; ಮನೆಯ ಪ್ರಾಕಾರದಲ್ಲಿರುವ ಕುಲಸ್ತ್ರೀಯರ ಸ್ತನಗಳ ನಡುವೆ ಬಿದ್ದು ಅಲ್ಲಿಯೆ ಸೇರಿಕೊಂಡುವು; ಕಾತರರಾಗಿ ಬಾಯಾರಿದ ವಿರಹಿಣಿಯರ ತಪ್ತದೇಹಗಳನ್ನು ಮುಟ್ಟಿ ಆರಿಹೋದುವು. ೪೧. ಪಟ್ಟಣವು ಸಮುದ್ರಮಧ್ಯದ ದ್ವೀಪವಾಗುವಂತೆ, ಕಾಡಿನಲ್ಲಿ ಸಂಚರಿಸುವ ಆನೆಗಳು ನೀರಾನೆಗಳೆನಿಸುವಂತೆ, ಪರ್ವತಗಳೆಲ್ಲ (ಕಡಲಲ್ಲಿ ಆಶ್ರಯ ಪಡೆದ) ಕುಲಗಿರಿಗಳೆನಿಸುವಂತೆ, ಜಗತ್ತೆಲ್ಲ ಜಲಮಯವಾಗುವಂತೆ, ಎತ್ತೆತ್ತಲೂ ಹೊಳೆಗಳು ಮಹಾಪೂರವಾಗಿ ಸೂಸಿ ಹರಿಯುವಂತೆ ಮೋಡಗಳು ಅತ್ಯಧಿಕವಾಗಿ ಮಳೆಗರೆದುವು. ೪೨. ಮಿಂಚು ಸಿಂಚಲವಾದ ಕುಡಿಯಾಗಿ, ಇಂದ್ರಧನುವೆ ತಳಿರತೋರಣವಾಗಿ, ಆಲಿಕಲ್ಲುಗಳೆ ರಂಗವಲಿಯಾಗಿ, ಮೋಡಗಳ ಗುಡುಗೆ ಮಂಗಳವಾದ್ಯವಾಗಿ, ಮಳೆಗಾಲವು ಮನ್ಮಥನಿಗೆ ಜಯಸೂಚಕವಾದ ಮಂಗಳವಾಯಿತು.

ಮತ್ತಮದು ಸಮುಚಿತನೀಲಕಂಠವಿಳಾಸಮಾಗಿಯುಂ ವೀತಕೇತಕಮಲ್ತು; ವಿಧೃತಮದನ ಜನಕತ್ವಮಾಗಿಯುಂ ಕಮಲೋತ್ಸವಕಾರಿಯಲ್ತು; ಅಂಗೀಕೃತಕುಟಜಶೋಭಾಪ್ರಭಾವಮಾಗಿಯುಂ ಸಂಶೋಷಿತಜಡಾಕರಮಲ್ತು; ಸಮುಚ್ಛ್ರಿತಾನೇಕಮೇಘಡಂಬರಚಾರುತಾವಳಂಬಿಯಾಗಿಯುಂ ಪ್ರಕಟೀಕೃತರಾಜಲೀಲೋದಯಮಲ್ತು ; ಪ್ರಕರ್ಷಾನೇಕವರ್ಷಾನುಗತಮಾಗಿಯುಂ ಅಚಪಳಾಚರಣ ಪರಿಣತಮಲ್ತು; ಅತಿಪರುಷಘನನಿನದಯುಕ್ತಮಾಗಿಯುಂ ಅಸಾರ್ದ್ರತಾನುವಿದ್ಧಮಲ್ತು ; ಅತಿಕ್ರಾಂತವೈಶಾಖವೃತ್ತಿಯಾಗಿಯುಂ ಅಬರ್ಹಿಲೀಲಾರ್ಹಮಲ್ತು; ಅಂತುಮಲ್ಲದೆಯುಂ,

ವ॥ ಮತ್ತು ಮಳೆಗಾಲವು "ಸಮುಚಿತನೀಲಕಂಠವಿಳಾಸ" (೧. ಶ್ಲಾಘ್ಯವಾದ ನವಿಲು ಗಳಿಂದ ಶೋಭಿಸುವುದು. ೨. ಶ್ರೇಷ್ಠವಾದ ಕರಿಯ ಕೊರಳುಳ್ಳ ಶಿವ) ವಾಗಿಯೂ ಕೇದಗೆಯನ್ನು ಉಳಿದುದಲ್ಲ (ಶಿವನಿಗೆ ಕೇದಗೆ ನಿಷಿದ್ಧ) : "ವಿಧೃತಮದನಜನಕತ್ವ" (೧. ವಿರಹಿಗಳ ಮನಸ್ಸಿನಲ್ಲಿ ಕಾಮೋದ್ರೇಕವನ್ನು ಕೆರಳಿಸುವ ಸ್ವಭಾವ. ೨. ಮನ್ಮಥನಿಗೆ ತಂದೆಯಾಗಿರುವಿಕೆ) ವನ್ನು ಹೊಂದಿದ್ದರೂ "ಕಮಲೋತ್ಸವಕಾರಿ" (೧. ತಾವರೆಗಳಿಗೆ ಸಂತೋಷಕರವಾದುದು. ೨. ಲಕ್ಷ್ಮಿಗೆ ಆನಂದವನ್ನುಂಟುಮಾಡು ವವನು) ಅಲ್ಲ : "ಅಂಗೀಕೃತ ಕುಟಜ ಶೋಭಾಪ್ರಭಾವ" (೧. ಕೊಡಸಿಗೆ ಹೂಗಳ ಚೆಲುವನ್ನು ಪಡೆದಿರುವುದು. ೨. ಅಗಸ್ತ್ಯಋಷಿಯ ಪ್ರಭಾವವನ್ನು ಉಳ್ಳದು) ಆಗಿದ್ದರೂ, ಸಮುದ್ರದ ನೀರನ್ನೆಲ್ಲ ಹೀರಿಕೊಂಡು ಒಣಗಿಸಿದುದಲ್ಲ : ಉನ್ನತವಾದ "ಮೇಘಡಂಬರ" (೧. ಮೋಡಗಳ ಗುಂಪು. ೨. ಅರಸನ ರಾಜಚಿಹ್ನವಾದ ಛತ್ರ ಸಮೂಹ) ಸೌಂದರ್ಯವನ್ನು ಒಳಗೊಂಡಿದ್ದರೂ. "ಪ್ರಕಟೀಕೃತ ರಾಜಲೀಲೋದಯ (೧. ಚಂದ್ರನ ಶೋಭಾವಹವಾದ ಬೆಳಕನ್ನು ಪ್ರಕಟಗೊಳಿಸುವದು. ೨. ಅರಸನ ವಿಲಾಸವನ್ನು ವ್ಯಕ್ತಪಡಿಸುವುದು) ಅಲ್ಲ "ಪ್ರಕರ್ಷಾನೇಕ ವರ್ಷಾನುಗತ" (೧. ರಭಸದ ಅನೇಕ ಮಳೆಗಳಿಂದ ಕೂಡಿದುದು. ೨. ಆಯುಷ್ಯದಲ್ಲಿ ಹಲವಾರು ವರ್ಷಗಳು ಕಳೆದುಹೋದವನು – ವೃದ್ಧ) ಆಗಿದ್ದರೂ "ಅಚಪಳಾಚರಣ ಪರಿಣತ" (೧. ಮಿಂಚಿನ ಸುಳಿದಾಟವಿಲ್ಲದುದು. ೨. ವೇಗವಾಗಿ ನಡೆಯಲಾರದಂತಹ ಇಳಿವಯದವನು) ಅಲ್ಲ ; "ಅತಿಪರುಷಘನ ನಿನದ ಯುಕ್ತ" (೧. ಅತ್ಯಂತ ಕಠೋರವಾದ ಮೋಡಗಳ ಗರ್ಜನೆಯಿಂದ ಕೂಡಿದುದು. ೨. ತುಂಬ ಉಗ್ರವಾದ ಹಾಗು ಒತ್ತರಿಸಿದ ಧ್ವನಿಯಿಂದ ನುಡಿಯುವವನು) ಆಗಿದ್ದರೂ, "ಅಸಾರ್ದ್ರತಾನು ವಿದ್ಧ" (೧. ನೀರಿನಿಂದ ತೇವವಾಗದೆ ಇರುವುದು. ೨. ಕರುಣೆಯಿಲ್ಲದವನು) ಅಲ್ಲ; "ಅತಿಕ್ರಾಂತವೈಶಾಖ ವೃತ್ತಿ" (೧. ವೈಶಾಖಮಾಸವು ಕಳೆದುಹೋದ ಮೇಲೆ ಬಂದುದು. ೨. ಬಾಣಬಿಡಲು, ನಿಲ್ಲುವ ಒಂದು ಭಂಗಿ) ಆಗಿದ್ದರೂ "ಅಬರ್ಹಿ ಲೀಲಾರ್ಹ" (೧. ನವಿಲುಗಳ ಆಟಕ್ಕೆ ಅಯೋಗ್ಯವಾದುದು. ೨. ಬರ್ಹಿ ಎಂಬ ಹೂವಿನ ವಿಕಾಸಕ್ಕೆ ಅನುಕೂಲವಲ್ಲದುದು) ಅಲ್ಲ ಅಷ್ಟೆ ಅಲ್ಲದೆ– ೪೩. "ಉಪಶಾಂತ

ಉಪಶಾಂತರಜೋವಿಕೃತಿಯಿ ।
ಸುಪಾತ್ತಕಾಳಿಮಪಯೋಧರಾಸ್ಯತೆಯಿಂ ಮ ॥
ತ್ತುಪಚಿತಜಡವೃತ್ತಿಯಿನೆ ।
ಯ್ದೆ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ ॥ ೪೩

ವಿಳಸಿತಕಂದಳಂ ವಿನಿಪತತ್ಕರಕಂ ಕ್ಷುಭಿತೋರುವಾಹಿನೀ ।
ಕುಳನಿನದಂ ಗಳಚ್ಛರಸಮಗ್ರಮುದಗ್ರಸುಪರ್ವಚಾಪಮಂ ॥
ಡಳಲಲಿತಾಂಬರಂ ವಿಹರಿದಶ್ವಸಮುತ್ಕರಮಂದಗುರ್ವನೇಂ ।
ತಳೆದುದೊ ಪೋಲ್ತು ಯುದ್ಧಸಮಯಕ್ರಮಮಂ ಜಳದಾಗಮಕ್ರಮಂ ॥ ೪೪

ಆ ಸಮಯದೊಳ್,

ಮಲ್ಲಿಗೆಯಂಬೇವುವು ಗಿರಿ ।
ಮಲ್ಲಿಗೆಯಂಬುಳ್ಳೊಡೆನಗೆ ಬೆಳ್ಗರ್ಬಿನ ಮೆ ॥
ಲ್ಬಿಲ್ಲೇವುದೊಗೆದ ಕಾಮನ ।
ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ ॥ ೪೫

ರಜೋವಿಕೃತಿ" (೧. ಮುಟ್ಟಾಗುವುದು ನಿಂತುಹೋಗಿರುವಿಕೆ. ೨. ದೂಳಿಯೆಲ್ಲ ಅಡಗಿ ಹೋಗಿರುವ ಸ್ಥಿತಿ) ಯಿಂದಲೂ, "ಉಪಾತ್ತ ಕಾಳಿಯ ಪಯೋಧರಾಸ್ಯತೆ" (೧. ಮೊಲೆತೊಟ್ಟುಗಳು ಕಪ್ಪಾಗಿರುವಿಕೆ. ೨. ಮೋಡಗಳ ಮುಖವೆಲ್ಲ ಕಪ್ಪಾಗಿರುವಿಕೆ.) ಯಿಂದಲೂ ಮತ್ತು "ಉಪಚಿತ ಜಡವೃತ್ತಿ" (೧. ಆಲಸ್ಯದಿಂದ ಕೂಡಿರುವ ಸ್ವಭಾವ. ೨. ನೀರಿನಿಂದ ಕೂಡಿ ತೇವವಾಗಿರುವ ಸ್ಥಿತಿ)ಯಿಂದಲೂ ಗರ್ಭಿಣಿಗೆ ಸದೃಶವಾಗಿ ಮಳೆಗಾಲವು ತೋರಿತು. ೪೪. "ವಿಳಸಿತ ಕಂದಳ" (೧. ಹೊಸ ಚಿಗುರು ಮೊಳೆತುದು. ೨. ಪರಸ್ಪರ ಮೂದಲಿಕೆಯ ಮಾತುಗಳಿಂದ ಕೂಡಿದುದು) ಆಗಿ, "ವಿನಿಪತ್ಕರಕ" (೧. ಬೀಳುತ್ತಿರುವ ಆಲಿಕಲ್ಲುಗಳು ೨. ಕತ್ತರಿಸಿ ಬೀಳುವ ಕೈಗಳು) ಉಳ್ಳುದಾಗಿ, ರಭಸದಿಂದ ಉಕ್ಕೇರುವ "ವಾಹಿನೀಕುಳನಿನದ" (೧. ನದಿಗಳ ನೀರು ಮೊರೆಯುವ ಶಬ್ದ. ೨. ಸೈನ್ಯದಿಂದ ಹೊರಡುವ ಕೋಲಾಹಲ ಧ್ವನಿ) ದಿಂದ, "ಗಳಚ್ಛರಸಮಗ್ರ" (೧. ಸುರಿಯುತ್ತಿರುವ ನೀರಿನಿಂದ ತುಂಬಿದುದು. ೨. ಬೀಳುತ್ತಿರುವ ಬಾಣಗಳಿಂದ ಆವೃತವಾದುದು) ಹಾಗು "ಸುಪರ್ವಚಾಪ ಮಂಡಳ ಲಲಿತಾಂಬರ" (೧. ಕಾಮನಬಿಲ್ಲಿನಿಂದ ಚೆಲುವಾದ ಆಕಾಶ, ೨. ಬಿದಿರಿನ ಬಿಲ್ಲುಗಳಿಂದ ಶೋಭಿಸುತ್ತಿರುವ ಪ್ರದೇಶ) ಮತ್ತು "ವಿಹರಿದಶ್ವ ಸಮುತ್ಕರ (೧. ಸೂರ್ಯನು ಕಾಣಿಸದಂತಿರುವುದು. ೨. ವೇಗವಾದ ಕುದುರೆಗಳುಳ್ಳುದು) ದಿಂದ ಮಳೆಗಾಲದ ಆಗಮವು ಯುದ್ಧಸಮಯವನ್ನು ಹೋಲುತ್ತಿತ್ತು. ಆ ಸಮಯದಲ್ಲಿ– ೪೫. "ಗಿರಿಮಲ್ಲಿಗೆಯು ಬಾಣಗಳಿರುವಾಗ ನನಗೆ ಮಲ್ಲಿಗೆಯು ಬಾಣಗಳೇತಕ್ಕೆ ಬೇಕು? ಕಾಮನಬಿಲ್ಲು ಇದ್ದ ಮೇಲೆ ಕಬ್ಬಿನ ಬಿಲ್ಲಿನಿಂದ ಏನು ಪ್ರಯೋಜನ ?"

ಅದಿರ್ದುದು ಪಶ್ಚಿಮಾನಿಳನಗುರ್ವಿಸೆ ಕೆಮ್ಮುಗಿಲುರ್ಬೆ ಪರ್ಬುಗೆ ।
ಟ್ಟುದು ಕುಡಿಮಿಂಚು ಸಂಚಳಿಸೆ ಸಂಚಳಿಸಿತ್ತು ಘನಾಘನಸ್ವನಂ ॥
ಪೊದಟಿಪೊದಟಕ್ಕಿಗುಂದಿದುದು ವಾಃಕಣಸಂತತಿ ಸೋರೆ ಸೋರ್ದಡಂ ।
ಗಿದುದೆಳಗಾರೊಳಾಸಕಳಚಾತಕಪೋತತೃಷಾವಿಷಾದನಂ ॥ ೪೬

ಬಡಪಂ ಬೆಂಬತ್ತೆ ಮೇಪಂ ಮಱೆದು ಬಿಡದೊಡಲ್ ಕೋಡೆ ತನ್ನಿಚ್ಚೆಗೆಟ್ಟಿ । ರ್ದೆಡೆಯೊಳ್ ಬೆಚ್ಚಂತ್ತೆ, ಬಾಲು ನಿಲೆ ನವಿರೊಡೆದುರ್ವೆಟ್ಟು ಬೆಂಪೋಗೆ ಕಾಲೊಳ್ । ನಡುಕಂ ಮೆಯ್ವೆರ್ಚೆ ಗಂಟಲ್ ಕುಸಿದು ಕಿವಿಯೆಟಲ್ದಂದು ನಿಂದಿರ್ದುದೋರೊಂ । ದೆಡೆಯೊಳ್ ತಾಱಲ್ಗಳೊತ್ತಂಬಿಡಿದು ಮೃಗ ಮೃಗೀವೃಂದಮೋರಂದದಿಂದಂ ॥ ೪೭

ನೊರೆವುಲ್ಲಂ ಮೇದೆರಟ್ಟಿಣ್ ತುಮುಳೆ ಕುಡಿದು ಪೂರಾಂಬುವಂ ಬೀಗಿಬೆನ್ನಿಂ । ಬಿರಿವನ್ನಂ ಕೊರ್ವಿ ಮುಂಗಾಲ್ ಗಡಿಯೆನೆ ಕಡುಗೆಚ್ಚಲ್ ಪೊದಟ್ಟಿಂದು ವತ್ಸೋ ॥ ತ್ಕರಮೆಲ್ಲಂ ಬಾಲವಂಬಂ ಕಱೆಯೆ (?) ಬಹಳರೋಮಂಥಫೇನಾವಳೀಪಾಂ । ಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ ಕಣ್ಗುರ್ವಾಯ್ತು ಕಾರೊಳ್ ॥ ೪೮

ಎಂದುಕೊಂಡು ಮನ್ಮಥನು ಹೆಮ್ಮೆಯಿಂದ ಬೀಗಿದನು. ೪೬. ಮುಂಗಾರಿನ ಸಮಯದಲ್ಲಿ ಜಾತಕಪಕ್ಷಿಗಳ ನೀರಡಿಕೆಯ ದಾಹವು ಪಡುವಣಗಾಳಿ ಬಲಿತಂತೆ ಅದುರಿತು ; ಕೆಮ್ಮೋಡಗಳು ಹಬ್ಬಿದಂತೆಲ್ಲಾ, ಕುಗ್ಗುತ್ತ ಬಂದಿತ್ತು; ಕುಡಿಮಿಂಚು ಸೆಳೆದಂತೆಲ್ಲ ಚಂಚಲವಾಯಿತು; ಮೋಡಗಳ ಗುಡುಗಿಗೆ ಶಕ್ತಿಗುಂದಿತು; ನೀರಿನ ಹನಿ ಬೀಳತೊಡಗಿದಂತೆ ಕುಸಿದು ಅಡಗಿಹೋಯಿತು. ೪೭. ಜಡಿಮಳೆ ಬೆನ್ನಟ್ಟಿ ಬರಲಾಗಿ, ಮೇಯುವುದನ್ನು ಮರೆತು, ಮೈಯೆಲ್ಲ ಚಳಿಗೆ ಸೆಡೆದುಕೊಂಡು, ಅಲುಗುವುದಕ್ಕೂ ಆಗದೆ ಬೆಸುಗೆ ಹಾಕಿದಂತೆ ಬಾಲ ನಿಲ್ಲಲಾಗಿ, ಮೈಗೂದಲು ನಿಮಿರಿ, ಬೆನ್ನು ಬಾಗಿ, ಕಾಲುಗಳು ಗದಗದ ನಡುಗುತ್ತಿರಲಾಗಿ, ಕೊರಳು ಕುಸಿದು, ಕಿವಿ ಇಳಿಬಿದ್ದು, ಕುರುಚಲು ಪೊದೆಗಳ ಮರೆಯಲ್ಲಿ ಗಂಡು ಹೆಣ್ಣು ಜಿಂಕೆಗಳು ನಿಂತುಕೊಂಡಿದ್ದುವು. ೪೮. ಎಳೆಯ ಹುಲ್ಲನ್ನು ಮೇದು, ಅರೆಗಣ್ಮುಚ್ಚಿ ಪ್ರವಾಹದ ನೀರನ್ನು ಕುಡಿದು, ಹಿಂಭಾಗದಿಂದ ಮುಂಗಾಲುಗಳವರೆಗೆ ಹರಡಿ ಕೊಬ್ಬಿದ ಕೆಚ್ಚಲು ಬಿರಿಯುವಂತಾಗಲಾಗಿ, ಹಿಂಬಾಲಿಸುತ್ತಿರುವ ಕರುಗಳಿಗೆಲ್ಲ ಹಾಲುಣಿಸಿ, ಬಾಯ್ತುಂಬ ನೊರೆ ಸುರಿಸುತ್ತ ಕಾಡೆಮ್ಮೆಗಳ ಹಿಂಡು ಕಾಡಿನಲ್ಲಿ ನೋಟಕ್ಕೆ ಅದ್ಭುತವಾಗಿತ್ತು. [Amend Text as "ವತ್ಸೋತ್ಕರಕೆಲ್ಲಂ ಪಾಲನಿಂಬಿಂ ಕಱೆಯೆ"]*

---

*ಇದಕ್ಕೆ ಬಹುಶಃ ಮೂಲವಾದ ಅಥವಾ ಪ್ರೇರಕವಾದ ಮಲ್ಲಿನಾಥ ಪುರಾಣ (೮–೯)ದಲ್ಲಿ ಹೀಗಿದೆ–

ಪಸುರ್ವುಲ್ಲಂ ಮೇದು ಸಂದೊಂದೆಡೆಯೊಳದೊಡಲಿಂ ಬಿಲ್ಲೆನಲ್ ಕೊರ್ವಿ ಕೆಚ್ಚಲ್
ಕುಸಿವನ್ನಂ ಬೀಗಿ ಪಾಲಂಬಿರಿವಿಡೆ ಮೊಲೆಯಿಂ ವತ್ಸ ಪೀತಾವಶೇಷಂ ।
ಪೊಸಗಾರೊಳ್ ತಾಱಲೊಳ್ ಕಣ್ಮಲರ್ ಮುಗುಳ್ದಿರೆ ಸೃಕ್ವಂಗಳಿಂ ಸೂಸೆ ಫೇನ
ಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದಮಾನಂದದಿಂದಂ ॥

ಅಗ್ಗಳನನ್ನೆ ಅನುಕರಿಸುವ ದೊಡ್ಡಣಾಂಕನ ಚಂದ್ರಪ್ರಭ ಷಟ್ಪದಿ ೫–೨೦ರಲ್ಲಿ ಹೀಗಿದೆ : –
ಎಳೆಯ ಪುಲ್ಲನು ಮೇವುತೊಲವಿಂ.......... ಬೆಂಬಳಿಯೊಳೈತರುವ ಎಳೆಗಱುವಿಗೋಯೆಂದು
ನಿಂದೊಡನಿಳುಹಿ ಮೊಲೆಯೂಡಿಸುತ ನೆಕ್ಕಲ್ ಪಳುವಿನೊಳು ಕಾಡೆಮ್ಮೆವಿಂಡಿಹವಾ ಮಳೆಯೊಳೊಲಿದು

ಅದಲ್ಲದೆಯುಂ

ವಿಯದವಳಂಬಿನೀಳಘನಮಾಳಿಕೆಯಂ ಗಜರಾಜಿಯೆಂದು ದಿ ।
ಕ್ಷಯಪರಿಪೂರ್ಣಮೇಘರುತಿಯಂ ಪಟಹಧ್ವನಿಯೆಂದು ಮಿಂಚಿನಂ ॥
ಗಿಯ ಪೊಳಪಂ ಭಟಾಸ್ತ್ರರುಚಿಯೆಂದಿರದಂಗಜರಾಜಸೈನ್ಯಭೀ ।
ತಿಯನೊಳಕೆಯ್ದುದಬ್ದಸಮಯೋತ್ಸವದೊಳ್ ಪಥಿಕಾಂಗನಾಜನಂ ॥ ೪೯

ಅಂತು ಬಂದ ವರ್ಷರ್ತುವಿರಾಮಸಮಯದೊಳೊಂದು ದೆವಸಂ ಪಲ್ಲವಿತವಲ್ಲೀತರುಗಹನ ಕೇದಾರಹರಿತಾಯಮಾನಮಪ್ಪ ಹರಿತ್ಪ್ರದೇಶಮನೀಶಂ ಮಹಾಪ್ರಾಸಾದದುಪರಿಮತಳದೊಳಿರ್ದು ನೋಡುತಿರ್ಪನ್ನೆಗಂ;

ಎಸೆವ ನಭಸ್ಸರೋವರದೊಳುಣ್ಮಿ ಕೆಲಕ್ಕೆ ತೆರಳ್ದ *ನೀಲಿಕಾ ।
ಪ್ರಸರಮೊ ಮೇಣಿದಂಬರಮಹಾಂಬುಧಿಪಾರದಪಾರರತ್ನರು ॥
ಗ್ಪಿಸರಮೊ ಭಾವಿಪಂದಿದು ವಿಯಚ್ಛುಕಕಂಠದ ವರ್ಣರಾಜಿಯೊಂ ।
ದೆಸಕಮೊ ತಾನಿದೆಂದೆನಿಸಿತಂದು ಪುರಂದರಚಾಪವಿಭ್ರಮಂ ॥ ೫೦

ಆಗಳದಱ ಚಾಪಚ್ಛದಚ್ಛಾಯಾನುಕಾರಿಯಪ್ಪ ಮಸೃಣವರ್ಣಪ್ರಸರಮೇಳಾಪವೈಚಿತ್ರ್ಯಮಂ ಚಿತ್ರಕಳಾವಿಶಾರದಂ ಪರಿಭಾವಿಸುತ್ತುಮಿರ್ಪನ್ನೆಗಂ ;

ನರರ ಸಿರಿ ಕರಗುವಂತಿರೆ ।
ನರರ ವಯೋಲಕ್ಷ್ಮಿ ಕರಗುವಂತಿರೆ ಮತ್ತಂ ॥

ಅದಲ್ಲದೆ– ೪೯. ಆಕಾಶವನ್ನು ಆವರಿಸಿದ ಕಪ್ಪುಮೋಡಗಳ ಹಿಂಡನ್ನು ಗಜಸೈನ್ಯವೆಂದು ದಿಕ್ಕುದಿಕ್ಕುಗಳಲ್ಲಿ ತುಂಬಿದ ಮೋಡಗಳ ಗುಡುಗಾಟವನ್ನು ರಣವಾದ್ಯಧ್ವನಿಯೆಂದು, ಮಿಂಚಿನ ಹೊಳಪನ್ನು ಸೈನಿಕರ ಬಾಣಗಳ ಹೊಳಪೆಂದೂ ಭ್ರಮಿಸಿ, ಮನ್ಮಥರಾಜನು ಸೈನ್ಯದೊಡನೆ (ತಮ್ಮ ಮೇಲೆ) ದಾಳಿಮಾಡಲು ಬಂದನೆಂಬ ಭೀತಿ ಪಥಿಕರ ಸ್ತ್ರೀಯರನ್ನು ಆವರಿಸಿತು. ವ|| ಹೀಗೆ ಬಂದ ಮಳೆಗಾಲವು ಮುಗಿಯುವ ಸಮಯದಲ್ಲೊಂದು ದಿವಸ, ಅರಸನು ತನ್ನ ಭವ್ಯವಾದ ಅರಮನೆಯ ಉಪ್ಪರಿಗೆಯಲ್ಲಿ ನಿಂತುಕೊಂಡು, ಚಿಗುರಿದ ಬಳ್ಳಿಮರಗಳಿಂದ ದಟ್ಟವಾಗಿ ಹಸಿರುಮುರಿಯುತ್ತಿರುವ ಒಂದು ಪ್ರದೇಶವನ್ನು ನೋಡುತ್ತಿದ್ದನು; ಆಗ – ೫೦. ಮನೋಹರವಾದ ಆಕಾಶವೆಂಬ ಸರೋವರದಲ್ಲಿ ಮೇಲೆದ್ದು ಪಕ್ಕಕ್ಕೆ ಸರಿದ ಹಾವಸೆಯ ಹರಹೊ, ಅಥವಾ ಆಕಾಶವೆಂಬ ಸಮುದ್ರ ತೀರದಲ್ಲಿ ಮಿರುಗುತ್ತಿರುವ ರತ್ನರಾಶಿಯೊ, ಅಥವಾ ಗಗನದಲ್ಲಿ ಹಾರುತ್ತಿರುವ ಗಿಳಿಗಳ ಕೊರಳ ಕೆಂಬಣ್ಣದ ಸಾಲೊ ಏನೊ ಎಂಬಂತೆ ಕಾಮನಬಿಲ್ಲಿನ ವಿಲಾಸವು ತಲೆದೋರಿತು. ವ|| ಆಗ ಹಂಗನಹಕ್ಕಿಯ ರೆಕ್ಕೆಯಂತಿರುವ ಅದರ ಸುಂದರವಾದ ವರ್ಣಮೇಳದ ವಿಸ್ತಾರ ವನ್ನೂ ಬೆಡಗನ್ನೂ ಚಿತ್ರಕಲಾ ಪರಿಣತನಾದ ಆ ಅರಸನು ಚಿತ್ತವಿಟ್ಟು ನೋಡುತ್ತಿರು ವಾಗ– ೫೧. ಮನುಷ್ಯರ ಸಂಪತ್ತು ಕರಗುವಂತೆ, ವಯಸ್ಸು ಕರಗುವಂತೆ, ಆಯುಷ್ಯ

---

*ಪೀಲಿಗಣ್ಪಸರಮೊ

ನರರಾಯು ಕರಗುವಂತಿರೆ ।
ಕರಗಿದುದದು ನೋಡೆ ನೋಡೆ ಗಗನಾಂತರದೊಳ್ ॥ ೫೧

ಅಂತಾಖುಜುರೋಹಿತಂ ತಿರೋಹಿತಮಾಗೆ ವೈರಾಗ್ಯರಸಾವಗಾಹಿತಮತಿಮಹೀಪತಿ ಸಂಸ್ಕೃತಿಯ ಅನಿತ್ಯತೆಗಿದುವೆ ನಿದರ್ಶನಮೆಂದು ಆತ್ಮಗತದೊಳಿಂತೆಂದಂ :–

ಕತಿಪಯನಿಮೇಷಮಾತ್ರ ।
ಸ್ಥಿತಿ ಸಾಂಸಾರಿಕವಿಳಾಸಮದೆನೆ ವಲಂ ಶಾ ॥
ಶ್ವತಮೆಂದೆ ಬಗೆದು ರಾಗಾಂ ।
ಧತೆಯಿಂ ಗತಿಗಿಡುವರೇಂ ವಿಚಿತ್ರಮೊ ಕರ್ಮಂ ॥ ೫೨

ತರುಣೀಲೋಚನಲೋಲಮಾಯುವಚಲಸ್ರೋತಸ್ವಿನೀಸಂಚಲಂ ।
ಸಿರಿ ಹಸ್ತಿಶ್ರವಣಾಂಚಳಾಸ್ಥಿರತರಂ ತಾರುಣ್ಯಮಾಕಾಲಿಕೀ ॥
ಸ್ಫುರಿತಾತಿಕ್ಷಣಿಕಂ ಶರೀರಮೆನಿಪೀಮಾನುಷ್ಯಮಂ ದೂಷ್ಯಮಂ ।
ಚಿರಮೆಂದಾಟಿಪನಾವನಾತನೆ ವಲಂ ನಿಶ್ಚೇತನಂ ಲೋಕದೊಳ್ ॥ ೫೩

ತ್ರಿಪದಿ

ಕೇಡನಾಗೆಂದಾಗಂ ಕಿಡೆಂದು (?) ವಿಪರೀತಂ ।
ಮಾಡಿಯೆ ನೆಗಟ್ದು ಜಡಜಂತು ಮೂಡಿ ಮು ।
ಟ್ಕೊಡುಗುಂ ಜನ್ಮಜಡಧಿಯೊಳ್ ॥ ೫೪

ಕರಗುವಂತೆ, ನೋಡು ನೋಡುವಷ್ಟರಲ್ಲಿ ಆಕಾಶಮಧ್ಯದಲ್ಲಿ ಅದು ಕರಗಿ ಹೋಯಿತು. ವ॥ ಹಾಗೆ ಆ ಕಾಮನಬಿಲ್ಲು ಅದೃಶ್ಯವಾದೊಡನೆ, ವೈರಾಗ್ಯರಸದಲ್ಲಿ ಮುಳುಗಿಹೋದ ಅರಸನು ಸಂಸಾರದ ಅಸ್ಥಿರತೆಗೆ ಇದೇ ಪ್ರತ್ಯಕ್ಷವಾದ ಉದಾಹರಣೆಯೆಂದುಕೊಂಡು ತನ್ನೊಳಗೆ ಹೀಗೆ ಭಾವಿಸಿದನು– ೫೨. ಕೆಲವು ನಿಮಿಷಗಳವರೆಗೆ ಮಾತ್ರ ಇರುವಂತಹ ಈ ಸಂಸಾರದ ಬೆಡಗನ್ನು ಸ್ಥಿರವೆಂದು ಭ್ರಮಿಸಿ, ಮೋಹಕ್ಕೆ ಬಿದ್ದು ವಿವೇಕಹೀನರಾಗಿ ಜನರು ಗತಿಗೆಟ್ಟು ಹೋಗುವರು. ಇದೇನು ವಿಚಿತ್ರವಾದ ಕರ್ಮ ! ೫೩. ಹೆಣ್ಣಿನ ಕಣ್ಣಿನಂತೆ ಚಂಚಲವಾದುದು ಆಯುಷ್ಯ : ಬೆಟ್ಟದಿಂದ ಉರುಳಿಬರುವ ಪ್ರವಾಹದಂತೆ ಹರಿದು ಹೋಗತಕ್ಕುದು ಐಶ್ವರ್ಯ; ಆನೆಯ ಕಿವಿದುದಿಯಂತೆ ಅಸ್ಥಿರವಾದುದು ಯೌವನ; ಸಣ್ರನೆ ಸೆಳೆದು ಮಾಯುವಾಗುವ ಮಿಂಚಿನಂತೆ ಅತ್ಯಂತ ಕ್ಷಣಿಕವಾದುದು ದೇಹ– ಇವುಗಳನ್ನೆಲ್ಲ ಒಳಗೊಂಡು ದೂಷ್ಯವಾದ ಮನುಷ್ಯ ಜೀವನವನ್ನು ಶಾಶ್ವತವೆಂದು ಭಾವಿಸುವವನು ಲೋಕದಲ್ಲಿ ಬುದ್ಧಿಗೇಡಿಯೆ ಸೈ. ೫೪. ಕೇಡಾಗಬಾರದೆಂದು ಬಯಸುತ್ತಿದ್ದರೂ, ಕೇಡುತರುವ ಕರ್ಮವನ್ನೇ ಮಾಡುತ್ತಿದ್ದು ಅದರ ಪರಿಣಾಮವಾಗಿ ಅವಿವೇಕಿ ಜೀವನು ಜನ್ಮಗಳ ಸಮುದ್ರದಲ್ಲಿ ಮೂಡಿ ಮುಳುಗಾಡುವನು. (ಪುನಃ ಪುನಃ ಹುಟ್ಟಿ ಬಂದು ದುಃಖಕ್ಕೀಡಾಗುವನು). [ಮೊದಲನೆಯ ಚರಣದಲ್ಲಿ ಪಾಠ

ಒಕ್ಕಮಳಮಳೆಯಬಾಂಬುವ ।
ನಕ್ಕಟ! ಪಲ್ವಲಸಮುಲ್ಬಣಾಂಬುವನೀಂಟ ॥
ಲ್ಕಕ್ಕುಮೆ ನಿರ್ವೃತಿಯುಂ ಪೆಱ ।
ಗಿಕ್ಕಿ ಬುಧಂ ತೊಡಲಕ್ಕುಮೇ ಸಂಸ್ಕೃತಿಯೊಳ್ ॥ ೫೫

ಆನಿದಱವನೆನ್ನದಿದೆಂ ।
ಬೀನುಡಿಯಿಂದಾದಣುಪ್ರಮಾಣದ ಸುಖಕ ॥
ಜ್ಞಾನದೆ ಜೀವಂ ದುಃಖಮ ।
ನೇನೆಯ್ದಿದಪುದೊ ಮಹಾಮಹೀಧರಸಮಮಂ ॥ ೫೬

ಜಳಬದ್ಬುದಮಂ ಕರ್ಬೊ ।
ನ್ನೊಳೆ ಕಟ್ಟಿಪೆನೆಂಬ ಮರುಳ ಗುರುವಾಗದಿರಂ ॥
ವಿಳಯಸ್ವಭಾವಮಂ ಸಲೆ ।
ತಳೆದೊಡಲಂ ನಿಟ್ಟೆ ಮಾಡಲಜ್ಞುಗಿಪಾತಂ ॥ ೫೭

ಅದು ಕಾರಣದಿಂ,

ಕಲ್ಲಿಂ ಕಾಂಚನಮಂ ತಡ ।
ಮಿಲ್ಲದೆ ಸತ್ಕ್ರಿಯೆಯ ಬಲದೆ ತೆಗೆವಂತೆ ಕರಂ ॥
ಪೊಲ್ಲಮೆನಿಪ್ಪೊಡಲಿಂ ಕೇ ।
ಡಿಲ್ಲದ ಪುಣ್ಯಮನುಪಾರ್ಜಿಪಾತಂ ಚತುರಂ ॥ ೫೮

ದೋಷವಿದೆ, ಸರಿಯಾದ ಪಾಠವೇನೊ ತಿಳಿಯದು.] ೫೫. ಪರಿಶುದ್ಧವಾದ ಸುಗಂಧಜಲವನ್ನು ಸೇವಿಸಿದ ಬಳಿಕ, ಕೆಸರುಗುಂಡಿಯ ಉಪ್ಪು ನೀರನ್ನು ಕುಡಿಯಲಾದೀತೆ ? ವೈರಾಗ್ಯವೃತ್ತಿಯನ್ನು ಆಚೆಗೆ ತಳ್ಳಿ ಸಂಸಾರದಲ್ಲಿ ತೊಡಕಿಕೊಳ್ಳಲಾದೀತೆ? ೫೬. "ನಾನು ಇದಕ್ಕೆ ಸೇರಿದವನು. ಇದು ನನ್ನದು" ಎಂಬ ಈ ಭಾವನೆಯಿಂದಾಗುವ ಅಣುವಿನಷ್ಟು ಚಿಕ್ಕದಾದ ಸುಖಕ್ಕೆ ಮೋಹಗೊಂಡು ಜೀವವು ಮಹಾಪರ್ವತದಂತಹ ದುಃಖವನ್ನು ತಂದುಕೊಳ್ಳುವುದಿಲ್ಲ ! ಏನಿದು? ೫೭. ನಶ್ವರವಾದ ದೇಹವನ್ನು ಶಾಶ್ವತಗೊಳಿಸುವೆನೆಂದು ಪ್ರಯತ್ನಿಸುವವನು, ನೀರಗುಳ್ಳೆಯನ್ನು ಕಬ್ಬಿಣದ ಕಟ್ಟು ಹಾಕಿಡುವೆನೆಂಬ ಮೂರ್ಖನಿಗೆ ಗುರುವಲ್ಲದೆ ಮತ್ತೇನಾದಾನು? ಆದುದರಿಂದ–೫೮. ಕಲ್ಲಿನಿಂದ ಚಿನ್ನವನ್ನು ಯೋಗ್ಯವಾಗಿ ಪ್ರಯತ್ನಪೂರ್ವಕ ತೆಗೆಯುವಂತೆ ತೀರ ಹೀನವೆನಿಸುವ ದೇಹದಿಂದ ಅಳಿಯದ ಪುಣ್ಯವನ್ನು ಗಳಿಸಿಕೊಳ್ಳುವವನು ಬುದ್ಧಿವಂತನು.

ಅದಲ್ಲದೆಯುಂ

ಅಱೆಯದೆ ಬಹ್ವಾರಂಭದೊ ।
ಳುಱಿ ಬೆಂದೆಂ ತೊಡರ್ದು ಮುನ್ನವದೆ ಸಾಲದೆ ಮ ॥
ತ್ತಱೆದುಂ ತೊಡರ್ದೊಡೆ ನಾಡೆಯು ।
ಮಱುವರುಳೆಂದಱೆವರೆನ್ನನುೞೆವರ್ ಬೞೆಯಂ ॥ ೫೯

ಎಂದು ಪರಿಚ್ಛೇದಿಸಿ

ಜನನಾಥಂ ಗೋತ್ರಮಿತ್ರಾಧಿಕೃತಸಚಿವಸಾಮಂತಶುದ್ಧಾಂತಕಾಂತಾ । ಜನಕಾತ್ಮೋದ್ಯೋಗಮಂ ಪೇೞ್ದಿರದೆ ಬಿಡಿಸಿ ತನ್ಮೋಹಮಂ ರಾಜ್ಯಮು ನಂ । ದನನೊಳ್ ಶ್ರೀಕಾಂತನೊಳ್ ಯೋಜಿಸಿ ತಳರ್ದುತಪೋಲಕ್ಷ್ಮಿಯಂ ತಾಳ್ದಿದಂ ಪಾ । ವನಮಂ ಶ್ರೀಶ್ರೀಪ್ರಭಾಚಾರ್ಯರ ಪದಕಮಲೋಪಾಂತದೊಳ್ ಶಾಂತಚಿತ್ತಂ ॥ ೬೦

ಅಂತಖಂಡಿತವೈರಾಗ್ಯಮಂಡಿತಂ ಶ್ರೀವರ್ಮಮಂಡಲೇಶ್ವರಂ ದುರ್ಧರತಪೋಮಹಾತಪಕ್ಷಪಿತಜೀವನಂ ಜೀವಿತಾನ್ತ್ಯದೊಳ್ ಸಮಾಧಿವಿಧಿಯಿನವತೀರ್ಣಶರೀರಭಾರನಾಗಿ ಸಕಲಸಂಸಾರಸುಖಕಾರ್ಮಮೆನಿಪ ಸೌಧರ್ಮಕಲ್ಪದ ಶ್ರೀಪ್ರಭವಿಮಾನದುಪಪಾತನಿಕೇತನದೊಳ್

ಶರದದ ಬೆಳ್ಮುಗಿಲ್ವೊಱೆಯಿನುಣ್ಮುವ ನಿರ್ಮಳಮೌಕ್ತಿಕಕ್ಕೆ ತಾಂ ।
ದೊರೆಯೆನೆ ಪುಟ್ಟಿದಂ ಧವಳತಳ್ಪಯುಗಾಂತರದೊಳ್ ನಮೇರುಶೇ ॥
ಖರಧರನಾತ್ತನೂತ್ನವಯಸಂ ಮಣಿಕುಂಡಲಮೌಳಿಮೇಖಳಾ ।
ಭರಣವಿರಾಜಿತಂ ತರುಣಕಂಚುಕಿಕಂಚುಕಚಂಚುರಾಂಬರಂ ॥ ೬೧

ಅದಲ್ಲದೆ– ೫೯. ಅನೇಕ ಜನ್ಮಗಳ ಸಂಸಾರದಲ್ಲಿ ತೊಡಕಿಕೊಂಡು ಈ ಮುಂಚೆ ಎಷ್ಟೊಂದು ಬೆಂದಿರುವೆನು! ಅದು ಸಾಲದೆಂಬಂತೆ ಮತ್ತೆ ಈಗ ತಿಳಿದೂ ತಿಳಿದೂ ಅದರಲ್ಲಿಯೆ ತೊಡಕಿಕೊಂಡರೆ ನಾನು ಬುದ್ಧಿಗೇಡಿಯೆಂದು ನಿರ್ಧರಿಸಿ ಬಲ್ಲವರು ನನ್ನನ್ನು ತೊರೆಯುವರು. ಹೀಗೆಂದು ನಿರ್ಧರಿಸಿ– ೬೦. ಅರಸನು ತನ್ನ ಬಳಗದವರಿಗೂ, ಗೆಳೆಯರಿಗೂ, ಮತ್ತು ಸಚಿವರು, ಸಾಮಂತರು, ರಾಣಿವಾಸದ ಸ್ತ್ರೀಯರು– ಇವರೆಲ್ಲರಿಗೂ ತನ್ನ ನಿರ್ಧಾರವನ್ನು ಹೇಳಿ, ಅವರ ಮೋಹವನ್ನು ಕಡಿದುಕೊಂಡು, ತನ್ನ ಮಗನಾದ ಶ್ರೀಕಾಂತನಿಗೆ ರಾಜ್ಯವನ್ನೊಪ್ಪಿಸಿ, ಹೊರಟು ಶಾಂತಮನಸ್ಕನಾಗಿ, ಶ್ರೀ ಶ್ರೀ ಪ್ರಭಾಚಾರ್ಯರ ಪವಿತ್ರವಾದ ಚರಣಸನ್ನಿಧಿಯಲ್ಲಿ ಪಾವನವಾದ ತಪೋವ್ರತವನ್ನು ಸ್ವೀಕರಿಸಿದನು. ವ॥ ಹೀಗೆ ಸಂಪೂರ್ಣ ವೈರಾಗ್ಯವನ್ನಳವಡಿಸಿಕೊಂಡ ಶ್ರೀವರ್ಮರಾಜನು ಕಠೋರವಾದ ಮಹಾತಪಸ್ಸಿನಲ್ಲಿ ಆಯುಷ್ಯವನ್ನು ಸವೆಯಿಸಿ, ಅಂತ್ಯಸಮಯಕ್ಕೆ ಸಮಾಧಿವಿಧಿಯಿಂದ ದೇಹವನ್ನು ತೊರೆದು ಸಮಸ್ತ ಸಂಸಾರಸುಖಕ್ಕೆ ನೆಲೆವೀಡಾದ ಸೌಧರ್ಮ ಕಲ್ಪದ ಶ್ರೀಪ್ರಭವಿಮಾನದ ಉಪಪಾದ ಗೃಹದಲ್ಲಿ– ೬೧. ಶರತ್ಕಾಲದ ಬಿಳಿಮೋಡದ ಪದರದಿಂದ ಹುಟ್ಟುವ ಪರಿಶುಭ್ರ ಮುತ್ತಿಗೆ ಸಮವೆನಿಸುವ ಬೆಳ್ಳನೆಯ ಜೋಡಿ ಹಾಸುಗೆಯಲ್ಲಿ, ನಮೇರು ಪುಷ್ಪಗಳ ಮಾಲೆಯಿಂದಲೂ

ಅಂತು ಪುಟ್ಟಲೊಡಂ

ನೆಱಿದಾತನ ಪುಣ್ಯಮೆ ಕ।
ಣ್ದೆಱಿದಂತಿರೆ ತೆಱಿದುವಾವಿಮಾನದ ಪಡಿಗಳ್ ॥
ನಱುಗಂಪು ಪೊಣ್ಮೆ ಸಗ್ಗದ।
ಮಿಱುಪಿನಿಯರ ಮನಮುಮೊಡನೆ ಪಡಿದೆಱಿವೆನೆಗಂ ॥ ೬೨

॥ ರಗಳೆ ॥

ಆ ಸಮಯದೊಳರಲ್ಗಳ್ ಸುರಿಯುತ್ತಿರೆ।
ಬೀಸಿದುದೆಲರುತ್ಸವಮೊಱಿಯುತ್ತಿರೆ ॥
ತೆಱಿದತ್ತುಪಗೃಹನಿವಹದ ಪಡಿಗಳ್।
ತುಱುಗಿದುವೆತ್ತಂ ಜೈನರ ಗುಡಿಗಳ್ ॥
ಹರಿನೀಳಸ್ಥಳಿಯೊಳ್ ಬಣ್ಣಪುರಂ।
ಪರಿವೆತ್ತುದು ಬಗೆ ಮರುಳ್ವನ್ನೆವರಂ ॥
ಹರಿಚಂದನನವಂದನಮಾಲಿಕಗಳ್।
ಪರಿವೇಷ್ಟಿಸೆ ಮೆಱಿದವು ಶಾಲಿಕೆಗಳ್ ॥
ಕೆದಱಿದ ಪೂವಲಿಗೆಱಿಗಿತು ಸುತ್ತುಂ।
ಮದಮಧುಪಾವಳಿ ಗಾವರಿಸುತ್ತುಂ ॥
ಮುತ್ತಿನ ಕಡೆ ಭಿತ್ತಿಯ ಕಡೆಗಡೆಯೆನೆ।
ಸುತ್ತಿಱಿದುದು ಮಣಿಗೃಹದೆಡೆಯೆಡೆಯನೆ ॥
ಸೂಸುವ ನವಪಟವಾಸದ ಚೂರ್ಣಂ।
ಮಾಸರಮಾದುದು ದಿಕ್ಪರಿಪೂರ್ಣಂ ॥
ಮಂಗಳಗೀತಿಯ ನಿನದದೊಳಾದಂ।
ಸಂಗಳಿಸಿದುದು ಮೃದಂಗನಿನಾದಂ ॥

ರತ್ನ ಕುಂಡಲ–ಕಿರೀಟ–ಉಡಿದಾರ ಮೊದಲಾದ ಆಭರಣಗಳಿಂದಲೂ, ಸುಕುಮಾರವಾದ ಹಾವಿನ ಪೊರೆಯಂತೆ ನವುರಾದ ವಸ್ತ್ರಗಳಿಂದಲೂ ಭೂಷಿತನಾಗಿ, ನವಯುವಕನಾಗಿಯೆ ಹುಟ್ಟಿದನು. ಹಾಗೆ ಹುಟ್ಟಲಾಗಿ–೬೨. ಆತನು ಗಳಿಸಿದ ಪುಣ್ಯವೆ ಕಣ್ದೆರೆದಂತೆ ಆ ವಿಮಾನದ ಕದಗಳು ತಾವಾಗಿ ತೆರೆದು ಕೊಂಡವು; ಜೊತೆಗೇ ಸ್ವರ್ಗಲೋಕದ ಪ್ರಿಯೆಯರ ಮನಸ್ಸುಗಳು ಕದದೆರೆದವು; ಮಧುರವಾದ ಪರಿಮಳ ಜಗ್ಗನೆ ಹೊಮ್ಮಿ ಬಂದಿತು. ೬೩. ಆ ಸಮಯದಲ್ಲಿ ಹೂಗಳು ಸುರಿಯುತ್ತಿದ್ದುವು; ಹಿತಕರವಾಗಿ ಗಾಳಿ ಬೀಸಿತು; ಉಪಗ್ರಹದ ಕದಗಳು ತೆರೆದುಕೊಂಡವು; ಎತ್ತೆತ್ತಲೂ ಜೈನರ ಧ್ವಜಗಳು ತುಂಬಿದುವು; ಮನಮೋಹಕ ವಾದ (ರಂಗವಲ್ಲಿಯ) ವರ್ಣಚಿತ್ರದ ಕೆಲಸ ಇಂದ್ರನೀಲದ ಕುಟ್ಟಿಮದಲ್ಲಿ

ಬಿಡದಚ್ಚರಸಿಯರಂತಾಲಯಮಂ ।
ಪಿಡಿದಭಿನಯಿಸಿದರೆಸೆವಭಿನಯಮಂ ॥
ಸುರವಂದಿವ್ರಜಜಯಜೀಯರವಂ ।
ಪರಪೂರಿಸಿದತ್ತಾಶಾಂಬರವಂ ॥
ವಿಕರಣಸಂಭವದೇವೀಪ್ರಕರಂ ।
ಸಕಳೋಪಕರಣನಿಕರಾತ್ತಕರಂ ॥
ಬಂದಿದಿರೊಳ್ ನಿಂದುದು ನಲವಿಂದಂ ।
ಸಂದಣಿಸಿರ್ದುದು ದೇವೀವೃಂದಂ ॥
ಕನ್ನಡಿಯಡಪದ ಡವಕೆಯ ಚೆನ್ನೆಯ ।
ರೇನ್ನಡೆದೆಯ್ತಂದರೊ ಸುರಕನ್ನೆಯ ॥
ರುಲ್ಬಣರಾಗದಿನೆಱಗಿದುದನಿತುಂ ।
ಕಿಲ್ಬಿಷಿಕಪ್ರಕರಂ ಜೀಯೆನುತಂ ॥
ವಿವಿಧಾರ್ಘ್ಯಕರರ್ ಕಾಣ್ಬುಜ್ಜಗದಿಂ ।
ಭವನಮಹತ್ತರದೇವರ್ ಕ್ರಮದಿಂ ॥
ಬರೆ ಸುರಪತಿ ಕಂಡಿನಿತು ಮಹಕ್ಕಂ ।
ಪಿರಿದುಂ ಬೆಕ್ಕಸಮುತ್ತು ಬಱಿಕ್ಕಂ ॥ ೬೩

ಶೋಭಿಸಿತು; ಮನೆಯ ವಿವಿಧ ಭಾಗಗಳ ಎಲ್ಲ ಬಾಗಿಲುಗಳೂ ಹರಿಚಂದನದ ತೋರಣಗಳಿಂದ ಕಂಗೊಳಿಸಿದುವು; ನೆಲದ ಮೇಲೆ ಹರಡಿದ ಪುಷ್ಪಾಂಜಲಿಗಳಿಗೆ ಮದವೇರಿದ ದುಂಬಿಗಳು ಹಿಂಡು ಹಿಂಡಾಗಿ ಗುಂಯಿಗುಡುತ್ತ ಮುಕ್ಕುರಿಕ್ಕಿದುವು; ರತ್ನಮಯವಾದ ಗೃಹದಲ್ಲಿ ಎಲ್ಲ ಕಡೆಗೂ ಗೋಡೆಯಿಂದ ಗೋಡೆಯವರೆಗೆ ಮುತ್ತಿನ ರಂಗವಲ್ಲಿ ಶೋಭಿಸಿತು; ಹೊಸ ಬಟ್ಟೆಗೆ ಸಿಂಪಿಸಿದ ಸುಗಂಧ ಚೂರ್ಣದ ಕಂಪು ದಿಕ್ಕುಗಳನ್ನು ವ್ಯಾಪಿಸಿ ಮೋಹಕವಾಯಿತು; ಮಂಗಳಗೀತೆಗಳ ಧ್ವನಿ ಯೊಡನೆ ಮೇಳವಾಗಿ ಮೃದಂಗ ಧ್ವನಿಯು ಹೊಮ್ಮಿತು; ಅಪ್ಸರೆಯರು ಲಯಪೂರ್ಣವಾಗಿ ಲಾಸ್ಯವಾಡಿದರು; "ಜಯ, ಜೀಯ" ಎಂಬ ದೇವಲೋಕದ ಭಟ್ಟಂಗಿಗಳ ಸ್ತುತಿ ದಿಗಂತವಾಗಿ ಆಕಾಶವನ್ನು ತುಂಬಿತು; ವಿಕ್ರಿಯೆಯಿಂದ ಜನ್ಮತಾಳಿದ ದೇವಿಯರ ಸಮುದಾಯವು ಸಮಸ್ತ ಉಪಕರಣಗಳನ್ನು ಕೈಯಲ್ಲಿಟ್ಟು ಕೊಂಡು ಸಂತೋಷದಿಂದ ಬಂದು ಎದುರಿಗೆ ನಿಂತುಕೊಂಡಿತು; ದೇವಿಯರ ಸಮೂಹ ದಟ್ಟವಾಗಿ ನೆರೆಯಿತು; ಕನ್ನಡಿಯ ತಾಂಬೂಲದ ಸೇವೆಗೈಯುವ ದೇವಕನ್ಯೆಯರು ನಡೆತಂದರು; ಕಿಲ್ಬಿಷಕರ ಗುಂಪು ಆದರಪೂರ್ವಕವಾಗಿ ಬಂದು "ಜೀಯಾ" ಎಂದು ನಮಸ್ಕರಿಸಿತು; ಭವನ ಮಹತ್ತರ ದೇವರು ಅನೇಕ ಬಗೆಯ ಅರ್ಘ್ಯಗಳನ್ನು ಹಿಡಿದುಕೊಂಡು ದರ್ಶನ ಪಡೆಯಲೆಂದು ಕ್ರಮವಾಗಿ ಬಂದರು;

ಪೆಣದೆರ್ದೆಯಲ್ಲಿ ತಣ್ಮಲೆವ ಸಂತಸವೆತ್ತಣದೀವಿಮಾನವೆ।
ತ್ತಣದಿದಿರೊಳ್ ನಿಗುಂಬಿಪಮರಾಳಿಯೆತ್ತಣದೆಯ್ದೆ ತೋರ್ಪ ಪೆ॥
ಕ್ಕಣದ ವಿಳಾಸವೆತ್ತಣದು ಲೋಕವಿದೆತ್ತಣದಾನುಮಾಗಳೆ।
ತ್ತಣನೆನುತುಂ ವಿಚಾರಿಸಿದನೇಂ ಭವಸಂಧಿವಿಮೋಹದಂದಮೋ॥ ೬೪

ತದನಂತರಂ,

ತೊಟ್ಟನಿರುಳ್ ನಡೆವಂ ಪೊಲ।
ಗೆಟ್ಟಲ್ಲಿಯೆ ನೇಸಱಿಕೊಗೆವವೊಲ್ ಕಲ್ಲೆರ್ದೆಯೊಳ್॥
ಪುಟ್ಟಿ ಭವಪ್ರತ್ಯಯಮೊಡ।
ವುಟ್ಟಿರ್ದಱಿಯಮೆಯನಳಱಿ ದಿವಿಜಂಗಾಗಳ್॥ ೬೫

ಅಂತು ಪಲಕಾಲಮೇನಾನುಮಂ ಮಾಡಿ ಮಱಿದವಂಗೆ ನೆನವಿ ಪುಟ್ಟುವಂತೆ ಪುಟ್ಟಿದ ಭವಪ್ರತ್ಯಯಜ್ಞನಪ್ರಭಾವದಿಂದಂ

ಪ್ರಥಮಸ್ವರ್ಗಮಿದೀವಿರಾಜಿಪ ವಿಮಾನಂ ಶ್ರೀಪ್ರಭಂ ಸತ್ತಪಃ।
ಪಥಮಂ ಶ್ರೀಜಿನನಾಥದರ್ಶಿತಮನಾಂ ಮುಂ ಪೊರ್ದಿ ಬಂದಿಲ್ಲಿ ತ॥
ತ್ಪೃಥುಪುಣ್ಯೋದಯದಿಂದೆ ಪುಟ್ಟಿದೆನಿದೆಲ್ಲಂ ಪ್ರಾಪ್ತಸೇವಾಮನೋ।
ರಥಮಸ್ಮತ್ಪರಿವಾರಮೆಂದಱಿದೆನಾವೃತ್ತಾಂತಮಂ ಸ್ವಾಂತದೊಳ್॥ ೬೬

ಈ ಎಲ್ಲ ವೈಭವಾದರಗಳನ್ನು ಕಂಡು ಹೊಸದಾಗಿ ಅಲ್ಲಿ ಜನ್ಮತಾಳಿದ ಈ ದೇವೇಂದ್ರನು ಬೆರಗಾದನು; ಬಳಿಕ–೬೪. "ಹೆಣದೆದೆಯಲ್ಲಿ ತುಂಬಿದ ಆ ಸಂತೋಷವೆತ್ತ! ಈ ವಿಮಾನವೆತ್ತ! ನನ್ನ ಎದುರಿಗೆ ದಟ್ಟಣಿಸಿ ನಿಂತ ಈ ದೇವಸಮೂಹವೆಲ್ಲಿಯದು?! ಮನೋಹರವಾಗಿ ತೋರುವ ಈ ದೃಶ್ಯವೆಲ್ಲಿಂದ ಬಂತು? ಈ ಲೋಕ ಎಲ್ಲಿಯದು? ನಾನು ಈಗ ಎಲ್ಲಿಯವನು?" ಎಂದು ಯೋಚನೆಗೀಡಾದನು. ಎರಡು ಜನ್ಮಗಳ ನಡುವಿನ ಸಂಧಿಕಾಲದ ಮೋಹ ಎಂತಹದಿದು! ಆ ಬಳಿಕ_ ೬೫. ರಾತ್ರಿಯಲ್ಲಿ ಹಾದಿ ನಡೆಯುವವನು ಹಾದಿ ತಪ್ಪಿದೆನೆಂಬ ಹೊತ್ತಿಗೇ ಸೂರ್ಯೋದಯವಾದಂತೆ, ಒಮ್ಮೆಲೆ ಜನ್ಮಜ್ಞಾನವುಂಟಾಗಿ, ಈ ಮೊದಲಿನ ಅಜ್ಞಾನವನ್ನೆಲ್ಲ ದೂರಗೊಳಿಸಿತು. ವ॥ ಹಲವಾರು ಕಾಲ ಏನೇನನ್ನೊ ಮಾಡಿ ಮರೆತವನಿಗೆ ಒಮ್ಮೆಲೆ ನೆನಪು ಹುಟ್ಟುವಂತೆ, ಜನ್ಮಜ್ಞಾನ ಹುಟ್ಟಿದ ಪರಿಣಾಮವಾಗಿ– ೬೬. "ಇದು ಮೊದಲನೆಯ ಕಲ್ಪವಾದ ಸೌಧರ್ಮ; ಕಂಗೊಳಿಸುವ ಈ ವಿಮಾನವು ಶ್ರೀಪ್ರಭವೆಂಬುದು; ಶ್ರೀ ಜಿನೇಂದ್ರನು ತೋರಿಕೊಟ್ಟ ತಪೋಮಾರ್ಗವನ್ನು ಅನುಸರಿಸಿ, ಅದರಿಂದ ಗಳಿಸಿದ ಮಹಾಪುಣ್ಯದ ಫಲವಾಗಿ ನಾನು ಇಲ್ಲಿ ಹುಟ್ಟಿರುವೆನು; ಇವರೆಲ್ಲ ನನ್ನ ಸೇವಾರ್ಥವಾಗಿ ಬಂದಿರುವ ನನ್ನ ಪರಿವಾರವೆ"

ಅನ್ನೆಗಮೆಯ್ದೆವಂದು ಪೊಡೆಮಟ್ಟು ಮಹತ್ತರದೇವರೀಶ ನೀಂ।
ಮುನ್ನಿನ ಜನ್ಮದೊಳ್ ನೆಗಲ್ದಜೈನತಪಃಫಲದಿಂದಮೀನಿಳಿಂ॥
ಪೋನ್ನತಸೌಖ್ಯಮಂ ಪಡೆದೆಯಂತದಱಿಂ ಜಿನರಾಜಪೂಜೆಯಂ।
ಮುಂ ನೆಗಟಲ್ಕೆವೇಟ್ಕುಮದುಕೃತ್ಸ್ನಸುಖಪ್ರಭವೈಕಕಾರಣಂ॥ ೬೭

ಜಿನಪದಯುಗಪ್ರಸಾದದಿ॥
ನಿನಿತು ಸುರಶ್ರೀಯನೆಯ್ದೆ ತಾಳ್ದಿದೆಯದಱಿಂ।
ನಿನಗನ್ವರ್ಥಂ ಶ್ರೀಧರ।
ವಿನುತಾಹ್ವಯಮೆಂದು ಪೊಗಟ್ಟುದಾ ದಿವಿಜಜನಂ॥ ೬೮

ಅನಂತರಮಾದೇವಂ ದೇವಾಧಿದೇವಪದರಾಜೀವಸೇವಾಧೀನಮಾನಸಂತದ್ವಿಮಾನದಿಂ ಪೊಱಮಟ್ಟು ಆತ್ಮರಕ್ಷಕಾಭಿಯೋಗ್ಯಪ್ರಕೀರ್ಣಸಂಮಾನಿತಾಮರಾದಿಪರಿಜನಪರೀತನುಂ, ಅನರ್ಘಮೌಳಿಮಣಿಗಣ ಪ್ರಭಾಪ್ರಸರಪರಿವೇಷಪರಿವೃತೋದ್ದಂಡಪುಂಡರೀಕಪೂರ್ಣಿಮಾಚಂದ್ರನುಂ, ದೇದೀಪ್ಯಮಾನಮಾಣಿಕ್ಯ ಕುಂಡಲಪ್ರತಿಬಿಂಬಮಾರ್ತಂಡಮಂಡಳಮಂಡಿತಾಂಶೂದಯಾಚಲಶಿಖಂಡನುಂ, ಅನಾಭೀವಲಯ ಪ್ರಲಂಬಮಾನಚಕಚಕಿತಮುಕ್ತಾಹಾರಭಾರಮಳಯಜಸ್ಥಾಸಕಸ್ಥಗಿತವಿಸ್ತೀರ್ಣವಕ್ಷಸ್ಸ್ಥಲನುಂ, ಅಯನ

ಹೀಗೆಂದು ಆ ವಿಷಯುವನ್ನೆಲ್ಲ ಆತನು ತನ್ನಲ್ಲಿಯೆ ಅರಿತುಕೊಂಡನು. ೬೭. ಅಷ್ಟರಲ್ಲಿ ಮಹತ್ತರ ದೇವರು ಬಳಿಗೆ ಬಂದು ನಮಸ್ಕರಿಸಿ ಹೀಗೆ ಬಿನ್ನವಿಸಿದರು_ "ಒಡೆಯನೆ ನೀನು ಪೂರ್ವಜನ್ಮದಲ್ಲಿ ಮಾಡಿದ ಜೈನ ತಪಸ್ಸಿನ ಫಲವಾಗಿ ಈ ದೇವಲೋಕದ ಮಹಾಸುಖವನ್ನು ಪಡೆದೆ; ಆದುದರಿಂದ ಸಮಸ್ತಸುಖ ಕಾರಣವಾದ ಜಿನೇಂದ್ರ ಪೂಜೆಯನ್ನು ಮೊದಲು ನೆರವೇರಿಸಬೇಕು. ೬೮. ಜಿನಪಾದಗಳ ಅನುಗ್ರಹದಿಂದ ಇಂತಹ ದೇವೈಶ್ವರ್ಯವನ್ನು ನೀನು ಗಳಿಸಿದೆ. ಆದುದರಿಂದ ಶ್ರೀಧರನೆಂಬ ಹೆಸರು ನಿನಗೆ ಅನ್ವರ್ಥಕವಾದುದು". ಹೀಗೆಂದು ಆ ದೇವತೆಗಳು ಹೊಗಳಿದರು. ವ॥ ಬಳಿಕ ಆ ದೇವನು ಪರಮೇಶ್ವರನ ಪಾದಪೂಜೆಗೆ ಮನಸ್ಸುಮಾಡಿ ಆ ವಿಮಾನದಿಂದ ಹೊರಟು, ಆತ್ಮರಕ್ಷಕರೆ ಮೊದಲಾದ ಯೋಗ್ಯ ದೇವತೆಗಳ ಪರಿವಾರದೊಂದಿಗೆ, ಅಮೂಲ್ಯವಾಧ ಕಿರೀಟದಲ್ಲಿ ಕೆಚ್ಚಿದ ರತ್ನಗಳ ಪ್ರಭೆಯಿಂದ ಹುಣ್ಣಿಮೆಯ ಚಂದ್ರನಂತೆ ಶೋಭಿಸುತ್ತ, ಉಜ್ವಲವಾದ ಮಾಣಿಕದ ಕುಂಡಲಗಳಲ್ಲಿ ಪ್ರತಿಬಿಂಬಿತವಾದ ಸೂರ್ಯಮಂಡಲದಿಂದ ಉದಯಪರ್ವತದಂತೆ ಕಂಗೊಳಿಸುತ್ತ, ಹೊಕ್ಕುಳವರೆಗೆ ಇಳಿಬಿದ್ದ ಚಕಚಕಿಸುವ ಮುತ್ತಿನಹಾರದಿಂದಲೂ, ಶ್ರೀಗಂಧ ಲೇಪನದಿಂದಲೂ ಎದೆಯನ್ನು ಅಲಂಕರಿಸಿಕೊಂಡು, ನಡಗೆಯಲ್ಲಿ ಅಲುಗಾಡು ತ್ತಿರುವ ರತ್ನಮಯುವಾದ ಕಡಗಗಳ ಕಿರಣಗಳಿಂದ ಶೋಭಿಸುವ ಭುಜಗಳು, ಲತೆಯುಡರದ ಪಾರಿಜಾತ ಕಾಂಡಗಳಂತೆ ತೋರುತ್ತಿರಲಾಗಿ, ಕಾಯಿಸಿ ಪುಟವಿಟ್ಟ ಚಿನ್ನದಂತೆ ಕಾಂತಿಮಯುವಾದ ತನ್ನ ದೇಹಪ್ರಭೆಯಿಂದ ಹೊಂಬಣ್ಣವಾಗಿ

ಲೀಲಾಂದೋಳಾಯಿತರತ್ನವಳಯೋನ್ಮುಖಮಯೂಖಲತಿಕಾ ಪ್ರತಾನಪರಿವೇಷ್ಟಿತಭುಜಾದಂಡಪಾರಿಜಾತ ಕಾಂಡನುಂ, ಉತ್ತಪ್ತತಪನೀಯಚ್ಛಾಯಾಪ್ರಾಯಕಾಯಕಾಂತಿಸಂತಾನಸಂಗಮಪಿಶಂಗೀಭೂತಸಹಜಾತ ನೂತನದುಕೂಲಾಂಚಲನುಂ, ಅತಿವಿಶದಚರಣನಖಕಿರಣಶಂಕಾಸಮುತ್ಪಾದಕಪಾದಲಂಕಾರಶೌಕ್ತಿಕೇಯ ದೀರ್ಘದೀಧಿತಿಕ್ಷೀರಧಾರಾಪ್ರಕ್ಷಾಳಿತಾಕ್ಷೂಣಹರಿನೀಳಮಣಿಕುಟ್ಟಿಮನುಮಾಗಿ ಪಾದಮಾರ್ಗದಿಂ ಪೋಗಿ ಸೌಧರ್ಮಕಲ್ಪದೊಳುಳ್ಳಕೃತಕಚೈತ್ಯಾಲಯಂಗಳಂ ಕಲ್ಪಪಾದಪಪ್ರತಿಪಾದಿತವಿವಿಧಾರ್ಚನಂಗಳಿಂದರ್ಚಿಸಿ ಬಂದುನಿಜಮಂದಿರಪುರೋಭಾಗದ ಚಂಚತ್ಪಂಚರತ್ನಮಯಮಂಡಪಮಧ್ಯಾಧಿಷ್ಠಿತನಿಷ್ಟಪ್ತಕಾಂಚನ ಪಂಚಾನನವಿಷ್ಟರದೊಳ್

ಎಸೆವ ಜಿನೇಂದ್ರಬಿಂಬಮನಳುಂಬಮಿದೆಂಬಿನಮಟ್ತೆಯಿಂ ಪ್ರತಿ।<br>
ಷ್ಠಿಸಿ ಮನವಾಱಿ ಮಾಡಿ ಸವನೋತ್ಸವಮಂ ಕ್ರಮದಿಂ ಬೞಿಕ್ಕಮ ॥<br>
ರ್ಚಿಸಿ ನೆಱಿದೆಂಟುಮರ್ಚನೆಗಳಿಂ ರಸವೃತ್ತಿಯ ನೃತ್ತಮಂ ಪ್ರವ ।<br>
ರ್ತಿಸಿ ಮಗೞಷ್ಟಪ್ರಕಾರದಿನನುಷ್ಠಿಸಿದಂ ದಿವಸಾಷ್ಟಕಂಬರಂ ॥ ೬೯

ಅಂತಷ್ಟಾಹ್ನಿಕಮಹಾಮಹಮನರ್ಹತ್ಪರಮೇಶ್ವರಂಗೆ ಮಾಡಿ ಬೞಿಕಮಣಿಮಾದಿಗುಣಸಂಪನ್ನನುಂ ಜರಾರೋಗಸ್ವಪ್ನಸಂತಾಪಾಕ್ಷಿಪಕ್ಷಪಾತವ್ಯಪೇತನುಂ, ಸಪ್ತಾರತ್ನಿಪ್ರಮಾಣದೇಹೋತ್ಸೇಧನುಂ, ಸಾಗರೋ ಪಮದ್ವಿತಯಸಮ್ಮಿತಾಯುಷ್ಕನುಂ, ದ್ವಿಸಹಸ್ರಹಾಯನಾಂತರಕೃತಾಮೃತಾಶನನುಂ, ಏಕೈಕಮಾಸ

ತನ್ನ ಜನ್ಮಸಿದ್ಧ ರೇಷ್ಮೆಬಟ್ಟೆ ಶೋಭಿಸುತ್ತಿರಲಾಗಿ, ಅತ್ಯಂತ ಶುಭ್ರವಾದ ತನ್ನ ಕಾಲುಗುರುಗಳ ಬೆಳಕಿನಿಂದ ಇನ್ನಷ್ಟು ಪ್ರಕಾಶಮಾನವಾದ ಕಾಲ್ಗಡಗಗಳ ಮುತ್ತಿನ ಪ್ರಭೆ, ಇಂದ್ರನೀಲದ ನೆಲಗಟ್ಟನ್ನು ಹಾಲಿನ ಧಾರೆಯಿಂದ ತೊಳೆಯುವಂತೆ ಕಂಗೊಳಿಸುತ್ತಿರಲಾಗಿ, ಕಾಲ್ನಡಗೆಯಿಂದ ಹೋಗಿ ಸೌಧರ್ಮಕಲ್ಪದಲ್ಲಿ ಇರುವ ಅಕೃತ್ರಿಮ ಚೈತ್ಯಾಲಯಗಳನ್ನು ಕಲ್ಪವೃಕ್ಷಗಳಿಂದ ಪಡೆದ ಬಗೆ ಬಗೆಯ ಪೂಜಾದ್ರವ್ಯಗಳಿಂದ ವಿವಿಧವಾಗಿ ಅರ್ಚಿಸಿ ಬಂದು ತನ್ನ ಮಂದಿರದ ಅಂಗಳದಲ್ಲಿಯ ಮಿರುಗುವ ಪಂಚರತ್ನಖಚಿತವಾದ ಮಂಟಪ ಮಧ್ಯದೊಳಗೆ ಇರಿಸಿದ ಪುಟವಿಟ್ಟ ಚಿನ್ನದ ಸಿಂಹಾಸನದಲ್ಲಿ–೬೯. ಸುಂದರವಾದ ಜಿನೇಂದ್ರ ವಿಗ್ರಹವನ್ನು ಅತಿಶಯವಾದ ಭಕ್ತಿಯಿಂದ ಪ್ರತಿಷ್ಠೆಮಾಡಿ, ಮನಸ್ಸು ದಣಿವಂತೆ ಅಭಿಷೇಕೋತ್ಸವವನ್ನು ನೆರವೇರಿಸಿ, ಬಳಿಕ ವಿಧ್ಯುಕ್ತವಾಗಿ ಎಂಟು ಅರ್ಚನೆಗಳನ್ನು ಮಾಡಿ, ರಸಮಯವಾದ ನೃತ್ಯವನ್ನು ಮಾಡಿಸಿದನು. ಹೀಗೆ ಎಂಟು ದಿನಗಳವರೆಗೆ ಪೂಜೆಯನ್ನು ನಡೆಯಿಸಿದನು. ವ॥ ಹೀಗೆ ಅಷ್ಟಾಹ್ನಿಕ (ಎಂಟು ದಿನಗಳವರೆಗೆ) ಮಹಾಪೂಜೆಯನ್ನು ಅರ್ಹತ್ಪರಮೇಶ್ವರನಿಗೆ ಮಾಡಿದನು. ಆತನಿಗೆ ಅಣಿಮಾ, ಗರಿಮಾ ಮೊದಲಾದ ಗುಣಗಳು ಪ್ರಾಪ್ತವಾಗಿದ್ದುವು; ಮುಪ್ಪು, ರೋಗ, ಸ್ವಪ್ನ, ಸಂತಾಪ, ರೆಪ್ಪೆ ಹೊಯ್ಯುವುದು–ಇವು ಯಾವೂವೂ ಅವನಿಗೆ ಇರಲಿಲ್ಲ; ಏಳು ಮೊಳದಳತೆಯ ದೇಹವುಳ್ಳವನಾಗಿ, ಎರಡು ಸಾಗರೋಪಮ ಆಯುಷ್ಯವನ್ನು ಪಡೆದಿದ್ದನು; ಆತನಿಗೆ ಎರಡು ಸಾವಿರ ವರ್ಷಕ್ಕೆ ಒಂದು ಸಲ ಅಮೃತಾಹಾರ;

ಪ್ರಭವದಭಿನವಸುರಭಿನಿಶ್ವಾಸೋಚ್ವಾಸನುಂ, ಕಾಯಪ್ರವಿಚಾರಚತುಸ್ಸಹಸ್ರಪ್ರಿಯಪ್ರಮಾಧೀಶ್ವರನುಂ, ಆತರ್ಕ್ಯವಿಭವವಿಳಸಿತನುಮಾಗಿ

ಉರಮಮರ್ದಪ್ಪಿ ಚಪ್ಪಲರ್ದ ಪೆರ್ಮೊಲೆಯಿಂ ವದನಂ ಸುಧಾಮಯಾ ।
ಧರಪರಿಸೇವೆಯಿಂ ತೊಡೆ ತೊಡಂಕಿದ ನುಣ್ದೊಡೆಯಿಂ ಮನಂ ನಿರಂ ॥
ತರಸುರತಪ್ರಪಂಚಸುಖದಿಂ ಪೆಱಪಿಂಗದಿನಿತ್ತಂಮೆಂಬಿನಂ ।
ಸುರನುಪಭೋಗಮಂ ತ್ರಿದಶವಾರವಧೂಜನದೊಳ್ ನಿಮಿರ್ಚಿದಂ ॥ ೭೦

ಮತ್ತಂ

ಸೊಗಯಿಪ ಪೊಂಕು ಲಾಲಿಸುವ ಲಲ್ಲೆ ಮರಲ್ಚುವ ಮಾತು ಚಿತ್ತಮಂ ।
ತೆಗೆವ ತೆಗಟ್ಟಿ ಮೋಹಿಪ ವಿನೋದಮರಲ್ಚುವಪಾಂಗವೀಕ್ಷಣಂ ॥
ಪೊಗಟಿಪ ಪೊರ್ದುವಾಸೆ ಬಸದಾಗಿಪ ಬಟ್ಟಿನಿಪೀವಿಭಾವಚೇ ।
ಷ್ಟೆಗಳಿನದೇನಲಂಪನೆರ್ದೆಗಿತ್ತರೊ ಸಗ್ಗದ ಪೆಂಡಿರಾತನಾ ॥ ೭೧

ಅಮರ್ದುಣಿಸಗ್ಗದಚ್ಚರಸಿಯರ್ವಧುವರ್ ನಿಳಯಂ ಪರಾರ್ಥ್ಯರ ।
ತ್ನಮಯವಿಮಾನಮಾಳ್ಗಳಮರರ್ ಹರಿನೀಳತಳಂ ಧರಾತಳಂ ॥
ಪ್ರಮದವನಂ ಸುರದ್ರುಮವನಂ ಬಿನದಂ ನವದಿವ್ಯನಾಟಕೋ ।
ದ್ಯಮಮೆನೆ ಬಣ್ಣಿಪಂಗೆ ಸುಖಸಂಪದಮೇಂ ಗಳ ! ಮೊಗ್ಗೆ ಸಗ್ಗದಾ ॥ ೭೨

ತಿಂಗಳಿಗೊಂದು ಸಲ ನವ ಪರಿಮಳದ ನಿಶ್ವಾಸ; ಮನ್ಮಥ ಸುಖಕ್ಕಾಗಿ ನಾಲ್ಕು ಸಾವಿರ ಪ್ರಮದೆಯರು; ಆತನಿಗೆ ತರ್ಕಾತೀತವಾದ ವಿಲಾಸ ವೈಭವಗಳು ಪ್ರಾಪ್ತವಾಗಿದ್ದುವು. ೭೦. ಬಿಗಿದಪ್ಪಿಕೊಂಡು ಸೊಪ್ಪಾದ ಹೆಣ್ಣುಗಳ ಮೊಲೆಗಳಿಂದ ತನ್ನ ಎದೆಯೂ, ಅಮೃತಮಯವಾದ ತುಟಿಗಳ ಸವಿಯಿಂದ ತನ್ನ ಮುಖವೂ, ತೊಡಕಿದ ನುಣುಪಾದ ತೊಡೆಗಳಿಂದ ತನ್ನ ತೊಡೆಗಳೂ ಎಡೆಬಿಡದ ರತಿಕ್ರೀಡಾ ಸುಖದಿಂದ ತನ್ನ ಮನಸ್ಸೂ ಎಂದೂ ಹಿಂದೆಗೆಯುದೆಂಬಂತೆ ಆ ದೇವನು ದೇವಲೋಕದ ವೇಶ್ಯಾವಧುಗಳನ್ನು ಉಪಭೋಗಿಸಿದನು. ಮತ್ತು–೭೧. ಮನೋಹರವಾದ ಬಿನ್ನಾಣಗಳು, ಅಕ್ಕರೆಯ ಮುದ್ದಾಟ, ಮರುಳುಗೊಳಿಸುವ ಮಾತು, ಮನಸ್ಸನ್ನು ತುಂಬುವ ಸರಸ, ಮೋಹಿಸುವ ವಿನೋದ, ಅರಳಿಸುವ ಕುಡಿನೋಟ, ಮೆಚ್ಚಿಸಿಕೊಡುವ ತವಕ, ಪರವಶಗೊಳಿಸುವ ರೀತಿ–ಈ ಬಗೆಯ ವಿಭಾವಗಳಿಂದ ಸ್ವರ್ಗದ ಹೆಣ್ಣುಗಳು ಅವನಿಗೆ ಎಂತಹ ಆನಂದವನ್ನು ಒದಗಿಸಿದರು! ೭೨. ಆಹಾರವೆಂದರೆ ಅಮೃತ; ಹೆಂಡಿರೂ ಅಪ್ಸರೆಯರು; ನಿವಾಸಕ್ಕೆ ರತ್ನಮಯ ವಿಮಾನ; ಆಳಾಗಿರುವವರು ದೇವತೆಗಳು; ಭೂಮಿಯೆಲ್ಲವೂ ಇಂದ್ರ ನೀಲದಿಂದ ರಚಿತವಾದುದು; ವಿಲಾಸೋದ್ಯಾನವಾಗಿರುವುದು ಕಲ್ಪವೃಕ್ಷಗಳ ವನ; ವಿನೋದಕ್ಕೆ ಹೊಸಹೊಸ ಸ್ವರ್ಗೀಯ ನಾಟಕ–ಹೀಗೆ ಇರುವುದು ಆತನ

ದಿಟದಿಂದೊಲ್ದವರಂ ಲಂ।
ಪಟತೆಯಿನಮರ್ದಪ್ಪಿ ನೆರೆವ ನೆರೆವನಿತು ಸುಖಂ॥
ಘಟಿಯಿಸದು ತಮ್ಮೊಳೆನಿಸುವ।
ಮಿಟಮಿಟಸಗ್ಗಂಗಳೋಳಿಯೇ ಸೌಧರ್ಮಂ॥ ೭೩

ಅದಲ್ಲದೆಯುಮೋರ್ರೊರ್ಮೆ ನಿಜವಿಮಾನದುಪವನಂಗಳೊಳಗಣೋಲಗಸಾಲೆಯೊಳನೇಕನಾಕಿನಿಕರಪರಿವೃತನಾಗಿರ್ಪಲ್ಲಿ

ಜಲಜಲಿಸುತ್ತುಮಿರ್ಪ ಮಣಿಭಿತ್ತಿಗಳೊಳ್ ನಿಜಮೂರ್ತಿಯೆತ್ತಲುಂ।
ನೆಲಸಿ ಜಲಕ್ಕನಾಗಿರೆ ನಿರೀಕ್ಷಿಸಿ ಲೀಲೆಯಿನೋಲಗಕ್ಕೆ ವ॥
ರ್ಪಲಘುನಿತಂಬೆಯರ್ ಸುರಪುರಂಧ್ರಿಯರೆತ್ತಣೆನೆಂದು ನಿಟ್ಟಿಪಾ।
ಕುಲತೆಯನೊಂದೆ ಕಂಡು ದಿವಿಜಂ ತಳೆವಂ ದರಹಾಸಲಕ್ಷ್ಮಿಯಂ॥ ೭೪

ಮಱಸಿಕ್ಕಿ ನೋಡುವಮರಿಯ।
ತುಱುಗೆಮೆಗಣ್ಬೆಳಗು ಬಳೆಯೆ ಚಾಮರದೆಲರಿಂ॥
ನೆಱೆ ಮಿಳಿರ್ದು ಮಿಱುಪ ದುಗುಲದ।
ಸೆಱಗೆಂದೆಂದಂದು ತೆಗೆಯಲಾತಂ ಬಗೆದಂ॥ ೭೫

ಸಂಕೇತಸಮಯಮಂ ನಲ।
ವಿಂ ಕಿವಿಯೊಳ್ ಪಚ್ಚುವಚ್ಚರಸಿಯಧರಮಯೂ॥

ಸ್ವರ್ಗಸುಖದ ಸಮೃದ್ಧಿ. ಇದನ್ನು ಬಣ್ಣಿಸುವೆನೆಂದರೆ ಅದೇನು ಸುಲಭವೆ ? ೭೩. ಮನಃಪೂರ್ವಕವಾಗಿ ಒಲಿದವರನ್ನು ಆಸಕ್ತಿಯಿಂದ ಬಿಗಿಯಪ್ಪಿ ಕೂಡುವ ಸುಖ ಎಷ್ಟು ಬೇಕೊ ಅಷ್ಟು ಸಾಧ್ಯವಾಗದು ಎಂದೆನಿಸುವ ಮಿಟಿಮಿಟಿ ಸ್ವರ್ಗಗಳ ಸಾಲೇ ಇರಬಹುದು. ಅವುಗಳನ್ನು ಈ ಸೌಧರ್ಮಕಲ್ಪಕ್ಕೆ ಸಮನೆನ್ನಲಾದೀತೆ ? ವ॥ ಒಮ್ಮೊಮ್ಮೆ ತನ್ನ ವಿಮಾನದ ಉಪವನಗಳಲ್ಲಿಯ ಓಲಗಸಾಲೆಯಲ್ಲಿ ಹಲವಾರು ದೇವತೆಗಳ ಪರಿವಾರದೊಂದಿಗೆ ಕುಳಿತಿರುವಾಗ–೭೪. ತಳತಳಿಸುತ್ತಿರುವ ರತ್ನದ ಗೋಡೆಗಳಲ್ಲಿ ತಮ್ಮ ಪ್ರತಿಬಿಂಬಗಳು ಎತ್ತೆತ್ತಲೂ ಉಜ್ವಲವಾಗಿ ಮೂಡಿರಲಾಗಿ, ಅವುಗಳನ್ನು ಕಂಡು ದೇವಸುಂದರಿಯರು, "ಓಲಗಕ್ಕೆ ಬಿನ್ನಾಣದಿಂದ ಬರುತ್ತಿರುವ ಈ ಚೆಲುವೆಯರು ಎಲ್ಲಿಯವರು ?" ಎಂದು ಕಳವಳಿಸಿ ನೋಡುವರು. ಅದನ್ನು ಕಂಡು ಈ ದೇವನು ಮುಗುಳ್ನಗೆ ಸೂಸುವನು. ೭೫. ಮರೆಯಲ್ಲಿ ನಿಂತುಕೊಂಡು ಕದ್ದು ನೋಡುವ ದೇವ ಸುಂದರಿಯರ ಕುಡಿನೋಟದ ಬೆಳಕು, ಹಬ್ಬಿ ತನ್ನ ಮೈಮೇಲೆ ಬೀಳಲಾಗಿ, ಚಾಮರದ ಗಾಳಿಯಿಂದ ಮೇಲೆದ್ದು ಮಿರುಗುವ ತನ್ನ ರೇಷ್ಮೆವಸ್ತ್ರದ ಸೆರಗೆಂದು ಭಾವಿಸಿ ಅದನ್ನು ಸರಿಸಬೇಕೆಂದು ಆತನು ಯೋಚಿಸಿದನು. ೭೬. ಅಪ್ಸರೆಯೊಬ್ಬಳು ಕೂಟಕ್ಕೆ ಸಂಕೇತ ಸಮಯವನ್ನು ಸೂಚಿಸಲೆಂದು ಕಿವಿಯಲ್ಲಿ ಪಿಸುಗುಟ್ಟುತ್ತಿರಲಾಗಿ ಆಕೆಯ ತುಟಿಯ

ಖಂ ಕರ್ಣಪೂರಪಲ್ಲವ ।
ಶಂಕೆಯನೊದವಿಸೆ ಸುರೋತ್ತಮಂ ಸೊಗಯಿಸಿದಂ ॥ ೭೬

ಮತ್ತಂ ಕ್ರೀಡಾಸ್ವಭಾವೆಯರಪ್ಪ ಪಲರುಂ ದೇವಿಯರ್ವೆರಸು ವಾಹನಾಮರವಿಕ್ರಿಯಾಶಕ್ತಿಸಂಜನಿತವಾಜಿಸಾಮಜಾದ್ಯನೇಕಯಾನಂಗಳನೇಱಿಪೋಗಿ,

ಸುಮನೋಭೂಭೃದ್ದರೀಸುಂದರತರವನದೊಳ್ ನಿರ್ಮಳಾಂಭಸ್ಸ್ವಯಂಭೂ ।
ರಮಣಾಕೂಪಾರದೊಳ್ ಲೋಚನಹೃದಯಸುಧಾಸ್ಯಂದಿನಂದೀಶ್ವರದ್ವೀ ॥
ಪಮಹಾಚೈತ್ಯಾಳಿಯೊಳ್ ಪಾವನತರನವಸಂಗೀತಕಕ್ರೀಡೆಯಂ ಮಾ ।
ಡಿ ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ ಕೇಳಿಶೀಳಂ ॥ ೭೭

ಅಂತಾತ್ಮೀಯಸುಕೃತಸಾಧಿತಮುಮಂ ಅನತಿಶಯಮುಮಂ ಅನನೂನವಿಭವಮುಮಂ ಅಪ್ರತಿಬಂಧಕಮುಮಂ ಅಭಿಮತಾನುಗತಮುಮಪ್ಪ ದೇವಲೋಕಶ್ರೀಯನನುಭವಿಸುತ್ತುಮಿರೆ ನಿಜಾಯುರಬ್ಧಿದ್ವಯಮರ್ಧವತ್ಸರಾವಶೇಷಮಾಗಲೊಡಂ

॥ಹರಿಣೀವೃತ್ತಂ॥

ತಳೆದ ಸುಮನೋದಾಮಂ ನೀರೋಡಿ ಬಾಡಿದುದಾಗಳಾ ।
ಗುಳಿಯನೊಳಕೆಯ್ದತ್ತಾಸ್ಯಾಂಭೋರುಹಂ ನಿಜದೇಹದು ॥
ಜ್ಜ್ವಳಿಕೆ ಮಸುಳ್ದೈತಂದಂದೊಂದು ತಂದ್ರತೆ ಚಿತ್ತಮಂ ।
ಬಳಸಿದುದು ಪೇಟಿಖಾವೊಂಗೇನಾಗದಾಯುವ ತೌಗೆಯೊಳ್ ॥ ೭೮

ಕೆಂಪುಕಾಂತಿ ಆತನ ಕಿವಿಗೆ ಅಲಂಕಾರ ಕುಸುಮದ ಶೋಭೆಯನ್ನೊದಗಿಸಿ ಆ ದೇವೇಂದ್ರನನ್ನು ಸಂತೋಷಗೊಳಿಸಿತು. ವ॥ ಕ್ರೀಡಾಪ್ರಿಯೆಯರಾದ ಹಲವಾರು ದೇವಿಯರನ್ನೊಡಗೊಂಡು ಆತನು ವಾಹನಾಮರರು ಮಾಯಾಶಕ್ತಿಯಿಂದ ಒದಗಿಸಿದ ಕುದುರೆ, ಆನೆ ಮೊದಲಾದ ಅನೇಕ ವಾಹನಗಳನ್ನೇರಿ ಹೋಗಿ–೭೭. ದೇವಪರ್ವತದ ಕೊಳ್ಳಗಳಲ್ಲಿಯು ಸುಂದರವಾದ ಉದ್ಯಾನದಲ್ಲಿಯೂ, ಸ್ವಚ್ಛವಾದ ನೀರಿನ ಸ್ವಯಂಭೂರಮಣ ಸಮುದ್ರದಲ್ಲಿಯೂ, ಕಣ್ಮನಗಳಿಗೆ ಅಮೃತವನ್ನೂಡುವ ನಂದೀಶ್ವರ ದ್ವೀಪದ ಚೈತ್ಯಾಲಯಗಳಲ್ಲಿಯೂ ಪರಮಪವಿತ್ರವಾದ ಸಂಗೀತದ ಕ್ರೀಡೆಯನ್ನು ನೆರವೇರಿಸಿ ಲೀಲಾಲೋಲನಾದ ಶ್ರೀಧರ ದೇವನು ಮನದಣಿವಂತೆ ನಿರಂತರವಾಗಿ ಆನಂದವನ್ನು ಪಡೆಯುವನು. ವ॥ ಹೀಗೆ ತನ್ನ ಪುಣ್ಯಫಲದಿಂದ ಗಳಿಸಿದ ಅದ್ವಿತೀಯವಾದ, ಸಮೃದ್ಧವಾದ, ಅಪ್ರತಿಬದ್ಧವಾದ ಹಾಗು ತನ್ನ ಇಷ್ಟಾನುಸಾರಿಯಾದ ದೇವಲೋಕ ವೈಭವವನ್ನು ಅನುಭವಿಸುತ್ತ ಇರಲಾಗಿ, ಆತನ ಎರಡು ಸಾಗರೋಪಮ ಆಯುಷ್ಯ ಸವೆದು ಹೋಗಿ ಇನ್ನು ಆರು ತಿಂಗಳು ಮಾತ್ರ ಉಳಿಯಿತು. ಆಗ–೭೮. ಆತನು ಧರಿಸಿಕೊಂಡ ಹೂಮಾಲೆ ಹಸಿಯಾರಿ ಬಾಡತೊಡಗಿತು; ಆಗುಳಿಕೆ ಬರತೊಡಗಿದುವು; ದೇಹದ ಕಾಂತಿ ಮಸುಕಾಗುತ್ತಾ ಬಂದಿತು; ಒಂದು ಬಗೆಯ ಜಡತೆ ಮನಸ್ಸನ್ನು ಆವರಿಸಿತು. ಯಾವ

ಅಂತೆಯ್ದೆವರ್ಪ ಜವನ ಜವದಿನಾಜವಂಜವದಸಾರತೆಯನಱಿದಱುದಿಂಗಳುಮನಾತ್ಮತತ್ವಭಾವನೆಯೊಳಂ ಪುಣ್ಯಕಥಾಶ್ರವಣಸಂಭಾವನೆಯೊಳಂ ಜಿನಪೂಜಾಪ್ರಭಾವನೆಯೊಳಂ ಕಳಿಪಿ ಬಱಿಯಂ ಸೌಧರ್ಮೇಂದ್ರಮಂದಿರಾಭ್ಯರ್ಣದಕೃತಿಮಚೈತ್ಯಾಗಾರದೊಳ್

ಪಂಚಗುರು ಚರಣಸರಸಿರು ।
ಹಂ ಚಿತ್ತದೊಳಖಿಳಮಳಹರಂ ನಾಲಗೆಯೊಳ್ ॥
ಪಂಚಪದಂ ನೆಲಸಿರೆಯಿರೆ ।
ಪಂಚತೆಯಂ ನಿಷ್ಪ್ರಪಂಚನೆಯ್ದಿದನಮರಂ ॥ ೭೯

ಆ ಸಮಯದೊಳ್

ಘಟಿಲನೆ ಬಳಾಕೆಯಾಕೃತಿ ।
ಮಟಿಗಾಲದೊಳಿರದದೃಶ್ಯಮಪ್ಪಂದದಿನಿ ॥
ತ್ತುಟಿಯದೆ ಕಡೆಗಾಲದೊಳಳ ।
ವಟಿಯೆ ಸುರಂ ಮಾಯಮಾಯ್ತು ದಿವಿಜನ ದೇಹಂ ॥ ೮೦

ಅಂತಲ್ಲಿಂದಂ ತಳರ್ದು ಬಂದೀದ್ವಿತೀಯದ್ವೀಪದಯಾಮ್ಯದಿಶೆಯೊಳೆಸೆವಿಷುಕಾಧಾರಿಣೀಧರದ ಮೂಡಣ ಭರತದೊಳ್ ಉಪಹಿತಲೋಭವಶಜನಪರಿಪೂರ್ಣನಾನಾನಗರನಂದನವನನದೀರತ್ನನಿಕರಾಕರ ಸರಃಕೇದಾರಸಾರಸಂಪದ್ವಿಷಯಮಪ್ಪ ಅಳಕಾವಿಷಯಮೆಂಬ

ನಾದರೇನು, ಆಯುಷ್ಯ ಮುಗಿದಾಗ ಏನಾಗದೆ ಇದ್ದೀತು ? ವ॥ ಹಾಗೆ ಹತ್ತಿರಕ್ಕೆ ಬರುತ್ತಿರುವ ಮೃತ್ಯುವಿನ ವೇಗವನ್ನು ಕಂಡು, ಸಂಸಾರದ ನಿಸ್ಸಾರತೆಯನ್ನು ಅರಿತು, ಇನ್ನುಳಿದ ಆ ಆರು ತಿಂಗಳ ಆಯುಷ್ಯವನ್ನು ಆತ್ಮತತ್ವ ಚಿಂತನೆಯಲ್ಲಿಯೂ, ಪುಣ್ಯಕಥಾಶ್ರವಣದಲ್ಲಿಯೂ, ನವೀನವಾದ ಪೂಜಾಕಾರ್ಯದಲ್ಲಿಯೂ ಕಳೆದು, ಬಳಿಕ ಸೌಧರ್ಮೇಂದ್ರಭವನದ ಬಳಿಯಿದ್ದ ಅಕೃತ್ರಿಮ ಜೈನಚೈತ್ಯಾಲಯದಲ್ಲಿ–೭೯. ಪಂಚಗುರುಗಳ ಪಾದಕಮಲಗಳು ಚಿತ್ತದಲ್ಲಿಯೂ ಪಂಚಪರಮೇಷ್ಠಿಗಳ ಸ್ತುತಿ ನಾಲಗೆಯಲ್ಲಿಯೂ ನೆಲೆಸಿರಲಾಗಿ ಆ ದೇವನು ವೈರಾಗ್ಯದಿಂದ ಮರಣಹೊಂದಿದನು. ಆ ಸಮಯದಲ್ಲಿ–೮೦. ಮಳೆಗಾಲದಲ್ಲಿ ಹಂಸದ ರೂಪು ಬೇಗನೆ ಅದೃಶ್ಯವಾಗಿ ಹೋಗುವಂತೆ, ಅಂತ್ಯಕಾಲವೊದಗಿದೊಡನೆ ಆ ದಿವಿಜನ ಶರೀರವು ತಕ್ಷಣ ಮಾಯವಾಯಿತು. ವ॥ ಅಲ್ಲಿಂದ ಹೊರಟು ಆತನು ಭೂಮಿಗೆ ಬಂದನು. ಈ ದ್ವಿತೀಯ ದ್ವೀಪದ ದಕ್ಷಿಣದಿಕ್ಕಿನಲ್ಲಿ ಶೋಭಿಸುವ ಇಷುಕಾಪರ್ವತದ ಪೂರ್ವದ ಭರತದಲ್ಲಿ ಜನಭರಿತವಾದ ಅನೇಕ ನಗರಗಳೂ, ವನಗಳೂ, ರತ್ನಾಕರವಾದ ಸರೋವರಗಳೂ, ಹೊಲಗದ್ದೆಗಳೂ ಮೊದಲಾದ ಸಕಲ ಸಂಪತ್ ಸಮೃದ್ಧಿಯುಳ್ಳ

ದೇಶದೊಳೊಪ್ಪುಗುಂ ನಗರಿ ಕೋಸಳೆಯೆಂದದನಾಳ್ವನುಗ್ರಖ ।
ಡ್ಗಾಶನಿಪಾತಿತಾನ್ಯಮಹಿಭೃದ್ವ್ರಜನಪ್ಪಜಿತಂಜಯಂ ತದು ॥
ರ್ವೀಶನ ಯೋಷೆ ಸಂದಜಿತಸೇನೆ ಬಟೆಕ್ಕವರ್ಗಾಸುಧಾಶನಿ ।
ರ್ದೇಶಿತವೇಶ್ಮನಪ್ಪಜಿತಸೇನಸಮಾಹ್ವಯನಾದನಾತ್ಮಜಂ ॥ ೮೧

ಆತನನವದ್ಯರಾಜವಿದ್ಯಾಸಮುದಯವಿಶಾರದನುಂ, ಶಾರದಶಶಿಪ್ರಭಾವಿಶದಯಶೋದೀಪ್ತಿದಿಗ್ದಿಕ್ಚಕ್ರನುಂ ಚಕ್ರವರ್ತಿಲಕ್ಷಣೋಪಲಕ್ಷಿತಾಕ್ಷೂಣಶೋಭಾಸಂಗತಾಂಗಪ್ರತ್ಯಯನುಂ, ಅಂಗಪ್ರತ್ಯಂಗಸಂಭವಾಂಗಿಕಾದ್ಯಭಿನಯಚತುಷ್ಟಯಪ್ರಯುಕ್ತ ಶ್ರುತಕಳಾಪರಿಣತನುಂ, ಪರಿಣತಪ್ರವಾಳಪಾಟಳಿಮಲೀಲಾಧರನಿಜಾಧರಪಲ್ಲವನುಂ, ಪಲ್ಲವಪಾರಿಯಾತ್ರಪ್ರಭೃತಿನಾನಾದೇಶಯೋಷಿದ್ಗೀಯಮಾನಸೌಭಾಗ್ಯ ಗೀತನುಂ, ಗೀತವಾದ್ಯವಿದ್ಯಾವಿವೇಕವಿಜಿತಚತುರಾನನನುಂ, ಚತುರಾನನಸಂಸ್ಕಾರಸಂಯುತೋಪನ್ಯಾಸವಿತ್ರಾಸಿತಪರಮತನುಂ, ಪರಮತತ್ತ್ವಪರಿಚಿತಗುರುಜನಮನಃಪ್ರಹ್ಲಾದಜನಕನುಂ, ಜನಕಪ್ರತಿಷ್ಠಿತಪ್ರಾಜ್ಯಯೌವರಾಜ್ಯಪದವೀಸುಸ್ಥಿತನುಮಾಗಿ,

ಕುಳಿಶರಥಾಂಗಾಂಕಂ ಕರ ।
ತಳದೊಳ್ ಕರಮೆಸೆಯೆ ಲಸಿತವೈಭವಲಕ್ಷ್ಮೀ ॥
ನಿಳಯಂ ಯುವರಾಜಂ ಕ ।
ಣ್ಗೊಳಿಸಿದನಿಂದ್ರನೊಳುಪೇಂದ್ರನೊಳ್ ಸರಿವರುತುಂ ॥ ೮೨

ಮಣಿಮಯಮಂವಿಭೂಷಣಸಮುಚ್ಚಯಮಂ ಸಹಜಾತಮಂ ವಪುಃ ।
ಕಿಣಕರಮಂ ನಿರರ್ಥಮಮರ್ತ್ಯತೆಯೊಳ್ ಸಲೆ ಪೊತ್ತೆನೆಂಬುದೊಂ ॥

'ಅಳಕ ಎಂಬ ರಾಜ್ಯವುಂಟು ;-೮೧. ಆ ದೇಶದಲ್ಲಿ ಕೋಸಳೆಯೆಂಬ ಪಟ್ಟಣ ಕಂಗೊಳಿಸುವುದು; ತನ್ನ ಖಡ್ಗಬಲದಿಂದ ವೈರಿಗಳನ್ನೆಲ್ಲ ಮುರಿದುಹಾಕಿದ ಅಜಿತಂಜಯ ನೆಂಬವನು ಅದನ್ನು ಆಳುತ್ತಿರುವನು; ಆತನ ಹೆಂಡತಿ ಅಜಿತಸೇನೆ; ಸೌಧರ್ಮಕಲ್ಪದಿಂದ ಹೊರಟ ಆ ದೇವನು ಈ ದಂಪತಿಗಳಿಗೆ ಅಜಿತಸೇನನೆಂಬ ಮಗನಾಗಿ ಹುಟ್ಟಿದನು. ವ॥ ಆತನು ಶ್ರೇಷ್ಠವಾದ ರಾಜವಿದ್ಯೆಗಳೆಲ್ಲವುಗಳಲ್ಲಿಯೂ ನಿಷ್ಣಾತನಾದನು, ಶರತ್ಕಾಲದ ಬೆಳುದಿಂಗಳಂತೆ ಪರಿಶುಭ್ರವಾದ ತನ್ನ ಯಶಸ್ಸಿನಿಂದ ಸಮಸ್ತ ದಿಕ್ಕುಗಳನ್ನು ವ್ಯಾಪಿಸಿದನು; ಚಕ್ರವರ್ತಿಲಕ್ಷಣಗಳಿಂದ ಆತನ ದೇಹವು ಮನೋಹರವಾಗಿತ್ತು; ಆಂಗಿಕವೇ ಮೊದಲಾದ ಅಭಿನಯ ಚತುಷ್ಟಯ ಕಲೆಯಲ್ಲಿ ನಿಷ್ಣಾತನಾದ ಆತನಿಗೆ ಹವಳದಂತೆ ಕೆಂಪಾದ ತುಟಿಗಳಿದ್ದುವು; ಪಲ್ಲವ, ಪಾರಿಯಾತ್ರ ಮೊದಲಾದ ಅನೇಕ ದೇಶದ ಸ್ತ್ರೀಯರಿಂದ ಹಾಡಿಸಿಕೊಂಡು ಸಂತೋಷಪಡುವನು; ಗೀತ ಹಾಗು ವಾದ್ಯ ವಿದ್ಯೆಗಳಲ್ಲಿ ಮಿಗಿಲಾಗಿದ್ದನು; ಪರಮ ತತ್ವಗಳನ್ನು ತಿಳಿದು ಗುರುಹಿರಿಯರ ಮನಸ್ಸಿಗೆ ಸಂತೋಷವುಂಟುಮಾಡುತ್ತ, ತಂದೆಯಿಂದ ಯುವರಾಜಪದವಿಯನ್ನು ಪಡೆದುಕೊಂಡನು. ೮೨. ತನ್ನ ಅಂಗೈಗಳಲ್ಲಿ ವಜ್ರ ಹಾಗು ಚಕ್ರ ಚಿಹ್ನೆಗಳನ್ನು ಉಳ್ಳವನಾಗಿ, ವೈಭವಲಕ್ಷ್ಮಿಗೆ ಒಡೆಯನಾಗಿ ಆ ಯುವರಾಜನು ಇಂದ್ರನಿಗೂ ಉಪೇಂದ್ರನಿಗೂ, ಸಮನಾದನು. ೮೩. ಹುಟ್ಟಿನೊಡನೆ ಮೈಮೇಲೆ ನೆಲಸಿದ್ದ ರತ್ನಮಯವಾದ ಆಭರಣ

ದೆಣಿಕೆ ಮನಕ್ಕೆ ವಂದುದೆನೆ ಮರ್ತ್ಯತೆಯೊಳ್ ತಳೆದಂ ಸಹಾರ್ಥಮಂ।
ಗುಣಮಯಮಂ ವಿಭೂಷಣಕದಂಬಮನಂಗಸುಖಾವಳಂಬಮಂ॥ ೮೩

ದಿವಿಜತೆಯ ಮೂರ್ತಿ ಮೆಯ್ಯಿ।
ಕ್ಕುವುದುಂ ತಾನೆ ಗಡ ಮಾಣ್ದುದದು ಚೆಲ್ವಲ್ತೆಂ॥
ದವನ ಮನುಜತೆಯ ತನು ನೋ।
ಟ್ಟವರೊಳ್ ಮಾಣಿಸಿದುದಾದಮೆಮೆಯಿಕ್ಕುವುದಂ॥ ೮೪

ಎನಿಸಿ ಸಕಲಸೌಂದರ್ಯಸಾರಸಂಪನ್ನತೆಯನಪ್ಪುಕೆಯ್ದು,

ಸಕಳಾರ್ಥಿವ್ರಾತಚೇತೋಮುದಮನಮಲರೈಧಾರೆಯಿಂ ವೈರಿಭೂಪಾ।
ಳಕಜಾಳಸ್ವಾಂತಚಿಂತಾಭರಮನಸಿಲತಾಧಾರೆಯಿಂ ಕಿಲ್ಬಿಷವ್ರಾ॥
ತಕಳಂಕೋಚ್ಛಿತ್ತಿಯಂ ಸಂತತಜಿನಸವನೋದ್ಧೃತ್ತಯೋಧಾರೆಯಿಂಮಾ।
ಡಿ ಕರಂ ಪ್ರಖ್ಯಾತಿವೆತ್ತಂ ನೃಪತನಯನನೇಕಾಂತವಿದ್ಯಾವಿನೋದಂ॥ ೮೫

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿ ಪದಪದ್ಮನಿಧಾನದೀಪವರ್ತಿ
ಶ್ರೀಮದಗ್ಗಳದೇವ
ವಿರಚಿತಮಪ್ಪ
ಚಂದ್ರಪ್ರಭ ಪುರಾಣದೊಳ್
ಶ್ರೀಧರಾಮರ ಸ್ವರ್ಗಾವತರಣವರ್ಣನಂ
ಚತುರ್ಥಾಶ್ವಾಸಂ

ಗಳನ್ನು ಮೈ ಜಡ್ಡುಗಟ್ಟುವಂತೆ ದೇವಜನ್ಮದಲ್ಲಿ ಸುಮ್ಮನೆ ನಾನು ಹೊತ್ತೆನಲ್ಲ_ ಎಂಬ ಯೋಚನೆ ಬಂದಿತೋ ಏನೋ ಎಂಬಂತೆ ಈ ಮನುಷ್ಯ ಜನ್ಮದಲ್ಲಿ ದೇಹಕ್ಕೆ ಆಪ್ಯಾಯಮಾನವಾದ "ಗುಣಮಯ" (೧. ಉತ್ತಮವಾದ. ೨. ನೂಲಿನಿಂದ ಪವಣಿಸಿದ) ಅನೇಕ ಆಭರಣಗಳನ್ನು ಆತನು ಧರಿಸಿಕೊಂಡನು. ೮೪. ತನಗೆ ಹಿಂದೆ ಒದಗಿದ್ದ ದೇವ ಶರೀರವು ಹೊರಟು ಹೋಯಿತು. ಅದು ಚೆಲುವಲ್ಲವೆಂದು ಆತನ ಮನುಷ್ಯದೇಹವು ನೋಡುವವರ ಕಣ್ಣಿಗೆ ಎವೆಯಿಕ್ಕುವುದನ್ನೆ ಮರೆಯಿಸಿತು. [ದೇವನಾಗಿದ್ದಾಗ ಎವೆಯಿಕ್ಕದೆ ತಾನು ಇತರರನ್ನು ನೋಡುತ್ತಿದ್ದನು. ಈಗ ಇತರರೆ ಎವೆಯಿಕ್ಕದೆ ತನ್ನನ್ನು ನೋಡುವಂತಾಯಿತು.] ವ॥ ಹೀಗೆ ಸೌಂದರ್ಯದ ಸಾರಸರ್ವಸ್ವವನ್ನು ಅಳವಡಿಸಿಕೊಂಡು–೮೫. ಚೊಕ್ಕ ಚಿನ್ನವನ್ನು ಧಾರೆಯೆರೆದು ಕೊಡುತ್ತ ಯಾಚಕ ಸಮೂಹಕ್ಕೆಲ್ಲ ಸಂತೋಷವನ್ನೂ, ತನ್ನ ಖಡ್ಗದಧಾರೆ (=ಅಲಗು) ಯಿಂದ ಶತ್ರುರಾಜರ ಮನಸ್ಸಿಗೆ ಅಧಿಕಚಿಂತೆಯನ್ನೂ, ನಿರಂತರವಾದ ಜಿನಾಭಿಷೇಕ ಧಾರೆಯಿಂದ ಪಾಪಕರ್ಮಕ್ಷಯವನ್ನೂ ಮಾಡಿ, ಅನೇಕ ವಿದ್ಯೆಗಳಲ್ಲಿ ವಿನೋದಪಡುತ್ತ ಆ ರಾಜಕುಮಾರನು ತುಂಬ ಪ್ರಸಿದ್ಧಿಯನ್ನು ಗಳಿಸಿದನು.

**ನಾಲ್ಕನೆಯ ಆಶ್ವಾಸ ಮುಗಿಯಿತು.**

# ಪಂಚಮಾಶ್ವಾಸಂ

ಶ್ರೀಜನ್ಮನಿಳಯನಖಿಲಮ ।
ಹೀಜೀವನಮೂರ್ತಿ ವಾಹಿನೀಪ್ರಿಯನೇಂ ರಾ ॥
ರಾಜಿಸಿದನೊ ಶರನಿಧಿಯೆನೆ ।
ರಾಜಸುತಂ ಜೈನಜನಮನೋಹರಚರಿತಂ ॥ ೧

ತನ್ನಯ ತನಯನನಮಳಕ ।
ಳೋನ್ನತನಂ ನೋಡಿ ವಾರ್ಧಿ ಪೆರ್ಚುವ ತೆಱದಿಂ ॥
ತನ್ನಯ ತನಯನನಮಳಕ ।
ಳೋನ್ನತನಂ ನೋಡಿ ಪೆರ್ಚುವಂ ನೃಪತಿಲಕಂ ॥ ೨

ಅಂತನೂನಪ್ರಮೋದಾಲಿಂಗಿತಾಂತರಂಗನಾಗಿರ್ದೊಂದು ದಿವಸಮಜಿತಂಜಯಮಹಾರಾಜಂ ಯುವರಾಜಂಬೆರಸು ನಿಜಭುಜಾಕ್ರಾಂತಪ್ರತ್ಯಂತರಾಜಸಮಾಜಂಬೆರಸು ಪ್ರೇಷಿತಾಶೇಷಪ್ರಕೃತಿಸಮೇತ ಸಚಿವಸಂದೋಹ ಸಂದರ್ಶನಾರ್ಥಂ ಸರ್ವಾವಸರಸಭಾಮಂಟಪದೊಳಂತಃಪುರಾಂಗನಾಜನಸಂಗತನಖಿಳ ಪ್ರಧಾನಪರಿವಾರಪರಿಕ್ಕೃತನುಮಾಗಿರೆ

## ಪಂಚಮಾಶ್ವಾಸಂ

೧. "ಶ್ರೀ ಜನ್ಮನಿಳಯ"ನೂ (೧. ಐಶ್ವರ್ಯಕ್ಕೆ ತವರುನೆಲೆ. ೨. ಲಕ್ಷ್ಮೀದೇವಿ ಹುಟ್ಟಿದ ಮನೆ) "ಅಖಿಲಮಹೀ ಜೀವನ ಮೂರ್ತಿ" ಯೂ (೧. ಸಮಸ್ತ ಭೂಮಂಡಲದ ಜನರ ಸುಖಜೀವನಕ್ಕೆ ಕಾರಣನಾದವನು. ೨. ಸಮಸ್ತ ಭೂಮಿಗೆ ನೀರನ್ನು ಒದಗಿಸುವುದು), "ವಾಹಿನೀಪ್ರಿಯ"ನೂ (೧. ಸೈನ್ಯದ ಮೇಲೆ ಪ್ರೇಮವುಳ್ಳವನು. ೨. ನದಿಗಳಿಗೆ ಒಡೆಯ) "ರಾಜಸುತ"ನೂ (೧. ರಾಜಕುಮಾರ. ೨. ಚಂದ್ರನನ್ನು ಮಗನಾಗಿ ಉಳ್ಳದು) ಆಗಿ ಜೈನ ಜನಪ್ರಿಯನಾದ ಆತನು ಸಮುದ್ರದಂತೆ ಶೋಭಿಸಿದನು. ೨. ಪರಿಶುದ್ಧವಾದ ಹದಿನಾರು ಕಳೆಗಳಿಂದ ಪೂರ್ಣನಾದ ಚಂದ್ರನನ್ನು ನೋಡಿ ಅವನ ತಂದೆಯಾದ ಸಮುದ್ರವು ಉಬ್ಬುವಂತೆ, ಶುದ್ಧವಾದ ಸಮಸ್ತಕಲಾವಿಶಾರದನಾಗಿ ಶೋಭಿಸುವ ತನ್ನ ಮಗನನ್ನು ನೋಡಿ ರಾಜೇಂದ್ರನು ಹಿಗ್ಗುವನು. ವ॥ ಹೀಗೆ ಸಂತೋಷದಿಂದ ಮೈತುಂಬಿರುತ್ತ ಒಂದು ದಿವಸ ಅಜಿತಂಜಯ ಮಹಾರಾಜನು, ಯುವರಾಜಸಹಿತನಾಗಿ ದರ್ಬಾರಿನ ಮಂಟಪದಲ್ಲಿ ಕುಳಿತಿದ್ದನು; ಆತನ ಭುಜಬಲದಿಂದ ಸೋತು ಶರಣಾದ ರಾಜರೂ, ಅಧಿಕಾರಿಗಳೂ, ಸಚಿವರೂ, ಅಂತಃಪುರದ ಪ್ರಧಾನೆಯರೂ, ಮುಖ್ಯಪರಿವಾರದವರೂ

ಸಿರಿಯಂ ಮಂದಾರಮಮಂ ಚಂದ್ರನನಮಲಮಲಮಣಿಶ್ರೇಣಿಯಂ ಮಾಣವಂತಃ ॥
ಕರಿಸಿರ್ದಾಪೂರ್ಣದುಗ್ಧಾರ್ಣವದೊರೆಗೆಣೆವಂದತ್ತು ಮಾದೇವಿಯಂ ಭೂ
ವರನಂ ತತ್ಪುತ್ರನಂ ಸೇವಕಸಕಲನೃಪಾನೀಕಮಮಂ ಕೂಡೆ ಗರ್ಭೀ ।
ಕರಿಸಿರ್ದುದ್ದಾಮಸೌಧದ್ಯುತಿಭರಿತಹರಿದ್ವ್ಯೂಹಮಾಸ್ಥಾನಗೇಹಂ ॥ ೩

ಅಂತೊಡ್ಡೋಲಗಂಗೊಟ್ಟಿರ್ಪಿನೆಗಂ,

ಭರದಿಂದಂಬರವೀಥಿಯೊಳ್ ನಿಜವಿನೋದಾಪಾದನೋದ್ಯೋಗದಿಂ ।
ಬರುತುಂ ಕಣ್ಬೊಲನಾಗೆ ಚಂಡರುಚಿಯೆಂಬೊಂ ದೈತ್ಯನತ್ಯಂತದು ॥
ರ್ಧರಜನ್ಮಾಂತರವೈರದಾರುಣವನಂ ಭೂಪಾಂತಿಕಾಸೀನನಾ ।
ಗಿರೆ ಕಂಡಂ ಶನಿ ಕಾಣ್ಬವೊಲ್ ಕುವರನಂ ವಿಸ್ಫಾರತಾರೇಕ್ಷಣಂ ॥ ೪

ಕಾಣಲೊಡಮಕ್ಷಿಶ್ರುತಿಯಂ ಕಂಡ ತಾರ್ಕ್ಷ್ಯನಂತೆ ರೂಕ್ಷಭಾವಮನಪ್ಪುಕೆಯ್ದನಿತಱಿಳಂ ನಿಲ್ಲದೆ

ಕುಮುಕುಳಿ ದಾನವಂ ನಿಜವಿಮೋಹನವಿದ್ಯದಭೇದ್ಯಶಕ್ತಿಯಿಂ ।
ದೊದವಿಸೆ ಮೋಹಮಮಂ ಹೃದಯದೊಳ್ ಸಭೆಗಾಸಭೆ ತಾಂ ಬಟೆಕ್ಕ ಚಿ ॥
ತ್ರದ ಸಭೆಯಂತೆ ನೋಡುತಿರೆ ಬಂದು ಕುಮಾರನನೆತ್ತಿಕೊಂಡು ಮಾ ।
ಣದೆ ಗಗನಕ್ಕೆ ಮತ್ತೊಗೆದನುರ್ವಿಗೆ ಬಿಟ್ಟ ಸಿಡಿಲ್ ಸಿಡಿಲ್ವವೊಲ್ ॥ ೫

ಅಂತು ಭಾನುವಂ ಸ್ವರ್ಭಾನು ಪಿಡಿದುಯ್ವಂತೆ ಗಗನಮಾರ್ಗದಿನುಯ್ವನ್ನೆಗಮಿತ್ತಲ್

ಅವನ ಸುತ್ತಲೂ ನೆರೆದಿದ್ದರು. ಆಗ – ೩. ಮಹಾರಾಣಿಯನ್ನೂ, ಮಹಾರಾಜನನ್ನೂ, ಆತನ ಮಗನನ್ನೂ ಸೇವೆ ಮಾಡುತ್ತಿರುವ ಸಮಸ್ತ ರಾಜ ಸಮೂಹವನ್ನೂ ಒಳಗೊಂಡು ಉನ್ನತವಾದ ಸೌಧದ ಪ್ರಭೆಯಿಂದ ಲಕಲಕಿಸುತ್ತಿರುವ ಆ ಓಲಗಶಾಲೆಯು ಲಕ್ಷ್ಮಿಯನ್ನೂ ಮಂದಾರವನ್ನೂ ಚಂದ್ರನನ್ನೂ, ನಿರ್ಮಲವಾದ ರತ್ನ ಸಮೂಹವನ್ನೂ ಒಳಗಿಟ್ಟುಕೊಂಡ ಪೂರ್ಣ ಕ್ಷೀರಸಮುದ್ರಕ್ಕೆ ಸರಿಸಮನಾಗಿತ್ತು. ಹೀಗೆ ಒಡ್ಡೋಲಗವನ್ನು ನಡೆಸಿರುವ ಕಾಲದಲ್ಲಿ– ೪. ವಿನೋದಾರ್ಥವಾಗಿ ಆಕಾಶದಲ್ಲಿ ರಭಸದಿಂದ ಸಾಗುತ್ತಿರುವ ಚಂಡರುಚಿಯೆಂಬ ದೈತ್ಯನೊಬ್ಬನು ಕೆಳಗೆ ಕಣ್ಣಾಡಿಸಿದಾಗ ಮಹಾರಾಜನ ಬಳಿಯಲ್ಲಿ ಕುಳಿತ ರಾಜಕುಮಾರನು ಅವನ ಕಣ್ಣಿಗೆ ಬಿದ್ದನು. ಪೂರ್ವಜನ್ಮದಿಂದುಂಟಾದ ವೈರಭಾವದಿಂದ ಉರಿದೆದ್ದ ಆ ದೈತ್ಯನು ಕಿಡಿಯುಗುಳುವ ಕಣ್ಣಿಂದೆ ಶನಿ ನೋಡುವಂತೆ ಆತನನ್ನು ನೋಡಿದನು. ವ॥ ಹಾಗೆ ನೋಡಿದೊಡನೆ ಹಾವನ್ನು ಕಂಡ ಹದ್ದಿನಂತೆ ಕ್ರೋಧವಶನಾಗಿ, ತಡೆಯದೆ– ೫. ದ್ವೇಷಿಯಾದ ಆ ದೈತ್ಯನು ತನ್ನ ಮಾಯಾಶಕ್ತಿಯಿಂದ ಸಭೆಯಲ್ಲಿದ್ದವರೆಲ್ಲರ ಮನಸ್ಸಿಗೂ ಮೋಹವನ್ನು ಕವಿಸಿದನು : ಆಗ ಪಟದಲ್ಲಿ ಬರೆದ ಚಿತ್ರಗಳಂತೆ ಸ್ತಬ್ಧರಾಗಿ ಅವರೆಲ್ಲ ನೋಡುತ್ತಿರುವಂತೆಯೆ ಭೂಮಿಗೆ ಬಂದು ಅಪ್ಪಳಿಸುವ ಸಿಡಿಲಿನಂತೆ ಎರಗಿ ಬಂದು ರಾಜಕುಮಾರನನ್ನು ಎತ್ತಿಕೊಂಡು ಆಕಾಶಕ್ಕೆ ನೆಗೆದನು. ವ॥ ಸೂರ್ಯನನ್ನು ಕೇತು ಹಿಡಿದುಕೊಳ್ಳುವಂತೆ ಕುಮಾರನನ್ನು ಹಿಡಿದುಕೊಂಡು ಆತನು ಆಕಾಶ

ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇ ।
ತನವಡೆದಿಂದ್ರಜಾಲದ ವಿಮೋಹಮೊ ಮೇಣದು ಮೂರ್ಛೆಯೊಂದು ಸಂ ॥
ಜನನಮೊ ನಿದ್ರೆಯೇಟ್ಟಿರಮೊ ಮುನ್ನಜಿವಂತುಟುಮಲ್ಲದೆಂದು ತ ।
ಜ್ಞನಮನಿತುಂ ಮನಂಬಸುತುಮಿರ್ದುದು ನಿಟ್ಟಿಸಲಾರದೇನುಮಂ ॥ ೬

ಆಗಳರಸಂ ವಿಸ್ಮಯರಸಾಕುಳಮನಸ್ತಾಮರಸನಾಗಿ ನೋಟ್ಟಿನ್ನೆಗಂ ;

ಇನನುದಯಿಸಿ ಪೋದುದಯಾ ।
ವನಿಧರಚೂಳಿಕೆವೊಲಿರ್ದುದಂ ಕಂಡೆರ್ದೆ ಪ ॥
ವ್ವನೆ ಪಾಱಿದತ್ತು ನಿಜನಂ ।
ದನನಿಲ್ಲದ ಬಲದ ಕೆಲದ ಹೇಮಾಸನಮಂ ॥ ೭

ಅನಂತರಂ

ದನುಜಾಮರಖಚರರೊಳಾ ।
ವನಾನುಮೊರ್ವಂ ವಿಮೋಹಮಂ ಪುಟ್ಟಿಸಿ ಸಂ ॥
ಜನಿತಭವಬದ್ಧರೋಷಂ ।
ತನಯನನೆಟಿಕಿದುಯ್ದನೆಂದು ವಿಹ್ವಳನಾದಂ ॥ ೮

ಆಗಲೊಡಂ

ಕ್ಷಿತಿಪತಿಯ ಧೈರ್ಯಗುಣಪ ।
ರ್ವತಮಂ ತಱಗೆಲೆಗಳೊಟ್ಟಿಲಂ ತೂಳ್ದುವವೋಲ್ ॥
ಅತಿವೇಗದೆ ಪಾಱಿಸಿದುದು ।
ಸುತವಿರಹಪ್ರಳಯಪರುಷಪವನಾಪಾತಂ ॥ ೯

ಮಾರ್ಗವಾಗಿ ಒಯ್ಯಲಾಗಿ, ಇತ್ತ– ೬. ಕೆಲ ಸಮಯದ ಮೇಲೆ ದೈತ್ಯನು ಸಭೆಗೆ ಕವಿಸಿದ ಮಾಯೆ ಹಿಂಗಿತು ; "ಇದೇನು ನಮಗೆ ಬಡಿದಿತ್ತು? ಇಂದ್ರಜಾಲದ ಮಂಕೊ, ಮೂರ್ಛಾ ವಿಕಾರವೊ, ನಿದ್ದೆಯೆ ಬಂದಿತ್ತೊ, –ಹೀಗೆ ಎಂದೂ ಹಿಂದೆ ಆಗಿರಲಿಲ್ಲವಲ್ಲ?" ಎಂದು ಸಭೆ ಏನನ್ನೂ ಕಾಣದೆ ದಿಗ್ಭ್ರಮೆಗೊಂಡಿತು. ವ॥ ಆಗ ಅರಸನು ತುಂಬ ಬೆರಗಾಗಿ ನೋಡುತ್ತಿರಲು– ೭. ಸೂರ್ಯನು ಹುಟ್ಟಿ, ಬಿಟ್ಟು ಹೋದ ಉದಯಾಚಲದ ಶಿಖರದಂತೆ, ತನ್ನ ಪಕ್ಕದಲ್ಲಿ ಕುಮಾರನು ಕುಳಿತಿದ್ದ ಚಿನ್ನದ ಪೀಠವು ಬರಿದಾಗಿರುವುದನ್ನು ಕಂಡು ಅರಸನ ಎದೆ ಹೌಹಾರಿತು. ಆ ಬಳಿಕ – ೮. ದೈತ್ಯನೊ, ದೇವನೊ, ಖೇಚರನೊ ಇವರಲ್ಲಿ ಯಾವನೊ ಒಬ್ಬನು ನಮ್ಮೆಲ್ಲರಿಗೂ ಮಾಯೆಯನ್ನು ಕವಿಸಿ ಪೂರ್ವಜನ್ಮವೈರದಿಂದ ಕ್ರೋಧಗೊಂಡು ನನ್ನ ಮಗನನ್ನು ಎತ್ತಿಕೊಂಡು ಹೋಗಿರಬೇಕು ಎಂದು ಬಗೆದು ತಳಮಳಗೊಂಡನು. ಹಾಗಾಗಲಾಗಿ– ೯. ಅರಸನ ಧೈರ್ಯವೆಂಬ ಪರ್ವತವನ್ನು ಅದೊಂದು ಒಣಗಿ ದೆಲೆಗಳ ರಾಶಿಯೆಂಬಂತೆ, ಪುತ್ರವಿರಹ ಬಿರುಗಾಳಿ ಹೊಡೆದು ಹಾರಿಸಿಬಿಟ್ಟಿತು.

ಅಂತು ವಿಗತಪುರುಷಾಕಾರಂ ಭಾಗ್ಯಾನರ್ಥವಜ್ರಪಾತಸಂತಪ್ಯಮಾನ ಮಾನಸನುಂ ಅವಿರಳಗಳ ದಶ್ರುಬಿಂದುಸಂದೋಹಮಿಶ್ರಿತಶ್ಮಶ್ರುರೇಖನುಂ ಅನ್ಯೂನಮನ್ಯೂದ್ಗತೋಚ್ಛೂನಕಂಠನಾಳಸಂಕಟ ಪ್ರಕಟಿತನಿರ್ಯನ್ನಿಶ್ವಾಸನುಮಾಗಿ

ಮಾಯ್ದ ವಿಧಾತ್ರನೆನ್ನಣುಗಿನಗ್ರತನೂಜನನಿಂತಗಲ್ಚಿ ಕೊಂ।
ಡುಯ್ದನಪಾರಶೋಕರಸಪೂರದೊಳೀಸಭೆಯಂ ನಿರಾಕುಳಂ॥
ತೊಯ್ದನಡುರ್ತುಗುರ್ವಿದನದಲ್ತೆರ್ದೆ ನಿಚ್ಚನರಲ್ಚೆ ತನ್ನೊಳಂ।
ಪೊಯ್ದನಿದರ್ಕೆಕೃತ್ಯವೆನಗೇನೆನುತುಂ ತಳೆದು ಪ್ರಳಾಪಮಂ॥ ೧೦

ಬಳೆಯಿಸೆ ಬಾಸುಳಂ ಬಸಿಱಿಕೊಳ್ಳೆದೆ ಕರಾಂಗುಲಿಗಳ್ ಕಪೋಲದೊಳ್।
ಬಳೆಯಿಸೆ ಬಾನಲಂ ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ।
ಬಳೆಯಿಸೆ ಬಾಯ ಬತ್ತುಗೆಯನಿಂತೆರ್ದೆಗೆಟ್ಟಳುತುಂ ಮೃಣಾಳಕೋ।
ಮಳತನು ಬಿಟ್ಟಿಳಂದಜಿತಸೇನೆ ನೃಪಾಲಪದಾಬ್ಜಮೂಲದೊಳ್॥ ೧೧

ಅದಂ ಕಾಣಲೊಡಂ ದ್ವಿಗುಣೀಭೂತಶೋಕೋದ್ರೇಕನಾಗಿ

ತ್ವಜ್ಜನನಿಯ ಹಾರಮನಾಂ।
ತುಜ್ಜಳಿಪ ಶಿರೋಧಿ ಹಾರವಮನನವರತಂ॥
ಕಜ್ಜಳಮಂ ತಳೆವಕ್ಷಿ ಗ।
ಳಜ್ಜಳಮಂ ತಾಳ್ದೆ ತನಯ ನೀಂ ಸೈರಿಪುದೇ॥ ೧೨

ವ॥ ಹೀಗೆ ಪೌರುಷಹೀನನಾಗಿ, ದುರ್ಭಾಗ್ಯದಿಂದ ಬಂದೊದಗಿದ ಅನಿಷ್ಟವೆಂಬ ಸಿಡಿಲ ಹೊಡೆತಕ್ಕೆ ಆತನು ಜರ್ಝರಿತನಾದನು; ಎಡೆಬಿಡದೆ ಸುರಿಯುವ ಕಂಬನಿಗಳಿಂದ ಮುಖ ರೋಮಗಳೆಲ್ಲ ಒದ್ದೆಯಾದುವು; ಅತ್ಯಧಿಕವಾದ ದುಃಖೋದ್ವೇಗದಿಂದ ಕೊರಳ ಸೆರೆ ಬಿಗಿದುವು; ಒಳಗಿನ ಸಂಕಟವನ್ನು ಪ್ರಕಟಿಸುವಂತೆ ನಿಟ್ಟುಸಿರು ಹೊಮ್ಮಿತು. ೧೦. "ನಿಷ್ಕರುಣಿಯಾದ ವಿಧಾತನು ನನ್ನ ಮುದ್ದಿನ ಹಿರಿಮಗನನ್ನು ಹೀಗೆ ನನ್ನಿಂದ ಅಗಲಿಸಿ ಕಿತ್ತುಕೊಂಡು ಹೋದನು; ದುರ್ಧರವಾದ ಶೋಕಸಾಗರದಲ್ಲಿ ಈ ಸಭೆಯನ್ನು ಮುಳುಗಿಸಿದನು; ತನ್ನ ಮನವನ್ನು ನಿತ್ಯವೂ ಅರಳಿಸಲೆಂದು ನನ್ನ ಮಗನನ್ನು ತನ್ನ ಒಳಗೆ ಇಟ್ಟುಕೊಂಡನು. ಇದಕ್ಕೆ ನಾನಿನ್ನೇನು ಮಾಡಲಿ?" ಎಂದು ರಾಜನು ಪ್ರಲಾಪಿಸಿದನು. [ಮೂರನೆಯ ಚರಣದಲ್ಲಿ ಕ್ಲೇಶವಿದೆ.] ೧೧. ಬಾಸುಂಡೆಯೇಳುವಂತೆ ತನ್ನ ಕೈಗಳಿಂದ ಹೊಟ್ಟೆಯನ್ನು ಬಡಿದುಕೊಳ್ಳುತ್ತ, ಕೆನ್ನೆ ಬಾಡುವಂತೆ ಕಣ್ಣೀರು ಸುರಿಸುತ್ತ, ಗಂಟಲೊಣಗುವಂತೆ ಹಾಹಾಕಾರ ಮಾಡುತ್ತ, ಧೈರ್ಯ ಕಳೆದುಕೊಂಡು ಅಳುತ್ತ, ತಾವರೆನಾಳದಂತೆ ಕೋಮಲೆಯಾದ ಅಜಿತಸೇನೆ ಅರಸನ ಪಾದಗಳ ಬಳಿಗೆ ಬಿದ್ದಳು. ವ॥ ಅದನ್ನು ಕಂಡು ಅರಸನಿಗೆ ಮೊದಲೆ ಇದ್ದ ಶೋಕ ಈಗ ಇಮ್ಮಡಿಯಾಯಿತು. (ಆಗ ಆತನು ಉದ್ವೇಗದಿಂದ ಈ ರೀತಿಯಾಗಿ ಪ್ರಲಾಪಿಸಿದನು)– ೧೨. ಮುತ್ತಿನ ಹಾರವನ್ನು ಧರಿಸಿ ಶೋಭಿಸುವ ನಿನ್ನ ತಾಯಿಯ ಕೊರಳು ಈಗ ಹಾಹಾಕಾರವನ್ನು ಎಡಬಿಡದೆ ಧರಿಸಿದೆ; ಕಾಡಿಗೆಯನ್ನು

ಸುತ ನಿನ್ನ ಚಂದ್ರವದನ ।
ವ್ಯತಿರಿಕ್ತತೆಯಿಂ ಸಭಾನಭೋವಳಯಂ ಸಂ ।
ವೃತವಾಯ್ತು ತಮದಿನದು ಸ ।
ಮ್ಮತಮೊಸರ್ದಪುದೇಕೆ ನಯನಶಶಿಕಾಂತಂಗಳ್ ॥ ೧೩

ಘನಶೋಕಘನಾಗಮಜಳ ।
ಜನಿತೋತ್ಕರ್ಷಮನನೂನಬಾಂಧವಜನಿತಾ ॥
ಶ್ರುನದೀಪೂರಮನುಡುಗಿಪು ।
ದಿನತೇಜ ವಸಂತದಂತೆ ಬಂದೀಕ್ಷಣದೊಳ್ ॥ ೧೪

ಇರದಧಿಕಭ್ರಾಂತತೆಯಂ ।
ಧರಿಯಿಸಿ ಕಡುಗಂದಿ ಜಿನುಗುವಾಱಡಿಯಾದಂ ॥
ತಿರೆ ತೋರ್ಪೀಪರಿಜನಮಂ ।
ಹರಿಸದೊಳೊಡಗೂಡಿ ತೋಱು ಚರಣಾಂಬುಜಮಂ ॥ ೧೫

ಎನಗೆ ಸುತ ಸುಜನವತ್ಸಲ ।
ನೆನವಿಗೆ ಗೋಚರನೆಯಾಗಿ ಪೋಗದೆ ಮತ್ತೆಂ ॥
ದಿನ ತೆಱದೆ ನಯನಗೋಚರ ।
ನೆನಿಪ್ಪುದಂ ಪೇಱ ಪುಣ್ಯತರವಾಸರಮಂ ॥ ೧೬

ಎಂದು ಕಾಣದೆ

ಆರ ಮೃದೂಕ್ತಿಯಂ ಬಯಸಿ ಕೇಳ್ದು ತನೂಜ ಮದೀಯಕರ್ಣಮೊಳ್ ।
ಪೂರಿಪೆನಿಂ ರಸಾಯನಮನಾರ ಮುಖೇಂದುವನೊಲ್ದು ನೋಡಿ ವಿ ॥

ಧರಿಸಬೇಕಾದ ಕಣ್ಣುಗಳು ಕಣ್ಣೀರನ್ನು ತುಂಬಿಕೊಂಡಿವೆ. ಮಗನೆ, ಇದನ್ನು ನೀನು ಸಹಿಸುವೆಯಾ? ೧೩. ಮಗನೆ, ನಿನ್ನ ಮುಖವೆಂಬ ಚಂದ್ರ ಅಗಲಿ ಹೋದುದರಿಂದ ಸಭೆಯೆಂಬ ಆಕಾಶಮಂಡಲವು ಕತ್ತಲೆಗವಿದಿದೆ. ಹಾಗಾಗುವುದು ಸಹಜವೇ. ಆದರೆ ಕಣ್ಣುಗಳೆಂಬ ಚಂದ್ರಕಾಂತಗಳು ನೀರೊಸರುವುದು ಏಕೆ ? ೧೪. ಮಳೆಗಾಲದ ಧಾರಾಪಾತದಿಂದ ಉಕ್ಕಿ ಹರಿವ ನದಿಗಳ ಮಹಾಪೂರವನ್ನು ವಸಂತಮಾಸವು ಬಂದು ಉಡುಗಿಸುವಂತೆ, ಬಂಧುಜನಗಳ ಈ ಕಣ್ಣೀರ ಹೊನಲನ್ನು ಸೂರ್ಯನಂತೆ ತೇಜವುಳ್ಳ ನೀನು ಬಂದು ಈಗಲೆ ತಗ್ಗಿಸು. ೧೫. ಅತ್ಯಧಿಕವಾದ ದಿಗ್ಭ್ರಮೆಯಿಂದ ಮೊರೆಯುತ್ತಿರುವ ದುಂಬಿಗಳಂತಿರುವ ಈ ಪರಿವಾರ ಜನಕ್ಕೆ ನಿನ್ನ ಪಾದಕಮಲಗಳನ್ನು ತೋರಿ ಸಂತೋಷಪಡಿಸು. ೧೬. ಸಜ್ಜನ ಪ್ರಿಯನಾದ ಮಗನೆ, ನೀನಿನ್ನು ನನಗೆ ಕೇವಲ ಸ್ಮೃತಿಗೋಚರನಾಗಿ ಉಳಿಯದೆ, ಪ್ರತ್ಯಕ್ಷವಾಗಿ ಕಣ್ಣಿಗೂ ಗೋಚರವಾಗುವ ಪುಣ್ಯದಿನ ಯಾವುದು ಹೇಳು? ಹೀಗೆಂದು, ಕಾಣದೆ– ೧೭. ಯಾರ ಮೆಲುಮಾತುಗಳನ್ನು ಕೇಳಿ ಇನ್ನು ನನ್ನ ಕಿವಿಗಳಿಗೆ ಸವಿಯುಣಿಸಲಿ? ಯಾರ ಮುಖಚಂದ್ರನನ್ನು ನೋಡಿ ನನ್ನ ಕಣ್ಣುಗಳಿಗೆ ಅಮೃತರಸವನ್ನು

ಸ್ತಾರಿಪೆನೀಮದಕ್ಷಿಗೆ ಸುಧಾರಸಪೂರಮನೆಂದು ತಾರಹಾ ।
ರಾರವದಿಂದವಳ್ ತಳವಗಲ್ದಳೊಱಲ್ದನಿಳಾತಳಾಧಿಪಂ ॥ ೧೭

ಅನ್ನೆಗಂ

ಶೋಕಾಗ್ನಿಭರದಿನರಸಂ ।
ವ್ಯಾಕುಳನಾದಪ್ಪನಿನಿತಗಲ್ಚುವೆನಾನೆಂ ।
ಬೀಕರುಣದಿಂದೆ ಬಂದವೊ ।
ಲಾಕಳಿಸಿತ್ತಂದತುಚ್ಛಮೂರ್ಚ್ಛಾವೇಗಂ ॥ ೧೮

ಉಸಿರೆಲರೊಯ್ಯನೊಯ್ಯನೊಳಸಾರ್ದುಡುಗುತ್ತಿರೆಲೋಚನದ್ವಯಂ ।
ನಸುಮುಗುಳ್ದಶ್ರು ಪೊಣ್ಮದಿರೆ ಹಸ್ತಪದಂಗಳವಿರ್ದುವಿರ್ದವೋಲ್ ॥
ಮಿಸುಕದೆ ಪೊಂಗುಗೆಟ್ಟಿರೆ ತದಂತರದೊಳ್ ಬಿಡದನ್ನೆಗಂ ವಿಡಂ ।
ಬಿಸಿದುದು ಮೂರ್ಚ್ಛೆಯಾರುಮನದಿರ್ಪದೆಪುತ್ರವಿಯೋಗವಿಕ್ಲಬಂ ॥ ೧೯

ಅನಂತರಮಂತವುರದ ಬಾಲೆಯರ್ ಬೀಸುವ ಬಾಟಿಯೆಲೆಯ ತಾಳವೃಂತದ ತಣ್ಣೆಲರ ತಾರ್ಮುರ್ಟ್ಟಿನೊಳಳವಿದಪ್ಪಿದಾಕುಳತೆಯಿಂ ಬಂಧುಜನಂಗಳ್ ಕೆದಱಿ ಮಂಜಿನಂತೆ ಪಸರಿಸುವಭಿಷೇಕದ ಪುಡಿಯ ಪೊರೆಹಮೊಳಂ ಕಳವಳಿಸಿ ಪರಿಜನಂಗಳ್ ತಳಿವ ಪೀಲಿಗರದಾಲಿಗುಡುವ ನೀರ ತೋರವ ನಿಯ ತಂದಲೊಂದುಗಯೊಳಮೆಂತಾನುಂ ಹಮ್ಮದದಿನಗಲ್ದು ತನ್ನವಸ್ಥಾಂತರಕ್ಕೆ ತಾನೆ ಬೆಕ್ಕಸಂ ಬಡುತ್ತಿರ್ಪನ್ನೆಗಂ

ಊಡಲಿ ?" ಹೀಗೆಂದು ಅರಸನು ದುಃಖದಿಂದ ಪ್ರಲಾಪಮಾಡಿದನು. ಅಷ್ಟರಲ್ಲಿ– ೧೮. ಶೋಕವೆಂಬ ಬೆಂಕಿಯ ರಭಸದಿಂದ ಅರಸನು ಬೆಂದು ಹೋಗುವನು; ಅದರಿಂದ ಸ್ವಲ್ಪ ಇವನನ್ನು ಅಗಲಿಸುವೆನು" ಎಂದುಕೊಂಡು ಕನಿಕರದಿಂದ ಬಂದಿತೋ ಏನೊ ಎಂಬಂತೆ ಅವನನ್ನು ತೀವ್ರವಾದ ಮೂರ್ಛೆ ಆವರಿಸಿತು. ೧೯. ಉಸಿರ ಗಾಳಿ ಮೆಲ್ಲಮೆಲ್ಲಗೆ ತಗ್ಗಿತು; ಕಣ್ಣುಗಳು ನಸುವೆ ಮುಚ್ಚಿಕೊಂಡವು; ಕಂಬನಿ ಹೊಮ್ಮದಾಯಿತು; ಕೈಕಾಲುಗಳು ಇದ್ದಂತಯೆ ನಿಶ್ಚೇಷ್ಟವಾದುವು; ಹೀಗೆ ಮೂರ್ಛೆ ಆತನನ್ನು ನಿಸ್ಸತ್ವಗೊಳಿಸಿತು. ಪುತ್ರವಿರಹದ ದುಃಖ ಯಾರನ್ನಾದರೂ ಪೀಡಿಸದೆ ಇದ್ದೀತೆ ? ವ॥ ಆ ಬಳಿಕ ರಾಣಿವಾಸದ ಕನ್ಯೆಯರು ಬೀಸುವ ಬಾಳೆಯೆಲೆಯ ಬೀಸಣಿಕೆಗಳ ತಂಗಾಳಿಯಿಂದಲೂ, ಅತ್ಯಧಿಕವಾಗಿ ತಳಮಳಗೊಂಡ ಬಂಧುಜನರು, ಮಂಜಿನಂತೆ ಮೈತುಂಬ ಹರಡಿದ ಅಭಿಷೇಕದ ಹುಡಿಯಿಂದಲೂ, ಕಳವಳದಿಂದ ಸೇವಕರು ತಳಿಯುವ ತಂಪುನೀರಿನ ದೊಡ್ಡ ದೊಡ್ಡ ಹನಿಗಳ ಮಳೆಯಿಂದಲೂ ಅಂತೂ ಒಮ್ಮೆ ಅರಸನು ಮೂರ್ಛೆ ತಿಳಿದು, ತನ್ನ

ದೆಸೆಯುಂ ಬಾಲಾತಪಂ ಬಾಸಣೆದುದೆನೆ ತಳ್ತೊಪ್ಪೆಯ್ದೆ ದೇಹಾಂಶುವಂದಾ।
ಗಸದಿಂದುಗ್ರತ್ವಮಂ ಬಿಟ್ಟವನಿಪತಿಯನಾಶ್ವಾಸಿಸಲ್ ಬಂದಪಂ ತಾ॥
ನೆ ಸಹಸ್ರೋಸ್ರಂ ದಲೆಂಬಂದದಿನಿಟಿದು ತಪೋಭೂಷಣಾಭಿಖ್ಯನೊರ್ವಂ।
ರಿಸಿ ಬಂದಂ ಚಾರಣಂ ಕಾರಣವಜೆದಿನನೆಂದೆಂಬಿನಂ ರಾಜಲೋಕಂ॥ ೨೦

ಅಂತಾಸ್ಥಾನವೆಲ್ಲಂ ಕೌತುಕಂಬಡುವನ್ನಮೆಯ್ದೆ ಬರ್ಪುದುಂ

ವಾಸರಮುಖದರ್ಶನದಿಂ।
ದೋಸರಿಸುವ ಚಕ್ರವಾಕದೆರ್ದೆಯದವಟಿಲಂ॥
ತಾಸಮಯದೊಳವನಿಪನಟಿ।
ಲೋಸರಿಸಿದುದಾಮುನೀಂದ್ರಮುಖದರ್ಶನದಿಂ॥ ೨೧

ಮಱೆಯೆ ಸುತಶೋಕಮಂ ಮನ।
ದೆಱಕದಿನಿದಿರ್ವೋಗಿ ಯೋಗಿಪದತಳಮಿಳೆಯಂ॥
ನೆಱೆ ಮುಟ್ಟದ ಮುಂ ದುಗುಲದ।
ಸೆಱಗಂ ಪರಿಪಾಸಿ ಮೊಟ್ಗಿದಂ ಮುನ್ನಡಿಯೊಳ್॥ ೨೨

ಅಂತು ಭಕ್ತಿ ಭರದಿನೆಱಗುವಂತೆಱಗಿ ಕೈಗೊಟ್ಟೊಡಗೊಂಡು ಬಂದು ತಾನೆತಂದಿಕ್ಕಿದ ಪವಿತ್ರ ವೇತ್ರಾಸನದೊಳಿರಿಸಿವೈಹಾಯಸಮಾರ್ಗದಿನಸ್ಪೃಷ್ಟಪಾಂಶುವಾದೊಡಂ ಶಾಂತಿಧಾರಾರ್ಥಮಾಗಿ

ಸ್ಥಿತಿಗೆ ತಾನೆ ವಿಸ್ಮಿತನಾಗಿರುವಾಗ– ೨೦. ದಿಕ್ಕುಗಳನ್ನೆಲ್ಲ ಎಳೆಬಿಸಿಲು ಆವರಿಸಿತೊ ಏನೊ ಎಂಬಂತೆ ತನ್ನ ದೇಹಕಾಂತಿಯನ್ನು ಬೀರುತ್ತ, ಅರಸನನ್ನು ಸಮಾಧಾನಗೊಳಿಸಲು ಸೂರ್ಯನೆ ತನ್ನ ಉಗ್ರತೆಯನ್ನು ಬಿಟ್ಟು ಸೌಮ್ಯನಾಗಿ ಬರುತ್ತಿರುವನೊ ಏನೊ ಎಂಬಂತೆ ಚಾರಣಮುನಿಯೊಬ್ಬನು ಆಕಾಶದಿಂದ ಇಳಿದು ಬಂದನು. ವ॥ ಒಡ್ಡೋಲಗದಲ್ಲಿದ್ದವರೆಲ್ಲ ಕೌತುಕಪಡುವಂತೆ ಆ ಮುನಿ ಬರಲಾಗಿ– ೨೧. ಅರುಣೋದಯವನ್ನು ಕಂಡು ಚಕ್ರವಾಕದ ಮನಸ್ತಾಪ ನಿವಾರಣೆಯಾಗುವಂತೆ, ಆ ಯತೀಂದ್ರನ ಮುಖದರ್ಶನದಿಂದ ಅರಸನ ದುಃಖ ಹಿಂಗಿ ಹೋಯಿತು. ೨೨. ಪುತ್ರಶೋಕವನ್ನು ಮರೆತು, ಹೃತ್ಪೂರ್ವಕವಾಗಿ ಮುನಿಗಳನ್ನು ಇದಿರುಗೊಂಡು, ಅವರ ಪಾದಗಳು ಭೂಮಿಗೆ ಮುಟ್ಟುವುದರೊಳಗಾಗಿ ತನ್ನ ವಸ್ತ್ರದ ಸೆರಗನ್ನು ಅವರಿಗೆ ಹಡದಿಯಾಗಿ ಹಾಸಿ, ಬಾಗಿ ನಮಸ್ಕರಿಸಿದನು. ವ॥ ಭಕ್ತಿಯ ಭಾರದಿಂದ ಬಾಗುವಂತೆ ಬಾಗಿ ವಂದಿಸಿ ಕೈಗೊಟ್ಟು ಅವರನ್ನು ಕರೆತಂದು ತಾನೆ ತಂದಿರಿಸಿದ ಪಾವನವಾದ ಹುಲ್ಲಿನ ಚಾಪೆಯ ಮೇಲೆ ಕುಳ್ಳಿರಿಸಿದನು; ಆಕಾಶಮಾರ್ಗವಾಗಿ ಬಂದವರಾದುದರಿಂದ ಅವರ ಪಾದಗಳಲ್ಲಿ ಧೂಳಿಯೇನೂ ಇರಲಿಲ್ಲವಾದರೂ, ಶಾಂತಿಗಾಗಿ ಧಾರೆಯೆರೆಯಬೇಕೆಂದು–

ಶ್ರೀಪದಮಂ ಹರ್ಷಾಶ್ರು।
ವ್ಯಾಪಿತಜಳದಿಂದೆ ತೊಳೆದು ತಲೆಯೊಳ್ ತಳಿದಾ ॥
ಭೂಪತಿ ನಲಿದಂ ಗತಸಂ।
ತಾಪಂ ಮುನಿಜನದ ಮೈಮೆ ಮಱಿಯಿಸದೇನಂ ॥ ೨೩

ಅನಂತರಂ ಸಸಂಭ್ರಮಂ ಪುರೋಹಿತೋಪನೀತಬಹುವಿಧಾರ್ಘ್ಯಪೂಜಾ ಸಮಾಜಂಗಳಿಂದಮರ್ಚಿಸಿ,

ಜೀವಸಮಸುತವಿಯೋಗದೊ।
ಳಾವರಿಸಿದ ಖೇದವಿನಿತು ಪಿರಿದಲ್ತೆನೆ ಮ ॥
ತ್ತಾವರಿಸಿದುದವನಿಪನಂ।
ಭೂವಿಶ್ರುತಯೋಗಿನಾಥಯೋಗಾಹ್ಲಾದಂ ॥ ೨೪

ಆಗಳ್ ಮಹಾಪ್ರತೀಹಾರಂ ಪಾಸಿದುತ್ತರೀಯವಸನದೊಳ್ ಕುಳ್ಳಿರ್ದು

ಅಮರ್ದಿಂದರ್ಘ್ಯಮನಿತ್ತಪು।
ದು ಮುಖೇಂದು ಮುನೀಂದ್ರಪದನಖೇಂದುಗೆನಿಪ್ಪಂ ॥
ತಮರೆ ದಶನಾಂಶು ನುಡಿದಂ।
ಕ್ರಮದಿಂ ಪ್ರಶ್ರಯನಿಯುಕ್ತಮಧುರೋಕ್ತಿಗಳಂ ॥ ೨೫

ಸೊಗಯಿಪ ಮನೋರಥಕ್ಕಂ।
ಮಿಗಿಲೆನಿಸುವ ನಿಮ್ಮ ಬರವು ದೊರಕೊಂಡತ್ತಿಂ ॥
ಜಗತೀಮಾನ್ಯಂ ಧನ್ಯಂ।
ಬಗೆವೊಡೆ ಮತ್ತಾವನೆನ್ನವೋಲನ್ಯನೃಪಂ ॥ ೨೬

೨೩. ಅವರ ಪೂಜ್ಯಪಾದಗಳನ್ನು ಆನಂದಾಶ್ರುಗಳಿಂದೊಡಗೂಡಿದ ನೀರಿನಿಂದ ತೊಳೆದು ತೀರ್ಥವನ್ನು ತನ್ನ ತಲೆಯುಲ್ಲಿ ಧರಿಸಿ, ಅರಸನು ಸಂತಾಪವನ್ನೆಲ್ಲ ಪರಿಹರಿಸಿಕೊಂಡು ಸಂತೋಷಪಟ್ಟನು. ಮುನಿಜನದ ಮಹಿಮೆ ಮರೆಯಿಸದಿರುವುದು ಯಾವುದು? ವ॥ ಬಳಿಕ ಸಂಭ್ರಮದಿಂದ ಪುರೋಹಿತನು ತಂದ ಅನೇಕ ವಿಧವಾದ ಅರ್ಘ್ಯದ ಹಾಗೂ ಪೂಜೆಯ ಸಾಮಗ್ರಿಗಳಿಂದ ಅರಸನು ಅವರನ್ನು ಅರ್ಚಿಸಿದನು. ೨೪. ತನ್ನ ಜೀವಕ್ಕೆ ಸಮನಾದ ಮಗನ ಅಗಲಿಕೆಯಿಂದಾದ ದುಃಖವದೇನು ದೊಡ್ಡದು ಎಂಬಂತೆ ಈ ಭೂಸ್ತುತನಾದ ಯೋಗೀಂದ್ರನ ಸನ್ನಿಧಿಯಿಂದಾದ ಆನಂದ ಅರಸನನ್ನು ಆವರಿಸಿತು. ವ॥ ಆಗ ಮಹಾಪ್ರತೀಹಾರನು ಹಾಸಿದ ಮೇಲುದಿನ ಸೆರಗಿನ ಮೇಲೆ ಕುಳಿತುಕೊಂಡು– ೨೫. ಮುನಿಪತಿಯು ಪಾದದುಗುರೆಂಬ ಚಂದ್ರನಿಗೆ ತನ್ನ ಮುಖಚಂದ್ರನು ಅಮೃತದಿಂದಲೆ ಅರ್ಘ್ಯ ಕೊಡುತ್ತಿರುವಂತೆ, ಹಲ್ಲುಗಳ ಕಾಂತಿ ಹೊರಸೂಸುತ್ತಿರಲಾಗಿ, ಅರಸನು ವಿನಯ ಪೂರ್ವಕವಾಗಿ ಹೀಗೆ ಮೆಲುನುಡಿಯಿಂದ ಮಾತಾಡಿದನು– ೨೬. "ಸಂತೋಷಕರವಾದ ಮನೋರಥಕ್ಕಿಂತಲೂ ಮಿಗಿಲೆನಿಸುವಂತೆ ನಮ್ಮಲ್ಲಿಗೆ ತಮ್ಮ ಆಗಮನವಾಯಿತು. ಈ ಜಗತ್ತಿನಲ್ಲಿ ಹೀಗೆ ನನ್ನಂತೆ ಧನ್ಯವಾದ ಅರಸನು ಇನ್ನಾವನುಂಟು ?

ಕೃತಕೃತ್ಯತೆಯಿಂ ವಾಂಛೆಯಿ ।
ನತಿಶಮಭಾವನೆಯಿನೆಲ್ಲಿಯುಂ ಪ್ರೇಮಮನೂ ॥
ರ್ಜಿತಗುಣಿ ಬಿಟ್ಟಿರ್ದುಂ ಪರ ।
ಹಿತದೊಳೆ ಸಲ್ವುದೆ ವಲಂ ಭವದ್ವಿಧರ್ಗೆ ನಿಜಂ ॥ ೨೭

ಅದಲ್ಲದೆಯುಂ

ಬಂಧುವಿಯೋಗದಿನೆನಗನು ।
ಬಂಧಿಸಿದ ಮಹೋಪತಾಪಮದು ನೀಂ ಬರೆ ನಿ ॥
ರ್ಬಂಧದಿನಳಲೆತ್ತದಲೆಂ ।
ಬಂಧುಗಳಿಂ ನೀನೆ ಬಂಧು ಜಗತೀಬಂಧೂ ॥ ೨೮

ವಿಗತಾಳೋಕಂ ಶಿವಪಥ ।
ವಿಗಳಿತಮೆನಿಸಿದ ಜನಕ್ಕೆ ಕೃತಸನ್ಮಾರ್ಗಾ ॥
ನುಗತೋಪದೇಶದಿಂದೀ ।
ಜಗದೊಳ್ ನೀನಾದೆ ನಾಥ ಕಣ್ಣುಂ ಗತಿಯುಂ ॥ ೨೯

ಎಂದು ನುಡಿದು ವಿನಯವಿನಮಿತನಾಗಿರ್ದಜನಪತಿಯಂ ಮುನಿಪತಿಯಿಂತೆಂದಂ :-

ಬೋಧದಿನಿಂದು ಭೂಭುಜ ಭವಾಂತರವೈರವಶಪ್ರಕಾಶಿತ ।
ಕ್ರೋಧನೆನಿಪ್ಪ ದಾನವನಿನಾದ ಸುತಾಹೃತಿಯೊಳ್ ಪೊದಟ್ದ ನಿ ॥
ನ್ನಾಧಿಯನಾನಭೀಕ್ಷಿಸಿ ಗುಣಪ್ರಣಯಿತ್ವದೆ ಬಂದೆನಲ್ತೆ ಸಂ ।
ಬೋಧಿಸಲೆಂತುಮೊಳ್ಗುಣಮೊಡರ್ಚುಗುಮಾರ ಮನಕ್ಕಮಟ್ಟಿಲಿಂ ॥ ೩೦

೨೭. ಕೃತಾರ್ಥತೆಯಿಂದಲೂ, ಶಾಂತಿಭಾವನೆಯಿಂದಲೂ ರಾಗವನ್ನು ತೊರೆದವರಾದರೂ ಕೂಡ, ಉತ್ತಮಗುಣವಂತರಾಗಿ ಪರೋಪಕಾರದಲ್ಲಿಯೆ ತೊಡಗಿರುವುದು ತಮ್ಮಂತಹ ಮುನಿಗಳಿಗೆ ಯೋಗ್ಯವೇ ಆಗಿದೆ. ಅದಲ್ಲದೆ- ೨೮. ಪ್ರಿಯಜನರ ವಿಯೋಗದಿಂದ ನನಗೆ ಉಂಟಾಗಿದ್ದ ಮಹಾಸಂಕಟವು ನೀವು ಬಂದೊಡನೆ ನನ್ನನ್ನು ಬಿಟ್ಟುಹೋಯಿತು. ಜಗದ್ಬಂಧುವೆ, ಬಂಧುಗಳಿಗಿಂತಲೂ ಮಿಗಿಲಾದ ಬಂಧು ನೀವು. ೨೯. ಕಂಗಾಣದೆ ಪುಣ್ಯಪದವಿಗೆ ದೂರವಾಗಿರುವ ಜನಕ್ಕೆ ಸನ್ಮಾರ್ಗವನ್ನು ತೋರಿ, ಹೇಳಿಕೊಡುವುದರಿಂದ ಜಗತ್ತಿಗೆ ನೀವೇ ಕಣ್ಣು. ನೀವೇ ಗತಿ." ವ॥ ಹೀಗೆ ನುಡಿದು ವಿನಯದಿಂದ ಬಾಗಿದ ಅರಸನಿಗೆ ಮುನೀಂದ್ರನು ಹೀಗೆಂದನು- ೩೦. ಪೂರ್ವಜನ್ಮದ ಶತ್ರುತ್ವದ ಮೂಲಕ ಉಂಟಾದ ಕ್ರೋಧದಿಂದ ದೈತ್ಯನೊಬ್ಬನು ನಿನ್ನ ಮಗನನ್ನು ಅಪಹರಿಸಿಕೊಂಡು ಹೋದುದನ್ನೂ, ಅದರಿಂದ ನಿನಗುಂಟಾದ ದುಃಖವನ್ನೂ ನಾನು ಅವಧಿ ಜ್ಞಾನದಿಂದ ಅರಿತುಕೊಂಡು ನಿನ್ನ ಗುಣಕ್ಕೆ ಮೆಚ್ಚಿದವನಾಗಿ ನಿನಗೆ ಸಮಾಧಾನದ ಮಾತು ಹೇಳಿ, ಉಪದೇಶಿಸಬೇಕೆಂದು ಬಂದೆನಲ್ಲವೆ? ಒಳ್ಳೆಯ ಗುಣವು ಯಾರ

ಶ್ರುತನಿಧಿ ತತ್ತ್ವಾಭ್ಯಾಸಾ ।
ಸ್ಥಿತಮತಿ ಚರಮಾಂಗಮೆನಿಪ ನಿನಗೀಜನ್ಮ ॥
ಸ್ಥಿತಿಯಂ ಪೇಟಿಲ್ದೊಡೆ ಭೂಪತಿ ।
ಶತಮನ್ಯುಗೆ ಪೇಟ್ವ ತೆಱನೆ ನಾಕಶ್ರೀಯಂ ॥ ೩೧

ಪ್ರಿಯಮಪ್ರಿಯಮೆಂಬೆರಡಱ ।
ವಿಯೋಗಸಂಯೋಗವೆಂಬಿವೆಲ್ಲ ಜನಕ್ಕಾ ॥
ರಯೆ ಸಾಧಾರಣಮೆಂದ ।
ಲ್ತೆ ಯಥಾರ್ಥಜ್ಞರ್ ಬಿಸುಟ್ಟರಱಲೊಸಗೆಗಳಂ ॥ ೩೨

॥ ಮಾಳಿನಿ ॥

ಅದಱಿನುಱಿವುದಿಂತೀದೇಹದಾಹಾವಗಾಹ ।
ಪ್ರದಮೆನಿಪ ವಿಷಾದೋನ್ಮಾದಮಂ ನೋಟಿಲ್ವೊಡೆಂತುಂ ॥
ಪುದಿದೆಡರ್ಗಳೊಳಾದಂ ಮಚ್ಚದಿಂ ಭೀರು ಬಾಯ್ವಿ ।
ಟ್ಟದಿರ್ಗುಮದಿರ್ವನೇ ಪೇಟ್ ಧೀರಚಿತ್ತಪ್ರವೃತ್ತಂ ॥ ೩೩

ಅದಲ್ಲದೆಯುಂ

ನಂದನನ ದೆಸೆಗೆ ಪಿರಿದಾ ।
ನಂದಂದಾಳ್ದಿರ್ಪುದಲ್ಲಿ ನಿಲ್ಲಂ ಕೆಲವಾ ॥
ನುಂ ದಿವಸದೊಳಗೆ ಬರ್ಪಂ ।
ಸಂದೆಯಮಿಲ್ಲವನ ಪುಣ್ಯಮಪ್ಪೊಡಗಣ್ಯಂ ॥ ೩೪

ಮನಸ್ಸಿನಲ್ಲಾದರೂ ಅಕ್ಕರೆಯನ್ನು ಹುಟ್ಟಿಸುವುದು. ೩೧. ಅರಸನೆ, ಶ್ರುತಗಳನ್ನೆಲ್ಲ ತಿಳಿದವನು ನೀನು; ತತ್ತ್ವಾಭ್ಯಾಸ ಮಾಡಿದವನು, ಹಾಗೂ ಚರಮದೇಹಧಾರಿ. ಹೀಗಿರುವಾಗ ನಿನಗೆ ಸಂಸಾರಸ್ಥಿತಿಯನ್ನು ವಿವರಿಸಿ ಹೇಳುವುದೆಂದರೆ ಇಂದ್ರನಿಗೆ ಸ್ವರ್ಗದ ವೈಭವವನ್ನು ವಿವರಿಸಿದ ಹಾಗೆಯೆ ಸರಿ. ೩೨. ಪ್ರಿಯವಾದುದು ಅಗಲಿ ಹೋಗುವುದೂ, ಅಪ್ರಿಯವಾದುದು ಒದಗಿ ಬರುವುದೂ ಜನಕ್ಕೆಲ್ಲ ಸಾಮಾನ್ಯವಾದ ವಿಷಯವೆಂದು ತಿಳಿದುದರಿಂದಲ್ಲವೆ ಸತ್ಯಜ್ಞಾನಿಗಳು ಸುಖದುಃಖಗಳೆರಡನ್ನೂ ತೊರೆದಿರುವುದು ? ೩೩. ಆದುದರಿಂದ ದೇಹವನ್ನು ಬೇಯಿಸುವ ಈ ದುಃಖೋನ್ಮಾದವನ್ನು ಬಿಟ್ಟುಬಿಡು. ವಿಚಾರ ಮಾಡಿ ನೋಡು. ವಿಘ್ನಗಳು ಬಂದು ಮುಸುಕಿದಾಗ ಹೆದರಿ ಬಾಯಿಬಿಡುವವರು ಧೈರ್ಯಹೀನರು. ಧೈರ್ಯಶಾಲಿಯಾದವನು ಎಂದಾದರೂ ಹಾಗೆ ಎದೆಗೆಡುವನೆ? ಅದಲ್ಲದೆ- ೩೪. ಮಗನ ವಿಷಯವಾಗಿ ನೀನು ತುಂಬ ಸಂತೋಷಪಡಬೇಕು. ಆತನು ಈಗ ಹೋದಲ್ಲಿಯೆ ನಿಲ್ಲುವುದಿಲ್ಲ; ಕೆಲವು ದಿನಗಳೊಳಗೆ ಮರಳಿ ಬರುವನು.

ಅದೆಂತೆಂದೊಡೆ--

ಪಟ್ಖಂಡಕ್ಷಿತಿನಾಥನಪ್ಪಧಿಕಪುಣ್ಯಂ ತತ್ಪ್ರಭಾಸಾದಿವಿ ।
ದ್ವಿಟ್ಖೇದೋದಯಹೇತುವಪ್ಪತುಳವಿಕ್ರಾಂತಂ ಸಮುದ್ಯನ್ನಿಜ ॥
ತ್ವಿಟ್ಖಂಜೀಕೃತಸೂರ್ಯಪಾದಚಯಮಪ್ಪುದ್ದಾಮತೇಜಂ ತುರಾ ।
ಪಾಟ್ಖಡ್ಗೋಪಮುಮಪ್ಪ ತೀಕ್ಷ್ಣತರಚಕ್ರಂ ಸಾರ್ಗುಮಿನ್ನಾತನಂ ॥ ೩೫

ಅದುಕಾರಣದಿಂ

ಕುಳಗಿರಿಗಾವಗಂ ಪವನಬಾಧೆಯನಾಪವನಂಗೆ ಬಂಧನಾ ।
ಕುಳತೆಯನಬ್ಧಿಗಗ್ನಿಭಯಮಂ ಬಿಡದಗ್ನಿಗೆ ಶೀತಭೀತಿಯ ॥
ಗ್ಗಳಿಕೆಯನ್ನೈದೆ ಚಿಂತಿಪ ಮರುಳ್ಗೆಣೆಯಾಗದೆ ಪೋಗನಾಮಹಾ ।
ಬಳನೊಳತಿಪ್ರತಾಪನೊಳುಪಪ್ಲವಮಂ ಬಗೆವೊಂ ಮಹೀಪತೀ ॥ ೩೬

ಎಂದು ಪೇಟಿಳ್ದಾಮಹಾಋುಷಿ ಪರಸಿ ಭೋಂಕನೆ ಮಿಂಚಿನಂತೆ ಗಗನಕ್ಕೊಗೆದು ನಿಜವಾಸಕ್ಕೆ ಪೋಪುದುಮರಸನುಂ ಪರಿಜನಮಂ ವಿಸರ್ಜಿಸಿ ತಾನುಮರಸಿಯುಂ ತನ್ಮುನೀಶ್ವರದಿವ್ಯವಚನಮೃತ್ಯುಂ ಜಯಮಂತ್ರಸಾಮರ್ಥ್ಯಸಂಧಾರ್ಯಮಾಣಜೀವಿತರಾಗಿರ್ದರ್, ಇತ್ತಲ್

ಮೇರುನಗಾಗ್ರದಿಂ ಧರೆಗುರುಳ್ಚುವೆನೋ ರಸೆಯಾಂಕೆಯಪ್ಪಿನಂ ।
ವಾರಿಧಿಯಲ್ಲಿ ನೂಂಕುವೆನೊ ನಟ್ಟುರಿವೀವನಪ್ಪಿವಕ್ತ್ರದೊಳ್ ॥

ಇದರಲ್ಲಿ ಸಂಶಯವಿಲ್ಲ. ಅವನ ಪುಣ್ಯವೋ-ಅಗಾಧವಾಗಿದೆ. ಅದು ಹೇಗೆಂದರೆ- ೩೫. ಆತನು ಆರುಖಂಡಗಳಿಗೂ ಅಧಿಪತಿಯಾಗಲಿರುವನು; ಪ್ರಭಾಸನೇ ಮೊದಲಾದ ಶತ್ರುಗಳಿಗೆ ಹೃದ್ರೋಗವನ್ನುಂಟುಮಾಡುವಂತಹ ಅಸಮಾನ ಪರಾಕ್ರಮ ಆತನಿಗೆ ಉಂಟು; ಸೂರ್ಯಕಿರಣ ಸಮೂಹವನ್ನು ಮುಸುಳಿಸುವಂತಹ ಉಜ್ವಲತೇಜದಿಂದೊಡಗೂಡಿ ಇಂದ್ರನ ವಜ್ರಾಯುಧದಂತೆ ಅತ್ಯಂತ ತೀಕ್ಷ್ಣವಾದ ಚಕ್ರವು ಆತನಿಗೆ ಬಂದೊದಗುವುದು. ಆದುದರಿಂದ- ೩೬. ಗಾಳಿಯಿಂದ ಕುಲಪರ್ವತವನ್ನು, ಬಾಧಿಸುವೆನೆಂದು, ಗಾಳಿಯನ್ನು ಕಟ್ಟಿಹಾಕುವೆನೆಂದು ಸಮುದ್ರಕ್ಕೆ ಬೆಂಕಿಯಿಡುವೆನೆಂದು ಅಗ್ನಿಗೆ ಚಳಿಯ ಭಯವನ್ನುಂಟುಮಾಡುವೆನೆಂದು ಯೋಚನೆ ಮಾಡುವವನು ಮೂರ್ಖನಲ್ಲವೆ ? ಹಾಗೆಯೆ ಮಹಾಬಲಶಾಲಿಯೂ, ಅತ್ಯಂತ ತೇಜಸ್ವಿಯೂ ಆದ ನಿನ್ನ ಮಗನಿಗೆ ಕೇಡು ಮಾಡುವೆನೆಂಬವನೂ ಮೂರ್ಖನೇ." ವ॥ ಹೀಗೆಂದು ತಿಳಿಸಿ, ಆ ಮಹಾಯೋಗಿಯು ಅರಸನನ್ನು ಆಶೀರ್ವದಿಸಿ ಕೂಡಲೆ ಮಿಂಚು ಸೆಳೆದಂತೆ ಆಕಾಶಕ್ಕೆ ನೆಗೆದು ತನ್ನ ವಾಸಸ್ಥಳಕ್ಕೆ ಹೋದನು. ಅರಸನು ತನ್ನ ಪರಿಜನರನ್ನು ಕಳಿಸಿ ತಾನೂ ಅರಸಿಯೂ ಆ ಮುನಿವಚನವೆಂಬ ಮೃತ್ಯುಂಜಯ ಮಂತ್ರ ಬಲದಿಂದ ಜೀವ ಹಿಡಿದುಕೊಂಡು ಇದ್ದರು. ಇತ್ತ- ೩೭. "ಈತನನ್ನು ಮೇರುಪರ್ವತದ ಶಿಖರದಿಂದ ಎತ್ತಿ ನೆಲಕ್ಕೆ ಅಪ್ಪಳಿಸಿಬಿಡಲೊ, ರಸಾತಳವನ್ನು ಮುಟ್ಟುವಂತೆ ಸಮುದ್ರದಲ್ಲಿ ನೂಕಿಬಿಡಲೊ, ನಿಗಿನಿಗಿಯಾಗಿ

ಪೂರಿಪೆನೋ ಕಱುತ್ತುಗಿದು ಕತ್ತಿಗೆಯಿಂದೆರಡಾಗಿ ಪೋೞ್ವೆನೋ ।
ನಾರಕದುಃಖಮಂ ಸೆಱೆಯೊಳೂಡುವೆನೋ ಪಲಕಾಲಮೀತನಂ ॥ ೩೭

ಎಂದು ನಿಶಾಚರಂ ರೋಷಾವೇಶಮಾನಸಂ ಮಾನಸದೊಳೆ ಬಗೆಯುತ್ತುಂ ಪೋಗೆ ಮುಂದೊಂದು ಮಹಾಟವೀಮಧ್ಯದೊಳ್

ಮೇರುವನೊತ್ತಿ ಕಿೞ್ತೊಡೆ ಪಯೋಮಯವಾಯ್ತೊನಭಂ ನೆಲಕ್ಕನಾ ।
ಧಾರತೆಯಿಂದೆ ಬಿೞ್ದುದೊ ದಿಶಾಗಜರಾಜಿಯ ವಾರಿಕೇಳಿಕಾ ॥
ಸಾರಮೊ ಬಾಡಬಾಗ್ನಿಭಯದಿಂ ವರುಣಂ ಮಡಗಿಟ್ಟ ನೀರ ಭಂ ।
ಡಾರಮೊ ಭಾವಿಪಂದದೆನೆ ಕೌತುಕಮಾಯ್ತು ಮಹಾಸರೋವರಂ ॥ ೩೮

ಪಾತಾಳವರಂ ಸ್ವಾಚ್ಛಗು ।
ಣಾತಿಶಯದೆ ಕಾಣಲೆಯ್ದೆ ಬಂದಪುದೆಂಬೀ ॥
ಮಾತನೊದವಿಪುದು ತಟತರು ।
ಜಾತಪ್ರತಿಬಿಂಬವಿಸರವಂತಾಸರದೊಳ್ ॥ ೩೯

ಕಾಂತಮಧುಸಮಯಮಾಧವಿ ।
ಯಂತುತ್ಕಳಿಕಾನ್ವಿತಂ ನಭೋಮಂಡಳದಂ ॥
ತಂತಃಕೃತಭುವನಂ ನಟ ।
ನಂತೆ ದಿಟಂ ಪ್ರಬಳನಕ್ರಮಕರಸಮೇತಂ ॥ ೪೦

ಉರಿಯುತ್ತಿರುವ ಈ ಕಾಡುಗಿಚ್ಚಿನ ಬಾಯಿಗೆ ಇವನನ್ನು ತುರುಕಿಬಿಡಲೊ, ಖಡ್ಗದಿಂದ ಎರಡು ಹೋಳಾಗಿ ಸೀಳಿ ಹಾಕಲೊ, ಅಥವಾ ಹಲವಾರು ಕಾಲ ನವೆಯುವಂತೆ ನಾರಕ ದುಃಖದಲ್ಲಿ ಈತನನ್ನು ಸೆರೆಯಿಡಲೊ ?" ವ॥ ಎಂದು ಕ್ರೋಧೋನ್ಮತ್ತನಾಗಿ ಆ ದೈತ್ಯನು ಮನಸ್ಸಿನಲ್ಲಿ ಯೋಚಿಸುತ್ತ ಹೋಗಿ ಮುಂದೆ ಒಂದು ಹೆಗ್ಗಾಡಿನ ನಡುವೆ- ೩೮. ಮೇರು ಪರ್ವತವನ್ನು ಕಿತ್ತುಬಿಟ್ಟುದರಿಂದ ಆ ಪ್ರದೇಶವೆಲ್ಲ ನೀರಿನಿಂದ ತುಂಬಿತೊ, ಆಧಾರತಪ್ಪಿ ಆಕಾಶವು ನೆಲಕ್ಕೆ ಕಡಿದು ಕೊಂಡು ಇಲ್ಲಿ ಬಿದ್ದಿತೊ, ಅಥವಾ ದಿಗ್ಗಜಗಳಿಗೆಲ್ಲ ಜಲಕ್ರೀಡೆಗೆಂದು ಈ ಜಲಾಶಯುವನ್ನು ನಿರ್ಮಿಸಿರುವರೊ, ಅಥವಾ ವಡವಾಗ್ನಿಯ ಭಯದಿಂದ ವರುಣದೇವನು ಮುಚ್ಚಿಟ್ಟ ನೀರಿನ ಭಂಡಾರವೆ ಇದಾಗಿದೆಯೊ ಏನೊ ಎಂಬಂತೆ ಒಂದು ಮಹಾಸರೋವರವು ವಿಸ್ಮಯವನ್ನು ಮಾಡಿತು. ೩೯. ತನ್ನ ಸ್ವಚ್ಛತೆಯ ಬಲದಿಂದ ಪಾತಾಳದವರೆಗೂ ತನ್ನ ಬಳಗವನ್ನೆಲ್ಲ ಈ ಸರೋವರ ತೋರಿಸಬಲ್ಲುದು ಎಂದು ತಿಳಿಸುವಂತೆ, ಅದರಲ್ಲಿ ತೀರಪ್ರದೇಶದ ಮರಗಳೆಲ್ಲ ಅದರ ಪ್ರತಿಬಿಂಬಿತವಾಗಿ ಕಂಗೊಳಿಸಿದುವು. ೪೦. ಆ ಸರೋವರವು ಸಂತೋಷಕರವಾದ ವಸಂತ ಋತುವಿನ ಮಾಧವೀಲತೆಯಂತೆ "ಉತ್ಕಳಿಕಾನ್ವಿತ" (೧. ತೆರೆಗಳುಳ್ಳುದು, ೨. ಮೊಗ್ಗುಗಳುಳ್ಳುದು) ವಾಗಿತ್ತು : ಆಕಾಶಮಂಡಲದಂತೆ "ಅಂತಃಕೃತಭುವನ" (೧. ನೀರನ್ನು ಒಳಗೊಂಡುದು. ೨. ಸ್ವರ್ಗವನ್ನೊಳಗೊಂಡುದು); ಮತ್ತು ನಟನಂತೆ

ಮತ್ತಮದು ವಾರಿಯೊಳರ್ದಿಕೊಳ್ವರಣ್ಯವಾರಣಂಗಳೊಡನೆ ಭರದಿಂ ಪೋರ್ಗಂ ಮೊಗಂಬುಗುವ ನೀರ ಪೇರಾನೆಗಳ ತೊಳವಿಗೆಗಳೊಳಂ, ನೀರ್ಗುಡಿವೆಡೆಯೊಳ್ ಪೊಳೆವ ತಮ್ಮ ನೆೞಲಂ ಮಾರ್ಪಡೆಯೆ ಗೆತ್ತು ಎಡೆಮಡಗದೆ ಕಡುಪಿನಿಂ ಪಾಯ್ದು ಬಾಯ್ದೆಱೆದೆಟ್ಟಿ ನೆಗೞ ಮೊಗದೊಳರ್ದಡಂಗುವ ಶಾರ್ದೂಲಸಂದೋಹಂಗಳೊಳಂ, ಕಾಡಾನೆಗಳ ಕೋಡೇಱಿಂದಿಡಿದು ಕಳೆದ ಖರ್ಜೂರದ ಕಡಿಗಳಂತೆ ತಡಿದಡಿಯ ತಱಂಬಿನೊಳ್ ಬಿಸಿಲಂ ಕಾಯ್ವ ಮೊಸಳೆವಿಂಡಿನ ಪಸರಂಗಳೊಳಂ, ನೀರ್ವಾನಸಂ ಮೆಲ್ದು ಬಿಸುಡೆ ಪಸರಿಸುವ ತೆರೆಗೊನೆಯೊಳ್ ತೇಂಕಿ ಬರ್ಪ ಜಳಮೃಣಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರ ಶಾಲೂರಜಾಲಂಗಳೊಳಂ, ಮೇಗೆ ನೆಗೆದಿಸುವ ಪಾವಸೆಗೊಂಡ ಪೇರಾವೆಯಂ ತಾವರೆಯ ಕೊಡೆಯೆಲೆಗೆತ್ತಱಿಯದೆಱಗಿದೊಡದು ತೆಱಂಬೊಳೆಯೆ ಬೆಚ್ಚಿಬಿಚ್ಚತಂಬಾಱಿ ಕಳವಳಿಪ ವಿಕಳಕುರವಕನಿಕರಂಗಳೊಳಂ, ಕಾಲ್ದೊಳೆಯಲೊಳಪೊಕ್ಕು ಪಟ್ಟ ಕಾಂತಾರಸೈರಿಭಂಗಳ ಭಂಗುರಶೃಂಗತಾಡನದಿನುಜ್ಜ್ವಳಿಪ ಜಳವೇಣಿಯಂ ಪೊಣ್ಮೆ ಪೊಳೆವೆಳವಾಳೆಯೆಂದು ಕರ್ದುಂಕಿ ಕನಲ್ವ ಬಾಳಬಕಕದಂಬಂಗಳೊಳಂ, ಭೀಷಣರಮಣೀಯಮೆನಿಸಿತ್ತು. ಅಂತುಮಲ್ಲದೆಯುಂ

"ಪ್ರಬಳನಕ್ರಮಕರ ಸಮೇತ" (೧. ಬಲಿಷ್ಠವಾದ ಮೊಸಳೆ ಹಾಗು ಮೀನುಗಳನ್ನು ಒಳಕೊಂಡುದು. ೨. ಅಭಿನಯ ಸಮರ್ಥವಾದ ಕೈಕಾಲುಗಳುಳ್ಳವನು.)ಆಗಿತ್ತು. ["ಪ್ರಬಳನ" ಎಂಬುಂದು "ಪ್ರಚಳನ"ದ ಅಪಲಿಖಿತವೆ?] ವ॥ ನೀರಿನಲ್ಲಿ ಹೊಕ್ಕ ಕಾಡಾನೆಗಳನ್ನು ಕಂಡು ಅವುಗಳೊಡನೆ ಹೋರಾಡಲು ದೊಡ್ಡ ದೊಡ್ಡ ನೀರಾನೆಗಳು ಕೋಲಾಹಲ ಮಾಡುವುವು; ನೀರು ಕುಡಿಯಲೆಂದು ಬಂದ ಹುಲಿ ಹಿಂಡುಗಳು ಅಲ್ಲಿ ಮೂಡಿದ ತಮ್ಮ ಪ್ರತಿಬಿಂಬಗಳನ್ನು ತಮ್ಮ ವೈರಿಗಳ ಹಿಂಡೆಂದು ಭ್ರಮಿಸಿ ರಭಸದಿಂದ ಆಕ್ರಮಿಸಲು ಅವುಗಳ ಮೇಲೆ ಧುಮ್ಮಿಕ್ಕುವುವು; ಕೂಡಲೆ ಬಾಯ್ತೆರೆದುಕೊಂಡಿದ್ದ ಮೊಸಳೆಗಳ ಬಾಯನ್ನು ಸೇರಿ ಅದೃಶ್ಯವಾಗುವುವು; ಕಾಡಾನೆಗಳ ಕೋರೆಗಳ ಹೊಡೆತದಿಂದ ಕತ್ತರಿಸಿ ಬಿದ್ದ ಖರ್ಜೂರ ವೃಕ್ಷಗಳ ತುಂಡುಗಳೊ ಏನೊ ಎಂಬಂತೆ ದಂಡೆಯ ಬಯಲಲ್ಲಿ ಬಿಸಿಲು ಕಾಸಿಕೊಳ್ಳುತ್ತ ಮೊಸಳೆಗಳು ಹಿಂಡು ಹಿಂಡಾಗಿ ಬಿದ್ದಿರುವುವು; ಜಲಪುರುಷನು ತಿಂದೊಗೆದ ತಾವರೆ ನಾಳಗಳು ತೆರೆಯ ಮೇಲೆ ತೇಲುತ್ತ ಬರಲಾಗಿ, ಅವುಗಳನ್ನು ನೀರ ಹಾವೆಂದು ಭ್ರಮಿಸಿ, ಅವುಗಳ ಮೇಲೆ ಟಣ್ಣನೆ ಎರುಗುವುವು; ಮೇಲೆದ್ದು ಬಂದು ಈಜುತ್ತಿರುವ ದೊಡ್ಡ ಆನೆಗಳ ಹಾವಸೆಗೊಂಡ ಬೆನ್ನನ್ನು ತಾವರೆಗಳ ತಳದೆಲೆಗಳೆಂದು ಭಾವಿಸಿ ಕುರವಕ ಪಕ್ಷಿಗಳು ಮೇಲೆರಗುವುವು; ಆದರೆ ಅವು ಸರಸರನೆ ಸರಿಯತೊಡಗಿ ದೊಡನೆ ಗಾಬರಿಯಾಗಿ ದಿಕ್ಕೆಟ್ಟು ಹಾರಿ ಆ ಪಕ್ಷಿಗಳು ಕಳವಳಗೊಳ್ಳುವುವು; ಕಾಲ್ತೊಳೆಯಲೆಂದು ಬಂದು ಒಳಹೊಕ್ಕು ಅಲ್ಲಿಯೆ ಮಲಗಿದ ಕಾಡುಕೋಣಗಳ ಸೀಳು ಕೊಂಬುಗಳ ಹೊಡೆತದಿಂದ ಉಜ್ವಲವಾಗಿ ಮಿರುಗುವ ನೀರಿನ ಪ್ರವಾಹವನ್ನು

॥ ಮಾಲಿನಿ ॥

ಕುಸುಮರಜದ ಕೆಂಪಂ ತಾಳ್ದಿ ನೀಳ್ದೇಱೆಯಂ ಲಂ ।
ಘಿಸುವ ತೆರೆಯ ಜಿಹ್ವಾಡಂಬರಂ ಪೊಣ್ಮೆ ಸುತ್ತಂ ॥
ಮಿಸುಪ ಪಿರಿಯ ಮೀಂಗಳ್ ದಾಡೆ ತಾಮಾಗಿಳಾರಾ ।
ಕ್ಷಸಿಯ ತೆಱೆದ ಬಾಯಂತಿರ್ದುದಾಪದ್ಮಸದ್ಮಂ ॥ ೪೧

ಅಂತನೂನಮುಮತಳಸ್ಪರ್ಶಮುಮಮಾನುಷಮುಮತಿಕ್ರೂರಸತ್ವಮುಮಪ್ಪ ಮನೋರಮಣ ಮೆಂಬ ಸರೋವರಮಂ ಕಂಡು

ಇದು ಕಡಲಂದದೆ ಕಡುಗಡಿ ।
ದಿದಱೊಳಗಾನಿವನನಿಕ್ಕಿ ಕೋಪಮನಾಱೆ ॥
ಪ್ಪುದೆ ಪಂಥಮೆಂದು ಬಂದಂ ।
ತದಗ್ರದೇಶಕ್ಕೆ ಕೋಣಪಂ ವಿಗತಕೃಪಂ ॥ ೪೨

ಬಂದು ತನ್ನನೆತ್ತಿಕೊಂ ಡಾಗ್ರಹಮನೊಡೆಯಿಕ್ಕುವಂತಿಕ್ಕಿ ಪೋಪುದುಮಾಕುಮಾರಂ

ಬಿಟ್ಟ ಭರದಿಂದೆ ವಾರಿಯೆ ।
ರಟ್ಟಿಸೆಗಂ ಪಚ್ಚು ಸೂಸೆ ಕೊಳದೊಳಗೆ ಬಯಲ್ ॥
ಬಿಟ್ಟುದು ತದ್ರಭಸಕ್ಕು ।
ರ್ಚಿಟ್ಟು ಕಡಂಗಿದುವು ಜಳಚರಪ್ರಕರಂಗಳ್ ॥ ೪೩

ಹೊಳೆಯುವ ಎಳೆಯ ಬಾಳೆಯೆಂದು ಕುಕ್ಕಿ ಬಕಪಕ್ಷಿಯ ಮರಿಗಳು ನಿರಾಸೆಯಿಂದ ಕಳವಳಿಸುವುವು. ಹೀಗೆ ಆ ಸರೋವರವು ರುದ್ರವೂ ರಮ್ಯವೂ ಆಗಿತ್ತು. ಅದಲ್ಲದೆ– ೪೧. ಹೂಗಳ ಪರಾಗದಿಂದ ಕೆಂಪಾಗಿ, ಏರಿಯನ್ನು ನೆಗೆದು ದಾಟುವಂತೆ ಚಾಚಿ ಕೊಂಡು ಬರುವ ತೆರೆಗಳು ನಾಲಿಗೆಯಾಗಿ, ಸುತ್ತಲು ಮಿರುಗುತ್ತಿರುವ ಹೆಮ್ಮೀನುಗಳು ಕೋರೆದಾಡೆಗಳಾಗಿ, ಭೂಮಿಯೆಂಬ ರಾಕ್ಷಸಿಯ ತೆರೆದ ಬಾಯಿಯೊ ಏನೊ ಎಂಬಂತೆ ಆ ತಾವರೆಗೊಳವು ತೋರಿತು. ವ॥ ಹಾಗು ಅತಿಶಯವೂ, ಅಗಾಧವೂ, ಅಮಾನುಷವೂ ಆಗಿ ಅತ್ಯಂತ ಕ್ರೂರವಾದ ಪ್ರಾಣಿಗಳಿಂದ ಕೂಡಿಕೊಂಡ "ಮನೋರಮಣ"ವೆಂಬ ಆ ಸರೋವರವನ್ನು ಕಂಡು – ೪೨. ಇದು ಸಮುದ್ರದಂತೆ ತುಂಬ ಆಳವಾಗಿದೆ. ಇದರೊಳಗೆ ಈತನನ್ನು ನೂಕಿ ನನ್ನ ಕೋಪವನ್ನು ಆರಿಸಿಕೊಳ್ಳುವುದೇ ಸರಿ" ಎಂದು ನಿರ್ಧರಿಸಿ ನಿಷ್ಕರುಣಿಯಾದ ಆ ರಾಕ್ಷಸನು ಆ ಕೊಳದ ದಂಡೆಗೆ ಬಂದನು. ವ॥ ಹಾಗೆ ಬಂದು, ತನ್ನನ್ನು ಆವರಿಸಿದ ಕ್ರೋಧವನ್ನು ಒಡೆದು ಚೂರಾಗಿಸಲು ಎತ್ತಿ ಬಿಸಾಕುವಂತೆ ಆ ಕುಮಾರನನ್ನು ನೀರಲ್ಲಿ ಎತ್ತಿ ಒಗೆದನು. ಆಗ ಆ ಕುಮಾರನು– ೪೩. ಬಿದ್ದ ರಭಸಕ್ಕೆ ನೀರು ಇಕ್ಕಡೆಗಳಲ್ಲಿಯೂ ಚಿಮ್ಮಿ ಕೊಳದ ನಡುವೆ (ಕೊಳ್ಳಬಿದ್ದಂತೆ) ನೀರು ಬಯಲಾಯಿತು; ಆ ಜೋರಿಗೆ ಜಲಚರಗಳು ಹಾರಿ ಬಿದ್ದು ಕೋಲಾಹಲ ಮಾಡಿದುವು.

ಅಂತು ಪಾತಾಳಮೂಲಂಬರಂ ಮುೞುಗಿ ದಿವಿಜದೀರ್ಘಿಕೆಯೊಳ್ ಮುೞುಗಿ ನೆಗೆವ ಅಭ್ರಮೂಪತಿಯಂತೆ ನೆಗೆಯಲೊಡಂ

ಇನನೊಗೆಯೆ ತಾರೆಗಳ್ ಭೋಂ ।
ಕನೆ ನಭದೊಳದೃಶ್ಯವಪ್ಪ ತೆಱದಿಂ ನೃಪನಂ ॥
ದನನೊಗೆಯೆ ಜಳಚರಂಗಳ ।
ವನಿತುಂ ಕೊಳದೊಳಗೆ ಮತ್ತಡಂಗಿದುವಾಗಳ್ ॥ ೪೪

ಏನಂ ಪೇೞ್ವೆಂ ತನ್ನೃಪ ।
ಸೂನುವ ಪುಣ್ಯಪ್ರವಾಹಮಂ ಗ್ರಾಹಮಹಾ ॥
ಮೀನಕುಳೀರಾಹಿಗಳಂ ।
ದೇನುಂ ಪೊಸಯಿಸಿದುವಿಲ್ಲ ನಿಜವಿಷಮತೆಯಂ ॥ ೪೫

ಆಗಳ್ ಪ್ರೇಂಖೋಳನವಿಳಾಸದಿಂದಾಸರಮಂ ಲೀಲಾಸರಮನುತ್ತರಿಸುವಂತುತ್ತರಿಸಿ ತತ್ತೀರದೊಳಿನಿತುಬೇಗಂ ವಿಶ್ರಮಿಸಿ ಬೞಿಯಂ ಮಲಯಪವನನಂತುತ್ತರಾಭಿಮುಖನುಂ ವಿಕ್ರಮೈಕ ಸಹಾಯನುಮಾಗಿ ನಡೆಯೆ

ಪರುಷತರಶರಭಕೇಸರಿ ।
ವಿರಾವದಿಂ ಕಿವುಡುವಡಿಸುತುಂ ದೆಸೆಗಳನಾ ॥
ಸರಸಿಯ ತಡಿವಿಡಿದಿರ್ದುದು ।
ಪರುಷಾಟವಿಯೆಂಬ ಪೆಸರರಣ್ಯಮಗಣ್ಯಂ ॥ ೪೬

ವ ॥ ಕುಮಾರನು ಪಾತಾಳದವರೆಗೆ ಮುಳುಗಿ, ಅನಂತರ ದೇವಸರೋವರದಲ್ಲಿ ಮುಳುಗಿ ಮೇಲಕ್ಕೆ ನೆಗೆವ ಐರಾವತದಂತೆ ಮೇಲೆದ್ದನು. ೪೪. ಸೂರ್ಯನು ಉದಯವಾದೊಡನೆ ಆಕಾಶದಲ್ಲಿ ನಕ್ಷತ್ರಗಳು ಮಾಯವಾಗುವಂತೆ, ರಾಜಕುಮಾರನು ಮೇಲೆದ್ದು ಬರುತ್ತಲೆ ಜಲಚರಗಳೆಲ್ಲ ಕೊಳದ ಒಳಗೆ ಅಡಗಿಕೊಂಡವು. ೪೫. ಆ ರಾಜಕುಮಾರನ ಪುಣ್ಯಪ್ರಭಾವವನ್ನು ಏನೆಂದು ಹೇಳಲಿ ? ಆ ಕೊಳದಲ್ಲಿದ್ದ ಮೊಸಳೆ, ಹೆಮ್ಮೀನು, ಹಾವುಗಳು ಯಾವುವೂ ತಮ್ಮ ಉಗ್ರಸ್ವಭಾವವನ್ನು ಆತನ ಮೇಲೆ ತೋರಲಿಲ್ಲ. ವ॥ ಆಗ ವಿಲಾಸದಿಂದ ಅತ್ತಿತ್ತ ಹೊಯ್ದಾಡುತ್ತ ಲೀಲಾಸರೋವರವನ್ನು ದಾಟುವಂತೆ ಆ ಕೊಳವನ್ನು ಸಲೀಲವಾಗಿ ದಾಟಿ, ಅದರ ದಂಡೆಯ ಮೇಲೆ ಕೆಲಕಾಲ ವಿಶ್ರಾಂತಿ ಪಡೆದು ಮಲಯ ಮಾರುತನಂತೆ ಆ ಕುಮಾರನು ಉತ್ತರಕ್ಕೆ ಮುಖಮಾಡಿ, ತನ್ನ ಪರಾಕ್ರಮವೊಂದನ್ನೆ ನಂಬಿಕೊಂಡು ಹೊರಟನು. ೪೬. ಅತ್ಯಂತ ಕರ್ಕಶವಾದ ಧ್ವನಿಗಳಿಂದ ದಿಕ್ಕುಗಳನ್ನೆಲ್ಲ ಕಿವುಡುಗೊಳಿಸುವ ಕ್ರೂರ ಶರಭಗಳಿಂದಲೂ ಸಿಂಹಗಳಿಂದಲೂ ತುಂಬಿದ "ಪರುಷಾಟವಿ"ಯೆಂಬ ಮಹಾ ಅರಣ್ಯವು ಆ ಸರೋವರದ ದಂಡೆಗುಂಟ ಹಬ್ಬಿತ್ತು.

ಕರಿಗಳ ಕಣಿ ಶಬರರ ನಿಧಿ ।
ಮರಗಳ ವಡ್ಡಾಗರಂ ದವಾಗ್ನಿಯ ಸತ್ರಂ ॥
ಹರಿಣಂಗಳ ಹರವರಿ ಕೇ ।
ಸರಿಗಳ ಸರಿ ಪರ್ವಿದಡವಿ ಪಡೆದುದಗುರ್ವಂ ॥ ೪೭

ಅಲ್ಲಿ

ಮರದ ತುದಿಗೋಡುಗಳ್ ಕೊಳೆ ।
ಧರೆಗಲ್ಲುಗುತಿರ್ಪ ತರಳತಾರೆಗಳೆನಿಕುಂ ॥
ಖರಸೂಕರದಂಷ್ಟ್ರಾಹತಿ ।
ಪರಿಸ್ಫುಟದ್ವೇಣುಮುಕ್ತಮುಕ್ತಾನಿಕರಂ ॥ ೪೮

ನಡಪಾಡುವ ವನದೇವಿಯ ।
ರಡಿಯೂಡಿದಲಕ್ತಕದ್ರವಂ ಪತ್ತಿದವೋಲ್ ॥
ಕಡುಗೆಂಪನಾಳ್ದುವೊಂದೊಂ ।
ದೆಡೆ ವನಚರವಿದ್ಧಮೃಗಗಣಾರುಣಜಳದಿಂ ॥ ೪೯

ಮದಗಂಧಸಾರಸಪ್ತ ।
ಚ್ಛದಂಗಳಿಂ ಪುದಿದು ಬೆಳೆದ ತಾಪಿಂಛದ ಪೆ ॥
ರ್ವೊದಱ ಕರಿಶಂಕೆಯಿಂ ಪಾ ।
ಯ್ದದಱಕೊಳ್ ಹರಿವಿತತಿ ಬಂಜೆವಡಿಪುದು ಮುಳಿಸಂ ॥ ೫೦

೪೭. ಆ ಅದ್ಭುತವಾದ ಕಾಡು ಆನೆಗಳ ಜನ್ಮಸ್ಥಾನ, ಬೇಡರಿಗೊಂದು ನಿಧಿ, ತರುಮರಗಳಿಗೆ ಆಶ್ರಯಸ್ಥಾನ, ಕಾಡುಗಿಚ್ಚಿಗೆ ನಿವಾಸಸ್ಥಾನ, ಜಿಂಕೆಗಳಿಗೆ ವಿಲಾಸದ ಆಗರ, ಸಿಂಹಗಳಿಗೆ ನೆಲೆ ಎನಿಸಿತ್ತು. ಅಲ್ಲಿ– ೪೮. ಮರಗಳ ತುದಿಗೊಂಬುಗಳ ತಾಕಲಾಟದಿಂದ ಭೂಮಿಗೆ ಉದುರಿ ಬೀಳುತ್ತಿರುವ ನಕ್ಷತ್ರಗಳೋ ಏನೊ ಎಂಬಂತೆ, ಅಲ್ಲಿಯ ಕಾಡು ಹಂದಿಗಳ ಹರಿತವಾದ ಕೋರೆಗಳ ಹೊಡೆತಕ್ಕೆ ಸೀಳಿದ ಬಿದಿರುಗಳಿಂದ ಮುತ್ತುಗಳು ರಾಶಿಯಾಗಿ ಬೀಳುತ್ತಿದ್ದವು. ೪೯. ನಡೆದಾಡುವ ವನದೇವತೆಗಳ ಅಂಗಾಲಿನ ಅಲತಿಗೆಯ ರಸ ಹತ್ತಿತೋ ಏನೋ ಎಂಬಂತೆ ವನದಲ್ಲಿಯ ಒಂದೊಂದು ಪ್ರದೇಶ ಬೇಡರಿಂದ ಗಾಯಗೊಂಡ ಜಿಂಕೆಗಳ ರಕ್ತದಿಂದ ಕೆಂಪಾಗಿತ್ತು. ೫೦. ಮದೋದಕದಂತೆ ಗಂಧವುಳ್ಳ ಏಳೆಬಾಳೆಗಳಿಂದ ಕೂಡಿಕೊಂಡು ಬೆಳೆದ ಹೊಂಗೆಮರಗಳ ದಟ್ಟವಾದ ಹೊದರನ್ನು ಕಂಡು, ಅದೊಂದು ಆನೆಯೆಂಬ ಭ್ರಾಂತಿಯಿಂದ ಸಿಂಹಗಳು ಬಂದು ಅದರ

ಅತಿನಿಶಿತದರ್ಭಸೂಚೀ ॥
ಹತಿಗಳ್ಕಿದ ತೆಱದಿನುಗ್ರಕರನತುಳವನ ॥
ಸ್ವತಿಸಂಕೀರ್ಣವೆನಿಪ್ಪೀ ।
ವಿತತಾಟವಿಯಲ್ಲಿ ಸಲಿಸನೆಂದುಂ ಕರಮಂ ॥ ೫೧

ಬಿಗಿದಡರೆ ಸುತ್ತಿ ಮರನಂ ।
ಮೊಗಂಗಳಂ ನೆಗಪಿ ಸುಯ್ವ ಶ್ವಯುನಿಕರದ ಮೇ ॥
ಗೊಗೆವ ನಿಡುಸುಯ್ಯ ಕಡುವೆಂ ।
ಕೆಗಳಿಂ ಕಳಿಪುವುವು ಕಪಿಗಳದಱಿಕೊಳ್ ಹಿಮಮಂ ॥ ೫೨

ಮತ್ತಮಾಮಹಾವನಂ ಯೌವನದಂತೆ ಮದನೋತ್ಕಳಿಕಾಕಮನೀಯಮುಂ ಚಿತ್ರಕಾಯಶೋಭಾಪ್ರಾಯಮುಂ, ಕಾಂತಾಕದಂಬದಂತೆ ಲೋಹಿತಚಂದನಾಲಂಕೃತಮುಂ ತಮಾಲಪತ್ರಶೋಭಿತಮುಂ, ಸನ್ನದ್ಧಸಪ್ತಿಯಂತೆ ಖಲೀನಶಾಖಾಮುಖಮುಂ ಉಪಕಂಠಚಳಚ್ಚಾಮರಮುಂ, ತಾಳಪಾತವಿಧಿಯಂತೆ

ಮೇಲೆರಗಿ ತಮ್ಮ ಕ್ರೋಧವನ್ನು ವ್ಯರ್ಥವಾಗಿ ಪ್ರಯೋಗಿಸುತ್ತಿದ್ದುವು. ೫೧. ಅಲ್ಲಿಯ ದರ್ಭೆಗಳ ಹರಿತವಾದ ಮೊನೆಗಳು ಚುಚ್ಚಬಹುದೆಂಬ ಭೀತಿಯಿಂದಲೊ ಏನೊ ಎಂಬಂತೆ, ಅಸದೃಶ್ಯವಾಗಿ ಸಸ್ಯಗಳಿಂದ ಇಡಿಕಿರಿದ ಆ ಕಾಡಿನಲ್ಲಿ ಸೂರ್ಯನು ಎಂದೂ ತನ್ನ ಕೈಯಿಡಲೊಲ್ಲನು. (ಸೂರ್ಯಕಿರಣಗಳು ಅಲ್ಲಿ ಪ್ರವೇಶಿಸುತ್ತಿರಲಿಲ್ಲ). ೫೨. ಮರಕ್ಕೆ ಅಡರಿ ಸುತ್ತಿಕೊಂಡು ಮೇಲೆ ಮುಖಮಾಡಿ ಬುಸುಗುಡುವ ಹೆಬ್ಬಾವುಗಳ ನೀಳವಾದ ಉಸಿರಿನ ತೀವ್ರವಾದ ಬೆಂಕಿಯಿಂದ ಕೋತಿಗಳು ತೀವ್ರವಾದ ಚಳಿಯ ಬಾಧೆಯನ್ನು ಕಳೆದುಕೊಳ್ಳುವುವು. ವ॥ ಆ ವನವು ತಾರುಣ್ಯದಂತೆ "ಮದನೋತ್ಕಳಿಕಾಕಮನೀಯ"ವೂ (೧. ಕಾಮೋತ್ಕಂಠತೆಯಿಂದ ರಮ್ಯವಾದುದು. ೨. ಬಕುಳವೃಕ್ಷದ ಮೊಗ್ಗುಗಳಿಂದ ಚೆಲುವಾದುದು). "ಚಿತ್ರಕಾಯಶೋಭಪ್ರಾಯ"ವೂ (೧. ಸುಂದರವಾದ ದೇಹವುಳ್ಳುದು. ೨. ಹುಲಿಗಳಿಂದ ವಿಜೃಂಭಿಸುವುದು) ; ಸ್ತ್ರೀಯರಂತೆ "ಲೋಹಿತ ಚಂದನಾಲಂಕೃತ"ವೂ (೧. ಕುಂಕುಮ ಕೇಸರಿಯ ಅಲಂಕಾರವುಳ್ಳುದು. ೨. ರಕ್ತಚಂದನ ವೃಕ್ಷಗಳಿಂದ ಶೋಭಿಸುವುದು); "ತಮಾಲ ಪತ್ರ ಶೋಭಿತ"ವೂ (೧. ಹಣೆಬೊಟ್ಟಿನಿಂದ ಚೆಲುವಾದುದು. ೨. ಹೊಂಗೆಯ ಎಲೆಗಳಿಂದ ಅಂದವಾಗಿರುವುದು); ಸಜ್ಜುಗೊಳಿಸಿದ ಕುದುರೆಯಂತೆ "ಖಲೀನಶಾಖಾಮುಖ"ವೂ (೧. ಬಾಯಲ್ಲಿ ಕಡಿವಾಣವುಳ್ಳುದು, ೨. ಆಕಾಶದೆತ್ತರಕ್ಕೆ ಬೆಳೆದು ಅದರಲ್ಲಿಯೆ ಅಡಗಿದಂತಿರುವ ಕೊಂಬೆಗಳುಳ್ಳುದು), ಉಪಕಂಠಚಳಚ್ಚಾಮರವೂ (೧. "ಕೊರಳ ಬಳಿಯಲ್ಲಿ ಅಲುಗಾಡುವ ಚಾಮರವುಳ್ಳುದು. ೨. ಬಳಿಯಲ್ಲಿಯೆ ಹೊಯ್ದಾಡುವ ಕೇದಗೆ ಹೊಡೆಗಳುಳ್ಳದು); ತಾಳ ಹಿಡಿಯುವ ಕ್ರಮದಂತೆ "ಶಮ್ಯಾರಮ್ಯ"ವೂ (೧. ತಾಳವಾದ್ಯಗಳಿಂದ ಇಂಪಾದುದು. ೨. ಬನ್ನಿಮರಗಳಿಂದ ಶೋಭಿಸುವುದು) "ತಳೋಪಲಾತ"ವೂ (೧. 'ತಳ'ವೆಂಬ ತಾಳಭೇದದಿಂದ ಕೂಡಿದುದು. ೨. ತಾಳೆ ಮರಗಳುಳ್ಳುದು), ಯುದ್ಧಭೂಮಿಯಂತೆ "ಚಮೂರಚಿತ

**ಶಮ್ಯಾರಮ್ಯಮುಂ ತಳೋಪಲಾತಮುಂ, ರಣಾಂಗಣದಂತೆ ಚಮೂರಚಿತಪ್ರಹರಣವಿಶೀರ್ಣರೂಪಮುಂ ದಂತಿದಾನವವಿಲೀನಶಿಲೀಮುಖಮುಂ ಪಾಂಡವಪ್ರಕರದಂತಾತ್ತಭೀಮನಕುಲದ್ರುಪದಮುಂ ಅರ್ಜುನೋರ್ಜಿತಮುಂ, ನಾಕಿನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಮತರ್ಕ್ಯಗೋಚರಮುಂ, ಅಸಂಯುತಹಸ್ತಸಮುದಯದಂತೆ ಆತ್ತಕಪಿತ್ಥಮುಂ ತಾಮ್ರಚೂಡಾವಲೀಢಮುಂ ಕ್ಷೇತ್ರಾಕರ್ಷ ದಂತೆಪೋತ್ರಿಪೋತ್ರಾಹತಧರಣಿತಳಮುಂ ಗೃಹೀತಗೋಲಾಂಗೂಲಮುಂ, ಗಗನಮಂಡಲ**

ಪ್ರಹರಣ ವಿಶೀರ್ಣರೂಪ"ವೂ (೧. ಸೈನ್ಯಗಳ ಕಾದಾಟದಿಂದ ಛಿನ್ನ ವಿಚ್ಛಿನ್ನವಾದ ದೇಹಗಳಿಂದ ತುಂಬಿದುದು. ೨. ಹುಲಿಗಳು ಹೊಡೆದು ಹಾಕಿದುದರಿಂದ ತುಂಡು ತುಂಡಾದ ಪ್ರಾಣಿಗಳ ಶರೀರಗಳುಳ್ಳುದು), "ದಂತಿದಾನವಿಲೀನ ಶಿಲೀಮುಖ"ವೂ (ಆನೆಗಳ ಮದೋದಕದಲ್ಲಿ ಮುಳುಗಿದ ಬಾಣಗಳುಳ್ಳುದು. ೨. ಆನೆಗಳ ಮದೋದಕದಲ್ಲಿ ಆಸಕ್ತವಾದ ದುಂಬಿಗುಳುಳ್ಳುದು); ಪಾಂಡವರ ಸಮೂಹದಂತೆ "ಅತ್ತಭೀಮ ನಕುಲ ದ್ರುಪದ"ವೂ (೧. ಭೀಮಸೇನ, ನಕುಲ ಮತ್ತು ದ್ರುಪದ ರಾಜರನ್ನೊಳಗೊಂಡುದು, ೨. ಉಗ್ರವಾದ ಮುಂಗುಸಿ ಗಳಿಂದಲೂ, ಮರದ ಕಾಂಡಗಳಿಂದಲೂ ಕೂಡಿದುದು); "ಅರ್ಜುನೋರ್ಜಿತ"ವು (೧. ಅರ್ಜುನನೆಂಬ ಮೂರನೆಯ ಪಾಂಡುಕುಮಾರನಿಂದ ಶೋಭಿಸುವುದು. ೨. ಮತ್ತಿಮರಗಳಿಂದ ಅಂದವಾದುದು); ಸ್ವರ್ಗಲೋಕದಂತೆ "ಅನೂನಾಪ್ಸರೋಗಣ ಪ್ರಣೂತ"ವೂ (೧. ಶ್ರೇಷ್ಠವಾದ ಅಪ್ಸರೆಯರ ಸಮುದಾಯದಿಂದ ಮಿಗಿಲೆನಿಸುವುದು. ೨. ಅತಿಶಯವಾದ ಅನೇಕ ಸರೋವರಗಳಿಂದ ಕೂಡಿದುದು), "ಅತರ್ಕ್ಯ ಗೋಚರ" ವೂ (೧. ಊಹಿಸಲಾರದಷ್ಟು ನಕ್ಷತ್ರಗಳುಳ್ಳುದು, ೨. ಅಸಂಖ್ಯವಾದ ಪಕ್ಷಿಗಳ ಸಂಚಾರವುಳ್ಳುದು); ನೃತ್ಯದಲ್ಲಿಯ ಅಸಂಯುತ ಹಸ್ತದಂತೆ (ಒಂದೇ ಕೈಯಿಂದ ಅಭಿನಯಿಸುವಿಕೆಯಂತೆ) "ಆತ್ತಕಪಿತ್ಥ"ವೂ (೧. ಹೆಬ್ಬೆರಳು ತೋರುಬೆರಳುಗಳ ತುದಿಗಳನ್ನು ಸೇರಿಸಿದ ಮುದ್ರೆಯುಳ್ಳುದು. ೨. ಬೆಳವಲ ಮರಗಳಿಂದ ಕೂಡಿದುದು) "ತಾಮ್ರಚೂಡಾ ವಲೀಢ"ವೂ (೧. ನಡುಬೆರಳು ಹೆಬ್ಬೆರಳುಗಳ ತುದಿಗಳನ್ನು ಸೇರಿಸಿ, ತೋರುಬೆರಳನ್ನು ಬಾಗಿಸಿ ಉಳಿದೆರಡು ಬೆರಳುಗಳನ್ನು ಪಸರಿಸುವ ಮುದ್ರೆಯಿಂದ ಕೂಡಿದುದು, ೨. ಹುಂಜಗಳನ್ನು ಒಳಗೊಂಡುದು); ಹೊಲದ ಉಳುಮೆಯಂತೆ "ಪೋತ್ರಿ ಪೋತ್ರಾಹತ ಧರಣಿತಳ" (೧. ನೇಗಿಲ ಕುಡದಿಂದ ಅಗೆದ ನೆಲವುಳ್ಳುದು. ೨. ಕಾಡುಹಂದಿಯ ಕೋರೆಯಿಂದ ಅಗೆದ ನೆಲವುಳ್ಳುದು), "ಗೃಹೀತಗೋಲಾಂಗೂಲ"ವೂ (೧. ಮುನ್ನಡೆಸುವುದಕ್ಕಾಗಿ ಎತ್ತುಗಳ ಬಾಲ ಹಿಡಿದು ಅದುಮುವಿಕೆ. ೨. ಮುಸುವಗಳನ್ನು ಒಳಗೊಂಡುದು); ಆಕಾಶಮಂಡಲದಂತೆ "ಋಷಾಕೀರ್ಣ"ವೂ (೧. ನಕ್ಷತ್ರಭರಿತವಾದುದು ೨. ಕರಡಿಗಳಿಂದ ತುಂಬಿದುದು), "ಕುಟಜ ಕುಜವಿಭ್ರಾಜಿತ"ವೂ (೧. ಅಗಸ್ತ್ಯ ನಕ್ಷತ್ರದಿಂದಲೂ, ಮಂಗಳ ಗ್ರಹದಿಂದಲೂ ಶೋಭಿಸುವುದು. ೨. ಕೊಡಸಿಗೆ ಗಿಡ ಗಳಿಂದ ಅಂದವಾದುದು); ಜಾಂಬೂನದ ಪ್ರದೇಶದಂತೆ "ಅಷ್ಟಾಪದೋತ್ಪತ್ತಿ ಸ್ಥಾನ"ವೂ

ದಂತೆ ಋಕ್ಷಾಕೀರ್ಣಮುಂ ಕುಟಜಕುಜವಿಭ್ರಾಜಿತಮುಂ, ಜಾಂಬೂನದಪ್ರದೇಶದಂತೆಅಷ್ಟಾಪದೋತ್ಪತ್ತಿಸ್ಥಾನಮುಂ ಅಪರಿಮಿತಕುಶಪ್ರಸರಮುಂ, ಸಭಾಸದನದಂತೆ ವೇತ್ರಾಸನಾಧಿಷ್ಠಿತರಾಜರಾಜಿತಮುಂ, ಸ್ವರಸಮುದಯದಂತೆ ನಿಷಾದನಿಷೇವ್ಯಮುಂ, ಆರಾಧಕನಂತಕ್ಷಮಾಲಾಗಣಿತಜಪೋಪೇತಮುಂ, ರಾಜ್ಞೀನಿವಾಸದಂತೆ ಜರತ್ಕಂಚುಕಿಶತೋದಂಚಿತಮುಂ, ನಾಟಕಪ್ರಕರದಂತೇಹಾಮೃಗೋಪಗೂಹಿತಮುಂ, ಅಭಿನಯದಂತನೇಕಾಹಾರ್ಯಕನಿವಿಷ್ಟಮುಂ, ಭೈರವಾವಳಿಯಂತೆ ರುರಪರಿಚಿತಮುಂ, ಪಿತಾಮಹಾನನದಂತೆ ಸಾಮಜಪದಾಭಿರಾಮಮುಂ ; ಸ್ಥಾಣುನಿವಸನಮಾಗಿಯುಂ ಅಪರ್ಣಾನ್ವಿತಮಲ್ತು; ಬಹುಳ

(೧. ಚಿನ್ನವು ಹುಟ್ಟುವ ಸ್ಥಳ. ೨. ಅಡವಿಮಲ್ಲಿಗೆಗಳ ಜನ್ಮಸ್ಥಾನ); "ಅಪರಿಮಿತ ಕುಶ ಪ್ರಸಾರ"ವೂ (೧. ಅಳತೆಗೆಟ್ಟ ನೀರಿನ ಹರಹುಳ್ಳದು. ೨. ಅತಿಶಯವಾದ 'ಕುಶ'ವೆಂಬ ಹುಲ್ಲಿನ ಸಮೃದ್ಧಿಯುಳ್ಳದು); ಒಡ್ಡೋಲಗದಂತೆ "ವೇತಾಸನಾಧಿಷ್ಠಿತ ರಾಜರಾಜಿತ" (೧. ಬೆತ್ತದ ಪೀಠಗಳಲ್ಲಿ ಕುಳಿತ ರಾಜರಿಂದ ಶೋಭಿಸುವುದು. ೨. ಬಿದಿರು ಮತ್ತು ಪೀತನಾಲ ವೃಕ್ಷಗಳಿಂದ ಅಂದವಾದುದು); ಸಂಗೀತಸ್ವರ ಸಮೂಹದಂತೆ "ನಿಷಾದನಿಷೇವ್ಯ" (೧. ನಿಷಾದವೆಂಬ ಸ್ವರವುಳ್ಳದು. ೨. ಬೇಟೆಗಾರರಿಗೆ ನಿವಾಸವಾಗಿರುವುದು); ಆರಾಧಕನಂತೆ "ಅಕ್ಷಮಾಲಾ ಗಣಿತ ಜಪೋಪೇತ" (೧. ಜಪಮಾಲೆಯ ಮಣಿಗಳನ್ನು ಎಣಿಸುತ್ತ ಜಪಮಾಡುವಿಕೆ. ೨. ತಾರೆಯ ಮರಗಳಿಂದಲೂ ಅಸಂಖ್ಯವಾದ ದಾಸವಾಳ ಗಿಡಗಳಿಂದಲೂ ಕೂಡಿಕೊಂಡಿರುವುದು); ರಾಣಿವಾಸದಂತೆ "ಜರತ್ಕಂಚುಕಿಶತೋದಂಚಿತ' (೧. ವೃದ್ಧರಾದ ನೂರಾರು ಕಂಚುಕಿಗಳನ್ನೊಳಗೊಂಡುದು. ೨. ವಯಸ್ಸಾದ ನೂರಾರು ಹಾವುಗಳಿಗೆ ಆಶ್ರಯವಾದುದು); ನಾಟಕ ಸಮೂಹದಂತೆ "ಈಹಾ ಮೃಗೋಪ ಗೂಹಿತ" (೧. ಈಹಾಮೃಗವೆಂಬ ನಾಲ್ಕಂಕದ ರೂಪಕವನ್ನೊಳಗೊಂಡುದು. ೨. ತೋಳಗಳಿಗೆ ಅಡಗಿಕೊಳ್ಳುವ ಸ್ಥಾನವಾಗಿರುವುದು); ಅಭಿನಯದಂತೆ "ಅನೇಕಾಹಾರ್ಯಕನಿವಿಷ್ಟ" (೧. ನಾನಾ ಬಗೆಯ ವೇಷಭೂಷಣಾದಿಗಳನ್ನು ಧರಿಸಿ ಮಾಡುವ ಅಭಿನಯವುಳ್ಳದು. ೨. ಹಲವಾರು ಬಗೆಯ ದಾಳಿಗಳು ನಡೆಯುವುದಕ್ಕೆ ಆಸ್ಪದವಾದುದು); ಭೈರವ ದೇವತೆಗಳ ಸಮೂಹದಂತೆ "ರುರುಪರಿಚಿತ" (೧. ಬಲಿಕೊಡಬೇಕಾದ ರುರು ಎಂಬ ಜಿಂಕೆಗಳ ಪರಿಚಯವುಳ್ಳದು. ೨. ರುರು ಜಿಂಕೆಗಳ ಸಮೂಹವುಳ್ಳದು); ಬ್ರಹ್ಮನ ಮುಖದಂತೆ "ಸಾಮಜ - ಪದಾಭಿರಾಮ" (೧. ಸಾಮವೇದದ ಪಾದಗಳಿಂದ ರಮ್ಯವಾದುದು- ೨. ಆನೆಗಳಿಗೆ ಇಂಬಾದ ನಿವಾಸ ಸ್ಥಾನವಾದುದು; ಹೆಗ್ಗಾಡು) "ಸ್ಥಾಣು ನಿವಸನ" (೧. ಶಿವನ ನೆಲೆವೀಡು. ೨. ಮರದ ಕೊರಡುಗಳುಳ್ಳದು.) ಆಗಿದ್ದರೂ "ಅಪರ್ಣಾನ್ವಿತ"ವಲ್ಲ (೧. ಪಾರ್ವತಿಯಿಂದ ಕೂಡಿಲ್ಲ. ೨. ಎಲೆಗಳಿಲ್ಲದೆ ಇಲ್ಲ) [ಇಲ್ಲಿಂದ ಆರಂಭವಾಗುವ ವಿರೋಧಾಭಾಸದ ಪ್ರಯೋಗಗಳಲ್ಲೆಲ್ಲ ಒಂದನೆಯ ಅರ್ಥದಲ್ಲಿ ವಿರೋಧವು ತೋರಿ, ಎರಡನೆಯ ಅರ್ಥದಲ್ಲಿ ಪರಿಹಾರವಾಗುತ್ತದೆ) "ಬಹಳ ಸತ್ವೋಪೇತ" (೧. ಅತಿಶಯವಾದ ಸತ್ತ್ವಗುಣವುಳ್ಳದು. ೨. ಅನೇಕ ಜೀವಗಳನ್ನು

ಸತ್ತ್ವೋಪೇತಮಾಗಿಯುಂ ತಮೋವಿರಹಿತಮಲ್ತು ; ಮಯೂರಾಧಿರೂಢಮಾಗಿಯುಂ ವಿಶಾಖಾಕರಮಲ್ತು; ಆತ್ತಸಾರಸ್ವತಾತಿಶಯಮಾಗಿಯುಂ ವಿವೇಕಾಕರಮಲ್ತು; ನಿರಂತರಚ್ಛಾಯಾಶೇಷಮಾಗಿಯುಂ ಕೃತಾಂತರೂಪಮಲ್ತು. ಅಂತುಮಲ್ಲದೆಯುಂ

ಪಾತ್ರವಿಕೀರ್ಣಮಾತತಸುತಾಳಧರಂ ವಿವಿಧಾವನದ್ಧವಾ ।
ಸೂತ್ರಿತವಂಶಕಾರನಿಕರಂ ಕಳಕಂಠಸಮೂಹಸಂಶ್ರಿತಂ ॥
ಚಿತ್ರಿತರೂಪಶೋಭೆಗೆಡೆಯಾದುದು ಭಾವಿಸಿನೋಡೆ ನಾಡೆ ತೂ ।
ರ್ಯತ್ರಯಸಂಪ್ರದಾಯಮೆನೆ ಕಾನನಮಾವೃತದಿಕ್ಕುಳಾನನಂ ॥ ೫೩

ಆ ಮಹಾಟವೀಮಧ್ಯದೊಳೊಂದು ಪುಲ್ವಟ್ಟೆವಿಡಿದು ನಡೆಯೆ ಮುಂದೊಂದು ವಿರಳತರತರು ಪ್ರದೇಶದೊಳ್

ಒಳಗೊಂಡುದು) ಆಗಿದ್ದರೂ "ತಮೋವಿರಹಿತ"ವಲ್ಲ (೧. ತಮೋಗುಣವನ್ನು ಬಿಟ್ಟಿಲ್ಲ. ೨. ಕತ್ತಲೆಯಿಲ್ಲದೆ ಇಲ್ಲ); "ಮಯೂರಾಧಿರೂಢ" (೧. ನವಿಲನ್ನು ಏರಿ ಕುಳಿತವನು. ೨. ನವಿಲುಗಳು ಹೆಚ್ಚಾಗಿ ಇರುವುದು) ಆಗಿದ್ದರೂ "ವಿಶಾಖಾಕರ"ವಲ್ಲ (೧. ಷಣ್ಮುಖನ ನಿವಾಸವಲ್ಲ. ೨. ಕೊಂಬೆಗಳಿಲ್ಲದ ಪ್ರದೇಶ ವಲ್ಲ.): "ಆತ್ತಸಾರಸ್ವತಾತಿಶಯ" (೧. ವಾಕ್ಪಟುತ್ವವನ್ನು ಪಡೆದು ಸರಸ್ವತೀ ಭಕ್ತರಿಂದ ಶ್ರೇಷ್ಠವಾದುದು. ೨. ಅನೇಕ ಕಾಡೆಮ್ಮೆ ಹಾಗು ಕಾಡುಕೋಣಗಳಿಂದ ಕೂಡಿದುದು) ಆಗಿದ್ದರೂ "ವಿವೇಕಕಾರ"ವಲ್ಲ (ಜ್ಞಾನದ ನೆಲೆಯಲ್ಲ.) "ನಿರಂತರಚ್ಛಾಯಾಶೇಷ" (೧. ಛಾಯಾ ದೇವಿಯ ಮಕ್ಕಳಲ್ಲಿ ಒಬ್ಬನು. ೨. ದಟ್ಟ ವಾದ ಕತ್ತಲೆಯುಳ್ಳುದು) ಆಗಿದ್ದರೂ "ಕೃತಾಂತರೂಪ"ವಲ್ಲ. (ಯಮನಲ್ಲ). ಅಷ್ಟೆ ಅಲ್ಲದೆ– ೫೩. "ಪಾತ್ರವಿಕೀರ್ಣ"ವೂ (೧. ಅನೇಕ ಪ್ರವಾಹದ ಒಡಲುಗಳುಳ್ಳುದು. ೨. ಹಲವಾರು ನಟರನ್ನೊಳಗೊಂಡುದು), "ಆತತ ಸುತಾಳಧರ"ವೂ (೧. ವಿಸ್ತಾರವಾಗಿ ಹಬ್ಬಿದ ತಾಡವೃಕ್ಷಗಳುಳ್ಳುದು. ೨. ವೀಣೆಯೆ ಮೊದಲಾದ "ತತ" ವೆಂಬ ವಾದ್ಯವನ್ನು ತಾಳವನ್ನೂ ಒಳಗೊಂಡುದು), "ವಿವಿಧಾವನದ್ಧ"ವೂ (೧. ಬಗೆಬಗೆಯ ಪಕ್ಷಿಗಳುಳ್ಳುದು. ೨. ಮೃದಂಗವೆ ಮೊದಲಾದ ವಾದ್ಯಗಳುಳ್ಳುದು), "ಸೂತ್ರಿತ ವಂಶಕಾರ ನಿಕರ"ವೂ (೧. ಹೆಣೆದುಕೊಂಡ ಬಿದಿರು ಮೆಳೆಗಳ ಸಮೂಹವನ್ನೊಳಗೊಂಡುದು. ೨. ಮೇಳವಾಗಿ ನುಡಿಸುವ ಕೊಳಲುಗಳನ್ನು ಅಳವಡಿಸಿಕೊಂಡಿರುವುದು) "ಕಳಕಂಠ ಸಮೂಹ ಸಂಶ್ರಿತ"ವೂ (೧. ಕೋಗಿಲೆಗಳ ಹಿಂಡುಗಳಿಗೆ ಆಶ್ರಯವಾದುದು. ೨. ಮಧುರವಾಗಿ ಹಾಡುವ ಕಂಠಗಳುಳ್ಳುದು) ಆಗಿ, ದಿಗಂತದವರೆಗೆ ಹಬ್ಬಿದ ಆ ಅರಣ್ಯವು ಮೂರು ಬಗೆಯ ತೂರ್ಯ ಸಂಪ್ರದಾಯಗಳನ್ನು ಚಿತ್ರಿಸಿ ತೋರುವಂತೆ ಶೋಭಿಸಿತು ವ॥ ಆ ಹೆಗ್ಗಾಡಿನ ಮಧ್ಯದಲ್ಲಿ ಒಂದು ಕಾಲುದಾರಿಯನ್ನು ಅನುಸರಿಸಿ ರಾಜಕುಮಾರನು ಹೋದನು.

ಪೊಸಪೊದೆಗಟ್ಟುವಂಬುಗಳ ಕುಪ್ಪಿಯನಾವರಿಪಾರ್ದ್ರಜಾಳಮಂ।
ಪಸರಿಪ ಸೆಂಡುಗೋಲನುಡಿಗಟ್ಟುವ ಪೀಲಿಗಳಿಂ ತರಂಗಮಂ॥
ಪೊಸೆಯಿಪ ಬೆತ್ತಗಣ್ಣೆವಲೆಯಂ ಸಮಕಟ್ಟುವ ಬೆಟ್ಟುಗೂಂಟಮಂ।
ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ॥ ೫೪

ಪರಿಕಿಸೆ ವೃಕ್ಷಾರೋಹಣ।
ವರಾಹಚರ್ವಿತಕವೇಣುದಾರಿತಕಂಗಳ್॥
ಕರಮೆಸೆಯೆ ಕಾಮಶಾಸ್ತ್ರದ।
ದೊರೆಯಾದುದು ಶಬರಶಿಶುಗಳುಜ್ಜುಗಮದಱೊಳ್॥ ೫೫

ಮತ್ತಂ ತತ್ಸಮೀಪದ ವಿಶಾಲತಾಲಷಂಡದೊಳ್

ಸ್ಮರಸಮ್ಮೋಹನಧೂಪಧೂಮಕಳಿಕಾಸಂದೋಹಮೋ ಚಿತ್ತಜೋ।
ದ್ಭವವಶ್ಯಾಂಜನಮಂಜರೀನಿಕರಮೋ ಕಾಮತ್ರಿಲೋಕೀಜಯಾ॥

ಮುಂದೆ ಮರಗಳ ದಟ್ಟಣೆಯಿರದ ಒಂದು ಪ್ರದೇಶದಲ್ಲಿ– ೫೪. ಹೊಸ ಬತ್ತಳಿಕೆಗಳನ್ನು ಕಟ್ಟುವ, ಬಾಣಗಳನ್ನು ಕೂಡಿಸಿ ಇಡುವ, ಒದ್ದೆಯಾದ ಬಲೆಯನ್ನು ಆರಲೆಂದು ಹರಡುವ, ಸೆಂದುಗೋಲನ್ನು (?) ಸಿದ್ಧಗೊಳಿಸುವ, ನವಿಲುಗರಿಗಳಿಂದ ತಲೆಕಟ್ಟನ್ನು ಅಲಂಕರಿಸುವ, ಬೆತ್ತದಿಂದ ಕಣ್ಣಿಬಲೆಯನ್ನು ತಯಾರಿಸುವ, ಗೂಟಗಳನ್ನು ಕೆತ್ತಿ ಹರಿತಗೊಳಿಸುವ– ಈ ಬಗೆಯ ಚಟುವಟಿಕೆಗಳಲ್ಲಿ ತೊಡಗಿದ ಬೇಡರ ಸಮುದಾಯದಿಂದ ಒಂದು ಬೇಡರ ಪಾಳ್ಯ ಕಂಗೊಳಿಸಿತು. ೫೫. ಅಲ್ಲಿ ಬೇಡರ ಮಕ್ಕಳು ಮಾಡುತ್ತಿರುವ "ವೃಕ್ಷಾರೋಹಣವೂ" (೧. ಮರವೇರುವುದು. ೨. ಆಲಿಂಗನ ಪ್ರಕಾರಗಳಲ್ಲಿ ಒಂದು), "ವರಾಹ ಚರ್ವಿತಕ"ವೂ (೧. ವರಾಹ ವೆಂಬ ಗಡ್ಡೆಯನ್ನು ತಿನ್ನುವುದು. ೨. ದಂತಕ್ಷತದ ಒಂದು ಬಗೆ). "ವೇಣುವಿದಾರಿತಕ"ವೂ (೧. ಬಿದಿರನ್ನು ಸೀಳುವುದು, ೨. ರತಿಬಂಧಗಳಲ್ಲಿ ಒಂದು ವಿಧ) ಕಾಮಶಾಸ್ತ್ರದ ಪ್ರಯೋಗಗಳಿಗೆ ಸಮನೆನಿಸಿದವು. ವ॥ ಅದರ ಬಳಿಯಲ್ಲಿದ್ದ ವಿಸ್ತಾರವಾದ ತಾಳೆಮರಗಳ ಗುಂಪಿನಲ್ಲಿ– ೫೬. ಮೋಹವುಂಟು ಮಾಡಲೆಂದು ಮನ್ಮಥನು ಹೊತ್ತಿಸಿದ ಧೂಪದ ಹೊಗೆಯ ಸುರುಳಿಗಳ ಸಮು

---

ವೃಷಾರೋಹಣ :– ಎಡಕಾಲೊಳುಂಗುಟಮನೆ ಬಿಡದೆ ಮೆಟ್ಟಿ ಬಲದ ತೊಡೆಯನುಡೆಯೊಳಿಟ್ಟು ನುಡಿಸಿ ಬಾಯ್ಗೆಬಾಯನೊಂದಿಸಿ ಮುಡುಹುವಿಡಿದುಗಳರವಂಗಳೊಡನೆ ಲಲ್ಲೆಗರೆದು ತೆಕ್ಕೆಯೊಡೆಯದವಳ ತೆಱನದು (ಜನವಶ್ಯ ೭–೯).

ವರಾಹಚರ್ವಿತಕ :– ಎರಡು ಮೊಲೆಗಳ ಕೆಳಗೆ ಪಿರಿದು ಪಲ್ಲೊತ್ತು ತಳ್ತಿರಲದೇ ಕ್ರೋಡ ಚರ್ವಿತಂ (ಜನವಶ್ಯ ೭–೩೩).

ವೇಣುವಿದಾರಿತಕ :– ಮೆಲ್ಲನೆ ಮಲಂಗಿ ಸತಿ ನಲ್ಲನ ತೊಡೆಯಂ ಪೆಗಲಲ್ಲಿ ತನ್ನೆರಡು ಕಾಲ್ಗಳನೆ ನೀಡಿ ಪಲ್ಲಟಿಸಿ ಪಲ್ಲಟಿಸಿ ನಿಲ್ಲದಿಡುತೊಂದುತಿರೆ ಪಲ್ಲವಾಧರೆ ವೇಣುವಿದಾರಿತಕಮದು (ಜನವಶ್ಯ ೯–೨೯).

ಕರಶಾತಾಸಿಲತಾಳಿಯೋ ಬಗೆವೊಡೆಂಬಂತಿರ್ದುದಿಂದ್ವಂಕಕ।
ರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆಯೊಳ್ ನಾಡೆಯುಂ ॥ ೫೬

ಮತ್ತೊಂದೆಡೆಯೊಳೊರ್ವಂ ಮೃಗಯಾನಿಮಿತ್ತದಿಂ ಬರುತ್ತುಂ

ವಿಕರಾಳಾಳೋಕನೀಪಜ್ಜಳಗತನಳಿನೀಶ್ಯಾಮನದ್ಬ್ರಾಮ್ಯದೇಕಾ ।
ಸ್ತಕರಾಗ್ರಂ ವೇಣುಬಾಣಾಸನವಿನಿಹಿತಕಕ್ಷಂ ಸಕೌಕ್ಷೇಯಕಸ್ತ್ರೀ ॥
ನಿಕರಂ ಹ್ರಸ್ವಾಸಿಧೇನುಸ್ಥಗಿತಜಘನನಂದೊಪ್ಪಿದಂ ದ್ವೀಪಿಲಾಂಗೂ ।
ಲಕೃತೋಷ್ಣೀಷಂ ಶಿರೋಳಂಕೃತವರವಿಕಸತ್ಕಿಂಕಿರಾತಂ ಕಿರಾತಂ ॥ ೫೭

ಚಕಿತೇಣೀನಯನಾಂಶುವಿಂ ಶ್ರವಣಪೂರೇಂದೀವರಂ ಪುಂಡರೀ।
ಕಕನಚ್ಛಾಯೆಯನೀಯೆ ಬಿಂಬರುಚಿರೋಷ್ಠದ್ಯೋತಿಯಿಂ ವೇಣುಮೌ ॥
ಕ್ತಿಕಹಾರಂ ಗುರುಗುಂಜೆಯೆಕ್ಕಸರಮಂ ಕೀಟಿಸ್ಮಡೆ ಸಂದಳ್ ಪುಳಿಂ।
ದಿ ಕುಚಶ್ರೋಣಿಗಳೆಕ್ಕೆಯಿಂದೆ ತನಿಗೆತ್ತುತ್ತೊಪ್ಪೆ ಪಿಂದೋಪನಂ ॥ ೫೮

ಅಂತು ಪೋಪಲ್ಲಿ

ಇದಿರೊಳ್ ಗರ್ಜಿಸಿ ಪುಲಿ ನಿಲೆ।
ಬೆದಱೆ ಕರಂ ಶಬರಿ ಬರಿಯನಪ್ಪಲೊಡಂ ರೋ ॥
ಪದಿನಲರ್ದುದೊಂದು ಕಣ್ರಾ।
ಗದೆ ಮುಗುಳ್ದುದದೊಂದು ಕಣ್ ವನೇಚರಪತಿಯಾ ॥ ೫೯

ದಾಯವೊ, ವಶೀಕರಣಕ್ಕಾಗಿ ಮನ್ಮಥನು ಸಿದ್ಧಪಡಿಸಿಟ್ಟ ಅಂಜನದ ಕುಪ್ಪೆಗಳ ರಾಶಿಯೊ, ಮೂರು ಲೋಕಗಳನ್ನು ಜಯಿಸುವುದಕ್ಕಾಗಿ ಕಾಮನು ಮಸೆದಿಟ್ಟ ಖಡ್ಗಗಳ ಸಮೂಹವೊ ಏನೋ ಎಂಬಂತೆ ಚಂದ್ರಬಿಂಬದ ಕಲಂಕಸದೃಶವಾದ ಕಪ್ಪುಬಣ್ಣದ ಬೇಡಿತಿಯರ ಗುಂಪು ಮದ್ಯಪಾನದಲ್ಲಿ ಆಸಕ್ತವಾಗಿತ್ತು. ವ॥ ಇನ್ನೊಂದು ಪ್ರದೇಶದಲ್ಲಿ ಒಬ್ಬನು ಬೇಟೆಗೆಂದು ಬರುತ್ತಿದ್ದು– ೫೭. ಕ್ರೂರವಾದ ಕಣ್ಣುಗಳನ್ನು ಬಿಟ್ಟುಕೊಂಡು, ಕನ್ನೈದಿಲೆಯಂತೆ ಕಪ್ಪಾದ ದೇಹಕಾಂತಿಯನ್ನೊಡಗೊಂಡು, ಒಂದು ಕೈಯಲ್ಲಿ ಬಾಣವನ್ನು ಎತ್ತಿ ತಿರುಗಿಸುತ್ತ, ಕಂಕುಳಲ್ಲಿ ಬಿದಿರಿನ ಬಿಲ್ಲನ್ನು ಇಟ್ಟುಕೊಂಡು ಸೊಂಟ ಪಟ್ಟಿಯಲ್ಲಿ ಕಠಾರಿಯನ್ನು ಸಿಕ್ಕಿಸಿಕೊಂಡು, ಹುಲಿಬಾಲದ ಅಲಂಕಾರವುಳ್ಳ ತಲೆಕಟ್ಟಿಗೆ ಕೆಂಪು ಗೋರಂಟೆ ಹೂಗಳನ್ನು ಅಳವಡಿಸಿ, ಬೇಟೆಯ ನಾಯಿಗಳೊಡನೆ ಒಪ್ಪಿದನು. ೫೮. ಬೆದರಿದ ಜಿಂಕೆಯ ಕಣ್ಣಿನಂತೆ ಇರುವ ಕಣ್ಣುಗಳ ಧವಳ ಕಾಂತಿಯಿಂದ ಕಿವಿಯ ಮೇಲಿಟ್ಟುಕೊಂಡ ಕನ್ನೈದಿಲೆ ಬಿಳಿಯ ತಾವರೆಯ ಬೆಡಗನ್ನು ತಾಳುತ್ತಿರಲಾಗಿ, ತೊಂಡೆಹಣ್ಣಿನಂತಹ ತುಟಿಗಳ ಕಾಂತಿಯಿಂದ ಬಿದಿರು–ಮುತ್ತುಗಳ ಹಾರವು ಗುಲಗಂಜಿಯ ಏಕಾವಳಿಗಿಂತ ಮಿಗಿಲಾಗಿ ತೋರುತ್ತಿರಲಾಗಿ, ಸ್ತನಗಳ ಭಾರದಿಂದಲೂ ಪೃಥುವಾದ ನಿತಂಬಗಳ ಘನತೆಯಿಂದಲೂ ನಡೆಯಲಾರದೆ ನಡುಗುತ್ತ ಶಬರಿಯೊಬ್ಬಳು ತನ್ನ ಪ್ರಿಯ ಕರನ ಹಿಂದೆ ಬರುತ್ತ ಒಪ್ಪಿದಳು. ವ॥ ಹಾಗೆ ಹೋಗುತ್ತಿರುವಾಗ– ೫೯. ಇದಿರಲ್ಲಿಯೆ ಒಂದು ಹುಲಿ ಬಂದು ಗುಡುಗುತ್ತ ನಿಲ್ಲಲಾಗಿ, ಶಬರಿಯು

ಅದಲ್ಲದೆಯುಮೊಂದು ಪಲ್ವಲಪ್ರಾಂತದೊಳ್ ಕಾಂತಾರಕಳಭಪ್ರಾಯಪೋತ್ರಿಸಂತಾನದೊಳಗೆ

ಬರಿಗಂಡಂ ಪಿಣಿಲೇಱಿ ರೋಮಮುಡಿದಿರ್ಬೆನ್ನಾಗೆ ಮುಂಗಾಲಗ ।
ಲ್ತರೆ ಬಿರ್ಕುರ್ವೆ ಮೊಗಂ ಕರಂ ಪೆಗಲ ಬಿಣ್ಪಿಂ ಜೋಲ್ವಬಾಲಂಮುಱುಂ ॥
ಕಿರೆ ಬಂಬಲ್ಗಡಿವಂ ಪೊದಟ್ದಗಸೆವೂಗೊಂಬೊಪ್ಪೆ ಕೋಟ್ಟುಟ್ಟಿ ಪೆ ।
ರ್ಪೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ತೇಕರಂ ಸೂಕರಂ ॥ ೬೦

ಬೇಱೊಂದೆಡೆಯೊಳ್

ಗುರುನಿದ್ರಾಭಂಗಜಭ್ರೂಕುಟಿವಿಕಟಲಲಾಟಂ ಜಪಾಪಾಟಳಾಪಾಂ ।
ಗರುಚಂ ವೇಶಂತಶಯ್ಯಾಪರಿಮಿಳಿತಲಸತ್ಕರ್ದಮಾರ್ದ್ರಾಂ ಬೃಹತ್ಕಂ ॥
ಧರಕಂಡೂಬಂಧನೋಲ್ಲೇಖನಮಳಿನಿತಶಾಖಿಪ್ರತಾನಪ್ರಕಾಂಡಂ ।
ನೆರೆದಿರ್ದತ್ತೊಂದು ನಾನಲ್ವಿಡಿದು ಮಹಿಷವೃಂದಂ ಯಥಾಸ್ವೇಚ್ಛೆಯಿಂದಂ ॥ ೬೧

ಆ ಮಹಾಮಹಿಷಮಂಡಲಮಿರ್ದುದಲ್ಲದೆಯುಂ

ನೆರೆದೇಟ್ತಿಂದತ್ತು ತೀವ್ರಾನಿಳಭಯವಶದಿಂದಲ್ಲಿಗಾನೀಳಮೇಘೋ ।
ತ್ಕರಮೆಂಬಂತಿರ್ದುದಾಬೃಂಹಿತರುತಿ ಮೊಟಗಂ ಪಿಂಗಳಾಪಾಂಗರುಗ್ಮಂ ॥
ಜರಿಯುದ್ಯದ್ವಿದ್ಯುತೋದ್ಯೋತಮನವಿರಳದಾನಂಗಳದ್ವರ್ಷಮಂ ಪೋ ।
ಲ್ತಿರೆ ವೇಲ್ಲತ್ಸಲ್ಲಕೀಸಂಕುಲವೆನಿಪೆಡೆಯೊಳ್ ಹಸ್ತಿಯೂಥಂ ವನೋತ್ಥಂ ॥ ೬೨

ಗಾಬರಿಯಾಗಿ ತನ್ನ ಪ್ರಿಯಕರನ ಪಕ್ಕೆಯನ್ನು ತಬ್ಬಿಕೊಂಡಳು; ಆಗ ಆ ಶಬರನ ಒಂದು ಕಣ್ಣು ಸಂತೋಷದಿಂದ ಅರಳಿತು, ಇನ್ನೊಂದು ಕಣ್ಣು ರೋಷದಿಂದ ಕೆಂಪೇರಿತು. ವ॥ ಒಂದು ಕೆಸರಿನ ಹೊಂಡದಲ್ಲಿ ಕಾಡಾನೆಗಳಂತೆ ಕೊಬ್ಬಿದ ಕಾಡುಹಂದಿಗಳ ಹಿಂಡಿನಲ್ಲಿ ೬೦. ಪಕ್ಕೆಯ ಮಾಂಸಖಂಡಗಳು ಉಬ್ಬೆದ್ದು, ಮೈಗೂದಲು ನಿಮಿರಿ ಬೆನ್ನು ಇಮ್ಮಡಿಯಾದಂತೆ ತೋರುತ್ತಿರಲು, ಮುಂಗಾಲುಗಳನ್ನು ಅಗಲಿಸಿ, ಗುರುಗುಡುತ್ತ, ಸ್ಥೂಲವಾದ ದೇಹದಲ್ಲಿ ಜೋಲಾಡುವ ಬಾಲ ಎಲ್ಲೊ ಅಡಗಿದಂತಾಗಿರಲು, ಕೋರೆಗಳಿಂದ ಕುಟ್ಟಿ ತಿವಿದು, ಅಗಸೆಹೂವಿನ ಶಾಖೆಯನ್ನು ಕೆಡವಿ, ಹೇರಳವಾಗಿ ನೊರೆ ಸೂಸುತ್ತ ಕೆಂಗಣ್ಣಿನ ಕಾಡುಹಂದಿ ಕಂಗೊಳಿಸಿತು. ವ॥ ಇನ್ನೊಂದು ಪ್ರದೇಶದಲ್ಲಿ ೬೧. ತಮ್ಮ ಗಾಢನಿದ್ರೆಗೆ ಭಂಗ ಬಂತೆಂದು ಹುಬ್ಬು ಗಂಟಿಕ್ಕಿ ದಾಸವಾಳದ ಹೂವಿನಂತೆ ಕಣ್ಣು ಕೆಂಪಗೆ ಮಾಡಿಕೊಂಡು, ಬಿದ್ದುಕೊಂಡಿದ್ದ ಚಿಕ್ಕಹೊಂಡದ ಕೆಸರು ಮೈಗೆ ಮೆತ್ತಿರಲಾಗಿ, ತಮ್ಮ ತೋರವಾದ ಕತ್ತುಗಳನ್ನು ಮರದ ಕಾಂಡಗಳಿಗೆ ಉಜ್ಜಿ ಉಜ್ಜಿ ಅವುಗಳನ್ನು ಕಪ್ಪುಗೊಳಿಸುತ್ತ, ನಾಣಲು ಹುಲ್ಲನ್ನು ಮೇಯುತ್ತ ಸ್ವೈರವಾಗಿರುವ ಕಾಡುಕೋಣಗಳ ಹಿಂಡು ತೋರಿತು. ವ॥ ಹಾಗೆ ಆ ಕಾಡುಕೋಣಗಳ ಹಿಂಡು ಇದ್ದುದಲ್ಲದೆ– ೬೨. ಉಗ್ರವಾದ ಬೆಂಕಿಗೆ ಅಂಜಿ ಕೊಂಡು ಕರಿಮೋಡಗಳ ಹಿಂಡು ಇಲ್ಲಿಗೆ ನೆರೆದು ಬಂದಿತೊ ಏನೊ ಎಂಬಂತೆ– ತಮ್ಮ ಘೀಂಕಾರದಿಂದ ಮೇಘಗರ್ಜನೆಯನ್ನೂ, ಹೊಂಗೆಂಪು ಕಣ್ಣುಗಳ ಕೊನೆಯಿಂದ

ಅದು ಬಗೆಯೆ ಮಹಾಪ್ರಾಸಾ ।
ದದಂತೆ ಭದ್ರೋಪಲಕ್ಷಿತಂ ಗ್ರಹಕುಳದಂ ॥
ತದು ಮಂದಬಂಧುರಂ ಮ ।
ತ್ತದು ಸಕಲಶಶಾಂಕನಂತೆ ಮೃಗಸಂಸ್ಥಗಿತಂ ॥ ೬೩

ಅಂತಳುಂಬಮಾದ ಮದಸ್ತಂಬೇರಮಕದಂಬದೊಳ್

ಪಸಿದೊಡೆ ಸಲ್ಲಕೀಕಿಸಲಯಂಗಳನೊಯ್ಯನೆ ನೀಡಿ ಮೆಯ್ಯ ತೀಸ್ ।
ಮಸೆದೊಡೆ ಕೋಡೊಳಿಟ್ಟೊರಸಿ ನೀರ್ಗೆಳಸಿರ್ದೊಡೆ ತಂದು ನೀರನೂ ॥
ಡಿಸಿ ನಸೆಯಿಚ್ಚೆಯಾದೊಡೊಡಗೂಡಿ ಬಟಲ್ದೊಡೆ ಕರ್ಣವಾತಮಂ ।
ಪಸರಿಸಿ ತನ್ನ ಕೈಪಿಡಿಯವೊಲ್ ಪಿಡಿಯಂ ಪಿಡಿದಿರ್ದುದೊಂದಿಭಂ ॥ ೬೪

ಲಳಿತವಿಷಾಣಕೋಟಿಗಳಿನೀಡಿಜೆದಾಗಳೆ ತಾಳವಟ್ಟಮಂ ।
ಸೆಳೆದು ತುಡುಂಕಿ ಮತ್ತೆ ಮೊಲೆಯಂ ನಲವಿಂ ಕಡೆವಾಯ ಪಲ್ಲವಂ ॥
ಗಳನೆಳೆಕೊಂಡು ಸೂಸೆ ಪೆಜಗಾಲೆಡೆಯಿಂ ನುಸುಳ್ದೋಡಿ ಕಾಡಿ ಸಂ ।
ಗಳಿಸಿತದೊಂದು ಪಲ್ಲಮಜೆ ತಾಯ್ವಿಡಿಗಂತುಮನಂತಸೌಖ್ಯಮಂ ॥ ೬೫

ಮಿಂಚಿನ ಬೆಳಕನ್ನೂ, ನಿರಂತರವಾಗಿ ಸುರಿಯುವ ಮದೋದಕದಿಂದ ಸುರಿಮಳೆಯನ್ನೂ ಉಂಟುಮಾಡುತ್ತ ತದುಕಿನ ಮರಗಳಿರುವ ಪ್ರದೇಶದಲ್ಲಿ ಆನೆಗಳ ಹಿಂಡು ಕಂಗೊಳಿಸಿತು. ೬೩. ಆ ಆನೆಗಳ ಹಿಂಡು ಭವ್ಯವಾದ ಭವನದಂತೆ "ಭದ್ರೋಪಲಕ್ಷಿತ"ವೂ (೧. ಉಪ್ಪರಿಗೆಗಳಿಂದ ಕೂಡಿದುದು. ೨. 'ಭದ್ರ'ವೆಂಬ ಜಾತಿಯ ಆನೆಗಳನ್ನೊಳಗೊಂಡುದು), ಗ್ರಹಗಳ ಸಮುದಾಯದಂತೆ "ಮಂದಬಂಧುರ"ವೂ (೧. ಶನಿಗ್ರಹದಿಂದ ಶೋಭಿಸುವುದು. ೨. "ಮಂದ"ವೆಂಬ ಜಾತಿಯ ಆನೆಗಳಿಂದ ಒಪ್ಪುವುದು), ಕಲಾಪೂರ್ಣ ಚಂದ್ರನಂತೆ "ಮೃಗ ಸಂಸ್ಥಗಿತ"ವೂ (೧. ಜಿಂಕೆಯ ಆಕಾರದ ಕಲೆಯಿಂದ ಕೂಡಿದುದು, ೨. ಜಿಂಕೆ ಗಳನ್ನು ಒಳಗೊಂಡುದು) ಆಗಿತ್ತು. [ಭದ್ರ, ಮಂದ ಮತ್ತು ಮೃಗ ಎಂಬುವು ವಿಶಿಷ್ಟ ಪ್ರಕಾರದ ಗಜಜಾತಿಗಳು]. ವ॥ ಹೀಗೆ ಅದ್ಭುತವಾದ ಮದ ದಾನೆಗಳ ಹಿಂಡಿನಲ್ಲಿ – ೬೪. ತನ್ನ ನಲ್ಲೆ ಹಸಿದರೆ ತದುಕಿನ ಎಳೆಯ ಚಿಗುರನ್ನು ಮೃದುವಾಗಿ ನೀಡುತ್ತ, ಮೈ ತುರಿಕೆಯಾದರೆ ಕೋರೆಗಳಿಂದ ತೂರಿಸಿ ಶಮನಗೊಳಿಸುತ್ತ, ಬಾಯಾರಿಕೆಯಾದರೆ ನೀರನ್ನು ತಂದು ಕುಡಿಸುತ್ತ, ಕೂಟದ ಬಯಕೆ ಕೆರಳಿದರೆ ಕೂಡಿ ತಣಿಸುತ್ತ, ತನ್ನ ಕಿವಿಗಳಿಂದ ಗಾಳಿಹಾಕಿ ಬೆವರಾರಿ ಸುತ್ತ ಒಂದು ಗಂಡಾನೆಯು ತನ್ನ ಹೆಣ್ಣನ್ನು ಕೈಗನ್ನಡಿಯಂತೆ ಹಿಡಿದುಕೊಂಡಿತ್ತು. ೬೫. ತನ್ನ ಎಳಸಾದ ಕೋರೆಗಳಿಂದ ತಿವಿದಾಡಿ, ತಾಯಿಯ ಕಿವಿಗಳನ್ನು ಎಳೆದು, ಮೊಲೆಯನ್ನು ಅಡಸಿ ಕಚ್ಚಿ, ಬಾಯಲ್ಲಿಯ ಚಿಗುರನ್ನು ಎಳೆದುಕೊಳ್ಳುತ್ತ, ಹಿಂಗಾಲುಗಳ ನಡುವೆ ನುಸುಳಿ ಓಡುತ್ತ– ಹೀಗೆ ಕಾಡುತ್ತಲೆ ಆನೆ ಮರಿ

ಅದಲ್ಲದೆಯುಂ ಮುಂದೆಡೆಯೊಳ್ ಉತ್ತಾಳತಾಳಚೂಳದಿಂ ಬಿೞ್ದೊಡೆದು ಪಸರಿಸುವ ಪಣ್ಣ ರಸದಿಂ ತಳಂಗಳಂ ತೊಯ್ದು ನಕ್ಕುವ ಗೋಳಾಂಗೂಳಂಗಳುಂ, ಒಂದೊಂದೆಡೆಯ ಮುಳ್ಗಿಡುಗಳೊಳ್ ತೊಡರ್ದ ಮೆಯ್ನವಿರ್ ಪಱಿಗುಮೆಂದು ಮಿಡುಕಲೊಲ್ಲದಲ್ಲಿಯೆ ನಿಂದು ಬಿಲ್ಲರ್ಗೆ ತಮ್ಮಿಂ ತಾಮೆ ಪಡುಮಿಗಂಗುಡುವ ಚಮರೀಮೃಗಂಗಳುಂ, ಒಂದೊಂದೆಡೆಯೊಳ್ ಮರದ ಮಱಿಗಳೊಳ್ ಬೞಿದಪ್ಪಿದ ಮಱಿಯನಱಿಸಿ ಮಱುಕದಿಂ ಸೂಟ್ವರ್ಪ ಖಡ್ಗಧೇನುಗಳ ತೊರೆದ ಮೊಲೆಯಿಂದಂಬಿರಿವಿಡಿದು ಸುರಿವ ಪಾಲ್ಗೆ ಪಜ್ಜೆವಿಡಿದು ಪರಿವರಣ್ಯಮಾರ್ಜಾರಪೋತಕಂಗಳುಂ, ಒಂದೊಂದೆಡೆಯೊಳುಡಿದು ಪಲ್ಲಟಂಬಿರ್ದು ಸುರ್ವುಗೆಟ್ಟ ಪುಲ್ಗಳಿಂ ಪರ್ವಿದ ಮೆಯ್ಯ ತೀಂಟೆಗೆ ಪೆರ್ವುಲಿಗಳ್ ಪೊರಳ್ದು ಪೋದುದಂ ಪಿಸುಣ್ಬೇೞ್ವ ಜೀರ್ಣತಾರ್ಣಸ್ಥಳಿಗಳುಂ, ಒಂದೊಂದೆಡೆಯೊಳೊಗೆವ ದಾವಶಿಖಿಯ ಪೊಗೆಗೆ ಬೆಗಡುಗೊಂಡು ಪುೞುಗಳ್ ಬಿಟ್ಟುಪೋದನಟ್ಟಗೊಂಬಿನ ಜೇನಪುಟ್ಟಿಯಂ ಸಾರ್ದು ಪೀರ್ವ ಜತುಕನಿಕರಂಗಳುಂ, ಒಂದೊಂದೆಡೆಯೊಳಡವಿಯಾನೆಗಳಡಿಗೊಂಬುಗೊಂಡ ತದುಕಿನ ಮರದ ಮುಱಿಗಣ್ಗಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ದೊಡರ್ದು ಮಿಡುಕಿ ಕಳವಳಿಪ ಕಳವಿಂಕಸಂಕುಳಂಗಳುಂ, ಒಂದೊಂದೆಡೆಯೊಳುಣ್ಮುವ ಮೆಯ್ಯ ಸುಯ್ಯ ಕಡುಗಂಪಿಂಗೆ ಕವ್ವರೆಗೊಂಡು ಮುಸುಱಿ ಮೊಱೆವ ತುಂಬಿಯ ಬಂಬಲ್ಗೇವಯ್ಸಿ ಬೆಳೆದ ಮೆಳೆಗಳೆಡೆಯೊಳ್ ನುಸುಳ್ದಡಂಗಿ ಪೋಪ ಕತ್ತುರಿಮಿಗದ

ಯೊಂದು ತನ್ನ ತಾಯಿಗೆ ತುಂಬ ಸಂತೋಷವನ್ನೊದಗಿಸಿತು. ವ॥ ಅದಲ್ಲದೆ- ಮುಂದೆ ಒಂದು ಪ್ರದೇಶದಲ್ಲಿ ಎತ್ತರವಾದ ತಾಳೆಮರದ ತುದಿಯಿಂದ ಬಿದ್ದ ಹಣ್ಣು ಒಡೆದು ಅದರ ರಸ ಹರಡಲಾಗಿ ಅದರಲ್ಲಿ ಕೈಯೊಡ್ಡಿ ನೆಕ್ಕುವ ಮುಸುವಗಳು; ಒಂದೊಂದು ಕಡೆ ಮುಳ್ಳುಗಿಡಗಳಲ್ಲಿ ಸಿಕ್ಕಿಕೊಂಡು, ಮೈಗೂದಲು ಹರಿದಾವೆಂದು ಮಿಸುಕಾಡದೆ ಅಲ್ಲಿಯೆ ನಿಂತು, ಬಿಲ್ಲರಿಗೆ ತಮ್ಮಿಂದ ತಾವೆ ಕೈಸೆರೆಯಾಗುವ ಚಮರೀಮೃಗಗಳು; ಒಂದೊಂದೆಡೆಗೆ ಮರದ ಮರೆಯಲ್ಲಿ ಹಾದಿ ತಪ್ಪಿಸಿಕೊಂಡ ಮರಿಯನ್ನು ಹುಡುಕುತ್ತ ಅಲೆದಾಡುವ ಖಡ್ಗಧೇನುಗಳ ತೊರೆದ ಮೊಲೆಯಿಂದ ಧಾರೆಯಿಟ್ಟ ಹರಿದ ಹಾಲಿನ ಜಾಡನ್ನು ಅನುಸರಿಸಿ ನೆಕ್ಕುತ್ತ ಹೊರಟ ಕಾಡುಬೆಕ್ಕಿನ ಮರಿಗಳು; ಒಂದೊಂದು ಎಡೆಯಲ್ಲಿ ಕತ್ತರಿಸಿ ಹೊರಳಿಬಿದ್ದು ಬಾಡಿಹೋದ ಹುಲ್ಲುಗರಿಗಳಿಂದ- ಇಲ್ಲಿ ಹುಲಿಗಳು ಬಂದು ಮೈ ತೀಟೆಗೆ ಹೊರಳಾಡಿ ಹೋಗಿವೆಯೆಂದು ತಿಳಿಸುವ ತೃಣ ಪ್ರದೇಶಗಳು; ಒಂದೊಂದು ಕಡೆ ಕಾಡುಗಿಚ್ಚಿನ ಹೊಗೆಗೆ ಗಾಬರಿಯಾಗಿ ನೊಣಗಳೆಲ್ಲ ಬಿಟ್ಟುಹೋದ ಮರದ ಶಾಖೆಯ ಜೇನುಹುಟ್ಟನ್ನು ಹಿಡಿದುಕೊಂಡು ಅದರ ರಸವನ್ನು ಹೀರಿಕೊಳ್ಳುತ್ತಿರುವ ಬಾವಲಿಗಳ ಹಿಂಡುಗಳು; ಒಂದೊಂದು ಕಡಗೆ ಕಾಡಾನೆ ಗಳು ಮುರಿದೊಗೆದ ತದುಕಿನ ಮರದ ಕೆಳಮಟ್ಟದ ಶಾಖೆಗಳು; ಅವುಗಳ ಕಣ್ಣೊಳಗಿಂದ ಒಸರುವ ಅಂಟನ್ನು ಕಂಡು ಬೆಂಕಿಯೆಂಬ ಭ್ರಾಂತಿಯಿಂದ ಗಾಬರಿಯಾಗಿ ಕಳವಳಗೊಳ್ಳುವ ಗುಬ್ಬಿಗಳ ಹಿಂಡುಗಳು; ಒಂದೊಂದು ಪ್ರದೇಶದಲ್ಲಿ ದೇಹದ ಹಾಗು ಉಸಿರಿನ ತೀವ್ರವಾದ ಪರಿಮಳಕ್ಕೆ ಮರುಳಾಗಿ ಹಿಂಡುಗಟ್ಟಿ ಆವರಿಸುವ ದುಂಬಿಗಳ ಹಾವಳಿಗೆ ಬೇಸತ್ತು ಇಕ್ಕಟ್ಟಾದ ಮೆಳೆಗಳ ಒಳಗೆ ನುಸುಳಿ

ಮೊತ್ತಂಗಳುಂ, ಅಗುರ್ವುವಡೆಯೆ ನೃಪತನೂಜಂ ವಿಪಿನಚರವಿವಿಧಸತ್ವಂಗಳಂಗಚೇಷ್ಟಾಭಾವಂಗಳಂ ಭಾವಿಸಿ ವಿಸ್ಮಯಂಬಡುತ್ತುಂ ಪೋಗೆವೋಗೆ ಮರೋಭಾಗದೊಳ್,

ಶರಭಗ್ರಸ್ತೋತ್ಥಕಂಠೀರವಕಟುರಟನೋತ್ಥಪ್ರತಿಧ್ವಾನವದ್ಗ ।
ಹ್ವರದುಶ್ಶ್ರಾವಶ್ರವಂ ನಿಷ್ಠುರಗರಳರಸಾರ್ದ್ರಸ್ಫುರಜ್ಜಿಹ್ವದರ್ವೀ ॥
ಕರದುರ್ದರ್ಶಂ ಸಮುತ್ಕಂಟಕವಿಟಪಿಲತಾವೀರುದತ್ಯಂತವೃತ್ತ್ಯ ।
ತ್ಕರದುರ್ವೇಶಂ ಮನಕ್ಕದ್ಭುತರಸದೊದವಂ ತಂದುದಂದೊಂದಗೇಂದ್ರಂ ॥ ೬೬

ಅಂತು ತೋಱುತಿರ್ದ ವಂಶಧರಮೆಂಬ ಗಿರಿವರಮಂ ಕಂಡೆಯ್ದೆವರ್ಪಾಗಳ್

ಆ ಕುವರನ ಬಂದೊಸಗೆಯೊ ।
ಳೋಕುಳಿಯಾಡಿದಪುದಚಲಮೆನೆ ಸೊಗಯಿಸಿದ ॥
ತ್ತಾಕೀರ್ಣಧಾತುನಿರ್ಝರ ।
ಶೀಕರತತಿ ನೆಗೆದು ನಗದ ನಾಲ್ಕುಂ ದೆಸೆಯೊಳ್ ॥ ೬೭

ಮತ್ತಂ

ಈಗಳೆ ಸಮನಿಸಿದಪ್ಪುದು ।
ರಾಗಂ ನಿನಗೆನ್ನೊಳೆಂದು ನೃಪತನಯನನಂ ॥
ತಾಗಿರಿ ಕರೆವಂತಾದುದು ।
ಕೇಗುವ ಸೋಗೆಗಳ ತಾರಕೇಕಾರವದಿಂ ॥ ೬೮

ಅಡಗಿಕೊಳ್ಳುವ ಕಸ್ತೂರಿಮೃಗದ ಸಮೂಹಗಳು : –ಹೀಗೆ ಅರಣ್ಯವು ಅತಿಶಯವಾಗಿರಲು ರಾಜಕುಮಾರನು ಕಾಡಿನಲ್ಲಿಯ ನಾನಾ ಬಗೆಯ ಪ್ರಾಣಿಗಳ ಅಂಗಚೇಷ್ಟೆಗಳನ್ನು ಗಮನಿಸುತ್ತ, ವಿಸ್ಮಯಪಡುತ್ತ ಮುಂದೆ ಸಾಗಲಾಗಿ, ೬೬. ಶರಭದ ಹಿಡಿತಕ್ಕೆ ಸಿಕ್ಕಿ ಗೋಳುಗರೆವ ಸಿಂಹದ ಕರ್ಕಶವಾದ ಧ್ವನಿ ಮರುದನಿಗೊಂಡು ಕಿವಿಗಳನ್ನು ಕಿವುಡುಗೊಳಿಸುವ ಗವಿಗಳಿಂದಲೂ, ತೀವ್ರವಾದ ವಿಷರಸದಿಂದ ಉಗ್ರವಾಗಿ ನಾಲಗೆ ಚಾಚುತ್ತ ಕಣ್ಣಿಗೆ ಭಯಾನಕವಾದ ಮಹಾಸರ್ಪಗಳಿಂದಲೂ, ಕಠೋರವಾಗಿ ಸೆಡೆದುನಿಂತ ಮುಳ್ಳುಗಳುಳ್ಳ, ಮರ ಬಳ್ಳಿ–ಪೊದೆಗಳಿಂದಲೂ, ಇಲ್ಲಿ ಒಳಹೋಗುವುದೇ ದುಸ್ತರವೆಂಬಂತೆ ಅದ್ಭುತವಾದ ಬೆಟ್ಟವೊಂದು ಕಣ್ಣಿಗೆ ಬಿದ್ದಿತು. ವ॥ ಹಾಗೆ ಗೋಚರವಾದ ವಂಶಧರವೆಂಬ ಉನ್ನತವಾದ ಬೆಟ್ಟವನ್ನು ಕಂಡು ಅದರ ಬಳಿಗೆ ಬರುತ್ತಿರಲಾಗಿ– ೬೭. ಆ ಕುಮಾರನು ತನ್ನ ಬಳಿಗೆ ಬಂದ ಸಂತೋಷಕ್ಕಾಗಿ ಆ ಬೆಟ್ಟವು ಓಕುಳಿಯಾಡುವುದೊ ಏನೊ ಎಂಬಂತೆ ಅದರ ನಾಲ್ಕೂ ದಿಕ್ಕುಗಳಲ್ಲಿ ಗೈರಿಕದ (ಕೇವೆಕಲ್ಲುಗಳ) ಮೇಲೆ ನುಗ್ಗಿಬರುವ ಗಿರಿಪ್ರವಾಹಗಳ ಕೆಂಬಣ್ಣದ ತುಂತುರುಗಳು ಚಿಮ್ಮುತ್ತಿದ್ದುವು ಮತ್ತು– ೬೮. "ನಿನಗೆ ನನ್ನಲ್ಲಿ ಈಗಲೆ ಪ್ರೇಮವುಂಟಾಗುವುದು ಬಂದು ನೋಡು" ಎಂದು ಕುಮಾರ ನನ್ನು ಆ ಬೆಟ್ಟವು ಕರೆಯುತ್ತಿದೆಯೊ ಏನೊ ಎಂಬಂತೆ ನವಿಲುಗಳು ತಾರಸ್ವರ

ಆಗಳಾಪರ್ವತಮನೇಱೆ ದುರ್ಗದುರ್ಗಮಮಾರ್ಗಮಂ ನೋೞ್ಪೆನೆಂದು ಬಗೆದಂದು,

ಗುರುವಂಶಮತುಳದಂತಂ ।
ಪರಿವೃತಘನಸತ್ವಮುನ್ನತಂ ತಾನೆನಿಪಾ ॥
ಗಿರಿಪತಿಯಂ ನೃಪತಿಸುತಂ ।
ಕರಿಪತಿಯಂ ಲೀಲೆಯಿಂದಮೇಱುವ ತೆಱದಿಂ ॥ ೬೯

ಏಱೆ ತದಧಿತ್ಯಕದೊಳ್ ನಿಂದು ನೋೞ್ಪನ್ನೆಗಂ

ಬಿಟ್ಟ ಕುರುಳ್ ಪೊದಟ್ಟಿ ಕಿಸುಗಣ್ಣಸುಗೆತ್ತುವ ಮೀಸೆ ಬಾಂಗೆ ತೂಂ ।
ತಿಟ್ಟವೊಲಪ್ಪ ಮೆಯ್ ಮಿಳಿರ್ವ ನಾಲಗೆಯುರ್ಬಿದ ಪುರ್ವು ಕರ್ವುನ ॥
ಕ್ಕಿಟ್ಟಳಮಪ್ಪ ಕರ್ಕಶತೆಯೆತ್ತಿದ ಕೆಚ್ಚಿನ ಡಂಗೆ ಭೀತಿಯಂ ।
ಪುಟ್ಟಿಸೆ ಬಂದು ಕಟ್ಟಿದಿರೊಳಿರ್ದನದೊರ್ವನಡುರ್ತು ಜಟ್ಟಿಗಂ ॥ ೭೦

ಇರ್ದನಂತರಂ ಪ್ರತಿನಿನಾದಿತವಿಯದ್ವಿವರಮಪ್ಪ ಘೋರಘರ್ಘರಧ್ವನಿಯಿನಿಂತೆಂದಂ :–

ಈ ಗಿರಿ ಮದ್ಭುಜಾಪರಿಘಪಾಲಿತಮಾವನುಮಿಲ್ಲಿ ಪೊಕ್ಕವಂ ।
ಬೇಗದೆ ಪೊಕ್ಕವಂ ಯಮನಿವಾಸಮನಂತದಱಿಂದಮಾಮರು ॥
ದ್ಭೋಗಿವಿಯಚ್ಚರರ್ ಮಱೆದುಮೆನ್ನಯ ಬೆಟ್ಟದ ಮೇಲೆ ಬಟ್ಟೆಯಂ ।
ಪೋಗರದರ್ಕೆ ಸಕ್ಕಿಯಿದಱಕ್ಷತಪಲ್ಲವಪುಷ್ಪಸಂಕುಳಂ ॥ ೭೧

ದಿಂದ ಕುಹುಗುಟ್ಟಿದುವು. ವ॥ "ಈ ಬೆಟ್ಟವನ್ನು ಏರಿ ದುಸ್ತರವೆನಿಸುವ ಇದರಲ್ಲಿ ಹಾದಿಯನ್ನು ಕಂಡುಕೊಳ್ಳುವೆನು" ಎಂದು ಯೋಚಿಸಿ– ೬೯. "ಗುರುವಂಶ"ವೂ (೧. ಶ್ರೇಷ್ಠವಾದ ವಂಶದಲ್ಲಿ ಹುಟ್ಟಿದುದು. ೨. ದಟ್ಟವಾದ ಬಿದಿರ ಮೆಳೆಗಳುಳ್ಳುದು), "ಅತುಳದಂತ"ವೂ (೧. ಅಸದೃಶವೆನಿಸುವ ಕೋರೆಗಳುಳ್ಳುದು. ೨. ಅಪ್ರತಿಮವಾದ ಕೋಡುಗಲ್ಲುಗಳನ್ನೊಡಗೊಂಡುದು), "ಪರಿವೃತಘನಸತ್ತ್ವ"ವೂ (೧. ಮಹಾಶಕ್ತಿವಂತವಾದುದು. ೨. ಅದ್ಭುತವಾದ ಪ್ರಾಣಿಗಳನ್ನು ಉಳ್ಳುದು) ಎತ್ತರವಾದುದೂ ಎನಿಸುವ ಆ ಬೆಟ್ಟವನ್ನು ಕುಮಾರನು ಆನೆಯನ್ನು ಏರುವಂತೆ ಅನಾಯಾಸವಾಗಿ ಏರಿದನು. [ಮೊದಲನೆಯ ಅರ್ಥ ಆನೆಗೂ, ಎರಡನೆಯದು ಬೆಟ್ಟಕ್ಕೂ ಅನ್ವಯಿಸುತ್ತದೆ] ವ॥ ಹಾಗೆ ಏರಿ ಅದರ ತಪ್ಪಲು ಪ್ರದೇಶದಲ್ಲಿ ನಿಂತು ನೋಡುತ್ತಿರುವಾಗ – ೭೦. ಕೆದರಿದ ಕೂದಲು, ಬಿರುನೋಟದ ಕೆಂಗಣ್ಣು, ಸಣ್ಣಗೆ ಸ್ಫುರಿಸುತ್ತಿರುವ ಮೀಸೆ, ಆಕಾಶಕ್ಕೆ ತಿವಿಯುವಂತಿರುವ ಉನ್ನತವಾದ ದೇಹ, ಹೊರಚಾಚಿ ಅಲುಗುತ್ತಿರುವ ನಾಲಿಗೆ, ಉಬ್ಬಿದ ಹುಬ್ಬು, ಕಬ್ಬಿಣದಂತೆ ಇರುವ ಕರ್ಕಶತೆ, ಎತ್ತಿ ಹಿಡಿದ ದೊಣ್ಣೆ –ಇವುಗಳಿಂದ ಭೀಕರತೆಯನ್ನುಂಟುಮಾಡುತ್ತ ಅವನ ಎದುರಿಗೇ ರಭಸದಿಂದೊಬ್ಬ ಜಟ್ಟಿ ಬಂದುನಿಂತನು. ವ॥ ಹಾಗೆ ಬಂದು ದಿಗ್ದಿಗಂತಗಳಲ್ಲಿ ಪ್ರತಿಧ್ವನಿಗೊಳ್ಳುವ ಕಠೋರವಾದ ಧ್ವನಿಯಿಂದ ಹೀಗೆಂದನು– ೭೧. "ಈ ಬೆಟ್ಟವನ್ನು ತೋಳ್ಬಲದಿಂದ ನಾನು ಆಳುತ್ತಿರುವೆನು; ಇಲ್ಲಿ ಬಂದು ಹೊಕ್ಕವನು ಯಮಲೋಕವನ್ನು ಹೊಕ್ಕನೆಂದೇ ತಿಳಿ. ಇದನ್ನು ತಿಳಿದು ನಾಗ

ಅತಿಬಳತುಹಿನಗನಿರ್ಝರ ।
ತತಿಯೆನಿಸಿದ ಮದ್ಗಿರೀಂದ್ರಮಂ ಚಂಡಕರ ॥
ದ್ಯುತಿ ಪುಗದು ಪೊಕ್ಕೊಡಂ ತಿ ।
ಗ್ಮತೆಯಂ ಬಿಡುವುದದು ಮತ್ಪ್ರತಾಪದಿನಲ್ತೇ ॥ ೭೨

ಏನೆಂದು ಪೊಕ್ಕೆಯದಱಿಂ ।
ದೀನಗಮಂ ನಾವಿಚಾರಿತಂ ಕೃತ್ಯಮೆನಿ ॥
ಪ್ಪೀನುಡಿ ನಿನ್ನಯ ಕಿವಿಯಂ ।
ತಾನೆಂದುಂ ತಾಗದಕ್ಕುಮಕ್ಕಟ ಪೆಱದೇಂ ॥ ೭೩

ಅದಲ್ಲದೆಯುಂ

ಮೀಱಿ ಮದಾಜ್ಞೆಯಂ ಗಿರಿಯನೇಱಿದ ನಿನ್ನಯ ನೆತ್ತಿಗೀಗಳಿಂ ।
ತೇಱಿಸಿ ಜೀವಮಂ ಜವನ ಲೆಕ್ಕದೊಳೇಱಿಸಿ ಮತ್ತೆ ನಿನ್ನನಾ ॥
ನೇಱಿಪೆನೆನ್ನ ತೋಳ್ಗೆ ಬಟೆಯಂ ನೆರಗೆಲ್ಲಮನಲ್ಲದಂದು ಬ ।
ಲ್ಪೇಱಿದೆನುತ್ತವಂ ತಿರಿಪಿದಂ ನಿಜನಿಷ್ಠುರಕಾಷ್ಠದಂಡಮಂ ॥ ೭೪

ಆಗಳವನ ಗರ್ವಗರ್ಭಂಗಳಪ್ಪ ನಿರ್ಭರೋಕ್ತಿಗಳಂ ಕೇಳ್ದು ಕುಮಾರಂ ಪರ್ಜನ್ಯಗರ್ಜನಮಂ ಕೇಳ್ದ ಕೇಸರಿಕುಮಾರನಂತು ಕೆಳರ್ದು

ವಿಗತಾರ್ಥಂಗಳೆನಿಪ್ಪ ಮಾತುಗಳೊಳಾರಂ ಬೆರ್ಚಿಸಲ್ಬಂದೆ ಬೇ ।
ಡಗಡಾ ಸಾಯದೆಪೋಗು ಪೋಗದೊಡೆ ಮೇಣ್ ಮೇಲ್ವಾಯ್ದುನೋಡೀಗ

ರಾಗಲಿ, ಖೇಚರರಾಗಲಿ ಮರೆತು ಕೂಡ ನನ್ನ ಬೆಟ್ಟದ ಮೇಲೆ ಹಾಯ್ದು ಹೋಗುವುದಿಲ್ಲ. ಇದರಲ್ಲಿರುವ ಚಿಗುರುಗಳಾಗಲಿ ಹೂಗಳಾಗಲಿ ಅಕ್ಷತವಾಗಿ (ಕೀಳದೆ) ಇರುವುದೇ ಅದಕ್ಕೆ ಸಾಕ್ಷಿ. ೭೨. ಅತ್ಯಂತ ಶೀತಲವಾದ ಗಿರಿಪ್ರವಾಹಗಳ ನಿಧಿಯೆನಿಸುವ ನನ್ನೀ ಬೆಟ್ಟದಲ್ಲಿ ಸೂರ್ಯನ ಬೆಳಕು ನುಸುಳಲಾರದು; ಅಕಸ್ಮಾತ್ತಾಗಿ ಹೊಕ್ಕರೆ, ನನ್ನ ಪ್ರತಾಪದಿಂದ ಅದು ತನ್ನ ಕಾವನ್ನು ಕಳೆದುಕೊಂಡು ತಣ್ಣಗಾಗುವುದು. ೭೩. ಹೀಗಿರುವಾಗ ಏನೆಂದು ಭ್ರಮಿಸಿ ನೀನು ಇಲ್ಲಿ ಹೊಕ್ಕೆ ? ಅಯ್ಯೊ, ಪಾಪ ! "ವಿಚಾರ ಮಾಡದೆ ಏನನ್ನೂ ಮಾಡಕೂಡದು" ಎಂಬ ಮಾತು ಬಹುಶಃ ನಿನ್ನ ಕಿವಿಗೆ ಬಿದ್ದೇ ಇರಲಿಕ್ಕಿಲ್ಲ, ಅದಲ್ಲದೆ– ೭೪. ನನ್ನ ಅಪ್ಪಣೆಯನ್ನು ಗಮನಿಸದೆ ಬೆಟ್ಟವನ್ನೇರಿ ಬಂದ ನಿನ್ನ ಜೀವವನ್ನು ನೆತ್ತಿಗೇರಿಸಿ, ನಿನ್ನನ್ನು ಯಮನ ಲೆಕ್ಕಕ್ಕೆ ಏರಿಸಿ, ಆ ಬಳಿಕ ನನ್ನ ಬಾಹುಗಳಿಗೆ ಜಯಶ್ರೀಯನ್ನು ಏರಿಸಿಕೊಳ್ಳುವೆನು, ಹಾಗೆ ಮಾಡದಿದ್ದರೆ ನನ್ನ ಶಕ್ತಿಗೆ ಏಳಿಗೆಯಾಗದು". ಹೀಗೆ ನುಡಿದು ತನ್ನ ಕೈಯಲ್ಲಿದ್ದ ಬಲವಾದ ದೊಣ್ಣೆಯನ್ನು ತಿರುವಿದನು. ವ॥ ಆತನ ಸೊಕ್ಕುದುಂಬಿದ ಬಿರುನುಡಿಗಳನ್ನು ಕೇಳಿ, ಕುಮಾರನು ಮೋಡದ ಗುಡುಗನ್ನು ಕೇಳಿದ ಸಿಂಹದ ಮರಿಯಂತೆ ಕೆರಳಿ– ೭೫. "ನಿರರ್ಥಕವಾದ ಮಾತುಗಳಿಂದ ಯಾರನ್ನು ಬೆದರಿಸಲು ಬಂದೆಯೊ ನೀನು? ಬೇಡ, ಸಾಯದೆ ಹೋಗು, ಹೋಗಲೊಲ್ಲೆಯಾದರೆ

ಳಿಂತೆ ಗಜಾರಾತಿಯನಾಂತ ದಂತಿಗೆಣೆಯಾಗಾಂ ಮಾಡಿ ನಿನ್ನಂ ಬಟಿ ।
ಕ್ಕಗಮಂ ವ್ಯಾಧವಧೂಜನಕ್ಕೆ ವನಕೇಳೀಶೈಲಮಮಂ ಮಾಡುವೆಂ ॥ ೭೫

ಎನೆ ಕೈದುವಿಡಿಯೆನಾಂ ನಿನ ।
ಗನಾಯುಧಂಗೆಂದು ಕೈಯ ಪಾವಂ ವಿನತಾ ॥
ತನಯಂ ಬಿಸುಡುವವೋಲ್ ತೊ ।
ಟ್ಟನೆ ಬಿಸುಟಂ ಪಿಡಿದ ಬಡಿಯನಂತಾದಡಿಯಂ ॥ ೭೬

ಅಂತು ಬಿಸುಟ್ಟು ಮಲ್ಲಯುದ್ಧಸನ್ನದ್ಧರಾಗಿರ್ವರುಂ ಭುಜಾಸ್ಫಾಲನಂ ಮಾಡಲೊಡಂ

ಕುವರನ ಬಾಹಾಸ್ಫಾಲನ ।
ರವಮುರ್ಬಿಸೆಯಗಿದು ಪಾಡಿ ಬಿಡದೊದಱುತ್ತಿ ॥
ರ್ದವೊಲಾದುದು ತದ್ಗಹ್ವರ ।
ನಿವಹಪ್ರಭವಾತಿಭೀಷಣಂ ಪ್ರತಿಘೋಷಂ ॥ ೭೭

ಅನಂತರಮಾಶಿಖರಿಶಿಖರಮೆ ಕಳನಾಗಿಯುಂ, ವನದೇವತಾಪೇಟಕಮೆ ನೋಟಕರಾಗಿಯುಂ, ಪಳುಕಿನ ಕೋಡುಗಲ್ಗೊಳೊಳ್ ಪೊಳೆವ ತಮ್ಮ ನೆೞಲೆ ನೆರೆದ ಮಲ್ಲರ ನೆರವಿಯಾಗಿಯುಂ, ನಿಕುಂಜೋಪಾಂತಜರ್ಝರನಿರ್ಝರಧ್ವನಿಯೆ ಮಲ್ಲದಾಳಮಾಗಿಯುಂ, ಕಳಂಬೊಕ್ಕು ನಿರಿಸುಗೆಯ್ದು ನಖಹತಿ

ನನ್ನ ಮೇಲೇರಿ ಬಂದು ನೋಡು, ಸಿಂಹದ ಮೇಲೆ ಏರಿಹೋದ ಆನೆಗಾಗುವ ಗತಿಯನ್ನೆ ನಿನಗೆ ಮಾಡಿ, ನಿನ್ನನ್ನು ತೀರಿಸಿದ ಬಳಿಕ ಈ ಬೆಟ್ಟವನ್ನು ಬೇಡರ ಹೆಂಗಸರಿಗೆ ಕ್ರೀಡಾಶೈಲವೆಂದು ಒಪ್ಪಿಸಿಕೊಡುವೆನು". ೭೬. ಎಂದು ನುಡಿದನು. ಆಗ ಆ ರೊಣೆಯನು "ಪಾಪ ! ನೀನು ನಿರಾಯುಧನಾಗಿರುವಾಗ ನಾನೇಕೆ ಆಯುಧವನ್ನು ಹಿಡಿಯಲಿ?" ಎನ್ನುತ್ತಾ ಗರುಡನು ತನ್ನ ಕೈಯಲ್ಲಿಯ ಹಾವನ್ನು ಬಿಸಾಕುವಂತೆ ಹಿಡಿದುಕೊಂಡಿದ್ದ ದೊಣ್ಣೆಯನ್ನು ಕೂಡಲೆ ಬೀಸಾಡಿಬಿಟ್ಟನು. ವ॥ ಹಾಗೆ ಬೀಸಾಡಿದ ಬಳಿಕ ಜಟ್ಟಿಗಾಳೆಗಕ್ಕಾಗಿ ಇಬ್ಬರೂ ತಮ್ಮ ತೋಳುಗಳನ್ನು ಚಪ್ಪರಿಸಿಕೊಂಡರು. ೭೭. ಕುಮಾರನು ಸೆಡ್ಡುಹೊಡೆದ ಧ್ವನಿಗೆ ಶತ್ರು ಪಾಳೆಯವೆ ಗಾಬರಿಯಾಗಿ ಕೂಗಿಕೊಂಡಿತೊ ಏನೊ ಎಂಬಂತೆ ಅಲ್ಲಿಯ ಗವಿಗಳಿಂದ ಹೊರಟ ಪ್ರತಿಧ್ವನಿ ಅತ್ಯಂತ ಭೀಕರವಾಗಿ ಹೊಮ್ಮಿತು. ವ॥ ಆ ಬಳಿಕ ಆ ಬೆಟ್ಟದ ಶಿಖರವೆ ಕಾಳಗದ ಕಣವಾಗಿ, ವನದೇವತೆಗಳೆ ಪ್ರೇಕ್ಷಕರಾಗಿ, ಅಲ್ಲಿಯ ಸ್ಫಟಿಕದ ಕೋಡುಗಲ್ಲುಗಳಲ್ಲಿ ಪಡಿಮೂಡಿದ ಅವರಿಬ್ಬರ ಪ್ರತಿಬಿಂಬಗಳೆ ಜಟ್ಟಿಗಳ ಸಮೂಹವಾಗಿ, ಹೊದರುಗಳ ಒಳಿಯಲ್ಲಿ ನುಗ್ಗಿ ಹರಿಯುವ ಗಿರಿಪ್ರವಾಹಗಳ ಮೊರೆತವೆ ಮಲ್ಲ ತಾಳವಾಗಿ, ಇಬ್ಬರೂ ಕಣವನ್ನು ಹೊಕ್ಕರು; ಉಗುರುಗಾಯ, ಹಲ್ಲುಗಳಿಂದ ಕಚ್ಚುವುದು, ಒಡೆಯುವುದು, ಮುಷ್ಟಿಯಿಂದ ಗುದ್ದುವುದು ಎಂಬ ನಾಲ್ಕು ದೋಷಗಳನ್ನು ಬಿಟ್ಟು, ನಾಲ್ಕು "ಸ್ಥಾನ"ಗಳಲ್ಲಿಯೂ,

ದಶನಹತಿ ಪಾದಪಾತಂ ಮುಷ್ಟಿಪಾತಮೆಂಬ ದೋಷಂಗಳಂ ಪೊರ್ದದ ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳಂ ಐದುಂ ಡೊಕ್ಕರದೊಳಂ, ಎಣ್ಬತ್ತುನಾಲ್ಕು ಬಿನ್ನಣದೊಳಂ ಪಲತೆಱದ ಪಾತಂಗಳೊಳಂ ನೆಱೆದು

ಎಸೆವ ಮುಹಗ್ಗಳಂ ಠಡಕಿ ಕಕ್ಷವಡಂ ಮುಹಡಂ ತುಳಾಡಿ ಸಂ।
ದಸುವಿಡಿವಟ್ಟಿ ಸಂಗುಣವಳುಂಬಗೆ ಪಾಸಗೆವನ್ನಿಮುಟ್ಟಿ ಚ ॥
ಟ್ಟುಸಿರಣವಟ್ಟಿ ಬಾಹುದಣೆ ಖಮ್ಮರಿ ಕತ್ತರಿ ಖೋಡವಂಕುಶಂ।
ಸಸಿಕುವೆನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (?) ॥ ೭೮

ಕರಿಯೊಳ್ ಕರಿ ಗಿರಿಯೊಳ್ ಗಿರಿ।
ಹರಿಯೊಳ್ ಹರಿ ಪೋರ್ವ ತೆಱದೆ ಪೋರ್ದರ್ ತಮ್ಮೊಳ್ ॥
ಭರದಿಂ ವನದೇವತೆಯರ।
ನೆರವಿಯ ಕಣ್ಬಸಿವು ನಿಸದಮೋಸರಿಸುವಿನಂ ॥ ೭೯

ಮಿಕ್ಕುದು ವಜ್ರಪಾತಮುಮನೆಂಬಿನಮುಬ್ಬಸಮಾದ ತೋರಹ।
ತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಳಮೆನಿಪ್ಪ ಡೊಕ್ಕರ ॥
ಕ್ಕಿಕ್ಕಿದ ವಜ್ರಲೇಪಮೆನೆ ಪತ್ತುವ ಲಗ್ಗೆಗೆ ಮಾರಿಯೊಳ್ ಮೊಗಂ।
ಬೊಕ್ಕವೊಲಾಗೆ ಬೆರ್ಚಿದನವಂ ಕುವರಂಗೆನಸುಂ ನಿಯುದ್ಧದೊಳ್ ॥ ೮೦

ಅಂತು ಬೆರ್ಚಿ ಬೆಗಡುಗೊಂಡು

ಭೋಂಕನೆ ತಾಂ ನಭಕ್ಕೊಗೆದು ಭಾಸುರರತ್ನ ಕಿರೀಟಮಂ ಫಣಾ।
ಸಂಕುಳಮುಂ ಚಳನ್ಮಕಳಕುಂಡಳಮುಂ ಕಟಿಸೂತ್ರಮುಂ ಕನ ॥

ಮೂರು 'ಲಗ್ಗ'ದಲ್ಲಿಯೂ ಐದು ಬಗೆಯ "ಡೊಕ್ಕರ"ಗಳಲ್ಲಿಯೂ ಎಂಬತ್ತು ನಾಲ್ಕು ಪಟ್ಟುಗಳಲ್ಲಿಯೂ ಹಲವಾರು ಬಗೆಯ ಆಕ್ರಮಣ ವಿಧಾನಗಳಲ್ಲಿಯೂ ೭೮. ಮುಹಗ್ಗಳ, ಠಡಕಿ, ಕಕ್ಷವಡ, ಮುಹಡ, ತುಳಾಡಿ, ಪಟ್ಟಿಸ, ಪಾಸಗೆ ವನ್ನಿಮುಟ್ಟಿ, ಬಾಹುದಣೆ, ಖಮ್ಮರಿ, ಕತ್ತರಿ, ಖೋಡ, ಅಂಕುಶ ಮೊದಲಾದ ಜಟ್ಟಿಗಾಳೆಗದ ಕೌಶಲ್ಯಪೂರ್ಣವಾದ ಪ್ರಯೋಗಗಳಿಂದ ಹೋರಾಡಿದರು : ೭೯. ಆನೆಯೊಡನೆ ಆನೆ, ಬೆಟ್ಟದೊಡನೆ ಬೆಟ್ಟ, ಸಿಂಹದೊಡನೆ ಸಿಂಹ ಹೋರಾಡುವ ರೀತಿಯಲ್ಲಿ ಹೋರಾಡುತ್ತ ವನದೇವತೆಗಳ ಕಣ್ಣಿನ ಹಸಿವನ್ನು ಪೂರ್ತಿಯಾಗಿ ಹಿಂಗಿಸಿದರು. ೮೦. ಸಿಡಿಲಿನ ಹೊಡೆತವನ್ನೂ ಮೀರಿತೆಂಬಂತಹ ಉಗ್ರವಾದ ತೋರಹತ್ತ, ಆಕ್ರಮಿಸಿ ಹಿಡುವ ಮಾನಸಗೋಳವೆಂಬ ಡೊಕ್ಕರ, ವಜ್ರಲೇಪವೆಂಬಂತೆ ಹತ್ತಿಕೊಳ್ಳುವ ಲಗ್ಗೆ– ಇವುಗಳಿಂದ ಜರ್ಝರಿತನಾಗಿ ಆ ಜಟ್ಟಿಯು ಮೃತ್ಯುದೇವತೆಯನ್ನೆ ಎದುರು ಹಾಕಿಕೊಂಡನೊ ಏನೊ ಎಂದು ಗಾಬರಿಯಾದನು. ವ॥ ಹಾಗೆ ಹುಚ್ಚು ಗಾಬರಿಗೊಂಡು–೮೧.ತಟ್ಟನೆ ಆಕಾಶಕ್ಕೆ ಚಿಮ್ಮಿ ಹೋಗಿ, ಉಜ್ವಲವಾಗಿ ಶೋಭಿಸುವ ರತ್ನಕಿರೀಟ

ತ್ಕಂಕಣಮುಂ ಕರಂ ಸೊಗಯಿಪನ್ನೆಗಮಾಗಳೆ ತೋಱಿ ತನ್ನ ರೂ ।
ಪಂ ಕಱಿದಂ ಬಟಿಕ್ಕಳವಿದಪ್ಪಿದ ಹರ್ಷದೆ ಪುಷ್ಪವರ್ಷಮಂ ॥ ೮೧

ಅದಂ ಕಂಡು ಕುಮಾರಂ ನೀನಾರ್ಗೆನೆಂಬೆಯೆಂದು ಬೆಸಗೊಳ್ವುದುಮಾತನಿಂತೆಂದಂ:- ಆಂ ಭವನಾಮರನೆಂ, ಹಿರಣ್ಯನೆಂಬೆನಿಂದು ವಂದನಾ ಭಕ್ತಿಯಿಂ ಮಂದರಕ್ಕೆ ಪೋಗಿ ಬರುತ್ತುಮಿಲ್ಲಿ ನಿನ್ನಂ ಕಂಡು,

ಆಂ ಭರದಿಂದೆ ನಿನ್ನಯ ಭುಜಾಬಲದೆಟ್ಟಿರಮಂ ಪರೀಕ್ಷಿಸಲ್ ।
ಡಂಭದಿನೊಂದು ರೂಹುದಳೆದಿನ್ನೆವರಂ ಪೊಣರ್ದಿಕ್ಕುವಟ್ಟು ಕಂ ॥
ಡಂ ಭವದೀಯಸಾಹಸಮನೀಗಳದಂ ನೆನೆವಂದು ನಾಡೆ ಮ ।
ತ್ತಂ ಭಯಮುತ್ತು ಕುಂದಿದಪುದೆನ್ನ ಮನಂ ಸುಭಟೈಕಮಂಡನಾ ॥ ೮೨

ಸತಿ ವೀರಜನನಿಯೆನಿಪೊಡೆ ।
ಸುತನಂ ನಿನ್ನನ್ನನಂ ದಿಟಂ ಪೆತ್ತಂದ ॥
ನ್ವಿತಮಕ್ಕುಮಲ್ಲದಂದಾ ।
ನುತಿಯಿಂದೆ ಸುಲೋಚನಾಖ್ಯೆಯೆನಿಪನಿತೆವೊಲಂ ॥ ೮೩

ಇನಿವಿರಿದು ಪರಾಕ್ರಮಮು ।
ಳ್ಳ ನಿನಗೆ ತೀಱದ ಪದಾರ್ಥಮಿಲ್ಲೆಂಬುದನಾಂ ।
ನೆನೆನೆನೆದು ಲಜ್ಜೆಯಿಂ ಬೇ
ಡೆನಲಱಿದಪೆನಿಲ್ಲ ನಿನ್ನನಿನ್ನುಂ ಬರವಂ ॥ ೮೪

ದಿಂದಲೂ, ಹೆಡೆಗಳ ಸಾಲುಗಳಿಂದಲೂ, ಚಂಚಲವಾದ ಮಕರಕುಂಡಲಗಳಿಂದಲೂ, ಮಿರುಗುವ ಕೈಗಡಗಗಳಿಂದಲೂ ಮನೋಹರವಾದ ತನ್ನ ರೂಪವನ್ನು ತೊರಿ, ಅಪಾರವಾದ ಸಂತೋಷದಿಂದ ಹೂಮಳೆಯನ್ನು ಸುರಿಸಿದನು. ವ॥ ಅದನ್ನು ಕಂಡು ಕುಮಾರನು, "ನೀನು ಯಾರು? ಹೆಸರೇನು?" ಎಂದು ಕೇಳಲಾಗಿ ಆತನು ಹೀಗೆಂದನು. "ನಾನು ಭವನಾಮರನು; ಹಿರಣ್ಯನೆಂದು ನನ್ನ ಹೆಸರು. ವಂದನಾ ಭಕ್ತಿಯಿಂದ ಮಂದರ ಗಿರಿಗೆ ಹೋಗಿ, ಬರುತ್ತಿರುವಾಗ ಇಲ್ಲಿ ನಿನ್ನನ್ನು ಕಂಡೆನು. ೮೨. ತನ್ನ ತೋಳ್ಬಲದ ಅತಿಶಯವನ್ನು ಪರೀಕ್ಷಿಸಿ ನೋಡಬೇಕೆಂದು ಮಾಯೆಯಿಂದ ಒಂದು ರೂಪವನ್ನು ಧರಿಸಿ ಇಲ್ಲಿಯವರೆಗೆ ನಿನ್ನೊಡನೆ ಹೋರಾಡಿ ಸೋತು, ನಿನ್ನ ಸಾಹಸವನ್ನು ಮನಗಂಡೆನು. ಶೂರಶ್ರೇಷ್ಠನೆ ಅದನ್ನು ನೆನಸಿಕೊಂಡರೆ ಈಗಲೂ ನನಗೆ ಭಯವಾಗಿ ಮನಸ್ಸು ನಡುಗುತ್ತದೆ. ೮೩. ವೀರ ಜನನಿಯೆನಿಸ ಬೇಕಾದರೆ ನಿನ್ನಂತಹ ಮಗನನ್ನು ಹೆತ್ತವಳೆ ಆಗಬೇಕು; ಅವಳಿಗೆ ಆ ಹೆಸರು ಸಾರ್ಥಕ. ಹಾಗಲ್ಲದವಳು ಬರಿ ಚೆಲುವೆಯೆಂಬ ಹೊಗಳಿಕೆಗೆ ಮಾತ್ರ ಪಾತ್ರವಾದಾಳು. ೮೪. ಇಷ್ಟೊಂದು ಅತಿಶಯವಾದ ಶೌರ್ಯವುಳ್ಳ ನಿನಗೆ ದೊರಕ ಲಾರದ ವಸ್ತುವಿಲ್ಲವೆಂಬುದನ್ನು ನೆನೆದುಕೊಂಡು, ನಿನಗೆ "ಏನಾದರೂ ವರ

ಆದೊಡಮೇಂ ಯತ್ನೋಚಿತ ।
ಮಾದೆಡೆಯೊಳ್ ನೆನೆವುದೆನ್ನನಸಹಾಯಸಮು ॥
ತ್ಪಾದಿತಮೆನಿಸಿದ ಕಾರ್ಯಮ ।
ದೇದೊರೆಯಂಗಂ ಸಮಂತು ಸಿದ್ಧಿಸದಲ್ತೇ ॥ ೮೫

ಮತ್ತಂ ತೃತೀಯಜನ್ಮದ ।
ವೃತ್ತಕಮೊಂದುಂಟು ನಿನಗದಂ ಪೇಟ್ದಪೆನಾಂ ॥
ಚಿತ್ತೈಸಿ ಕೇಳ್ ಸುಗಂಧಿಳ ।
ವರ್ತಿಳವೀಶ್ರೀಪುರಾಹ್ವಯಂ ಪುರಮದಱಿಕೊಳ್ ॥ ೮೬

ನೀಂ ಶ್ರೀವರ್ಮನೆಂಬರಸನಾದೆಯಲ್ಲಿ

ಪೊಱವೊಲಿಲೊಳಿರ್ಪರಿರ್ವರ್ ।
ನೆಱೆದೊಕ್ಕಲ್ತನದ ಪೆರ್ಮೆಯೊಕ್ಕಲಿಗರ್ ಪೇ ॥
ರಜೆಕೆಯ ಶಶಿಸೂರ್ಯಾಖ್ಯರ್ ।
ಪೆಜೆನಂಟರ್ ತಮತದೊಂದು ಕೇಜೆಯ ಮನದೊಳ್ ॥ ೮೭

ಇರ್ದೊಂದು ದೆವಸಂ ಸೂರ್ಯನಾಮಂ ಬೇಱೂರ್ಗೆ ಪೋಗೆ ಭೇದಿಸಿ ಶಶಿಕೃಷೀವಲಂ ಅವನ ಪೂಟ್ಕಿದಮೆಯಂ ಕಂಡೆತ್ತಿಕೊಂಡೊಡಾತನಱಿದು ಬಂದು ನಿನಗೆ ಪೇಟೆ

ಶಶಿಯಂ ಘಾತಿಸಿ ಸೂರ್ಯಂ ।
ಗಶೇಷಧನಮಂ ಬಟೆಕ್ಕೆ ನೀನಿತ್ತೊಡೆ ತ ॥
ಚ್ಛಶಿ ಪಲವು ಯೋನಿಯೊಳ್ ನಿಂ ।
ದಶಾಂತಮತಿ ಚಂಡರುಚಿನಿಶಾಚರನಾದಂ ॥ ೮೮

ಬೇಕಾದರೆ ಕೇಳು" ಎನ್ನಲು ನಾಚುತ್ತೇನೆ. ೮೫. ಆದರೂ ನಾನು. ಬರುವುದು ಯೋಗ್ಯವೆನಿಸಿದ ಸಂದರ್ಭವೇನಾದರೂ ಒದಗಿದ್ದಾದರೆ, ನನ್ನನ್ನು ನೆನೆ. ಎಂತಹ ಸಮರ್ಥನಿಗೇ ಆದರೂ ಸಹಾಯವೇ ಬೇಡವೆಂಬ ಸಂದರ್ಭ ಯಾವಾಗಲೂ ಇರುವುದಿಲ್ಲ ಅಲ್ಲವೆ? ೮೬. ಇನ್ನೊಂದು ವಿಷಯವಿದೆ. ಇದಕ್ಕೆ ಹಿಂದಿನ ಮೂರನೆಯ ಜನ್ಮದ ಸಂಗತಿಯೊಂದುಂಟು. ಅದನ್ನು ನಿನಗೆ ಹೇಳುವೆನು. ಮನಗೊಟ್ಟು ಕೇಳು, ಸುಗಂಧಿಳ ವಿಷಯದಲ್ಲಿ ಶ್ರೀಪುರವೆಂಬ ಪಟ್ಟಣವುಂಟು, ವ॥ ಅದಕ್ಕೆ ನೀನು ಶ್ರೀವರ್ಮನೆಂಬ ದೊರೆಯಾಗಿ ಆಳುತ್ತಿರಲಾಗಿ ಅಲ್ಲಿ– ೮೭. ಪಟ್ಟಣದ ಹೊರವಲಯದಲ್ಲಿ ಬೇಸಾಯದಲ್ಲಿ ತೊಡಗಿದ ಸೂರ್ಯ ಮತ್ತು ಶಶಿ ಎಂಬ ಇಬ್ಬರು ಒಕ್ಕಲಿಗರು ಪರಮ ಸ್ನೇಹದ ನಂಟರು ಕೇರಿಯಲ್ಲೆಲ್ಲ ಪ್ರಖ್ಯಾತರಾಗಿದ್ದರು. ವ॥ ಹೀಗಿರುವತ್ತ ಒಂದು ದಿನ ಸೂರ್ಯನೆಂಬುವನು ಬೇರೊಂದು ಊರಿಗೆ ಹೋದನು. ಆಗ ಅವನು ಗುಪ್ತವಾಗಿ ಹೂಳಿ ಹೋಗಿದ್ದ ನಿಧಿಯನ್ನು ಶಶಿಯೆಂಬ ಒಕ್ಕಲಿಗನು ಕಳವಿನಿಂದ ಎತ್ತಿಹಾಕಿದನು. ಸೂರ್ಯನು ಅದನ್ನರಿತು ನಿನಗೆ ದೂರಿತ್ತನು. ೮೮. ಆಗ ನೀನು ಶಶಿಯನ್ನು ಶಿಕ್ಷಿಸಿ ಆ ಧನವನ್ನೆಲ್ಲ ಸೂರ್ಯನಿಗೆ ಕೊಡಿಸಿದೆ. ಆ ಶಶಿಯು ಹಲವಾರು ಜನ್ಮಗಳನ್ನು

ಕೃತಸುಕೃತವೇಷದಿಂದೀ ।
ಗತಿಯೊಳ್ ಸೂರ್ಯಚರನಾಂ ಹಿರಣ್ಯನೆನಾದೆಂ ॥
ಪ್ರತಿಕೂಲನಾದನವನೂ ।
ರ್ಜಿತನಿನಗಾಂ ಮಿತ್ರನಾದೆನದುಕಾರಣದಿಂ ॥ ೮೯

ಸಾತಿಶಯಸತ್ವನಿಧಿ ನೀ ।
ನಾತಂಗೊಳಗಾಗಿ ಬಂದೆಯಿಲ್ಲಿವರಂ ಶೌ ॥
ರ್ಯೇತರನಂದದೆ ಕರ್ಮಮ ।
ದೇತೆಱದೊಳಮೂಡಿದಲ್ಲದುಪಶಮಿಸುಗುಮೇ ॥ ೯೦

ಎಂದು ಪೇೞ್ದು ಭವನಾಮರನದೃಶ್ಯವಾಗಿ ಪೋಗೆ ಕುಮಾರನುಂ ತದ್ದೇಶಪ್ರಭಾವದಿಂ ಕಾಂತಾರ ಪಾರಮನೆಯ್ದಿ ನಗರನಂದನನಾನಾಕೇದಾರಪ್ರತಾನಪ್ರಾಯಮಪ್ಪ ಜನಪದಮಂ ಕಂಡು

ಆ ನೃಪಪಾರ್ಶ್ವಮೆತ್ತಸುರನೆತ್ತ ಸರೋವರಪಾತಮೆತ್ತರ ।
ಣ್ಯಾನಿಯದೆತ್ತ ಪರ್ವತಮುಮೆತ್ತ ಹಿರಣ್ಯನ ಕಾಣ್ಕೆಯೆತ್ತ ಮ ॥
ತ್ತೀನೆಲನೆತ್ತ ಮತ್ಕೃತಪುರಾತನಪುಣ್ಯದ ಪಾಂಗನೇನನಿ ।
ನ್ನೇನೆನಲಕ್ಕುಮೆಂದಿನಿಸು ವಿಸ್ಮಯಮುತ್ತು ಬರುತ್ತುಮಿರ್ಪಿನಂ ॥ ೯೧

ಶಕಟಾರೋಪಿತಸಂಶ್ರಯೋಪಕರಣಂ ಸ್ವಾರಿವ್ರಜಾರೂಢಬಾ ।
ಳಕುಳಂ ಧಾಮನಿಯುಕ್ತಕಂಠವಿಚಳದ್ಗೋಮಂಡಳಂ ಶತ್ರುಸೈ ॥
ನ್ಯಕೃತಾಸ್ಕಂಧವಿಳೋಕನೋತ್ಸುಕವಳದ್ಗ್ರೀವಾಂಗನಾಸಂಚಯಂ ।
ಚಕಿತಂ ತದ್ವಿಷಯಪ್ರಜಾಪ್ರತತಿಯೋಡುತ್ತಿರ್ದುದೆತ್ತೆತ್ತಲುಂ ॥ ೯೨

ಹೊತ್ತು ಕೊನೆಗೆ ಚಂಡರುಚಿಯೆಂಬ ದೈತ್ಯನಾದನು. ೮೯. ಸತ್ಕರ್ಮನಿರತನಾಗಿದ್ದರಿಂದ ಸೂರ್ಯನೆಂಬ ನಾನು ಜನ್ಮಾಂತರ ಹೊಂದಿ ಈಗ ಹಿರಣ್ಯನೆಂಬವನಾದೆನು. ಆತನು ನಿನಗೆ ವಿರೋಧಿಯಾದುದೂ, ನಾನು ಮಿತ್ರನಾದುದೂ ಇದೇ ಕಾರಣದಿಂದ, ೯೦. ಅತಿಶಯ ಬಲಶಾಲಿಯಾದ ನೀನು ಶಕ್ತಿಹೀನನೆಂಬಂತೆ ಆತನ ಕೈಗೆ ಸಿಕ್ಕಿ ಇಲ್ಲಿಯವರಗೆ ಬಂದೆ. ಕರ್ಮವೆಂಬುದೇ ಹಾಗೆ. ಅದನ್ನು ಉಂಡೇ ತೀರಿಸಬೇಕು." ವ॥ ಹೀಗೆ ಹೇಳಿ ಆ ಭವನಾಮರನು ಮಾಯವಾಗಿ ಹೋದನು. ಕುಮಾರನೂ ಆ ಪ್ರದೇಶದಿಂದ ಕಾಡನ್ನು ದಾಟಿ ನಗರೋದ್ಯಾನಗಳಿಂದಲೂ, ಹಲವಾರು ಗದ್ದೆಗಳಿಂದಲೂ ಶೋಭಿಸುವ ಒಂದು ಜನವಸತಿಯನ್ನು ಕಂಡನು. ೯೧. "ಅರಸನ ಸನ್ನಿಧಿಯೆತ್ತ ! ದೈತ್ಯನೆತ್ತ ! ಸರೋವರದಲ್ಲಿ ಬಿದ್ದುದೆತ್ತ ! ಈ ಅರಣ್ಯ ಪ್ರದೇಶವೆತ್ತ ! ಬೆಟ್ಟವೆತ್ತ ! ಹಿರಣ್ಯದರ್ಶನವೆತ್ತ ! ಮತ್ತೆ ಈ ಭೂಮಿಯೆತ್ತ ! ನನ್ನ ಪೂರ್ವಾರ್ಜಿತ ಪುಣ್ಯವನ್ನು ಇನ್ನು ಏನೆಂದು ತಿಳಿಯಬೇಕು?" ಎಂದು ವಿಸ್ಮಯಪಡುತ್ತ ಕುಮಾರನು ಬರುತ್ತಿದ್ದನು. ಆಗ– ೯೨. ಬಂಡಿಗಳ ಮೇಲೆ ಮನೆಯ ಉಪಕರಣಗಳನ್ನು ಹೇರಿಕೊಂಡು, ಮಕ್ಕಳನ್ನು ಹೆಗಲ ಮೇಲೇರಿಸಿಕೊಂಡು, ಕೊರಳ ಹಗ್ಗಗಳಿಂದ ದನಗಳನ್ನು ನಡೆಸಿಕೊಳ್ಳುತ್ತ, ಶತ್ರುವಿನ ದಾಳಿಯನ್ನು ನೋಡುವ ಕುತೂಹಲದಿಂದ ತಲೆಯೆತ್ತಿಯೆತ್ತಿ ಹೊರಳಿ ನಿಟ್ಟಿಸುವ

ಆಗಳಾಜನಸಂಕುಳದೊಳೊರ್ವನನಗ್ರಾಮ್ಯಾಕೃತಿಯನಿದಿರೊಳ್ ಬರ್ಪನಂ ಕಂಡು ತತ್ಪಜಾ ಪಲಾಯನಕಾರಣಮಂ ಮಾರ್ಗೋಪಕಂಠದೊಳ್ ನಿಂದು ಬೆಸಗೊಳ್ವುದುಮವನುಮಾತನ ಮನುಜಾಸಾಧಾರಣಾಕಾರಮಂ ಕಂಡು ರಾಜಪುತ್ರನೆಂದಱಿದೆಱಗಿ ಪೊಡೆಮಟ್ಟು

॥ ವೃತ್ತಿ ॥

ನಿರಂತರಿತಶಾಲಿಸಸ್ಯಚಯಶಾಡ್ವಲೋರ್ವೀತಳಂ ।
ಪರೀತನವಪೂಗನಾಗವನಕರ್ಬುರಾಶೋತ್ಕರಂ ॥
ಸ್ಫುರನ್ಮಣಿಖನಿಪ್ರಭಾಶಬಳಿತಾಂಬರಂ ತೋರ್ಪುದಿಂ ।
ತರಿಂಜಯಸಮಾಹ್ವಯಂ ಜನಪದಂ ಸುಖೈಕಾಸ್ಪದಂ ॥ ೯೩

ಈ ಭೂಮಂಡಲ ಲಕ್ಷ್ಮಿಗೆ ।
ನಾಭೀಮಂಡಲಮಿದೆನಿಸಿ ಮಧ್ಯದೊಳೆಸೆಸುಂ ॥
ಶೋಭಿಸುವುದು ನಗರಂ ವಿಪು ।
ಳಾಭಿಖ್ಯಂ ವಿಪುಳಶಾಳಮತುಳಾಟ್ಟಾಳಂ ॥ ೯೪

ಆಳ್ವನದಂ ಜಯವರ್ಮಂ ।
ತೋಳ್ವಲದಿಂದಾತನಗ್ರಮಹಿಷಿ ಜಯಶ್ರೀ ॥
ಯಾಳ್ವಳ್ ತನ್ಮನಮಂ ಕ ।
ಣ್ಗೊಳ್ವ ನಿಜಾಕಾರಸಾರವಿಳಸನದಿಂದಂ ॥ ೯೫

ಹೆಂಗಳೆಯುರನ್ನೊಡಗೊಂಡು ಆ ರಾಜ್ಯದ ಪ್ರಜಾಸಮೂಹವು, ಗಾಬರಿಯಿಂದ ಎತ್ತೆತ್ತಲೂ ಓಡುತ್ತಿತ್ತು. ವ॥ ಆ ಜನರಲ್ಲಿ ಗ್ರಾಮ್ಯನಲ್ಲವೆಂಬಂತಿರುವ ಒಬ್ಬನು ಇದಿರಿಗೆ ಬರುವುದನ್ನು ಕಂಡು ಕುಮಾರನು ಹಾದಿಯ ಬಳಿಯಲ್ಲಿ ನಿಂತು ಪ್ರಜೆಗಳೆಲ್ಲ ಹೀಗೆ ಓಡುತ್ತಿರುವ ಕಾರಣವೇನೆಂದು ಕೇಳಿದನು. ಕುಮಾರನ ಅಸಾಮಾನ್ಯ ರೂಪವನ್ನು ಕಂಡು ಈತನು ರಾಜಕುಮಾರನೆಂದು ಅರಿತು ನಮಸ್ಕರಿಸಿ ಆ ಮನುಷ್ಯನು (ಹೀಗೆಂದು ವಿವರಿಸಿದನು)- ೯೩. ಸದಾಕಾಲದಲ್ಲಿಯೂ ನೆಲ್ಲು ಮೊದಲಾದ ಸಸ್ಯಗಳಿಂದ ಸಮೃದ್ಧವಾದ, ಸುತ್ತಲೂ ಬೆಳೆದ ಅಡಕೆಯ ಮರಗಳಿಂದಲೂ ವೀಳ್ಯದ ಎಲೆಬಳ್ಳಿಗಳಿಂದಲೂ ದಿಕ್ಕುಗಳನ್ನೆಲ್ಲ ಕಪ್ಪುಗೊಳಿಸುತ್ತ, ಚಕಚಕಿಸುವ ರತ್ನದ ಖನಿಗಳಿಂದ ಆಕಾಶವನ್ನು ಮಿಶ್ರಪ್ರಭೆಯಿಂದ ತುಂಬುತ್ತಿರುವ ರಾಜ್ಯ ಅಕೋ ಅಲ್ಲಿ ಕಾಣುವುದು ನೋಡು. ಅದರ ಹೆಸರು ಅರಿಂಜಯ; ಜನಕ್ಕೆಲ್ಲ ಸೌಖ್ಯಾವಹವಾದುದು. ೯೪. ಈ ರಾಜ್ಯಮಂಡಲದ ಲಕ್ಷ್ಮಿಗೆ ನಾಭಿಯಂತೆ ಮಧ್ಯದಲ್ಲಿ ಕಂಗೊಳಿಸುವ ವಿಪುಳವೆಂಬ ನಗರವು ಅಸದೃಶವಾದ ಉಪ್ಪರಿಗೆ ಮನೆಗಳಿಂದ ಸಮೃದ್ಧವಾಗಿರುವುದು. ೯೫. ಅದನ್ನು ತೋಳ್ಬಲದಿಂದ ಆಳುವವನು ಜಯವರ್ಮನೆಂಬವನು. ಆತನ ಪಟ್ಟದರಸಿ ಜಯಶ್ರೀಯೆಂಬವಳು. ನಯನ ಮನೋಹರವಾದ ತನ್ನ ರೂಪ ವಿಲಾಸಗಳಿಂದ ಆತನ ಮನವನ್ನು

ರತಿಗಂ ಮದನಂಗಂ ವಿ ।
ಶ್ರುತಮೋಹನಶಕ್ತಿ ಪುಟ್ಟುವಂದದಿನಾದಂ ॥
ಪತಿಗೆ ಸತಿ ಪುಟ್ಟಿದಳ್ ಸ ।
ನ್ಮತಿ ಗುಣವತಿ ರೂಪವತಿ ಶಶಿಪ್ರಭೆಯೆಂಬಳ್ ॥ ೯೬

ಮೊದಲೊಳ್ ಲಾವಣ್ಯಸರ್ವಸ್ವದ ತವಿಲನಣಂ ನೋಡದಾ ಕನ್ನೆಯಂ ಮಾ ।
ಡಿದನೀಗಳ್ ಸ್ವೇಚ್ಛೆಯಿಂದಿರ್ದವನಿಪತಿಗಳೊಳ್ ಕಾಮಸಂತಾಪಮಂ ಕೂ ॥
ಡಿದನಾದಂ ತತ್ತ್ವಿತೃದ್ವಂದ್ವದ ಮನಕೆ ಸಮಾಕಾರಸಂಪದ್ವರಾಲಾ ।
ಭದುರಂತೋದ್ವೇಗಮಂ ನೀಡಿದನತಿತರನಿರ್ಬಂಧದಿಂ ಪದ್ಮಸದ್ಮಂ ॥ ೯೭

ಆದಲ್ಲದೆಯುಂ

ಮನದ ವಿವೇಕಂ ಪೀನ ।
ಸ್ತನದೊಳ್ ನಾಲಗೆಯ ಮಾತು ಕಣ್ಣೊಳ್ ಕರತ ॥
ರ್ಜನಮಡರೆ ನಿಮಿರ್ದ ಪುರ್ವಿನ ।
ಕೊನೆಯೊಳ್ ನೆಲಸಿದುದು ಯೌವನಂ ನೆಲಸಲೊಡಂ ॥ ೯೮

॥ ಮಲ್ಲಿಕಾಮಾಲೆ ॥

ಹಾಸಕೌಸುಮಮಂಬಕದ್ಯುತಿಚಂದ್ರಿಕಂ ಸಸುಗಂಧನಿ ।
ಶ್ವಾಸದಕ್ಷಿಣವಾಯು ಮಂಜುಳವನ್ಯಪುಷ್ಪರುತಂ ತದು ॥
ದ್ಭಾಸಿನೂತನಯೌವನೋದಯಮಾಧವಂ ನೆರವೆಂದುಮಾ ।
ಯ್ತಾಸಮಸ್ತಜಗಜ್ಜಯಕ್ಕಿರವೆಂದು ಪೊಂಗುವನಂಗಜಂ ॥ ೯೯

ಆಳುವವಳು. ೯೬. ಮನ್ಮಥನಿಗೂ ರತಿಗೂ ಮೋಹನಶಕ್ತಿ ಹುಟ್ಟುವಂತೆ ಆ ದಂಪತಿಗಳಿಗೆ ಗುಣವತಿಯೂ ರೂಪವತಿಯೂ ಬುದ್ಧಿಮತಿಯೂ ಆದ ಶಶಿಪ್ರಭೆಯೆಂಬ ಮಗಳು ಹುಟ್ಟಿದಳು. ೯೭. ಬ್ರಹ್ಮನು ಮೊದಲು ಸೌಂದರ್ಯ ಸರ್ವಸ್ವವೆಲ್ಲ ಮುಗಿದು ಹೋಗುವುದೆಂಬುದನ್ನು ಗಮನಿಸದೆ ಆ ಕನ್ಯೆಯನ್ನು ನಿರ್ಮಿಸಿದನು; ತಮ್ಮಷ್ಟಕ್ಕೆ ತಾವು ಸಂತೋಷದಿಂದ ಇದ್ದ ರಾಜರಿಗೆಲ್ಲ ಈಗ ಕಾಮಸಂತಾಪವನ್ನು ನಿರ್ಮಿಸಿದನು; ರೂಪ ಸಂಪತ್ತುಗಳಲ್ಲಿ ಅನುರೂಪನಾದ ವರನು ದೊರೆಯಲಿಲ್ಲವೆಂಬ ಕೊರಗನ್ನು ಆಕೆಯ ತಾಯ್ತಂದೆಗಳಿಗೆ ಉಂಟುಮಾಡಿದನು. ಅದಲ್ಲದೆ– ೯೮. ಆ ಕನ್ಯೆಗೆ ಯೌವನ ಬಂದು ನೆಲಸಿದೊಡನೆ, ಮನಸ್ಸಿನ ವಿವೇಕವು ಉಬ್ಬಿದ ಮೊಲೆಗಳಲ್ಲಿಯೂ, ನಾಲಗೆಯ ಮಾತು ಕಣ್ಣುಗಳಲ್ಲಿಯೂ, ಕೈಬೆರಳ ಸನ್ನೆ ಹುಬ್ಬಿನ ಕೊನೆಯಲ್ಲಿಯೂ ನೆಲಸಿದುವು. ೯೯. ಈಕೆಯ ನಗೆಯೆ ಹೂವು, ಕಣ್ಬೆಳಕೆ ಬೆಳ್ದಿಂಗಳು, ಪರಿಮಳಯುಕ್ತವಾದ ಇವಳ ಉಸಿರೆ ದಕ್ಷಿಣಾನಿಲ, ಧ್ವನಿಯೆ ಕೋಗಿಲೆ– ಹೀಗೆ ಇವಳ ಯೌವನೋದಯ ವೆಂಬ ವಸಂತ ನನಗೆ ನೆರವಾಗಿರಲು ಸಕಲ ಜಗತ್ತನ್ನು ಜಯಿಸುವುದಕ್ಕೆ

ಪೆಡೆಯುಡುಗಿದ ಭೋಗಿನಿಯೆಮೆ ।
ಮಿಡುಕಂ ಸಂಗಳಿಸದಮರಿ ಗಗನಸ್ಥಳಿಯೊಳ್ ॥
ನಡೆ ಮಾಣ್ದ ಖಚರಿಯೆಂಬೀ ।
ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್ ॥ ೧೦೦

ಆಕೆಯನಂಗಜವಿಜಯಪ ।
ತಾಕೆಯನಸಮಾಸ್ತ್ರಶರಶಲಾಕೆಯನೆರೆದು ॥
ವೀಕಾಂತನಲ್ಲಿಗಟ್ಟಿದ ।
ನೇಕಾಗ್ರಮನಂ ಮಹೇಂದ್ರನೆಂಬ ನರೇಂದ್ರಂ ॥ ೧೦೧

ಅಟ್ಟಲೊಡಂ ಜಯವರ್ಮಂ ।
ಕೊಟ್ಟಪೆನೆಂದಿರ್ದೊಡಾತನಚಿರಾಯುಷ್ಯಂ ॥
ಮುಟ್ಟಲ್ಲನೆಂದು ಮಾಣಿಸಿ ।
ಕಟ್ಟಿದನಾದೇಶಮಂ ನಿಮಿತ್ತದಿನೊರ್ವಂ ॥ ೧೦೨

ಬೇಡಿದೊಡಾರುಮಾರ್ಗೆ ಗಡ ಕೊಟ್ಟಪರಾವುದನಂತದಿರ್ಕಣಂ ।
ಬೇಡದೆ ಕೊಳ್ವೆನಿಂ ನಿಜತನೂಜೆಗೆ ಸಂಗಡವಾಗೆ ನಾಡುಮಂ ॥
ಬೀಡುಮನೆಂದು ಬಂದು ಪುರಮಂ ನೆರೆ ಮುತ್ತಿ ಮಹೇಂದ್ರನಿರ್ದೊಡಂ ।
ತೋಡಲೊಡರ್ಚೆ ಕಿಟ್ಟಲೆಕಿಟಿಂದಲೆಯಾದಪುದೀಜಗಜ್ಜನಂ ॥ ೧೦೩

ಅನುಕೂಲವಾಯಿತೆಂದು ಮನ್ಮಥನು ಹಿಗ್ಗುವನು. ೧೦೦. ಇವಳೇನು ಹೆಡೆಯಿಲ್ಲದ ನಾಗಕನ್ಯೆಯೊ, ಏವೆ ಬಡಿವುದನ್ನು ಕಲಿತ ದೇವಾಂಗನೆಯೊ, ಆಕಾಶದಲ್ಲಿ ಸಂಚರಿಸುವುದನ್ನು ನಿಲ್ಲಿಸಿದ ಖೇಚರಿಯೊ ಎಂದು ಜನರು ಭಾವಿಸುವಂತೆ ಆ ಬಳ್ಳಿವೈಯ ಕನ್ಯೆ ನವಯೌವನದಲ್ಲಿ ಕಂಗೊಳಿಸಿದಳು. ೧೦೧. ಮನ್ಮಥನ ವಿಜಯಧ್ವಜವಾದ, ಕಾಮನ ಬಾಣವೆನಿಸಿದ ಆಕೆಯನ್ನು ತನಗೆ ಕೊಡ ಬೇಕೆಂದು ಮನಸ್ಸಿಟ್ಟು ಮಹೇಂದ್ರನೆಂಬ ಅರಸನು ಜಯವರ್ಮನ ಬಳಿಗೆ ದೂತನನ್ನು ಕಳುಹಿಸಿದನು. ೧೦೨. ಜಯವರ್ಮನು ಕೊಡುವುದಕ್ಕೆ ಸಿದ್ಧನಾಗಿದ್ದನು. ಆದರೆ ನೈಮಿತ್ತಿಕನೊಬ್ಬನು "ಆ ರಾಜನು ಅಲ್ಪಾಯುಷಿಯಾದುದರಿಂದ ಯೋಗ್ಯನಲ್ಲ" ಎಂದು ತಿಳಿಸಿ ತಡೆಯೊಡ್ಡಿದನು. ೧೦೩. "ಬೇಡಿದೊಡನೆ ಯಾರಿಗಾದರೂ ಯಾವುದನ್ನು ಕೊಡುತ್ತಾರೆ? ಅದು ಹಾಗಿರಲಿ. ಈಗ ನಾನು ಬೇಡದೆಯೆ ಅವನ ಮಗಳೊಡನೆ ಆತನ ದೇಶವನ್ನೂ ತೆಗೆದುಕೊಳ್ಳು ವೆನು" ಎಂದು ಮಹೇಂದ್ರರಾಜನು ಪಟ್ಟಣಕ್ಕೆ ಮುತ್ತಿಗೆ ಹಾಕಿರುವನು

ಎಂದು ಪೇಟಿಶ್ಚಾತಂ ಬೀಟಿಕ್ಕೊಂಡು ಪೋಗೆ

ಆಯಾಸಮನೀಮರ್ತ್ಯನಿ ।
ಕಾಯಕ್ಕಪಹರಿಸಿ ದುರ್ಬಲಸ್ಯ ಬಲೋ ರಾ ॥
ಜಾಯೆಂಬುದನಾಂ ಮಾಡದೊ ।
ಡೀಯೆಡೆಯೊಳ್ ವ್ಯರ್ಥಮಲ್ತೆ ಪಾರ್ಥಿವಜನ್ಮಂ ॥ ೧೦೪

ಅದುಕಾರಣದಿಂ ವಿಪುಳನಗರಕ್ಕೆ ನಡೆವೆನೆಂದು ತತ್ಪುರಾಭಿಮುಖಮಾಗಿ ನಡೆದೆಯ್ದೆವರ್ಪಾಗಳ್

ಬಿಡುವುರಿಯೆಣ್ಣೆ ಸೂಸುವ ಕನಲ್ಗಿಡಿ ಬೀಸುವ ಪಾಸಮೋರೆಯಿಂ ।
ದಿಡುವರೆ ಪೊಯ್ವ ಕತ್ತಳಿಕೆ ಕುತ್ತುವ ಕೊಂತಮುರುಳ್ಚುವೊಡ್ಡುಗಲ್ ॥
ಕಡೆಸಿರಗೆಯ್ದ ನೂಂಕುದಳಿಯಿಕ್ಕುತಹ ಬಲ್ದಸಿ ಭೀತಿಯಂ ಮನ ।
ಕ್ಕೊಡರಿಸೆ ಲಗ್ಗೆಯೊಟ್ಟಳದೊಳಿಟ್ಟಳವಾದುದು ಕೋಂಟೆಗಾಳೆಗಂ ॥ ೧೦೫

ಇಡಿಸುವ ಡೆಂಕಣಕ್ಕೆ ನೆಲವಾಳಿಗೆ ಕೊತ್ತಳದಂಬುಗಂಡಿಯಿಂ ।
ದುಡುಗದೆ ಪಾಯ್ವ ಕೂರ್ಗಣೆಗೆ ಬದ್ಧರಮೊಡ್ಡಿಪ ಕೋಂಟೆಗಾವಗಂ ॥
ಕೆಡುಪುವ ಗಗ್ಗೆ ವಂಕದರದಿಂ ಪೊಱಮಟ್ಟಟೆವಾಳ್ಗಮಾನ್ಕೆಯಾಳ್ ।
ಗಡಣಿಸೆ ಕಾದುತಿರ್ದುದು ಮಹೇಂದ್ರಪದಾತಿನಿ ಮುತ್ತಿ ಸುತ್ತಲುಂ ॥ ೧೦೬

ಆದುದರಿಂದ ಈ ಜನ ಗಾಬರಿಯಾಗಿ ಓಡತೊಡಗಿ ಕೋಲಾಹಲವುಂಟಾಗಿದೆ". ವ॥ ಹೀಗೆ ಹೇಳಿ ಆತನು ಬೀಳ್ಕೊಂಡು ಹೋದನು. ೧೦೪. "ಈ ಜನಕ್ಕೆ ಉಂಟಾದ ಆತಂಕವನ್ನು ನಿವಾರಿಸಿ "ದುರ್ಬಲರಿಗೆ ರಾಜನೇ ಬಲ" ಎಂಬ ಮಾತನ್ನು ಸತ್ಯಗೊಳಿಸದಿದ್ದರೆ ನಾನು ರಾಜವಂಶದಲ್ಲಿ ಹುಟ್ಟಿದುದು ವ್ಯರ್ಥವಲ್ಲವೆ? ವ॥ ಆದುದರಿಂದ ವಿಮಳ ನಗರಕ್ಕೇ ಹೋಗುವೆನು" –ಹೀಗೆ ಯೋಚಿಸಿ ಕುಮಾರನು ಆ ಪಟ್ಟಣದತ್ತ ನಡೆದು ಸಮೀಪಿಸುತ್ತಿರಲಾಗಿ– ೧೦೫. (ಮೇಲಿಂದ) ಸುರಿಯುವ ಉರಿಯೆಣ್ಣೆ, ಸೂಸುತ್ತಿರುವ ನಿಗಿನಿಗಿ ಕೆಂಡ, ಬೀಸುತ್ತಿರುವ ನೇಣು, ಓರೆಯಿಂದ ಕೊಡುವ ಹೊಡೆತ, ಇರಿಯುವ ಕಠಾರಿ, ತಿವಿಯುವ ಈಟಿ, ಉರುಳಿಸುತ್ತಿರುವ ಬಂಡೆಗಲ್ಲು, ತುದಿಗೆ ಏರುತ್ತಿರುವವರನ್ನು ಕೆಳಕ್ಕೆ ನೂಕುವ ಮರದ ದಿಮ್ಮಿ, ಚುಚ್ಚುವ ಬಲವಾದ ಗೂಟಗೋಲು –ಇವುಗಳಿಂದ ಲಗ್ಗೆಯೇರುವವರ ಮನದಲ್ಲಿ ಭೀತಿ ಹುಟ್ಟುವಂತೆ ಕೋಟೆಕಾಳಗವು ಕಣ್ತುಂಬುತ್ತಿತ್ತು. ೧೦೬. ತಿವಿಯುವ ಈಟಿಗೆ ಎದುರಾಗಿ ನೆಲವಾಳಿಗೆಯನ್ನು, ಕೊತ್ತಳದ ಕಂಡಿಗಳಿಂದ ಎಡೆಬಿಡದೆ ಬರುವ ಹರಿತವಾದ ಬಾಣಗಳಿಗೆ ತಡೆಯಾಗಿ ಬದ್ಧರಗಳನ್ನೂ ಒಡ್ಡಿ ನಿಂತು, ಕೋಟೆಯನ್ನು ಕೆಡಹಲು 'ಗೆಗ್ಗೆ'ಗಳನ್ನು ಅಳವಡಿಸುತ್ತ, ಗುಪ್ತದ್ವಾರದಿಂದ ಹೊರಬೀಳುವ ಶತ್ರುಯೋಧರಿಗೆ ಎದುರಾಗಿ ಪರಾಕ್ರಮಿಗಳಾದ ಯೋಧರು ಒಡ್ಡಿ ನಿಂತು ತುಮುಲವಾಗಿ, ಮಹೇಂದ್ರನ ಕಾಲ್ದಳವು ಸುತ್ತಲೂ ಮುತ್ತಿಕೊಂಡು ಕಾದಾಡುತ್ತಿತ್ತು.

ಅಂತು ಮುತ್ತಿ ಕಾದುತಿರ್ದ ಸೇನಾಮಹೋದಧಿಯಂ ಮಂದರಾಚಲದಂತೆ ಪೊಕ್ಕು ನಿರ್ಗಹನ ವೃತ್ತಿಯಿಂ ಪುರಮಂ ಪುಗಲ್ ಪೋಪಾಗಳ್

ನೆರೆದೊಡ್ಡಿರ್ದೊಡ್ಡನೇನುಂ ಬಗೆಯದೆ ಮದಧೀಶಾಜ್ಞೆಯಿಂ ಬಂದವೊಲ್ ನೀಂ ।
ಪುರಮಂ ಬೇಗಂ ಪುಗಲ್ ಪೋದೊಡೆ ತಲೆ ಪೊಱಿಯೇ ನಿನ್ನಮೆಯ್ಗಕ್ಕಟಾ ಸೈ ॥
ತಿರು ನೀನಾರ್ಗೆಂದು ತನ್ನಂ ನುಡಿದ ಭಟಕಟಾಹಕ್ಕೆ ಕಣ್ಣಿಂದೆ ಸೂಸು ।
ತ್ತುರಿಯಂ ಕಲ್ಪಾಂತದುಗ್ರಾಂತಕನ ಮಸಕಮಂ ತಾಳ್ದಿದಂ ರಾಜಪುತ್ರಂ ॥ ೧೦೭

ಅಂತು ಕಡುಮುಳಿದಾಬಲದೊಳೊರ್ವನ ಕೈಯ ಕೋದಂಡಕಾಂಡಂಗಳನೆೞಿದು ಕಳೆದುಕೊಂಡು

ಪೆಱಗಿಕ್ಕಿ ಪುರಮನೊಡ್ಡಿದ ।
ಮಱುವಕ್ಕದ ಮೇಲೆ ಪೋಗದಂಬಿನ ಮೞಿಯಂ ॥
ಕಱಿದಂ ನಂಜಿನ ಮೞಿಯಂ ।
ಕಱಿವಂದದೆ ವಿಳಯಸಮಯದೊಳ್ ಕೀನಾಶಂ ॥ ೧೦೮

ಆಗಳ್

ನೆರೆದಟ್ಟಾಳಂಗಳೊಳ್ ನೋಡುವ ನಗರಜನಕ್ಕಾವಗಂ ಕೋಲನಾಂತಂ ।
ತಿರುವಾಯೊಳ್ ತೊಟ್ಟಪಂ ತೊಟ್ಟಿರದೆ ತೆಗೆದಪಂ ಬಿಟ್ಟಪಂ ತಾನೆನಿಪ್ಪಂ ॥
ತರಮೇನುಂ ವೇಗಸಂಧಾನದಿನಱಿಯಲಣಂ ಬಂದುದಿಲ್ಲೆತ್ತಲುಂ ದಿಂ ।
ಡುರುಳುತ್ತಿರ್ಪನ್ಯಸೈನ್ಯಂಗಳ ತಲೆಗಳೆ ಕಾಣಲ್ಕೆ ಬಂದತ್ತದೆತ್ತಂ ॥ ೧೦೯

ವ॥ ಹೀಗೆ ಮುತ್ತಿಗೆ ಹಾಕಿ ಕಾದಾಡುತ್ತಿದ್ದ ಸೈನ್ಯಸಾಗರವನ್ನು ಮಂದರಗಿರಿಯಂತೆ ಕುಮಾರನು ಹೊಕ್ಕು ನಿರ್ಭೀತಿಯಿಂದ ಪಟ್ಟಣವನ್ನು ಒಳಹೊಗಲು ಮುಂದರಿಯುತ್ತಿರುವಾಗ – ೧೦೭. "ನಾವೆಲ್ಲಃ ನೆರೆದು ಒಡ್ಡಿದ ಸೈನ್ಯವನ್ನು ಎಷ್ಟೂ ಗಮನಿಸದೆ, ನಮ್ಮ ಪ್ರಭುಗಳ ಆಜ್ಞೆಯಿಂದಲೆ ಬಂದವನೆಂಬಂತೆ ನೀನು ಪಟ್ಟಣದೊಳಗೆ ಆತುರದಿಂದ ಹೋಗಬೇಡ. ನಮ್ಮನ್ನು ಉಲ್ಲಂಘಿಸಿ ಹೋಗುವೆ ಯಾದರೆ ನಿನ್ನ ಮೈಗೆ ತಲೆ ಹೊರೆಯಾಗಿದೆಯೆ? ಅಯ್ಯೊ ಪಾಪ ! ತೆಪ್ಪಗೆ ಇರು. ಯಾರು ನೀನು?" –ಹೀಗೆಂದು ತನಗೆ ನುಡಿದ ಸೈನಿಕ ಸಮೂಹಕ್ಕೆ ಕುಮಾರನು ತನ್ನ ಕಣ್ಣಿಂದ ಉರಿಯುಗುಳುತ್ತ ಪ್ರಳಯಾಂತಕನ ಉಗ್ರತೆಯನ್ನು ತಾಳಿದನು. ವ॥ ಹಾಗೆ ಅತ್ಯಂತ ಕ್ರುದ್ಧನಾಗಿ ಆ ಸೇನೆಯೊಳಗೊಬ್ಬನ ಕೈಯಿಂದ ಬಿಲ್ಲುಬಾಣಗಳನ್ನು ಎಳೆದು ಕಿತ್ತುಕೊಂಡು– ೧೦೮. ಪಟ್ಟಣವನ್ನು ಹಿಂದಿಟ್ಟುಕೊಂಡು ಶತ್ರುಸೈನ್ಯದ ಮೇಲೆ, ಪ್ರಳಯಕಾಲದ ಯಮನು ವಿಷದ ಮಳೆಗರೆಯುವಂತೆ ನಿರಂತರವಾದ ಬಾಣಗಳನ್ನು ಮಳೆಗರೆದನು. ಆಗ– ೧೦೯. ನಗರದಲ್ಲಿ ಅಟ್ಟಗಳನ್ನೇರಿ ನೋಡುತ್ತಿರುವ ಜನಕ್ಕೆ– ಈತನು ಸಂಧಾನ ವೇಗದ ಅತಿಶಯ ದಿಂದಾಗಿ ಬಾಣಗಳನ್ನು ಬತ್ತಳಿಕೆಯಿಂದ ಹಿರಿಯುವುದು, ಹೆದೆಗೆ ತೊಡಿಸುವುದು, ಎಳೆಯುವುದು, ಬಾಣ ಬಿಡುವುದು ಇವುಗಳಲ್ಲಿ ಅಂತರವೆ ಕಾಣಲಿಲ್ಲ;

ದ್ವಿರದಂಗಳ ಹರಿಗಳ ಮ ।
ತ್ತೆ ರಥಂಗಳ ಮೇಗಣುಗ್ರಭಟಪಟಳಮನಾ ॥
ದುರ್ದಾರುಳೆಚ್ಚಂ ಪೊರಳೆಚ್ಚಂ ।
ಮರಳೆಚ್ಚಂ ಚಾಪಚಾಪಳಂ ಯುವರಾಜಂ ॥ ೧೧೦

ಆಗಳ್ ಕಾಡಿಯುಂ ನೋಡಿಯುಂ ಪೋಪ ನಿಜಧ್ವಜಿನಿಯನತಿದೂರದ ನೆಲೆಯೊಳ್ ನೆರೆದ ರಾಜಲೋಕದ ನಡುವಿರ್ದ ಮಹೇಂದ್ರಮನುಜೇಂದ್ರಂ ಕಂಡಿದೇನೆಂದು ಬೆಸೆಗೊಳ್ವುದುಮೊರ್ವ ನಿಂತೆಂದಂ:-

ಎತ್ತಣನಕ್ಕೆ ಬಂದು ಕಡುಪಂ ಪಡೆದೊರ್ವನ ಬಿಲ್ಲನೀಟ್ಟುಕೊಂ ।
ಡೆತ್ತುತೆ ಮೊಗ್ಗರಂ ಕೆಡೆವಿನಂ ಬಿಡದೆಚ್ಚು ಭವನ್ಮಹೀಶನಂ ॥
ಮಿತ್ತುಗೆ ಬೋನವೆತ್ತಿದಪನಿತ್ತಲೆ ಪೋ ಬರವೇಟಿಸುತ್ತು ಮು ।
ದ್ವೃತ್ತನದೊರ್ವನಿರ್ದಪನಿದಿರ್ಚುವರಾರೆನಗೆಂಬ ಪೆರ್ಚಿನಿಂ ॥ ೧೧೧

ಎನಲೊಡಂ ರೋಷಲೋಹಿತಲೋಚನನುಮುದ್ಧೂತತ್ರಿಪತಾಕಾಕರಾಳಭಾಳನುಂ, ಘರ್ಮಬಿಂದುಸಂತಾನದಂತುರಿತಗಂಡಮಂಡಳನುಂ, ಪ್ರಸ್ಫುರಿತದಶನವಸನನುಮಾಗಿ

ಒರ್ವಂಗೀರಾಜಲೋಕಂಬೆರೆಸು ನಡೆಯೆ ಬಂಟಿಂಗದೆಗ್ಗೆಂದು ಮೊಗ್ಗಿಂ
ದಾರ್ವೆನ್ನೊಳ್ ಬಂದೊಡಿಲ್ಲಿಂದವರ್ಗೆಬಟಿಕಮೆನ್ನಾಣೆಯೆಂದಾಮಹೇಂದ್ರಂ
ಗರ್ವಾಂಧಂ ಸಿಂಧುರಸ್ಕಂಧದಿನಿಟೆದು ಸಕೌಕ್ಷೇಯಕಂ ಬರ್ಪುದಂ ಕಂ ।
ಡುರ್ವೀಭಾಗಕ್ಕೆ ಕೋಲುಂ ತಲೆಯುಮೊಡನೆ ಬೀಟ್ವನ್ನಮೆಚ್ಚಂ ಕುಮಾರಂ ೧೧೨

ಆದರೆ ಸುತ್ತಲೂ ದಿಂಡಿರಿಕೆಯುರುಳುವ ಶತ್ರುಸೈನ್ಯದ ತಲೆಗಳು ಮಾತ್ರ ಕಾಣುತ್ತಿದ್ದವು. ೧೧೦. ಆನೆಗಳ, ಕುದುರೆಗಳ, ರಥಗಳ ಮೇಲಿದ್ದ ಪ್ರಚಂಡ ಯೋಧ ಸಮುದಾಯುವನ್ನೆಲ್ಲ ಅಬ್ಬರಿಸಿ ಉರುಳುವಂತೆ, ಹೊರಳುವಂತೆ, ಮರಳಿ ಮರಳಿ ಆ ಬಿಲ್ಲುವಿದ್ಯೆಯ ಚತುರನು ಬಾಣಗಳಿಂದ ಹೊಡೆದನು. ವ॥ ಆಗ ಓಡಿಹೋಗುತ್ತಿರುವ ತನ್ನ ಸೇನೆಯನ್ನು ಸಮೀಪದ ತನ್ನ ನೆಲೆಯಲ್ಲಿ ರಾಜಪರಿವಾರದಲ್ಲಿದ್ದ ಮಹೇಂದ್ರರಾಜನು ಕಂಡು "ಇದೇನು, ಹೀಗೆ?" ಎಂದು ಕೇಳಲಾಗಿ ಒಬ್ಬನು ಹೀಗೆಂದನು– ೧೧೧. "ಎಲ್ಲಿಯವನೊ ಒಬ್ಬನು ಬಂದು ಬಲಾತ್ಕಾರದಿಂದ ಒಬ್ಬ ಸೈನಿಕನ ಬಿಲ್ಲನ್ನು ಕಿತ್ತುಕೊಂಡು ನಮ್ಮ ಸೈನ್ಯವೆಲ್ಲ ದಿಂಡುರುಳುವಂತೆ ನಿರಂತರವಾಗಿ ಬಾಣಪ್ರಯೋಗ ಮಾಡುತ್ತ, "ನಿಮ್ಮ ರಾಜನನ್ನು ಮೃತ್ಯುವಿಗೆ ಬಲಿಕೊಡುವೆನು. ಅವನಿಗೆ ಇತ್ತ ಬಾಯೆಂದು ಹೇಳಿ" ಎನ್ನುತ್ತ ತನ್ನನ್ನು ಎದುರಿಸುವವರಾರೆಂಬ ದರ್ಪದಿಂದ ಉದ್ಧಟವಾಗಿ ವರ್ತಿಸುತ್ತಿರುವನು. ವ॥ ಈ ಮಾತನ್ನು ಕೇಳಿ ರೋಷದಿಂದ ಕೆಂಗಣ್ಣಾಗಿ, ಹುಬ್ಬುಗಂಟಿಕ್ಕುತ್ತ, ಕೆನ್ನೆಯ ಮೇಲೆಲ್ಲ ಬೆವರಹನಿಗಳು ಮೂಡಲಾಗಿ, ತನ್ನ ಹಲ್ಲುಗಳ ಕಾಂತಿಯನ್ನು ಹರಡುತ್ತ– ೧೧೨. "ಯಾವನೊ ಒಬ್ಬಂಟಿಗನ ಮೇಲೆ ಈ ರಾಜ ಪರಿವಾರದೊಡನೆ ಏರಿಹೋಗುವುದೆಂದರೆ ನನ್ನ ಕಲಿತನಕ್ಕೆ ಕಳಂಕ; ನನ್ನ ಜೊತೆಗೆ ಯಾರಾದರೂ ಬಂದರೆ ಆಣೆ" ಎಂದು ಆ ಮಹೇಂದ್ರರಾಜನು ಅಹಂಕಾರದಿಂದ ಅರಿವು

ಆ ಸಮಯದೊಳ್ ಸಮಸ್ತಸಾಮಗ್ರಿವೆರಸು ಜಯವರ್ಮಮಂಡಲೇಶ್ವರನಿದಿರ್ವಂದಕಾರಣ ಬಾಂಧವನುಮನಿಮಿತ್ತ ಮಿತ್ರನುಮಾಗಿರ್ದ ಜಿನಸೇನನಂ ಮಹಾವಿಭೂತಿಯಿಂ ಮುಂದಿರ್ದೊಡಗೊಂಡು ಪುರಮಂ ಪುಗುವಾಗಳ್

ಈತಂ ಕಾದಿ ಮಹೇಂದ್ರನಂ ಬಲಸಮೇತಂ ಬಾಣದಿಂ ಕೂಡೆ ಪೂ ।
ಱ್ದಾತಂ ನಮ್ಮ ಪುರೀಪುರಂಧ್ರಿಯರ ಕರ್ಣೋತ್ತಂಸಮಂ ನಡೆ ಕಾ ॥
ದಾತಂ ರಾಜ್ಯಪದಕ್ಕೆ ಮತ್ತೆ ಜಯವರ್ಮೋರ್ವೀಶನಂ ತಾನೆ ತಂ ।
ದಾತಂ ನೂತನನೆಂದು ನೋಡಿದುದತಿಪ್ರೀತಂ ಪುರಾಂತರ್ಜನಂ ॥ ೧೧೩

ಅನಂತರಂ ರಾಜಭವನಮಂ ಪೊಕ್ಕು ಪಳಿಕಿನೋಲಗಸಾಲೆಯೊಳಗಣ ಮಣಿಮಯಾಸನಂಗಳ ನಳಂಕರಿಸಿ ಕುಮಾರಂ ಬಂದ ವೃತ್ತಾಂತಮಂ ಬೆಸಗೊಳುತ್ತಿರ್ಪನ್ನೆಗಂ ಶಶಿಪ್ರಭೆಯುಮಾತನಂ ನೋಡುವಟ್ಟೆಯಿಂ ತಾನಲ್ಲಿಗೆ ಸೌವಿದಲ್ಲನನಟ್ಟಿ ಲಬ್ಧಾಗಮನಾಭ್ಯನುಜ್ಞನಾಗಿ

ನೃಪಲೀಲಾಪರಿಷನ್ನಿಕೇತನಪುರೋಭಾಗಕ್ಕೆ ಸಾರ್ತಂದಳಂ ।
ದುಪದೇಶಂಗುಡುವಂದದಿಂದಲಸಯಾನಪ್ರೌಢಿಯಿಂ ಹಂಸೆಗಾ ॥
ತಪಮಂ ಕೊರ್ವಿಸುವಂದದಿಂ ಮಣಿವಿಭೂಷಾರಶ್ಮಿಯಿಂ ನೂಪುರೋ ।
ಲ್ಲಪನವ್ಯಾಜದಿನಾಗಳೇಸುವೆಸನಂ ಕಾಮಂಗ ಪೇಳ್ವಂದದಿಂ ॥ ೧೧೪

ಗೆಟ್ಟು, ಆನೆಯಿಂದ ಇಳಿದು, ಖಡ್ಗಹಸ್ತನಾಗಿ ಬರುವುದೊಂದೆ ತಡ, ತಾನು ಬಿಟ್ಟ ಬಾಣವೂ ಈತನ ತಲೆಯೂ ಕೂಡಿಯೆ ನೆಲಕ್ಕೆ ಬೀಳುವಂತೆ ಕುಮಾರನು ಎಚ್ಚನು. ವ॥ ಆ ಸಮಯದಲ್ಲಿ ಜಯವರ್ಮರಾಜನು ಸಕಲ ಸಾಮಗ್ರಿ ಸಹಿತವಾಗಿ ಇದಿರುಗೊಂಡು, ನಿರ್ವ್ಯಾಜ ಬಂಧುವೂ, ಅನಿರೀಕ್ಷಿತ ಸ್ನೇಹಿತನೂ ಆದ ಜಿನಸೇನಕುಮಾರನನ್ನು ಮುಂದಿಟ್ಟುಕೊಂಡು ಮಹಾವೈಭವದಿಂದ ಪಟ್ಟಣದಲ್ಲಿ ಪ್ರವೇಶಮಾಡುವಾಗ–೧೧೩. "ಯುದ್ಧಮಾಡಿ ಸೈನ್ಯಸಹಿತವಾಗಿ ಮಹೇಂದ್ರನನ್ನು ಬಾಣಗಳಲ್ಲಿ ಹೂಳಿದವನು ಈತನೆ; ನಮ್ಮ ನಗರದ ಮುತ್ತೈದೆಯರ ಮಾಂಗಲ್ಯಭಾಗ್ಯವನ್ನು ಕಾಪಾಡಿದವನು ಈತನೆ; ರಾಜ್ಯಪದವಿಗೆ ಜಯವರ್ಮ ರಾಜನನ್ನು ಪುನಃ ತಂದು ಕೂಡಿಸಿದವನು ಈತನೇ" ಎಂದು ಹೊಗಳುತ್ತ ಅತಿ ಪ್ರೀತಿಯಿಂದ ನಗರ ನಿವಾಸಿಗಳು ಕುಮಾರನನ್ನು ನೋಡಿದರು. ವ॥ ಆ ಬಳಿಕ ಅರಮನೆಯನ್ನು ಪ್ರವೇಶಮಾಡಿ ಸ್ಫಟಿಕದ ಓಲಗಶಾಲೆಯಲ್ಲಿಯ ರತ್ನಮಯವಾದ ಪೀಠಗಳಲ್ಲಿ ಮಂಡಿಸಿ, ಕುಮಾರನನ್ನು ಮಾತನಾಡಿಸುತ್ತ ಆತನು ಅಲ್ಲಿಗೆ ಹೇಗೆ ಬಂದನೆಂಬ ವೃತ್ತಾಂತವನ್ನು ಕೇಳಿ ತಿಳಿದುಕೊಳ್ಳುತ್ತಿರಲಾಗಿ, ಶಶಿಪ್ರಭೆಯೂ ಆತನನ್ನು ನೋಡುವ ಕುತೂಹಲದಿಂದ ಓಲಗಶಾಲೆಗೆ ತನ್ನ ಅಂತಃಪುರದ ಆಳನ್ನು ಕಳಿಸಿ, ರಾಜನ ಅನುಮತಿಯನ್ನು ಪಡೆದುಕೊಂಡು–೧೧೪. ತನ್ನ ಮೆಲ್ನಡೆಯ ಚಾತುರ್ಯದಿಂದ ಹಂಸಕ್ಕೆ ಪಾಠೋಪದೇಶ ಮಾಡುವಂತೆ, ತನ್ನ ರತ್ನಾಭರಣ ಗಳ ಪ್ರಭೆಯಿಂದ ಬಿಸಿಲಿನ ಬೆಳಕನ್ನು ವೃದ್ಧಿಗೊಳಿಸುವಂತೆ, ಅಂದುಗೆಯ ಸಿಂಜಾರವದಿಂದ ಮನ್ಮಥನಿಗೆ ಬಾಣಪ್ರಯೋಗ ಮಾಡೆಂದು ಅಪ್ಪಣೆ ಕೊಡುವಂತೆ

ನಯನಪ್ರಭೋಜ್ಜ್ವಲಜ್ಯೋ ।
ತ್ನೆಯಿನಾದಂ ಕನ್ನೆ ಮುನ್ನ ಧವಳಿಸಿ ಭೂಷಾ ॥
ಚಯಮಣಿಗಣನಿಚಯದೆ ತಾಂ ।
ಬಯಲಂ ಚಿತ್ರಿಸಿದಳೆಯ್ದೆ ಗಮನೋತ್ಸವದೊಳ್ ॥ ೧೧೫

ನಡೆವಂತೆ ನುಡಿದ ಪುತ್ರಿಕೆ ।
ಮಿಡುಕುವ ರಸಚಿತ್ರದೆಸೆವ ಪೆಣ್ಣೆಂಬೊಳ್ಪಂ ॥
ಪಡೆದಳ್ ಕಣ್ಗಂ ಮನಕಂ ।
ಪಡೆದಳ್ ಪೊಸವೇಟದೆಸಕಮಂ ನೃಪಸುತನೊಳ್ ॥ ೧೧೬

ಅಂತು ಬಂದು

ಪದನಖಚಂದ್ರಬಿಂಬಚಯದೊಳ್ ಪ್ರತಿಬಿಂಬಕದಂಬಶೋಭೆಯಿಂ ।
ದೊದವಿಸುವನ್ನೆಗಂ ಕುಟಿಳಕುಂತಳಮಾಳಿಕೆ ಲಕ್ಷ್ಮಲಕ್ಷ್ಮಿಯಂ ॥
ಪದಪಿನೊಳಂದು ಕಾಲ್ಗೆಱಗಿದಾತ್ಮಜೆಯಂ ಪರಸುತ್ತುಮೆತ್ತಿ ಪೀ ।
ಠದ ಕೆಲದಲ್ಲಿ ಕುಳ್ಳಿರಿಸಿದಂ ನಲವಿಂ ವಿಪುಳಾಧಿನಾಯಕಂ ॥ ೧೧೭

ಆಗಳ್

ಬಿದಿ ಮುಟ್ಟಿ ಮಾಡಿದಂದಿನಿ ।
ತೊದವದು ಲಾವಣ್ಯಮಂತದಲ್ತೊಲವಿಂದೀ ॥
ಸುದತಿಯನತನುವೆ ತಾಂ ಮು ।
ಟ್ಟದೆ ಮಾಡಿದನೆಂದು ನೋಡಿದಂ ನೃಪತನಯಂ ॥ ೧೧೮

ಅರಸನ ಒಡ್ಡೋಲಗದ ಮುಂಭಾಗಕ್ಕೆ ಬಂದಳು. ೧೧೫. ಕಣ್ಣುಗಳ ಪ್ರಭೆಯೆಂಬ ಉಜ್ಜ್ವಲವಾದ ಬೆಳ್ದಿಂಗಳಿಂದ ಮೊದಲು ಸಮಗ್ರವಾಗಿ ಧವಳವರ್ಣವನ್ನು ಲೇಪಿಸಿ, ಆ ಬಳಿಕ ತನ್ನ ರತ್ನಾಭರಣಗಳ ಹೇರಳವಾದ ವರ್ಣಕಾಂತಿಗಳಿಂದ ಬಯಲನ್ನೆಲ್ಲ ಚಿತ್ರಿಸುತ್ತ ಬಂದಳು. ೧೧೬. ನಡೆಯುವ ಹಾಗೂ ನುಡಿಯುವ ಒಂದು ಪುತ್ಥಳಿಯಿವಳು, ಸಂಚರಿಸುವ ರಸಚಿತ್ರದ ಹೆಣ್ಣಿವಳು ಎಂಬೊಂದು ಬೆಡಗನ್ನು ಕಣ್ಣಿಗೂ ಮನಕ್ಕೂ ಉಂಟುಮಾಡಿ, ರಾಜಕುಮಾರನಲ್ಲಿ ಹೊಸ ಪ್ರಣಯವನ್ನು ಆಕೆ ಮೂಡಿಸಿದಳು. ಹಾಗೆ ಬಂದು–೧೧೭. (ತಂದೆಯ) ಪಾದಗಳ ಉಗುರುಗಳೆಂಬ ಚಂದ್ರಬಿಂಬಗಳಲ್ಲಿ ತನ್ನ ಮುಖದ ಪ್ರತಿಬಿಂಬ ಸಮೂಹದ ಶೋಭೆಯನ್ನು ಮೂಡಿಸುತ್ತ ತನ್ನ ಗುಂಗುರುಗೂದಲುಗಳು ಆ ಚಂದ್ರಗಳ ಒಡಲಲ್ಲಿಯ ಕಪ್ಪುಕಲೆಗಳೆಂಬಂತೆ ಪಡಿನೆಳಲಾಗಿ ಕಾಣುತ್ತಿರಲಾಗಿ ಕಾಲಿಗೆ ಎರಗಿದಳು. ಅವಳನ್ನು ಆಶೀರ್ವಾದ ಪೂರ್ವಕವಾಗಿ ಎತ್ತಿ ತನ್ನ ಪೀಠದ ಪಕ್ಕದಲ್ಲಿ ಅರಸನು ಸಂತೋಷದಿಂದ ಕುಳ್ಳಿರಿಸಿದನು. ಆಗ–೧೧೮. "ಬ್ರಹ್ಮನು ಕೈಯಿಂದ ಮುಟ್ಟಿ ಮಾಡಿದ್ದರೆ ಇಷ್ಟೊಂದು ಚೆಲುವನ್ನು ನಿರ್ಮಿಸುವುದು ಸಾಧ್ಯವಿಲ್ಲ. ಇದು ಹಾಗಿರಲಾರದು. (ದೇಹವೇ ಇಲ್ಲದ) ಕಾಮನು ಇವಳನ್ನು ಮುಟ್ಟದೆ ನಿರ್ಮಿಸಿರ

ಆರಯೆ ಮತ್ತವೇಂ ಭರಸಹಂಗಳೊ ಜಂಘೆಗಳಾಂತುವೀಕಟೀ ।
ಭಾರಮನೇಸುರಂ ಪಿರಿದೊ ತಾಂ ನೆರೆದತ್ತು ಪಯೋಧರದ್ವಯೀ ॥
ಭೂರಿವಿಜೃಂಭಣಕ್ಕೆ ಮುಖಮೇನವಗಾಹನಶಕ್ತಮೋನಿಜಾ ।
ಕಾರದೊಳಿಟ್ಟುದೀಜಗದ ಚೆಲ್ವನಶೇಷಮುಮಂ ಕುಮಾರಿಯಾ ॥ ೧೧೯

ಎಂದಾಕೆಯ ಭುವನತ್ರಯಲೋಚನೀಯಾಕಾರಮಂ ಸೌಂದರ್ಯಮಂ ನೋಡಿ ಮನದೊಳ್ ವಿಸ್ಮಯಂಬಡುತ್ತುಮಿರ್ಪನ್ನೆಗಂ

ಅಮೃರ್ತಂ ಸಿಂಪಿಸುವಂತೆ ಸಾಂದ್ರಮಳಯಕ್ಷಾಮೋದಮಂ ಸೂಸುವಂ ।
ತೆ ಮೃಣಾಳಾಭರಣಂಗಳಂ ತುಡಿಸುವಂತುತ್ಫುಲ್ಲಶುಭ್ರಾಬ್ಜಪ ॥
ತ್ರಮಯಸ್ರಗ್ವಿಸರಂಗಳಂ ಮುಡಿಸುವಂತಾಕೇಕರಜ್ಯೋತಿಗಳ್ ।
ನಿಮಿರ್ವನ್ನಂ ಯುವರಾಜನಂ ಯುವತಿ ತಾನುಂ ನೋಡಿದಳ್ ನಾಡೆಯುಂ ॥ ೧೨೦

ಅಂತು ನೋಡಿಯುಂ

ನೋಟಂ ನೃಪಸುತನೊಳ್ ಕ ।
ಣ್ಬೇಟಂ ಮನದೊಳ್ ವಿಕಾರಚೇಷ್ಟೆಗಳೊಡಲೊಳ್ ॥
ನಾಟೆ ಬೆದಱಿದಳನಂಗನ ।
ಬೇಟೆಯೊಳೊಳಗಾದ ಹರಿಣಿಯೆನೆ ತರುಣಿ ಕರಂ ॥ ೧೨೧

ಬೇಕು" ಎಂದುಕೊಳ್ಳುತ್ತ ರಾಜಕುಮಾರನು ಅವಳನ್ನು ನೋಡಿದನು. ೧೧೯. "ಈಕೆಯ ಕಿರುದೊಡೆಗಳಿಗೆ ಭಾರಹೊರುವ ಸಾಮರ್ಥ್ಯ ಎಷ್ಟೊಂದು, ಘನವಾಗಿದೆ! ಈ ಜಘನ ಭಾರವನ್ನೆಲ್ಲ ಹೊತ್ತುವಲ್ಲ! ಇವಳ ಎದೆ ಎಷ್ಟು ಹಿರಿದಾಗಿದೆ! ಈ ಮೊಲೆಗಳ ಮಹಾಗಾತ್ರ ವೈಭವಕ್ಕೆಲ್ಲ ಅವಕಾಶವಿತ್ತುವಲ್ಲ! ಈ ಕುಮಾರಿಯ ಮುಖದ ಇಂಬು ಕೂಡ ಎಂತಹದು! ಈ ಜಗತ್ರಿನ ಸಮಸ್ತ ಸೌಂದರ್ಯವನ್ನೆಲ್ಲ ತನ್ನಲ್ಲಿ ಅಳವಡಿಸಿಕೊಂಡಿದೆಯಲ್ಲ!" ವ॥ ಎಂದು ತ್ರಿಲೋಕದ ಕಣ್ಣುಗಳಿಗೂ ದರ್ಶನೀಯವೆನಿಸಿದ ಆಕೆಯ ರೂಪಸೌಂದರ್ಯವನ್ನು ನೋಡಿ ಕುಮಾರನು ತನ್ನ ಮನಸ್ಸಿನಲ್ಲಿಯೆ ವಿಸ್ಮಯಗೊಳ್ಳುತ್ತಿರುವಾಗ– ೧೨೦. ಅಮೃತವನ್ನು ಸಿಂಪಡಿಸುವಂತೆ, ಮಂದವಾದ ಚಂದನಮಿಶ್ರಿತವಾದ ಸುಗಂಧಲೇಪನದ ಪರಿಮಳವನ್ನು ಬೀರುವಂತೆ, ತಾವರೆ ನಾಳದ ಆಭರಣಗಳನ್ನು ತೊಡಿಸುವಂತೆ, ಅರಳಿದ ಬೆಳ್ದಾವರೆಗಳ ಮಾಲೆಗಳನ್ನು ಮುಡಿಸುವಂತೆ, ತನ್ನ ಕಣ್ಣುಗಳನ್ನು ಅಗಲವಾಗಿ ಅರಳಿಸಿಕೊಂಡು ಆ ತರುಣಿಯು ಕಡೆಗಣ್ಣ ಕಾಂತಿಯನ್ನು ಪಸರಿಸುತ್ತ ಯುವರಾಜನನ್ನು ನೋಡಿದಳು. ಹಾಗೆ ನೋಡಿ–೧೨೧. ದೃಷ್ಟಿ ರಾಜಕುಮಾರನಲ್ಲಿಯೂ, ದೃಷ್ಟಿಪ್ರಣಯ ಮನದಲ್ಲಿಯೂ, (ಕಾಮ) ವಿಕಾರ ಚೇಷ್ಟೆಗಳು ಒಡಲಲ್ಲಿಯೂ ನಟ್ಟುನಿಲ್ಲಲಾಗಿ, ಮನ್ಮಥನ ಬೇಟೆಗೆ

ಆತನಿನಾದ ಬೇಟಮಭಿಜಾತತೆಯಿಂ ನೆಗಟಿಳ್ದೊಂದು ಧೈರ್ಯವಂ।
ತಾತನಿನಾದ ಭೀತಿ ನಿಜಬಾಲ್ಯದೊಳುಣ್ಮಿದ ಲಜ್ಜೆ ಹೃತ್ಸಮು ॥
ದ್ಭೂತನಿನಾದ ಸೊರ್ಕು ಸುಚರಿತ್ರತೆಯಿಂ ಸಮಸಂದ ಸೌಷ್ಠವಂ।
ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತಭಾವಚೇಷ್ಟೆಯಂ ॥ ೧೨೨

ಅನಂತರಮರಸನುಂ ವಾಕ್ಪ್ರಸ್ತುತಕಥಾವಸಾನದೊಳ್ ಕುಮಾರನಂ ಪ್ರಮದವನದೊಳಗಣ ದಿಗವಲೋಕನಮಹಾಪ್ರಾಸಾದಮಂ ಬಿಡುದಾಣಂ ಮಾಡಿ ದಿವಸವ್ಯಾಪಾರಮಂ ತೀರ್ಚುವಂತುತದ ಧಿಕೃತಜನಂಗಳುಮನಲಸಿಕೆಯಾಗದಂತು ಗೀತದ್ಯೂತಸಾಹಿತ್ಯನಿತ್ಯವಾದ್ಯವಾದಿತ್ರವಿಶಾರದೆಯರಪ್ಪ ವಿಳಾಸಿನೀಜನಂಗಳುಮನಪ್ಪಯಿಸಿ ಕಳಿಪಿ ತಾನುಂ ಯಥೋಚಿತ ವ್ಯಾಪಾರದಿಂದಿರ್ದೊಂದು ದೆವಸಂ ಯಾಮಿನೀಪ್ರಥಮಯಾಮವಿರಾಮಸಮಯದೊಳ್ ಸೆಜ್ಜೆವನೆಯೊಳ್ ಜಯಶ್ರೀಮಹಾದೇವಿವೆರಸಿ ರ್ಪವಸರದೊಳ್ ಶಶಿಪ್ರಭಾದೇವಿಯ ವಯಸ್ಯೆ ಕನಕಪ್ರಭೆಯೆಂಬಳ್ ಬಂದು ಪೊಡೆಮಟ್ಟು ಕುಳ್ಳಿರ್ದು

ಎಂದು ಮಹೇಂದ್ರ ಮರ್ದನನನೀಕ್ಷಿಸಿದಳ್ ಭವದಾತ್ಮಜಾತೆಯಂ।
ದಿಂದಮಮಾನಮನ್ಮಥವಿಕಾರಶತಂಗಳೊಳೊಂದಿ ಪಾಡಳಾ ॥
ನಂದದಿನಾಡಳೋದಳೊಡನಾಡಿಗಳೊಳ್ ನುಡಿಯಲ್ಕಮೊಲ್ಲಳಾ।
ಸೌಂದರಿ ಠಕ್ಕುವಿಟ್ಟು ತೆಱನಿರ್ದಪಳೇವುದದರ್ಕಧೀಶ್ವರಾ ॥ ೧೨೩

ಸಿಕ್ಕಿದ ಹೆಣ್ಣುಜಿಂಕೆಯಂತೆ ಆ ಯುವತಿ ತುಂಬ ಬೆದರಿದಳು. ೧೨೨. ಆತನಲ್ಲಿ ಹುಟ್ಟಿದ ಪ್ರಣಯದೊಡನೆ ಕುಲೀನತೆಯಿಂದಾದ ಒಂದು ಧೈರ್ಯವೂ, ಆತನಿಂದಾದ ಭೀತಿಯೊಡನೆ, ಬಾಲ್ಯದಿಂದ ಬಂದ ಲಜ್ಜೆಯೂ, ಮನ್ಮಥನಿಂದಾದ ಉನ್ಮಾದದೊಡನೆ ಸಚ್ಚಾರಿತ್ರದಿಂದ ರೂಢವಾದ ಸೌಷ್ಠವವೂ, ಆಕೆಯ ಮನಸ್ಸಿನಲ್ಲಿ ಉದ್ಭವಿಸಲಾಗಿ ಆ ಕನ್ಯೆಕಿಲಕಿಂಚಿತ ಭಾವವನ್ನು (ಅನೇಕ ಭಾವಗಳ ಮಿಶ್ರಾವಸ್ಥೆಯನ್ನು)ಹೊಂದಿದಳು. ವ॥ ಆ ಬಳಿಕ ಅರಸನು ಮಾತುಕತೆಗಳನ್ನು ಮುಗಿಸಿ ಕುಮಾರನಿಗೆ ಪ್ರಮದೋದ್ಯಾನ ದೊಳಗಿನ ಉನ್ನತವಾದ ಭವನದಲ್ಲಿ ಬಿಡಾರ ಮಾಡಿಸಿ, (ಸ್ನಾನಪಾನಾದಿ)ದೈನಂದಿನ ಕ್ರಿಯೆಗಳನ್ನು ತೀರಿಸಿಕೊಳ್ಳಲು ಆಯಾ ಕಾರ್ಯಗಳಿಗೆ ಯೋಗ್ಯರಾದ ಅಧಿಕಾರಿ ಗಳನ್ನೂ ಪರಿಜನರನ್ನೂ ಒದಗಿಸಿದನು; ಆತನಿಗೆ ಬೇಸರವಾಗದಂತೆ ರಂಜನೆ ನೀಡಲು ಗೀತ, ದ್ಯೂತ, ಸಾಹಿತ್ಯ, ವಾದ್ಯವಾದನ–ಈ ಕಲೆಗಳಲ್ಲಿ ನಿಷ್ಣಾತೆಯ ರಾದ ವಿಲಾಸಿನಿಯರನ್ನು ನಿಯಮಿಸಿದನು; ತಾನೂ ತನ್ನ ಕಾರ್ಯಗಳಿಗೆ ತೊಡಗಿದನು. ಹೀಗಿರುತ್ತ ಒಂದು ದಿವಸ ರಾತ್ರಿಯ ಮೊದಲನೆಯ ಜಾವ ಕಳೆದಾಗ ಶಯ್ಯಾಗೃಹದಲ್ಲಿ ಜಯಶ್ರೀ ಮಹಾದೇವಿಯೊಡನೆ ಇರುವ ಸಮಯದಲ್ಲಿ ಶಶಿಪ್ರಭೆಯ ಗೆಳತಿಯಾದ ಕನಕಪ್ರಭೆಯೆಂಬವಳು ಬಂದು ನಮಸ್ಕರಿಸಿ, ಕುಳಿತುಕೊಂಡು (ಹೀಗೆ ನುಡಿದಳು). – ೧೨೩. "ಮಹಾರಾಜಾ, ತಮ್ಮ ಮಗಳು ಮಹೇಂದ್ರ ವಿಜಯಿಯಾದ ಕುಮಾರನನ್ನು ಎಂದು ಕಂಡಳೋ ಅಂದಿನಿಂದ ನೂರಾರು ಕಾಮವಿಕಾರಗಳಿಗೆ ಒಳಗಾಗಿದ್ದಾಳೆ; ಆಡುವುದಿಲ್ಲ, ಹಾಡುವುದಿಲ್ಲ, ಓದುವುದಿಲ್ಲ; ಒಡನಾಡಿಗಳೊಂದಿಗೆ ಮಾತನಾಡುವುದಕ್ಕೂ ಅವಳಿಗ ಮನಸ್ಸಿಲ್ಲವಾಗಿದೆ.

ಅದಲ್ಲದೆಯುಂ.

ನಡು ನಡಪಿತ್ತು ತನ್ನನೆನೆ ಮೆಯ್ ಬಡವಾದುದು ಲೋಚನಾಂಶುಗಳ್ ।
ಬಿಡೆ ತೊಡರ್ದಂತೆ ಗಂಡಯುಗಳಂ ಬಿಳಿದಾದುದು ತೋಳ್ಗಳೊಳ್ ಬರಂ ॥
ಬಡೆದವೊಲೆಯ್ದೆ ಸುಯ್ ಸರಳವಾದುದು ಹಾವರಸಪ್ರವಾಹದೊಳ್ ।
ಗಡಣಿಸಿದಂತೆ ಬಾಷ್ಪಜಲಸಂತತಿ ಕಾಬ್ಬುರಮಾದುದಾಕೆಯಾ ॥ ೧೨೪

ದಿನದೊಳ್ ಸಜಳತೆಯಿಂ ಮ ।
ತ್ಸ್ಯನಳಿನಮಂ ಮತ್ತಮಿರುಳೊಳುನ್ನಿದ್ರತೆಯಿಂ ॥
ದೆನಸುಂ ಚಕೋರಕುಮುದಮ ।
ನನುಕರಿಸಿದುದಾವಿಯೋಗವಿಧುರೆಯ ಕಣ್ಗಳ್ ॥ ೧೨೫

ಕರದಿಂ ಮೆಯ್ಯೊಳ್ ಪನಿತ ।
ಕ್ಕರದಂತಿರೆ ಸಾಂಜನಾಂಬುಕಣತತಿ ಕಾಮಂ ॥
ಬರೆದ ನೃಪಸುತನ ಸೊಬಗಿನ ।
ನರಶಾಸನದಂತೆ ವಿರಹವಿಹ್ವಲೆಯಿರ್ಪಳ್ ॥ ೧೨೬

ಸುರಿದಬಲೆ ಕಣ್ಣನೀರ್ಗಳ ।
ಸರಿಯಂ ಸ್ತನಮಂಡಲಂಗಳೊಳ್ ವಿರಹಮಹಾ ॥
ಜ್ವರಜನಿತಪುಳಕಸಸ್ಯಾಂ ।
ಕುರಂಗಳಂ ಬಳೆಯಿಪಳ್ ನಭೋಲಕ್ಷ್ಮಿಯವೊಲ್ ॥ ೧೨೭

ಏನೋ ಒಂದು ರೀತಿ ಮಂಕುಬಡಿದ ಹಾಗೆ ವರ್ತಿಸುತ್ತಿರುವಳು. ಅದಕ್ಕೇನು ಮಾಡುವುದು? ಅದಲ್ಲದೆ–೧೨೪. ಸೊಂಟವೆ ಅವಯವಗಳಲ್ಲಿ ದೊಡ್ಡದೆಂಬಂತೆ ದೇಹವೆಲ್ಲ ಸೊರಗಿಹೋಗಿದೆ; ಕಣ್ಣಬೆಳಕು ಸದಾ ಆವರಿಸಿಕೊಂಡುರುವುದೊ ಏನೊ ಎಂಬಂತೆ ಕೆನ್ನೆಗಳು ಬಿಳುಪೇರಿವೆ; ನೀಳವಾದ ತೋಳುಗಳಿಂದ ವರಪಡೆದ ಹಾಗೆ ಉಸಿರು ನಿಡಿದಾಗಿದೆ; ಹಾವರಸದ ತೊರೆಯಲ್ಲಿ ಕೂಡಿಕೊಂಡಂತೆ ಕಣ್ಣೀರಿಗೆ ಮಹಾಪೂರವುಂಟಾಗಿದೆ. ೧೨೫. ಹಗಲೆಲ್ಲ ನೀರು ತುಂಬಿಕೊಂಡಿರುವುದರಿಂದ ಆಕೆಯ ಕಣ್ಣುಗಳು ಮೀನನ್ನು ಕೆಂದಾವರೆಯನ್ನು ಹೋಲುತ್ತವೆ; ಇರುಳೆಲ್ಲ ನಿದ್ದೆಗೆಟ್ಟು ಚಕೋರವನ್ನು ಬಿಳಿನೈದಿಲೆಯನ್ನೂ ಹೋಲುತ್ತವೆ. ೧೨೬. ಕಾಡಿಗೆ ಕೂಡಿದ ಕಣ್ಣೀರ ಹನಿಗಳ ಕಲೆ ಮೈಯಲೆಲ್ಲ ಅಕ್ಷರದಂತೆ ಮೂಡಿಕೊಂಡು ಕಾಮದೇವನೆ ಆ ರಾಜಕುಮಾರನ ಸೌಂದರ್ಯ ಪ್ರಶಸ್ತಿಯನ್ನು ಬರೆಯಿಸಿಟ್ಟ ಮನುಷ್ಯದೇಹರೂಪದ ಶಾಸನವೊ ಏನೊ ಎಂಬಂತೆ ಆ ವಿರಹಾಕುಲೆ ತೋರುವಳು. ೧೨೭. ಆಕಾಶಲಕ್ಷ್ಮಿಯು ಮಳೆ ಸುರಿಸಿ ಸಸ್ಯಗಳನ್ನು ಬಳೆಯಿಸುವಂತೆ, ಆ ಅಬಲೆ ತನ್ನ ಎದೆಯ ಮೇಲೆ ಕಣ್ಣೀರ ಮಳೆಗರೆದು ವಿರಹದ

ಮತ್ತಮಾಕೆಗೆ

ತಂದುದು ನೊಸಲ್ಗೆ ತಾಪಮೆ ।
ಚಂದನಮಂ ಕರ್ಣಪೂರತೆಗೆ ಕೆಂದಳಮ್ಮೈ ॥
ತಂದುದು ಹಾರಂ ಕಣ್ಬನಿ ।
ಯಿಂದಾದತ್ತುಟಿದ ಭೂಷೆಯಂ ದೂಷಿಪವೊಲ್ ॥ ೧೨೮

ಪರಿಕಿಪೊಡಗ್ನಿಗಮಾಕೆಯ ।
ವಿರಹಾಗ್ನಿಗಮಿಲ್ಲ ಭೇದಮಲ್ಲದೊಡೇಂ ಕ ॥
ಪ್ಪುರದ ರಜಕ್ಕಂ ವೀಜನ ।
ದೆರಲ್ಗಮದು ಕಿಡದೆ ಬಳ್ವಳಂ ಬಳೆದಪುದೇ ॥ ೧೨೯

ಮಗ್ನತೆಯಿನೆಱಗಿ ಸುಯ್ಯೆಲ ।
ರಗ್ನಿಯಿನಟೆದಳಿಗಳುದುಱುತಿರೆ ಪೊತ್ತುದು ಸಂ ॥
ಲಗ್ನವಿರಹಾಗ್ನಿತಾಪೋ ।
ದ್ವಿಗ್ನೆಯ ನಾಸಿಕಮಭೇದಮಂ ಚಂಪಕದೊಳ್ ॥ ೧೩೦

ಅಂಬುಜದಳಮನಮರ್ಚಿ ನಿ ।
ತಂಬಿನಿ ಪಿಡಿದಿರ್ದ ಕುಚಮೆ ತಪ್ತಾಯಃಪಿಂ ॥
ಡಂಬೋಲ್ತಿರೆ ನಲ್ಮೆಗೆ ದಿ ।
ವ್ಯಂಬಿಡಿದಳೊ ಪೇಟಿಮೆನಿಪಳಾವ್ಯತಿಕರದೊಳ್ ॥ ೧೩೧

ಮಹಾಜ್ವರದಿಂದ ಹುಟ್ಟಿದ ರೋಮಾಂಚನವೆಂಬ ಸಸ್ಯಗಳನ್ನು ಬೆಳೆಯಿಸುತ್ತಿರುವಳು. ಮತ್ತು ಆಕೆಗೆ-೧೨೮. (ವಿರಹಜ್ವರದ) ತಾಪವೆ ಹಣೆಗೆ ಚಂದನದ (ಕೆಂಬಣ್ಣದ) ಕಾಂತಿಯನ್ನಿತ್ತಿತು; (ಕೆನ್ನೆಗಿಟ್ಟುಕೊಂಡ) ಅಂಗೈಯು ಕೆಂಬೆಳಕೆ ಕಿವಿಯ ಅಲಂಕಾರವಾಯಿತು; ಕಂಬನಿಗಳಿಂದಲೆ ಕೊರಳ ಹಾರವಾಯಿತು; ಬೇರೆ ಅಲಂಕಾರಗಳು ಇನ್ನೇಕೆ ಎಂಬ ಭಾವದಿಂದಲೊ ಏನೊ! ೧೨೯. ವಿಚಾರಿಸಿ ನೋಡಿದರೆ ಪ್ರತ್ಯಕ್ಷ ಬೆಂಕಿಗೂ ಆಕೆಯ ವಿರಹವೆಂಬ ಕಿಚ್ಚಿಗೂ ಏನೂ ಭೇದವಿಲ್ಲ. ಹಾಗಲ್ಲದಿದ್ದರೆ ಕಪ್ಪುರದ ಪುಡಿಗೂ, ಬೀಸುವ ಗಾಳಿಗೂ, ಆ ಕಿಚ್ಚು ತಣ್ಣಗಾಗದೆ ಇನ್ನೂ ಇನ್ನೂ ಉಜ್ಜಲವಾಗುತ್ತಿತ್ತೆ? ೧೩೦. ಮುಖದ ಸುಗಂಧಕ್ಕೆ ಮರುಳಾಗಿ ಎರಗಿದ ದುಂಬಿಗಳು ಆಕೆಯ ನಿಟ್ಟುಸಿರಿನ ಬೆಂಕಿಯಿಂದ ಬೆಂದು ಕೆಳಗೆ ಉರುಳಿ ಬೀಳುತ್ತಲಿವೆ; ಆದುದರಿಂದ ವಿರಹಾಗ್ನಿಯ ತಾಪದಿಂದೊಡಗೂಡಿದ ಆಕೆಯ ಮೂಗು ತದ್ರೂಪವಾದ ಸಂಪಗೆ ಹೂವೆ ಎನಿಸಿತು. ೧೩೧. ಆ ಚೆಲುವೆ ತಾವರೆಯೆಲೆಯನ್ನು ಹೊದಿಸಿ ಹಿಡಿದುಕೊಂಡ ಮೊಲೆಗಳೆ ಕಾಸಿದ ಕಬ್ಬಿಣದ ಗುಂಡುಗಳಂತೆ ಆಗಿರಲಾಗಿ, ಆಕೆ ತನ್ನ ಪ್ರೇಮವನ್ನು ಸಿದ್ಧಪಡಿಸಲು ಈ ರೀತಿ

ಕುಳಿರ್ವೆಳಲತೆವನೆಗಂ ಕೆಂ।
ದಳಿರ್ವನೆಗಂ ಸೂಸುವಾಲಿನೀರ್ವನಿಗಳ್ಗಂ॥
ಮಿಳಿರ್ವೆಳವಿಜ್ಜಣಿಗೆಗಳಿಂ।
ತಳರ್ವೆಲರ್ಗಂ ಕಾಂತೆ ಕರಮೆ ಹಂಗಿಗೆಯಾದಳ್॥ ೧೩೨

ಪುಗೆ ಪೊಗೆಯೆಟ್ಟಿ ಕೆಂದಳಿರ ಜೊಂಪಮಿವಂತವಳೀಸೆ ಕಾಯ್ದ ನೀ।
ರ್ಗೆಗೆದ ಸರೋವರಂಗಳಿವು ಜೋಲ್ದು ಮಲಂಗೆ ಕರಿಂಕುವಿಟ್ಟಿ ಬಾ॥
ಳೆಗಳಿವು ಸಾರ್ದು ಸುಯ್ಯಡರೆ ಸೀದ ಲತಾಳಿಯಿವಪ್ಪೆ ಬೆಂದು ಕಂ।
ದೊಗೆದೆಳಗೌಂಗಿವೆಂಬ ಕುಱುಪಂ ಪಲವಾಂತುವು ನಂದನಂಗಳೊಳ್॥ ೧೩೩

ಅಪಹರಿಸಿದಳೀಕಾಮಿನಿ।
ಲಪನಶ್ರೀಯಿಂದಮೆನ್ನ ಚೆಲ್ವಂ ತಾನೆಂ॥
ಬಪಕಾರರೋಷದಿಂ ಶಶಿ।
ಯಪಾರಕರಪಾತದಿಂದೆ ಮಥಿಯಿಸುತಿರ್ಪಂ॥ ೧೩೪

ಎನ್ನಯ ಸೊಬಗಂ ಗೆಲ್ದಳ್।
ಕನ್ನೆ ದಲೆಂದೆಂದು ರತಿಯೆ ಪರ್ಚಿಸುತಿರ್ಪಳ್॥
ತನ್ನಯ ನಲ್ಲನನಲ್ಲದೊ।
ಡೆನ್ನರೊಳಂ ಮಾಡನಿನಿಸು ಮುನಿಸಂ ಮದನಂ॥ ೧೩೫

ದಿವ್ಯವನ್ನು ಹಿಡಿದಳೊ ಏನೊ ಎಂಬಂತಿದೆ. ೧೩೨. ಶೀತಲವಾದ ಎಳೆಯ ಬಳ್ಳಿಮನೆ, ಚಿಗುರೆಲೆಯ ಚಪ್ಪರ, ಸೂಸುತ್ತಿರುವ ತಣ್ಣೀರ ತುಂತುರ ಹನಿಗಳು, ಅತ್ತಿಂದಿತ್ತ ಎಡಬಿಡದೆ ಬೀಸುವ ಬೀಸಣಿಗೆಗಳ ಗಾಳಿ_ಇವುಗಳ ಹಂಗಿಗೆ ಆಕೆ ಒಳಗಾಗಿರುವಳು. ೧೩೩. ಆಕೆ ಹೊಕ್ಕೊಡನೆ ಹೊಗೆಯೇರಿದ ಎಳೆ ಗೊಂಚಲುಗಳಿವು, ಆಕೆ ಈಜಿದೊಡನೆ ಕುದಿಯೇರಿ ಬತ್ತಿಹೋದ ಸರೋವರ ಗಳಿವು; ಆಯಾಸವಾಗಿ ಆತುಕೊಂಡೊಡನೆ ಕರಿಕಾದ ಚಿಗುರಿನ ಬಾಳೆಗಳಿವು, ಹತ್ತಿರ ಬಂದು ಉಸಿರಿಟ್ಟ ಕ್ಷಣಕ್ಕೇ ಸುಟ್ಟುಹೋದ ಬಳ್ಳಿಗಳಿವು, ಅಪ್ಪಿಕೊಳ್ಳುತ್ತಲೆ ಬೆಂದು ಕಂದಿಹೋದ ಎಳೆಯ ಅಡಕೆ ಸಸಿಗಳಿವು_ಎಂದು ತೋರಿಸುವಂತೆ ಉದ್ಯಾನಗಳೆಲ್ಲ ಅವಳ (ಹಾಗು ತಮ್ಮ) ಅವಸ್ಥೆಯ ಕುರುಹು ಗಳನ್ನು ಹೊತ್ತುಕೊಂಡು ನಿಂತಿವೆ. ೧೩೪. "ಈ ಕಾಮಿನಿ ತನ್ನ ಮುಖದ ಚೆಲುವಿನಿಂದ ನನ್ನ ಚೆಲುವನ್ನು ಅಪಹರಿಸಿದಳೆಂಬ" ರೊಚ್ಚಿನಿಂದ ಚಂದ್ರನು ತನ್ನ ಅಸಂಖ್ಯವಾದ ಕಿರಣಗಳನ್ನು ತೂರಿ ತೂರಿ ಅವಳನ್ನು ನೋಯಿ ಸುತ್ತಿರುವನು. ೧೩೫. "ನನ್ನ ಸೌಂದರ್ಯವನೆಲ್ಲ ಮೀರಿಸುವ ಚೆಲುವು ಹೊಂದಿ ಗೆದ್ದವಳಲ್ಲವೆ ಈ ಕನ್ಯೆ? ನೋಡು" ಎಂದು ನಲ್ಲನಾದ ಕಾಮನಿಗೆ ರತಿದೇವಿ ಪಿಸುಮಾತಿನಿಂದ ಚುಚ್ಚಿ ಹೇಳುತ್ತಿರುವಳು. ಹಾಗಲ್ಲದಿದ್ದರೆ ಮನ್ಮಥನು ಎಂತಹರ ಮೇಲೆಯೆ ಆಗಲಿ, ಇಷ್ಟೊಂದು ಕೋಪವನ್ನು ತೋರಲಾರನು.

ಸ್ಮರನಲರ್ಗಣೆಗಳ್ ತಮ್ಮೊಳ್ ।
ದೊರೆಕೊಳ್ಳದ ತಾಪಮಂ ಸಮಂತಿತ್ತಪುವೀ ॥
ತರುಣಿಗೆ ತಮಗುಳ್ಳುದನೇಂ ।
ನಿರವಿಪುದತಿಶಯಮೆ ಪಂಚತೋದಂಚನಮಂ ॥ ೧೩೬

ಅದುಕಾರಣದಿನಾಕೆ ದಶಮಾವಸ್ಥೆಗೆ ಪಕ್ಕಾಗದನ್ನೆಗಮಿದರ್ಕೆ ತಕ್ಕುದಂ ದೇವರ್ ಸಮಕಟ್ಟುವುದೆಂದು ಪೇೞ್ದುಪೋಗಲ್ ಅವಳ ಬಿನ್ನಪಮನವಧಾರಿಸಿ ನಿಜವೃತ್ತಿಗೆ ಸದೃಶಮಾದ ಮಗಳ ಮನೋವೃತ್ತಿಗೆ ಅತ್ಯಂತಸಂತುಷ್ಟಹೃದಯನಾಗಿ

ಆ ಕುವರನೊಳಲ್ಲದೆ ಪೇ ।
ೞೀಕನ್ನೆಗೆ ನಲ್ಮೆ ಸಮನಿಕುಮೆ ನವವಿಕಚಾ ॥
ಬ್ಜಾಕರದೊಳಲ್ಲದುದಯಿಕು ।
ಮೇ ಕಳಹಂಸೆಗೆ ಮನಃಪ್ರಮೋದಮದೆಂದುಂ ॥ ೧೩೭

ಎಂದು ಪೊಗೞ್ದು ಮಱುದೆವಸಂ ಸಮಸ್ತಮೌಹೂರ್ತಿಕನಿಕುರಂಬಮಂ ಬರಿಸಿ ಶಶಿಪ್ರಭಾವಿವಾಹ ವಿಭವಮೂಹೂರ್ತಮಂ ಬೆಸಗೊಂಡು ತನ್ಮಂಗಳದಿನಾಗಮಮಂ ಪಾರುತ್ತುಮಿರ್ದಂ. ಅನ್ನೆಗಂ

ಕುಮುದಂ ಶಶಿಪ್ರಭಾಸಂ ।
ಗಮಮಂ ಪಾರ್ವಂದದಿಂದೆ ಸಂಜನಿತಲಸ ॥
ತ್ಕುಮುದಂ ಶಶಿಪ್ರಭಾಸಂ ।
ಗಮಮಂ ಪಾರುತ್ತುಮಿರ್ದನಾ ಯುವರಾಜಂ ॥ ೧೩೮

೧೩೬. ಕಾಮನ ಬಾಣಗಳು ತಮ್ಮಲ್ಲಿ ಇಲ್ಲದಿರುವ ತಾಪವನ್ನೇ ತಂದು ಈ ತರುಣಿಗೆ ಒದಗಿಸುತ್ತಲಿವೆ. ಪಂಚತೆ (ಮರಣವೆಂಬ ದಶಮಾವಸ್ಥೆ) ಯನ್ನು ಉಂಟು ಮಾಡುವುದೇನು ಅತಿಶಯ ? ಅದು ಅವುಗಳಿಗೆ ಸಹಜವಾದುದೇ. ವ॥ ಆದುದರಿಂದ ಆಕೆ ದಶಮಾವಸ್ಥೆಗೆ (ಸಾವಿಗೆ) ಈಡಾಗುವುದರೊಳಗಾಗಿ ಇದಕ್ಕೆ ಸರಿಯಾದ ನಿವಾರಣೋಪಾಯವನ್ನು ತಾವು ಏರ್ಪಡಿಸಬೇಕು. "ಹೀಗೆಂದು ಆಕೆ ಹೇಳಿ ಹೋಗಲಾಗಿ, ಅವಳ ಬಿನ್ನಹವನ್ನು ಚಿತ್ತಗೊಟ್ಟು ಕೇಳಿ, ತನ್ನ ಮಗಳ ಸಹಜವಾದ ಮನೋವೃತ್ತಿಗೆ ಸಂತೋಷಪಟ್ಟು– ೧೩೭. "ಆ ಕುಮಾರನಲ್ಲಿ ಅಲ್ಲದೆ ಬೇರೆಯವರಲ್ಲಿ ಈ ಕನ್ಯೆಗೆ ಪ್ರೀತಿಯುಂಟಾದೀತೆ? ಅದೇ ಅರಳಿದ ಕಮಲಗಳ ಸರೋವರದಲ್ಲಿ ಅಲ್ಲದೆ ಬೇರೆ ಯಾವುದರಲ್ಲಾದರೂ ಕಲಹಂಸಿಯು ಮನಕ್ಕೆ ಸಂತೋಷವುಂಟಾದೀತೆ?" ವ॥ ಎಂದು ಹೊಗಳಿ ಮರುದಿನ ಎಲ್ಲ ಜೋಯಿಸರನ್ನೂ ಕರೆಯಿಸಿಕೊಂಡು, ಶಶಿಪ್ರಭೆಯ ಮದುವೆಗೆ ಪ್ರಶಸ್ತವಾದ ಮುಹೂರ್ತವನ್ನು ಕೇಳಿ ತಿಳಿದುಕೊಂಡು, ಆ ಶುಭದಿನವನ್ನೇ ಎದುರು ನೋಡುತ್ತ ಇದ್ದನು. ೧೩೮. ಕುಮುದವು (ನೈದಿಲೆ) "ಶಶಿಪ್ರಭಾಸಂಗಮ" (ಬೆಳ್ದಿಂಗಳ ಸಮಾಗಮ) ವನ್ನು ಹಾರೈಸುವಂತೆ "ಕುಮುದ" (ಭೂಮಂಡಲಕ್ಕೆ ಸಂತೋಷವುಂಟು ಮಾಡುವ)

ಮದನಪ್ರಸ್ಪರ್ಧಿಸೌಂದರ್ಯದೆನೃಪಸುತೆಯಂ ಸತ್ಕಳಾಜಾಳಚಾತು ।
ರ್ಯದೆ ತತ್ತದ್ವಿದ್ಯರಂ ದುರ್ಧರಸಮರಜಯಪ್ರೌಢತಾರೂಢದೋಶ್ಶ್ಯಾ ॥
ರ್ಯದೆ ಶೂರಾರಾತಿಸಂದೋಹಮನೆಱಗಿಸಿ ನಿತ್ಯೋದಯಾಮಾನಹೃತ್ಸ ।
ಮದನಿರ್ದಂ ಸೌಖ್ಯಸೀಮಂ ಚತುರಜನಮನೋವ್ಯೋಮಪೀಯೂಷಧಾಮಂ ॥ ೧೩೯

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಚಕ್ರವರ್ತಿಪದಪದ್ಮನಿಧಾನದೀಪವರ್ತಿ

## ಶ್ರೀಮಗ್ಗಳದೇವ

ವಿರಚಿತಮಪ್ಪ

## ಚಂದ್ರಪ್ರಭಪುರಾಣದೊಳ್

ಶಶಿಪ್ರಭಾವಿರಹ ವಿಜ್ಞಾಪನಂ

ಪಂಚಮಾಶ್ವಾಸಂ

ಕುಮಾರನು ಶಶಿಪ್ರಭೆಯ ಸಮಾಗಮವನ್ನು ಹಾರೈಸುತ್ತಿದ್ದನು. ೧೩೯. ಮನ್ಮಥನೊಡನೆ ಪೈಪೋಟಿ ನಡೆಸುವಂತಹ ತನ್ನ ಸೌಂದರ್ಯದಿಂದ ರಾಜಕುಮಾರಿಯನ್ನೂ, ಉತ್ತಮವಾದ ಹಲವಾರು ಕಲೆಗಳಲ್ಲಿಯ ಪರಿಣತಿಯಿಂದ ಆಯಾ ಕಲಾವಿದರನ್ನೂ, ದುಸ್ತರವೆನಿಸಿದ ಯುದ್ಧದಲ್ಲಿ ಜಯ ಸಂಪಾದಿಸಿದ ತನ್ನ ಪರಾಕ್ರಮದಿಂದ ಶೂರರಾದ ಶತ್ರು ಸಮೂಹವನ್ನು ಗೆದ್ದು ನಿತ್ಯನೂತನವಾದ ಹರ್ಷವನ್ನು ತಾಳುತ್ತ ವಿದ್ವಾಂಸರ ಚಿತ್ತವೆಂಬ ಆಕಾಶಕ್ಕೆ ಚಂದ್ರನಂತಿದ್ದ ಆ ರಾಜಕುಮಾರನು ತುಂಬ ಸಂತೋಷದಿಂದ ಇದ್ದನು.

ಪಂಚಮಾಶ್ವಾಸಂ ಮುಗಿಯಿತು.

# ಷಷ್ಠಾಶ್ವಾಸಂ

ಶ್ರೀಗೆ ಜಯಶ್ರೀಗೆ ಯಶ ।
ಶ್ರೀಗೆ ಶಶಿಪ್ರಭೆಯೆ ಸವತಿಯಾದಪಳೆಂಬು ॥
ದ್ಯೋಗದೊಳಿರ್ದಂ ಸಕಲನೃ ।
ಪಾಗಮಗುರು ಜೈನಜನಮನೋಹರಚರಿತಂ ॥ ೧

ಎರಡನೆಯಬ್ಧಿಯುಂ ಮೊದಲ ವಾರಿಧಿಯುಂ ಗಡಿಯಾಗೆ ನೀಳ್ದು ಬಂ ।
ಧುರಭರತತ್ರಿಖಂಡಧರೆಗಿಕ್ಕಿದ ಸೀಮೆಯ ಕೋಂಟೆಯೆಂಬಿನಂ ॥
ಕರಮೆಸೆದಿರ್ಪುದಾತತಗುಹಾದ್ವಯವಜ್ರಮಯೀದರೀಪ್ರಭಾ ।
ಪರಿಚಿತಪಾರ್ಶ್ವಮಗ್ರನಿಭೃತಾಂಬುಧರಂ ವಿಜಯಾರ್ಧಭೂಧರಂ ॥ ೨

ಆಕುತ್ಕೀಲಂ ಸೊಗಯಿಪು ।
ದಾಕಾಶೋರಗವಿಮುಕ್ತನಿರ್ಮಳತರನಿ ।
ರ್ಮೋಕಂ ತಾನೆನೆ ರಜತಾ ।
ಲೋಕಸಹಸ್ರಾಂಶುಧವಳಿತಾಶಾವಳಿಯಂ ॥ ೩

ಪ್ರತಿಬಿಂಬಿಸಿದುದು ರಜತಾ ।
ಚ್ಛತೆಯಿಂ ಸುರಲೋಕಮೆಂಬಗುರ್ವಿಂದಾಪ ॥
ರ್ವತದುತ್ತರದಕ್ಷಿಣದಿ ।
ಕ್ಪ್ರತಿಬದ್ಧಶ್ರೇಣಿಯೊಳ್ ಪುರೋತ್ಕರಮೆಸೆಗುಂ ॥ ೪

## ಷಷ್ಠಾಶ್ವಾಸಂ

೧. ತನ್ನ ವೈಭವಲಕ್ಷ್ಮಿಗೂ, ಜಯಲಕ್ಷ್ಮಿಗೂ, ಯಶೋಲಕ್ಷ್ಮಿಗೂ ಶಶಿಪ್ರಭೆಯ ಸವತಿಯಾಗುವಳೆಂಬ ಯೋಚನೆಯಲ್ಲಿ ಸಕಲ ರಾಜನೀತಿ ನಿಪುಣನಾದ, ಜೈನಮನೋಹರವಾದ ಚಾರಿತ್ರವುಳ್ಳ ಆ ಕುಮಾರನು ಇದ್ದನು. ೨. ಎರಡನೆಯ ಸಮುದ್ರವೊಂದೆಡೆಗೆ ಮೊದಲ ಸಮುದ್ರವೊಂದೆಡೆಗೆ ಗಡಿಯೆಂಬಂತೆ ವಿಸ್ತಾರವಾಗಿ, ಭರತದ ತ್ರಿಖಂಡಭೂಮಿಗೆ ನಿರ್ಮಿಸಿಟ್ಟ ಸೀಮಾಂತದ ಕೋಟೆಯೊ ಏನೊ ಎಂಬಂತೆ ಎರಡು ಗುಹೆಗಳಿಂದಲೂ, ವಜ್ರಮಯವಾದ ಕೊಳ್ಳದ ಕಾಂತಿಯಿಂದ ಹೊಳೆಯುವ ತಪ್ಪಲು ಭೂಮಿಯಿಂದಲೂ, ಮೋಡಗಳನ್ನು ಹೊತ್ತುಕೊಂಡ ಶಿಖರಗಳಿಂದಲೂ ವಿಜಯಾರ್ಧ ಪರ್ವತವು ಶೋಭಿಸುವುದು. ೩. ತನ್ನ ಬೆಳ್ಳಿಯ ಪ್ರಭೆಯಿಂದ ದಿಗ್ವಲಯವನ್ನೆಲ್ಲ ಧವಳವರ್ಣದಿಂದ ತುಂಬಿದ ಆ ಬೆಟ್ಟವು– ಆಕಾಶವೆಂಬ ಮಹಾಸರ್ಪವು ಕಳಚಿಬಿಟ್ಟ ಶುಭ್ರವಾದ ಪೊರೆಯೊ ಏನೊ ಎಂಬಂತೆ ಶೋಭಿಸುವುದು. ೪. ತನ್ನ ಬೆಳ್ಳಿಯ ಶುಭ್ರತೆಯಿಂದ ಇದೊಂದು ದೇವಲೋಕವೆ ಎಂಬಂತೆ ಶೋಭಿಸುತ್ತಿರುವ ಆ ಬೆಟ್ಟದ

ಅಲ್ಲಿ ದಕ್ಷಿಣಶ್ರೇಣಿಗಲಂಕಾರಮಾಗಿ

ಪ್ರತ್ಯಹಮೊಪ್ಪುಗುಂ ವಿವಿಧರತ್ನವಿನಿರ್ಮಿತಕೂಟಕೋಟಿಮ ।
ಚ್ಚೈತ್ಯಗೃಹಾವಹಂ ಶುಕಪಿಕಾಕುಳಸೌಂದರನಂದನಾವಳೀ ॥
ವೃತ್ಯುಪಶೋಭಿತಂ ಚತುರಖೇಚರವಾರವಧೂನಿಧಾನಮಾ ।
ದಿತ್ಯಪುರಂ ಪುರಂದರಪುರಪ್ರತಿಮಂ ಪುರುರತ್ನಗೋಪುರಂ ॥ ೫

ನಿಜರೂಪವಿಜಿತಮಕರ ।
ಧ್ವಜನಖಿಳದಿಶಾಂತರಪ್ರತಿಷ್ಠಿತಕೀರ್ತಿ ॥
ಧ್ವಜನದನಾಳ್ವಂ ಧರಣೀ ।
ಧ್ವಜನೆಂಬಂ ಖೇಚರೇಂದ್ರನಪಗತತಂದ್ರಂ ॥ ೬

ಅಪರಿಮಿತಖಚರಭೂಭೃ ।
ದ್ವಿಪಕ್ಷಕೃಂತನಮನೀಯೆ ದಕ್ಷಿಣಬಾಹಾ ॥
ಚಪಳಾಸಿಕುಳಿಶಮಾವಗ ।
ಮುಪಮೆಗೆ ವಂದಂ ಸುರೇಂದ್ರನೊಳ್ ಖಚರೇಂದ್ರಂ ॥ ೭

ಆತನೊಂದು ದಿವಸಂ ಸಭಾಭವನದೊಳ್

ಮಂಡಳಿಸಿರ್ದ ಖೇಚರಸಮೂಹದ ಮಧ್ಯದೊಳಿರ್ದು ದೂರದಿಂ ।
ಗುಂಡಿಗೆ ಕೈಯೊಳೊರ್ಚಿಜಗಿನಿಂ ಪೊದೆದಂಬರಮುಟ್ಟ ಕಚ್ಚುಟಂ ॥

ಉತ್ತರ ದಕ್ಷಿಣ ಶ್ರೇಣಿಗಳಲ್ಲಿ ಅನೇಕ ಪಟ್ಟಣಗಳು ಕಂಗೊಳಿಸುವುವು. ಅಲ್ಲಿ ದಕ್ಷಿಣ ಶ್ರೇಣಿಗೆ ಭೂಷಣವಾಗಿ– ೫. ಬಗೆಬಗೆಯ ರತ್ನಗಳಿಂದ ನಿರ್ಮಿತವಾದ ಶಿಖರ ಸಮೂಹಗಳುಳ್ಳ ಅನೇಕ ಚೈತ್ಯಗೃಹಗಳಿಂದಲೂ, ಗಿಳಿಕೋಗಿಲೆಗಳ ಮಧುರನಾದ ದಿಂದ ಮನೋಹರವಾದ ಉದ್ಯಾನ ಸಮುದಾಯಗಳಿಂದಲೂ, ಚತುರೆಯರಾದ ಖೇಚರ ವೇಶ್ಯೆಯರ ನಿವಾಸಗಳಿಂದಲೂ, ಹಲವಾರು ರತ್ನಗೋಪುರಗಳಿಂದ ಅಲಂಕೃತವಾದ ಆದಿತ್ಯಪುರವು ವ॥ ಇಂದ್ರನಗರಿಯಂತೆ ಶೋಭಿಸುತ್ತಿರುವುದು. ೬. ಅದನ್ನಾಳುವವನು ಧರಣೀಧ್ವಜನೆಂಬ ಖೇಚರ ರಾಜನು; ಅವನು ತನ್ನ ರೂಪದಿಂದ ಮನ್ಮಥನನ್ನು ಗೆದ್ದವನು; ದಿಗ್ದಿಗಂತಗಳವರೆಗೆ ತನ್ನ ಕೀರ್ತಿಯನ್ನು ಹಬ್ಬಿಸಿ ಕೊಂಡವನು. ಯಾವಾಗಲೂ ತುಂಬ ಜಾಗರೂಕನಾದವನು. ೭. ಅಸಂಖ್ಯರಾದ ಖೇಚರ ರಾಜರ ತೋಳ್ಬಲವನ್ನು ತನ್ನ ಚುರುಕಾದ ಖಡ್ಗದಿಂದ ಕತ್ತರಿಸಿ ಹಾಕಿದ ಆ ರಾಜನು, ಅಸಂಖ್ಯೇಯವಾಗಿ ಆಕಾಶದಲ್ಲಿ ಹಾರಾಡುತ್ತಿದ್ದ ಬೆಟ್ಟಗಳ ರೆಕ್ಕೆ ಗಳನ್ನು ತನ್ನ ವಜ್ರಾಯುಧದಿಂದ ಕತ್ತರಿಸಿಹಾಕಿ ಇಂದ್ರನಿಗೆ ಸದೃಶ್ಯನೆನಿಸಿದನು. ವ॥ ಆತನು ಒಂದು ದಿನ ತನ್ನ ಒಡ್ಡೋಲಗದಲ್ಲಿ – ೮. ಖೇಚರರ ಮಧ್ಯದಲ್ಲಿ ಮಂಡಿಸಿದ್ದನು. ಆಗ ಕೈಯಲ್ಲಿ ಗುಂಡಿಗೆಯನ್ನು ಹಿಡಿದುಕೊಂಡು, ಒಂದು

ಮುಂಡಿತಮೂರ್ಧಮೊಪ್ಪೆ ಬರುತಿರ್ಪೆಡೆಯೊಳ್ ವ್ರತಚಿಹ್ನಧಾರಿಯಂ ।
ಕಂಡನಣುವ್ರತಪ್ರಕರಪಾಲಕನಂ ಪ್ರಿಯಧರ್ಮನಾಮನಂ ॥ ೮

ಇದಿರೆಟ್ಟು ಕೈಗಳಂ ಮುಗಿ ।
ದುದಾತ್ತವಿಷ್ಟರದೊಳಿರಿಸಿ ಪಾದ್ಯಮನಿತ್ತಂ ॥
ಪದಪಿಂದಾಖಚರೇಶ್ವರ ।
ನದಾರ್ಗೆ ಜಿನಮುದ್ರೆ ಮೂಡಿಸದೊ ಮುದದೊದವಂ ॥ ೯

ಅನಂತರಂ ಸಕಲವಿದ್ಯಾಧರಲೋಕಮಂ ವಿಸರ್ಜಿಸಿ

ಇಂದು ನಿಜಾಗಮನದೆ ಮ ।
ನ್ಮಂದಿರಮಂ ಪೂತವೃತ್ತಿಗೆಯ್ದಿಸಿದುದದೇ ॥
ನೆಂದಱಿಪಿಮೆಂದೊಡಂದಿಂ ।
ತೆಂದಂ ತದ್ದೇಶಯತಿಕೃತಾಶೀರ್ವಾದಂ ॥ ೧೦

ನೀರಾಗರೆನಿಸಿದೆಮಗಮ ।
ಕಾರಣದಿಂದೊಲವು ನಿನ್ನೊಳಾದತ್ತೆನೆ ಮ ॥
ತ್ತಾರಯೆ ಸರ್ವಗತಂ ಸಂ ।
ಸಾರದೊಳೀಮೋಹಮೊಂದೆ ದಲ್ ಖಚರೇಂದ್ರಾ ॥ ೧೧

ಸೆರಗಿನ ಉತ್ತರೀಯವನ್ನು ಹೊದೆದು, ಧರಿಸಿದ ಲಂಗೋಟಿ ಹಾಗೂ ಬೋಳಿಸಿದ ತಲೆ ಒಪ್ಪುತ್ತಿರಲಾಗಿ ಅಣುವ್ರತಧಾರಿಯಾದ ಪ್ರಿಯಧರ್ಮನೆಂಬುವನು ಬರುತ್ತಿರುವುದನ್ನು ದೂರದಿಂದಲೆ ಕಂಡನು. ೯. ಅರಸನು ಇದಿರುಗೊಂಡು ಕೈಮುಗಿದು (ಕರೆತಂದು,) ಉನ್ನತವಾದ ಪೀಠದಲ್ಲಿ ಆತನನು ಕುಳ್ಳಿರಿಸಿ, ಸಂತೋಷದಿಂದ ಪಾದ್ಯವನ್ನಿತ್ತನು. ಜಿನರೂಪವನ್ನು ಕಂಡರೆ ಯಾರಿಗೆ ಸಂತೋಷವಾಗದೆ ಇದ್ದೀತು ? ವ॥ ಬಳಿಕ ವಿದ್ಯಾಧರ ಸಮೂಹವನ್ನೆಲ್ಲ ಕಳಿಸಿಕೊಟ್ಟು– ೧೦. "ತಾವು ಇಂದು ಬಂದು ನನ್ನ ಮನೆಯನ್ನು ಪವಿತ್ರಗೊಳಿಸಿದಿರಿ: (ಆಗಮನದ) ಕಾರಣವೇನೆಂದು ತಿಳಿಸಿ." ಎಂದು ಬಿನ್ನವಿಸಲಾಗಿ ಆಶೀರ್ವಾದ ಪೂರ್ವಕವಾಗಿ ಆ ಯತಿ ಹೀಗೆಂದನು – ೧೧. ರಾಗವನ್ನು ಗೆದ್ದವರಾದ ನಮಗೂ ಕೂಡ ನಿನ್ನಲ್ಲಿ ಅನಿಮಿತ್ತನಾಗಿ ಒಲವು ಉಂಟಾಯಿತು ಎಂದ ಮೇಲೆ ವಿಚಾರಿಸಿ ನೋಡಿದರೆ ಈ ಸಂಸಾರದಲ್ಲಿ ಮೋಹವೊಂದೇ ಬಲಿಷ್ಠವಾದುದು.

ಅದು ಕಾರಣದಿನಿಂದು ಭವದೀಯ ವಾರ್ತೆಯೊಂದನೀಶಿಖರಿಶಿಖರಸಿದ್ಧಕೂಟಚೈತ್ಯಾಯತ ನಕ್ಕೆ ವಂದಿರ್ದ ಸುಧರ್ಮರೆಂಬ ಸರ್ವಾವಧಿಬೋಧಸಂಪನ್ನ ಮುನಿಮುಖ್ಯರಿನಱಿದು ಬಂದೆಂ, ಅದಾವುದೆಂದೊಡರಿಂಜಯಜನಾಂತದವಿಪುಳನಗರಾಧಿಪತಿ ಜಯವರ್ಮನೆಂಬೊಂ ಜನನಾಥಂ, ಆತನರಸಿ ಜಯಶ್ರೀಯೆಂಬಳ್, ಅವರಿರ್ವರ್ಗಂ

ತ್ರಿಭುವನಮೋಹನದೀಪ ।
ಪ್ರಭೆ ನಿಜಕರ್ಣೋತ್ಪಳಾಯತಾಕೇಕರದೃ ॥
ಕ್ಪ್ರಭೆ ಪುಟ್ಟಿದಳೆಸೆವ ಶಶಿ ।
ಪ್ರಭೆಯೆಂಬುಚಿತಾಭಿಧಾನಕನ್ಯಾರತ್ನಂ ॥ ೧೨

ನಿನ್ನಂ ಧುರದೊಳ್ ಸಾಧಿಸು ।
ನ್ನನದೊರ್ವಂಗಡಾದಪಂ ಮದುವೆಯೆನಾ ॥
ಕನ್ನೆಯನೆನೆ ಕಿವಿಯಂ ಕ ।
ಬ್ಬೊನ್ನಸರಲ್ ತಾಗಿದಂತಿರಾದಂ ಖಚರಂ ॥ ೧೩

ಎಂದು ಮನದೊಳ್ ಮಚ್ಚರಮುಮನುದ್ರೇಕಮುಮನೊಳಕೆಯ್ದುಂ ಸ್ವಭಾವಗಂಭೀರವೃತ್ತಿಯಪ್ಪುದಱಿನವಹಿತಭಾವಮನವಳಂಬಿಸಿ ಬಟೆಯಮಿಲ್ಲಿಗೆ ತಕ್ಕುದಂ ಪ್ರತೀಕಾರಮನಪ್ರಮತ್ತವೃತ್ತಿಯಿಂ ನೆಗೞ್ವೆಪ್ಪೆನೆಂದು ವಿನಯದಿನಾಕ್ಷುಲ್ಲಕಮುನಿಯುಮನಂದಿನ ದಿವಸಮುಮಂ ಕಳಿಪಿ ಮಱುದೆವಸಂ

ವ|| ಆದುದರಿಂದ ಇಂದು ನಿನಗೆ ಸಂಬಂಧಿಸದ ವಾರ್ತೆಯೊಂದನ್ನು ಈ ಬೆಟ್ಟದ ತುದಿಯಲ್ಲಿರುವ ಚೈತ್ರಗೃಹಕ್ಕೆ ಬಂದಿರ್ದ ಸುಧರ್ಮರೆಂಬ ಅವಧಿಜ್ಞಾನಿಗಳಿಂದ ತಿಳಿದುಕೊಂಡು ಬಂದೆನು. ಅದಾವುದೆಂದರೆ ಅರಿಂಜಯ ದೇಶದ ವಿಪುಳ ನಗರಕ್ಕೆ ಜಯವರ್ಮನೆಂಬವನು ಅರಸಾಗಿರುವನು. ಆತನ ಅರಸಿ ಜಯಶ್ರೀ ಯೆಂಬವಳು. ಅವರಿಬ್ಬರಿಗೆ ೧೨. ಮೂರು ಲೋಕಗಳಿಗೂ ಮೋಹನದೀಪದ ಪ್ರಭೆಯಾದವಳೂ, ಕರ್ಣಾಭರಣದವರೆಗೂ ಕಡೆಗಣ್ಣ ಪ್ರಭೆಯುಳ್ಳವಳೂ (ವಿಶಾಲವಾದ ಕಣ್ಣುಗಳುಳ್ಳವಳೂ) ಎನಿಸಿದ ಶಶಿಪ್ರಭೆಯೆಂಬವಳು ಅನ್ವರ್ಥನಾಮದ ಕನ್ಯಾರತ್ನ ವಾಗಿ ಹುಟ್ಟಿದಳು. ೧೩. "ಯುದ್ಧದಲ್ಲಿ ನಿನ್ನನ್ನು ಯಾವನು ಸೋಲಿಸುವನೊ ಅವನೇ ಆಕೆಯನ್ನು ಮದುವೆಯಾಗುವನು". ಈ (ಭವಿಷ್ಯದ) ನುಡಿಯನ್ನು ಕೇಳಿದೊಡನೆ ಆ ಖೇಚರನ ಕಿವಿಗೆ ಕಬ್ಬಿಣದ ಸರಳು ನಟ್ಟಂತಾಯಿತು. ವ|| ಇದರಿಂದಾಗಿ ಮನಸ್ಸಿನಲ್ಲಿ ಮತ್ಸರವೂ ಕೋಪೋದ್ರೇಕವೂ ತುಂಬಿ ಕೊಂಡಿದ್ದರೂ, ಆತನು ಸ್ವಾಭಾವಿಕವಾಗಿ ಗಂಭೀರವರ್ತನೆಯವನಾದುದರಿಂದ, ತನ್ನ ಭಾವನೆಯನ್ನು ಮನಸ್ಸಿನಲ್ಲಿಯೆ ಇಟ್ಟುಕೊಂಡು, "ಇದಕ್ಕೆ ಕೈಕೊಳ್ಳಬೇಕಾದ ಪ್ರತೀಕಾರ ಕ್ರಮವನ್ನು ಎಚ್ಚರಿಕೆಯಿಂದ ಯೋಚಿಸಿ ತೆಗೆದುಕೊಳ್ಳುತ್ತೇನೆ" ಎಂದು

ಕಿವಿ ಶಬ್ದಂಗಿಡೆ ಘಂಟಿಕಾಘನಠಣತ್ಕಾರಂಗಳಿಂದೆಯ್ದೆ ದಿ ।
ಙ್ನಿವಹಂ ಮೇಘಕುಳಂ ಚಳದ್ಧ್ವಜಪಟೀವಾತಂಗಳಿಂ ಕೂಡೆ ತೂ ॥
ಳ್ದೆ ವಿಯನ್ಮಂಡಲಮಧ್ಯದೊಳ್ ಬಹುತರಂ ನಕ್ಷತ್ರಸಂಛನ್ನವಾ ।
ಗೆ ವಿಮಾನಾವಳಿ ಕೋಪದಿಂದೆ ತಳರ್ದಂ ವಿದ್ಯಾಧರಾಧೀಶ್ವರಂ ॥ ೧೪

ಗಗನದೊಳೆಟಿಕ್ಕೊಪ್ಪಿರೆ ಮಿಗೆ ।
ನೆಗಪಿದ ಧೂಳೀಸಮುಚ್ಚಯಂಗಳಿವೆಂತೆಂ ॥
ತೊಗೆದುವೆನೆ ನಾಶಹೇತುಗ ।
ಳೊಗೆದುವು ಸುತ್ತಿಜಿದು ಧೂಮಕೇತುಗಳಾಗಳ್ ॥ ೧೫

ಅಳ್ಕೆ ಮನಂ ನೋಟ್ಟರ ಕ ।
ಣ್ಣುಳ್ಕೆ ವಿಯಚ್ಚರಕಿರೀಟರತ್ನಾಂಶುಚಯಂ ॥
ಗಳ್ಕೊರ್ವೆ ಮಿಱುಗಿದುವು ಪಗ ।
ಲುಳ್ಕಂಗಳ್ ಬೆಸೆಯೊಳವಿರಪ್ರಸರಂಗಳ್ ॥ ೧೬

ಇವು ಮೊದಲಾಗಿ ಮತ್ತಮನೇಕವೈಹಾಯಸೋತ್ಪಾತಂಗಳಾಗೆ ಕಂಡು

ಜಯಮನೆಮಗರಿಗೆ ಪಿರಿದುಂ ।
ಭಯಮಂ ಪೇೞ್ದಪುವಿವೆಂದು ನಡೆದಂ ಖಚರಾ ॥

ನಿರ್ಧರಿಸಿ ಆ ಕ್ಷುಲ್ಲಕ ಮುನಿ*ಯನ್ನು ಕಳುಹಿಸಿಕೊಟ್ಟನು. ಆ ದಿನವನ್ನು ಕಳೆದು ಮಾರುದಿನ ೧೪. ಕಿವಿಗಡಚಿಕ್ಕುವಂತೆ ಕಿರುಗಂಟೆಗಳ ಠಣಠಣಧ್ವನಿಯನ್ನು ದಿಕ್ಕುಗಳನ್ನೆಲ್ಲ ತುಂಬುತ್ತ, ಚಟಪಟಿಸುತ್ತಿರುವ ಧ್ವಜಗಳ ಗಾಳಿಯಿಂದ ಮೋಡಗಳ್ನನು ಚೆದರಿಸುತ್ತ, ಆಕಾಶಮಂಡಲದ ಮಧ್ಯದಲ್ಲಿರುವ ಅನೇಕ ನಕ್ಷತ್ರಗಳನ್ನು ಮುಚ್ಚಿ ಮುಸುಕುತ್ತ ತನ್ನ ಹಲವಾರು ವಿಮಾನಗಳೊಡನೆ ಆ ವಿದ್ಯಾಧರನು ಕ್ರೋಧದಿಂದ ಹೊರಟನು. ೧೫. (ಆ ಸಮಯದಲ್ಲಿ) ಆಕಾಶಮಂಡಲದಲ್ಲಿ ಇಷ್ಟೊಂದು ಧೂಳಿಯ ರಾಶಿಗಳು ಅದು ಹೇಗೆ ಎದ್ದುಬಂದುವೊ ಎನಿಸಿತು. ಅವು ಧೂಳಿಯ ರಾಶಿಗಳಲ್ಲ. ನಾಶಸೂಚಕವಾದ ಧೂಮಕೇತುಗಳೆ, ಸುತ್ತಲೂ ಮೂಡಿ ಬಂದುವು. ೧೬. ಕಣ್ಣುಕುಕ್ಕಿ, ಬಗೆ ಬೆದರುವಂತೆ, ಖೇಚರ ಕಿರೀಟಗಳ ರತ್ನಕಾಂತಿ ಇನ್ನಷ್ಟು ಪ್ರಜ್ವಲಿಸುವಂತೆ ಮಾಡುತ್ತ ದಿಕ್ಕುದಿಕ್ಕುಗಳಲ್ಲಿ ಹಗಲಿನ ಉಲ್ಕೆಗಳು ವಿಸ್ತಾರ ವಾಗಿ ಹೊಳೆದುವು. ವ॥ ಇವುಗಳೊಡನೆ ಇನ್ನೂ ಅನೇಕ ಆಕಾಶೋತ್ಪಾತಗಳು ಉಂಟಾದುವು. ಅವುಗಳನ್ನು ಕಂಡು – ೧೭. "ಇವು ನಮಗೆ ಜಯ ವನ್ನೂ ಶತ್ರುಗಳಿಗೆ ಭಯವನ್ನೂ ಸೂಚಿಸುತ್ತವೆ" ಎಂದು ಖಚರರಾಜನು

---

* ಬಿಳಿಯ ಕೌಪೀನ ಹಾಗು ಒಂದು ಬಿಳಿಯ ಮೇಲು ಹೊದಿಕೆಯನ್ನು ಧರಿಸಿ, ಒಪ್ಪೊತ್ತು ಮಾತ್ರ ಊಟ ಮಾಡುತ್ತ ವ್ರತಗಳನ್ನು ಆಚರಿಸುವ ಮುನಿ. ಇವನು ಮುನಿಯಂತೆ ಆಚರಿಸಿದರೂ ಶ್ರಾವಕವರ್ಗದಲ್ಲಿಯೆ ಪರಿಗಣಿತನಾಗುತ್ತಾನೆ. ಮುನಿಗಳಿಗೆ ಇಲ್ಲದ ಕೆಲವು ಸವಲತ್ತುಗಳು ಈತನಿಗುಂಟು; ಉದಾಹರಣಾರ್ಥವಾಗಿ ಈತನು ಪಾತ್ರೆಯಲ್ಲಿ ಉಣ್ಣಬಹುದು; ಅನೇಕ ಮನೆಗಳಲ್ಲಿ "ಚರಿಗೆ"; ಮಾಡಬಹುದು.

ಸ್ವಯಪತಿಯುಪನತಮೃತ್ಯೋ।
ದಯಂಗೆ ದುರ್ಣಯಮೆ ಸುನಯಮೆನಿಸುಗುಮೆ ಪೊಲಂ ॥ ೧೭

ಅಂತು ನಡೆದು ವಿಪುಳಾಪುರಮನೆಯ್ದಿದಾಗಳ್

ಕೇಳೀಭೂಧರಮೂರ್ಧದೊಳ್ ಬಹುವಿಧೋದ್ಯಾನಾವಳೀಚೂಳದೊಳ್।
ಶಾಳೋದ್ಯತ್ಪರಿಕೂಟಜಾಳಶಿರದೊಳ್ ಹರ್ಮ್ಯೋರ್ಧ್ವದೊಳ್ ಸಂವೃತೋ ॥
ತ್ತಾಳಾಟ್ಟಾಳಕಕೋಟಿಯೊಳ್ ಪುರಮಹಾದ್ವಾರಾಗ್ರಿಮಸ್ಥಾನದೊಳ್।
ಲೋಳತ್ಕೇತುಚಯಂ ವಿಮಾನನಿಚಯಂ ನಿಂದತ್ತದೆತ್ತೆತ್ತಲುಂ ॥ ೧೮

ಅಂತುವಿಸ್ಮಿತಾಶೇಷಪೌರಜನವಿಲೋಕ್ಯಮಾನಾನೂನನಯನನಾಗಿರ್ದುವಿಯಚ್ಚರೇಶ್ವರಂ ಜಯವರ್ಮಜನೇಶ್ವರನಲ್ಲಿಗನ್ವಯಾಗತನುಂ ನಿಸೃಷ್ಟಾರ್ಥನುಂ ನೀತಿನಿರತನುಮಾಕಾರವಂತನುಂ ವಚನಚತುರನುಮಪ್ಪುದ್ದವನೆಂಬ ದೂತಮುಖ್ಯನನಟ್ಟಿದೊಡಾತಂ ಬಂದು ದೌವಾರಿಕನಿವೇದಿತಂ ಸಭಾಭವನಮಂ ಪೊಕ್ಕು ಸಮುಚಿತಾಸನದೊಳ್ ಕುಳ್ಳಿರ್ದು

ಖೇಚರಚಕ್ರವರ್ತಿ ಧರಣೇಂದ್ವಜನಸ್ಮದಧೀಶನುದ್ಧತಾ।
ರಾಚಳಚೂಳಶೇಖರನರಾತಿಮದದ್ವಿಪಕೂಟಪಾಕಳಂ ॥

ಮುನ್ನಡೆದನು. ಸಾವಿನ ಕಾಲ ಸಮೀಪವಾದವನಿಗೆ ದುರ್ನೀತಿಯೇ ಸುನೀತಿಯೆನಿಸುವುದು ಸಹಜ. ಹಾಗೆ ಮುನ್ನಡೆದು ವಿಪುಳಾಪುರವನ್ನು ತಲ್ಪಿದಾಗ–೧೮. ಕ್ರೀಡಾಶೈಲಿಗಳ ನೆತ್ತಿಯ ಮೇಲೆ, ಅನೇಕ ಬಗೆಯ ಉದ್ಯಾನಗಳ ಮೇಲ್ಭಾಗದಲ್ಲಿ, ಅನೇಕ ಶಾಲೆಗಳಿಂದ ಕೂಡಿದ ಭವನಾವಳಿಗಳ ಶಿಖರಗಳ ತಲೆಯ ಮೇಲೆ, ಮಹಲುಗಳ ತುದಿಯಲ್ಲಿ, ಸಾಲು ಸಾಲಾಗಿದ್ದ ಉಪ್ಪರಿಗೆಗಳ ಸಂದಣಿಯಲ್ಲಿ ಪಟ್ಟಣದ ಹೆಬ್ಬಾಗಿಲ ಗೋಪುರದ ಮೇಲೆ ಈತನ ವಿಮಾನಗಳು ಧ್ವಜಗಳನ್ನು ಹಾರಾಡಿಸುತ್ತ ಎತ್ತೆತ್ತಲೂ ಸುತ್ತುವರಿದು ನಿಂತುವು. ವ॥ ಪುರಜನರು ಬೆರಗಾಗಿ ಬಿಡುಗಣ್ಣರಾಗಿ ಅವುಗಳನ್ನು ನೋಡುತ್ತ ಇರಲಾಗಿ, ಖೇಚರರಾಜನು, ತನ್ನ ಸೇವೆಯಲ್ಲಿ ಪರಂಪರಾಗತನೂ, ದೂತಕಾರ್ಯ ನಿಪುಣನೂ, ರಾಜನೀತಿ ದಕ್ಷನೂ ಸ್ಫುರದ್ರೂಪಿಯೂ, ವಾಕ್ಪಟುವೂ ಆದ ಉದ್ಧವನೆಂಬ ದೂತಶ್ರೇಷ್ಠನನ್ನು ಜಯವರ್ಮರಾಜನ ಬಳಿಗೆ ಕಳುಹಿಸಿದನು. ಆ ದೂತನು ಬಂದು ದ್ವಾರಪಾಲಕನ ಮುಖಾಂತರವಾಗಿ ಯಥೋಚಿತವಾಗಿ ಹೇಳಿ ಕಳುಹಿಸಿ, ಒಡ್ಡೋಲಗಕ್ಕೆ ಬಂದು, ತನಗೆ ಯೋಗ್ಯವಾದ ಪೀಠದಲ್ಲಿ ಕುಳಿತುಕೊಂಡು ಹೀಗೆ ನುಡಿದನು_೧೯. "ಖೇಚರ ಚಕ್ರವರ್ತಿಯಾದ ಧರಣೇಂದ್ವಜ ಮಹಾರಾಜನು ನಮ್ಮ ಧಣಿ; ಉನ್ನತವಾದ ತಾರಾದ್ರಿ ಶಿಖರಕ್ಕೆ ಶಿಖಾಮಣಿಯಾದವನು; ಶತ್ರುಗಳ ಮದ್ದಾನೆಗಳಿಗೆ ಮಾರಕ ಜ್ವರವಾಗಿರುವವನು; ಯಾಚಕ ಜನಕ್ಕೆ ಬೇಡಿದುದನ್ನು ಕೊಡಬಲ್ಲ ಕೊಡುಗೈದೊರೆ

ಯಾಚಕಯಾಚಿತಾರ್ಥಸುಸಮರ್ಥನಗೋಚರಚಿತ್ತನರ್ಥಶಾ ।
ಸ್ತ್ರೋಚಿತಚಾರಚಕ್ಷು ವಿಮಳಾಚರಣಂ ಸಚರಾಚರಸ್ತುತಂ ॥ ೧೯

ಬಂದು ಭವತ್ಪುರಾಗ್ರಿಮನಭೋವಳಯಾಂತರದಲ್ಲಿ ನಿಂದು ಪೋ ।
ಗೆಂದೊಡೆ ಬಂದೆನಾಂ ನಿಜಪದಾಂಬುರುಹದ್ವಿತಯಾಂತಿಕಕ್ಕದೇ ॥
ಕೆಂದೊಡೆ ನಿನ್ನ ನಂದನೆ ಶಶಿಪ್ರಭೆಯೆಂಬ ಕುಮಾರಿಯೊರ್ವಳಾ ।
ನಂದಿತಲೋಕಲೋಚನವಿಳಾಸನಿವಾಸಮೊಳಳ್ ಗಡಾಕೆಯಂ ॥ ೨೦

ಅನಭಿಜ್ಞಾತಕುಲಕ್ರಮಂಗೆ ಪಥಿಕಂಗೇಕಾಕಿಗೊಲ್ದೀವ ತ ।
ಕ್ಕಿನೊಳಿರ್ದಪ್ಪೆ ವಿವಾಹಲಗ್ನಮನೆ ನೀಂ ಪಾರುತ್ತುಮೆಂಬಿಂತಿದಂ ॥
ಜನದಿಂ ಕೇಳ್ದದು ಸಜ್ಜನಾಚರಿತಮಲ್ತಾರಯ್ಯೆ ಸದ್ವಸ್ತುಭಾ ।
ಜನನಪ್ಪೆನ್ನೊಳೆ ಮಾಳ್ಪುದಾಕೆಗೆ ವಿವಾಹೋದ್ಯೋಗಮಂ ರಾಗದಿಂ ॥ ೨೧

ಎಂದಪನಲ್ತೆ ನಭಶ್ಚರ ।
ವೃಂದಾರಕನೀವುದದಱನಾಕೆಯನೊಲವಿಂ ॥
ದಿಂದೆ ಬಱಿಕ್ಕೀಯದೊಡೀ ।
ಬಂದಾತಂ ಬಱಿದೆ ಪೋಗಲೇನರಿದಪನೇ ॥ ೨೨

ತನ್ನ ಚಿತ್ತವನ್ನು ಇತರರಿಗೆ ತಿಳಿಯಗೊಡದ ಗಂಭೀರ ; ರಾಜನೀತಿ ನಿಪುಣರಾದ ಗುಪ್ತಚಾರರಿಂದ ಸಮಸ್ತವನ್ನು ಕಂಡುಕೊಳ್ಳುವವನು; ಪರಿಶುದ್ಧವಾದ ಆಚರಣೆಯುಳ್ಳವನಾಗಿ ಸಕಲರಿಂದ ಸ್ತುತನಾಗಿರುವನು. ೨೦. ಹೀಗಿರುವ ನಮ್ಮ ರಾಜನು ಈಗ ನಿಮ್ಮ ಪಟ್ಟಣದ ಮೇಲಿನ ಆಕಾಶ ಪ್ರದೇಶದಲ್ಲಿ ನಿಂತು, ನನ್ನನ್ನು ಕಳುಹಿದುದರಿಂದ ನಾನು ನಿಮ್ಮ ಪಾದಕಮಲಗಳ ಸನ್ನಿಧಿಗೆ ಬಂದಿರುವೆನು. ಉದ್ದೇಶವೇನೆಂದರೆ, – ನಿಮ್ಮ ಮಗಳು ಶಶಿಪ್ರಭೆಯೆಂಬವಳು ಲೋಕದ ಕಣ್ಣುಗಳಿಗೆಲ್ಲ ಹಬ್ಬವನ್ನುಂಟು ಮಾಡುವವಳಾಗಿರುವಳು. ಆಕೆಯನ್ನು– ೨೧. ಯಾವ ವಂಶದವನೊ ಏನೊ ಎಂಬುದನ್ನೂ ತಿಳಿಯದೆ, ಅದಾವನೊ ಹಾದಿಕಾರನೊಬ್ಬನಿಗೆ ನೀವು ಮೆಚ್ಚಿ ಮದುವೆ ಮಾಡಿಕೊಡುವವರಿದ್ದೀರೆಂದೂ, ಮದುವೆಯ ಮುಹೂರ್ತಕ್ಕಾಗಿ ಕಾಯುತ್ತ ಇರುವಿರೆಂದೂ ಜನರ ಬಾಯಿಂದ ಕೇಳಿದೆವು. ಇದು ಸಜ್ಜನರಿಗೆ ಯೋಗ್ಯವಾದ ನಡತೆಯಲ್ಲ. ಯೋಚಿಸಿ ನೋಡಿದರೆ ಉತ್ತಮವಾದ ವಸ್ತುವಿಗೆ ಸತ್ಪಾತ್ರನಾದ ನನಗೇ ಅವಳನ್ನು ಕೊಟ್ಟು ಸಂತೋಷದಿಂದ ಮದುವೆ ಮಾಡಬೇಕು. ೨೨. ಹೀಗೆ ನಮ್ಮ ಖೇಚರರಾಜನು ಅಭಿಪ್ರಾಯಪಡುತ್ತಾನೆ. ಆದುದರಿಂದ ಸಂತೋಷದಿಂದ ಅವಳನ್ನು ಆತನಿಗೆ (ಧಾರೆಯೆರೆದು)ಕೊಡಿ. ಕೊಡದೆ ಹೋದರೆ, ಈಗ ಬಂದವನು ಸುಮ್ಮನೆ ಮರಳಿ

ಎಂದು ಸಾಮಾಭಾಸದಿಂ ದಂಡೋಕ್ತಿಯನೆ ನುಡಿಯಲೊಡಂ

ಒದವಿದ ನಿದ್ರೆ ದೂತಜನಗರ್ಜನದಿಂ ಕಿಡೆ ಹೃದ್ಗುಹಾಂತರಾ ।
ಳದಿನುರುಕೋಪಸಿಂಹಮಿರದೆಟ್ಟುದು ಮೀಸೆಯ ಕೆತ್ತು ಕೇಸರಂ ॥
ಕೆದಱುವ ಭಂಗಿ ಪುರ್ವಿನ ಪೊಡರ್ಕೆಯೆ ಮೆಯ್ಮುಱಿವೋಜೆ ಕಣ್ಗಳಿಂ ।
ದುದಯಿಪ ಕೆಂಪದಾಗುಟಿಪ ವಕ್ತ್ರದ ಕೆಂಪೆನೆ ರಾಜಮೇರುವಾ ॥ ೨೩

ಅಂತು ಕಡುಮುಳಿದು

ಹೃದಯದೊಳೊಂದು ನಾಲಗೆಯೊಳೊಂದೆನಿಪಾ ನುಡಿ ಬೇಡ ಕನ್ನೆಯ ।
ಲ್ಲದೆ ಗಡ ಪೋಗೆನೆಂದು ಕಡೆಯೊಳ್ ನುಡಿದಾ ನುಡಿಯಂ ಪ್ರತಿಷ್ಠಿಸಲ್ ॥
ಪದೆವೊಡೆ ಪೋಗು ನಿನ್ನ ಪತಿಯಂ ಬರವೇಟಿಡೆಮಾತನಟ್ಟಲೇಂ ।
ಕದನದೊಳಾನೆ ಪೇಟ್ದಪೆನವಂಗಿರದಿತ್ತಪೆನೀಯೆನೆಂಬುದಂ ॥ ೨೪

ಅದಲ್ಲದೆಯುಂ

ಸಿಂಗದ ಮುಂದಣ ಕನ್ನೆಯ ।
ದೇಂ ಗಡ ಮೇಷಕ್ಕೆ ಸಾಟಿಯೆನಿಕುಮೆ ರೋದೋ ॥
ರಂಗದೊಳಿನಿತು ತೊಟಿಲ್ದುಂ ।
ಪಿಂಗಿದುದಿಲ್ಲಿನಿತು ಸಂಶಯಂ ಚರ ನಿನ್ನೊಳ್ ॥ ೨೫

ಹೋಗುವನೆಂದುಕೊಳ್ಳಬೇಡಿ." ವ॥ ಹೀಗೆ ಸಾಮೋಪಾಯದ ಮಾತಿನ ನೆಪದಿಂದ ದಂಡೋಪಾಯದ ಬೆದರಿಕೆಯನ್ನೆ ನುಡಿದು ತೋರಲಾಗಿ – ೨೩. ದೂತಗರ್ಜನೆಯಿಂದ ನಿದ್ದೆ ಹಾರಿ ಹೋಗಿ, ಹೃದಯದ ಗವಿಯೊಳಗಿನಿಂದ ಉಗ್ರವಾದ ಕೋಪವೆಂಬ ಸಿಂಹವು ಎದ್ದು ಬಂದಿತು; ಜಯವರ್ಮರಾಜನ ಸ್ಫುರಿಸುವ ಮೀಸೆಗಳೆ ಅದರ ಕೆದರಿದ ಅಯಾಲು; ಆತನ ಹುಬ್ಬಿನ ಮುರಿತವೆ, ಸಿಂಹದ ಮೈಮುರಿವ ಭಂಗಿ; ಆತನ ಕಣ್ಣುಗಳಿಂದ ಹೊಮ್ಮುವ ಕೆಂಪೆ ಅದರ ಆಗುಳಿಸುವ ಬಾಯಕೆಂಪು ಎನಿಸಿತು. ಹೀಗೆ ಕಡುಕೋಪಗೊಂಡು ( ಆತನು ಹೀಗೆ ಉತ್ತರಿಸಿದನು) – ೨೪. "ಮನಸ್ಸಿನೊಳಗೊಂದು, ಬಾಯಲ್ಲೊಂದು ಎನಿಸುವ ಮಾತು ಬೇಡ, ಕನ್ಯೆಯನ್ನು ಕೊಂಡಲ್ಲದೆ ಹೋಗೆನೆಂದು ಕೊನೆಯಲ್ಲಿ ಹೇಳಿದ ಆ ಮಾತನ್ನು ದಕ್ಕಿಸಿಕೊಳ್ಳಬಲ್ಲವನಾದರೆ ಹಾಗೆ ಮಾಡೆಂದು, ನಿನ್ನ ಒಡೆಯನಿಗೆ ಬರಹೇಳು. ಪ್ರತಿಯಾಗಿ ಹೇಳಿಕಳಿಸುವುದಾದರೂ ಏಕೆ? ಯುದ್ಧರಂಗದಲ್ಲಿ ನಾನೆ ಅವನಿಗೆ ತಿಳಿಸುವೆನು – ಕನ್ಯೆಯನ್ನು ಕೊಡುವೆನೊ ಇಲ್ಲವೊ ಎಂಬುದನ್ನು, ಅದಲ್ಲದೆ – ೨೫. ಸಿಂಹದ ಮುಂದಿರತಕ್ಕ ಕನ್ಯೆ ಹೋತನಿಗೆ ಜೊತೆಯಾಗುವುದುಂಟೆ? ಆಕಾಶರಂಗದಲ್ಲಿ ಇಷ್ಟೊಂದು ಸುತ್ತಾಡಿ ಬಂದರೂ, ದೂತನೇ, ನಿನ್ನಲ್ಲಿ ಇಷ್ಟೂ

ಎಂದು ನಿಜಭುಜವಿಕ್ರಮಮಂ ವಕ್ರೋಕ್ತಿಯಿಂ ನುಡಿದು ದೂತನಂ ಕಳಿಪಿ ಸನ್ನಾಹಭೇರಿಯಂ ಪೊಯ್ಯಲ್ವೇೞ್ದು ಅಜಿತಸೇನನಂ ಬರಿಸಿ ತದ್ವೃತ್ತಾಂತಮಂ ನಿವೇದಿಪುದುಮಾತನೀಷದ್ರೋಷಹಸಿತ ಭಾಸುರಮುಖಸರೋಜನಾಗಿ

ತನಗೇಕೀಯುದ್ಧ ಸನ್ನದ್ಧತೆಯ ಗಸಣೆ ಮುಂ ಕಾದಲೆಂದುರ್ಬಿ ಬಂದಾ ।
ತನದೊಂದಾಯಾಸಮಂ ಕೇಳನೆ ರಣಮುಖದೊಳ್ ಭೀಕರಂಕೊಲ್ಲೆನಾನೆಂ ।
ಬನಿತಂ ತಾಂನಚ್ಚಿಮೆಯ್ವೆರ್ಚಿದನೊಕಲಿತನತಕ್ಕಟ್ಟೆಮೇಣೀಗಳಾಯ್ತೋ ।
ಮನದೊಳ್ ಪೋರ್ಬರ್ಕದಂತುಂ ಹರಿಬವನಿನಿತುಂ ಟಕ್ಕನಾಂತಲ್ಲಿ ನೋೞ್ಕುಂ ॥ ೨೫

ಬಗೆಗೆನಿತು ಸಮರಸಂಭ್ರಮ ।
ಮೊಗೆವಂತಿರೆ ನಿಮಗೆ ಗಹನಮಾವುದೊ ಬಂದೀ ॥
ಖಗಸೇನೆಯನಾನೊರ್ವನೆ ।
ಖಗತತಿಯಂ ಶ್ಯೇನನಂದದಿಂ ಪಡೆಪಾಯ್ವೆಂ ॥ ೨೬

ಎನುತೆನುತುಂ ನಿಯುದ್ಧಜಯದೊಂದೊಲವಿಂದೆ ಹಿರಣ್ಯನೆಂದುದಂ ।
ಮನದೊಳಿನಿತ್ತು ಭಾವಿಪುದಮಾಭವನಾಮರನಾಯಕಂ ಪುರಾ ॥
ವನಿತಲದೊಳ್ ಸಭಾಸದರ್ಗೆ ಕೌತುಕಮಾಗಿರೆ ನಿಂದನಾವಗಂ ।
ನೆನೆಯದ ಮುನ್ನ ಬಂದು ಸಮುದಂ ಸಶರಂ ಸರಥಂ ಸಕಾರ್ಮುಕಂ ॥ ೨೭

ಸಂಶಯು ಹಿಂಗಲಿಲ್ಲ." ವ॥ ಹೀಗೆಂದು ತನ್ನ ತೋಳ್ಬಲದ ಶೌರ್ಯವನ್ನು ವಕ್ರೋಕ್ತಿಯಿಂದ ನುಡಿದು ತೋರಿ, ಆ ದೂತನನ್ನು ಕಳಿಸಿಕೊಟ್ಟನು. ಆಮೇಲೆ ಯುದ್ಧಸಿದ್ಧತೆಯ ಭೇರಿಯನ್ನು ಹೊಡೆಯ ಹೇಳಿ, ಅಜಿತಸೇನನನ್ನು ಕರೆಯಿಸಿಕೊಂಡು, ಆತನಿಗೆ ಈ ಸಂಗತಿಯನ್ನು ತಿಳಿಸಿದನು. ಅಜಿತಸೇನಕುಮಾರನು ನಸುನಗೆಯನ್ನು ಸೂಸಿ (ಹೀಗೆಂದನು) – ೨೫. "ಆತನಿಗೇಕೆ ಈ ಯುದ್ಧಸನ್ನದ್ಧತೆಯ ತೊಂದರೆ ಬೇಕಾಗಿತ್ತು? ಈ ಮುನ್ನ ಒಬ್ಬನು ಕಾಳಗ ಮಾಡಲೆಂದು ಬಂದು ಪಟ್ಟಪಾಡನ್ನು ಆತನು ಕೇಳಿಲ್ಲವೆ ? ಯುದ್ಧರಂಗದಲ್ಲಿ ನಾನು ಭಯಾನಕವಾಗಿ ತನ್ನನ್ನು ಕೊಲ್ಲೆನೆಂದು ನೆಚ್ಚಿಕೊಂಡು ಮೈ ಸೊಕ್ಕಿ ಬಂದನೊ? ಅಥವಾ ಪರಾಕ್ರಮದ ಮೇಲೆ ಈಗ ಒಲವುಂಟಾಯಿತೊ ? ಇರಲಿ. ಬಂದು ಏನು ಮಹಾಕಾರ್ಯ ನಡೆಯುವುದೆಂಬುದನ್ನು (ರಣರಂಗದಲ್ಲಿ) ನೋಡಲಿ. ೨೬. ಯುದ್ಧಕ್ಕಾಗಿ ಇಷ್ಟೊಂದು ಮಹಾಸಿದ್ಧತೆ ಮಾಡಿಕೊಳ್ಳಬೇಕಾದ ಅವಶ್ಯಕತೆಯೇನಿದೆ? ಪಕ್ಷಿಗಳ ಹಿಂಡನ್ನೆಲ್ಲ ಗಿಡುಗವೊಂದೆ ಹೊಡೆದು ಕೆಡಹುವಂತೆ, ಈ ಖೇಚರ ಸೇನೆಯನ್ನೆಲ್ಲ ನಾನೊಬ್ಬನೆ ಹೊಡೆದುರುಳಿಸುವೆನು" ೨೭. ಹೀಗೆನ್ನುತ್ತಿರುವಾಗಲೆ ಹಿಂದೆ ಮಲ್ಲಯುದ್ಧ ಜಯದಿಂದ ಪ್ರೀತನಾಗಿ ಹಿರಣ್ಯನು ಹೇಳಿದ ಮಾತನ್ನು ಮನಸ್ಸಿನಲ್ಲಿ ನೆನಸಿಕೊಂಡನು. ಕೂಡಲೆ ಆ ಭವನಾಮರ ಶ್ರೇಷ್ಠನು ನೆನೆಯುವುದಕ್ಕೆ ಮೊದಲೆ ಬಿಲ್ಲು, ಬಾಣ, ರಥ ಮೊದಲಾದುವುಗಳಿಂದ ಸನ್ನದ್ಧನಾಗಿ, ಸಭಾಸದರೆಲ್ಲ

ಆಗಳರಸನಂ ಬಲಸಮೇತಮಲ್ಲಿಯೆ ನಿಲಿಸಿ ಬಟಿಯಂ ಸಕಲಾಯುಧಸನಾಥಮಪ್ಪ ತದ್ದಿವ್ಯರಥ ಮನಾ ಫಣಾಧರನೆ ಸಾರಥಿಯಾಗೇಱೆ ಗಗನಕ್ಕೆ ನೆಗೆದಂಬರದ ತೆಱಂಬೆ ಕಳನಾಗಳುಂಬಮಾಗೊಡ್ಡಿನಿಂದ ವಿದ್ಯಾಧರವರೂಥಿನಿಯಂ ನೋಡಿ ತೋಳ ತೀನೆಯನಡಂಗಿಸಲಿನಿತೆಡೆವಡೆದೆನೆಂದು ಮನದೊಳುತ್ಸಾಹ ಮನಪ್ಪುಕೆಯ್ದು

ಕುಳಿಕನ ದಾಡೆಯಂ ಮುಱಿವ ದಿಗ್ಗಜಮಂ ಪಡೆ ಪಾಯ್ವ ವಾರ್ಧಿಯಂ ।
ಚುಳುಕದೊಳಾಂಪ ಮೇರುಗಿರಿಯಂ ಮರಳೊತ್ತುವ ವಜ್ರವಹ್ನಿಯಂ ॥
ತಳದೊಳಗಿರ್ದಿಲಾಗೆ ಪೊಸೆದಿಕ್ಕುವ ಸಿಂಗದ ಕೇಸರಂಗಳಂ ।
ಸೆಳೆವಳವಂ ಸಮಂತು ತಳೆದಂ ರಣದೋಹಳನಾಕುಮಾರಕಂ ॥ ೨೮

॥ ಪೃಥ್ವಿ ॥

ಅನಂತರಮದೆತ್ತಲುಂ ತರದೆ ಸುತ್ತಿದತ್ತಾ ಕುಮಾ ।
ರನೇಱಿದ ವರೂಥಮಂ ಖಚರಯಾನಸಂದೋಹಕಂ ॥
ದಿನಾಧಿಪತಿಯೇಱೆ ನಿಂದ ರಥಮಂ ನಭೋವೀಧಿಯೊಳ್ ।
ಘನಾಘನಕದಂಬಕಂ ಬಳಸುವಂದದಿಂದಾವಗಂ ॥ ೨೯

ಅನ್ತುಪಢೌಕಿತವಾಗೆ ಕೃ ।
ತಾನ್ತಭ್ರೂಭ್ರುಕುಟಿಕುಟಿಲಮಮಂ ಜಯಲಕ್ಷ್ಮೀ ॥
ಕಾನ್ತಂ ಕಾರ್ಮುಕಮಂ ತಳ ।
ದಿನ್ತಳೆದೇಱೆಸಿ ಬಟಿಕ್ಕೆ ಜೀವೊಡೆಯಲೊಡಂ ॥ ೩೦

ವಿಸ್ಮಯಪಡುವಂತೆ ಪುರದ ಭೂಮಿಯ ಮೇಲೆ ಬಂದಿಳಿದನು. ವ॥ ಆಗ ಅರಸನನ್ನು ಆತನ ಸೈನ್ಯಸಹಿತವಾಗಿ ಅಲ್ಲಿಯೆ ನಿಲ್ಲಿಸಿ, ಕುಮಾರನು ಸರ್ವವಿಧದ ಆಯುಧಗಳಿಂದ ಸಮೃದ್ಧವಾದ ಆ ರಥವನ್ನು ಏರಿದನು. ಹಿರಣ್ಯನೆ ಸಾರಥಿಯಾಗಿ ಆ ರಥವನ್ನು ಗಗನಕ್ಕೆ ಏರಿಸಿ ಕೊಂಡೊಯ್ದನು. ಆಕಾಶವೆ ರಣರಂಗವಾಗಿರಲಾಗಿ ವ್ಯೂಹವೊಡ್ಡಿ ನಿಂತ ಆ ವಿದ್ಯಾಧರ ಸೈನ್ಯವನ್ನು ನೋಡಿ "ನನ್ನ ತೋಳ ತೀಟೆಯನ್ನು ಹಿಂಗಿಸಲು ಇಷ್ಟು ನನಗೆ ದೊರೆಯಿತು" ಎಂದು ಮನಸ್ಸಿನಲ್ಲಿ ಹಿಗ್ಗಿ – ೨೮. ಕುಳಿಕನೆಂಬ ಸರ್ಪರಾಜನ ದಾಡೆಹಲ್ಲನ್ನು ಕೀಳುವ, ದಿಗ್ದಂತಿಯನ್ನು ಹೊಡೆದುರುಳಿಸುವ, ಸಾಗರವನ್ನು (ಹೀರಿ) ಅಂಗೈಯಲ್ಲಿ ಹಿಡಿದು ಕೊಳ್ಳುವ, ಮೇರುಪರ್ವತವನ್ನು ಕುಟ್ಟಿ ಮಳಲಾಗಿಸುವ, ವಜ್ರಾಗ್ನಿಯನ್ನು ಇದ್ದಿಲಾಗುವಂತೆ ಕೈಯಲ್ಲಿ ಹೊಸೆದಿಡುವ, ಸಿಂಹದ ಕೇಸರಗಳನ್ನು ಕಿತ್ತಿಡುವ ಪರಾಕ್ರಮವನ್ನು ಒಳಗೊಂಡು ರಣೋತ್ಸಾಹಿಯಾದ ಕುಮಾರನು ನಿಂತನು. ೨೯. ಬಳಿಕ ಸೂರ್ಯನೇರಿದ ರಥವನ್ನು ಆಕಾಶ ಮಾರ್ಗದಲ್ಲಿ ಕಪ್ಪನೆಯ ಮೋಡಗಳು ಮುತ್ತಿಕೊಳ್ಳುವಂತೆ ಕುಮಾರನೇರಿದ ರಥವನ್ನು ಖೇಚರ ವಿಮಾನಗಳ ಸಮುದಾಯವು ಆಕ್ರಮಿಸಿತು. ೩೦. ಹೀಗೆ ಹತ್ತಿರ ಬರಲಾಗಿ, ಜಯಲಕ್ಷ್ಮಿಗೆ ಒಡೆಯನಾದ ಕುಮಾರನು ಮೃತ್ಯುದೇವತೆಯ ಗಂಟಿಕ್ಕಿದ ಹುಬ್ಬಿನಂತೆ ಕೊಂಕಿದ

ಒಡೆದುದೊ ಪದ್ಮಜಾಂಡಮವನೀವಳಯಂ ಪಿಳಗಿತ್ತೊ ಮೇರು ಮೇಣ್ ।
ಕಿಡೆದುದೊ ವಾರ್ಧಿಯುರ್ಕಿದುದೊ ಪೇೞಿಸೆ ತನ್ನ ನಿಮಿರ್ಕೆಗಾದುದಿ ॥
ಟ್ಟೆಡೆ ಜಗಮೆಂಬಿನಂ ಪೊಡರ್ದು ಪೊಣ್ಮಿದುದಾತನ ಕೆಯ್ಯ ಬಿಲ್ ಜೇ ।
ವೊಡೆಯ ರವಂ ಲಯಪ್ರಭವದಂತಕಸೈರಿಭಘೋಷಭೀಷಣಂ ॥ ೩೧

ಆ ಸಮಯದೊಳ್

ಕತ್ತರಿವಾಣಿಯೊಳೆೞಗುವ ।
ಚಿತ್ತದೆ ಕವಿತರ್ಪ ಜಳವಿಹಂಗಂಗಳವೋಲ್ ॥
ಎತ್ತಂ ಕವಿತಂದುವು ಭೂ ।
ಭೃತ್ತನಯಂಗಾಗಿ ಖಚರರೆಚ್ಚ ಶರಂಗಳ್ ॥ ೩೨

ಅದಂ ಕಂಡು,

ಮರಸುತ್ತನಿಸಲೊಡಂ ಭೋ ।
ರ್ಗರೆದೈತರ್ಪಾ ಸರಲ್ಗಳಂ ಖಂಡಿಸುತುಂ ॥
ಬರುತಿರ್ದವು ಬಳಸಿದ ಪಂ ।
ಜರದಂತಿರೆ ಸುತ್ತಿ ನಿಶಿತವಿಶಿಖಾವಳಿಗಳ್ ॥ ೩೩

ಅಣಿಯರಮಿಸೆ ಕುವರನ ಕೂ ।
ರ್ಗಣೆಯೇಱಿಂ ಪಱಿದು ಬಿರ್ದ ಖಚರರ ತಲೆ ಸಂ ॥
ದಣಿಸೆ ವಿಮಾನಂಗಳ ಪೇ ।
ರಣಿ ಪೋಲ್ತುದು ತೆಱೆದ ಮೊಗದ ಪೇಳಿಗಳಿರವಂ ॥ ೩೪

ತನ್ನ ಬಿಲ್ಲನ್ನು ಎತ್ತಿಕೊಂಡು ಹೆದೆಯೇರಿಸಿ ಅದನ್ನು ಠೇಂಕರಿಸಿದನು. ೩೧. ಬ್ರಹ್ಮಾಂಡವೆ ಒಡೆಯಿತೊ, ಭೂಮಂಡಲವೆ ಬಿರಿಯಿತೊ, ಮೇರುಗಿರಿಯೆ ಮುರಿದು ಬಿದ್ದಿತೊ, ಸಾಗರವೆ ಉಕ್ಕಿತೊ ಏನೊ ಎಂಬಂತೆ, ತನ್ನ ಹಬ್ಬುಗೆಗೆ ಜಗತ್ತಿನ ಹರವು ಸಾಲದಾಯಿತೆಂಬಂತೆ ಅಬ್ಬರಿಸುತ್ತ ಆತನ ಬಿಲ್ಲಿನ ಠೇಂಕಾರಧ್ವನಿಯು ಪ್ರಳಯ ಯಮನ ಕೋಣದ ಭೀಕರ ಡುರುಕೆಗೆ ಸಮನಾಗಿ ಭಯಾನಕವಾಗಿ ಹೊಮ್ಮಿತು. ಆ ಸಮಯದಲ್ಲಿ – ೩೨. ಕತ್ತರಿವಾಣಿ (ಸೋಕಿದರೆ ಕೈಯನ್ನು ಕತ್ತರಿಸುವ ನೀರು) ಯಲ್ಲಿ ಎರಗಬೇಕೆಂದು ನುಗ್ಗಿಬರುವ ಜಲಪಕ್ಷಿಗಳಂತೆ, ಕುಮಾರನೆಡೆಗೆ ಖೇಚರರು ಎಚ್ಚ ಬಾಣಗಳು ಬಂದು ಕವಿದುವು. ಅದನ್ನು ಕಂಡು – ೩೩. ಭೋರೆಂದು ಬರುವ ಬಾಣಗಳನ್ನು ಕತ್ತರಿಸುತ್ತ ಕುಮಾರನ ಹರಿತವಾದ ಬಾಣಗಳು ಪಂಜರದಂತೆ ವೈರಿಗಳನ್ನು ಮುಸುರಿದುವು. ೩೪. ಕುಮಾರನ ತೀಕ್ಷ್ಣವಾದ ಅಸ್ತ್ರಗಳಿಂದ ಖೇಚರರ ತಲೆಗಳು ತುಂಡರಿಸಿ ಬೀಳುತ್ತಿರಲು ಅವರ ವಿಮಾನಗಳು ಮುಚ್ಚಳ ತೆರೆದಿಟ್ಟ ಬುಟ್ಟಿಗಳಂತೆ ತೋರಿದುವು.

ಪೊಸಮಸೆಯ ಸರಲ್ಗಳಂ ತೊ ।
ಟ್ಟಸೆ ಕೊಂಡೋಡಿದುವಿನೇಂದುಬಿಂಬಂಗಳನಾ ॥
ಗಸದೊಳ್ ಕೊಂಡೋಡುವ ರಾ ।
ಹುಸಮೂಹಂಗಳವೊಲಾವಿಮಾನಾವಳಿಯಂ ॥ ೩೫

ಅದಲ್ಲದೆಯುಂ

ಪೊದೆಯೊಳಗಿಂದಮುರ್ಚುವೆಡೆಯಲ್ಲಿ ಸರಲ್ ದಿಟವೊಂದು ಮತ್ತೆ ಮಾ ।
ಣದೆ ತುಡುವಲ್ಲಿ ಪತ್ತು ಪೊಱಮುಯ್ವವರಂ ತೆಗೆವಲ್ಲಿ ನೂಱು ಬೇ ॥
ಗದೆ ಬಿಡುವಲ್ಲಿ ಸಾಸಿರಮಿದಿರ್ಚದರಂ ನಡುವಲ್ಲಿ ಲಕ್ಕಮೆಂ ।
ಬುದನೆನೆ ಬಿಲ್ಲ ಬಿನ್ನಣಮನಾರಣದೊಳ್ ಮೆಱೆದಂ ಯುವಾಧಿಪಂ ॥ ೩೬

ಪೂತೆಲವಕ್ಕೆ ಪೌರವನಭೂರುಹವೊಪ್ಪುವ ಮುಳ್ಳಿಗುಚ್ಚಳ ।
ಕ್ಕೇತನಚೀನಚೇಳವರುಣೋಪಲಭಿತ್ತಿಗೆ ಪೊನ್ನಕೋಂಟೆ ಸಂ ॥
ಧ್ಯಾತಪನಂಗೆ ತೋರಣಕನನ್ನುಕುರಂ ದೊರೆಯಾಗಿ ತೋಱಿದ ।
ತ್ತಾತನೊಳಾಂತು ಪುಣ್ಬಡೆದ ಖೇಚರಸೇನೆಯ ರಕ್ತಸೇಕದಿಂ ॥ ೩೭

ಅಂತು ಕಡುಕೆಯ್ದು ಕಾದುವ ಕುಮಾರನಂ ಬೆಱಗಣ್ಮಿಱಿಯದಂತಳ್ಕಿದರುಮೊರ್ವರುೞಿಯ ದಾದಿತ್ಯಸುತಪುರಮುಮಾದಿತ್ಯಪುರಮುಂ ಗುಱಿಯಾಗಿ ಪೋಗೆ ತನ್ನ ವಿಮಾನವೊಂದೆ ನಿಂದುದಂ ಧರಣೇಧ್ವಜವಿದ್ಯಾಧರ ಚಕ್ರವರ್ತಿ ಕಂಡು,

೩೫. ಹೊಸದಾಗಿ ಮಸೆದ ಬಾಣಗಳನ್ನು ಹೂಡಿ ಹೊಡೆದೊಡನೆ ಚಂದ್ರಸೂರ್ಯರ ಬಿಂಬಗಳನ್ನು ಆಕಾಶದಲ್ಲಿ ಹಿಡಿದುಕೊಂಡು ಹಾರುವ ಅನೇಕ ರಾಹುಗಳೊ ಏನೊ ಎಂಬಂತೆ, ಅವು ವಿಮಾನಗಳ ಸಮುದಾಯವನ್ನು ಕಚ್ಚಿಕೊಂಡು ಒಯ್ದುವು. ಆದಲ್ಲದೆ_೩೬. ಬತ್ತಳಿಕೆಯಿಂದ ಹಿರಿದುಕೊಳ್ಳುವಾಗ ಒಂದು, ಹೆದೆಗೆ ಹೂಡುವಾಗ ಹತ್ತು, ಹೆಗಲ ತುದಿವರೆಗೆ ಎಳೆಯುವಾಗ ನೂರು, ಬಿಡುವಾಗ ಸಾವಿರ, ಎದುರಿನ ವೈರಿಗಳನ್ನು ನಡುವಾಗ ಲಕ್ಷ_ಹೀಗೆ ಅಳತೆ ತಿಳಿಯದಂತೆ ಬಾಣಗಳನ್ನೆಸೆಯುತ್ತ ಆ ರಾಜಕುಮಾರನು ತನ್ನ ಧನುರ್ವಿದ್ಯಾಕೌಶಲವನ್ನು ತೋರಿದನು. ೩೭. ಆತನೊಡನೆ ಹೋರಾಡುವ ಖೇಚರಸೈನ್ಯದ ನೆತ್ತರು ಸುರಿದು ಸುರಿದು, ಪುರೋದ್ಯಾನದ ಮರಗಳೆಲ್ಲ ಬೂರುಗದ ಮರದಂತೆ, ಎತ್ತರದಲ್ಲಿ ಪಟಪಟಿಸುವ ಧ್ವಜಗಳ ಬಟ್ಟೆ. ರಕ್ತವಸ್ತ್ರದಂತೆ, ಹೊನ್ನಿನ ಕೋಟೆ, ಮಾಣಿಕದ ಗೋಡೆಯಂತೆ, ತೋರಣದ ಕನ್ನಡಿಗಳು ಸಂಜೆಯ ಸೂರ್ಯನಂತೆ, ಕೆಚ್ಚನಾಗಿ ತೋರಿದುವು. ವ|| ಹೀಗೆ ರಭಸದಿಂದ ಕಾದಾಡುವ ಕುಮಾರನನ್ನು ಕಂಡು ಗಾಬರಿಯಾಗಿ ಶತ್ರುಗಳು ಒಬ್ಬರೂ ಉಳಿಯದಂತೆ (ತಮ್ಮ ರಾಜಧಾನಿಯಾದ) ಆದಿತ್ಯಪುರಕ್ಕೊ ಆದಿತ್ಯಸುತಪುರಕ್ಕೊ (ಯಮಲೋಕದ ರಾಜಧಾನಿಗೊ) ಹೋಗಿ ಮುಟ್ಟಿದರು.

ಪೊಟ್ಟಿಲರಿಂ ಪಾಱುವವೋಲ್ ।
ಬೆಟ್ಟಂ ಪಾಱುಗುಮೆ ರಿಪುಶರಾಹತಿಗೆ ಭಯಂ ॥
ಬಟ್ಟಳಿಕನೋಡುವಂತಿರೆ ।
ಕಟ್ಟಾಯದ ಕಣೆಯೆನಿಪ್ಪನೇನೋಡುಗುಮೇ ॥ ೩೮

ಎಂದು ಪರಿಚ್ಛೇದಿಸಿವಧ್ಯಾಭಾವದಿಂ ಹಿರಣ್ಯನೊಳ್ ಪ್ರಧಾನವ್ಯಾಪಾರಮಂ ನುಡಿಯುತಿರ್ದ ಶಶಿಪ್ರಭಾಪ್ರಿಯನ ರಥಕ್ಕಾಗಿ ಬೇಗನೆ ಬಂದಂಬುವೀಡಿನೊಳ್ ನಿಂದು ವಿದ್ಯಾಧರರ್ ಯುದ್ಧಸನ್ನದ್ಧರಾಗಿ

ಇರದೆ ವಿಯಚ್ಚರಾಧಿಪತಿಯೆಚ್ಚ ಕೃಶಾನುಪೃಷತ್ಕಮಂ ಪಯೋ ।
ಧರಶರದಿಂ ಪಯೋಧರಶಿಲೀಮುಖಮಂ ಮರುದುಗ್ರಬಾಣದಿಂ ॥
ಮರುದಿಷುವಂ ಫಣಿಪ್ರಬಳಸಾಯಕದಿಂ ಫಣಿಚಂಡಕಾಂಡಮಂ ।
ಗರುಡಪತತ್ರಿಯಿಂದಜಿತಸೇನನಡುರ್ತಿರದೆಚ್ಚು ತೂಳ್ದಿದಂ ॥ ೩೯

ಅಂತಫಳಾಧ್ಯವಸಾಯನಾದುದರ್ಕೇವೈಸಿ ಮಸಕದಿಂದಸಿಧೇನುವಂ ಕಿಱ್ತು ಮೇಲೆವಾಯ್ದಿಱಿಯಲಡಹಡಿಸಿ ಬರ್ಪಲ್ಲಿ

ಅವನ ತಲೆ ಪಱಿದು ಗಗನಾ ।
ಗ್ರವಿಭಾಗಕ್ಕೊಗೆದು ರಾಹುಶಿರದವೊಲಾದಂ ॥
ರವಿಯಂ ಬೆರ್ಚಿಸೆ ಕುವರಂ ।
ಕವಲಂಬಿಂದೆಚ್ಚು ಬಿಚ್ಚತಂ ನಲಿದಾರ್ದಂ ॥ ೪೦

ತನ್ನ ವಿಮಾನವೊಂದೇ ನಿಂತುದನ್ನು ನೋಡಿ ವಿದ್ಯಾಧರ ಚಕ್ರವರ್ತಿಯಾದ ಧರಣೀಧ್ವಜನು – ೩೮. "ಗಾಳಿಗೆ ಹೊಟ್ಟು ಹಾರಿ ಹೋಗುವಂತೆ ಬೆಟ್ಟವೇನಾದರೂ ಹಾರಿ ಹೋದೀತೆ? ಶತ್ರುಬಾಣದ ಹೊಡೆತಕ್ಕೆ ಕೈಲಾಗದವರು ಹಿಮ್ಮೆಟ್ಟಿ ಓಡಿದಂತೆ, ಮಹಾ ಪರಾಕ್ರಮಕ್ಕೆ ನೆಲೆಯಾದವನು ಓಡುವನೆ?" ವ॥ ಎಂದು ನಿರ್ಧರಿಸಿದನು. "ಕೊಲ್ಲಬೇಕೆಂದರೆ ಯಾರೂ ಉಳಿಯಲಿಲ್ಲವಲ್ಲ"! ಎಂದು ಹಿರಣ್ಯನೊಡನೆ ಯುದ್ಧಸ್ಥಿತಿಯನ್ನು ಕುರಿತು ಮಾತಾಡುತ್ತಿದ್ದ ಶಶಿಪ್ರಭಾಪ್ರಿಯನ (ಅಜಿತಸೇನನ) ರಥದೆಡೆಗೆ ವೇಗವಾಗಿ ಬಂದು, ಬಾಣಪಾತದ ಅಂತರದಲ್ಲಿ ನಿಂತು ವಿದ್ಯಾಧರನು ಕಾಳಗಕ್ಕೆ ಅನುವಾದನು. ೩೯. ವಿದ್ಯಾಧರರಾಜನು ಬಿಟ್ಟ ಅಗ್ನಿಬಾಣವನ್ನು, ವರುಣಾಸ್ತ್ರದಿಂದಲೂ, ಮೇಘಾಸ್ತ್ರವನ್ನು ವಾತಾಸ್ತ್ರದಿಂದಲೂ, ವಾಯ್ವಸ್ತ್ರವನ್ನು ಸರ್ಪಾಸ್ತ್ರದಿಂದಲೂ, ಸರ್ಪಾಸ್ತ್ರವನ್ನು ಗರುಡಾಸ್ತ್ರದಿಂದಲೂ ಅಜಿತಸೇನನು ಕತ್ತರಿಸಿ ಹಾಕಿದನು. ವ॥ ಹೀಗೆ ತನ್ನ ಪ್ರಯತ್ನಗಳೆಲ್ಲ ನಿಷ್ಫಲವಾದುದಕ್ಕೆ ಜಿಗುಪ್ಸೆಯಾಗಿ, ಕ್ರೋಧದಿಂದ ತನ್ನ ಖಡ್ಗವನ್ನು ಹಿರಿದು ಧರಣೀಧ್ವಜನು ಅಬ್ಬರಿಸಿ ಆಕ್ರಮಿಸಲೆಂದು ಬರಲಾಗಿ – ೪೦. ಆತನ ತಲೆ ಕತ್ತರಿಸಿ ಆಕಾಶಕ್ಕೆ ನೆಗೆದು ರಾಹುವಿನ ತಲೆಯೊ ಏನೊ ಎಂಬಂತೆ ಸೂರ್ಯನನ್ನು ಬೆದರಿಸುವಂತೆ

ಆಗಳ್

ತೀವಿದುದು ದಿವಿಜನಿವಹಮ ।
ಹಾವೀರಧ್ವನಿ ದಿಗಂತಮಂ ವ್ಯೋಮಮುಮಂ ॥
ತೀವಿದುದು ತತ್ಕರಪ್ರ ।
ಸ್ತಾವಿತಮಂದಾರಪಾರಿಜಾತಾಸಾರಂ ॥ ೪೧

ಅನಂತರಂ ಜಿತಖಚರಸೇನನಜಿತಸೇನಂ ಬಂದು

ವಿರಚಿತತೋರಣಮಾಳಾ ।
ಕರಮುತ್ತಂಭಿತಜಯಧ್ವಜೋತ್ಕರಮೆನಿಪಾ ॥
ಪುರಮಂ ತರುಣೀಕೇಕರ ।
ಮರೀಚಿನೀರಾಜಿತಾಕ್ಷತಾಂಗಂ ಪೊಕ್ಕಂ ॥ ೪೨

ಅಂತುಪೊಕ್ಕು ಅರಮನೆಗೆ ಬಂದು ಸುಹೃಜ್ಜನಾಗ್ರಗಣ್ಯನಂ ಹಿರಣ್ಯನಂ ಸನ್ಮಾನ ಪೂರ್ವಕಂ ವಿಸರ್ಜಿಸಿ ಪರಮೋತ್ಸವದಿನಿರ್ದನನ್ನೆಗಂ

ಮನದೊಳ್ ಮುನ್ನಾದ ರಾಗಂ ದ್ವಿಗುಣಿಸೆ ತನಗಿಂತೀಗಳೀಯಂದದಿಂ ಮ ।
ತ್ತನಯಾಪೂರ್ವಾನುರಾಗಂದ್ವಿಗುಣಸದಿರದುದ್ವಾಹಲಗ್ನಾಹಮುಂ ಭೋಂ ॥
ಕೆನೆ ಸಾರ್ತಂದಿರ್ದುದೇನುಂ ತಡೆದಿರಲೆಡೆಯಿಲ್ಲುತ್ಸವಪ್ರಸ್ತುತಾಪಾ ।
ದನಮಂ ಮಾಡಲ್ಕೆವೇಟ್ಕುಂ ಪಿತೃವಿರಹದೆ ಜಾಮಾತೃವಿನ್ನಿರ್ಪನಲ್ಲಂ ॥ ೪೩

ಕುಮಾರನು ಕವಲುಬಾಣದಿಂದ ಹೊಡೆದು ಉತ್ಸಾಹದಿಂದ ಗರ್ಜಿಸಿದನು, ಆಗ– ೪೧. ದೇವಸಮೂಹದಿಂದ ಹೊರಟ ಜಯುಜಯುಕಾರದ ಧ್ವನಿ ದಿಗಂತವನ್ನೆಲ್ಲ ವ್ಯಾಪಿಸಿತು; ಅವರು ಸುರಿದ ಪಾರಿಜಾತಪುಷ್ಪಗಳ ಮಳೆಯಿಂದ ಆಕಾಶವೆಲ್ಲ ತುಂಬಿತು. ವ॥ ಹೀಗೆ ಖೇಚರ ಸೈನ್ಯವನ್ನು ಸೋಲಿಸಿದ ಅಜಿತಸೇನನು ಬಂದು– ೪೨. ತೋರಣಮಾಲೆಗಳಿಂದಲೂ, ಎತ್ತಿಕಟ್ಟಿದ ವಿಜಯುಧ್ವಜಗಳಿಂದಲೂ ಶೋಭಿಸುತ್ತಿರುವ ಪುರವನ್ನು ಪ್ರವೇಶಿಸುತ್ತಿರಲು ತರುಣಿಯುರ ಕಡೆಗಣ್ಣೋಟದ ಕಾಂತಿ ನೀರಾಜನದ ಬೆಳಕಿನಂತೆ ಆತನ ದೇಹವನ್ನೆಲ್ಲ ಬೆಳಗಿತು. ವ ॥ ಹಾಗೆ ಪುರಪ್ರವೇಶ ಮಾಡಿ ಅರಮನೆಗೆ ಬಂದು ಮಿತ್ರಶ್ರೇಷ್ಠನಾದ ಹಿರಣ್ಯನನ್ನು ಸುಯೋಗ್ಯವಾದ ಮನ್ನಣೆಯೊಂದಿಗೆ ಕಳುಹಿಸಿಕೊಟ್ಟು ತುಂಬ ಉತ್ಸವದಿಂದ ಇದ್ದನು. ಆಗ– ೪೩. "ಈತನ ಮೇಲೆ ಮೊದಲು ಉಂಟಾಗಿದ್ದ ಪ್ರೀತಿ ಈಗ ನನಗೆ ಇಮ್ಮಡಿಯಾಯಿತು. ಇದರಂತೆ ನನ್ನ ಮಗಳಿಗೆ ಈತನಲ್ಲಿ ಉಂಟಾಗಿರುವ ಅನುರಾಗವೂ ಇಮ್ಮಡಿಯಾಗದೆ ಇರದು. ವಿವಾಹಮುಹೂರ್ತವೂ ಸಮೀಪ ವಾಗುತ್ತಲಿದೆ. ಇನ್ನು ತಡಮಾಡುವಂತಿಲ್ಲ. ಮದುವೆಯ ಉತ್ಸವವನ್ನು ಕೂಡಲೆ ಆರಂಭಿಸಬೇಕು, ಅಳಿಯದೇವನು ತನ್ನ ತಂದೆ ತಾಯಿಗಳನ್ನು ಅಗಲಿ ಇನ್ನು ಇಲ್ಲಿ

ಎಂದು ಜಯವರ್ಮಭೂಭುಜಂ ಬಗೆದಂದು ಗೃಹಮಹತ್ತರನಂ ಬರಿಸಿ ಬೆಸಸಿದಾಗಳ್

ನೀಲಾಬದ್ಧಸ್ಥಲೀಕಂ ಮರಕತಜಗತೀಮಂಡಲಂ ಸ್ಫಾಟಿಕಸ್ತಂ ।
ಭಾಲಂಬಂ ಚಾರುಚಾಮೀಕರಮಯರುಚಿಮದ್ಭಿತ್ತಿ ವೈಡೂರ್ಯನಿರ್ವ್ಯೂ ॥
ಹಾಲೀಢಂ ವ್ಯಕ್ತಮುಕ್ತಾಘಟಿತಪಟಳಸಂಪರ್ಕಕರ್ಕೇತನದ್ವಾ ।
ರಾಲಂಕಾರಂಗಳಿಂ ಕಣ್ಗೆಸೆದುದನುಪಮಂ ತತ್ಕೃತೋದ್ವಾಹಗೇಹಂ ॥ ೪೪

ಅದಱ ನವರತ್ನಕೂಟಾ ।
ಗ್ರದಿನುಣ್ಮುವ ಬೆರಕೆವೆಳಗು ತುಂಗಧ್ವಜಚೀ ॥
ನದ ಕಡೆಗಡೆಯೊಳ್ ಕಣ್ಗೆಸೆ ।
ದುದು ಸಾರಾವಳಿಯ ವಿಳಸವಿಕ್ಕಿದ ತೆಱದಿಂ ॥ ೪೫

ದಿಟ್ಟಿಗೆವರೆ ಬಂಧವಿಧಂ ।
ಕಟ್ಟಿದ ಪಲತೆಱದ ಮಣಿಯ ಸೂಸಕದ ನೆೞಲ್ ॥
ಕುಟ್ಟಿಮತಲದೊಳ್ ಪೊಳೆದೆಡೆ ।
ಗಟ್ಟುತ್ತಲ್ಲಲ್ಲಿ ಬಣ್ಣವುರಮಂ ತೀವಲ್ ॥ ೪೬

ಸುೞಿವೆಳವೆಂಡಿರ ಕಡೆಗ ।
ಣ್ಬೞಿಯಂ ಪಸರಿಸುವ ಬೆಳಗು ಬೆಳದಿಂಗಳ ಪೊಂ ॥
ಪುೞಿಯೆಂದು ಸುರಿವುವದಱಿಕೊಳ್ ।
ಮೞೆಯಿಲ್ಲದೆಯುಂ ಪ್ರಣಾಳಶಶಿಕಾಂತಂಗಳ್ ॥ ೪೭

ಇರಲಾರನು. ವ॥ ಹೀಗೆಂದು ಜಯವರ್ಮರಾಜನು ಯೋಚಿಸಿ ಮನೆವೆಗ್ಗಡೆಯನ್ನು ಕರೆಯಿಸಿಕೊಂಡು (ಮದುವೆಯ ತಯಾರಿಮಾಡಲು) ಅಪ್ಪಣೆಯಿತ್ತನು. ಆಗ– ೪೪. ನೀಲರತ್ನಗಳ ನೆಲಗಟ್ಟು, ಪಚ್ಚೆಯ ಜಗಲಿ, ಸ್ಫಟಿಕದ ಕಂಬಗಳು, ಚೆಲುವಾದ ಚಿನ್ನದಿಂದ ಹೊಳೆಯುವ ಗೋಡೆಗಳು, ವೈಡೂರ್ಯದ ಬದುಗಳು, ಮುತ್ತಿನ ಕದಗಳನ್ನೊಡಗೊಂಡು ಶೋಭಿಸುವ ಕರ್ಕೇತನ ರತ್ನದ ಬಾಗಿಲ ಅಲಂಕಾರಗಳು– ಇವುಗಳಿಂದ ಅಳವಟ್ಟ ವಿವಾಹಮಂಟಪವು ಕಂಗೊಳಿಸಿತು. ೪೫. ಅದರ ನವರತ್ನ ಶಿಖರಗಳಿಂದ ಹೊಮ್ಮುವ ಮಿಶ್ರವರ್ಣದ ಕಾಂತಿ ಎತ್ತರವಾದ ಧ್ವಜವಸ್ತ್ರಗಳ ತುದಿಯಲ್ಲಿ ಬೆಸೆದುಕೊಂಡು ಸಾರಾವಳಿಯ (?) ಒಪ್ಪವಿಟ್ಟಂತೆ ಶೋಭಿಸಿತು. ೪೬. ಕಣ್ಣಿಗೆ ಅಂದವಾಗಿ ತೋರುವಂತೆ ಸೊಗಸಾಗಿ ಕಟ್ಟಿದ ರತ್ನಗಳ ಸೂಸಕಗಳು ನೆಲಗಟ್ಟಿನಲ್ಲಿ ಪ್ರತಿಬಿಂಬಿತವಾಗಲಾಗಿ ಅಲ್ಲಲ್ಲಿ ಬಣ್ಣದ ರಂಗವಲ್ಲಿಯನ್ನು ಬರೆದಂತೆ ತೋರುತ್ತಿತ್ತು. ೪೭. ಅಲ್ಲಿ ಎಡೆಯಾಡು ತ್ತಿರುವ ನವಯುವತಿಯರ ಕಡೆಗಣ್ಣುಗಳಿಂದ ಹೊಮ್ಮಿ ಹಬ್ಬುತ್ತಿರುವ ಬೆಳಕನ್ನೆ ಬೆಳ್ದಿಂಗಳ ಪೂರವೆಂದು ಭ್ರಮಿಸಿ, ಮಳೆಯಿಲ್ಲದೆ ಇದ್ದರೂ ಶಶಿಕಾಂತದ ಹರಿ

ಮತ್ತಮಲ್ಲಿ

ಸಿರಿಸದ ಮಾಲೆಯೆಂದೆಸೆವ ದಾಡಿಮಬೀಜಸಮಾಜವೆಂದು ಸೌಂ ।
ದರಬಿಸಕಾಂಡವೆಂದು ನಲವಿಂದಳಿಯುಂ ಗಿಳಿಯುಂ ಮರಾಳಮುಂ ॥
ಪರಿಮರಿಯಾಡಿ ವಾಸಿಸದೆ ಪೀರದೆ ನೀಱದೆ ಮಾಣ್ದ ಪಚ್ಚೆಯೊ ।
ಳ್ವರಲ ತೊಳಪ್ಪ ಮಾಣಿಕದ ಮುತ್ತಿನ ಲಂಬಣಮಿಲ್ಲದೆಲ್ಲಿಯುಂ ॥ ೪೮

ವಿವಹನದುತ್ಸವಕ್ಕೆ ನೆಲೆಯಾದುದಿದೆಂಬಿನಿತಲ್ತು ಕಾಮನು ।
ತ್ಸವಕೆ ವಸಂತನುತ್ಸವಕೆ ನಾಟಕದುತ್ಸವಕಾದುದಕ್ಕೆ ನೋ ॥
ಡುವೊಡನೆ ನಲ್ಲರೊಳ್ ನಲಿವ ಸಿಂಪಿಣಿಯಾಡುವ ನರ್ತಿಪೊಂದು ಚಿ ।
ತ್ರವಿಧದ ಚಿತ್ರಕಾಮಿನಿಯರಿಂದೆಸೆದಿರ್ದುದು ತಜ್ಜನಾಶ್ರಯಂ ॥ ೪೯

ತನ್ಮಧ್ಯದೊಳ್

ಮರಕತಸೋಪಾನಚತು ।
ಷ್ಕರಾಜಿತಂ ಕೋಣಶೋಣಮಣಿಕಲಶಮನೋ ॥
ಹರಮುತ್ತುಂಗಂ ಭಾಸುರ ।
ಹಿರಣ್ಮಯಂ ವಿಮಳವೇದಿಯೆಸೆದತ್ತಾದಂ ॥ ೫೦

ಪಳಿಕಿನ ಭೃಂಗಾರದ ಬೆ ।
ಳ್ವೆಳಗುಂ ಜಾಗಂಗಳಸೆವ ಪಸುರ್ವೆಳಗುಂ ಪ್ರ ॥
ಜ್ವಳಿಪ ಮಣಿಸ್ತಂಭದ ಕೆಂ ।
ಬೆಳಗುಂ ಪಸರಿಪುವು ಸುರಶರಾಸನಶತಮಂ ॥ ೫೧

ನಾಳಗೆಗಳು ನೀರು ಸುರಿಯುತ್ತಿದ್ದುವು ಮತ್ತು ಅಲ್ಲಿ – ೪೮. ಎತ್ತೆತ್ತಲೂ ಥಳಥಳಿಸುವ ಪಚ್ಚೆಯ, ಮಾಣಿಕದ, ಮುತ್ತಿನ ಲಂಬಣಗಳನ್ನು ಕಂಡು ಅವುಗಳನ್ನು ಶಿರೀಷದ ಮಾಲೆಯೆಂದು, ದಾಳಿಂಬದ ಬೀಜಗಳೆಂದು, ಸೊಗಸಾದ ತಾವರೆಯ ಕಾಂಡವೆಂದು ಭ್ರಮಿಸಿ ಮುತ್ತುತ್ತಿದ್ದ ದುಂಬಿಗಳೂ, ಗಿಳಿಗಳೂ, ಹಂಸಗಳೂ, ಅಲ್ಲಿ ವಾಸನೆಯನ್ನು ಕಾಣದೆ, ಅಗಿಯುವುದಕ್ಕಾಗದೆ, ತಿನ್ನಲು ಸಾಧ್ಯವಾಗದೆ ತೆಪ್ಪಗೆ ನಿಂತು ಕೊಳ್ಳುತ್ತಿದ್ದವು. ೪೯. ಅದು ಮದುವೆಯ ಉತ್ಸವಕ್ಕೆ ನಿರ್ಮಿಸಿದ ಮಂಟಪವಾಗಲಿಲ್ಲ; ಮನ್ಮಥನ ಉತ್ಸವಕ್ಕೆ, ವಸಂತನ ಉತ್ಸಾಹಕ್ಕೆ, ನಾಟಕದ ಸಂಭ್ರಮಕ್ಕೆ ನಿರ್ಮಾಣ ಗೊಂಡ ನೆಲೆಯೊ ಏನೊ ಎಂಬಂತೆ ನಲ್ಲರೊಡನೆ ನಲಿದಾಡುವ, ಓಕುಳಿ ಯಾಡುವ, ನರ್ತನ ಮಾಡುವ ಬಗೆಬಗೆಯ ಕಾಮಿನಿಯರಿಂದ ಶೋಭಿಸಿತು. ಅದರ ನಟ್ಟನಡುವೆ – ೫೦. ಪಚ್ಚೆಯ ನಾಲ್ಕು ಮೆಟ್ಟಿಲುಸಾಲುಗಳಿಂದ ಚೆಲುವಾಗಿ ನಾಲ್ಕೂ ಮೂಲೆಗಳಲ್ಲಿ ಮಾಣಿಕದ ಕಲಶಗಳಿಂದ ಒಪ್ಪವಾಗಿ, ಎತ್ತರವಾಗಿಯೂ, ಸುಂದರವಾಗಿಯೂ ಚಿನ್ನದ ಜಗಲಿ ವಿಸ್ತಾರವಾಗಿ ಕಂಗೊಳಿಸಿತು. ೫೧. ಸ್ಫಟಿಕದ, ಚಿನ್ನದ ಬಿಳಿಯ ಬೆಳಕು, ಜಾಗರದ ಸಸಿಗಳ ಹಸಿರು ಬೆಳಕು, ಥಳಥಳಿಸುವ ರತ್ನಸ್ತಂಭಗಳ ಕೆಂಬೆಳಕೂ ಕೂಡಿಕೊಂಡು ಅಲ್ಲಿ ನೂರಾರು ಕಾಮನ

ಬಳಭಿಚ್ಚಾಪಲತಾವಳಿ।
ಬಳಸಿದ ಬೆಳ್ಮುಗಿಲ ಮುಜಿಯಿದೆನೆ ಬಣ್ಣವುರಂ॥
ಬಳಸಿರ್ದೊಡೆ ಸೊಗಯಿಸಿದುದು।
ಪಳಿಕಿನ ಪಟ್ಟವಣೆ ವೇದಿಕಾಧಿತ್ಯಕದೊಳ್॥ ೫೨

ತತ್ಪುರೋಭಾಗದೊಳ್

ಸ್ವಸ್ತಿಕಲಕ್ಷ್ಯಲಕ್ಷಮಣಿದರ್ಪಣಮಂಡಿತಮುಲ್ಲಸತ್ಪ್ರವಾ।
ಳಸ್ತಬಕಂ ಪವಿತ್ರಬಿಸಸೂತ್ರವೃತಂ ನವಪಿಷ್ಟಚರ್ಚಿಕಾ॥
ಶಸ್ತಮುಪಾತ್ತದರ್ಭರಚನಂ ನಿಖಿಲೌಷಧಿಪುಂಜಿತಂ ಪರಿ।
ನ್ಯಸ್ತಮದೊಂದು ಪೂರ್ಣಕಲಶಂ ತಳೆದತ್ತತುಳಂ ವಿಳಾಸಮಂ॥ ೫೩

ಆ ವೇದೀಸ್ಥಳದೊಳ್ ಹರಿದ್ವಸುವ ಪಾತ್ರಂಗಳ್ ಲಸದ್ದೂರ್ವೆಯಿಂ।
ತೀವಿರ್ದುಂ ನವಚಂದ್ರಕಾಂತಚಷಕಂಗಳ್ ಚಂದನಕ್ಷೋದದಿಂ॥
ತೀವಿರ್ದುಂ ಮಣಿಶುಕ್ತಿಗಳ್ ಪರಿಮಿಳತ್ಕಾಶ್ಮೀರಸಾರಾಂಬುವಿಂ।
ತೀವಿರ್ದುಂ ಬಜಿದಿರ್ದವೋಲೆಸೆದುವಾದಂ ವರ್ಣಸಾಮಾನ್ಯದಿಂ॥ ೫೪

ಮತ್ತಂ ಮಣಿಕನಕರಜತಪಾತ್ರಂಗಳೊಳ್ ಪರಿಪಕ್ವಸಾಮಿಪಕ್ವಶಲಾಟುಭೇದಭಿನ್ನಂಗಳಪ್ಪ ಮಾಕಂದಮಾತುಲುಂಗಜಂಬೀರನಾರಂಗದಾಡಿಮ ದ್ರಾಕ್ಷಾಚೋಚಮೋಚಾದಿಫಳಕುಳಂಗಳುಂ ಸೊಗಯಿಪುವದಲ್ಲದೆಯುಂ

ಬಿಲ್ಲುಗಳನ್ನು ನಿರ್ಮಿಸಿದ್ದುವು. ೫೨. ಜಗಲಿಯ ಮಧ್ಯಭಾಗದಲ್ಲಿದ್ದ ಹಸೆಮಣೆಯು ಬಣ್ಣದ ರಂಗವಲ್ಲಿಯಿಂದೊಡಗೂಡಿ–ಇದೇನು ಇಂದ್ರಚಾಪಗಳಿಂದ ಸುತ್ತುವರಿದ ಬಿಳಿ ಮೋಡದ ವಿಭಾಗವೊ ಏನೊ ಎಂಬಂತೆ ಕಂಗೊಳಿಸಿತು. ಅದರ ಮುಂಭಾಗದಲ್ಲಿ–೫೩. ಸ್ವಸ್ತಿಕದ ಚಿಹ್ನೆಯಿಂದೊಡಗೂಡಿ, ಕನ್ನಡಿಯಿಂದ ಅಲಂಕೃತವಾಗಿ, ಚಿಗುರೆಲೆಗಳಿಂದಲೂ ತಾವರೆ ನೂಲುಗಳಿಂದಲೂ, ಹೊಸ ಹಿಟ್ಟಿನ ಲೇಪದಿಂದಲೂ, ಉತ್ತಮವಾದ ದರ್ಭೆಯ ಗರಿಗಳಿಂದಲೂ, ಸಮಸ್ತ ಔಷಧಿಗಳಿಂದಲೂ ಕೂಡಿಕೊಂಡ ಪೂರ್ಣಕುಂಭವು ತುಂಬ ಚೆಲುವಾಗಿ ತೋರಿತು. ೫೪. ಆ ಜಗಲಿಯಲ್ಲಿಟ್ಟ ಪಚ್ಚೆಯ ಪಾತ್ರೆಗಳು ಸೊಗಸಾದ ದೂರ್ವೆಯ ಗರಿಗಳಿಂದ ತುಂಬಿದ್ದುವು; ಚಂದ್ರಕಾಂತದ ಭರಣಿಗಳು ಗಂಧದ ರಸದಿಂದ ತುಂಬಿದ್ದುವು; ರತ್ನದ ಬಟ್ಟಲುಗಳು ಕುಂಕುಮ ಕೇಸರಿಯ ನೀರಿನಿಂದ ತುಂಬಿದ್ದುವು; ಹೀಗಿದ್ದರೂ ವರ್ಣಸಾಮ್ಯದ ಮೂಲಕ ಆ ಪಾತ್ರೆಗಳು ಬರಿದಾಗಿರುವಂತೆಯೆ ತೋರುತ್ತಿದ್ದುವು. ವ॥ ಮುತ್ತುರತ್ನದ, ಚಿನ್ನದ ಹಾಗು ಬೆಳ್ಳಿಯ ಪಾತ್ರೆಗಳಲ್ಲಿ ಪೂರ್ಣ ಹಣ್ಣಾದ, ಅರ್ಧ ಹಣ್ಣಾದ, ದೋರೆಗಾಯಾದ, ಕಸುಗಾಯಾದ–ಹೀಗೆ ಬೇರೆಬೇರೆ ಅವಸ್ಥೆಯ ಮಾವು, ನಿಂಬೆ, ಕಿತ್ತಳೆ, ದಾಳಿಂಬೆ, ದ್ರಾಕ್ಷಿ, ತೆಂಗು, ಬಾಳೆ

ಘುಸೃಣಾಭ್ಯುಕ್ಷಣವರ್ಣಪೂರಭರಣಸ್ಥಾಳಾವಳೀಮಾರ್ಜನ ।
ಪ್ರಸವಾಬಂಧನದೀಪಿಕೋಜ್ವಲನದರ್ಭಾಗರ್ಭ ಶಾಲ್ಯಕ್ಷತ ॥
ಪ್ರಸರಕ್ಷಾಲನ ತೋರಣಗ್ರಥನ ಮುಕ್ತಾಮಾಳಿಕಾಳಂಬನ ।
ವ್ಯಸನವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ ॥ ೫೫

ಅಂತನಂತಮಂಗಳದ್ರವ್ಯಸಂಸೇವ್ಯಮುಂ ಉತ್ಸವೋನ್ಮತ್ತಪರಿವಾರಜನ ಪರಿಪೂರ್ಣಮುಮಾಗಿ ಪರಿಣಯನಮಂಡಪಂ ರಾಜಾಶ್ರಯಶ್ರೀಗೆ ಮಂಗಳಸದನಮೆನಿಸಿತ್ತು. ಅನ್ನೆಗಮಿತ್ತಮಶೇಷೌಷಧಿ ಸನಾಥತೀರ್ಥಜಲಂಗಳಿನುತ್ಸಾಹಪಟಹರವಂಗಳೆಸೆಯೆ ಮಜ್ಜನಂಬೊಕ್ಕು ನೈಪಥ್ಯಗೃಹಕ್ಕೆ ವಂದು ಕೈಗೆಯ್ಯಲೊಡಂ

ಆ ರಾಜಶೇಖರಂಗೇಂ ।
ರಾರಾಜಿಸಿದುದೊ ವಿಚಿತ್ರಮಣಿಗಣರಚನೋ ॥
ದಾರಂ ಶೇಖರಮುಜ್ವಳ ।
ಮೇರುಶಿಖರಿಶಿಖರರತ್ನದೊಳ್ ಸರಿವರುತುಂ ॥ ೫೬

ಮಸುಳಿಸಿದುದಜಿತಸೇನನ ।
ಮಿಸುಪ ಮೊಗಂ ರತ್ನ ಕುಂಡಳಪ್ರಭೆ ತನ್ನೊಳ್ ॥
ಪಸರಿಸುತಿರೆ ಸೊಗಸಿನ ಕೆಂ ।
ಬಿಸಿಲೆಳಸಿದ ಕನಕಕಮಳಕಮನೀಯತೆಯಂ ॥ ೫೭

ಮೊದಲಾದ ಹಣ್ಣುಕಾಯಿಗಳು ಒಪ್ಪುತ್ತಿದ್ದುವು. ಅಲ್ಲದೆ–೫೫. ಕುಂಕುಮ ಲೇಪನ, ಬಣ್ಣದ ರಂಗವಲ್ಲಿ, ನೆಲವನ್ನು ತೊಳೆದು ಹಸನುಗೊಳಿಸುವಿಕೆ, ಹೂಮಾಲೆಯು ಹೆಣಿಗೆ, ದೀಪದ ಕುಡಿಗಳನ್ನು ಚಾಚಿ ಅವು ಇನ್ನಷ್ಟು ಚೆನ್ನಾಗಿ ಬೆಳಗುವಂತೆ ನೋಡಿಕೊಳ್ಳುವುದು, ದರ್ಭೆಅಕ್ಷತೆಗಳನ್ನು ಶುದ್ಧಿಗೊಳಿಸುವುದು, ತೋರಣಕಟ್ಟುವುದು, ಮುತ್ತಿನ ಮಾಲೆಗಳನ್ನು ತೂಗುಬಿಡುವುದು_ಮೊದಲಾದ ಕೆಲಸಗಳಲ್ಲಿ ನಿರತರಾದ ಸ್ತ್ರೀಯರು ಅಲ್ಲಿ ಒಪ್ಪುತ್ತಿದ್ದರು. ವ॥ ಹೀಗೆ ಅನಂತವಾದ ಮಂಗಲ ದ್ರವ್ಯಗಳಿಂದಕೂಡಿಕೊಂಡು, ಉತ್ಸವದಿಂದ ಉತ್ತೇಜಿತರಾದ ಪರಿವಾರ ಜನರಿಂದ ಕಿಕ್ಕಿರಿದು ಆ ವಿವಾಹಮಂಟಪವು ರಾಜನ ವೈಭವಲಕ್ಷ್ಮಿಗೆ ಮಂಗಳಭವನ ವೆನಿಸಿತ್ತು. ಅಷ್ಟರಲ್ಲಿ ಸಮಸ್ತ ಔಷಧಿಗಳನ್ನು ಬೆರಸಿ ಅಣಿಗೊಳಿಸಿದ ತೀರ್ಥೋದಕಗಳಿಂದ ಉತ್ಸಾಹವಾದ್ಯಧ್ವನಿಯೊಂದಿಗೆ ಸ್ನಾನ ಮಾಡಿ, ಭೂಷಣ ಗೃಹಕ್ಕೆ ಬಂದು, ಅಲಂಕರಿಸಲಾಗಿ_೫೬. ಮೇರುಗಿರಿಯ ಶಿಖರದಲ್ಲಿ ಶಿಖರರತ್ನವೊಪ್ಪುವಂತೆ, ವಿಧ ವಿಧವಾದ ರತ್ನಗಳಿದ ಸೊಗಸಾಗಿ ನಿರ್ಮಿಸಿದ ಕಿರೀಟವು ರಾಜಶ್ರೇಷ್ಠನಾದ ಆ ಕುಮಾರನ ತಲೆಯ ಮೇಲೆ ಎಷ್ಟೊಂದು ಚೆಲುವಾಗಿ ಕಂಗೊಳಿಸಿತು! ೫೭. ಸೊಗಸಾದ ಕೆಂಬಿಸಿಲು ಆವರಿಸಿ ಹೊಂದಾವರೆಯ ಚೆಲುವನ್ನು ತನ್ನೊಳಗೆ ಅಡಗಿಸಿಕೊಳ್ಳುವಂತೆ ರತ್ನಕುಂಡಲಗಳ ಕಾಂತಿ ಅಜಿತಸೇನನ ಕಾಂತಿಯುಕ್ತ

ಅಗಲದೆ ನೆಲಸಿದ ಲಕ್ಷ್ಮಿಯ ।
ನಗೆಗಣ್ಗಳ ಬೆಳಗು ಬಳೆದು ಬೀೞಲ್ವರಿದ ॥
ತ್ತಗಲ್ದುರದೊಳೆಂಬ ತೆಱದಿಂ ।
ಸೊಗಯಿಸಿದುದು ವಿಮಳತರಳತಾರಾಹಾರಂ ॥ ೫೮

ಅರಿಬಳಜಳನಿಧಿಮಥನೋ ।
ದ್ದುರಭುಜಮಂದರಮನೆಯ್ದೆ ಸುತ್ತಿದ ತಾರಾ ॥
ಪರಿಕರಮೆನೆ ವಜ್ರಾವಳಿ ।
ವಿರಚಿತಕೇಯೂರವಳಯಮೇಂ ತೊಳಗಿದುದೋ ॥ ೫೯

ಕರಟನಿಘರ್ಷಣದೆ ಮದಂ ।
ಬೊರೆದಾನೆಯ ಕೈಯನಳಿಗಳಾವರಿಸಿದವೊಲ್ ॥
ಮರಕತಕಂಕಣಮೆಸೆದುವು ।
ತಿರುವೊಯ್ಲಿಂ ಕರ್ಪುವೆತ್ತ ತತ್ಕರಯುಗದೊಳ್ ॥ ೬೦

ಅರುಣತಲದ್ಯುತಿತತಿಯೆಡೆ ।
ದೆರಪುಗುಳಿಂದುಣ್ಮುವಂದದಿಂ ಕೆಂಬೆರಲುಂ ॥
ಗುರದಿನೊಗೆವರುಣರುಚಿಮಂ ।
ಜರಿ ತಳಿರ್ವೇಱಿಸಿದುದ್ಯೆದೆ ಕರಶಾಖೆಗಳಂ ॥ ೬೧

ಕರೆ ಕತ್ತರಿಸಿದ ಚೀನಾಂ ।
ಬರದೊಪ್ಪುವ ಸುತ್ತಿನಿಂದೆ ಡಿಂಡೀರಪರಂ ॥
ಪರೆ ಬಳಸಿದಮಳಕಮಳಾ ।
ಕರಮೆನೆ ನೇತ್ರಾಳಿಗಿತ್ತನಾಕರ್ಷಣಮಂ ॥ ೬೨

ವಾಗಿದ್ದ ಮೊಗವನ್ನು ತನ್ನಲ್ಲಿ ಅಡಗಿಸಿಕೊಂಡಿತು. ೫೮. (ಎದೆಯಲ್ಲಿ) ಶಾಶ್ವತವಾಗಿ ನೆಲಸಿದ ಲಕ್ಷ್ಮಿಯು ನಗೆಗಣ್ಣುಗಳ ಬೆಳಕು ಬೆಳೆದು (ಹೆಮ್ಮರದಂತೆ) ಬೀಳಲು ಬಿಟ್ಟಿತೊ ಏನೊ ಎಂಬಂತೆ ಆತನ ಅಗಲವಾದ ಎದೆಯ ಮೇಲೆ ಪರಿಶುಭ್ರವಾದ ಮುತ್ತಿನ ಹಾರ ಕಂಗೊಳಿಸಿತು. ೫೯. ಶತ್ರುಸೈನ್ಯವೆಂಬ ಸಮುದ್ರವನ್ನು ಕಡೆಯುವ ಮಂದರಗಿರಿಯಾದ ಆತನ ತೋಳನ್ನು ಸುತ್ತುವರಿದ ನಕ್ಷತ್ರಮಂಡಲವೊ ಏನೊ ಎಂಬಂತೆ ವಜ್ರನಿರ್ಮಿತವಾದ ಕೇಯೂರದ ಬಳೆ ಸೊಗಸಾಗಿ ತಳತಳಿಸಿತು. ೬೦. ಗಂಡಸ್ಥಲವನ್ನು ಒರಸಿಕೊಂಡಾಗ ಮದೋದಕ ಮೆತ್ತಿಕೊಂಡ ಮದ್ದಾನೆಯ ಸೊಂಡಿಲನ್ನು ದುಂಬಿಗಳು ಸುತ್ತುಗಟ್ಟಿ ನಿಂತಂತೆ, ಹೆದೆಯ ಬಡಿತದಿಂದ ಜಡ್ಡುಗಟ್ಟಿ ಕಪ್ಪಾದ ಆತನ ಮುಂಗೈಯಲ್ಲಿ ಪಚ್ಚೆಯ ಕೈಬಳೆಗಳು ಒಪ್ಪಿದುವು. ೬೧. ಅಂಗೈಯ ಕೆಂಬೆಳಕು ಬೆರಳೆಡೆಯಲ್ಲಿ ಹೊಮ್ಮಿತೊ ಏನೊ ಎಂಬಂತೆ ಮಾಣಿಕದ ಬೆರಳುಂಗುರಗಳ ಕೆಂಗಿರಣಗಳು ಆತನ ಉಗುರುಗಳಿಗೆ ಚಿಗುರೆಲೆಗಳನ್ನು ಮೂಡಿಸಿ ಅಲಂಕರಿಸಿದವು. ೬೨. ಕರೆ ಕತ್ತರಿಸಿದ ರೇಷ್ಮೆ ವಸ್ತ್ರವನ್ನು ಉಟ್ಟು ಆ ಕುಮಾರನು, ನೊರೆಯ ಸಾಲುಗಳಿಂದ ಶೋಭಿಸುವ ಕಮಲ ಸರೋವರದಂತೆ ನೋಡುವವರ ಕಣ್ಣುಗಳನ್ನು

ಪೂಗಣೆ ಕರ್ವುವಿಲ್ ಮಿಳಿರ್ವ ಮೀಂಗುಡಿ ಮಲ್ಲಿಗೆ ಮಾವು ತಂಬೆರಲ್ ।
ಕೋಗಿಲೆ ಜೊನ್ನಮಿಂದೊಳದ ನುಣ್ದನಿ ಸುಗ್ಗಿಯೆನಿಪ್ಪವೆಲ್ಲಮೊಂ ॥
ದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮಂ ಸಮಂ ।
ತಾಗಿಸಲೊಂದೆ ಸಾಲ್ಗುಮೆನಿಸಿತ್ತು ಕುಮಾರಕೃತಪ್ರಸಾಧನಂ ॥ ೬೩

ಆ ಪ್ರಸ್ತಾವದೊಳನೇಕಾಂತಃಪುರಕಾಂತೆಯರುಂ ಶಶಿಪ್ರಭಾಪ್ರಸಾಧನಕರಣನಿರತೆಯರಾಗಿ ಶರದದ ನಿಱಿಮುಗಿಲ ತುಱುಗಲನೆಡೆಗಲಸಿದ ವಿದ್ಯಾಧರಿಯ ಪರಿಯನನುಕರಿಸೆ ಪೊಸದುಗುಲಮಂ ನಿಱಿವಿಡಿದುಡಿಸಿಯುಂ, ಘಸೃಣರಸದಿನಸುಗೆದಳಿರಂ ತೊಯ್ವಂತೆ ಯಾವಕದ್ರವದಿಂ ಪದತಳಮಂ ಲೇಸೆನಿಸಿಯುಂ, ಚರಣನಖಚಂದ್ರಮಂಡಳಕ್ಕೆ ಪರಿವೇಷಮಂ ಪಡೆವಂತೆ ಬೆರಕೆವೆಳಗು ಬಳಸೆ ನವರತ್ನ ನೂಪುರಂಗಳಂ ತುಡಿಸಿಯುಂ, ಮನೋಜಗಜಕುಂಭದೊಳ್ ನಕ್ಷತ್ರಮಾಲೆಯಂ ಸುತ್ತುವಂತೆ ರತ್ನರಶನಾಸೂತ್ರಮಂ ವೃತ್ತಕಟಿಯೊಳ್ ವೇಷ್ಟಿಸಿಯುಂ, ಮದನ ಮಂಗಳಭೃಂಗಾರಂಗಳಂ ಬರ್ಚಿಸುವಂತೆ ಮೊಲೆಗೆಲದೊಳ್ ಕಸ್ತೂರಿಕಾಪತ್ರಭಂಗಮಂ ಚಿತ್ರಿಸಿಯುಂ, ದರಹಾಸಭಾಸುರಮುಖಸರೋರುಹಮೃಣಾಳ ನಾಳಂಗಳೆನಿಸಿ ಪೊಳೆವ ಮುತ್ತಿನ ಸರಂಗಳಂ ಕೊರಲೊಳಿಕ್ಕಿಯುಂ, ಕೋಮಲಬಾಹಾಲತೆಗಾಳ

ಸೆಳೆದು ಸೆರೆಹಿಡಿದನು. ೬೩. ಹೂವಿನ ಬಾಣ, ಕಬ್ಬಿನ ಬಿಲ್ಲು, ಮೀನಧ್ವಜ, ಮಲ್ಲಿಗೆ, ಮಾವು, ತೆಂಕಣಗಾಳಿ, ಕೋಗಿಲೆ, ಬೆಳುದಿಂಗಳು, ಹಿಂದೋಳದ ಮಧುರನಾದ, ವಸಂತಸಮಯ_ಎಂಬ ಇವೆಲ್ಲವನ್ನೂ ಒಂದುಗೂಡಿಸಿ ಮನ್ಮಥನಿಗೆ ಒದಗಿಸಿ ಜಗತ್ತನ್ನೆ ಜಯಿಸುವ ದರ್ಪವನ್ನುಂಟುಮಾಡಲು ಇದೊಂದೆ ಸಾಕು ಎಂಬಂತೆ ಕುಮಾರನ ವೇಷಭೂಷಣಗಳ ಅಲಂಕಾರವಿತ್ತು. ವ॥ ಆ ಸಂಧರ್ಭದಲ್ಲಿ ರಾಣಿವಾಸದ ಹಲವಾರು ಸ್ತ್ರೀಯರು ಶಶಿಪ್ರಭೆಯನ್ನು ಅಲಂಕರಿಸುವುದರಲ್ಲಿ ನಿರತರಾಗಿದ್ದರು; ಶರತ್ಕಾಲದ ಸುಂದರವಾದ ಬೆಳ್ಮೋಡದ ನಡುವಿರುವ ವಿದ್ಯಾಧರಿಯೊ ಏನೊ ಎಂಬಂತೆ ಹೊಸ ರೇಷ್ಮೆಯ ಬಿಳಿಯ ಸೀರೆಯನ್ನು ನಿರಿಹಿಡಿದು ಉಡಿಸಿದರು; ಕುಂಕುಮದ ನೀರಿನಿಂದ ಅಶೋಕದ ಚಿಗುರನ್ನು ತೋಯಿಸುವಂತೆ, ಅರಗಿನ ರಸದಿಂದ ಅಂಗಾಲುಗಳಿಗೆ ಸೊಗಸಾಗಿ ಲೇಪಿಸಿದರು; ಪಾದದ ಉಗುರುಗಳೆಂಬ ಚಂದ್ರಮಂಡಳಕ್ಕೆ ಪರಿವೇಷವನ್ನು ರಚಿಸುವಂತೆ ವಿವಿಧಕಾಂತಿಗಳ ಮಿಶ್ರವರ್ಣದಿಂದೆಸೆಯುವ ನವರತ್ನ ಖಚಿತ ಅಂದುಗೆಗಳನ್ನು ತೊಡಿಸಿದರು; ಮನ್ಮಥನ ಆನೆಯ ಕುಂಭಸ್ಥಳಕ್ಕೆ ನಕ್ಷತ್ರಮಾಲೆಯ ಅಲಂಕಾರ ವನ್ನು ತೊಡಿಸುವಂತೆ, ರತ್ನಮಯವಾದ ಉಡೆನೂಲನ್ನು ಆಕೆಯ ಕಟಿ ಬಿಂಬಕ್ಕೆ ಅಳವಡಿಸಿದರು; ಕಾಮನ ಮಂಗಲ ಕಲಶಗಳನ್ನು ಅಲಂಕರಿಸು ವಂತೆ ಮೊಲೆಗಳ ಪಕ್ಕದಲ್ಲಿ ಕಸ್ತೂರಿಯಿಂದ ಮಕರಿಕೆಗಳನ್ನು ಬರೆದರು; ನಸುನಗೆಯಿಂದ ಸೊಗಸುವ ಮುಖಕಮಲದ ನಾಳಗಳೊ ಏನೊ ಎಂಬಂತೆ ಬೆಳ್ಳಗೆ ಹೊಳೆಯುವ ಮುತ್ತಿನ ಹಾರಗಳನ್ನು ಕೊರಳಲ್ಲಿ ಇಕ್ಕಿದರು; ಕೋಮಲ ವಾದ ತೋಳುಗಳೆಂಬ ಬಳ್ಳಿಗಳಿಗೆ, ದುಡಗೆ ನೀರಿನ ಮಡಿ ಕಟ್ಟುವಂತೆ

ವಾಳವಳಯಮಮಂ ಸಮೆವಂತೆ ಕನಕವಳಯಮಮಂ ಮುಂಗೈಯೊಳ್ ಸಂಗಳಿಸಿಯುಂ, ಮದನಮೋಹನ ಶರಂಗಳಂ ಪಲತೆಱದಲರ್ಗಳಿಂದರ್ಚಿಸುವಂತೆ ಪೊಸಪರಿಯ ಕೇವಣದುಂಗುರಂಗಳಂ ಬೆರಲ್ಗಳೊಳ್ ನಿರವಿಸಿಯುಂ, ಮನ್ಮಥಮನೋರಥಕ್ಕೆ ರಥಾಂಗಯುಗಳಮಂ ಸಂಗಳಿಸುವಂತೆ ಮೊಗಕ್ಕೆ ಸೊಗಯಿಸುವ ರತ್ನ ರಚನೆಯೋಲೆಯಂ ಪಾಲಿಯೊಳ್ ತೊಡರ್ಚಿಯುಂ, ಕರ್ಣಾವತಂಸದೊಳ್ ಕೀಲಿಸಿದ ನೀಲದುನ್ಮೂಖ ಮಯೂಖಸಂಕುಳಂ ಕೊಡಂಕೆಯೊಳ್ ತಿಂಬಿತೆಂಬಂತೆ ಕೊಗ್ಗಿಯ ಕತ್ತುರಿಯಂ ಪತ್ತಿಸಿಯುಂ, ಬೆಳತಿಗೆಗಣ್ಣ ಬಳವಿಗಿದುವೆಗುಱಿಯೆಂದು ಕುಱುಪನಿಕ್ಕುವಂತೆ ಕೊನೆಗೊಡಂಕೆಯೊಳ್ ತೋರಮುತ್ತಿನ ಮುಗುಳಂ ತೆಗಳ್ಚಿಯುಂ, ನೇತ್ರಪುತ್ರಿಕೆಗೆ ನಿರ್ವಾಣರೇಖೆವಡೆವಂತೆ ನಗೆಗಣ್ಗಳೊಳ್ ಕಜ್ಜಳರೇಖೆಯನಳಂಕರಿಸಿಯುಂ, ಕರ್ವುವಿಲ್ಲಂ ಗೊಲೆಗೊತ್ತುವಂತೆ ನಿಡುವುರ್ವಂ ಕುಡುವುರ್ವಾಗೆ ಸಮೆಱಿಯುಂ, ವದನನಳಿನಮಂ ಬಳಸಿದಳಿಮಾಲೆಯೆನಿಸಿ ಸುಱಿಗುರುಳನಳವಡಿಸಿಯುಮನಂತರಂ

> ಲಳನೆಯ ಕೇಶದಲ್ಲಿಯಲರಂ ತಳಿರುಂ ಪೊಳೆವಂದದಿಂದೆ ಕೋ ।
> ಮಳನಖಕಾಂತಿಯುಂ ಮೃದುತಳದ್ಯುತಿಯುಂ ನಿಮಿರ್ವನ್ನಮೊಯ್ಯನಾ ।
> ಗಳೆ ತಲೆವಿಕ್ಕಿ ಕಟ್ಟಿಲೆಗಮಿಂದುಮರೀಚಿಗಮಾಯ್ತು ನಾಡೆ ಕ ।
> ಣ್ಗಳವಡೆ ಮಲ್ಲಯುದ್ಧಮೆನೆ ದೇಸೆಯ ಪೂಮುಡಿಯಂ ತೊಡರ್ಚಿದರ್ ॥ ೬೪
>
> ಮಳಯಜಮೃಗಮದಪಂಕಂ ।
> ಗಳಿನಡಕಿಲ್ಪೊಟ್ಟನೊರ್ವಳಾಕೆಯ ಭಾಳ ॥

ಮುಂಗೈಗಳಲ್ಲಿ ಚಿನ್ನದ ಬಳೆಗಳನ್ನು ಅಳವಡಿಸಿದರು; ಮನ್ಮಥನ ಮೋಹನ ಬಾಣಗಳನ್ನು ಹಲವಾರು ಬಗೆಯ ಹೂಗಳಿಂದ ಅರ್ಚಿಸುವಂತೆ ಹೊಸಬಗೆಯ ರತ್ನ ಖಚಿತವಾದ ಉಂಗುರಗಳನ್ನು ಬೆರಳುಗಳಿಗೆ ತೊಡಿಸಿದರು; ಕಾಮನ ಮನವೆಂಬ ರಥಕ್ಕೆ ಎರಡು ಗಾಲಿಗಳನ್ನು ಅಳವಡಿಸುವಂತೆ ಮುಖಕ್ಕೆ ಒಪ್ಪುವ ರತ್ನಖಚಿತವಾದ ಓಲೆಗಳನ್ನು ಕಿವಿಹಾಲೆಗಳಲ್ಲಿ ಸೇರಿಸಿದರು; ಕಿವಿಯ ಅಲಂಕಾರವಾಗಿದ್ದ ಇಂದ್ರನೀಲದ ಕಿರಣ ಸಮೂಹವು ಕಿವಿಯ ಒಳಗನ್ನೂ ತುಂಬಿತೊ ಏನೊ ಎಂಬಂತೆ "ಕೊಗ್ಗಿಯ" ಕಸ್ತೂರಿಯನ್ನು ಲೇಪಿಸಿದರು; ಬೆಳ್ಳಗೆ ಹೊಳೆಯುವ ಕಣ್ಣುಗಳ ವಿಸ್ತಾರಕ್ಕೆ ಇದೇ ಸೀಮೆಯೆಂದು ಗುರುತಿಡುವಂತೆ ಕಿವಿಯ ತುದಿಯಲ್ಲಿ ದೊಡ್ಡ ಮುತ್ತಿನ ಮುಗುಳನ್ನು ತಗುಲಿಸಿಟ್ಟರು; ಕಣ್ಣುಗೊಂಬೆಗೆ ಬಾಹ್ಯರೇಖೆಯನ್ನು ಒತ್ತಿ ಬರೆದಂತೆ ನಗೆಗಣ್ಣುಗಳಿಗೆ ಕಾಡಿಗೆಯ ಗೆರೆಯನ್ನು ಒಪ್ಪವಾಗಿ ರೇಖಿಸಿದರು; ಕಬ್ಬಿನ ಬಿಲ್ಲನ್ನು ಬಿಗಿದು ಕಟ್ಟುವಂತೆ ನೀಳವಾದ ಹುಬ್ಬುಗಳನ್ನು ಕುಡಿಹುಬ್ಬುಗಳಾಗುವಂತೆ ತಿದ್ದಿದರು; ಮುಖವೆಂಬ ನೈದಿಲೆಯನ್ನು ಸುತ್ತುಗಟ್ಟಿದ ದುಂಬಿಗಳ ಸಾಲೆಂಬಂತೆ ಸುಳಿಗುರುಳುಗಳನ್ನು ಅಳವಡಿಸಿದರು. ಆ ಬಳಿಕ_ ೬೪. ಆ ಚೆಡಗಿಯ ಕೂದಲಲ್ಲಿ ಹೂಗಳೂ, ಚಿಗುರುಗಳೂ ಜೊತೆಜೊತೆಯಾಗಿ ಹೊಳೆಯುವಂತೆ ಕೋಮಲವಾದ ಬೆರಳುಗುರ ಕಾಂತಿಯೂ

ಸ್ಥಳಿಯೊಳಳವಡಿಸಿದಳ್ ಸ್ಮರ ।
ಕುಳದೇವತೆ ಮಿಸುಪ ನೊಸಲ ಕಣ್ದೆರೆದವೋಲ್ ॥ ೬೫

ಅಂತಲಂಕರಿಸಿ

ಮಸೆದಸಮಾಸ್ತ್ರನುನ್ಮದನಬಾಣಶಲಾಕೆ ವಿಳಾಸದಿಂದಮೇ ।
ಱಿಸಿದಲರ್ವಿಲ್ಲನೈಕ್ಷವಧನುರ್ಲತೆ ಬರ್ಚಿಸಿ ಮೀನಕೇತುವೆ ॥
ತ್ತಿಸಿದ ಸಮುಲ್ಲಸಜ್ಝಷಪತಾಕೆಯೆನಿಪ್ಪವೊಲಾಂತಳಾಕೆಯಾ ।
ಪಸದನದೊಳ್ ಜಗತ್ತ್ರಿತಯಚಿತ್ತವಿಮೋಹನಶಕ್ತಿಯೇೞ್ಗೆಯಂ ॥ ೬೬

ಆಗಳ್

ಕಟಿ ಕಳಕಾಂಚಿಯಿಂದೆ ಕಳಕಾಂಚಿಯುಮೀಕಟಿಯಿಂ ಕರಂ ಕನ ।
ತ್ಕಟಕದಿನೀಕನತ್ಕಟಕಮುಂ ಕರದಿಂ ನಿಟಲಂ ಲಲಾಮದಿಂ ॥
ನಿಟಲದಿನಾಲಲಾಮಮುಮಲಂಕರಿಸಿರ್ದುವೆನುತ್ತೆ ನೋಡಿದರ್ ।
ಘಟಕುಚೆಯರ್ ಸಮಂದರುತುಮಾಕೆಯ ಭೂಷ್ಯವಿಭೂಷಣಂಗಳಂ ॥ ೬೭

ಅದಲ್ಲದೆಯುಂ

ಸುಕುಮಾರವಾದ ಅಂಗೈಗಳ ಕಾಂತಿಯೂ ಸಂಗಡಿಸಿರಲಾಗಿ ಮೆಲ್ಲಗೆ ತಲೆ ಬಾಚಿದರು: ಕತ್ತಲೆಗೂ ಚಂದ್ರಕಾಂತಿಗೂ ನಯನಮೋಹಕವಾದ ಮಲ್ಲಯುದ್ಧ ನಡೆಯಿತೋ ಏನೊ ಎಂಬಂತೆ ಚೆಲುವಾದ ಹೂಮುಡಿಯನ್ನು ತಲೆಗೂದಲಲ್ಲಿ ಮುಡಿಸಿದರು. ೬೫. ಮನ್ಮಥನ ಕುಲದೇವತೆ ತನ್ನ ಉಜ್ವಲವಾದ ಹಣೆಗಣ್ಣನ್ನು ತೆರೆದು ತೋರಿದಳೊ ಏನೋ ಎಂಬಂತೆ ಆ ಕನ್ಯೆಯು ನೊಸಲಲ್ಲಿ ಶ್ರೀಗಂಧ ಹಾಗು ಕಸ್ತೂರಿಯ ದ್ರವದಿಂದ ತಿಲಕವನ್ನು ಒಬ್ಬಳು ಸೊಗಸಾಗಿ ಇಟ್ಟಳು. ಹೀಗೆ ಅಲಂಕಾರ ಮಾಡಿದ ಬಳಿಕ_೬೬. ಮನ್ಮಥನು ಮಸೆದು ಸಿದ್ಧಗೊಳಿಸಿದ ಉನ್ಮಾದಬಾಣವು, ಬೆಡಗಿನಿಂದ ಹೆದೆಯೇರಿಸಿಟ್ಟ ಕಬ್ಬಿನ ಬಿಲ್ಲೊ, ಮೀನಧ್ವಜನು ಅಲಂಕರಿಸಿ ಎತ್ತಿಸಿದ ಮಕರಪತಾಕೆಯೊ, ಏನೊ ಎಂಬಂತೆ ಆಕೆ ಅಲಂಕೃತಿಯಿಂದ ಮೂಲೋಕದ ಚಿತ್ತವನ್ನು ಮರುಳುಗೊಳಿಸುವ ಶಕ್ತಿಸಾರವನ್ನು ಪಡೆದಳು. ೬೭ ಮಧುರಧ್ವನಿಯ ಉಡೆನೂಲಿನಿಂದ ಇವಳ ಕಟಿಯು ಅಲಂಕೃತವಾದಂತೆ ಕಟಿಯಿಂದ ಆ ಉಡೆನೂಲು ಅಲಂಕೃತವಾಗಿದೆ. ಕೈಗೆ ಬಳೆ ಹೇಗೊ ಹಾಗೆ ಬಳೆಗೆ ಕೈ ಅಲಂಕಾರವಾಗಿದೆ; ಹಣೆಗೆ ತಿಲಕದಿಂದ ಸೊಗಸು ಬಂದಂತೆ ಆ ತಿಲಕಕ್ಕೆ ಇವಳ ಹಣೆಯು ಚೆಲುವನ್ನು ನೀಡಿದೆ_ ಹೀಗೆಂದು ನುಡಿಯುತ್ತ ನೆಲೆ

ಬಡತನಮನಾಂತ ನಡು ಕೊ ।
ರ್ಬಡರ್ದ ಕುಚಂ ಬಿಣ್ಪನಾಳ್ದ ಜಘನಂ ಬೆಳರ್ಗೆಂ ॥
ಪಿಡಿದಧರಮಿಂಪನಪ್ಪಿದ ।
ನುಡಿ ತಡೆಪಂಬೆತ್ತ ನಡೆ ನಿಜಂ ಕೋಮಳೆಯಾ ॥ ೬೮

ಎಂದು ಚತುರಯುವತಿಯರ್ ಪೊಗೞುತ್ತಿರ್ಪಿನಂ ವಿವಾಹಲಗ್ನಂ ಸಾರ್ತಂದುದೆಂದು ಬರವೇಟಿಲೊಡಂ

ನಭಮಂ ಸಂಜೆಮುಗಿಲ್ ಪಗಿಲ್ತ ತೆಱದಿಂ ತಳ್ಪೊಯ್ಯೆ ಭೂಷಾಮಣಿ ।
ಪ್ರಭೆ ದಿಕ್ಚಕ್ರಮನಚ್ಚ ಜೊನ್ನಮೆಳಸಿತ್ತೆಂಬನ್ನೆಗಂ ತುಂಬೆ ದೃ ॥
ಕ್ಪ್ರಭೆ ಭೂಭಾಗನೆಯ್ದೆ ಬೆಳ್ಪುಮರ್ದ ಪಾಂಗಿಂ ಪೆರ್ಚೆ ಪಾದೋಲ್ಲಸ ।
ತ್ಪ್ರಭೆ ಬಂದಳ್ ಕುಡುತುಂ ಶಶಿಪ್ರಭೆ ಜನಾಕ್ಷೀಂದೀವರಾನಂದಮಂ ॥ ೬೯

ಉರದೊಳ್ ಹಾರಾಂಶುಗಂಡಸ್ಥಳಿಯೊಳಮಳಕರ್ಣಾವತಂಸಾಂಶುಮತ್ತಂ ।
ಶಿರದೊಳ್ ರತ್ನಾವಳೀಶೇಖರಶಿಖರಸಮುತ್ತಾಂಶುಗಳ್ ಮೊತ್ತಮಂ ಬಿ ॥
ತ್ತರಿಪನ್ನಂ ಸಿದ್ಧವಿದ್ಯಾಧರದಿವಿಜಕುಮಾರರ್ಕಳಂ ಚೆಲ್ವಿನಿಂ ಮಾಂ ।
ಕರಿಸುತ್ತುಂ ಬಂದನಾಸಾದಿತನಿರುಪಮಶೃಂಗಾರಸಾರಂ ಕುಮಾರಂ ॥ ೭೦

ಮೊಲೆಯ ಪರಿಜನರು ಅವಳ ಅವಯವಗಳನ್ನೂ ಅಲಂಕಾರಗಳನ್ನೂ ಸರಿದೂಗಿಸುತ್ತ ನೋಡಿದರು. ಅದಲ್ಲದೆ– ೬೮. ಬಡವಾದ ನಡು, ಕೊಬ್ಬಿದ ಮೊಲೆಗಳು, ಹೊರವಾದ ಜಘನ, ಕೆಂಪಿಡಿದ ತುಟಿ, ಇಂಪಾದ ನುಡಿ, ನಿಧಾನವಾದ ನಡೆ_ಇವು ಈ ಕನ್ಯೆಗೆ ಎಷ್ಟು ಸ್ವಾಭಾವಿಕವಾದುವು! ವ॥ ಎಂದು ಚತುರೆಯರಾದ ತರುಣಿಯರು ಹೊಗಳುತ್ತಿರಲಾಗಿ ವಿವಾಹ ಮುಹೂರ್ತವು ಹತ್ತಿರವಾಯಿತೆಂದು, ಬರಹೇಳಲಾಯತು, ಕೂಡಲೆ ೬೯. ಆಕಾಶವನ್ನು ಸಂಜೆಯ ಮೋಡ ತುಂಬಿದಂತೆ ಆಭರಣಗಳ ರತ್ನಪ್ರಭೆ ದಿಕ್ಕುಗಳನ್ನೆಲ್ಲ ಆವರಿಸುತ್ತಿರಲಾಗಿ, ಹಸನಾದ ಬೆಳ್ದಿಂಗಳು ಪಸರಿಸಿತೊ ಏನೊ ಎಂಬಂತೆ ತನ್ನ ಕಣ್ಣಿನ ಕಾಂತಿ ಭೂಮಿಯನ್ನೆಲ್ಲ ಬೆಳ್ಳಗೆ ಬೆಳಗುತ್ತಿರಲಾಗಿ, ಜನರ ಕಣ್ಣುಗಳೆಂಬ ನೈದಿಲೆಗಳಿಗೆ ತನ್ನ ಕಿರಣಗಳಿಂದ ಸಂತೋಷವೊದಗಿಸುತ್ತ ಬರುವ "ಶಶಿಪ್ರಭೆ" (ಚಂದ್ರಕಾಂತಿ)ಯಂತೆ ಶಶಿಪ್ರಭೆ ಬಂದಳು. ೭೦. ಎದೆಯ ಮೇಲೆ ಮುತ್ತಿನಹಾರಗಳ ಕಾಂತಿ, ಕೆನ್ನೆಗಳ ಮೇಲೆ ಕರ್ಣಾಲಂಕಾರದ ಕಾಂತಿ, ತಲೆಯ ಮೇಲೆ ರತ್ನಕಿರೀಟದ ಪ್ರಭೆ ಅಧಿಕಾಧಿಕವಾಗಿ ಬೆಳುಗುತ್ತಿರಲಾಗಿ ಸಿದ್ಧ ವಿದ್ಯಾಧರ ದೇವಕುಮಾರರನ್ನು ತನ್ನ ಚೆಲುವಿನಿಂದ ಸೋಲಿಸುತ್ತ ಅಸದೃಶವಾದ ಶೃಂಗಾರಸಾರನಾಗಿ ಕುಮಾರನು ಬಂದನು. ವ॥ ಹೀಗೆ ಬಂದ ವಧೂವರರಿಬ್ಬರನ್ನೂ ಮದುವೆಯ ಜಗಲಿಯ ಮಧ್ಯದಲ್ಲಿ ರೇಷ್ಮೆ ವಸ್ತ್ರ

ಅಂತು ಬಂದ ವಧೂಕಾಂತರಿರ್ವರುಂ ವಿವಾಹವೇದಿಕಾಮಧ್ಯದೊಳ್ ದಳಿಂಬದಿಂ ಪಚ್ಚವಡಿಸಿದ ಪಳಿಕಿನ ಪಟ್ಟವಣೆಯೊಳಿರಿಸಿ ಮುನ್ನಮೆ ಹುತಾಗ್ನಿಯಾಗಿರ್ದ ಪುರೋಹಿತಂ ಪ್ರಣವಪೂರ್ವಕಮುಚ್ಚರಿಸಿದ ಪುಣ್ಯಾಹರವದೊಡನೆ

ಮುಗುಳಂ ಪೇಜಿದ ಕುಂದವಲ್ಲಿಗಮರಲ್ತುಂದಾಕದಂಬೋದ್ಧಶಾ ।
ಖೆಗಮಚ್ಛಾಂಬುವನಂಬುದಂ ಕಱೆವ ಪಾಂಗಿಂ ಸಾತ್ವಿಕಸ್ವೇದಬಿಂ ॥
ದುಗೆ ರೋಮೋದ್ಗತಿಗಿರ್ಕೆಯಾದ ಸುತೆಗಂ ಜಾಮಾತೃಗಂ ಪ್ರೀತಿ ಕೈ ।
ಮಿಗೆ ಕೈನೀರೆಱೆದಂ ಕನತ್ಕಳಶಹಸ್ತಂ ತಜ್ಜನಶ್ರೀಪ್ರಿಯಂ ॥ ೭೧

ಆ ಪ್ರಸ್ತಾವದೊಳ್

ಮುಸುಕಿದುದು ದುಂದುಭಿಧ್ವನಿ ।
ದೆಸೆಯಂ ಮಾಂಗಲ್ಯಗೀತರುತಿ ತುಂಬಿದುದಾ ॥
ಗಸಮಂ ಶಂಖಧ್ವನಿ ಪೂ ।
ರಿಸಿದುದು ತಳ್ಪೊಯ್ದು ರೋದಸೀಮಂಡಳಮಂ ॥ ೭೨

ಅನಂತರಂ

ಪ್ರಿಯತರಲವಂಗಲವಲೀ ।
ದ್ವಯಕ್ಕಮೇಕೈಕಲಲಿತಶಾಖಾಯೋಗಂ ॥
ನಯದಿಂ *ಸಮನಿಪವೋಲಾ ।
ಪ್ರಿಯಂಗಮಾಪ್ರಿಯೆಗಮಾಯ್ತು ಪಾಣಿಗ್ರಹಣಂ ॥ ೭೩

ಹೊದಿಸಿದ ಸ್ಫಟಿಕದ ಹಸೆಮಣೆಯ ಮೇಲೆ ಕುಳ್ಳಿರಿಸಿ, ಈ ಮೊದಲೆ ಅಗ್ನಿಪೂಜೆ ಮಾಡಿ ಸಿದ್ಧನಾಗಿದ್ದ ಪುರೋಹಿತನು ಓಂಕಾರಪೂರ್ವಕವಾಗಿ ಹೇಳಿದ ಪುಣ್ಯಾಹವಚನ ದೊಂದಿಗೆ ೭೧. ಹೂತುಂಬಿದ ಮೊಲ್ಲೆಯ ಬಳ್ಳಿಗೂ, ಹೂತ ಕದಂಬ ವೃಕ್ಷದ ಶಾಖೆಗೂ ಮೋಡವು ಹಸನಾದ ನೀರನ್ನು ಕರೆಯುವಂತೆ, ಸಾತ್ವಿಕ ಸ್ವೇದ (ಬೆವರು) ಕ್ಕೂ ರೋಮಾಂಚಕ್ಕೂ ಗುರಿಯಾದ ತನ್ನ ಮಗಳಿಗೆ ಹಾಗು ಅಳಿಯನಿಗೆ ತುಂಬು ಪ್ರೇಮದಿಂದ ಆ ರಾಜನು ಮಿರುಗುವ ಚಿನ್ನದ ಕಲಶದಿಂದ ಧಾರೆಯೆರೆದನು. ಆ ಸಮಯದಲ್ಲಿ_ ೭೨. ದುಂದುಭಿಗಳ ನಾದ ದಿಕ್ಕುಗಳನ್ನೆಲ್ಲ ತುಂಬಿತು; ಮಂಗಲಗೀತೆಗಳ ಧ್ವನಿ ಆಕಾಶವನ್ನೆಲ್ಲ ತುಂಬಿ; ನಭೋಮಂಡಲವನ್ನು ಮುಟ್ಟುವಂತೆ ಶಂಖಧ್ವನಿ ಹೊಮ್ಮಿತು. ಆ ಬಳಿಕ_೭೩. ಲವಂಗ ಹಾಗು ಲವಲಿ ಎರಡಕ್ಕೂ ಒಂದೇ ಶಾಖೆಯಲ್ಲಿ ಆಶ್ರಯವಾದಂತೆ ಆ ಪ್ರಿಯನಿಗೂ

---

* ಸಮನಿಘೊಲಂತಾ, ಎಂದು ಪಾಠಾಂತರ.

ನಳಿನಿಯ ನಳಿನಮನಿನನಾ ।
ಕಳಿಪಂತಿರೆ ಕರದೆ ವಧುವ ಕರಮಂ ಕರದಿಂ ॥
ತಳೆದಂ ಕುಮಾರನಾದ್ರ್ರಾಂ
ಗುಳಿದಳಕಂಟಕಿತಬಾಹುನಾಳಾನ್ವಿತಮಂ ॥ ೭೪

॥ಮಾಲಿನಿ॥

ಮನವನೊಲಿಸೆ ತಿರ್ಯಗ್ವರ್ತಿತಸ್ಮೇರತಾರಂ ।
ಜನಪತಿಸುತನಾಗಳ್ ಕಾಂತೆಯಂ ನೋಡಿದಂ ಮೆ ॥
ಲ್ಲನೆ ಸಮದಸಲೀಲಾಪಾಂಗದಿಂ ನೋೞ್ಪವೋಲ್ ಹ ।
ಸ್ತಿನಿಯನಿನಿಯನಾರ್ದ್ರ ಪ್ರೇಮದಿಂ ಸಾಮಜೇಂದ್ರಂ ॥ ೭೫

ಮಸಪಳಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲ ।
ಜ್ಜಿಸಿ ತಲೆವಾಗಿ ಕಂಡು ಮಣಿಕುಟ್ಟಿಮದೊಳ್ ನೆರೆ ನೋಡಿ ಮತ್ತೆ ಮಾ ॥
ನಸದೊಳಗಿಟ್ಟೊಡಂ ನವಸುಖಾನುಭವಕ್ಕರೆಮುಚ್ಚಿ ಕಣ್ಗಳಂ ।
ಪಸರಿಪ ಹೋಮಧೂಮತತಿಗಂದು ಶಶಿಪ್ರಭೆ ದೂರನೇಱಿಪಳ್ ॥ ೭೬

ಅಂತು ಪರಸ್ಪರಲೀಲಾವಲೋಕನಸುಖಿಸನುಭವಿಸಿ ಬೞಿಯಂ ಪುರೋಹಿತಾದೇಶದಿಂ ಹೋಮಾಗ್ನಿಯಂ ಪ್ರದಕ್ಷಿಣಂಗೈದು ಲಾಜಾಂಜಲಿಯನಿಕ್ಕಿ ಬಂದೊಂದೆ ಪಸೆಯೊಳ್ ಕುಳ್ಳಿರ್ದನೇಕಾಶೀರ್ವಾದಪುರಸ್ಸರಮಾದ್ರ್ರಾಕ್ಷತಾರೋಪಣಮಂಗಳಮನಂಗೀಕರಿಸೆ

ಪ್ರಿಯೆಗೂ ಪಾಣಿಗ್ರಹಣವಾಯಿತು. ೭೪. ಕಮಲಿನಿಯ ಕಮಲ ಪುಷ್ಪವನ್ನು ಸೂರ್ಯನು ತನ್ನ ಕಿರಣಗಳಿಂದ ಆವರಿಸಿ ಹಿಡಿಯುವಂತೆ, ಬೆವರಿಂದ ತೊಯ್ದು ರೋಮಾಂಚವೆದ್ದ ವಧುವಿನ ಕೈಯನ್ನು ಕುಮಾರನು ತನ್ನ ಕೈಯಲ್ಲಿ ಹಿಡಿದುಕೊಂಡನು. ೭೫. ಹೆಣ್ಣಾನೆಯನ್ನು ಒಲಿಸಿಕೊಳ್ಳಲು ಗಜೇಂದ್ರವು ಮದಸಹಿತವಾಗಿ ಬೆಡಗಿನಿಂದ ಓರೆಯಾಗಿ ನೋಡುವಂತೆ, ತನ್ನ ನಸುನಗುವ ಮುಖವನ್ನು ಕೊಂಚ ಹೊರಳಿಸಿ ಕಡೆಗಣ್ಣಿಂದ ರಾಜಕುಮಾರನು ತನ್ನ ಕಾಂತೆಯನ್ನು ನೋಡಿದನು. ೭೬. ಮನದಲ್ಲಿ ಕೆರಳುತ್ತಿರುವ ಆಕಾಂಕ್ಷೆಯಿಂದ ತನ್ನ ಪ್ರಿಯಕರನ ಮುಖವನ್ನು ನೋಡಲು ಹೊರಟು, ತಾನೆ ನಾಚುಗೆಯಿಂದ ತಲೆ ಬಾಗಿ, ರತ್ನದ ನೆಲಗಟ್ಟಿನಲ್ಲಿ ಪ್ರತಿಬಿಂಬವನ್ನು ಕಂಡು, ಮನದುಂಬುವಂತೆ ಅದನ್ನೆ ನೋಡುತ್ತ ಮನಸ್ಸಿನಲ್ಲಿ ತುಂಬಿಟ್ಟುಕೊಂಡು ಈ ಹೊಸ ಸುಖದ ಅನುಭವಕ್ಕೆ ಕಣ್ಣುಗಳನ್ನು ಅರ್ಧ ಮುಚ್ಚಿಕೊಳ್ಳುತ್ತ, ಹೋಮದ ಹೊಗೆಯೆ ಅದಕ್ಕೆ ಕಾರಣವೆಂದು ದೂರುವಳು ವ॥ ಹೀಗೆ ಇಬ್ಬರೂ ಪರಸ್ಪರರನ್ನು ವಿಲಾಸದಿಂದ ನೋಡಿ ಸುಖಪಟ್ಟ ಬಳಿಕ, ಪುರೋಹಿತನ ಹೇಳಿಕೆಯ ಮೇರೆಗೆ ಹೋಮಾಗ್ನಿಯನ್ನು ಪ್ರದಕ್ಷಿಣೆ ಮಾಡಿ, ಹೋಮಾಗ್ನಿಯಲ್ಲಿ ಬತ್ತದರಳನ್ನು ಹಾಕಿ ಬಂದು, ಒಂದೇ ಹಸೆಯ ಮೇಲೆ ಕುಳಿತುಕೊಂಡು ಹಿರಿಯರು

ಆ ರಮಣೀರಮಣರ ಶೃಂ ।
ಗಾರರಸಾಪೂರ್ಣತರತರಂಗಿಣಿಯೊಳದೇಂ ॥
ಪಾರೈಸಿ ತೊಳಲ್ದುವೊ ರಸ ।
ಪೂರದ ಮೀಂಗಳನೆ ಪೋಲ್ತು ನೋಟ್ಟಿರ ಕಣ್ಗಳ್ ॥ ೭೭

ರತಿಯೊಡನಿಂದ್ರನೆಂತು ನೆರೆದಂ ಶಚಿಯೊಳ್ ಸ್ಮರನೆಂತು ನಾಡೆ ಸಂ ।
ಗತಿವಡೆದಂ ದಲೆಂದವಳ ರೂಪುಮನಾತನ ಲೀಲೆಯಂ ಮನ ॥
ಕ್ಕತಿಶಯಮಾಗೆ ಮತ್ತವಳ ಲೀಲೆಯನಾತನ ರೂಪುಮಂ ಜನ ।
ಪ್ರತತಿ ಮರಲ್ದು ನೋಡಿದುದು ನಿಂದು ವಿವಾಹಗೃಹೈಕದೇಶದೊಳ್ ॥ ೭೮

ಅಲ್ಲಿ ಕೆಲಂಬರ್

ಇಂದು ಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂ ।
ಗಿಂದೊಳಸೋರ್ದುದೇಸುವೆಸನಿಂದು ಸನಾಭಿಜನಕ್ಕೊಡರ್ಚಿತಾ ।
ನಂದಪರಂಪರಾಜನನಮಿಂದು ಫಲಂ ಪೊಸಜವ್ವನಕ್ಕಮಾ ।
ಯ್ತಿಂದು ಸುರೂಪವೃತ್ತಿ ದೊರೆವೆತ್ತುದು ನಾಡೆಯುಮೆಂದು ನೋಡಿದರ್ ॥ ೭೯

ಅನ್ನೆಗಂ ಜಯಶ್ರೀಮಹಾದೇವಿಯಂತಃಪುರಕಾಂತಾಜನಕ್ಕಂ ಪ್ರಧಾನ ವಧೂಜನಕ್ಕಂ ಸಾಮಂತಸೀಮಂತಿನೀನಿವಹಕ್ಕಂ ಪುರಪುರಂಧ್ರೀಸಮೂಹಕ್ಕಂ ವಾರನಾರೀಪ್ರತಾನಕ್ಕಂತಾನುಂ ಪರಿಚಾರಿಕಾಜನಮುಂ ಕೈಗೈಯೊಳ್

ಹರಕೆಗಳೊಡನೆ ಹಾಕುವ ಶೇಷಾಕ್ಷತೆಗಳನ್ನು ಸ್ವೀಕರಿಸಿದರು. ೭೭. ಆ ಗಂಡಹೆಂಡಿರಿಬ್ಬರ ಶೃಂಗಾರ ರಸದಿಂದ ತುಂಬಿ ಸೂಸಿ ಹರಿಯುವ ನದಿಯಲ್ಲಿ, ನೋಡುವವರ ಕಣ್ಣುಗಳು ಮೀನುಗಳಂತೆ ಉತ್ಸಾಹದಿಂದ ಹರಿದಾಡಿದುವು. ೭೮. "ರತಿಯನ್ನು ಇಂದ್ರನು ಹೇಗೆ ಮದುವೆಯಾದನು? ಮತ್ತು ಶಚಿಯೊಡನೆ ಕಾಮನಿಗೆ ಅದು ಹೇಗೆ ಮದುವೆಯಾಯಿತು? ಎಂದು ಮದುವೆಯ ಮಂಟಪದಲ್ಲಿ ನೆರೆದಿದ್ದ ಜನವೆಲ್ಲ ಮರುಳುಗೊಂಡು ಆಕೆಯ ರೂಪ ಹಾಗು ಆತನ ವಿಲಾಸವನ್ನೂ, ಮತ್ತು ಮನಸ್ಸಿಗೆ ಅತಿಶಯವಾಗಿ ತೋರುವ ಆಕೆಯ ವಿಲಾಸ ಹಾಗು ಆತನ ರೂಪವನ್ನೂ ನಿಂತು ನೋಡುತ್ತಿತ್ತು. ಅಲ್ಲಿ ಕೆಲವರು– ೭೯. ಬ್ರಹ್ಮನಿಗೆ ಇಂದು ಸಾರ್ಥಕತೆಯುಂಟಾಯಿತು; ಮನ್ಮಥನಿಗೆ ಇಂದು ಬಾಣಪ್ರಯೋಗ ವಿದ್ಯೆ ಹಸ್ತಗತವಾಯಿತು; ಬಂಧುಗಳಿಗೆಲ್ಲ ಇಂದು ಸುಖ ಸಾಲಿಟ್ಟಿತು; ನವಯೌವನಕ್ಕೆ ಇಂದು ಫಲದೊರೆಯಿತು; ಸುಂದರವಾದ ರೂಪಕ್ಕೆ ಅನುರೂಪವಾದುದೆ ಇಂದು ಲಭಿಸಿತು– ಎಂದು (ಮೆಚ್ಚಿ) ನೋಡಿದರು. ವ॥ ಅಷ್ಟರಲ್ಲಿ ಜಯಶ್ರೀ ಮಹಾದೇವಿಯ ರಾಣಿವಾಸದ ಸ್ತ್ರೀಯರಿಗೂ, ಪ್ರಧಾನರ ಪತ್ನಿಯರಿಗೂ,

ವಿದಳಿತಪುಷ್ಪಮಾಲಿಕೆಗಳಿಂ ಮಳಯೋದ್ಭವದಿಂತೊಳಪ್ಪ ರ ।
ನ್ನದ ತೊಡವಿಂದಳಂಕರಿಸಿ ಕಾಂಚನಭಾಜನದಿಂದೆ ಪಂಚರ ॥
ತ್ನದ ಘನಸಾರವಾರಿಯ ಮೃಗೋತ್ಥಕುಳುತ್ಥದ ಬಾಯಿನಂಗಳಂ ॥
ಮುದದೊದವಿಂದಮಿತ್ತು ಮೆಱೆದರ್ ನೆಲೆವೆರ್ಚಿದುದಾತ್ತವೃತ್ತಿಯಂ ॥ ೮೦

ಹೃದಯದೊಳೆನ್ನವರ್ ಪೆಱರಿವರ್ ಧನಿಕರ್ ಬಡವರ್ ಸಮಂತು ಬೇ ।
ಡದವರಡುರ್ತು ಬೇಡಿದವರೆನ್ನದೆ ರನ್ನದ ಪೊನ್ನ ಚಿತ್ರವ ॥
ಸ್ತ್ರದ ಪೊಸಪಚ್ಚದೊಟ್ಟಲನೆ ಕೋಶಗೃಹಂ ಬಱಿದಾಗೆ ಕೊಟ್ಟು ಮಾ ।
ಣದೆ ಮಗುಳಾನೆಯಂ ಕುದುರೆಯಂ ಧರಣೀಪತಿ ಸಾಱಿ ಬೀಱಿದಂ ॥ ೮೧

ಆ ವಿವಾಹಕಲ್ಯಾಣಾನಂತರಂ

ಎಡೆಗುಡೆ ಸಾರ್ದು ಕೇಳಲೆಳಸುತ್ತಿರೆ ಮಾತಱಿದಾಡಿ ಕೇಳಿಯೊಳ್ ।
ತೊಡರ್ದಿರೆ ಸೋಂಕಿ ಮೆಯ್ಯನಿನಿತೊಪ್ಪಿಸೆ ಪಾಂಗಱಿದಪ್ಪಿ ತಾಂ ಮೊಗಂ ॥
ಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ವೆಣಸಂ ಪೊದಟ್ಟಿ ನಾ ।
ಣ್ಗಿಡೆ ನೆರೆದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ ॥ ೮೨

ಮಸಪ ನಸುಲಜ್ಜೆಯಂ ಮಾ ।
ಣಿಸಿದುದು ಬಾಯ್ಗೂಟದಿಂಪು ಮಣಿತಮುಮಂ ಮ ॥

ಸಾಮಂತರ ಸಹಧರ್ಮಿಣಿಯರಿಗೂ, ಊರಿನ ಮುತ್ತೈದೆಯರಿಗೂ, ವಾರಸ್ತ್ರೀಯರಿಗೂ ಸ್ವತಃ ತಾನೂ ಹಾಗು ಪರಿಚಾರಿಕೆಯರೂ ಕೈಯಾರೆ– ೮೦. ಅರಳಿದ ಹೂಗಳಿಂದಲೂ ಶ್ರೀಗಂಧದಿಂದಲೂ, ಉಜ್ವಲವಾದ ರತ್ನಾಭರಣಗಳಿಂದಲೂ ಅಲಂಕರಿಸಿ ಚಿನ್ನದ ಪಾತ್ರೆಗಳಲ್ಲಿ ಪಂಚರತ್ನಗಳನ್ನೂ, ಕರ್ಪೂರವನ್ನೂ, ಕಣ್ಣುಕಾಡಿಗೆಯನ್ನೂ ಒಳಗೊಂಡ ಬಾಗಿನಗಳನ್ನು ಉತ್ಸಾಹದಿಂದ ಕೊಟ್ಟು ಕೊಟ್ಟು ತಮ್ಮ ಔದಾರ್ಯವನ್ನು ಪ್ರಕಟಿಸಿದರು. ೮೧. ಇವರು ನಮ್ಮವರು, ಇವರು ಹೆರವರು, ಇವರು ಬಡವರು, ಇವರು ಶ್ರೀಮಂತರು, ಇವರು ಬೇಡುವವರು, ಇವರು ಬೇಡದವರು ಎಂದು ಭೇದಭಾವ ಮಾಡದೆ ಎಲ್ಲರಿಗೂ ರತ್ನದ, ಚಿನ್ನದ, ಬಗೆಬಗೆಯ ವಸ್ತ್ರದ ಹೊಸ ಹೊಸ ಭೂಷಣವನ್ನು ರಾಶಿರಾಶಿಯಾಗಿ, ಭಂಡಾರವೇ ಬರಿದಾಗುವಂತೆ ಕೊಟ್ಟು, ಅಷ್ಟಕ್ಕೆ ನಿಲ್ಲದೆ, ಮತ್ತೆ ಆನೆಗಳನ್ನೂ ಕುದುರೆಗಳನ್ನೂ ರಾಜನು ಸಾರಿ ಕರೆಕರೆದು ದಾನಮಾಡಿದನು. ವ॥ ಹೀಗೆ ಆ ಮದುವೆಯ ಉತ್ಸವ ಮುಗಿದ ಬಳಿಕ ೮೨. ಅವಳು ಅವಕಾಶ ಕೊಟ್ಟಾಗ ಹತ್ತಿರ ಬಂದು ಕೇಳಲು ಬಯಸಿದಾಗ ಅರಿತು ಮಾತಾಡಿ ರತಿಯಲ್ಲಿ ಇಚ್ಛೆಯರಿತು ಸೋಕಿ, ಮೈಯೊಪ್ಪಿಸಿದಾಗ ಹದವರಿತು ಅಪ್ಪಿಕೊಂಡು ಮೊಗ ನೀಡಿದಾಗ ಇಂಬರಿತು

ಟ್ಟಿಸಿದುದು ಮೆಯ್ಸೋಂಕಿನ ಹರ।
ವಸವಜೆವುಮನರರೆ ! ತೂಳ್ದಿದುದು ಪೊಸಸುಸಿಲೊಳ್ ॥ ೮೩

ಚುಂಬನಮೊರ್ಮೆಗೊರ್ಮೆ ತನಿವೆರ್ಚುವುದಪ್ಪಿರದೊರ್ಮೆಗೊರ್ಮೆಮ।
ತ್ತಂ ಬಿಗುಪೇಱುತಿರ್ಪುದು ವಿಳಾಸದ ಗೆಯ್ತಮದೊರ್ಮೆಗೊರ್ಮೆಗಿಂ॥
ಪಿಂ ಬಗೆಯಂ ಮರುಳ್ಚುವುದು ನುಣ್ನುಡಿಯುಂ ಕಿವಿಗೊರ್ಮೆಗೊರ್ಮೆ ಸೋ।
ಲಂಬಡೆಯುತ್ತುಮಿರ್ಪುದವರ್ಗಳ್ಗವಕಾಶಮದುಂಟೆ ಬೇಟದೊಳ್ ॥ ೮೪

ಅನವರತಂ ರತೋತ್ಸವದೊಳುಣ್ಮುವ ಘರ್ಮಜಲಂಗಳಿಂದೆ ಮ।
ಜ್ಜನಮನತಿಪ್ರಿಯಾಧರಸುಧಾರಸಸೇವನೆಯಿಂದಮೂಟಮಂ॥
ಮನದಜೆವಂ ಕಳಲ್ಚುವ ರತಾಂತಸುಖೋದಯದಿಂದೆ ನಿದ್ರೆಯಂ।
ನೆನೆಯದೆ ಪೋದುವಂತವರ್ಗೆ ಚಿತ್ತಜಕೇಳಿಗಳಿಂದೆ ಪೊಳ್ತುಗಳ್ ॥ ೮೫

ಅಂತು ಕತಿಪಯದಿನಂಗಳಂ ಪ್ರತಿದಿನಪ್ರವರ್ಧಮಾನನವಪ್ರಣಯಪ್ರಸ್ತುತವಿನೋದಂಗಳಿಂ ಕಳಿಪಿ ಬಟಿಯಂ ಜನನೀಜನಕದರ್ಶನೋತ್ಕಂಠತೆಯಿಂ ನಿಜಪುರಗಮನಾಭಿಮುಖನಾದ ಕುಮಾರನಭಿಪ್ರಾಯಮನಜೆದು ಜಯವರ್ಮಮಂಡಲೇಶ್ವರಂ ನಿಜತನೂಜೆಯೊಡವೋಪಂತು ಚಾಮರದ ಕುಂಚದಡಪದ ಡವಕೆಯ ಕನ್ನಡಿಯ ಪಡಿಗದ ಪಾಪುಗೆಯ ಸೆಜ್ಜೆಯ ಮಜ್ಜನದ ಖಜ್ಜಯದ ಹೀಲಿಕರಗದ ಬೋನದ ಪರಿಯಣದ ಮುಡಿಯಿಕ್ಕುವಡಿಯೂಡುವಡಿಗುಟ್ಟುವಾರತಿಯೆತ್ತುವ ತಿಳಕವಿಡುವ ನಿಱಿವಿಡಿವ

ಚುಂಬಿಸಿ ಭಯಗೊಳ್ಳಲು ರಭಸವನ್ನು ಬಿಟ್ಟು, ನಾಚಿಗೆಕಳೆಯಲಾಗಿ ಬೆರೆತು ಹೀಗೆ ಮೊದಲ ಕೂಟದಲ್ಲಿಯೆ ಕುಮಾರನು ಅವಳನ್ನು ಮರಳುಗೊಳಿಸಿದನು. ೮೩. ನಸುನಾಚಿಗೆಯನ್ನು ಬಾಯ್ಗೂಟದ ಸವಿ ಮರೆಸಿಬಿಟ್ಟಿತು, ಮೈಸೋಂಕಿನ ಪರವಶತೆ ಸೀತ್ಕಾರವನ್ನೂ, ಎಚ್ಚರವನ್ನೂ ತೊಲಗಿಸಿಬಿಟ್ಟಿತು ೮೪. ಚುಂಬನದ ಸವಿ ಸಲಸಲಕ್ಕೆ ಅಧಿಕವಾಗುವುದು; ಅಪ್ಪುಗೆ ಬಾರಿಬಾರಿಗೆ ಬಿಗಿಯಾಗುವುದು; ವಿಲಾಸದ ಚೇಷ್ಟೆ ಪ್ರತಿಸಲಕ್ಕೂ ಮಧುರತರವಾಗಿ ಮನಸ್ಸನ್ನು ಮೋಹಿಸುವುದು; ನಯವಾದ ನುಡಿ ಕಿವಿಗೆ ತಾಕಿ ತಾಕಿದಂತೆಲ್ಲ ಮನವನ್ನು ಸೋಲಿಸುತ್ತಿರುವುದು. ಹೀಗಾಗಿ ಆ ದಂಪತಿಗಳಿಗೆ ಪ್ರಣಯದಲ್ಲಿ ಬಿಡುವುಂಟೆ? ೮೫. ಸತತವಾದ ಸುರತೋತ್ಸವದಲ್ಲಿ ಹೊಮ್ಮುವ ಬೆವರಿಂದಲೆ ಸ್ನಾನ ಮಾಡುತ್ತ ಪರಸ್ಪರರ ತುಟಿಯಲ್ಲಿರುವ ಅಮೃತಸೇವನೆಯಿಂದಲೆ ಊಟ ಮಾಡುತ್ತ, ಜನದ ಎಚ್ಚರ ತಪ್ಪಿಸುವ ಸಂಭೋಗಾ ನಂತರದ ಸುಖದಿಂದಲೆ ನಿದ್ದೆಮಾಡುತ್ತ ಅವರಿಗೆ ಅರಿವಿಲ್ಲದೆಯೆ ಕಾಮಕ್ರೀಡೆಗಳಲ್ಲಿ ದಿನಗಳು ಕಳೆದುವು. ವ॥ ಹೀಗೆ ಕೆಲವು ದಿನಗಳನ್ನು ಪ್ರತಿದಿನವೂ ಬಲಿಯುತ್ತಿರುವ ನವಪ್ರಣಯದ ವಿನೋದಗಳಿಂದ ಕಳೆದ ಬಳಿಕ ಕುಮಾರನು ತನ್ನ ತಾಯ್ತಂದೆಗಳನ್ನು ಕಾಣುವುದಕ್ಕೆ ಉತ್ಕಂಠನಾಗಿ ತನ್ನ ಪಟ್ಟಣಕ್ಕೆ ಮರಳುವ ಅಭಿಪ್ರಾಯವನ್ನು ತಿಳಿಸಲಾಗಿ ಜಯವರ್ಮರಾಜನು, ತನ್ನ ಮಗಳೊಡನೆ ಬಳವಳಿಯಾಗಿ

ಮಾಲೆಸಮೆವ ಘಟ್ಟಿಮಗುಳ್ಚುವ ನೆಲನನುಗ್ಘಡಿಪ ಪಲವುಂ ನಿಯೋಗದನ್ವಯಾಗತೆಯರುಮಪ್ಪ ಆಕಾರವತಿಯರಂ, ವಿಳಾಸಿನಿಜನಂಗಳುಮನನುಜತನುಜ ಪ್ರೀತಿಯಿಂ ನಡೆಪಿದ ಕೇಳೀಕೀರಶಾರಿಕಾ ಪಾರಾವತಮಯೂರಹಾರೀತಕಚಕೋರಹಂಸಹರಿಣಕರಿಕಳಭಸಂದೋಹಮುಮಂ, ವಿನೋದಪಾತ್ರಂ ಗಳುಮಪ್ಪ ಬರ್ಬರಶಾಕಬಧಿರವರ್ಷಧರಮೂಕಕಿರಾತಜಡುಲಗಡುಲ ಖಂಜರಂಜಕಸಮಾಜಮುಮಂ, ವೈಣಿಕಪಾಣಿವಿಕವಾಂಶಿಕಮಾರ್ದಂಗಿಕಗಾಯಕನರ್ತಕಾದಿ ಕುತಪಪ್ರತತಿಯುಮಂ, ಶಿಬಿಕಾಂದೋಳವಾಜಿ ವಾರಣವರೂಥವಿಸರಾದಿನಾನಾಯಾನಂಗಳುಮಂ, ಅನುಕುಪ್ಯರೂಪ್ಯಕನಕಾಂಬರರತ್ನಾಭರಣಭಾರ ಧಾರಣಧೌರೇಯಮಹಾಕಾಯವೈವಧಿಕನಿಕರಮುಮಂ, ಸಮಕಟ್ಟಿ ವಿಶಿಷ್ಟ ವಾರವಾಸರತಾರಾಕರಣಯೋಗ ಸಂಯೋಗದೊಳ್ ಮಗಳುಮನಳಿಯನುಮಂ ಬರಿಸಿ ಕುಳ್ಳಿರಿಸಿ

> ನಿನ್ನಯ ಕೂಟಮಂ ಬಯಸಿ ಪೆತ್ತವಳೆಂತುಮೊಡಂಬಡಂ ದಿಟಂ ।
> ನಿನ್ನ ಮನಕ್ಕೆ ಮಾಡಳದು ದೈವಕೃತಂ ದೊರೆಕೊಂಡುದಪ್ಪೊಡಂ ॥
> ಮನ್ನಿಪುದೆಮ್ಮ ಕಾರಣದಿನಿತ್ತಣ ಪಂಬಲನೀಕೆ ಮಾಡದಂ ।
> ತಿನ್ನಡೆಯಿಪ್ಪುದೊಂದೆ ತೆಱನಪ್ಪುದಿದಂ ಸೆಱಗೊಡ್ಡಿ ಬೇಡಿದೆಂ ॥ ೮೬

ಎಂದು ಕುಮಾರಂಗೆ ಪೇೞ್ದು ತಾನುಂ ಜಯಶ್ರೀಮಹಾದೇವಿಯುಂ ಶಶಿಪ್ರಭೆಯ ಮೊಗಮಂ ಪ್ರೇಮರಸವಿಸರವಿಲುಳಿತ ಲೋಚನಂಗಳಿಂ ನೋಡಿ

ಹೋಗುವಂತೆ– ಚಾಮರದ, ಕುಂಚದ, ಹಡಪದ, ಪೀಕದಾನಿಯ, ಕನ್ನಡಿಯ, ಪಡಿಗದ ಹಾವುಗೆಯ, ಹಾಸುಗೆಹಾಸುವ, ಸ್ನಾನ ಮಾಡಿಸುವ, ಕರಗವನ್ನು ಹಿಡಿಯುವ, ಊಟಕ್ಕೆ ಬಡಿಸುವ, ಪರಿಯಾಣದ ಸೇವೆಯ, ತಲೆ ಬಾಚಿ ಅಲಂಕರಿಸುವ, ಅಂಗಾಲಿಗೆ ಅಲತಿಗೆಯಾಡುವ, ಕಾಲೊತ್ತುವ, ಆರತಿಯೆತ್ತುವ, ತಿಲಕವಿಡುವ, ನಿರಿಹಿಡಿದು ಉಡಿಸುವ, ಮಾಲೆಗಟ್ಟುವ, ಗಂಧ ಅರೆಯುವ, ಪರಾಕು ಹೇಳುವ, – ಹೀಗೆ ಹಲವಾರು ಸೇವಾಕಾರ್ಯಗಳಿಗೆ ವಂಶಾನುಗತರು, ರೂಪವತಿಯರೂ ಆದ ಸೇವಕಿಯರನ್ನೂ ವಿಳಾಸಿನಿಯರನ್ನೂ, ತಮ್ಮಂದಿರಂತೆ ಹಾಗು ಮಕ್ಕಳಂತೆ ಅಕ್ಕರೆಯಿಂದ ಸಾಕಿದ ಗಿಳಿ, ಸಾರಿಕೆ, ಪಾರಿವಾಳ, ನವಿಲು, ಹಾರೀತ, ಚಕೋರ, ಹಂಸ, ಜಿಂಕೆ, ಮರಿಯಾನೆಗಳ ಸಮುದಾಯವನ್ನೂ, ವಿನೋದವನ್ನು ಉಂಟುಮಾಡುವುದಕ್ಕಾಗಿ ಇಟ್ಟುಕೊಂಡ ಬರ್ಬರ (ಕಾಡು ಕೊರಮ, ದಡ್ಡ), ಶಾಕ, ಕಿವುಡ, ನಪುಂಸಕ, ಮೂಕ, ಕಿರಾತ, ಜಡುಲ (ಮೈತುಂಬ ಮಚ್ಚೆಯ ಕಲೆಗಳುಳ್ಳವನು), ಗೂನ, ಕುಂಟ ಮೊದಲಾದವರ ಸಮೂಹವನ್ನೂ, ವೀಣೆ, ಪಣವ, ಕೊಳಲು, ಮದ್ದಳೆ ಮೊದಲಾದ ವಾದ್ಯ ವಾದಕರನ್ನೂ ಗಾಯಕ, ನರ್ತಕರೆ ಮೊದಲಾಗಿ ಕಲಾವಿದರನ್ನೂ, ಸಿವಿಗೆ, ಪಲ್ಲಕ್ಕಿ, ಕುದುರೆ, ಆನೆ, ರಥ ಮುಂತಾದ ಬಗೆಬಗೆಯ ವಾಹನಗಳನ್ನೂ, ಬೆಳ್ಳಿ, ಬಂಗಾರ, ರತ್ನಗಳ ಆಭರಣಗಳ ಪೆಟ್ಟಿಗೆಗಳನ್ನು, ಅವುಗಳನ್ನು ಹೊತ್ತೊಯ್ಯುವ ಎತ್ತುಗಳನ್ನೂ ಭಾರಹೊರುವ

ಅಕ್ಕ ನಿಜಪ್ರಿಯಂಗೆ ಮನದನ್ನದೆ ನೀಂ ಬೆಸಕೆಯ್ವುದಾಗಳುಂ।
ಮಕ್ಕಳಮಾಟಕ್ಕಿಯಿಂದಿರದೆ ನೀನೊಡವಂದ ಜನಕ್ಕೆ ಸಂತಸಂ ॥
ಮೊಕ್ಕಳಮಾಗೆ ಮನ್ನಿಪುದು ಮಾವನ ಪೆರ್ಮೆಗಮತ್ತೆಯೊಲ್ಮೆಗಂ।
ತಕ್ಕ ನೆಗೆಟ್ತಿಯಂ ನೆಗೆಟ್ವುದೀವುದು ಪೆತ್ತ ಮಗು ಪ್ರಮೋದಮಂ ॥ ೮೭

ಎಂದು ಬುದ್ಧಿವೇಳ್ದು ಶೇಷಾಕ್ಷತಮನಿಕ್ಕಿ ಮಂಗಳಮೃದಂಗರವಮೆಸೆಯೆ ಪುರಮಂಪೊಱಮಟ್ಟು ಕಿಱಿದಂತರಮಂ ಕಳುಪಿ ಮಗುಳ್ದು ವಿಪುಳಪುರಮಂ ಪೊಕ್ಕರ್. ಇತ್ತ ಯುವರಾಜನುಂ ನದ್ಯುಭಯ ತಟೋದ್ಯಾನಂಗಳೊಳಂ, ಮಹಾಸರೋವರತೀರನಂದನಂಗಳೊಳಂ, ಪರ್ವತನಿತಂಬಪಾವನವನಂಗಳೊಳಂ, ಬಳ್ಳಿಮಾವುಗಳೆ ಬಳ್ಳಿಮಾಡಂಗಳಾಗೆಯುಂ, ಶ್ರೀಖಂಡಷಂಡಂಗಳೆಪರಿಪನ್ಮಂಡಪಂಗಳಾಗೆಯುಂ ತಮಾಲ ಮಾಲೆಗಳೆ ಸಂಗೀತಶಾಲೆಗಳಾಗೆಯುಂ, ಲತಾವಿತಾನಂಗಳೆ ವಿತಾನಂಗಳಾಗೆಯುಂ, ಅಧಿಮುರ್ಕ್ತೆಯ ಸುತ್ತುಗಳೆ ತೆರೆಸುತ್ತುಗಳಾಗೆಯುಂ, ಎಸಳ ಪಸರಂಗಳೆ ಮಸುರಿಗೆಗಳಾಗೆಯುಂ, ಕೆಂದಳಿರ ಗೊಂದಳಂಗಳೆ ಬೊಂದರಿಗೆಗಳಾಗೆಯುಂ, ಚಂಪಕವೀಧಿಗಳೆ ವಿನೋದವಿಹರಣವೀಧಿಗಳಾಗೆಯುಂ, ಬೀಡುಬಿಡುತ್ತುಂ ಕೆಲವಾನುಂ ದಿವಸದಿಂದನ್ವಯಾಗತರಾಜಧಾನಿಯಂ ಕೌಶಲೆಯನೆಯ್ದಿ ಕ್ರೋಶದ್ವಯಮಾತ್ರದೊಳ್ ನಿಂದು ನಿಜಾಗಮನವಾರ್ತೆಯಂ ಜನಕನಲ್ಲಿಗೆ ವಾರ್ತಾಚರರ ಕೈಯೊಳಟ್ಟುವುದುಮವರ್ ಬಂದು ಓಲಗದೊಳಿರ್ದನರನಾಥಂಗಱಿಪಲೊಡಂ.

ದಡಿಗರ ಸಮೂಹವನ್ನೂ_ಕೂಡಿ ಕೊಟ್ಟು ಪ್ರಶಸ್ತವಾದ ವಾರ-ದಿನ-ನಕ್ಷತ್ರ-ಕರಣ-ಯೋಗಗಳು ಸಂಯೋಗವಾದ ಮುಹೂರ್ತದಲ್ಲಿ ಮಗಳನ್ನೂ ಅಳಿಯನನ್ನೂ ಕರೆದು ಕುಳ್ಳಿರಿಸಿ_ ೮೬. "ನಿನ್ನ ಸಹವಾಸವನ್ನೇ ಬಯಸಿ ಒಲಿದು ಮದುವೆಯಾದವಳಾದುದರಿಂದ ಇವಳು ನಿನ್ನ ಮನಕ್ಕೆ ಅಸಂತೋಷವಾಗುವಂತೆ ಎಂದೂ ನಡೆದುಕೊಳ್ಳಲಾರಳು. ದೈವವಶವಾಗಿ ಅವಳಿಂದ ನಿನಗೆ ಏನಾದರೂ ಅಸಮಾಧಾನವುಂಟಾಗುವಂತೆ ಆದರೆ ನಮ್ಮನ್ನು ನೆನೆದು ಆಕೆಯನ್ನು ಕ್ಷಮಿಸು. ತವರಿನ ಹಂಬಲಾಗದಂತೆ ಇವಳನ್ನು ನಡೆಯಿಸಿಕೊ. ಇದಕ್ಕಾಗಿ ನಿನ್ನನ್ನು ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ" ವ॥ ಎಂದು ಕುಮಾರನಿಗೆ ಹೇಳಿ, ತಾನೂ, ಜಯಶ್ರೀ ಮಹಾದೇವಿಯೂ ಶಶಿಪ್ರಭೆಯ ಮುಖವನ್ನು ಪ್ರೇಮರಸದಿಂದ ತುಳುಕುವ ಕಣ್ಣುಗಳಿಂದ ನೋಡಿ_ ೮೭. "ಅಕ್ಕ, ನಿನ್ನ ಗಂಡನಿಗೆ ಮನಃಪೂರ್ವಕವಾಗಿ ನೀನು ಆಜ್ಞಾನುವರ್ತಿಯಾಗಿ ಸೇವೆ ಮಾಡುತ್ತಿರು. ನಿನ್ನ ಜೊತೆಗೆ ಬಂದ ಜನವನ್ನು ಮಕ್ಕಳಂತೆ ಜೋಪಾನವಾಡಿ ಅವರನ್ನು ಸಂತೋಷದಿಂದ, ಇರಿಸು, ಮಾವನ ಹೆಮ್ಮೆಗೂ ಅತ್ತೆಯ ಪ್ರೀತಿಗೂ ತಕ್ಕವಳಾಗಿ ವರ್ತಿಸಿ, ಹೆತ್ತವರಾದ ನಮಗೂ ಸಂತೋಷವನ್ನು ಕೊಡುತ್ತಿರು." ವ॥ ಎಂದು ಬುದ್ಧಿ ಹೇಳಿ ಸೇಸೆಯಿಟ್ಟು, ಮಂಗಳಕರವಾದ ಮದ್ದಳೆಯ ನಾದದೊಡನೆ ಪಟ್ಟಣದಿಂದ ಹೊರಟು ಕೆಲವು ಅಂತರದವರೆಗೆ ಕಳುಹಿಸಿ ಬಂದು ಮರಳಿ ವಿಪುಳಪುರವನ್ನು ಪ್ರವೇಶಮಾಡಿದರು. ಇತ್ತ ಯುವ ರಾಜನು ನದಿಗಳ ದಂಡೆಗಳಲ್ಲಿಯೂ, ಮಹಾ ಸರೋವರತೀರದ

ಕಡವಲರ್ದಂತೆ ಕಂಟಕಿತಮಾಗಿರೆ ಮೆಯ್ ಸರುಜಂ ರಸಾಯನಂ।
ಬಡೆದವೊಲಾಗೆ ತಾಂ ಪೊದೆದ ಮೇಲುದಱಿಂ ಗುಡಿಯಂ ತೊಡರ್ಚಿ ದಾಂ॥
ಗುಡಿವಿಡೆ ಹರ್ಷಮೊಂದು ಪೊಱಿಯೇಱಿದನಿತ್ತಜಿತಂಜಯಂ ಮನ।
ಕ್ಕೊಡರಿಸದಾರ್ಗೆ ರಾಗದೊದವಂ ಪಿರಿದುಂ ಪ್ರಿಯಬಂಧುಸಂಗಮಂ ॥ ೮೮

ಆಗಳಾವಾರ್ತೆಯನಜಿತಸೇನಮಹಾದೇವಿ ಕೇಳ್ದು ಘನನಿನದಮಂ ಕೇಳ್ದ ಮಯೂರವನಿತೆಯಂತೆ ಮನಃಪ್ರಮೋದಮನೊಳಕೆಯ್ದು ಅರಸನಲ್ಲಿಗೆವಂದು ಚರರ್ಗಂಗಚಿತ್ತಮನಿತ್ತು ಪುರದೊಳೊಸಗೆಯಂ ಮಾಡಲ್ವೇೞ್ದು,

ದೆಸೆಯಂ ವಾರ್ಧಿತರಂಗಮಾಲೆ ನೆಲನಂ ನೀಲಾಚಲಾನೀಕಮಾ।
ಗಸಮಂ ಶಾರದನೀರದಪ್ರತತಿ ತಿಂಬಿತ್ತೆಂಬಿನಂ ಜಾತಿವಾ ॥

ಉದ್ಯಾನಗಳಲ್ಲಿಯೂ, ಬೆಟ್ಟದ ತಪ್ಪಲಲ್ಲಿರುವ ಪವಿತ್ರವಾದ ವನಗಳಲ್ಲಿಯೂ ವಿಶ್ರಮಿಸುತ್ತ ಪ್ರಯಾಣಮಾಡಿದನು. ಬಳ್ಳಿ ಮಾವುಗಳೆ ಲತಾಮಂಡಪಗಳಾದುವು; ಗಂಧವೃಕ್ಷಗಳ ಸಮುದಾಯವೆ ಒಡ್ಡೋಲಗದ ಮಂಡಲವಾದುವು; ಹೊಂಗೆಮರದ ತೋಪುಗಳೆ ಸಂಗೀತ ಶಾಲೆಗಳಾದುವು; ಮೇಲೇರಿ ಹೆಣೆದುಕೊಂಡ ಬಳ್ಳಿಗಳ ವಿಸ್ತಾರವೆ ವಿತಾನವಾಯಿತು; ಮಾಧವೀಲತೆಯ ಸುತ್ತುಗಳೆ ಕಾಂಡ ಪಟಗಳಾದುವು; ಎಸಳುಗಳ ಹರಹೆ ಸೊಳ್ಳೆಪರದೆಗಳಾದುವು; ಕೆಂಪಾದ ಚಿಗುರುಗೊಂಚಲುಗಳೆ "ಬೊಂದರಿಗೆ" (?) ಗಳಾದುವು; ಸಂಪಿಗೆ ಮರಗಳ ನಡುವಣ ಎಡೆಗಳೆ ವಿನೋದವಿಹಾರದ ಬೀದಿಗಳಾದುವು. ಹೀಗೆ ಸಂತೋಷದಿಂದ ಅಲ್ಲಲ್ಲಿ ಬೀಡು ಬಿಟ್ಟು ಸಂತೋಷಪಡುತ್ತ ಕುಮಾರನು ಕೆಲವು ದಿನಗಳಲ್ಲಿ ತನ್ನ ಹಿರಿಯರ ರಾಜಧಾನಿಯಾದ ಕೌಶಲೆಯನ್ನು ಸಮೀಪಿಸಿ ಅದಕ್ಕೆ ಇನ್ನೆರಡು ಕ್ರೋಶಗಳಷ್ಟು ಹಾದಿಯಿದೆಯೆನ್ನುವಾಗ ತನ್ನ ಆಗಮನದ ಸಮಾಚಾರವನ್ನು ತಿಳಿಸಲು ತಂದೆಯ ಬಳಿಗೆ ಸಂದೇಶವಾಹಕರಾದ ದೂತರನ್ನು ಕಳುಹಿದನು. ಆ ದೂತರು ಓಲಗದೊಳಗಿದ್ದ ಅರಸನಿಗೆ ತಿಳಿಸಲಾಗಿ_ ೮೮. ಹೂ ಬಿಟ್ಟ ಕದಂಬ ವೃಕ್ಷದಂತೆ ರೋಮಾಂಚನದಿಂದ ಮೈ ಮುಳ್ಳಿಡಿದು, (ಪಥ್ಯಮಾಡಿ ಬೇಸತ್ತ) ರೋಗಿ ರಸಾಯನವನ್ನು ಪಡೆದು ಹಿಗ್ಗುವಂತೆ, ಹಿಗ್ಗಿ, ತಾನು ಹೊದೆದು ಕೊಂಡ ಉತ್ತರೀಯದಿಂದಲೆ ಗುಡಿಗಟ್ಟಿ, ಸಂತೋಷ ಹಿಡಿಸಲಾರದೆ ಹೊಮ್ಮಲಾಗಿ ಅಜಿತಂಜಯನು ಮೈಯುಬ್ಬಿದನು. ಪ್ರಿಯಜನರ ಸಮಾಗಮದಿಂದ ಯಾರಿಗೆ ಅನುರಾಗವುಕ್ಕಿ ಮಹೋತ್ಸವವಾಗದು? ವ॥ ಆಗ ಆ ಸುದ್ದಿಯನ್ನು ಕೇಳಿ ಅಜಿತ ಸೇನ ಮಹಾದೇವಿಯು ಮೋಡದ ಗುಡುಗನ್ನು ಕೇಳಿದ ಮಯೂರಿಯಂತೆ ಮನೋಮುದವನ್ನು ತಾಳಿ ಅರಸನ ಬಳಿಗೆ ಬಂದು ಸುದ್ದಿತಂದ ದೂತರಿಗೆ ಅಂಗ ಚಿತ್ತವನ್ನು ಕೊಟ್ಟು ಪಟ್ಟಣದಲ್ಲಿ ಉತ್ಸವದ ಅಲಂಕಾರವೇರ್ಪಡಿಸಲು ಅಪ್ಪಣೆಯಿತ್ತಳು.

ಜಿಸಮಾಜಂ ಮದವದ್ಗಜೇಂದ್ರಘಟೆ ಪಾಂಡುಚ್ಛತ್ರಷಂಡಂ ನಿಗುಂ।
ಬಿಸೆ ಪುತ್ರಂಗಿದಿರ್ವಂದರಂದರಸಿಯುಂ ಭೂಪಾಲನುಂ ಲೀಲೆಯಿಂ॥ ೮೯

ಅಂತು ಬಂದು ವಾಹನದಿನಿೞಿದು.

ಚರಣಸರೋರುಹಕ್ಕೆ ಮಕುಟದ್ಯುತಿವಾರಿಗಳಿಂದೆ ಪಾದ್ಯಮಂ।
ವಿರಚಿಸಿದಾತ್ಮಜಂಗೆ ಬಿಡುಮುತ್ತಿನ ಸೇಸೆಯನಿಕ್ಕುವಂದದಿಂ॥
ಸುರಿದು ಮುದಶ್ರುಬಿಂದುಚಯಮಂ ಬಟೆಯಂ ಪರಸುತ್ತೆ ಮತ್ತೆ ಮ।
ತ್ತಿರದೊಲವಿಂದಮಪ್ಪಿ ಬಿಡದಿರ್ದನದೊಂದರೆಜಾವಮಂ ನೃಪಂ॥ ೯೦

ಅನಂತರಂ ನಿಜಪದಸರೋಜಕ್ಕಾನಂದಾಶ್ರುಬಿಂದುಗಳಿಂ ಮಕರಂದಬಿಂದುಗಳನೋಲಗಿಸಿದ ಕುಮಾರನನಜಿತಸೇನಮಹಾದೇವಿ ನಲ್ವರಕೆಯಿಂ ಪರಸಿ ಮೋಹರಸಪರವಶತೆಯಿಂ ತೋಱಿದ ಮೊಲೆಗೆಲಕ್ಕೆ ತೆಗೆದು ಪುಳಕಕಳಿಕಾಕುಳತೆಯಿಂ ಕದಂಬಕುಸುಮಸ್ರಜಂಗಳಂತಿರ್ದ ಭುಜವಲ್ಲರಿಗಳಿಂದಪ್ಪಿ

ಎನ್ನಯ ತಂದೆ ಬಂದನೆನಗಿಂದು ಮನೋರಥಸಿದ್ಧಿಯಾದುದಿಂ।
ದುನ್ನತಿವೆತ್ತುದಗ್ರಮಹಿಷೀಪದಮಿಂದಧಿದೇವತಾಚಯಂ॥
ಸನ್ನಿದಮಾದುದೆಂದು ಸಿರಿಗಂಪಿನ ಪಂಕದೊಳಣ್ಣನಿಕ್ಕಿ ತಾಂ।
ಜೊನ್ನದ ಜೊಂಪದೊಳ್ ನೆಲಸಿದಂತೆರ್ದೆಯಾಱಿದಳೊಪ್ಪಿ ತೋಱಿದಳ್॥ ೯೧

೮೯. ದಿಕ್ಕುಗಳನ್ನೆಲ್ಲ ಸಮುದ್ರತರಂಗಗಳೂ, ನೆಲವನ್ನೆಲ್ಲ ನೀಲಪರ್ವತಗಳ ಸಮೂಹವೂ ಆಕಾಶವನ್ನೆಲ್ಲ ಶರತ್ಕಾಲ ಮೇಘ ಮಂಡಲಗಳೂ ತುಂಬಿಕೊಂಡುವೊ ಏನೊ ಎಂಬಂತೆ ಜಾತಿಕುದುರೆಗಳ ಸಮುದಾಯವೂ ಮದ್ದಾನೆಗಳ ದಳಗಳೂ, ಬೆಳ್ಗೊಡೆಗಳ ಸಮೂಹವೂ ವಿಜೃಂಭಿಸುತ್ತಿರಲು ಅರಸನೂ, ಅರಸಿಯೂ ಸಂತೋಷದಿಂದ ಇದಿರುಗೊಳ್ಳಲು ಬಂದರು. ವ॥ ಹಾಗೆ ಬರಲಾಗಿ, ವಾಹನದಿಂದ ಇಳಿದು_ ೯೦. (ತನ್ನ) ಪಾದ ಕಮಲಗಳಿಗೆ ಕಿರೀಟದ ಪ್ರಭೆಯು ನೀರಿನಿಂದ ಪಾದ್ಯವನ್ನು ರಚಿಸಿದ ಮಗನಿಗೆ ಬಿಡುಮುತ್ತಿನ ಸೇಸೆ ತಳಿಯುವಂತೆ ಆನಂದಾಶ್ರುಗಳನ್ನು ಸುರಿಸಿ, ಆಶೀರ್ವದಿಸುತ್ತ ಮರಳಿ ಮರಳಿ ಅವನನ್ನು ಅಪ್ಪಿಕೊಳ್ಳುತ್ತ ಒಂದು ಅರ್ಧ ಯಾಮಕಾಲದವರಗೆ ಅರಸನು ಮಗನ ತೆಕ್ಕೆಯನ್ನೆ ಬಿಡದಾದನು ವ॥ ಆ ಬಳಿಕ ತನ್ನ ಪಾದಕಮಲಗಳಿಗೆ ಆನಂದಾಶ್ರುಗಳಿಂದ ಮಕರಂದರಸವನ್ನು ಒದಗಿಸಿದ ಕುಮಾರನನ್ನು ಅಜಿತಸೇನಮಹಾದೇವಿ ಶುಭಾಶೀರ್ವಾದಗಳಿಂದ ಎತ್ತಿ ಮೋಹ ಪರವಶಳಾಗಿ ತೋರೆಯುತ್ತಿರುವ ಮೊಲೆಗಳ ಬಳಿಗೆ ಆತನನ್ನು ಬರಸೆಳೆದು ರೋಮಾಂಚದಿಂದ ತುಂಬಿ ಹೂಗೊಂಚಲಿಡಿದ ಕದಂಬದ ಶಾಖೆಗಳಂತಿರುವ ತನ್ನ ಬಳ್ಳಿದೋಳುಗಳಿಂದ ತಬ್ಬಿಕೊಂಡು ೯೧. "ನನ್ನ ತಂದೆ ಬಂದನು, ನನಗೆ ಇಂದು ಮನೋರಥ ಈಡೇರಿತು, ನನ್ನ ಮಹಾರಾಣೀ

ಆಗಳೆ ಪೊಡೆಮಟ್ಟ ಶಶಿಪ್ರಭೆಯನಖಂಡಿತಕರ್ಣಪತ್ರಸೋಭಾಪಾತ್ರಿಯಾಗೆಂದು ಪರಸಿ ಪುರಾಭಿಮುಖನಾಗಿ

ಬಡತನದೊಳ್ ಸಿರಿ ಮೆಯ್ ಬೆಮ ।
ರ್ವೆಡೆಯೊಳ್ ತಂಗಾಳಿ ಮರ್ವು ಪರ್ವಿದ ಸಮಯ ॥
ಕ್ಕುಡುಪೋದಯಮೆಂಬಂದದೆ ।
ಗಡಣಿಸಿದುದು ಸುತನ ಬರವು ಬಯಸುವ ಪದದೊಳ್ ॥ ೯೨

ಅಂದೆ ವಿಗತಾಶರಪ್ಪೆಮ ।
ಗಂ ದೇವಿಗಮಾಮುನೀಶ್ವರಂ ನಿಮ್ಮ ಸುತಂ ॥
ಬಂದಪನೆಂಬಾದೇಶದಿ ।
ನಿಂದುವರಂ ಪಿಡಿದುದೊಡಲನಾಶಾಪಾಶಂ ॥ ೯೩

ಅವಧರಿಪೊಡೆ ನೆಲನಂ ಪೊ ।
ಯ್ದವನ ಕರಂ ಬೆಟ್ಟಮೆಚ್ಚ ಧನ್ವಿಯ ಸರಲೆಂ ॥
ಬಿವು ತಪ್ಪುವೊಡಂ ಪೋಲ್ವುವು ।
ಸವಣರ ನುಡಿಯೆಂದುಮೆಂತುಮೇಂ ತಪ್ಪುಗುಮೇ ॥ ೯೪

ಪದವಿ ಇಂದು ಉನ್ನತಿಯುನ್ನು ಪಡೆಯಿತು. ನನ್ನ ಅಧಿದೇವತೆಗಳು ನನಗಿಂದು ಪ್ರಸನ್ನರಾದರು" ಎಂದು ನುಡಿಯುತ್ತ ಉತ್ಕೃಷ್ಟವಾದ ಪರಿಮಳದ ಲೇಪವನ್ನು ತಾಳಿ ಬೆಳ್ದಿಂಗಳ ತಂಪಿನಲ್ಲಿ ನೆಲಸಿದಂತೆ ತಣಿದು ತಂಪಾದ ಮನಸ್ಸಿನಿಂದ ಸುಖದಲ್ಲಿದ್ದಳು. ವ॥ ಆಗಲೆ ನಮಸ್ಕರಿಸಿದ ಶಶಿಪ್ರಭೆಯನು "ಅಖಂಡ ಸೌಭಾಗ್ಯವತಿಯಾಗು" ಎಂದು ಹರಸಿ ಪಟ್ಟಣಾಭಿಮುಖವಾಗಿ ಅವರು ಹೊರಟರು. ೯೨. ಬಡತನದಲ್ಲಿದ್ದಾಗ ಸಂಪತ್ತು, ಮೈ ಬೆವತಾಗ ತಂಗಾಳಿ, ಕತ್ತಲೆ ಮುಸುಕಿದ ಹೊತ್ತಿನಲ್ಲಿ ಚಂದ್ರೋದಯ ಒದಗಿದಂತೆ ಮಗನ ಆಗಮನ ಬಯಸುತ್ತಿರುವ ಕಾಲದಲ್ಲಿಯೆ ಬಂದೊದಗಿತು. ೯೩. "ಅಂದೇ ನಿರಾಶರಾಗಿದ್ದ ನಮಗೆ ಹಾಗು ದೇವಿಗೆ ಆ ಮುನೀಶ್ವರನು – "ನಿಮ್ಮ ಮಗನು ಬಂದೇ ಬರುವನೆಂದು ಭವಿಷ್ಯ ನುಡಿದುದರಿಂದ ಇಂದಿನವರೆಗೆ ಆ ಆಸೆಯಿಂದಲೆ ನಾವು ಜೀವ ಹಿಡಿದೆದ್ದೆವು. ೯೪. ನೆಲಕ್ಕೆ ಬಡಿದ ಕೈ ಬೆಟ್ಟಕ್ಕೆ ಹೂಡೆದ ಬಾಣ ಒಂದುವೇಳೆ ಗುರಿ ತಪ್ಪಿದರೂ ತಪ್ಪಬಹುದು; ಆದರೆ ಸವಣರು ಆಡಿದ ಮಾತು ಎಂದಾದರೂ ತಪ್ಪೀತೆ?" ವ॥ ಹೀಗೆ ಪಕ್ಕದ ಆನೆಗಳ ಮೇಲೆ ಬರುತ್ತಿದ್ದ ಅರಸರೊಡನೆ ನುಡಿಯುತ್ತ ರಾಜನು ವಸ್ತ್ರಗಳಿಂದಲೂ ಚಿಗುರು ಹೂಗಳಿಂದಲೂ ರತ್ನಗಳಿಂದಲೂ ರಚಿತವಾದ ತೋರಣಗಳಿಂದ ಮನೋಹರವಾದ, ಕುಂಕುಮಕೇಸರಿಯ ದಟ್ಟವಾದ ಚಳೆಯದಿಂದ ಅಳವಟ್ಟ ರಾಜಬೀದಿಗಳು; ಎತ್ತಿಕಟ್ಟಿದ ಅನೇಕಾನೇಕ ರೇಷ್ಮೆವಸ್ತ್ರದ ಧ್ವಜಗಳು ಹಾಗು

ಎಂದು ಪಕ್ಕದಾನೆಗಳೊಳ್ ಬರ್ಪ ಪಾರ್ಥಿವರೊಳರಸಂ ನುಡಿಯುತುಂ ಬಂದನೇಕ ವಸನಕಿಸಲಯ ಕುಸುಮಮಣಿವಿಸರರಚಿತತೋರಣಮಾಲಾಮನೋಹರಮುಂ, ಅವಿರಳಕಾಶ್ಮೀರರಸವಿಸರಸಂಸಿಕ್ತ ರಾಜವೀಧೀಸನಾಥಮುಂ, ಉಚ್ಛ್ರಿತಸಮೀಚೀನಚೀನಧ್ವಜವಿತಾನವಿರಾಜಿತಮುಂ, ಉತ್ಸಾಹಪಟಹರಟನ ಪ್ರತಿನಾದಿತನಾನಾಪ್ರಾಸಾದಕುಂಜರುಚಿತಮುಂ, ಅಟ್ಟಾಳಸಾಳಗೋಪುರಸೌಧಸಂಕುಳಸಮಾರೂಢದರ್ಶ ನೋತ್ಸಕಜನಜನಿತಸಂಕಟಮುಮಪ್ಪನಗರಿಯಂ ಪುಗುವಾಗಳ್,

ಪಸರಿಪ ಪಾದರಾಗಮಿಳೆಯಂ ತಳಿರ್ಮೆಚಿಸೆ ಲೋಚನಾಂಶುಗಳ್ ।
ದೆಸೆಯನಲರ್ಚೆ ದೇಹರುಚಿ ಪೊಂದೊಡವಂ ಗಗನಾಂಗದೊಳ್ ನಿಯೋ ॥
ಜಿಸೆ ಕಳಕಾಂಚಿಕಾವಿರುತಿ ಕರ್ಣದೊಳಂಚೆಯ ತುಪ್ಪುಟಿಂಚೆಯಂ ।
ಪೊಸೆಯೆ ನಿರೀಕ್ಷಣವ್ಯಸನದಿಂ ನಡೆತಂದುದು ಸೌಂದರೀಜನಂ ॥ ೯೫

ಅಂತು ಬಂದು

ಜನಸಮ್ಮರ್ದೋತ್ಥಕೋಳಾಹಳಕುಪಿತಹಯಸ್ಕಂಧಮೂಲಸ್ಥಳಾಸ್ಫಾ ।
ಳನಲೀಲಂ ತಾಂ ಕುಮಾರಂ ಗಮನಚತುರಚಂಚದಶ್ವಾರೂಢೆ ತತ್ಕಾ ॥
ಮಿನಿ ಮಾದ್ಯತ್ಕುಂಭಿಕುಂಭಸ್ಥಳನಿಹಿತನಿಶಾತಾಂಕುಶಂ ಭೂಭುಜಂ ಖ ।
ಡ್ಗಿನಿಕಾಯಪ್ರಾಪ್ತತೋದ್ಯನ್ಮಣಿಮಯಶಿಬಿಕಾರೂಢೆ ಮಾದೇವಿಯಲ್ತೇ ॥ ೯೬

ಮೇಲ್ಕಟ್ಟುಗಳು; ಉತ್ಸಾಹದಿಂದ ಬಾರಿಸುತ್ತಿರುವ ಮಂಗಳವಾದ್ಯಗಳ ಧ್ವನಿಯಿಂದ ಶೋಭಿಸುವ ಅನೇಕ ಭವ್ಯಭವನಗಳು; ಅಟ್ಟಳಿಗೆ_ಗೋಪುರ_ಸೌಧಗಳ ಉಪ್ಪರಿಗೆಗಳಲ್ಲಿ ಏರಿನಿಂತು ಕುಮಾರನನ್ನು ನೋಡುವ ಕುತೂಹಲದಿಂದ ನೆರೆದ ಜನರ ಸಮೂಹಗಳು_ ಹೀಗೆ ಚೆಲುವಾದ ಪಟ್ಟಣವನ್ನು ಪ್ರವೇಶಿಸುವಾಗ- ೯೫. ತಮ್ಮ ಅಂಗಾಲುಗಳ ಪ್ರಭೆಯಿಂದ ನೆಲಕ್ಕೆ ಕೆಂದಳಿರು ಹಾಸುತ್ತ, ಕಣ್ಣ ಬೆಳಗಿನಿಂದ ದಿಕ್ಕುಗಳನ್ನು ಅರಳಿಸುತ್ತ, ದೇಹಕಾಂತಿಯಿಂದ ಆಕಾಶಕ್ಕೆ ಚಿನ್ನದಾಭರಣವನ್ನು ತೊಡಿಸುತ್ತ, ಉಡೆನೂಲಿನ ಮಧುರನಿನಾದದಿಂದ ಕಿವಿಗಳಿಗೆ ಹಂಸತೂಲಿಕೆಯ ಸ್ಪರ್ಶದಂತೆ ಸೊಗಸನ್ನು ಒದಗಿಸುತ್ತ ಸುಂದರಿ ಯರು ಕುಮಾರನನ್ನು ನೋಡಲು ನಡೆ ತಂದರು. ಹಾಗೆ ಬಂದು- ೯೬. "ಜನಸಂದಣಿಯ ಕೋಲಾಹಲಕ್ಕೆ ಕೋಪಗೊಂಡ ತನ್ನ ಕುದುರೆಯ ಹೆಗಲನ್ನು ಚಪ್ಪರಿಸುತ್ತಿರುವವನು ಕುಮಾರನಲ್ಲವೆ? ಚತುರಗತಿಯ ಕುದುರೆಯೇರಿ ಬರುವವಳೆ ಆತನ ಹೆಂಡತಿ, ಮದಗಜದ ನೆತ್ತಿಯ ಮೇಲೆ ಹರಿತವಾದ ಅಂಕುಶವನ್ನಿಟ್ಟು ಕೊಂಡು ಬರುವವನು ನಮ್ಮ ಮಹಾರಾಜ, ಖಡ್ಗಧಾರಿ ಮೈಗಾವಲವರ ನಡುವೆ ರತ್ನಮಯವಾದ ಸಿವಿಗೆಯೇರಿ ಬರುತ್ತಿರುವವಳು ನಮ್ಮ ಮಹಾರಾಣಿಯಲ್ಲವೆ?" ವ॥ ಹೀಗೆ ನುಡಿಯುತ್ತಿರುವ ತರುಣಿಯರ ಮಾತುಗಳಲ್ಲಿ ಪುಣ್ಯ ಪಾತಕರ ಹರಕೆಯ ನುಡಿಗಳೂ ಬೆರೆತುಕೊಂಡುವು. ಪುಣ್ಯಸ್ತ್ರೀಯರು ತಳಿಯುವ

ಎಂದು ನುಡಿವ ಯುವತಿಯರ ನುಡಿಯೊಳ್ ತಡಂಗಲಸಿದ ಪುಣ್ಯಪಾಠಕಜನಂಗಳಾಶೀರ್ವಾದ ನಾದಮುಮಂ ಅಗಣ್ಯಪುಣ್ಯಾಂಗನಾಜನಂಗಳ್ ತಳಿವಶೇಷಾಕ್ಷತಂಗಳುಮನಾಕರ್ಷಿಸುತ್ತುಮಾಂತು ಕೊಳುತ್ತುಂ ಬಂದು ರಾಜಮಂದಿರಮಂ ಪೊಕ್ಕು ಕರುಮಾಡದ ಮೊದಲ ಭೂಮಿಕೆಯೊಳಿಕ್ಕಿದ ವಿಶಾಲ ಹಂಸತೂಲದೊಳರಸಿಯುಂ ತಾನುಂ ಕುಳ್ಳಿರ್ದುಯುವರಾಜನುಮನೊಲ್ಲೆನೆನೆಯಿನೆ ತಮ್ಮ ಸಮೀಪದೊಳ್ ಕುಳ್ಳಿರಿಸಿ ಶಶಿಪ್ರಭೆಗೌಚಿತ್ಯಾಸನಮನಿತ್ತು ಅಶೇಷಪರಿವಾರಮಂ ವಿಸರ್ಜಿಸಿ,

ಅಡಿಗಡಿಗಪ್ಪಿಕೊಳುತ್ತುಂ ।
ನುಡಿನುಡಿಗೊರ್ಮೊರ್ಮೆ ತೆಗೆದು ಮುಂಡಾಡುತ್ತುಂ ॥
ಪಿಡಿದು ಚುಬುಕಾಗ್ರಮಂ ನಲ ।
ವೊಡರಿಸೆ ಮುದ್ದಾಡಿಸುತ್ತುಮಿರ್ದರ್ ಸುತನಂ ॥ ೯೭

ಇರ್ದು ಕಿಱಿದಾನುಂ ಬೇಗದಿಂ

ಏನೆಂದುಯ್ದನವಂ ಬಟೆಕ್ಕವನಿನಾದಾಪತ್ತದೇನಾತನಂ ।
ನೀನೇಗೆಯ್ದಿಯಿನಿತ್ತುಕಾಲಮಿರವೆಂತಾದತ್ತು ಮತ್ತೀವಿವಾ ॥
ಹಾನಂದಂ ದೊರೆಕೊಂಡುದಾರಿನಿದು ಮಚ್ಚಿತ್ತಕ್ಕೆ ಚಿತ್ರಾವಹಂ ।
ತಾನೆಂದಾತ್ಮಜನಿಂ ನೃಪಂ ತಿಳಿದನಾವೃತ್ತಾಂತದಾದ್ಯಂತಮಂ ॥ ೯೮

ತಿಳಿದು ಬಟೆಯಂ ಯಥೋಚಿತದಿವಸವ್ಯಾಪಾರಮಂ ತೀರ್ಚಿ ಪರಮ ಪ್ರಮೋದಪರಂಪರೆಯ ನಪ್ಪುಕೆಯ್ದಿರ್ಪಿನಂ

ಮಂಗಳಾಕ್ಷತೆಗಳನ್ನು ಸ್ವೀಕರಿಸುತ್ತ ಬಂದು ಅರಮನೆಯನ್ನು ಪ್ರವೇಶಿಸಿ, ಆ ಭವನದ ಮೊದಲ ಅಂತಸ್ತಿನಲ್ಲಿ ಇರಿಸಿದ ಹರವಾದ ಅಂಚೆದುಪ್ಪಳಿನ ಪೀಠದಲ್ಲಿ ಅರಸನೂ ಅರಸಿಯೂ ಕುಳಿತು, ಒಲ್ಲೆನೊಲ್ಲೆನೆಂದರೂ ಬಿಡದೆ ಯುವರಾಜನನ್ನು ತಮ್ಮ ಸನಿಹದಲ್ಲಿಯೆ ಕುಳ್ಳಿರಿಸಿಕೊಂಡು, ಶಶಿಪ್ರಭೆಗೆ ಯೋಗ್ಯವಾದ ಪೀಠವನ್ನು ನೀಡಿ, ಎಲ್ಲ ಪರಿವಾರದವರನ್ನು ಕಳುಹಿಸಿ–೯೭. ಮಗನನ್ನು ಪುನಃ ಅಪ್ಪಿಕೊಳ್ಳುತ್ತ, ನುಡಿನುಡಿಗೊಮ್ಮೆ ಬರಸೆಳೆದು ಮುಂಡಾಡುತ್ತ ಗದ್ದವನ್ನು ಹಿಡಿದು ಅಕ್ಕರೆ ಯಿಂದ ಮುದ್ದಿಸುತ್ತ, ಇದ್ದರು. ವ॥ ಹೀಗೆ ಕೆಲಹೊತ್ತು ಕಳೆದ ಬಳಿಕ_ ೯೮. "ಆತನು ನನ್ನನ್ನು ಅದೇಕೆ ಅಪಹರಿಸಿಕೊಂಡು ಹೋದನು? ಇಷ್ಟೊಂದು ಸಮಯ ದವರಿಗೆ ನಿನ್ನ ಬದುಕು ಹೇಗೆ ಹೇಗೆ ಕಳೆಯಿತು? ಈ ಮದುವೆಯ ಸಂತೋಷ ಯಾರಿಂದ ಒದರಿತು? ಇದೆಲ್ಲ ನನ್ನ ಮನಸ್ಸಿಗೆ ಸೋಜಿಗವಾಗಿದೆ. ತಿಳಿಸಿ ಹೇಳು" ಎಂದು ಕೇಳಿ ಅರಸನು ಮಗನಿಂದ ಆ ವೃತ್ತಾಂತವನ್ನು ಅಮೂಲಾಗ್ರ ವಾಗಿ ಅರಿತುಕೊಂಡನು. ವ॥ ಅನಂತರ ಯಥಾವಿಧಿಯಾಗಿ ದೈನಂದಿನ

ಸ್ಫುರದುಗ್ರೋರಗಪೂರ್ವಮಪ್ಪ ರಸಿಯೊಳ್ ತಿಗ್ಮಾಂಶುಬಿಂಬೋದಯಂ ।
ಪಿರಿದುಮ ಚೋದ್ಯಮಿದೆಂಬಿನಂ ನಿಶಿತಶಸ್ತ್ರಾಕೀರ್ಣಮಪ್ಪಸ್ತ್ರಮಂ ॥
ದಿರದೊಳ್ ಯಕ್ಷಸಹಸ್ರರಕ್ಷಿತಮುದಗ್ರಾರಾಂಶುಭಾರಂ ಭಯಾ ।
ತುರಚೇತಃಪರಚಕ್ರಮುಣ್ಮಿದುದು ಚಕ್ರಂ ವಿಕ್ರಮೈಕಕ್ರಮಂ ॥ ೯೯

ಅಂತು ಪುಟ್ಟಿದ ಚಕ್ರೋತ್ಪತ್ತಿಯುತ್ಸವಮನಾಯುಧಾಧ್ಯಕ್ಷಂ ಬಂದರಸುಗೆ ಬಿನ್ನವಿಸೆ ಮಗನಗಣ್ಯ ಪುಣ್ಯಪ್ರಭಾವಕ್ಕೆ ಮನದೊಳಾನಂದಮುಮನಾಶ್ಚರ್ಯಮುಮನಾಂತು ಕುಮಾರನಂ ಬರಿಸಿ

ಉದಯಿಸಿತಾಯುಧಾಲಯದೊಳಿಂದು ರಥಾಂಗಮದಲ್ತೆ ನಿನ್ನ ಪು ।
ಣ್ಯದ ಫಲಮಾಫಲಂ ಜಿನಪದಾಂಬುಜವರ್ಯಸಪರ್ಯೆಯಿಂದಮಾ ॥
ಯ್ತದನಱಿದಿಟ್ಟೆಯರ್ಚನೆಗಳಿಂದೆ ತದಂಘ್ರಿಯನ್ನೆದೆ ಮುಂ ಬೞಿ ।
ಕ್ಕದನೊಲವಿಂದಮರ್ಚಿಸು ತನೂಭವ ಪೆರ್ಚಿಸು ರಾಜ್ಯಲಕ್ಷ್ಮಿಯಂ ॥ ೧೦೦

ಎಂದಾತನ ಮನೋಗತಾನುವಾದಮಂ ಮಾಡುವುದುಂ ಮಹಾವಿಭೂತಿಯಿಂ ಜಿನರಾಜ ಮಂದಿರಕ್ಕೆ ವಂದು

॥ ರಗಳೆ ॥

ಪ್ರಥಿತತೀರ್ಥಾಹ್ವಯಸರಿತ್ಸರಸ್ಸಲಿಲದಿಂ ।
ಪೃಥುಕಮಲಪರಿಮಲಪರಾಗಭರಕಲಿಲದಿಂ ।

ಕಾರ್ಯಗಳನ್ನು ತೀರಿಸಿ ಅತ್ಯಂತ ಸಂತೋಷವನ್ನು ತಾಳಿರಲಾಗಿ_ ೯೯. ಭೀಕರವಾದ ಸರ್ಪಸಮೂಹ ಭರಿತವಾದ ಪಾತಾಳ ಲೋಕದಲ್ಲಿ ಸೂರ್ಯಬಿಂಬವು ಉದಯಿಸಿದುದು ವಿಸ್ಮಯಕರವಲ್ಲವೆ ಎಂಬಂತೆ, ಹರಿತವಾದ ಅನೇಕ ಶಸ್ತ್ರಗಳಿಂದ ತುಂಬಿದ ಆಯುಧ ಶಾಲೆಯಲ್ಲಿ ಸಾವಿರ ಯಕ್ಷರಿಂದ ರಕ್ಷಿತವಾಗಿ, ತೀಕ್ಷ್ಣವಾದ ಧಾರೆಯಿಂದ ಹೊಳೆಯುತ್ತ, ಶತ್ರುಮಂಡಲಗಳಿಗೆ ಭಯವನ್ನುಂಟುಮಾಡುವ, ಪರಾಕ್ರಮಶಾಲಿಯಾದ ಚಕ್ರವರ್ತಿಗೆ ಮಾತ್ರ ಲಭಿಸುವ ಚಕ್ರವು ಉದಿಸಿತು. ವ॥ ಹೀಗೆ ಚಕ್ರವು ಹುಟ್ಟಿದ ಉತ್ಸವವಾರ್ತೆಯನ್ನು ಆಯುಧಶಾಲೆಯ ಅಧ್ಯಕ್ಷನು ಅರಸನಿಗೆ ನಿವೇದಿಸಿದನು. ತನ್ನ ಮಗನ ಅಸೀಮವಾದ ಪುಣ್ಯಪ್ರಭಾವಕ್ಕೆ ಮನದಲ್ಲಿಯೆ ಹಿಗ್ಗುತ್ತಲೂ ಸೋಜಿಗಗೊಳ್ಳುತ್ತಲೂ ಅರಸನು ಕುಮಾರನನ್ನು ಬರಮಾಡಿಕೊಂಡು– ೧೦೦. "ಆಯುಧಶಾಲೆಯಲ್ಲಿ ಇಂದು ಚಕ್ರರತ್ನವು ಉದಯವಾಯಿತು. ಇದು ನಿನ್ನ ಪುಣ್ಯದ ಫಲವಲ್ಲವೆ ? ಈ ಫಲವು ಕೂಡ ಜಿನಪಾದಗಳ ಪೂಜೆಯಿಂದ ಲಭಿಸಿದುದು. ಆದುದರಿಂದ ಮೊದಲು ಜಿನಪಾದಗಳನ್ನು ಪೂಜಿಸಿ ಅನಂತರ ಪ್ರೀತಿಯಿಂದ ಆ ಚಕ್ರವನ್ನೂ ಪೂಜಿಸು. ಮಗನೇ, ರಾಜ್ಯಲಕ್ಷ್ಮಿಯನ್ನು ಅಭಿವೃದ್ಧಿಗೊಳಿಸು" ವ॥ ಹೀಗೆಂದು ತನ್ನ ಮನೋಭಿಪ್ರಾಯವನ್ನು ನುಡಿದು ತೋರಲಾಗಿ, ಕುಮಾರನು ಮಹಾವೈಭವದಿಂದ ಜಿನಾಲಯಕ್ಕೆ ಬಂದು– ೧೦೧. ಶ್ರೇಷ್ಠ ತೀರ್ಥಗಳಿಂದ ಪ್ರಸಿದ್ಧವಾದ ನದೀಸರೋವರಗಳ ನೀರಿನಿಂದಲೂ, ಕಮಲಗಳ ಪರಿಮಳದಿಂದೊಡಗೂಡಿದ ಗಂಧೋದಕದಿಂದಲೂ, ಹೆಣ್ದುಂಬಿಗಳನ್ನು

ರಂಗಕಲಶೋನ್ಮಿಶ್ರಚಂದನಕ್ಷೋದದಿಂ ।
ಭೃಂಗಾಂಗನಾಕೃಷ್ಟಿ ಪರಿಣತಾಮೋದದಿಂ ।
ಶಶಿಶಕಲಸಮಕಳಮತಂಡುಲನಿಕಾಯದಿಂ ।
ವಿಶದಸದ್ಭಕ್ತಿಲತಿಕಾಂಕುರಪ್ರಾಯದಿಂ ।
ಅಪರಿಮಿತವಿಕಚಕುಸುಮಸ್ರಕ್ಸಮೂಹದಿಂ ।
ಸ್ವಪರಿಮಳಭರಜಡೀಕೃತಗಂಧವಾಹದಿಂ ।
ಅಕ್ಷೂಣಕನಕಪಾತ್ರೋದ್ಧೃತನಿವೇದ್ಯದಿಂ ।
ಭಕ್ಷೋಪದಂಶಘೃತಸಿತನಿಚಯಹೃದ್ಯದಿಂ ।
ವರ್ತೀಕಾರತ್ನಪ್ರಮಿತದೀಪ್ತದೀಪದಿಂ ।
ವರ್ತೀಕೃತೋದ್ಧ್ಮೆಮಶಾರೀಕಳಾಪದಿಂ ।
ಲಸಿತಾಗುರುಪ್ರಬಳತರಧೂಪಧೂಮದಿಂ ।
ವಿಸರದಾಮೋದಾಧಿವಾಸಿತವ್ಯೋಮದಿಂ ।
ರಾಜಕದಳಾಮ್ರಜಂಬೀರಫಲಗುಚ್ಛದಿಂ ।
ಪೂಜನಾಮಾತ್ರಸಂಪಾದಿತಹೃದಿಚ್ಛದಿಂ ।
ಪರಮಜಿನರಾಜನಂ ದುರಿತಾಬ್ಧರಾಜನಂ ।
ಪೂಜಿಸಿ ಸುಭಕ್ತಿಯಿಂ ರಾಜಿಸಿ ಮೃದೂಕ್ತಿಯಿಂ ।
ವಾಸ್ತವಗುಣಸ್ತವದೆ ಶಸ್ತರೂಪಸ್ತವದೆ ।
ಪೊಗಟ್ಟಿತ್ತೆವರೆ ತನಗೆ ಮಗುಳ್ದನಿಂತರಮನೆಗೆ ॥ ೧೦೧

ಅನಂತರಂ ತನ್ನ ಪುಣ್ಯೋದಯಾಚಲದೊಳುದಯಿಸಿದ ತೇಜೋಮಾರ್ತಂಡಮಂಡಳದಂತೆ ಸೊಗಯಿಸುವ ಸುದರ್ಶನಮೆಂಬ ಚಕ್ರರತ್ನಮುಂ, ತನ್ನ ಪೆಂಪಿನೊಳ್ ಸೆಣಸಿ ಕೀಟ್ಟಿಟ್ಟು ಆಳ್ವೆಸಕ್ಕೆವಂದ

ಆಕರ್ಷಿಸುವ ಪರಿಮಳದಿಂದಲೂ, ಪರಿಶುದ್ಧವಾದ ಭಕ್ತಿಯೆಂಬ ಬಳ್ಳಿಯ ಅಂಕುರಗಳೊ ಏನೊ ಎಂಬಂತೆ ತೋರುವ, ಚಂದ್ರನ ಚೂರುಗಳಂತೆ ಧವಳವಾದ ಅಕ್ಷತೆಗಳಿಂದಲೂ, ತಮ್ಮ ಸುಗಂಧದಿಂದ ಗಾಳಿಯನ್ನು ಜಡಗೊಳಿಸಿದ ಅಸಂಖ್ಯವಾದ ಅರಳುಹೂಗಳ ಮಾಲೆಗಳಿಂದಲೂ, ಭಕ್ಷ್ಯ, ಉಪದಂಶ, ಮೊದಲಾಗಿ ತುಪ್ಪಸಹಿತವಾಗಿ ಸೊಗಸಾದ ಆಹಾರಗಳನ್ನೊಡಗೊಂಡ, ಚಿನ್ನದ ಹರಿವಾಣಗಳಲ್ಲಿಟ್ಟ ನೈವೇದ್ಯ ದಿಂದಲೂ, ರತ್ನ ಖಚಿತವಾದ ಅನೇಕಾನೇಕ ದೀವಿಗೆಗಳಿಂದಲೂ, ತನ್ನ ಸುಗಂಧದಿಂದ ಆಕಾಶವನ್ನೆಲ್ಲ ತುಂಬುವ ಅಗುರು ಧೂಪದಿಂದಲೂ, ರಾಜಬಾಳೆ, ಮಾವು, ನಿಂಬೆ ಮೊದಲಾದ ಫಲಗಳ ಗೊಂಚಲುಗಳಿಂದಲೂ, ಮನಃಪೂರ್ವಕ ವಾಗಿ ಪಾಪನಿವಾರಕನಾದ ಪರಮ ಜಿನೇಶ್ವರನನ್ನು ಪೂಜೆಮಾಡಿ, ಸದ್ಭಕ್ತಿ ಯಿಂದ ಕೂಡಿ ಮಧುರವಾಗಿ ವಸ್ತುಸ್ತವ, ಗುಣಸ್ತವ, ರೂಪಸ್ತವಗಳನ್ನು ಹಾಡಿ ಅರಮನೆಗೆ ಮರಳಿ ಬಂದನು. ವ॥ ಬಳಿಕ ತನ್ನ ಪುಣ್ಯದ ಉದಯಪರ್ವತ ದಲ್ಲಿ ಮೂಡಿದ ತೇಜಃಸೂರ್ಯನಂತೆ ಹೊಳೆಯುವ ಸುದರ್ಶನವೆಂಬ

ಗಗನತಳದಂತೆ ಪೆರ್ಮೆಯಂ ತಳೆದ ವಜ್ರಮಯವೆಂಬ ಚರ್ಮರತ್ನಮುಂ, ತನ್ನ ಪುಣ್ಯಪ್ರಭಾವದಿಂ ನಿಯೋಗಿಸಿಟ್ಟನಿತೆ ಬೇಗದಿಂ ಬೆಟ್ಟಘಟ್ಟಹಳ್ಳಕೊಳ್ಳಮೆಂಬ ವಿಷಮಭೂತಳಮನನಿತುಮಂ ನಾಲ್ವತ್ತೆಂಟು ಯೋಜನಪ್ರಮಾಣವಿಸ್ತೀರ್ಣಕಟಕಕ್ಕೆ ಸುಖಪ್ರಯಾಣನಿಮಿತ್ತಂ ಸಮತಳಮಂ ಮಾಡೆ ಕೈಗೆ ಬಂದ ದಂಡರತ್ನಮುಂ, ಕೂಟಮಂ ಬಯಸಿ ಬದಲ್ಕೆ ಸಾಮ್ರಾಜ್ಯಲಕ್ಷ್ಮಿ ಮುಂದಟ್ಟಿದ ಲೀಲಾಸನಾಳ ಧವಳಶತಪತ್ರಮೆನಿಪ ಸೂರ್ಯಪ್ರಭಮೆಂಬ ವಿಚಿತ್ರಛತ್ರರತ್ನಮುಂ, ತನ್ನ ವಿಶದಯಶಃಪ್ರಭಾವದೊಳ್ ಮುೞುಂಗಿ ಪಗಲೊಳಂ ವರ್ತಿಪಿಚ್ಛೆಯಿಂ ಬರ್ಚಿ ಬಂದ ಶಶಿಕಳೆಯದೆಂಬಂತೆಸೆವ ಚಿಂತಾಜನನಿಯೆಂಬ ಕಾಕಿಣೀರತ್ನಮುಂ, ತನ್ನರಾತಿಗಳ ಜೀವನರಸಾಸ್ವಾದತೃಷ್ಣೆಯಿಂ ನಿಸ್ತ್ರಿಂಶಮಿಪದಿನೋಲಗಿಪ ಜವನ ನಾಲಗೆಯ ಪೋಲ್ವೆಯಾದ ಸೌಗಂಧಕಮೆಂಬ ಖಡ್ಗರತ್ನಮುಂ, ತನ್ನ ಮಕುಟಕ್ಕೆ ಶಿಖಾಮಣಿಯಾಗಿ ಭುವನೈಕರಕ್ಷಾಮಣಿಯಪ್ಪ ಜಿನಚರಣನಖಕಿರಣಮಣಿಯೊಳೊಂದಿ ಪವಿತ್ರಮಪ್ಪೆನೆಂಬ ಚಿಂತೆಯಿಂ ಬಂದ ಚಿಂತಾಮಣಿಯೆಂಬಂತಿರ್ದ ಚೂಡಾಮಣಿಯೆಂಬ ಮಣಿರತ್ನಮುಂ, ಇಂತೀ ಏೞುಂ ಜೀವರತ್ನಂಗಳುಮಂ ಮತ್ತಮಯೋಧ್ಯ ಭದ್ರಮುಖ ಕಾಮವೃಷ್ಟಿ ಬುದ್ಧಿಸಾಗರ ವಿಜಯಪರ್ವತ ಪರಂಜಯ ಶಶಿಪ್ರಭಾ ಪರನಾಮಂಗಳಪ್ಪ ಸೇನಾಪತಿ ಸ್ಥಪತಿ ಗೃಹಪತಿ ಪುರೋಹಿತ ಗಜವಾಜಿ ಸ್ತ್ರೀರತ್ನಂಗಳೆಂಬೇೞುಂ ಜೀವರತ್ನಂಗಳುಮಂ ಕಾಳ ಮಹಾಕಾಳಪದ್ಮಪಾಂಡುಕ ನೈಸರ್ಪ ಮಾಣವಕ ಪಿಂಗಳ ಶಂಖ

ಚಕ್ರರತ್ನವೂ, ತನ್ನ ಮಹಿಮೆಯೊಡನೆ ಪೈಪೋಟಿ ನಡೆಯಿಸಿ ಸೋತು ಸೇವೆಗೆ ಬಂದಿಳಿದ ಆಕಾಶಮಂಡಲವೆಂಬಂತೆ ವಿಜೃಂಭಿಸುವ ವಜ್ರಮಯವೆಂಬ ಚರ್ಮರತ್ನವೂ, ತನ್ನ ಪುಣ್ಯಪ್ರಭಾವದಿಂದ ಪ್ರಯೋಗಿಸಿದ ಒಡನೆ ಬೆಟ್ಟ ಘಟ್ಟ ಹಳ್ಳ ಕೊಳ್ಳವೆಂಬ ತಗ್ಗು ದಿನ್ನೆಯಾದ ನೆಲವನ್ನೆಲ್ಲ ನಾಲ್ವತ್ತೆಂಟು ಯೋಜನಗಳವರೆಗೆ, ಸಮತಳವಾಗಿ ಮಾಡಿ ಸೈನ್ಯದ ಸಂಚಾರಕ್ಕೆ ಅಣಿಗೊಳಿಸುವ ದಂಡರತ್ನವೂ, ಸಂಗಸುಖವನ್ನು ಬಯಸಿ ಬರುವುದಕ್ಕಾಗಿ ಸಾಮ್ರಾಜ್ಯಲಕ್ಷ್ಮಿಯು ಮುಂದಾಗಿ ಕಳಿಸಿದ ಲೀಲಾ·ಕಮಲವೆನಿಸಿದ ಸೂರ್ಯಪ್ರಭವೆಂಬ ಛತ್ರರತ್ನವೂ, ತನ್ನ ಪರಿಶುದ್ಧವಾದ ಯಶಸ್ಸಿನ ಪ್ರಭಾವದಲ್ಲಿ ಮುಳುಗಿ ಹಗಲಲ್ಲಿಯೂ ಮೂಡುವ ಇಚ್ಛೆಯಿಂದ ನುಸುಳಿ ಬಂದ ಚಂದ್ರಬಿಂಬವೊ ಏನೊ ಎಂಬಂತೆ ಕಂಗೊಳಿಸುವ ಚಿಂತಾಜನನಿಯೆಂಬ ಕಾಕಿಣೀರತ್ನವೂ, ತನ್ನ ಶತ್ರುಗಳ ಜೀವನರಸವನ್ನು ಸವಿಯಬೇಕೆಂಬ ಬಾಯಾರಿಕೆಯಿಂದ ಖಡ್ಗ ವೇಷದಿಂದ ಬಂದು ಓಲಯಿಸುವ ಯಮನ ನಾಲಗೆಯಂತಿರುವ ಸೌಗಂಧಕವೆಂಬ ಖಡ್ಗರತ್ನವೂ, ತನ್ನ ಕಿರೀಟಕ್ಕೆ ಶಿರೋರತ್ನವಾಗಿ, ಲೋಕೈಕ ರಕ್ಷಾಮಣಿಯಾದ ಜಿನೇಶ್ವರನ ಕಾಲುಗುರ ಕಿರಣರತ್ನದಲ್ಲಿ ಹೊಂದಿಕೊಂಡು ಪವಿತ್ರವಾಗುವೆನೆಂದು ಯೋಚನೆಯಿಂದ ಬಂದ ಚಿಂತಾಮಣಿಯೊ ಏನೊ ಎಂಬಂತಿದ್ದ ಚೂಡಾಮಣಿಯೆಂಬ ಮಣಿರತ್ನವೂ_ಹೀಗೆ ಏಳು ಅಜೀವರತ್ನಗಳನ್ನು ಕುಮಾರನು ಪೂಜಿಸಿದನು. ಬಳಿಕ ಅಯೋಧ್ಯ, ಭದ್ರಮುಖ, ಕಾಮವೃಷ್ಟಿ, ಬುದ್ಧಿ ಸಾಗರ, ವಿಜಯಪರ್ವತ, ಪರಂಜಯ, ಶಶಿಪ್ರಭೆ ಎಂಬ ಬೇರೆ ಹೆಸರುಗಳುಳ್ಳ ಸೇನಾಪತಿ, ಸ್ಥಪತಿ, ಗೃಹಮಹತ್ತರ, ಪುರೋಹಿತ, ಆನೆ, ಕುದುರೆ ಹಾಗೂ ಸ್ತ್ರೀ ಎಂಬ ಏಳು ಜೀವರತ್ನಗಳನ್ನೂ, ಕಾಳ, ಮಹಾಕಾಳ, ಪದ್ಮ, ಪಾಂಡುಕ, ನೈಸರ್ಪ, ಮಾಣವಕ,

ಸರ್ಪರತ್ನಂಗಳೆಂಬೊಂಬತ್ತು ನಿಧಿಗಳುಮನನುಕ್ರಮದೊಳರ್ಚಿಸಿ ಬಂದು ತಂದೆಯ ಪಾದಾರವಿಂದಕ್ಕೆಱಗಲೊಡಂ,

ಭುವನದ ಕಣ್ಗೆ ಸಂದಣಿಸೆ ಕೌತುಕಮೊರ್ಮೆಯೆ ಸಾರ್ದತರ್ಕ್ಯವೈ ।
ಭವವಿಭುವಪ್ಪ ರಾಜ್ಯವಿಭವೋದಯದಿಂದೆ ವಿರಾಜಿಪಂಗೆ ದಿ ॥
ಟ್ಟಿ ವಿಷಮುಮಪ್ಪುದೆಂದು ಪದಪಿಂ ಪ್ರಭುಸೂನುಗೆ ತಾನೆ ರಕ್ಕೆಗ ।
ಟ್ಟುವ ತೆಱದಿಂದೆ ಕಟ್ಟಿದನಿಳಾಪತಿ ತನ್ನಧಿರಾಜಪಟ್ಟಮಂ ॥ ೧೦೨

ಅಂತು ಕಟ್ಟಿದ ಸಾರ್ವಭೌಮಪದವೀಪಟ್ಟಮನಾತ್ಮೀಯಲಲಾಟಪಟ್ಟದೊಳಲಂಕರಿಸಿ ತನ್ಮಹೋತ್ಸವದೊಳ್

ಇದೆ ದೇಯಂ ಮತ್ತದೇಯಂ ಬಗವೊಡಿದು ದಲೆಂಬೀವಿಚಾರಕ್ಕಣಂ ಸ
ಲ್ಲದೆ ಕೆಯ್ಗೇವಂದೊಡಂ ತನ್ನಯ ಕೆಲದೊಳದಾರಿರ್ದೊಡಂ ಕೊಟ್ಟುದಾರಿ
ದ್ರ್ಯದ ಮಾತಿಲ್ಲೆಲ್ಲಿಯುಂ ಬಾಳ್ಕೆಗಮಖಿಳಧರಾಚಕ್ರದೊಳ್ ತಾನೆನಿಪ್ಪ ।
ಗ್ಗದ ಮಾತಂ ಮಾಡಿದಂ ಚಕ್ರಧರನೊಸೆದು ಸಾಹಿತ್ಯವಿದ್ಯಾವಿನೋದಂ ॥

॥ಗದ್ಯಂ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಿಕೀರ್ತಿತ್ರೈವಿದ್ಯಾಚಕ್ರವರ್ತಿಪದಪದ್ಮನಿಧಾನದೀಪವರ್ತಿ

**ಶ್ರೀಮದಗ್ಗಳದೇವ**

ವಿರಚಿತಮಪ್ಪ

**ಚಂದ್ರಪ್ರಭಪುರಾಣದೊಳ್**

ಚಕ್ರೋತ್ಪತ್ತಿವರ್ಣನಂ

ಷಷ್ಠಾಶ್ವಾಸಂ

ಪಿಂಗಳ, ಶಂಖ, ಸರ್ಪರತ್ನಗಳೆಂಬ ಒಂಬತ್ತು ನಿಧಿಗಳನ್ನೂ ಅನುಕ್ರಮವಾಗಿ ಅರ್ಚಿಸಿ ಬಂದು ಕುಮಾರನು ತಂದೆಯ ಪಾದಗಳಿಗೆ ಬಾಗಿದನು. ೧೦೨. ಲೋಕದ ಕಣ್ಣಿಗೆ ಕೌತುಕವಾಗುವಂತೆ ಒಮ್ಮಿಂದೊಮ್ಮೆಲೆ ಒದಗಿಬಂದ ಅತರ್ಕ್ಯವಾದ ವೈಭವಕ್ಕೆ ಒಡೆಯನಾಗಿ ರಾಜ್ಯವೈಭವೋದಯದಿಂದ ಶೋಭಿಸುತ್ತಿರುವ ರಾಜಕುಮಾರನಿಗೆ ದೃಷ್ಟಿವಿಷವಾದೀತೆಂದು ತಾನೇ ಅದಕ್ಕೆ ರಕ್ಷೆ ಕಟ್ಟುವನೊ ಏನೊ ಎಂಬಂತೆ ಅರಸನು ಕುಮಾರನಿಗೆ ಅಧಿರಾಜಪಟ್ಟವನ್ನು ಕಟ್ಟಿದನು. ವ॥ ಹಾಗೆ ಕಟ್ಟಿದ ಸಾರ್ವಭೌಮ ಪದವಿಯ ಪಟ್ಟವನ್ನು ತನ್ನ ಹಣೆಯಲ್ಲಿ ಧರಿಸಿಕೊಂಡು ಆ ಮಹೋತ್ಸವದಲ್ಲಿ— ಇದು ಕೊಡಬಹುದಾದ ವಸ್ತು, ಇದು ಕೊಡಬಾರದುದು ಎಂಬ ವಿಚಾರಕ್ಕೆ ಅವಕಾಶವೆ ಇಲ್ಲದಂತೆ, ಕೈಗೆ ಏನು ಬಂದಿತೊ ಅದನ್ನೆಲ್ಲ ತನ್ನ ಬಳಿಗೆ ಯಾರು ಬಂದರೊ ಅವರಿಗೆಲ್ಲ ಕೊಟ್ಟು, ಸಮಸ್ತ ಭೂಮಂಡಲದಲ್ಲಿ ಬಡತನದ ಹೆಸರೆ ಇಲ್ಲ, ಎಲ್ಲರಿಗೂ ಸುಖದ ಬಾಳುವೆಯೆ ಎಂಬ ಮಾತನ್ನು ಚಕ್ರವರ್ತಿಯು ನೆಲೆಗೊಳಿಸಿದನು.

**ಆರನೆಯ ಆಶ್ವಾಸ ಮುಗಿದುದು.**

# ಸಪ್ತಮಾಶ್ವಾಸಂ

ಶ್ರೀಜಾಯಾಪತಿ ಧರೆಯಂ ।
ರಾಜನ್ವತಿಮಾಡಿ ತನ್ನ ಸೌರಾಜ್ಯಗುಣಂ ॥
ರಾಜಿಸೆ ನೆಗಟ್ದಂ ನೂತ್ನಮ ।
ನೋಜಾಕೃತಿ ಜೈನಜನಮನೋಹರಚರಿತಂ ॥ ೧

ಜನಮನಿತುಮುದ್ಧ್ರಸಿಂಹಾ ।
ಸನಮಂ ತಚ್ಚಕ್ರಿಯೇಱೆ ನೀರೇಜಿದುದಿಂ ॥
ದಿನಿತಿರದುದಯಗಿರೀಂದ್ರಮ ।
ನಿನನೇಱೆ ಸರೋಜಸಮಿತಿ ನಯವೇಱುವವೊಲ್ ॥ ೨

ಸುತನೊಳಜಿತಂಜಯಂ ವಿ ।
ಸ್ತೃತಮಂ ಭೂಭರಮನೆಯ್ದೆ ಯೋಜಿಸಿ ನಿಶ್ಚಿಂ ॥
ತತೆಯನೊಳಕೆಯ್ದನುಂತುಂ ।
ಪಿತೃಗೆ ಸುಪುತ್ರಂ ಸುಖೈಕಕಾರಣಮಲ್ತೇ ॥ ೩

ಚಕ್ರಮುಮಂ ಸಕಳೋರ್ವೀ ।
ಚಕ್ರಮುಮಂ ತೋಳೊಳಾಂತು ಸೊಗಯಿಸುತಿರ್ದಂ ॥
ಚಕ್ರಮುಮಂ ಕಳಹಂಸೀ ।
ಚಕ್ರಮುಮಂ ತೆರೆಯೊಳಾಂತು ಕೊಳನೊಪ್ಪುವವೊಲ್ ॥ ೪

## ಸಪ್ತಮಾಶ್ವಾಸಂ

೧. ಶ್ರೀಪತಿಯೂ, ನೂತನ ಮನ್ಮಥರೂಪನೂ, ಜೈನ ಜನ್ಯಮನೋಹರವಾದ ಚಾರಿತ್ರ್ಯವಂತನೂ ಆದ ಕುಮಾರನ ಭೂಮಿ ಇಂದು ಸುಯೋಗ್ಯ ರಾಜನನ್ನು ಪಡೆಯಿತೆಂಬ ಮಾತನ್ನು ನೆಲೆಗೊಳಿಸಿದನು. ೨. ಉದಯಪರ್ವತವನ್ನು ಸೂರ್ಯನು ಏರಿದೊಡನೆ ಕಮಲ ಸಮುದಾಯಕ್ಕೆ ಹಿಗ್ಗೇರುವಂತೆ ಆ ಚಕ್ರವರ್ತಿಯು ಸಿಂಹಾಸನವನ್ನು ಏರಿದೊಡನೆ ಸಮಸ್ತಜನರೂ ಉತ್ಸವವೇರಿದರು. ೩. ಅಜಿತಂಜಯನು ಘನವಾದ ಭೂಭಾರವನ್ನೆಲ್ಲ ತನ್ನ ಮಗನಿಗೆ ವಹಿಸಿ ನಿಶ್ಚಿಂತನಾದನು. ತಂದೆಯ ಸುಖಕ್ಕೆಲ್ಲ ಏಕೈಕ ಕಾರಣನಾಗುವವನು ಸುಪುತ್ರನೆ ಅಲ್ಲವೆ? ೪. ಚಕ್ರ (ಚಕ್ರವಾಕ) ವನ್ನೂ ಕಲಹಂಸಸಮೂಹವನ್ನೂ ತೆರೆಯಲ್ಲಿಟ್ಟುಕೊಂಡು ಸರೋವರವು ಒಪ್ಪುವಂತೆ, (ಸುದರ್ಶನ) ಚಕ್ರವನ್ನೂ, ಸಮಸ್ತ ಭೂ ಚಕ್ರ

ಅಂತಪೂರ್ವಸಾರ್ವಭೌಮಶ್ರೀಯೊಳಜಿತಸೇನಂ ನೆರೆದ ಪರಮೋತ್ಸವ ಮುತ್ಸವಾಂತರಮ ನಾಕರ್ಷಿಸೆ

ಪ್ರಭವಂ ನೀಳಘನಾಘನಂ ಸಮವಸೃತ್ಯುರ್ವೀತಳಂ ಮಿಂಚಿ ಸ ।
ಪ್ರಭರೈತೋರಣಮಾಲಿಕಲ್ ಸುರಿದ ಮಂದಾರಪ್ರಸೂನಂಗಳಾ ॥
ಗಭಿರಾಜನ್ನವಮೇಘಕಾಲಮೆನೆ ಬಂದಂ ದೇವದೇವಂ ಸ್ವಯಂ ।
ಪ್ರಭನುದ್ಯನ್ಮುನಿಚಾತಕಂ ಕಱೆಯುತುಂ ಧರ್ಮಾಮೃತಾಸಾರಮಂ ॥ ೫

ಆಗಳದಂ ಕೇಳ್ದು ಅಜಿತಂಜಯಂ ಚಕ್ರಧರಪುರಸ್ಸರಂ ಪರಮನ ಪದಪಯೋಜವಂದನಾನಂದದಿಂ ಬಂದು ಸಮವಸರಣಮನೈದಿ ಪಾದಲೇಪೌಷಧಿ ಪ್ರಭಾವದಿಂ ವಿಂಶತಿಸಹಸ್ರಸೋಪಾನಂಗಳನ ಸಂಗದಿಂದ ಮೇಱೆ ಗಂಧಕುಟಿಯಂ ಪೊಕ್ಕು ಪೀಠತ್ರಯಾಗ್ರನಿಷ್ಠಿತನಂ ಪರಮೇಷ್ಠಿಯಂ ಪ್ರದಕ್ಷಿಣಂಗೆಯ್ದು ಪುರೋಹಿತ ರತ್ನಾನೀಕನಿಧಿನಿಕರದತ್ತಮರ್ಚನಾಪರಿಕರಂಗಳಿಂದಮರ್ಚಿಸಿ

ಅತ್ಯಂತಭಕ್ತಿಯಿಂ ಪದ ।
ನತ್ಯಂತದೊಳೆಯ್ದೆ ತಾಳ್ದಿದಂ ತೀರ್ಥಕರ ॥
ಸ್ತುತ್ಯೋದ್ಯಮಮಂ ದಿಟದಿಂ ।
ಸ್ತುತ್ಯರೊಳಾರ್ ಸ್ತೋತ್ರಭಾವಮಂ ತಾಳ್ದದವರ್ ॥ ೬

(ಮಂಡಲ)ವನ್ನೂ ತನ್ನ ತೋಳಲ್ಲಿ ಧರಿಸಿ ಚಕ್ರವರ್ತಿ ಒಪ್ಪಿದನು. ವ॥ ಹೀಗೆ ಅಸದೃಶವಾದ ಚಕ್ರವರ್ತಿ ವೈಭವವನ್ನು ಅಜಿತಸೇನನು ತಾಳಿದ ಮಹೋತ್ಸವವು ಇನ್ನೊಂದು ಉತ್ಸವವನ್ನು ಬರಮಾಡಿಕೊಂಡಿತು– ೫. ತನ್ನ ಪ್ರಭೆಯೆ ನೀಲಮೇಘ, ಸಮವಸರಣವೆ ಭೂಮಿ, ಕಾಂತಿಮಯವಾದ ಚಿನ್ನದ ತೋರಣಮಾಲೆಯೆ ಮಿಂಚು, ಸುರಿಯುತ್ತಿರುವ ಮಂದಾರ ಪುಷ್ಪಗಳೆ ಆಲಿಕಲ್ಲುಗಳು– ಹೀಗೆ ಕಂಗೊಳಿಸುವ ಹೊಸ ಮಳೆಗಾಲವೆ ಬಂದಿತೊ ಏನೊ ಎಂಬಂತೆ ದೇವಾಧಿದೇವನಾದ ಸ್ವಯಂಪ್ರಭ ಮುನೀಶ್ವರನು ಯತಿಸಮೂಹದೊಂದಿಗೆ ಧರ್ಮಾಮೃತದ ಮಳೆಗರೆಯುತ್ತ ಬಂದನು. ವ॥ ಆಗ ಆ ವೃತ್ತಾಂತವನ್ನು ಕೇಳಿ ತಿಳಿದು ಅಜಿತಂಜಯನು ಚಕ್ರವರ್ತಿಯನ್ನು ಮುಂದಿಟ್ಟುಕೊಂಡು ಜಿನೇಶ್ವರನ ಪಾದಪೂಜೆಗೆಂದು ಸಮವಸರಣವನ್ನು ಸೇರಿ, ಪಾದಲೇಪೌಷಧಿಯ ಪ್ರಭಾವದಿಂದ ಇಪ್ಪತ್ತು ಸಾವಿರ ಮೆಟ್ಟಿಲುಗಳನ್ನು ಸುಲಭವಾಗಿ ಏರಿ ಗಂಧಕುಟಿಯನ್ನು ಹೊಕ್ಕು ಪೀಠತ್ರಯದ ಮೇಲೆ ಕುಳಿತ ಪರಮೇಷ್ಠಿಯನ್ನು ಪ್ರದಕ್ಷಿಣೆ ಮಾಡಿ ಪುರೋಹಿತ ರತ್ನನು ಕೊಟ್ಟ ಅನೇಕ ನಿಧಿದತ್ತವಾದ ಅರ್ಚನಾದ್ರವ್ಯಗಳಿಂದ ಪೂಜಿಸಿ– ಅತ್ಯಂತ ಭಕ್ತಿಯಿಂದ ತೀರ್ಥಂಕರನ ಸ್ತುತಿಗೆ ತೊಡಗಿದನು. ಸ್ತುತ್ಯ

ಜಯ ವಿಮಳಕೇವಳಾರ್ಕೋ ।
ದಯಗಿರಿವರ ಜಯ ದಯಾರಸಾರ್ಣವ ಜಯ ನಿ ॥
ರ್ವ್ಯಾಯ ಲಕ್ಷ್ಮೀನಿಳಯಾಂಬುಜ ।
ಜಯ ದಿವಿಜಕಿರೀಟದೀಪವರ್ತಿನಿಧಾನಾ ॥ ೭

ಕದಡಿದ ನೀರ್ ಕತಕದಿನ ।
ಲ್ಲದೆ ತಿಳಿಗುಮೆ ಪುದಿದನಾದಿಮಿಥ್ಯಾತ್ವದೆ ಮ ॥
ಟ್ಟಿದ ಮತಿಯದು ನಿನ್ನಿಂದ ।
ಲ್ಲದೆ ಪಜ್ಜಳಿಸುಗುಮೆ ಬೇಗಮಪಗತರಾಗಾ ॥ ೮

ಮನಮುಳ್ಳೊಡೆ ಜನಿಯಿಸುವಂ ।
ಮನಸಿಜನಾಯುಷ್ಯಮುಳ್ಳೊಡಂತಕನೆಯ್ತು ॥
ರ್ಪನೆನುತ್ತವನುಱಿದಂತವ ।
ರ್ಗಿನಿತೆಡೆಗುಡದಿರ್ದೆ ನೀನೆ ಕಲ್ ನಿರಪೇಕ್ಷಾ ॥ ೯

ಪೆಱರ್ಗೆಱಗೆಯಾರುಮಂ ನೀ ।
ನೆಱಗಿಪೆ ನೀಂ ಬಯಸೆಯೇನುಮಂ ಬಯಸಿದುದಂ ॥
ಪೆಱರ್ಗೀವೆ ಸಕಳಮಂ ನೀ ।
ನಱಿವೆಯದರ್ಕಱಿಯೆ ವಿಸ್ಮಯವೃತ್ತಾ ॥ ೧೦

ರನ್ನು ಕಂಡಾಗ ಸ್ತೋತ್ರಮಾಡಬೇಕೆಂಬ ಭಾವನೆ ಯಾರಿಗೆ ಹುಟ್ಟುವುದಿಲ್ಲ ? ೭. ಪರಿಶುದ್ಧವಾದ ಕೇವಲಜ್ಞಾನ ಸೂರ್ಯನಿಗೆ ಉದಯ ಪರ್ವತವಾದವನೆ ಜಯ! ದಯಾರಸ ಸಮುದ್ರನೇ ಜಯ ! ಮೋಕ್ಷಲಕ್ಷ್ಮಿಗೆ ನಿವಾಸವಾದ ಕಮಲವೇ ಜಯ! ದೇವತೆಗಳ ಕಿರೀಟಗಳನ್ನೆಲ್ಲ ಅಡಿಗಳಿಗೆ ಬಾಗಿಸಿಕೊಳ್ಳುವವನೇ ಜಯ! ೮. ಕದಡಾದ ನೀರು ಚಿಲ್ಲದ ಬೀಜವಿಲ್ಲದೆ ತಿಳಿಯಾಗುವುದೆ? ಅನಾದಿಯಾದ ಮಿಥ್ಯಾತ್ವದಿಂದ ತುಂಬಿದ ಬುದ್ಧಿ ನಿನ್ನಿಂದಲ್ಲದೆ ಬೇರೆಯವರಿಂದ ಶುದ್ಧವಾಗಿ ಬೆಳಗುವುದೆ? ೯, ಮನಸ್ಸೆಂಬುದು ಇದ್ದರೆ ಮನಸಿಜ (ಕಾಮಾಸಕ್ತಿ) ಹುಟ್ಟುವುದು; ಆಯುಷ್ಯ ವಿದ್ದರೆ ಮೃತ್ಯು ಬಂದೆರಗುವುದು ಹೀಗೆಂದು ಅವೆರಡನ್ನೂ ತೊಲಗಿಸಿ ಮನ್ಮಥನಿಗಾಗಲಿ ಯಮನಿಗಾಗಲಿ ಅವಕಾಶವನ್ನೆ ನೀಡದ ನೀನು ನಿರಪೇಕ್ಷ ನಾಗಿರುವೆ, ೧೦. ಹೆರವರಿಗೆ ನೀನು ಎರಗುವುದಿಲ್ಲ; ಎಲ್ಲರನ್ನೂ ಎರಗಿಸಿಕೊಳ್ಳುವೆ; ಏನನ್ನೂ ನೀನು ಬಯಸುವುದಿಲ್ಲ, ಬಯಸಿದುದನ್ನೆಲ್ಲ ಹೆರವರಿಗೆ ಒದಗಿಸುವೆ, ಸಕಲವನ್ನೂ ನೀನು ಅರಿತವನಾಗಿರುವೆ, ನಿನ್ನನ್ನು ಅರಿಯುವುದು ಮಾತ್ರ

ನಿನ್ನಂ ಪೊಗಟ್ದೀಕ್ಷಿಸುವಱೆ ।
ಪಿಂ ನಾಗೇಂದ್ರತೆಗಮಿಂದ್ರತೆಗಮಾಟಿಪುದಿ ॥
ನ್ನೆನ್ನ ಮನಮುಂತುಮಂತವು ।
ನಿನ್ನರ್ಹಂತತ್ವದಿಂದವಗ್ಗಳಮೆ ಜಿನಾ ॥ ೧೧

ಇದು ಚಿತ್ರಂ ವಜ್ರಾಂಗಂ ।
ಗೆ ದೃಢೀಕೃತಮಾದ್ರವಪ್ರಭಾವಂ ನಿಸ್ನೇ ॥
ಹದವಂಗೆ ಭುವನಭವನ ।
ಪ್ರದೀಪಕತೆ ನಿನಗೆ ಜಿನ ಜಗತ್ತ್ರಯಮಿತ್ರಾ ॥ ೧೨

ಪೆಱಪೆಱರನಾಪ್ತರೆಂದೆಂ ।
ದೆಱಗಿಯುಮಡಿಗಡಿಗೆ ಕೆಂಡಮಂ ಮಾಣಿಕಮೆಂ ॥
ದಱೆಯದೆ ಪಿಡಿದುಂ ಮಮ್ಮಲ ॥
ಮಱುಗುವುದಚ್ಚರಿಯೆ ಪರಮಪದವೀನಾಥಾ । ೧೩

ಭವ್ಯತೆ ಮಾೞ್ಕುಂ ನಿಜಸೇ ।
ವಾವ್ಯಸನಮನದಱನಱಿವು ಸಮನಿಕುಮಱಿವಿಂ ॥
ದವ್ಯಾಮೋಹತೆ ಸಾರ್ಗುಮ ।
ದವ್ಯಾಹತಸುಖಮನೀಗುಮನವಧಿಬೋಧಾ ॥ ೧೪

ಅಸಾಧ್ಯವಾಗಿರುವುದು. ಈ ನಿನ್ನ ಇರವು ವಿಸ್ಮಯಕರವಾದುದು. ೧೧. ನಿನ್ನನ್ನು ಹೊಗಳುವುದಕ್ಕಾಗಿ ನಾನು ನಾಗೇಂದ್ರನಾಗಬಾರದೆ? ನಿನ್ನನ್ನು ಮನವಾರೆ ನೋಡಲು ನಾನು ಇಂದ್ರನಾಗಬಾರದೆ? ಎಂದು ಮನಸ್ಸು ಹಾರೈಸುವುದು. ಜಿನೇಶ್ವರನೆ ನಿನ್ನ ಅರ್ಹಂತತ್ವಕ್ಕಿಂತಲೂ (ನಿನ್ನನ್ನು ಹೊಗಳುವ ಹಾಗು ನೋಡುವ) ಈ ಎರಡು ಶಕ್ತಿಗಳೇ ಶ್ರೇಷ್ಠವಾದುವು. ೧೨. ವಜ್ರಶರೀರಿಯಾದ ನಿನಗೆ (ದಯೆಯಿಂದ) ಕರಗುವ ಸ್ವಭಾವವುಂಟು; ನಿಸ್ನೇಹ (೧. ವಿರಾಗ, ೨. ಎಣ್ಣೆಯಿಲ್ಲದದು) ದಾದ ನಿನಗೆ ಸಮಸ್ತಲೋಕವನ್ನು (ಸುಖದಿಂದ) ಬೆಳಗುವ ಗುಣವಿದೆ. ಜಗತ್ರಯ ಮಿತ್ರನೇ, ಇದು ಸೋಜಿಗವಲ್ಲವೆ? ೧೩. ಮೋಕ್ಷಪದವಿಗೆ ಒಡೆಯನಾದ ಮಹಿಮನೇ, (ನಿನ್ನನ್ನು ಬಿಟ್ಟು) ಇನ್ನು ಯಾರು ಯಾರನ್ನೊ ಆಪ್ತರೆಂದು ಅಡಿಗಡಿಗೆ ಎರಗುವುದೆಂದರೆ, ಕೆಂಡವನ್ನು ಮಾಣಿಕವೆಂದು ಹಿಡಿದುಕೊಂಡು ಮರ ಮರ ಮರುಗಿದಂತೆ! ಇದರಲ್ಲಿ ಆಶ್ಚರ್ಯವೇನು? ೧೪. ಭವ್ಯತೆ ನಿಮ್ಮ ಸೇವೆಮಾಡುವ ಪ್ರವೃತ್ತಿಯನ್ನು ಹುಟ್ಟಿಸುತ್ತದೆ; ಅದರಿಂದ ಅರಿವು ಮೂಡುತ್ತದೆ; ಅರಿವಿನಿಂದ ಮೋಹ ಕಳೆದು ಹೋಗುತ್ತದೆ; ಅದರಿಂದ ಅವಿಚ್ಛಿನ್ನವಾದ ಸುಖ ಲಭಿಸುತ್ತದೆ.

ಸುವಿಧೃತರತ್ನತ್ರಯರ ।
ಪ್ಪ ವಿನೇಯರ್ ಭವಪಯೋಧಿಯಂ ದಾಂಟಲ್ಕೇ ॥
ಱುವ ಧರ್ಮಯಾನಪಾತ್ರ ।
ಕ್ಕವೆ ನೀನೇ ನೋಡೆ ಕರ್ಣಧಾರನೆ ಅರ್ಹಾ ॥ ೧೫

ಕಿವಿಗುಡಿತೆಗಳಿಂ ನಿಜವಿಮ ।
ಳವಚಃಪೀಯೂಷರಸಮನೀಂಟಿದನಂ ಪೊ ॥
ರ್ದುವುದಲ್ಲವು ತೃಷ್ಣೆಯಿನಾ ।
ದವಿಭೇದಂ ಬೞಿಕೆ ಮೋಹತಿಮಿರೋಗ್ರಕರಾ ॥ ೧೬

ಎಂದು ನುತಿಗೆಯ್ದು ಬೞಿಯಂ ।
ಮುಂದಣ್ಗೆನಿಸಂ ಮುಹುರ್ಮುಹುರ್ನುತಿಯಿಂ ಸಾ ॥
ರ್ತಂದು ಕಿರೀಟಮನೆಡಗೆ ।
ಯ್ಯಿಂದೋಸರಿಸುತ್ತುಮುಚಿತಕೋಷ್ಠದೊಳಿರ್ದರ್ಗಳ್ ॥ ೧೭

ಕುಳ್ಳಿರ್ದು

ಎಂತು ದುರಿತಂಗಳಿಂ ದುರಿ ।
ತಾಂತಕ ಸಂಸಾರಿ ಬದ್ಧನೆನಿಸುಗುಮದಱಿಂ ॥
ದೆಂತು ಗಡ ! ಮುಕ್ತನಕ್ಕುಮಿ ।
ದಂ ತಿಳಿಪುವುದೆಂದು ಪರಮನಂ ಬೆಸಗೊಂಡರ್ ॥ ೧೮

೧೫. ರತ್ನತ್ರಯವನ್ನು ದೃಢವಾಗಿ ಅಳವಡಿಸಿಕೊಂಡ ಭಕ್ತರು ಸಂಸಾರಸಾಗರವನ್ನು ದಾಟುವುದಕ್ಕೆ ಧರ್ಮವೆಂಬ ಹಡಗನ್ನು ಏರುತ್ತಾರೆ. ಆ ಹಡಗಿಗೆ ಅರ್ಹನೇ, ನೀನೇ ಕರ್ಣಧಾರನಾಗಿರುವೆ. ೧೬. ಮೋಹವೆಂಬ ಕತ್ತಲೆಯನ್ನು ಕಳೆದೋಡಿಸುವ ಸೂರ್ಯ ನೀನು, ನಿನ್ನ ಪರಿಶುದ್ಧವಾದ ಉಪದೇಶಾಮೃತವನ್ನು ಕಿವಿಯಿಂದ ಕುಡಿದವನಿಗೆ ತೃಷ್ಣೆಯಾಗಲಿ, ಅದರ ಫಲವಾಗಲಿ ಎಂದೂ ಸೋಂಕಲಾರವು. ೧೭. ಹೀಗೆ ಜಿನನನ್ನು ಸ್ತುತಿಸಿ ಬಳಿಕ ಪುನಃ ಪುನಃ ಮನದಲ್ಲಿಯೆ ಧ್ಯಾನಮಾಡುತ್ತ ಎಡಗೈಯಿಂದ ಕಿರೀಟವನ್ನು ಸರಿಸಿಕೊಳ್ಳುತ್ತ ಬಂದು ತಮಗೆ ಯೋಗ್ಯವಾದ ಸ್ಥಾನದಲ್ಲಿ ಕುಳಿತುಕೊಂಡು–೧೮. "ಪಾಪನಾಶಕನೆ, ಪಾಪಗಳಿಂದ ಸಂಸಾರಿಯು ಹೇಗೆ ಬದ್ಧನೆನಿಸುವನು? ಅದರಿಂದ ಅವನಿಗೆ ಬಿಡುಗಡೆ ಹೇಗೆ ದೊರಕುವುದು? ಇದನ್ನು ನಮಗೆ ತಿಳಿಸಿಕೊಡು ಎಂದು ಅವರು

ಬೆಸಗೊಳಲೊಡಂ

ಹಸ್ತವಿಕಾಸವಿಹೀನಮ ।
ಪಾಸ್ತೋಷ್ಠಸ್ಪಂದನಂ ಪ್ರಸನ್ನಂ ಮಧುರಂ ॥
ವಾಸ್ತವಯುತಮೊಗೆದುದು ಭ ।
ವ್ಯಸ್ತೋಮಪ್ರಮದಕಾರಿ ದಿವ್ಯನಿನಾದಂ ॥ ೧೯

ಅದೆಂತೆಂದೊಡೆ–

ಧೃತಮಿಥ್ಯಾದರ್ಶನನವಿ ।
ರತಿಯುಕ್ತಂ ಸತ್ಪ್ರಮಾದನಾತ್ತಕಷಾಯಂ ॥
ಯುತಯೋಗನೆನಿಪ ಜೀವಂ ।
ಸತತಂ ದೃಢಕರ್ಮಬಂಧದೊಳ್ ತಾಂ ತೊಡರ್ಗುಂ ॥ ೨೦

ಅಂತು ತೊಡರ್ದದಱ ವಶದಿಂ ।
ಸಂತತಮಿರಲೆಡೆಯೊಳತಿಕುಯೋನಿಗಳೊಳ್ ಜೀ ॥
ವಂ ತಿಱ್ಱನೆ ತಿಱಿವುದಯ ।
ಸ್ಕಾಂತದ ಬಟೆವಿಡಿದ ಕೃಷ್ಣಲೋಹದ ತೆಱದಿಂ ॥ ೨೧

ಅದು ಬಟಿಕೆ ಕಾಕತಾಳೀ ।
ಯದೆ ದೊರೆಕೊಂಡ ಪ್ರಮಾದದಿಂ ಮನುಜತೆವೆ॥
ತ್ತದಱಿಕೊಳಮುಪಶಾಂತಿಯ ಬ ।
ಟ್ಟೆದಪ್ಪಿ ಕಡೆಯೊಳ್ ಕುಯೋನಿಯೊಳ್ ಮತ್ತಾಟ್ಟುಗುಂ ॥ ೨೨

ಜಿನೇಶ್ವರನನ್ನು ಬೇಡಿಕೊಂಡರು. ಹಾಗೆ ಬೇಡಿಕೊಳ್ಳಲಾಗಿ–೧೯. ಕೈಗಳ ಚಲನೆಯಾಗಲಿ ತುಟಿಗಳ ಸ್ಪಂದನವಾಗಲಿ ಇಲ್ಲದ, ಪ್ರಸನ್ನವೂ ಮಧುರವೂ ಅರ್ಥಪೂರ್ಣವೂ ಆದ ದಿವ್ಯವಾಣಿಯಿಂದ ಭಕ್ತಸಮೂಹಕ್ಕೆ ಆನಂದವಾಗುವಂತೆ ಜಿನನು ನುಡಿದನು. ಅದೇನೆಂದರೆ_೨೦. ಮಿಥ್ಯಾದರ್ಶನದಲ್ಲಿ ತೊಡಕಿಕೊಂಡು, ವೈರಾಗ್ಯಭಾವನೆಯಿಲ್ಲದೆ (ಕ್ರೋಧ, ಮಾನ, ಮಾಯಾ ಮತ್ತು ಲೋಭವೆಂಬ ನಾಲ್ಕು) ಕಷಾಯಗಳಿಗೆ ಒಳಗಾದವನು ಕರ್ಮದ ಕಟ್ಟಿನಲ್ಲಿ ಸಿಕ್ಕಿಕೊಂಡು "ಬದ್ಧ"ನೆನಿಸುತ್ತಾನೆ. ೨೧. ಹೀಗೆ ತೊಡಕಿಕೊಂಡು, ಅದರ ವಶದಿಂದ ಸತತವಾಗಿ ನೀಚಜನ್ಮಗಳಲ್ಲಿ ಹುಟ್ಟಿಹುಟ್ಟಿ ಜೀವನು ಅಯಸ್ಕಾಂತದ ಎಳೆತಕ್ಕೆ ಸಿಕ್ಕಿದ ಕಬ್ಬಿಣದಂತೆ ತಿರ್ರನೆ ತಿರುಗುತ್ತಿರುವನು. ೨೨. ಆಮೇಲೆ ಕಾಕತಾಳೀಯ ನ್ಯಾಯದಿಂದ (ಅಕಸ್ಮಾತ್ತಾಗಿ) ಹೇಗೊ ಒಮ್ಮೆ ಕಷಾಯಕ್ಷಯವಾಗಿ ಮನುಷ್ಯಜನ್ಮ ಪ್ರಾಪ್ತವಾಗುವುದು. ಆಗ ಕೂಡ ಪಾಪಗಳನ್ನು ಕಳೆದುಕೊಳ್ಳದೆ ಮತ್ತೆ

ಇದನಱಿದು ಜನ್ಮಭೀರುಗ ।
ಳುದಾತ್ತಮನರಖಿಳಕರ್ಮವೈರಿವಿನಾಶ ॥
ಪ್ರದಮೆಂದಱಿಯರ್ ಸಜ್ಞಾ ।
ನದ ಸದ್ದರ್ಶನದ ಸಚ್ಚರಿತ್ರದ ಬಱಿಯಂ ॥ ೨೩

ಜ್ಞಾನಂ ಯಥಾರ್ಥಬೋಧಾ ।
ಧಾನಂ ದರ್ಶನಮುಪಾತ್ತಜಿನತತ್ತ್ವಶ್ರ ॥
ದ್ಧಾನಂ ಚರಿತಂ ಸುಕೃತನಿ ।
ಧಾನಂ ತಾನೆಂದು ಪೇೞ್ವರಲ್ತೆ ಮಹಾತ್ಮರ್ ॥ ೨೪

ಇವು ಸಕಲಕರ್ಮಮಂ ತವಿ ।
ಪುವು ಸಮುದಿತಮಾದೊಡುಂತುಮೊಂದೊಂದೆ ದಲಾ ॥
ದುವದಂತುಟೆ ಪಲರಿಂ ತೀ ।
ರ್ಚುವ ಕಾರ್ಯಮದೊರ್ವರೊರ್ವರಿಂ ತೀರ್ದಪುದೇ ॥ ೨೫

ಅಱಿಯಿಪುದು ಕರ್ಮಮುದಯಿಪ ।
ತೆಱನಂ ಜ್ಞಾನಂ ಚರಿತ್ರಮದನುಱಿಪುದಿವಂ ॥
ನೆಱಿಪುವುದಾದರ್ಶನಮಂ ।
ತಱಿವಿಂದುಪಯೋಗಶುದ್ಧಿಕಾರಣಮೆನಿಕುಂ ॥ ೨೬

ಜ್ಞಾನಮೆ ಕಿಡಿಸುಗುಮಘಸಂ ।
ತಾನಮನೆಂದೆಂದು ನುಡಿವ ನುಡಿ ಭಾವಿಪೊಡ ॥
ಜ್ಞಾನೋಕ್ತಂ ಭೈಷಜ್ಯ ।
ಜ್ಞಾನಮೆ ಮಾಡುಗುಮೆ ವೇದನಾನಿಗ್ರಹಮಂ ॥ ೨೭

ಹಾದಿತಪ್ಪಿ ನಡೆದ ಜೀವನು ಮರಳಿ ಹೀನಜನ್ಮಗಳಲ್ಲಿ ಮುಳುಗುವನು. ೨೩. ಸಂಸಾರಕ್ಕೆ ಭೀತರಾದ ವಿವೇಕಿಗಳು ಇದನ್ನರಿತು, ಸಮಸ್ತ ಕರ್ಮನಾಶಕ್ಕೆ ಸಮ್ಯಗ್‌ಜ್ಞಾನ ಸದ್ದರ್ಶನ ಹಾಗು ಸಚ್ಚಾರಿತ್ರಗಳೇ ಮೂಲಸಾಧನಗಳೆಂದು ನಂಬಿ ಅವುಗಳನ್ನು ಎಂದಿಗೂ ತೊರೆಯರು. ೨೪. ಯಥಾರ್ಥವಾದ ತಿಳಿವಳಿಕೆಯೆ ಜ್ಞಾನ; ಜಿನತತ್ತ್ವಗಳಲ್ಲಿ ದೃಢವಾದ ನಂಬಿಕೆಯಿಡುವುದೆ ದರ್ಶನ; ಸತ್ಕರ್ಮಾಚರಣೆಯೆ ಚಾರಿತ್ರ. ಇದು ಮಹಾತ್ಮರು ಹೇಳಿದ ಮಾತು. ೨೫. ಇವು ಒಂದೊಂದೆ ಆದರೆ, ಸಮಸ್ತಕರ್ಮಕ್ಷಯಕ್ಕೆ ಸಮರ್ಥವಾಗಲಾರವು. ಹಲವರಿಂದ ಈಡೇರಬೇಕಾದ ಕೆಲಸ ಒಬ್ಬರಿಂದಲೆ ಆದೀತೆ? ೨೬. ಕರ್ಮ ಹುಟ್ಟುವ ಬಗೆಯನ್ನು ತಿಳಿಸುವುದು ಜ್ಞಾನ; ಆ ಕರ್ಮೋದಯವನ್ನು ತಡೆಯುವುದು ಚಾರಿತ್ರ; ಇವೆರಡರ ಸಾಧನೆಗೆ ಕಾರಣವಾಗುವುದು ದರ್ಶನ. ೨೭. ಪಾಪ ಸಮೂಹವನ್ನೆಲ್ಲ ಜ್ಞಾನವೊಂದೇ ನಾಶಮಾಡುವುದೆಂಬುದು ಬುದ್ಧಿಗೇಡಿತನದ ಮಾತು.

ಎಂದು ಜಿನೇಶ್ವರಂ ಬೆಸಸೆ ಕೇಳ್ದಜಿತಂಜಯಭೂಮಿಪಾಲಕಂ ।
ಸಂದು ವಿರಕ್ತಿಗಾಗಳೆ ತದೀಯಸಮಕ್ಷದೆ ದೀಕ್ಷೆಗಂ ಮನಂ ॥
ದಂದನದಂತೆ ಭವ್ಯತೆ ನಿರಾಮಯಲಕ್ಷ್ಮಿಯ ದೂತಿಯಾಕೆಯೊಳ್ ।
ತಂದೊಡಗೂಡುವನ್ನಮೆಡೆಯೊಳ್ ನಿಲಲೀಗುಮೆ ಶುದ್ಧವೃತ್ತರಂ ॥ ೨೮

ಅಂತು ಬಗೆದನಂತರಂ ಸಮಾಶ್ರಿತದಿಗಂಬರಶ್ರೀಕನಾದಂ. ಇತ್ತ ಚಕ್ರವರ್ತಿ ಗೃಹೀತಸದ್ದರ್ಶನ ನನಂತದರ್ಶನನಂ ತ್ರಿಶುದ್ಧಿಯಿಂ ತ್ರಿಃಪ್ರದಕ್ಷಿಣಂಗೆಯ್ದು ವಿನಯದಿಂ ಬೀಱಳ್ಕೊಂಡು ವಿನತಾಪುರಮಂ ಪೊಕ್ಕು ಬೞಿಯಂ ಸಹಜವಿಜಿಗೀಷುವೃತ್ತನಪ್ಪುದಱಿಂ ದಿಗ್ವಿಜಯೋದ್ಯೋಗಮನೆತ್ತಿಕೊಂಡು ಮನೂನಪುಣ್ಯಂಗಸಾಧ್ಯಮಿಲ್ಲೆಂಬುದಂ ನನ್ನಿ ಮಾಡುವಂತೆ ಕೆಲವಾನುಂ ದಿವಸದೊಳ್

ಮೇದಿನಿಯಂ ಹಿಮಾದ್ರಿಯಿಷುಕಾರನಗಂ ಲವಣಾಂಬುರಾಶಿ ಕಾ ।
ಳೋದಕವಾರ್ಧಿ ಸೀಮೆಯೆನೆ ಸಾಧಿಸಿ ಬಾಹುಪರಾಕ್ರಮಂ ಸಮಾ ॥
ಸಾದಿತಚಕ್ರಭೃತ್ತ್ವಮಮನಾದಮೆ ಪೆರ್ಚಿಸೆ ಪೆರ್ಮೆವೆತ್ತನಿಂ ।
ತಾದಿಯ ಸಾರ್ವಭೌಮರಿನಖರ್ವಯಶೋನಿಧಿ ಕೌಶಳೇಶ್ವರಂ ॥ ೨೯

ಆ ರಾಜೇಂದ್ರನ ಜಯಯಾ ।
ತ್ರಾರಭಸದೊಳೊಗೆದ ಸೈನ್ಯರಜವರಿಭೂಭೃ ॥

ಕೇವಲ ಔಷಧಜ್ಞಾನವೊಂದರಿಂದಲೆ ರೋಗವನ್ನು ತಡೆಗಟ್ಟಲಾದೀತೆ?" ೨೮. ಹೀಗೆಂದು ಜಿನೇಶ್ವರನು ತಿಳಿಸಿ ಹೇಳಲಾಗಿ, ಅದನ್ನು ಕೇಳಿದ ಅಜಿತಂಜಯ ರಾಜನು ವೈರಾಗ್ಯವನ್ನು ತಾಳಿ ಆಗಿಂದಾಗಲೆ ಆ ಮುನಿಯ ಸಮಕ್ಷದಲ್ಲಿ ದೀಕ್ಷೆಗೆ ಮನಸ್ಸುಮಾಡಿದನು. "ಭವ್ಯತೆಯೆಂಬುದು ಮೋಕ್ಷಲಕ್ಷ್ಮಿಯ ದೂತಿ; ಶುದ್ಧ ಚರಿತ್ರರನ್ನು ಅವಳೊಡನೆ ಒಡಗೂಡಿಸುವವರೆಗೆ ಆ ದೂತಿ ನಿಲ್ಲಗೊಡುವಳೆ?" ವ॥ ಎಂದು ಯೋಚಿಸಿ ಆತನು ದಿಗಂಬರ ವ್ರತವನ್ನು ಕೈಕೊಂಡನು. ಇತ್ತ ಚಕ್ರವರ್ತಿಯು ಸಮ್ಯಗ್ದರ್ಶನವನ್ನು ಹೊಂದಿ, ಅನಂತ ಜ್ಞಾನಿಯಾದ ಜಿನನನ್ನು ತ್ರಿಕರಣ ಶುದ್ಧಿಯಿಂದ ಮೂರು ಸಲ ಪ್ರದಕ್ಷಿಣ ಮಾಡಿ, ವಿನಯ ಪೂರ್ವಕವಾಗಿ ಬೀಳ್ಕೊಂಡು ವಿನತಾಪುರಕ್ಕೆ ಮರಳಿದನು. ಬಳಿಕ ಜನ್ಮತಃ ವಿಜಿಗೀಷು ಸ್ವಭಾವದವನಾಗಿದ್ದುದರಿಂದ ದಿಗ್ವಿಜಯಕ್ಕೆ ಹೊರಟು, "ಮಹಾಪುಣ್ಯ ಶಾಲಿಗೆ ಅಸಾಧ್ಯವಾದುದೇ ಇಲ್ಲ" ಎಂಬುದನ್ನು ದಿಟಗೊಳಿಸುವಂತೆ ಕೆಲವು ದಿನಗಳಲ್ಲಿ_೨೯. ಹಿಮಾಚಲ, ಇಷುಕಾರಪರ್ವತ, ಲವಣಸಮುದ್ರ ಹಾಗು ಕಾಳೋದಕಸಾಗರ–ಇವೇ ನಾಲ್ಕು ಗಡಿಗಳಾಗಿರುವಂತೆ ಭೂಮಂಡಲವನ್ನೆಲ್ಲ ಗೆದ್ದಳು, ತನ್ನ ತೋಳ್ಬಲದಿಂದ ಚಕ್ರವರ್ತಿಪದಕ್ಕೆ ಅಭ್ಯುದಯವನ್ನುಂಟುಮಾಡುತ್ತ, ಮುನ್ನಿನ ಸಾರ್ವಭೌಮರಿಗಿಂತಲೂ ಹೆಚ್ಚಿನವನೆಂಬ ಅಖಂಡ ಖ್ಯಾತಿಯನ್ನು ಪಡೆದನು. ೩೦. ಆ ಚಕ್ರವರ್ತಿಯ ದಿಗ್ವಿಜಯಯಾತ್ರೆಯ ರಭಸದಲ್ಲಿ ಎದ್ದ ಸೈನ್ಯದ ಕಾಲ್ಧೂಳಿಯು ದೂರದಿಂದಲೆ ಶತ್ರುಸ್ತ್ರೀಯರ ಕಣ್ಣುಗಳಲ್ಲಿ

ಸ್ನಾರಿಯರ ಕಣ್ಗಳೊಳ್ ಕ ।
ಣ್ಣೀರಂ ದೂರದೊಳೆ ಮಾಱ್ಪುದೇಂ ಕೌತುಕಮೋ ॥ ೩೦

ಉಱಿದು ಘನಮಾನಗರ್ವಮ ।
ನೞಿಪಿ ನಿಜೈಶ್ವರ್ಯಪದವಿಗೆಱಗಿದರಂದೊ ॥
ಳ್ಪೞಿಯದವಂಗೆ ನೃಪಾಲರ್ ।
ಘೞಿಲನೆ ಜಿನಪತಿಗೆ ಭವ್ಯರೆಱಗುವ ತೆಱದಿಂ ॥ ೩೧

ಕಡಲ ತಡಿದಡಿಯೊಳಾತಂ ।
ನಡಿಸಿದ ಕಾಂಚನಜಗಜ್ಜಯಸ್ತಂಭಂಗಳ್ ॥
ಕುಡಿನಿಮಿರ್ದು ನಾಕನಿಳಯಮ ।
ನಡರ್ವ ಯಶೋಲತೆಗಡರ್ಪನಿಟ್ಟವೊಲೆಸೆಗುಂ ॥ ೩೨

ಅವನೊಳ್ ತೊಡರ್ದರಿಭೂಪರ ।
ಭವನಂಗಳ ಚಿತ್ರಪುತ್ರಿಕಾನಿವಹಕ್ಕೊ ॥
ಪ್ಪುವ ನವಚೀನಾಂಶುಕಮಾ ।
ದುವು ತರುಣೋರಗನಿಕಾಯನಿರ್ಮೋಕಂಗಳ್ ॥ ೩೩

ಪರನೃಪರಟ್ಟಿದ ಕಪ್ಪದ ।
ಕರಿಗಳ ಮದಜಳಮನುಂಡು ಕಂಪೇಱಿದ ತ ॥
ದ್ಧರಣೇಶಗೃಹಾಂಗಣದೊಳ್ ।
ಪರಿವರಿಯಾಡುವುವು ಪಱಿಮೆವಱಿಗಳ ಬಳಗಂ ॥ ೩೪

ನೀರನ್ನು ಹೊಮ್ಮಿಸುವುದು, ಇದೇನು ಸೋಜಿಗ! ೩೧. ತಮ್ಮ ಗರ್ವದರ್ಪಗಳನ್ನು ತೊರೆದು, ಇದ್ದ ಐಶ್ವರ್ಯವನ್ನು ಉಳಿಸಿಕೊಂಡರೆ ಸಾಕೆಂದು ಅರಸುಗಳು ಈತನ ಪಾದಗಳಿಗೆ ಶರಣಾದರು. ಜಿನಪತಿಯ ಪಾದಗಳಿಗೆ ಭಕ್ತಜನರು ಎರಗುವು ದಿಲ್ಲವೆ? ೩೨. ಸಮುದ್ರ ತೀರದೆಡೆಗಳಲ್ಲಿ ಆತನು ನೆಟ್ಟ ಚಿನ್ನದ ವಿಜಯ ಸ್ತಂಭಗಳು–ಕುಡಿ ಚಾಚಿ ಸ್ವರ್ಗಲೋಕಕ್ಕೆ ಹಬ್ಬಲೆಳಸುವ ಆತನ ಯಶೋಲತೆಗೆ ನಿರ್ಮಿಸಿದ ಹಂದರದ ಕಂಬಗಳಂತೆ ಶೋಭಿಸಿದುವು. ೩೩. ಅವನಿಗೆ ಎದುರಾಗಿ ಹೋರಾಡಿದ ಶತ್ರುರಾಜರ ಅರಮನೆಗಳಲ್ಲಿ ಪುತ್ಥಳಿಗಳ ಸಮುದಾಯಕ್ಕೆಲ್ಲ ಸೊಗಸಾದ ರೇಷ್ಮೆಯ ಹೊದಿಕೆಯನ್ನು ಅಳವಡಿಸಿದಂತೆ ಚಿಕ್ಕ ಚಿಕ್ಕ ಹಾವಿನ ಪೊರೆಗಳು ಹೊಚ್ಚಿಕೊಂಡವು. ೩೪. ಪರರಾಜರು ಕಪ್ಪಕಾಣಿಕೆಯಾಗಿ ಕೊಟ್ಟ ಆನೆಗಳ ಮದೋದಕವನ್ನು ಉಂಡುಂಡು ಪರಿಮಳವೇರಿದ ಆ ಚಕ್ರೇಶನ ಅರ ಮನೆಯ ಅಂಗಳದಲ್ಲಿ ಯಾವಾಗಲೂ ಮರಿದುಂಬಿಗಳು ಆವರಿಸಿಕೊಂಡು

ಜನಿಯಿಸುವರ್ಕನಂ ನೃಪನ ಚಕ್ರಮೆಗೆತ್ತಿಟಿವಂ ಪ್ರಭಾಸನಾ ।
ಸನದಿನುದನ್ವದುಗ್ರತಿಮಿಯಂ ಸಲೆ ತದ್ರುಚಿಯೆಂದು ಬೆರ್ಚುವಂ ॥
ಮನದೊಳೆ ಮಾಗಧಂ ಘನನಿನಾದಮನಾತನ ದಂಡರತ್ನಚಂ ।
ಡನಿನದಮೆಂದೆ ಕಟ್ಟು ಕಿಡೆವಂ ವಿಜಯಾರ್ಧಕುಮಾರನೀಗಳುಂ ॥ ೩೫

ಅದಲ್ಲದೆಯುಂ

ಚತುರಂಗಸ್ತನವಿನುತಂ ।
ಪ್ರತೀತನಯವತ್ಸವತ್ಸಲಂ ವಸ್ತುಪಯ ॥
ಸ್ಸ್ಥಿತಿಯಂ ಗೋಮಂಡಲಮಾ ।
ಕ್ಷಿತಿಪತಿಗಗೋರಂತೆ ಕಱೆವುದಿರುಳುಂ ಪಗಲುಂ ॥ ೩೬

ಅಂತೇಕಚ್ಛತ್ರೀಕೃತಭಾರತವರ್ಷನುಂ, ದ್ವಿಗುಣೀಕೃತಪ್ರಕೃತಿಪ್ರಮೋದನುಂ, ತ್ರಿವಿಧಶಕ್ತಿ ಪ್ರಯುಕ್ತನುಂ, ಚತುರ್ನೃಪವಿದ್ಯಾವಿಶಾರದನುಂ, ಪಂಚಗುರುಪರಿಚರ್ಯಾತತ್ಪರನುಂ, ಷಡಂಗಸೇನಾ ವಿರಾಜಮಾನನುಂ, ಸಪ್ತಾಂಗಸಂಪತ್ಸಮೇತನುಂ, ಅಷ್ಟದಿಗ್ವಯೋಪಾರ್ಜಿತಯಶನುಂ ನವನಿಧಿಸನಾಥ ಶ್ರೀನಿವಾಸನುಂ, ದಶಾಂಗಭೋಗಸಂಗತನುಮಾಗಿ.

ಆಡುತ್ತಲೆ ಇರುವುವು. ೩೫. ಮೂಡುವ ಸೂರ್ಯಬಿಂಬವನ್ನು ಕಂಡು ಚಕ್ರವರ್ತಿಯ ಚಕ್ರಾಯುಧವೆ ಬಂದಿತೆಂದು ಪ್ರಭಾಸನು ಪೀಠದಿಂದ ಇಳಿಯುವನು; ನೀರಲ್ಲಿಯ ತಿಮಿಯನ್ನು ಕಂಡು ಇದು ಚಕ್ರಾಯುಧದ ಹೊಳಪೆ ಎಂದು ಮಾಗಧನು ಮನದಲ್ಲಿಯೆ ಬೆಚ್ಚಿಬೀಳುವನು; ಮೋಡದ ಗರ್ಜನೆಯನ್ನು ಕೇಳಿ ಇದು ಚಕ್ರಿಯ ದಂಡರತ್ನದ ಧ್ವನಿಯೆಂದು ವಿಜಯಾರ್ಧಕುಮಾರನು ಕಳವಳಿಸುವನು. ಅದಲ್ಲದೆ–೩೬. ಚತುರಂಗವೆಂಬ ತನ್ನ ಮೊಲೆಗಳಿಂದ, ನೆಲೆಗೊಂಡ ನಯವೆಂಬ ಕರುವಿಗೆ ಒಲಿದು, ಐಶ್ವರ್ಯವೆಂಬ ಹಾಲನ್ನು ಭೂಮಿಯೆಂಬ ಹಸು ಹಗಲೂ ಇರುಳೂ ಆ ರಾಜನಿಗೋಸುಗ ಕರೆಯುತ್ತಲೆ ಇರುವುದು. ವ॥ ಹೀಗೆ ಸಮಸ್ತ ಭಾರತ ವರ್ಷವನ್ನು ಏಕಚ್ಛತ್ರದಿಂದ ಆಳುತ್ತ, ತನ್ನ ಪ್ರಜೆಗಳ ಸಂತೋಷ ವನ್ನು ಇಮ್ಮಡಿಗೊಳಿಸಿ, (ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿ ಎಂಬ) ಮೂರು ಶಕ್ತಿಗಳನ್ನು ಅಳವಡಿಸಿಕೊಂಡು ನಾಲ್ಕು ಬಗೆಯ ರಾಜವಿದ್ಯೆಗಳಲ್ಲಿ ನಿಪುಣನಾಗಿ, (ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧು ಗಳೆಂಬ) ಪಂಚಪರಮೇಷ್ಠಿಗಳ ಸೇವೆಯಲ್ಲಿ ನಿಷ್ಠನಾಗಿ, ಆರು ಬಗೆಯ ಸೈನ್ಯದಿಂದ ವಿಜೃಂಭಿಸುತ್ತ, (ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ ಮತ್ತು ಬಲ ಎಂಬ) ಸಪ್ತಾಂಗ ಸಂಪತ್ತುಗಳಿಂದ ಸಮೃದ್ಧನಾಗಿ ಅಷ್ಟದಿಕ್ಕುಗಳಲ್ಲಿಯೂ ಜಯವನ್ನು ಗಳಿಸಿ ಖ್ಯಾತಿವಂತನಾಗಿ. (ಕಾಳ, ಮಹಾಕಾಳ, ಪದ್ಮ ಮೊದಲಾದ) ಒಂಬತ್ತು ನಿಧಿಗಳಿಗೆ ಒಡೆಯನಾಗಿ, ಹತ್ತು ಬಗೆಯ ಅಂಗಭೋಗಗಳನ್ನು

ತನಗೆ ಕರಂ ಶಶಿಪ್ರಭೆಯೊಳಾದನುಕೂಲತೆಯೊಪ್ಪಿ ವಿಗ್ರಹೋ ।
ಜ್ಝನದೊಳಳಂಕೆಗೊಂಡು ಸಲೆ ಸದ್ರತಿಯೊಳ್ ನೆರೆದಿಂತು ನೂತನಂ ॥
ಮನಸಿಜನೆಂಬವೋಲಜಿತಸೇನರಥಾಂಗಧರಂ ಸಮಸ್ತಭೂ ।
ಜನದ ಮನಕ್ಕೆ ತನ್ನೊಳನುರಾಗಮನಾವಗಮುಂಟುಮಾಡುವಂ ॥ ೩೭

ಅಂತು ಸೊಗಯಿಸುವ ಚಕ್ರಧರಕುಸುಮಾಯುಧಂಗೆ ವಿಳಾಸಕೇಳೀಸಹಾಯಂ ಬರ್ಪಂತೆ

ನವಪುಷ್ಪೋತ್ಕರಪಾಂಡುಚೂತನಿವಹಂ ಶ್ವೇತಾತಪತ್ರಾಳಿ ಭೃಂ ।
ಗವಧೂಝುಂಕೃತಿ ಶಂಖಘೂತ್ಕೃತಿರುತಂ ಸನ್ಮಾಧವೀಕುಟ್ಮಲ ॥
ಸ್ತವಕಂ ಚಾಮರಮುದ್ಘಕೋಕಿಳರವಂ ಭೇರೀಘನಧ್ವಾನಮಾ ।
ಗೆ ವಸಂತಂ ಋತುಸಾರ್ವಭೌಮವಿಭವಂ ಮೆಯ್ವೆತ್ತದೇಂ ಬಂದುದೋ ॥ ೩೮

ಆ ಸಮಯದೊಳ್

ಸರಸೀವಾರಿಯೊಳಾದಮಟ್ಟಿಕೊಳುತುಂ ಮಾಣಿಕ್ಯ ಸಂದೋಹಪು ।
ಷ್ಪರಜೋವ್ರಾತಮನೋವದೊಟ್ಟಿಕೊಳುತುಂ ವಲ್ಲೀನಿವಾಸಂಗಳಂ ॥
ಪರಪುತ್ತುಂ ಮಳಯಾವನೀಧರಚರಂ ತಾಂ ಬಂದುದಾದಾನಬಂ ।
ಧುರಗಂಧಾಕುಳಭೃಂಗಮಂಗಜಗಜಂ ಬರ್ಪಂತೆ ಚೈತ್ರಾನಿಳಂ ॥ ೩೯

ಇನನುಟಿದಂ ವಸಂತನುಮಮರ್ಚಿದನಿತ್ತಲುಮಗ್ನಿಯಿತ್ತಸ ।
ಮ್ಮನಿಸಿದ ರಕ್ಕಸಂ ಬಟಿಕಮಾಂ ನಡುವೆಂಬಮೊಲಾದುದಾನೆ ಭಾ ॥

ಅನುಭವಿಸುತ್ತ–೩೭. ಶಶಿಪ್ರಭೆ ಸಂಪೂರ್ಣವಾಗಿ ಅನುಕೂಲತೆಯಿಂದ ಕಲಹವಿಲ್ಲದಂತೆ ಹೊಂದಿಕೊಂಡಿರಲಾಗಿ ಸುಖವಾಗಿ ಸಂಸಾರ ಮಾಡುತ್ತ, ಇವನೊಬ್ಬ ನವೀನ ಮನ್ಮಥನೆಂಬಂತೆ ಅಜಿತಸೇನ ಚಕ್ರವರ್ತಿಯು ಸಕಲ ಭೂಮಂಡಲದ ಜನರ ಮನಸ್ಸಿನಲ್ಲಿಯೂ ತನಗೆ ಅನುರಾಗವನ್ನು ಉಂಟುಮಾಡಿದನು. ವ॥ ಹೀಗೆ ಆ ಸುಖಿಸುತ್ತಿರುವ ಚಕ್ರವರ್ತಿ ಮನ್ಮಥನಿಗೆ ವಿಲಾಸಕ್ರೀಡೆಯ ಸಖನು ಬರುವಂತೆ–೩೮. ಹೊಸ ಹೂಗೊಂಚಲುಗಳಿಂದ ಬೆಳ್ಪೇರಿದ ಮಾಮರಗಳ ಸಮೂಹವೆ ಬೆಳ್ಗೊಡೆಗಳಾಗಿ, ಹೆಣ್ದುಂಬಿಗಳ ಗುಂಜಾರವವೆ ಮಂಗಳ ಶಂಖಧ್ವನಿಯಾಗಿ, ಅದಿರ್ಮುತ್ತೆಯ ಮೊಗ್ಗಿನ ಗೊಂಚಲುಗಳೆ ಚಾಮರವಾಗಿ, ಉಲ್ಲಸಿತವಾದ ಕೋಗಿಲಗಳ ಕುಹೂನಾದವೆ ಭೇರೀಧ್ವನಿಯಾಗಲಾಗಿ ವಸಂತಋತುವು ಸಾರ್ವಭೌಮ ವೈಭವದಿಂದ ಮೆರೆಯುತ್ತ ಬಂದಿತು. ಆ ಸಮಯದಲ್ಲಿ–೩೯. ಸರೋವರಗಳ ನೀರಲ್ಲಿ ಅದ್ದಿಕೊಳ್ಳುತ್ತ, ಹೂವಿನಹುಡಿಯನ್ನು ಮೈ ಮೇಲೆ ಒಟ್ಟಿಕೊಳ್ಳುತ್ತ, ಬಳ್ಳಿಗಳನ್ನು ಎಳೆದು ಹರಹುತ್ತ, ಮಧುರವಾದ ಪರಿಮಳದಿಂದ ಭೃಂಗಗಳನ್ನು ಉದ್ರೇಕಿಸುತ್ತ ಮಲಯಪರ್ವತದಿಂದ ಮನ್ಮಥನ ಮದ್ದಾನೆ ಬರುವಂತೆ ಚೈತ್ರಮಾಸದ ಗಾಳಿ ಬೀಸುತ್ತ ಬಂದಿತು. ೪೦. '.ಸೂರ್ಯನು ತೊಲಗಿದನು: ವಸಂತನೂ ಬಂದು ಅಕ್ರಮಿಸಿದನು: ಇತ್ತ (ಬಲಗಡೆಗೆ) ಅಗ್ನಿ, ಇತ್ತ (ಎಡಗಡೆಗೆ)

ಜನವೆನಿಸಿರ್ದೆನಂತಕನಡುರ್ಕೆಗೆ ಪೋ ಪೆಜತಾವುದೆಂಬ ದು ।
ರ್ಮನದೊಳೆ ದಕ್ಷಿಣಾಶೆ ನಿಡುಸುಯ್ವವೊಲಾದುದು ದಕ್ಷಿಣಾನಿಲಂ ॥ ೪೦

ಮತ್ತಂ

ಮಲಯಕ್ಷ್ಮಾಧರಮೇಖಳಾಪರಿಗತಶ್ರೀಖಂಡಷಂಡಂಗಳೊಳ್ ।
ನಲವಿಂದೊಂದಿ ಬಟಿಲ್ದ ಭೋಗಿಮಿಥುನಂಗಳ್ ಪೀರ್ದುಪೀರ್ದಾದಮ ॥
ಗ್ಗಲಿಸಿರ್ದಾತ್ಮಕೃಶತ್ವಮಂ ಸುರಭಿವಾತಂ ತೂಳ್ದಿದತ್ತುದ್ಯದು ।
ತ್ಕಲಿಕವ್ಯಾಕುಳಚೋಳಕೇರಳವಧೂನಿಶ್ವಾಸಸಂಪರ್ಕದಿಂ ॥ ೪೧

ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂತೆ ಬಂದು ನೀ ।
ನೆನಗೆ ವಸಂತನಾಗಮನಮಂ ನೆರೆ ಸೂಚಿಸಿ ಕೊಟ್ಟೆಯೆಂದು ನಂ ॥
ದನವನಲಕ್ಷ್ಮಿ ಕೀರರವದಿಂ ಪೊಗಟ್ದಿತ್ತ ಪಸಾಯದಚ್ಚಮು ।
ತ್ತಿನ ಪೊಸಪಚ್ಚಮಂತಳೆದವೋಲದಿರ್ಮುತ್ತೆ ಮುಗುಳ್ತುದೆತ್ತಲುಂ ॥ ೪೨

ಅದಲ್ಲದೆಯುಂ

ಅವಿರಳಮಾದ ಮೆಯ್ವಸುರೆ ಪಚ್ಚೆದಿಮಿರ್ ತಳಿರುಟ್ಟ ಪಟ್ಟೆಯೊ ।
ಪ್ಪುವ ತಿಳಕಂ ಮಧುವ್ರತಮಲರ್ದಲರ್ಗೊಂಚಲೆ ದಂಡೆ ಕೋಕಿಲಾ ॥
ರವಮದು ಬೀರಮದ್ದಳೆಯ ನಿಸ್ವನಮಾಗಿರೆ ಕಟ್ಟಿ ಬಂದ ಕಂ ।
ತುವ ಬಿರುದಂದದಿಂದೆ ಕರಮೊಪ್ಪಿದುವಂದಿನ ಬಂದ ಮಾವುಗಳ್ ॥ ೪೩

ರಾಕ್ಷಸ (ನಿರುತಿ)–ನಡುವೆ ನಾನು ಸಿಕ್ಕಿಕೊಂಡಂತಾಯಿತು; ಯಮದೇವನ ಆಕ್ರಮಣಕ್ಕೆ ನಾನೇ ಯೋಗ್ಯನೆನಿಸಿದೆನು. ಸಾಕು, ಇನ್ನೇನು ? ಎಂದು ನೊಂದ ಮನಸ್ಸಿನಿಂದ ದಕ್ಷಿಣ ದಿಕ್ಕು ನಿಟ್ಟುಸಿರಿಡುವುದೊ ಏನೊ ಎಂಬಂತೆ ತೆಂಕಣಗಾಳಿ ಬೀಸಿತು. ಮತ್ತು–೪೧. ಮಲಯ ಪರ್ವತದ ಸುಗಂಧದ ಗಾಳಿ ಬರುವಾಗ ಬಳಸಿನಲ್ಲಿರುವ ಶ್ರೀಗಂಧ ವೃಕ್ಷಗಳ ಸಂದಣಿಯಲ್ಲಿ ಸುತ್ತಿ ಸುತ್ತಿ, ಆಯಾಸಗೊಂಡು, ಸರ್ಪದಂಪತಿಗಳು ಹೀರಿ ಹೀರಿ ಕುಡಿದುದರಿಂದಾಗಿ ತೀರ ಬಡವಾಯಿತು; ಆದರೆ ವಿರಹವ್ಯಾಕುಲತೆಯಿಂದ ತಪ್ತರಾದ ಚೋಳ ಕೇರಳ ವಧುಗಳು ಇಡುವ ನಿಟ್ಟುಸಿರಿನ ಸಂಪರ್ಕವಾದೊಡನೆ ಆ ಗಾಳಿಯು ಬಡತನ ಹಿಂಗಿಹೋಯಿತು. ೪೨. "ನಿನಗೆ ವಸಂತದೂತಿಯೆಂಬ ಹೆಸರು ಸಾರ್ಥಕವಾಗಿ ಶೋಭಿಸುವುದು. ಏಕೆಂದರೆ ಮುಂಚಿತವಾಗಿ ಬಂದು ನೀನು ನನಗೆ ವಸಂತನ ಆಗಮನವನ್ನು ಚೆನ್ನಾಗಿ ಸೂಚಿಸಿಕೊಟ್ಟೆ" ಎಂದು ಉದ್ಯಾನಲಕ್ಷ್ಮಿಯು ಗಿಳಿಗಳ ಧ್ವನಿಯ ನೆವದಿಂದ ಹೊಗಳಿ ಬಹುಮಾನವಾಗಿ ಕೊಟ್ಟ ಅಚ್ಚಮುತ್ತಿನ ಹೊಸ ಆಭರಣವನ್ನು ಧರಿಸಿತೊ ಏನೊ ಎಂಬಂತೆ ಅದಿರುಗಂತಿಯ ಬಳ್ಳಿ ಬೆಳ್ಳಬೆಳ್ಳಗೆ ಮೈತುಂಬ ಹೂಬಿಟ್ಟಿತು. ಅದಲ್ಲದೆ–೪೩. ದಟ್ಟವಾದ ಮೈಯು ಹಸಿರುವರ್ಣವೆ ಪಚ್ಚೆಯ ಅಂಗಲೇಪನ; ತಳಿರುಗಳೆ ಪಟ್ಟೆಸೀರೆ; ದುಂಬಿಗಳೆ ತಿಲಕ; ಅರಳಿದ ಹೂಗೊಂಚಲೆ ಮುಡಿದುಕೊಂಡ ದಂಡೆ; ಕೋಗಿಲೆಯ ಕೂಜನವೆ ವೀರಮದ್ದಳೆಯ ನಾದವಾಗಲಾಗಿ ಮನ್ಮಥನ ಬಿರುದುಗಳನ್ನು

ಅರಲಂಬಿಂದೆಮ್ಮೊಳ್ ಮೆ ।
ಯ್ಗರೆದಿಸು ವಿರಹಿಗಳನೆಂದು ಕೈಗೊಟ್ಟುವು ಶಂ ॥
ಬರರಿಪುಗೆನ್ನದೆ ಮಾವಿನ ।
ಮರಗಳೆ ಕೈವಂದುವೆಂಬವಂ ಮರುಳಲ್ತೇ ॥ ೪೪

ನನೆಯಂಬಿನ ಪೊದೆಯಂ ಪೂ ।
ವಿನ ಗೊಂಚಲ್ ನೀಳ್ದ ಕರ್ವುವಿಲ್ಲಂ ಸೆಳೆಗೊಂ ॥
ಬನುಕರಿಸೆ ಬಾಲಚೂತಂ ।
ನೆನೆಯಿಸಿದುದು ಚಿತ್ತಭವನ ಕೀಲಿಕಾಳವನಂ ॥ ೪೫

ರತಿಗವತಂಸಮಾದ ತಳಿರಾವಮರಕ್ಕೊಳವೆನ್ನ ಬಿಲ್ಗೆ ಸಂ ।
ಗತಶರಮಾದ ಪೂಗುಡಿಗಳಾವಮರಕ್ಕೊಳವನ್ಯಪುಷ್ಪಮೂ ॥
ಕತೆಗಗದಂಗಳಾದ ಕೊನರಾವ ಮರಕ್ಕೊಳವೆಂದು ಮನ್ಮಥಂ ।
ಸ್ತುತಿಯಿಸಿ ಮಾಮರಕ್ಕೆ ಕುಜರಾಜಸಮಾಖ್ಯೆಯನಿತ್ತನಟ್ಟೆಯಿಂ ॥ ೪೬

ಎನಿಸಿ ಸೊಗಯಿಸುವ ನೂತನವಿಳಾಸೋಪೇತಚೂತಭೂಜಾತಂಗಳೊಳ್

ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀವಸಂ ।
ತಂ ತಲೆದೋಱಿತಿಂ ಹರನ ಕಣ್ಣುರಿಯಂ ನದಿಪಲ್ ಸಮರ್ಥನೋ ॥
ವಂತುಟುಗಂಡು ಸಂತಮಿರಿಮೊಲ್ದವರಂ ಬಿಡದೆಂದು ಬುದ್ಧಿವೇ ।
ಳ್ವಂತೆವೊಲಾದುದಧ್ವಗಜನಕ್ಕೆ ಕನತ್ಕಳಕೋಕಿಳಸ್ವನಂ ॥ ೪೭

ಕಟ್ಟಿಕೊಂಡು ಬಂದವೊ ಏನೊ ಎಂಬಂತೆ ಮಾವುಗಳು ಕಂಗೊಳಿಸಿದುವು. ೪೪. "ಹೂಬಾಣಗಳೊಡನೆ ನಮ್ಮಲ್ಲಿ ಅಡಗಿ ನಿಂತು ವಿರಹಿಗಳನ್ನು ಹೊಡೆ"ಯೆಂದು ಕಾಮನಿಗೆ ಮರೆಗೊಟ್ಟುವು ಎಂದು ಹೇಳಬೇಕಲ್ಲದೆ, ಮಾವಿನ ಮರಗಳು ಚಿಗುರಿದುವೆಂದು ಹೇಳಿದರೆ ಅದು ದಡ್ಡತನವಲ್ಲವೆ ? ೪೫. ಹೂವಿನ ಗೊಂಚಲು ಹೂಬಾಣಗಳ ಬತ್ತಳಿಕೆಯನ್ನೂ, ಸೆಳೆಗೊಂಬು ಕಬ್ಬಿನ ಬಿಲ್ಲನ್ನೂ ಅನುಕರಿಸಲಾಗಿ ಎಳಮಾವು ಮನ್ಮಥನ ಕೈಗಾವಲ ಸೇವಕನೊ ಏನೊ ಎಂದೆನಿಸಿತು. ೪೬. "ರತಿಗೆ ಭೂಷಣವಾಗುವ ಚಿಗುರು ಇನ್ನಾವ ಮರಕ್ಕುಂಟು ? ನನ್ನ ಬಿಲ್ಲಿಗೆ ಸಮರ್ಪಕ ಬಾಣಗಳಾಗತಕ್ಕ ಹೂಗುಡಿಗಳು ಇನ್ನಾವ ಮರಕ್ಕುಂಟು ? ಕೋಗಿಲೆಗಳ ಮೂಕತೆಗೆ ಔಷಧವಾಗುವ ಕಸುಗೊನರು ಇನ್ನಾವ ಮರಕ್ಕೆ ಇವೆ ?" ಎಂದು ಹೊಗಳಿ ಕಾಮದೇವನು ಮಾವಿನಮರಕ್ಕೆ ವೃಕ್ಷರಾಜನೆಂಬ ಬಿರುದನ್ನು ಪ್ರೀತಿಯಿಂದ ಇತ್ತನು. ವ॥ ಈ ಬಗೆಯ ಸೊಬಗುಳ್ಳ ನವವಿಲಾಸದ ಮಾವಿನ ಮರಗಳಲ್ಲಿ– ೪೭. "ಏನೂ (ಸಹಾಯ) ಇಲ್ಲದೆಯೆ ಮನ್ಮಥನು ಜಗತ್ತುಗಳನ್ನೆಲ್ಲ ತಿಗುರಿಯಂತೆ ತಿರುಗಿಸುತ್ತ ಇರುವನು. ಈಗ ವಸಂತ ಬೇರೆ (ಅವನಿಗೆ ಅನುಕೂಲವಾಗಿ) ಬಂದೊದಗಿತು. ಇನ್ನು ಶಿವನ ಕಣ್ಣಿನ ಉರಿಯನ್ನು ಆರಿಸಲು ಆತನು ಸಮರ್ಥನಾಗುವನು. ಅದನ್ನು ನೆನೆದು ನೀವು ಒಲಿದವರನ್ನು ಬಿಡದೆ ಹೊಂದಿಕೊಂಡಿರಿ" ಎಂದು ಹಾದಿಕಾರರಿಗೆ ಬುದ್ಧಿಹೇಳುವವೊ ಏನೊ ಎಂಬಂತೆ ಕೋಗಿಲೆಗಳ ಉಚ್ಚಧ್ವನಿ

ಮತ್ತಂ

ಅಱುತೆರ್ದೆಯಾಱೆ ಪೀರ್ದುಮಿನಿಯಳ್ಗಿನಿದೆಂದಿರದೀಂಟವೇೞ್ಪುಮ ।
ಟ್ಕಱ ಮಱಿಗಳ್ಗೆ ಮುಕ್ಕುಟಿಸಿ ತಂದೆರೆದುಂ ಗೆಳೆವಕ್ಕಿಯೆಲ್ಲಮಂ ॥
ನೆಱೆಬಟೆಯಟ್ಟಿ ನಲ್ಲುಣಿಸನೂಡಿಯುಮಾಮ್ರದತೋರವಣ್ಣೊಳೊಂ ।
ದಱ ರಸದಂತುಗಾಣದೆ ದಲೊಂದು ಶುಕಂ ಮಧುಸಮ್ಮದೋತ್ಸುಕಂ ॥ ೪೮

ತಳಿರ್ಗಳಿನೊರ್ಮೆಪೂಗುಡಿಯಿನೊರ್ಮೆಪಸುರ್ಮಿಡಿಯಿಂದಮೊರ್ಮೆ ಕಾ ।
ಯ್ಗಳಿನಿರದೊರ್ಮೆಪಣ್ಗಳಿನದೊರ್ಮೆ ಜನಕ್ಕೆ ಮನಃಪ್ರಮೋದಮಂ ॥
ಬಳೆಯಿಸಿ ಮಾಣ್ದುದಲ್ತು ಸವಿಯಂ ಕಿವಿಗೋಲಗಿಸಿತ್ತು ಮತ್ತೆ ಕೊ ।
ಕಿಳರವದೊರ್ಮೆಭೃಂಗರುತದೊರ್ಮೆ ಶುಕಸ್ವರದೊರ್ಮೆ ಮಾಮರಂ ॥ ೪೯

ಆ ಮನೋಜವಿಜಯಸಹಕಾರಿ ಸಹಕಾರಸಮೂಹಮದಲ್ಲದೆಯುಂ ಕುಸುಮಿತಾನೇಕಕುಸುಮ ವಲ್ಲರೀಪ್ರಸರವಿಸರದೊಳ್

ತಾನುಗುೞುತ್ತುಮಿರ್ಪ ಪೊಸಗಂಪುಮನಿತ್ತೆ ತೆಮಳ್ದಿಕೊಂಡು ಮಂ ।
ದಾನಿಳನುಯ್ಯುತಿರ್ಪ ತನಿಗಂಪುಮನಿತ್ತೆ ಮರಳ್ದು ಭೃಂಗಸಂ ॥
ತಾನಮುಣುತ್ತುಮಿರ್ಪ ನಱುಗಂಪುಮನಿತ್ತೆ ಗಡಂ ಪ್ರಫುಲ್ಲಮ ।
ಲ್ಲೀನವಪುಷ್ಪಮೋಗರದ ಕಂಪುಗಳಾಗರಮಾಯ್ತು ಸುಗ್ಗಿಯೊಳ್ ॥ ೫೦

ಹೊಮ್ಮಿತು, ಮತ್ತು–೪೮. ಬಾಯಾರಿ ಬಂದ ಗಿಳಿಯೊಂದು ಮಾವಿನ ತೋರವಾದ ಹಣ್ಣಿನಲ್ಲಿ ಎದೆಯಾರೆ ರಸವನ್ನು ಹೀರಿಕೊಂಡಿತು; ತನ್ನ ನಲ್ಲೆಗೆ ಚೆನ್ನಾಗಿ ಕುಡಿಯೆಂದು ಹೇಳಿತು; ಅಕ್ಕರೆಯಿಂದ ಬಾಯಿತುಂಬ ತುಂಬಿಕೊಂಡು ಹೋಗಿ ಮರಿಗಳಿಗೆ ಗುಟುಕಿಕ್ಕಿ ಮಿತ್ರ ಪಕ್ಷಗಳಿಗೆಲ್ಲ ಹೊಟ್ಟೆತುಂಬ ಸವಿಯೂಟ ಮಾಡಿಸಿತು. ಇಷ್ಟಾದರೂ ಆ ಓಂದೇ ಹಣ್ಣಿನ ರಸವನ್ನು ಮುಗಿಸುವುದಾಗಲಿಲ್ಲ. ೪೯. ಚಿಗುರುಗಳಿಂದ ಒಮ್ಮೆ, ಹೂಗುಡಿಯಿಂದೊಮ್ಮೆ, ಹಸಿರು ಮಿಡಿಗಳಿಂದ ಒಮ್ಮೆ, ಕಾಯಿಗಳಿಂದೊಮ್ಮೆ, ಹಣ್ಣುಗಳಿಂದೊಮ್ಮೆ, ಮಾವಿನಮರವು ಜನರಿಗೆ ಮನಃಸಂತೋಷವನ್ನುಂಟು ಮಾಡಿ, ಅಷ್ಟಕ್ಕೆ ಬಿಡದೆ, ಒಮ್ಮೊಮ್ಮೆ ಕೋಗಿಲೆಗಳ ಕೂಜನದಿಂದಲೂ, ಒಮ್ಮೊಮ್ಮೆ ದುಂಬಿಗಳ ಗುಂಜಾರವದಿಂದಲೂ, ಒಮ್ಮೊಮ್ಮೆ ಗಿಳಿಗಳ ಧ್ವನಿಯಿಂದಲೂ ಕಿವಿಗಳಿಗೆ ಸವಿಯನ್ನೂ ಒದಗಿಸಿತು. ವ॥ ಮನ್ಮಥವಿಜಯಕ್ಕೆ ನೆರವಾಗುವ ಆ ಮಾಮರಗಳಲ್ಲದೆ ಹೂತುಂಬಿದ ಹಲವಾರು ಹೂಬಳ್ಳಿಗಳ ಹಿರಿಯ ಸಮುದಾಯದಲ್ಲಿ–೫೦. ತಾನು ಸೂಸುತ್ತಿರುವ ಹೊಸ ಪರಿಮಳ ಎಷ್ಟೊಂದು! ಮೆಲುಗಾಳಿ ಬಂದು ಬಳಿದುಕೊಂಡು ಒಯ್ಯುವ ತನಿಗಂಪು ಎಷ್ಟೊಂದು! ಮರಳಿ ಮರಳಿ ದುಂಬಿವಿಂಡುಗಳು ಉಣ್ಣುತ್ತಿರುವ ನರುಗಂಪು ಎಷ್ಟೊಂದು! ವಸಂತಕಾಲದಲ್ಲಿ ಅರಳಿದ ಮಲ್ಲಿಗೆ ಹೂ

ಮಧುಲಕ್ಷ್ಮೀನೃತ್ಯಗೃಹಂ ।
ಮಧುವ್ರತಸ್ತ್ರೀನಿಕಾಯಮಾರ್ದ್ವೀಕಗೃಹಂ ॥
ಮಧುಮಿತ್ರಜಗಚ್ಚೈತ್ರಾ ।
ಯುಧಗೃಹಮೆನೆ ವಿಕಚವಿಚಕಿಳಂ ಸೊಗಯಿಸುಗುಂ ॥ ೫೧

ಬಳಸಿರ್ದ ವಿಟಪಿವಿಟಸಂ ।
ಕುಳಮಂ ಚೆಲ್ಲದೊಳೆ ನೋೞ್ಪ ಮಲ್ಲೀಲತಿಕಾ ॥
ಲಳನೆಯ ಕಟಾಕ್ಷರುಚಿಯೆನೆ ।
ಮಿಳಿರ್ವುವು ಬಂಡುಂಡು ಪಾಱುವಳಿಮಾಳಿಕೆಗಳ್ ॥ ೫೨

ಅದಲ್ಲದೆಯುಂ

ಬಿರಯಿಗಭಿಚಾರಮಪ್ಪಂ ।
ತಿರೆ ಮುಳಿಸಿಂ ಕಂತುಮಾಂತ್ರಿಕಂ ಬೇಳಲ್ಕೆಂ ॥
ದುರಿಪಿದ ಹೋಮಾಗ್ನಿಯ ಕೇ ।
ಸುರಿಯೆನಿಸಿದುವಸುಗೆಯೆಸೆವ ಪೊಸಪೊಗುಡಿಗಳ್ ॥ ೫೩

ಬನಮೆಂಬ ಮದನನೃಪನರ ।
ಮನೆಯೊಳ್ ಪೊತ್ತಿಸಿದ ದೀಪಮಾಲೆಯ ಮಾಡ ॥
ಕ್ಕನುರೂಪಮಾಗಿ ಪಣೆಯಿಂ ।
ಕೊನೆವರೆಗಂ ಪೂತುವರರೆ ಚಂಪಕನಿಕರಂ ॥ ೫೪

ಪರಿಪಕ್ವ ಸುಗಂಧಕ್ಕೆ ನೆಲೆಮನೆಯಾಯಿತು. ೫೧. ಇದೇನು ವಸಂತಲಕ್ಷ್ಮಿಯ ನರ್ತನ ಶಾಲೆಯೊ, ಹೆಣ್ಣು ದುಂಬಿಗಳ ಮಧುಪಾನದ ಗೃಹವೊ, ಮನ್ಮಥನು ಜಗಜ್ಜಯಕ್ಕಾಗಿ ಅಣಿಗೊಳಿಸಿದ ಶಸ್ತ್ರಾಗಾರವೊ ಎಂಬಂತೆ ಅರಳಿದ ಮಲ್ಲಿಗೆ ಕಂಗೊಳಿಸುವುದು. ೫೨. ತನ್ನನ್ನು ಬಳಸಿಕೊಂಡಿರುವ ಮರಗಳೆಂಬ ವಿಟಪುರುಷರನ್ನು ಒಯ್ಯಾರದಿಂದ ನೋಡುವ ಮಲ್ಲಿಕಾಲತೆಯೆಂಬ ಕಾಮಿನಿಯ ಕಡೆಗಣ್ಣ ಕಾಂತಿಯೊ ಏನೊ ಎಂಬಂತೆ ಮಕರಂದವನ್ನು ಉಂಡುಂಡು ಹಾರುವ ದುಂಬಿಗಳ ಸಾಲು ಒಪ್ಪುವುವು, ಅದಲ್ಲದೆ – ೫೩. ವಿರಹಿ ಜನಕ್ಕೆ ಮಾಟ ಮಾಡಲೆಂದು ಕೋಪದಿಂದ ಮನ್ಮಥನೆಂಬ ಮಂತ್ರವಾದಿಯು ಹೊತ್ತಿಸಿದ ಹೋಮಾಗ್ನಿಯ ಕೆನ್ನಾಲಗೆಗಳೆಂಬಂತೆ ಅಶೋಕವೃಕ್ಷದ ಹೊಸಕುಡಿಗಳು ಕಂಡುವು. ೫೪. ಉದ್ಯಾನವೆಂಬ ಕಾಮನ ಅರಮನೆಯಲ್ಲಿ ಹೊತ್ತಿಸಿಟ್ಟ ದೀಪಮಾಲೆಯ ಉಪ್ಪರಿಗೆಯೊ ಏನೊ ಎಂಬಂತೆ ತಳದಿಂದ ತುದಿವರೆಗೆ ಸಂಪಗೆಗಳು ಹೂತು ನಿಂತುವು.

ಎನಗೆ ಜಗತ್ತ್ರಯೀಜಯಶರಾವಳಿಗೀವಿಟಪೀತ್ರಯೀಪ್ರಸೂ ।
ನನಿಕರವಾದುವೆಂದು ಮದನಂ ಮನದೊಳ್ ಮದವೇಱಿ ಪೇಱಿದ ॥
ತ್ತನುಪಮಸೌರಭಂ ದೆಸೆಯನಾವರಿಪಂತು ಮರಲ್ದರಲ್ದ ಪೂ ।
ವಿನ ಪೊಸಗೊಂಚಲಂ ಕುರುವಕಂ ತಿಲಕಂ ವಕುಲಂ ನಿರಾಕುಲಂ ॥ ೫೫

ಅಲರ ಪೊಸಗಂಪಿನಿಂದೆಮ ।
ಗಲಂಪನಗ್ಗಲಿಸಿ ನೀನೆ ರಕ್ಷಿಪುದೆನುತುಂ ॥
ಬಲವಂದೆಱಗುವ ತೆಱದಿಂ ।
ಬಲವಂದೆಱಗಿದುವು ತುಂಬಿಗಳ್ ಪಾದರಿಯೊಳ್ ॥ ೫೬

ಪಲತೆಱದ ಕನಕಭಾಜನ ।
ಕುಲದಿಂ ಜಲಜಲಿಪ ಭಾಜನಾಂಗಮಹೀಜ ॥
ಕ್ಕಲಗಣಸೆನೆ ಕೊಸಗೆಸೆದುದು ।
ಮಲರ್ದಲರ್ದುಳ್ಳಲರ್ದ ಮಿಸುಪ ಪೊಸತಲರ್ದಲರಿಂ ॥ ೫೭

ಬಳಸಿದ ಲತೆಗಳ್ ಶಾಖಾ ।
ವಳಿಯೊಂದಱಿಕೊಳೊಂದು ತಾಗೆ ಸುರಿವರಲಿಂ ಕ ॥
ಣ್ಗೊಳಿಸಿದುವು ಚೈತ್ರದೊಳ್ ಗೊಂ ।
ದಳದಿಂ ಕೋಲ್ವೊಯ್ದು ನರ್ತಿಪಬಳಾವಳಿವೊಲ್ ॥ ೫೮

ಮತ್ತಮಾ ಮಹಾವನಪ್ರದೇಶದೊಳ್

೫೫. ಮೂರುಲೋಕಗಳನ್ನು ಗೆಲ್ಲುವುದಕ್ಕೆ ನನಗೆ ಈ ಮೂರು ಮರಗಳ ಹೂಗಳು ದೊರೆತುವೆಂದು ಮನ್ಮಥನು ಮನದಲ್ಲಿ ಹೆಮ್ಮೆಗೊಳ್ಳಲಾಗಿ, ದಿಕ್ಕುಗಳನ್ನೆಲ್ಲ ಆವರಿಸುವಂತೆ ಬಿರಿದರಳಿದ ಕುರವಕ, ತಿಲಕ ಮತ್ತು ಬಕುಳಗಳು ಅಸದೃಶವಾದ ಪರಿಮಳವನ್ನು ಬೀರುತ್ತಿದ್ದುವು. ೫೬. "ನಿನ್ನ ಹೂಗಳ ಹೊಸ ಪರಿಮಳದಿಂದ ನಮಗೆ ಹೇರಳವಾದ ಸಂತೋಷವನ್ನು ಒದಗಿಸಿ ನೀನೇ ಸಲಹು" ಎಂದು ಪ್ರದಕ್ಷಿಣೆ ಹಾಕಿ ಕಾಲಿಗೆ ಬೀಳುವುವೊ ಏನೊ ಎಂಬಂತೆ ದುಂಬಿಗಳು ಪಾದರಿಗೆ ಎರಗಿದುವು. ೫೭. ಹಲವಾರು ಬಗೆಯ ಚಿನ್ನದ ಪಾತ್ರೆಗಳಿಂದ ಥಳಿಥಳಿಸುವ ಭಾಜನಾಂಗ ಕಲ್ಪವೃಕ್ಷಕ್ಕೆ ಪ್ರತಿಸ್ಪರ್ಧಿಯೆಂಬಂತೆ ಅರೆ ಅರಳಿದ, ತುಂಬ ಅರಳಿದ, ಹೊಸತಾಗಿ ಅರಳಿದ ಹೂಗಳಿಂದ ಕೊಸಗು (ಬೆಟ್ಟದಾವರೆ) ಶೋಭಿಸಿತು. ೫೮. ಸುತ್ತಲೂ ಸಂದಣಿಸಿದ ಬಳ್ಳಿಗೊಂಬುಗಳು ಒಂದಕೊಂದು ತಾಗಲಾಗಿ ಸುರಿಯುವ ಹೂಗಳಿಂದ ಚೈತ್ರೋತ್ಸವದಲ್ಲಿ ಕೋಲು ಹಾಕಿ ಕುಣಿಯುತ್ತಿರುವ ಹೆಣ್ಣುಗಳ ಬಳಗವೊ ಏನೊ ಎಂಬಂತೆ ಬಳ್ಳಿಗಳು ಕಂಗೊಳಿಸಿದುವು. ವ॥ ಮತ್ತು ಆ

ವಿರಹಿಜನತರುಣಹರಿಣೋ ।
ತ್ಕರನಿರ್ದಾರಣಸಮುತ್ಥರಕ್ತಾತ್ತಪರಿ ॥
ಸ್ಫುರದತನುಚಮೂರುನಖಾಂ ।
ಕುರಂಗಳೆನಿಸಿದುವು ಮಿಸುಪ ಮುತ್ತದ ಮುಗುಳ್ಗಳ್ ॥ ೫೯

ಬಂದ ಬಸಂತಂಗಂದರ ।
ವಿಂದಿನಿ ಸೇಸಿಕ್ಕಲೆಂದು ನೆಗಪಿದ ಹಸ್ತ ॥
ಕ್ಕೇಂ ದೊರೆವಂದುವೊ ಜಲಲವ ।
ದಿಂದೆಸೆವುನ್ನಾಳವಿಕಚಕೋಕನದಂಗಳ್ ॥ ೬೦

ಕಿಱುಮಡುಗೊಂಡ ಬಂಡಿನೊಳಗೀಸಿ ಪೊದಟ್ಟಿಡಸಿರ್ದ ಕುತ್ತೆಸ ।
ಳ್ಗುಱುವದೊಳೆಯ್ದೆ ಮೆಯ್ಗರೆದು ಕೇಸರದೊಳ್ ನಲವಿಂ ಪೊರಳ್ದು ನೀ ॥
ಳ್ದೆಱಗಿದ ಕೀೞಸಳ್ವಡೆಯನೊಯ್ಯನೆ ಜಾಜಿ ಪರಾಗಪುಂಜದೊಳ್ ।
ಪಡೆವಡಿಸಿತ್ತು ಭೃಂಗಶಿಶು ನೀರಜದೊಳ್ ನಿಜಪಾಂಸುಕೇಳಿಯಂ ॥ ೬೧

ಮೃದುಕನಕಪದ್ಮಕೋಶಾ ।
ಗ್ರದೊಳೆಱಗಿದ ತುಂಬಿಯೆಸೆದುದಂಗಜರಾಜಾ ॥
ಸ್ಪದಕನಕಪದ್ಮಕೋಶಾ ।
ಗ್ರದ ಲಾಕ್ಷಾಮುದ್ರೆಯೆನೆ ಸರೋಜಾಕರದೊಳ್ ॥ ೬೨

ಮತ್ತಂ ಮದನನ ವದನದೊಡನೆಸಕಳತರುಮುಕುಳಮಲರೆಯುಂ, ರತಿಯ ಸೊಬಗಿನೊಡನೆ ಪುನ್ನಾಗಮುಜ್ಜ್ರಂಭಿಸೆಯುಂ, ಕಾಮುಕಜನದ ಜೀವಿತಾಶೆಯೊಡನೆ ಜಾತಿ ವಿತತಮಾಗೆಯುಂ, ಪಥಿಕನಿಕರ

ವಿಸ್ತೀರ್ಣವಾದ ಬನದಲ್ಲಿ– ೫೯. ವಿರಹಿಜನರೆಂಬ ಮರಿಜಿಂಕೆಗಳನ್ನು ಸೀಳಿ ಒಗೆದು ರಕ್ತ ಮೆತ್ತಿಕೊಂಡ ಮನ್ಮಥನೆಂಬ ಹುಲಿಯ ಉಗುರುಗಳೊ ಏನೊ ಎಂಬಂತೆ ಮುತ್ತದ ಮೊಗ್ಗುಗಳು ಕೆಚ್ಚಗೆ ಶೋಭಿಸಿದುವು. ೬೦. ಬಂದಿರುವ ವಸಂತನಿಗೆ ಸೇಸೆಯಿಡಲೆಂದು ಕಮಲಿನಿಯು ಎತ್ತಿದ ಕೈಗಳೋ ಎಂಬಂತೆ ಎತ್ತರವಾದ ದೇಟಿನ ಮೇಲೆ ಜಲಕಣಗಳನ್ನೊಡಗೊಂಡು ಅರಳಿ ನಿಂತ ಕೆಂದಾವರೆಗಳು ಒಪ್ಪಿದುವು. ೬೧. ಮಕರಂದರಸದ ಚಿಕ್ಕ ಮಡುವಿನಲ್ಲಿ ಈಸಿ ಬಂದು, ಕುಡಿಯೆಸಳುಗಳ ನಡುಗಡ್ಡೆಯಲ್ಲಿ ಅಡಗಿ, ಕೇಸರದಲ್ಲಿ ಹಿಗ್ಗಿನಿಂದ ಹೊರಳಾಡಿ, ಉದ್ದವಾಗಿ ಚಾಚಿಕೊಂಡಿದ್ದ ಕೆಳಗಿನ ದಳದ ಮೇಲೆ ಮೆಲ್ಲನೆ ಜಾರಿ ಹೂವಿನ ಹುಡಿಯಲ್ಲಿ ದೂಳಾಟವಾಡುತ್ತ ಮರಿದುಂಬಿ ಕಮಲದಲ್ಲಿ ಸಂತೋಷಪಟ್ಟಿತು. ೬೨. ಕಮಲ ಸರೋವರದ ಮೃದುವಾದ ತಾವರೆಯ ಬೀಜಕೋಶದ ತುದಿಗೆ ಎರಗಿ ಕುಳಿತ ದುಂಬಿಯನ್ನು ನೋಡಿದರೆ, ಅದು ಮನ್ಮಥರಾಜನ ಪದ್ಮವೆಂಬ ನಿಧಿಯ ಭರಣಿಗೆ ಇಟ್ಟ ಅರಗಿನ ಮುದ್ರೆಯೊ ಏನೊ ಎಂಬಂತೆ ಕಂಗೊಳಿಸಿತು. ವ॥ ಮನ್ಮಥನ ಮುಖದೊಡನೆ ಸಮಸ್ತ ವೃಕ್ಷಗಳ ಮೊಗ್ಗುಗಳೂ ಅರಳಿದುವು; ರತಿಯ ಸೊಬಗಿನೊಡನೆ ಸುರ ಹೊನ್ನೆಯು ವಿಕಾಸವಾಯಿತು; ಹಾದಿಕಾರರ ಹೃದಯಗಳೊಡನೆ ಹೊಂಗೆಮರಗಳು

ಹೃದಯದೊಡನೆ ತಳಿರ್ತ ತಮಾಲಲತೆ ಕಟ್ಟಿಲಿಸೆಯುಂ, ವಿಯೋಗಿಗಳ ಮೊಗಂಗಳೊಡನೆ ಬೆಳ್ದಿಂಗಳ ಳವಿಗಳಿದಬೆಳ್ಪನವಳಂಬಿಸೆಯುಂ, ಕರಣಗಣದ ತೇಜಃಪ್ರಸರದೊಡನೆ ಬಿಸಿಲ ಬಿಸುಪಸದಳಮಾಗೆಯುಂ ಮೃದುಳಹಿಂದೋಳರಾಗರವದೊಡನೆ ಲೀಲಾಂದೋಳಚೀತ್ಕಾರರವಮೊಗೆಯೆಯುಂ, ಜಿತೇಂದ್ರಿಯತೆಗೆ ಬಜೆದೆ ಜಬಿಚುವೆಗ್ಗರ ಜಡಾಶಯಂಗಳೊಡನೆ ಜಡಾಶಯಂಗಳೊಳಗೆಱಿಯಾಗೆಯುಂ, ಕಾದಲರ ಪುರುಡಿನೆಸಕದೊಡನೆ ಇರುಳ ಬಳಗಂ ಬಡಬಡಾಗೆಯುಂ, ಇಂತತಿಮನೋಹರವಾದ ವಸಂತಸವಯದೊಳ್

ಪುದಿಯೆ ಕವಿಲ್ತ ಕೇಸರದ ದೂಸಮಶೋಕೆಯ ವೀಣೆಯಂ ಪ್ರಿಯಾ ।
ಳದ ಗುಡಿ ನಾಗಚಂಪಕದ ಚಂಪೆಯಮಾಮ್ರದ ಕೊಂಚೆಯಂ ತಮಾ ॥
ಳದ ಪರಿವೆತ್ತ ಜೋಳಪರಿತಳ್ತದಿರ್ಮುತ್ತೆಯ ಕುಪ್ಪಮೊಪ್ಪಿ ತೋ ।
ಱಿದುವು ಮನೋಜರಾಜಶಿಬಿರಂಗಳಿವೆಂಬಿನೆಗಂ ವನಾಳಿಗಳ್ ॥ ೬೩

ಪೊಸಮಕರಂದಮೆಂಬ ಬೆಮರುಣ್ಮಿರೆ ತೆಂಬೆಲರೆಂಬ ಸುಯ್ಯೆಲರ್ ।
ಪಸರಿಸೆ ಗುಚ್ಛಮೆಂಬ ಮೊಲೆ ಚಪ್ಪಲದೊಪ್ಪೆ ಸಿತಾಬ್ಜಮೆಂಬ ಕಣ್ ॥
ಮಿಸುಪ ಪರಾಗಮೆಂಬ ನಸುಗೆಂಪಿನೊಳೊಂದಿರೆ ನಾಡೆ ಕಣ್ಗೆಸೋ ।
ಭಿಸಿದಳಲಂಪಿನಿಂ ನೆರೆದು ನಂದನಲಕ್ಷ್ಮಿ ವಸಂತಕಾಂತನೊಳ್ ॥ ೬೪

ಕತ್ತಲೆ ಕವಿದುವು; ವಿರಹಿಗಳ ಮೊಗಗಳೊಡನೆ ಬೆಳ್ದಿಂಗಳು ಮಿತಿಮೀರಿ ಬೆಳ್ಳಗಾಯಿತು; ಕರಣಗಳ (?) ತೇಜದೊಡನೆ ಬಿಸಿಲಿನ ಕಾವು ಅತಿಶಯವಾಯಿತು; ಮಧುರವಾದ ಹಿಂದೋಳ ರಾಗದೊಡನೆ ಜೀಕುವ ಉಯ್ಯಾಲೆಗಳ ಚೀತ್ಕಾರಧ್ವನಿಯೂ ಹೊಮ್ಮಿತು; ತಾವು ಇಂದ್ರಿಯ ನಿಗ್ರಹಿಗಳೆಂದು ಜಂಬ ಕೊಚ್ಚಿಕೊಳ್ಳುವ ಅಜ್ಞಾನಿಗಳ ವೊದ್ದು ಬಯಕೆಯೊಡನೆ ಜಲಾಶಯಗಳು, ಕೊರಗಿ ತಳಗಂಡುವು ; ನಲ್ಲ ನಲ್ಲೆಯರ ಹುರುಡಿನ ಕ್ರೀಡೆಗಳೊಡನೆ ರಾತ್ರಿಗಳು ಸೊರಗಿ ಚಿಕ್ಕಚಿಕ್ಕವಾದುವು; ಹೀಗೆ ತುಂಬ ಮನೋಹರವಾದ ವಸಂತಕಾಲದಲ್ಲಿ–೬೩. ಬಕುಳವೃಕ್ಷದ ಕಪಿಲವರ್ಣದ "ದೂಸ", ಅಶೋಕವೃಕ್ಷದ "ವೀಣೆಯ", ವೊರಲೆಮರದ "ಗುಡಿ", ನಾಗಸಂಪಗೆಯ "ಚಂಪೆಯ", ಮಾವಿನ "ಕೊಂಚೆಯ", ಹೊಂಗೆಮರದ ವಿಶಾಲವಾದ "ಚೋಳಪರಿ", ಮತ್ತು ಅದಿರು ಗಂತಿಯ "ಕುಪ್ಪ"ಗಳು ಒಪ್ಪಲಾಗಿ ಕಾಮರಾಜನ ಸೈನ್ಯಶಿಬಿರಗಳೊ ಏನೊ ಎಂಬಂತೆ ಬನಗಳು ತೋರಿದುವು. (ದೂಸ, ವೀಣೆಯ ಮೊದಲಾದುವು ಸೈನ್ಯದ ಬಿಡಾರಕ್ಕೆ ರಚಿಸಿದ ಬೇರೆಬೇರೆ ಆಕಾರದ "ಡೇರೆ"ಗಳು ಯಾವುದಕ್ಕೆ ಯಾವ ಆಕಾರವೆಂಬುದು ಮಾತ್ರ ಖಚಿತವಾಗಿ ತಿಳಿಯದು.) ೬೪. ಹೊಸ ಮಕರಂದವೆಂಬ ಬೆವರು ಹೊಮ್ಮಿ, ತೆಂಕಣಗಾಳಿಯೆಂಬ ಉಸಿರಗಾಳಿ ಹೊರಟು, ಹೂಗೊಂಚಲೆಂಬ ವೊಲೆ ಚಪ್ಪಟೆಯಾಗಿ, ಬೆಳ್ದಾವರೆಯೆಂಬ ಕಣ್ಣುಗಳು ಪುಷ್ಪಪರಾಗವೆಂಬ ನಸುಗೆಂಪನ್ನು ತಾಳಿರಲಾಗಿ, ನಂದನಲಕ್ಷ್ಮಿ ವಸಂತ ವಲ್ಲಭನೊಡನೆ ರತಿಕ್ರೀಡೆಯಾಡಿದ ಚಿಹ್ನೆಗಳನ್ನು ಹೊತ್ತು ಸಂತಸಪಡುತ್ತ

ಪರಿಕಿಸೆ ಕಂಧರದ್ವಯಸಮಾಯ್ತು ವಿಭಾಸುರಕೇಸರಾಳಿಯೊಳ್ ।
ಕರತರಣೀಯಮಾಯ್ತು ಪೊಸಮಲ್ಲಿಗೆಯೊಳ್ ಸಲೆ ನಾವ್ಯಮಾಯ್ತು ಚಂ ॥
ಚುರಮುಚುಕುಂದಸಂಚಯದೊಳಂತವಕಾರ್ಯಮದಾಯ್ತು ಮುಕ್ತ ಪಂ ।
ಕರುಹದೊಳಾವಗಂ ಮಧುಪಮಾಳಿಗೆ ಮಾಧವದೊಳ್ ಮಧೂತ್ಕರಂ ॥ ೬೫

ಅದಲ್ಲದೆಯುಂ

ಓರೆವರಿದಪುದು ಗಗನಾಂ ।
ಭೋರಾಶಿಯ ನಾವೆ ತೆಂಕಣೆಲರೂದಿದುದೆಂ ॥
ಬೀರಾವಮೊದವೆ ನಡೆದುದು ।
ಸೌರಂ ರಥಮುತ್ತರಾಯಣಕ್ರಮದಿಂದಂ ॥ ೬೬

ಪೋದೊಲವೆಯ್ದೆ ಮತ್ತೆ ಪೊಸತಾದುವು ನೀರಸವಾಗಿ ಗಡ್ಡೆಯಂ ।
ಬೋದ ಮನಂ ಕೊನರ್ತುವಳಿವಾತುಗಳಿಂ ಮುಳಿದಿರ್ದ ನಲ್ಲರೊಂ ॥
ದಾದರನಂಗಕೇಳಿಗನುರೂಪಮೆನಿಪ್ಪ ವಿಳಾಸದೊಳ್ ಜನ ।
ಕ್ಕಾದರವಾದುದಾದಮೆ ಪಸಾದದೆ ಬಂದ ಬಸಂತಮಾಸದೊಳ್ ॥ ೬೭

ತತ್ಸಮಯದೊಳ್

ಕೃತವೃಕ್ಷಾರೋಹಣಪ್ರಸ್ತುತನನವಿರಳಾನಂಗವಾರಿಪ್ಲವಾಂತ ।
ರ್ಗತನಂ ಸಂಭೋಗಲೀಲಾಕುಳಕರುಣನಿನಾದಾಸ್ಯನಂ ವಲ್ಲಭಾನು॥
ಪ್ಲಿತವಿಸ್ಪಷ್ಟೌಪರಿಷ್ಟವ್ಯತಿಕರವಿಧೃತಸ್ತ್ರೀತ್ವನಂ ಬಿಟ್ಟು ಗರ್ವೋ ।
ದ್ಧತನಂ ಕೈವೋಗದೆಚ್ಚಂ ಪಡಲಿಡೆ ಬಹಳಾಕ್ಷೇಪದಿಂದಿಕ್ಷುಚಾಪಂ ॥ ೬೮

ಕಂಗೊಳಿಸಿದಳು. ೬೫. ವಸಂತಮಾಸದಲ್ಲಿ ಪುಷ್ಪಮಕರಂದವು ದುಂಬಿಗಳಿಗೆ ಬಕುಳ ಪುಷ್ಪಗಳಲ್ಲಿ ಕೊರಳುಮಟ್ಟವಾಯಿತು; ಹೊಸಮಲ್ಲಿಗೆಯಲ್ಲಿ ಈಸಿಹೋಗುವಷ್ಟಾಯಿತು; ಮುಚುಕುಂದಗಳಲ್ಲಿ ನಾವೆಯಿಡುವಷ್ಟಾಯಿತು; ಅರಳಿದ ತಾವರೆಯಲ್ಲಿ ಮುಳುಗಿ ಸ್ನಾನ ಮಾಡುವಷ್ಟಾಯಿತು, ಅದಲ್ಲದೆ–೬೬. ದಕ್ಷಿಣದ ಗಾಳಿ ಬೀಸಿ ಆಕಾಶ ಸಮುದ್ರದಲ್ಲಿಯ ನಾವೆ ಓರೆಯಾಗಿ ಹೋಯಿತು ಎಂದು ಕೂಗಿಕೊಳ್ಳುವಂತೆ ಸೂರ್ಯರಥವು ಉತ್ತರಾಯಣದಲ್ಲಿ ಸಾಗಿತು. ೬೭. ಮಸುಳಿದ ಒಲವು ಮತ್ತೆ ಹೊಸತಾದುವು; ನೀರಸವಾಗಿ ಕೊರಡಾಗಿದ್ದ ಮನಸ್ಸು ಮತ್ತೆ ಚಿಗುರಿಟ್ಟುವು; ಸಣ್ಣಮಾತಿಗೆ ಮುನಿಸಿಕೊಂಡಿದ್ದ ನಲ್ಲನಲ್ಲೆಯರು ಮತ್ತೆ ಒಂದುಗೂಡಿದರು; ಹೀಗೆ ಪ್ರಸನ್ನವಾಗಿ ಬಂದ ವಸಂತಮಾಸದಲ್ಲಿ ಮನ್ಮಥಕ್ರೀಡೆಗೆ ಅನುಕೂಲವಾದ ವಿಲಾಸವಾಡಲು ಜನಕ್ಕೆ ಮನಸ್ಸಾಯಿತು. ಆ ಸಮಯದಲ್ಲಿ–೬೮. "ವೃಕ್ಷಾರೋಹಣ" ವೆಂಬ ರತಿಕ್ರೀಡೆಯ ಆಸನದಲ್ಲಿ ನಿರತನಾದವನನ್ನೂ, ಎಡೆಬಿಡದೆ ಮದನದ್ರವವನ್ನು ಸುರಿಸುವಲ್ಲಿ ತೊಡಗಿದವನನ್ನು, ಸುರತ ಕ್ರೀಡೆಯ ವಿವಿಧ ಧ್ವನಿಗಳನ್ನು ಹೊರಡಿಸುತ್ತ ಸುಖಿಸುತ್ತಿರುವವನನ್ನೂ, ತನ್ನ ನಲ್ಲೆಯನ್ನು ಮೇಲೇರಿಸಿಕೊಂಡು "ಔಪರಿಷ್ಟಕ" ರತಿಕ್ರೀಡೆಯಲ್ಲಿ ನಿರತನಾದವನನ್ನು ಬಿಟ್ಟು ಗರ್ವಿಷ್ಠನಾಗಿದ್ದವನನ್ನು ಕಂಡು ಅತ್ಯಂತ ಕ್ರುದ್ಧನಾಗಿ ಮನ್ಮಥನು ಎಡೆಬಿಡದೆ

ಪಗೆಯಂ ಸಂಪಗೆಯೀಶನೊಳ್ ನೆರಪಲಾದತ್ತೊಳ್ಪನೋರಂತೆ ಮ ।
ಲ್ಲಿಗೆ ನಮ್ಮಲ್ಲಿಗೆ ಸಾರ್ಚಲೆಯ್ದಿದುದು ಮತ್ತಂ ಮತ್ಪ್ರಿಯಾಚಿತ್ತವೃ ॥
ತ್ತಿಗೆ ಕಂಪಾದರಿಪಂತು ಪಾದರಿಯೊಳಾದತ್ತಣ್ಣ ನಿನ್ನೊಂದು ಪೊ ।
ರ್ದುಗೆಯಿಂದೆಂದುವಸಂತನೊಳ್ ನುಡಿದುತಾನೇಂ ಕಂತುಮುಯ್ಯಾಂತನೋ ॥ ೧೯

ಅಂತು ಕಾಮಕಾಮದುಘೆಯಪ್ಪ ಸುರಭಿಯಂದದೆ ಬಂದ ಸುರಭಿಸಮಯದ ಶ್ರೀಯ ಬರವಂ ವನಮಹತ್ತರನ ಬಿನ್ನಪದಿನಜಿತಸೇನ ಚಕ್ರವರ್ತಿಯಱಿದು ಕೌತುಕಾಯಮಾನಮಾನಸಂ ಮನೋವಲ್ಲಭೆಗೆ ಶಶಿಪ್ರಭಾಮಹಾದೇವಿಗಱಿಪಲೆಂದು ಕರುಮಾಡದಿಂದಿೞಿದು ರಾಣಿವಾಸಕ್ಕೆ ಬಂದು ಪಜ್ಜಳಿಪ ಪಳುಕಿನ ಸಜ್ಜೆವನೆಯ ಮುಂದಣೆತ್ತಿದ ಮುತ್ತಿನಮಂಡವಿಗೆಯ ನಡುವೆ ಸುತ್ತಿದ ಚಿತ್ರಾವಳಿಯ ತೆರೆಯ ಸೀರೆಯಂ ಪ್ರತೀಹಾರನೆತ್ತಲೊಡನೊಳಪುಗುವಾಗಳತ್ಯಂತಸಾಧ್ವಸಾಕುಳಿತಚಿತ್ತೆಯಿತ್ತ ಬಿಜಯಂಗೆಯ್ಯಿಮೆನುತ್ತುಂ–

ತೆರೆಗಳಡಂಗಿದಿಂಗಡಲಿನಂದೊಗೆತಂದು ಮರಲ್ದರಲ್ದ ತಾ ।
ವರೆಯಲಲ್ಲಿ ನಿಂದ ಸಿರಿಯೊಳ್ ದೊರೆಯಾಗಿ ದುಕೂಲಚೇಲದಿಂ ॥
ತೆರಳದೆ ಕೂಡಿ ಹಚ್ಚವಡಿಸಿರ್ದ ಸಮುಜ್ಜ್ವಳಶಯ್ಯೆಯಿಂದ ಮೆ ।
ಲ್ದಿರಸಿ ಬೞಿಕ್ಕಳಂಕರಿಸಿದಳ್ ನವಹಾಟಕಪೀಠಿಕಾಗ್ರಮಂ ॥ ೨೦

ಆಗಳರಸನುಂ ತಳ್ಪತಳವನೊಲ್ಲದೆ ವಲ್ಲಭೋಪವಿಷ್ಟವಿಷ್ಟರಾರ್ಧಮನೌಂಕಿ ಸೋಂಕಿ ಕುಳ್ಳಿರ್ದು

ಬಾಣಹೂಡಿ ಕೆಡಹೊಯ್ದನು. ೧೯. "ಶಿವನ ಮೇಲಿನ ಹಗೆಯನ್ನು ತೀರಿಸಿಕೊಳ್ಳಲು ಸಂಪಗೆ ಸಮರ್ಪಕವಾದ ಆಯುಧವಾಯಿತು; ಸಂತೋಷವನ್ನು ತುಂಬಲು ಮಲ್ಲಿಗೆ ಒದಗಿ ಬಂದಿತು. ನನ್ನ ನಲ್ಲೆಯ ಮನಸ್ಸಿಗೆ ಒಪ್ಪುವಂತೆ ಪಾದರಿ ಪರಿಮಳವನ್ನು ಅಳವಡಿಸಿತು. ಅಣ್ಣ ನಿನ್ನೊಂದು ಸಹವಾಸದಿಂದ ಈ ಎಲ್ಲ ಲಭಿಸಿತು" ಎಂದು ವಸಂತನಿಗೆ ನುಡಿಯುತ್ತ ಮನ್ಮಥನು ಹೆಮ್ಮೆಯಿಂದ ಉಬ್ಬಿದನು. ವ॥ ಹೀಗೆ ಕಾಮದೇವನ ಕಾಮಧೇನುವಿನಂತೆ ಬಂದ ವಸಂತಸಮಯದ ಚೆಲುವನ್ನು ಉದ್ಯಾನಾಧಿಕಾರಿಯ ಬಿನ್ನಹದಿಂದ ಅರಿತು ಅಜಿತಸೇನ ಚಕ್ರವರ್ತಿಯು ಕೌತುಕದಿಂದ, ತನ್ನ ಮನೋವಲ್ಲಭೆಯಾದ ಶಶಿಪ್ರಭಾಮಹಾದೇವಿಗೆ ತಿಳಿಸಲೆಂದು ತನ್ನ ಉಪ್ಪರಿಗೆಯಿಂದ ಇಳಿದು ಅಂತಃಪುರಕ್ಕೆ ಬಂದನು. ತಳತಳಿಸುವ ಸ್ಫಟಿಕದ ಶಯ್ಯಾಗೃಹದ ಮುಂದೆ ರಚಿಸಿದ ಮಂಡಪದ ನಡುವೆ ಸುತ್ತಕಟ್ಟಿದ ಚಿತ್ರಾವಳಿಯ ತೆರೆಯನ್ನು ಪ್ರತೀಹಾರಿಯು ಎತ್ತಲಾಗಿ ಒಳಹೊಕ್ಕು ಬರಲಾಗಿ, ಅತ್ಯಂತ ಸಂಭ್ರಮದಿಂದ "ಇತ್ತ ದಯಮಾಡಿ" ಎನ್ನುತ್ತ–೨೦. ತೆರೆಗಳಿಲ್ಲದ ಶಾಂತವಾದ ಕ್ಷೀರಸಮುದ್ರದಲ್ಲಿ ಮೂಡಿ ಬಂದು ತಾವರೆಯ ಹೂವಿನಲ್ಲಿ ನೆಲಸಿದ ಲಕ್ಷ್ಮಿಗೆ ಸದೃಶಳಾಗಿ, ಬಿಳಿಯ ರೇಷ್ಮೆಯ ಮೇಲುಹೊದಕೆಯ ಹಾಸಿಗೆಯಿಂದ ಎದ್ದು ಹೊಸ ಚಿನ್ನದ ಪೀಠವನ್ನು ಆಕೆ ಅಲಂಕರಿಸಿದಳು. ವ॥ ಆಗ ಅರಸನೂ ಮಂಚವನ್ನೊಲ್ಲದೆ

ಸುಳಿಗುರುಳಂ ನೊಸಲೊಳ್ ಮೆ।
ಯ್ವಳಿಯಿಂ ತಿರ್ದುತ್ತುಮೋಲೆಯಂ ಪೆಗಲೊಳ್ ತಂ ॥
ದಿಳಿಪುತ್ತುಮಾರಮಂ ಕು ।
ಪ್ಪಳಿಸುತ್ತುಂ ತನ್ನ ತಳದೊಳಂದಿಂತೆಂದಂ ॥ ೭೧

ಲಲಿತತಮಾಳಿಕಾಳಕೆ ಕನ್ನದ್ದಿಜಪಙ್ಕ್ತಿ ನಿಕಾಮಕೋಮಳಾಂ ।
ಗಲತೆಯಶೋಕಕಾಂತಕಳಿಕಾಧರೆ ಮಂಡಿತಕಾದಲೋರುಮಂ ॥
ಡಲೆ ಸುಪುನರ್ನವೋದಯವಿಳಾಸೆ ಬರಲ್ ವನಲಕ್ಷ್ಮಿ ವೇಟ್ಟಿಪಳ್।
ಕಲಪಿಕನಾದದಿಂದೆ ನಿಜಲೀಲೆಯನೀಕ್ಷಿಸಲೆಂದು ದೇವಿಯಂ ॥ ೭೨

ಅದು ಕಾರಣದಿಂ

ಮರಗಳೆಡೆಯೆಡೆಯ ನೆಲನಂ ।
ಚರಣಾಂಶುವಿನಿಂ ತಳಿರ್ಚು ಬಯಲಂ ನಿಜಕೇ ॥
ಕರರುಚಿಯಿನಲರ್ಚೇಟ್ಟಿಂ ।
ದರಸಿ ಬಸಕ್ಕಂ ಬಟಿಕ್ಕೆ ಸಿರಿ ಪರಿಪೂರ್ಣಂ ॥ ೭೩

ದೇವಿ ನಿಜಪದನಖೇಂದುಕ ।
ರಾವಳಿಯಿಂ ತೀವಿ ವನಸರೋವರಮಂ ರಾ ।
ಜೀವಕ್ಕಿತ್ತು ವಿಕಾಸಮ ।
ನಾವಗಮಿಂ ನೆರೆಪು ಪಗೆಯನೀ ನಗೆಮೊಗದಿಂ ॥ ೭೪

ತನ್ನ ನಲ್ಲೆ ಕುಳಿತ ಪೀಠದಲ್ಲಿಯೆ ಅವಳಿಗೆ ಒತ್ತಾಗಿ ಕುಳಿತುಕೊಂಡು–೭೧. ಹಣೆಯ ಮೇಲಿನ ಸುಳಿಗುರುಳನ್ನು ಮೆಲ್ಲಗೆ ಓರಣಗೊಳಿಸುತ್ತ, ಓಲೆಗಳನ್ನು ಹೆಗಲಿಗೆ ಇಳಿಬಿಡುತ್ತ, ಹಾರವನ್ನು ತನ್ನ ಕೈಯಲ್ಲಿ ಹಿಡಿದು ಆಡುತ್ತ ಹೀಗೆ ನುಡಿದನು–೭೨. "ಸುಂದರವಾದ ಹೊಂಗೆಮರದ ಸಾಲುಗಳೆ ಕೂದಲಾಗಿ, ಕೋಮಲವಾದ ಬಳ್ಳಿಗಳೆ ಮೈಯಾಗಿ, ಅಶೋಕದ ಮೊಗ್ಗುಗಳೆ ತುಟಿಗಳಾಗಿ, ಬಾಳೆಗಳೆ ತೊಡೆಗಳಾಗಿ, ಪುನಃ ನವವಿಲಾಸವನ್ನು ತಾಳಿದ ವನಲಕ್ಷ್ಮಿಯು "ನನ್ನ ಶೋಭೆಯನ್ನು ನೋಡಲು ಬನ್ನಿ" ಎಂದು ದೇವಿಯನ್ನು ಕೋಗಿಲೆಗಳ ಮಂಜುಳಧ್ವನಿಯಿಂದ ಕರೆಯುತ್ತಿರುವಳು, ಆದುದರಿಂದ – ೭೩. ಮರಗಳ ನಡುವಿನ ನೆಲವನ್ನು ನಿನ್ನ ಪಾದಕಾಂತಿಯಿಂದ ಅರಳಿಸು; ಬಯಲನ್ನು ನಿನ್ನ ಕಡೆಗಣ್ಣಕಾಂತಿಯಿಂದ ಅರಳಿಸು; ಅರಸಿ, ವನಕ್ಕೆ ಬಂದು ನೀನು ಹೀಗೆ ಮಾಡಿದ ಬಳಿಕವೆ ಉದ್ಯಾನದ ಸೌಭಾಗ್ಯಸಂಪೂರ್ಣವಾಗುವುದು. ೭೪. ದೇವಿಯೆ, ನಿನ್ನ ಕಾಲುಗುರುಗಳ ಚಂದ್ರಕಾಂತಿಯಿಂದ ವನಸರೋವರವನ್ನು ತುಂಬಿ, ತಾವರೆಗಳನ್ನು ಅರಳಿಸು,

ಮತ್ತಂ

ದಯೆಗೆಯ್ ಪದಪಾತಮನಸು ।
ಗೆಯೊಳಂತದು ತಳಿರ್ಗುಮತ್ತೆನಿಪ್ಪನಿತಲ್ತಾ ॥
ರಯೆ ಮತ್ತಮಲರ್ಗುಮಿತ್ತೆ ।
ನ್ನಯ ಚಿತ್ತಂ ಸಫಲಮಕ್ಕುಮುತ್ತ ಬಸಂತಂ ॥ ೭೫

ಭಂಗಮನುಂತುಂ ತಳೆದ ಲ ।
ತಾಂಗಮನಿಂ ನಿನ್ನ ಕೋಮಳಾಂಗದ ಚೆ ॥
ಲ್ವಿಂ ಗೆಲ್ದೆಯ್ದಿಸು ಪೊಸತಂ ।
ಭಂಗಮನೇಟ್ಟಿಂದನಂಗಜಂಗಮಲತೆಗೇ ॥ ೭೬

ಅದಲ್ಲದೆಯುಂ

ಅಂಚೆಗೆ ಮಂದಯಾನಮದವಿಂದೊಳಸೋರ್ಗೆ ಮದೋತ್ಕಕೋಕಿಳ ।
ಕ್ಕಂ ಚಿರಮಕ್ಕೆ ಕಾಕಳಿಯ ಹೂಂಕೃತಿ ಭೃಂಗಚಯಕ್ಕೆ ಮೇಚಕೋ ॥
ದಂಚಿತರ್ಪಮುಬ್ಬರಿಸದಿರ್ಕನಿಸಂ ಮೆಱಿ ಬಂದು ನೀಂ ಬನ ।
ಕ್ಕಂ ಚಪಳಾಕ್ಷಿ ನಿನ್ನ ನಡೆಯಂ ನುಡಿಯಂ ಮುಡಿಯಂ ವಿನೋದದಿಂ ॥ ೭೭

ಎಂದು ಕರ್ಣಾಮೃತಸ್ಯಂದಿಗಳಪ್ಪ ನುಡಿಗಳಂ ನರೇಂದ್ರಂ ನುಡಿಯಲೊಡಮಾಕೆಯುಮುಚಿತ ಪರಿಹಾಸವಚನ ಕೇಕರಾಲೋಕನಾಂಕಪಾಳೀಲೀಲಾದ್ಯನುಭಾವಂಗಳಿನೊಡಂಬಡಂ ಪ್ರಕಟಂಮಾಡೆ

ಈ ನಿನ್ನ ನಗೆಮೊಗದಿಂದ ನಿನ್ನ ಹಗೆಯಾದ ಚಂದ್ರನನ್ನು ಸೋಲಿಸು. ಮತ್ತು- ೭೫. ಅಶೋಕವೃಕ್ಷಕ್ಕೆ ನಿನ್ನ ಪಾದಗಳಿಂದ ಪ್ರಹಾರದ ಅನುಗ್ರಹ ಮಾಡು; ಅದರಿಂದ ಅದು ಚಿಗುರುವುದು; ಅಷ್ಟೆ ಅಲ್ಲ; ಇತ್ತ ನನ್ನ ಮನಸ್ಸೂ ಅರಳುವುದು; ವಸಂತಮಾಸವೂ ಸಫಲವಾಗುವುದು. ೭೬. ಮೊದಲೆ ಭಂಗ (ಮಣಿತ) ವನ್ನು ಹೊಂದಿದ ಬಳ್ಳಿಯನ್ನು ನಿನ್ನ ಕೋಮಲ ಶರೀರದ ಚೆಲುವಿನಿಂದ ಗೆದ್ದು, ಕಾಮನ ಜಂಗಮಲತೆಯೆ, ಅದಕ್ಕೆ ಹೊಸದೊಂದು ಭಂಗ(ಸೋಲು)ವನ್ನುಂಟುಮಾಡು. ಅದಲ್ಲದೆ-೭೭. ತನ್ನ ಮಂದಗಮನದ ಗರ್ವವಿಂದು ಹಂಸಪಕ್ಷಿಗೆ ಉಡುಗಿ ಹೋಗಲಿ; ಮಧುರಧ್ವನಿಯ ದರ್ಪವಿಂದು ಕೋಗಿಲೆಗಳಿಗೆ ಅಸ್ಥಿರವೆನಿಸಲಿ; ಕಪ್ಪಿನ ಹೊಳಪಿನಲ್ಲಿ ತಾವೇ ಮೇಲೆಂಬ ದುಂಬಿಗಳ ಅಬ್ಬರ ಇಂದು ಉಬ್ಬರಿಸದಿರಲಿ. ಚಂಚಲಾಕ್ಷಿಯೆ, ನೀನು ಸ್ವಲ್ಪ ಬನದಲ್ಲಿ ಬಂದು ನಿನ್ನ ನಡೆಯನ್ನು, ನುಡಿಯನ್ನು ಮುಡಿಯನ್ನು ತೋರಿಬಿಡು, ಸಾಕು." ವ॥ ಈ ಮೇರೆಗೆ ಕಿವಿಗಳಿಗೆ ಅಮೃತವೆರೆಯುವಂತಹ ನುಡಿಗಳನ್ನು ರಾಜೇಂದ್ರನು ನುಡಿಯಲಾಗಿ, ಆಕೆಯೂ ಯೋಗ್ಯವಾದ ನಗೆನುಡಿಯಿಂದ ಹಾಗು ಕುಡಿನೋಟವೆ ಮೊದಲಾದ ಅನುಭಾವ

ಪಡೆದವತಂಸಮಂ ಕಿವಿಗೆ ನುಣ್ನುಡಿಯಿಂ ದರಹಾಸರಶ್ಮಿಯಿಂ ।
ಪಡೆದೆನಸುಂ ನಿಜಾಕೃತಿಗೆ ಚಂದನದಣ್ಪನಪಾಂಗರೋಚಿಯಿಂ ॥
ಪಡೆದಳಿಕುಂತಳಕ್ಕಲರ ಬಾಸಿಗಮಂ ತನಗಂದು ಸೋಂಕಿನಿಂ ।
ಪಡೆದನುಡಲ್ ನೃಪಂ ಸತಿಯ ಮೆಯ್ವೆಳಗೆಂಬ ನವೀನಚೀನಮಂ ॥ ೭೮

ಅನಂತರಂ ವಸಂತವನಕೇಳೀಪ್ರಸ್ಥಾನತೂರ್ಯಂಗಳಂ ಪೊಯ್ಸಿದಾಗಳ್

ಶ್ಯಾಮತೆಯಿಂ ವಿರೂಪತೆಯಿನಾರಯೆ ನಿನ್ನ ಸಖಂ ಮನೋಜನಂ ।
ತಾಮದನಂಗಮಾದುದು ವಸಂತನ ಪೊರ್ದುಗೆಯಿಂದಮುತ್ಸವೋ ॥
ದ್ದಾಮತೆಯಂತದಂ ನಿನಗೆ ಸೂಚಿಸಲಾಂ ಪರಿತಂದೆನೆಂಬವೊಲ್ ।
ವ್ಯೋಮಮನೆಯ್ದಿದತ್ತು ಪಟಹಸ್ಫುಟಪಾಟರವಂ ಸಮುತ್ಕಟಂ ॥ ೭೯

ಅನಂತರಮರಮನೆಯ ಬಾಗಿಲೊಳ್ ಪಣ್ಣೆ ಬಂದಿರ್ದ ವಿಜಯಪರ್ವತಗಜಮಂ ನರೇಂದ್ರ ಚೂಡಾಮಣಿಯಿಂದ್ರಾಣಿವೆರಸು ಐರಾವತಮನೇಱುವಮರೇಂದ್ರನಂತೆ ಮಾದೇವಿವೆರಸೇಱೆ

ಆನೆಯ ಮೇಲೆ ಮೇಳವಿಪ ಮುತ್ತಿನ ಸತ್ತಿಗೆಯಿತ್ತ ತಣ್ಣೆಳಲ್ ।
ಪೀನಕುಚಾಗ್ರದಿಂದಡರೆ ಸೋಂಕುವ ನಲ್ಲಳ ಸೋಂಕಲಂಪಿನು ॥
ದ್ದಾನಿಯನೀಯೆ ಸಂತಸದದೊಂದದಗುಂತಿಯೆ ರೂಪುಗೊಂಡುದೆಂ ।
ಬೀನುಡಿಗಿರ್ಕೆಯಾಗೆ ನಡೆದಂ ವನಕೇಳಿಗೆ ರಾಜಕುಂಜರಂ ॥ ೮೦

ಗಳಿಂದ ತನ್ನ ಒಪ್ಪಿಗೆಯನ್ನು ವ್ಯಕ್ತಪಡಿಸಿದಳು. ೭೮. ಆಕೆಯ ಮಧುರ ವಚನಗಳಿಂದ ಕಿವಿಗೆ ಆಭರಣವಾಯಿತು; ನಸುನಗೆಯಿಂದ ಮೈಗೆಲ್ಲ ಗಂಧವನ್ನು ಲೇಪಿಸಿದಂತಾಯಿತು; ಕಡೆಗಣ್ಣೋಟದ ಕಾಂತಿಯಿಂದ ತನ್ನ ಕಪ್ಪಾದ ಕೂದಲಿಗೆ ಬಾಸಿಗವನ್ನು ಮುಡಿಸಿದಂತಾಯಿತು; ಸ್ಪರ್ಶಸುಖದಲ್ಲಿ ಆಕೆಯ ಶರೀರಕಾಂತಿಯಿಂದ ಅರಸನಿಗೆ ಹೊಸ ರೇಷ್ಮೆವಸ್ತ್ರವನ್ನು ಉಡಿಸಿದಂತಾಯಿತು. ವ|| ಬಳಿಕ ವಸಂತ ವನಕ್ರೀಡೆಗೆ ಹೊರಡಲೆಂದು ಪ್ರಸ್ಥಾನ ಭೇರಿಗಳನ್ನು ಹೊಡೆಯಿಸಲಾಯಿತು. ೭೯. "ಶ್ಯಾಮತೆ (ನೀಲವರ್ಣ)ಯಿಂದಲೂ ನಿರಾಕಾರತೆಯಿಂದಲೂ ನಿನಗೆ ಸದೃಶ ಮಿತ್ರನಾದವನು ಮನ್ಮಥನು, ವಸಂತನ ಸಹವಾಸದಿಂದ ಆ ಅನಂಗನಿಗೂ ಈಗ ಮಹಾ ಉತ್ಸವವಾಗಿದೆ, ಅದನ್ನು ನಿನಗೆ ತಿಳಿಸಲೆಂದು ನಾನು ಓಡಿ ಬಂದೆನು" ಎಂದು ಆಕಾಶಕ್ಕೆ ಹೇಳಹೊರಟಿತೊ ಏನೊ ಎಂಬಂತೆ ಪಟಹಗಳ ಮಹಾಧ್ವನಿ ಆಕಾಶಕ್ಕೆ ಮುಟ್ಟಿತು. ವ|| ಅನಂತರ ಅರಮನೆಯ ಬಾಗಿಲಿಗೆ ಸಜ್ಜಾಗಿ ಬಂದ ವಿಜಯಪರ್ವತವೆಂಬ ಆನೆಯನ್ನು ಮಹಾದೇವಿಯೊಡನೆ ಅರಸನು ಏರಿ, ಶಚಿಯೊಡನೆ ಐರಾವತವನ್ನೇರಿದ ಇಂದ್ರನಂತೆ ಹೊರಟು–೮೦. ಆನೆಯ ಮೇಲೆ ಅಳವಡಿಸಿದ ಮುತ್ತಿನ ಛತ್ರಿಯು ತಂಪಾದ ನೆಳಲಲ್ಲಿ, ತನ್ನ ತೋರ ಮೊಲೆಗಳಿಂದ ಒತ್ತಾಗಿ ಹತ್ತಿಕೊಂಡು ಸೋಕುವ ನಲ್ಲೆಯ ಸ್ಪರ್ಶಾನುಭವದ ಅತಿಶಯದಲ್ಲಿ ಸಂತೋಷದೊಂದು ಆಧಿಕ್ಯವೆ ಮೈದಾಳಿ ಬಂತೆಂದು ಜನ ನುಡಿಯುವಂತೆ ರಾಜೇಂದ್ರನು ವನಕ್ರೀಡೆಗೆ

ಅಂತು ಪುರಮಂ ಪೊಱಮಟ್ಟು
ಬನದ ಬಿನದಕ್ಕೆ ತಕ್ಕನಿ ।
ತನೆ ಪರಿಜನಮಂ ಬರಲ್ಕೆವೇಟಿಸೆಯುಂ ತ ॥
ಜ್ಜನಮಾದುದನೂನಮದೇ ।
ನನನ್ಯ ಸಾಮಾನ್ಯಮೋ ನರೇಂದ್ರನ ವಿಭವಂ ॥ ೮೧

ಎಂಬಿನಮಳುಂಬಮಾಗಿ ಶಿಬಿಕೆಗಳ ತಿಂತಿಣಿಯೊಳ್ ಬರ್ಪಂತಃಪುರಕಾಂತಾಸಂತಾನಮುಂ, ಅಂದಣದ ಗೊಂದಣದೊಳ್ ಬರ್ಪ ವಾರನಾರೀನಿಕರಮುಂ, ಪೇರಾನೆಯ ಪಿಂಡುಗಳೊಳ್ ಬರ್ಪ ಚತುರಪ್ರಧಾನಪ್ರತಾನಮುಂ, ಪಿಡಿಯ ಗಡಣಂಗಳೊಳ್ ಬರ್ಪ ಸೇವಕಮಹಿಳಾಮಂಡಳಮುಂ, ಕುದುರೆಯ ಕದಂಬದೊಳ್ ಬರ್ಪ ಪಾರ್ಥಿವಪುತ್ರಸಾರ್ಥಮುಂ, ವೇಸರಿಯ ನೆರವಿಗಳೊಳ್ ಬರ್ಪ ದೇಶಿಕುತಪವಿತತಿಯುಂ, ಪಾದಮಾರ್ಗದಿಂ ಮೊಗ್ಗರಮಾಗಿ ಬರ್ಪಖಡ್ಗವ್ಯಗ್ರಹಸ್ತೋಗ್ರಭಟಪೇಟಕಮುಂ, ಮತ್ತವರ್ಗವರ್ಗೆ ಪಿಡಿದ ಮೇಘಡಂಬರದ ಝಲ್ಲರಿಯ ಪಲ್ಲತೊಂಗಲ ಚೌಕಸತ್ತಿಗೆಯ ಕೊಡೆಯ ಗಡಣಂಗಳುಂ, ಮಂದೆ ಪರಿವ ಪಡೆವಳಗಟ್ಟಿಯ ಪೀಲಿಯಕರಗದುಪ್ಪರಗುಡಿಯೊಜ್ಜರದ ರಾಜಸಿಂಧದ ಸಂದಣಿಯುಮೆಸೆಯೆ ಕುಸುಮಾಕರೋದ್ಯಾನಕ್ಕೆ ನಡೆಯೆ ನಡೆಯೆ

ದೆಸೆಯಂ ಛತ್ರಪ್ರಸರದೆ ।
ಮುಸುಂಕಿ ಕಟ್ಟಿಲೆಯನೊರ್ಮೆ ಮಣಿಭೂಷಣರು ॥
ಗ್ಗಿಸರದೆ ಮುಸುಂಕಿ ಸಂಜೆಯ ।
ಬಿಸಿಲಂ ಮತ್ತೊರ್ಮೆ ಮಾಡಿದುದು ತದ್ಯಾನಂ ॥ ೮೨

ನಡೆದನು. ವ॥ ಹಾಗೆ ಪಟ್ಟಣದಿಂದ ಹೊರಬಿದ್ದಾಗ–೮೧. ವನಕ್ರೀಡೆಗೆ ತಕ್ಕಷ್ಟು ಜನರು ಮಾತ್ರ ಬರಬೇಕೆಂದು ಅಪ್ಪಣೆಮಾಡಲಾಗಿತ್ತು; ಆದರೆ ಆ "ತಕ್ಕಜನ" ರ ಸಮುದಾಯವೆ ಅತ್ಯಧಿಕವಾಯಿತೆಂದರೆ ಆ ನರೇಂದ್ರನ ವೈಭವವೆಷ್ಟು ಅಸಾಮಾನ್ಯವಾದುದು! ವ॥ ಸಿಬಿಗೆಗಳ ಸಮೂಹದಲ್ಲಿ ಬರುವ ರಾಣಿವಾಸದ ಸ್ತ್ರೀಯರ ಸಮುದಾಯ; ಸಂದಣಿಸಿದ ಅಂದಳಗಳಲ್ಲಿ ಬರುವ ವಾರಸ್ತ್ರೀಯರ ಹಿಂಡು; ದೊಡ್ಡ ದೊಡ್ಡ ಆನೆಗಳೊಡನೆ ಬರುವ ಚತುರರಾದ ಪ್ರಧಾನರು; ದೊಡ್ಡ ಗುಂಪುಗಳಾಗಿ ಬರುವ ಸೇವಕ ಮಹಿಳೆಯರ ಬಳಗ; ಕುದುರೆಗಳ ಮೇಲೆ ಬರುತ್ತಿರುವ ರಾಜಪುತ್ರರ ಮಂಡಳಿ; ಹೇಸರಗತ್ತೆಗಳ ಮೇಲೇರಿ ಬರುವ ವಾದ್ಯವಾದಕ ಹಾಗೂ ಗಾಯಕರ ಸಮುದಾಯ; ಕಾಲ್ನಡೆಯಿಂದ ದಟ್ಟಣಿಸಿ ಬರುವ ಖಡ್ಗಧಾರಿ ಯೋಧರ ದಳಗಳು; ಮತ್ತು ಅವರವರಿಗೆ (ಯೋಗ್ಯತಾನುಸಾರ ವಾಗಿ) ಹಿಡಿದ ಮೇಘಡಂಬರ, ಝಲ್ಲರಿ, ಪಲ್ಲತೊಂಗಲು, ಚೌಕಸತ್ತಿಗೆ ಮೊದಲಾದ ಕೊಡೆಗಳು; ಮುಂದೆ ನಡೆವ ವೇತ್ರಧಾರಿಗಳ ನವಿಲ್ಗರಿ ಚಾಮರದ, ಕರಂಕವಾಹಕರ, ಧ್ವಜಹಸ್ತರ, ಬಜ್ಜರ, ರಾಜಧ್ವಜ ಮೊದಲಾದ ರಾಜಚಿಹ್ನೆಗಳನ್ನು ಹಿಡಿದವರ ಸಂದಣಿ ಶೋಭಿಸುತ್ತಿರಲಾಗಿ ಕುಸುಮಾಕರವೆಂಬ ಉದ್ಯಾನಕ್ಕೆ ಎಲ್ಲರೂ ನಡೆಯು ತ್ತಿರಲಾಗಿ–೮೨. ತಮ್ಮ ಕೊಡೆಗಳ ಸಂದಣಿಯಿಂದ ಮುಸುಕಿ ದಿಕ್ಕುಗಳಲ್ಲೆಲ್ಲಾ

ಅಂತುದ್ಯಾನಪರಿಸರಕ್ಕೆ ಬರ್ಪಾಗಳ್

ಅಮರ್ದನೆಳಮಾವಿನೊಳ್ ದಾ ।
ಡಿಮದೊಳ್ ಮಲ್ಲಿಗೆಯೊಳಿರ್ದ ಕೋಗಿಲೆ ಗಿಳಿ ತುಂ ॥
ಬಿ ಮಹೀಶನ ಕಿವಿಗಾಗಳ್ ।
ಕ್ರಮದಿತ್ತುವು ತಾರಮಧ್ಯಮಂದ್ರಸ್ವರದಿಂ ॥ ೮೩

ಅದಲ್ಲದೆಯುಂ,

ಇನಿತಿದಿರ್ವಂದು ತಂದಲರ್ಗಳೋಳಿಯನೊಯ್ಯನೆ ಕಾಣ್ಕೆಗೊಟ್ಟು ತ ।
ದ್ವನದ ಕೊಳಂಗಳೊಳ್ತೆರೆಯಿನುಣ್ಮುವ ತಣ್ಬನಿಯಿಂದೆ ಪಾದ್ಯಮಿ ॥
ತ್ತನುಗತಮತ್ತಭೃಂಗರುತದಿಂ ಪ್ರಿಯಮಂ ನುಡಿದಿಂತು ಬಂದ ಬಿ ।
ರ್ದನನೆನೆ ಮನ್ನಿಸಿತ್ತು ನೃಪನಂ ತ್ರಿಗುಣೋದ್ಧರಣಂ ಸಮೀರಣಂ ॥ ೮೪

ಅನಂತರಂ ಬಂಧುರಸಿಂಧುರಸ್ಕಂಧದಿನಿಟಿದು ವನಪ್ರತೋಳಿಕಾದ್ವಾರಮಂ ಪೊಕ್ಕು ವನಜಳ ಕ್ರೀಡೋಪಯೋಗ್ಯಕತಿಪಯಪರಿವಾರಸಮೇತನುಂ, ವಾರನಾರೀಪರಿಜನಪರೀತನುಂ, ವಾಮಪಾರ್ಶ್ವ ಗತಮಹಾದೇವೀಕಟಾಕ್ಷೈಕಲಕ್ಷ್ಯನುಂ. ನರ್ಮಸಚಿವಪ್ರಕೋಷ್ಠನಿವೇಶಿತಸವ್ಯಪಾಣಿಪಲ್ಲವನುಂ, ವಿಲಿಪ್ತಯಕ್ಷಕರ್ದಮಾಮೋದಾಕೃಷ್ಟವನಕುಸುಮಾಲೋಲಲೋಲಂಬಕದಂಬನುಂ, ವೀಜ್ಯಮಾನ ಧವಳಚಮರರುಹಪವನವಿನಿವಾರಿತಾನೇಕತರುಪ್ರಸೂನವಿಸರತ್ಪರಾಗನುಂ, ಮಹಾಪ್ರತೀಹಾರಕೋದ್ಘುಷ್ಯ

ಕತ್ತಲೆಯನ್ನೊಮ್ಮೆ ಉಂಟುಮಾಡಿದರು; ರತ್ನಾಭರಣಗಳ ಕಾಂತಿಯಿಂದ ಸಂಜೆಯ ಬಿಸಿಲನ್ನೊಮ್ಮೆ ಉಂಟುಮಾಡಿದರು. ವ॥ ಹೀಗೆ ಉದ್ಯಾನಪ್ರದೇಶವನ್ನು ಸಮೀಪಿಸಿದಾಗ –೮೩. ಎಳಮಾವಿನಲ್ಲಿಯೂ, ದಾಳಿಂಬದ ಗಿಡದಲ್ಲಿಯೂ, ಮಲ್ಲಿಗೆ ಬಳ್ಳಿಯಲ್ಲಿಯೂ ನೆಲಸಿದ ಕೋಗಿಲೆ–ಗಿಳಿ–ದುಂಬಿಗಳು ಅನುಕ್ರಮವಾಗಿ ತಾರ–ಮಧ್ಯ–ಮಂದ್ರಸ್ವರಗಳಿಂದ ಅರಸನ ಕಿವಿಗೆ ಅಮೃತವನ್ನು ತುಂಬಿದುವು. ಅದಲ್ಲದೆ–೮೪. ಇದಿರುಗೊಂಡು ಹೂಗಳ ರಾಶಿಯನ್ನು ನಯವಾಗಿ ಕಾಣಿಕೆಗೊಟ್ಟು, ಕೊಳಗಳ ತೆರೆಗಳಿಂದ ಏಳುವ ತಂಪಾದ ಹನಿಗಳಿಂದ ಪಾದ್ಯವನ್ನಿತ್ತು, ತನ್ನನ್ನು ಹಿಂಬಾಲಿಸುವ ದುಂಬಿಗಳ ಧ್ವನಿಯಿಂದ ಮೃದುವಚನಗಳನ್ನು ನುಡಿದು, ತನ್ನ ಬಳಿಗೆ ಅತಿಥಿಯಾಗಿ ಬಂದ ಅರಸನನ್ನು ಗಾಳಿಯು ಗೌರವದಿಂದ ಸತ್ಕರಿಸಿತು. ವ॥ ಆಮೇಲೆ ಅರಸನು ಆನೆಯ ಮೇಲಿಂದ ಇಳಿದು ಉದ್ಯಾನದ ಮಹಾದ್ವಾರವನ್ನು ಹೊಕ್ಕು, ವನಕ್ರೀಡೆಗೂ, ಜಲಕ್ರೀಡೆಗೂ ಯೋಗ್ಯರಾದ ಕೆಲವೇ ಜನರ ಪರಿವಾರದೊಡನೆ ಹೊರಟು ವಾರಸ್ತ್ರೀಯರು ಬಳಸಿ ಬರಲಾಗಿ, ಎಡಗಡೆಗೆ ಇರುವ ಮಹಾದೇವಿಯ ಕಡೆಗಣ್ಣಿಗೆ ಏಕೈಕ ಗುರಿಯಾಗಿ, ನರ್ಮಸಚಿವನು ನೀಡಿದ ಮುಂಗೈಯನ್ನು ತನ್ನ ಬಲಗೈಯಿಂದ ಹಿಡಿದುಕೊಂಡು, ತೊಡೆದುಕೊಂಡ ಸುಗಂಧಲೇಪನದ ಪರಿಮಳಕ್ಕೆ ಮರುಳಾಗಿ ದುಂಬಿಗಳು ಮುಸುಕುತ್ತಿರಲಾಗಿ, ಅನೇಕ ಮರಗಳ ಹೂಗಳಿಂದ ಸುರಿವ ಪರಾಗವನ್ನು ತನ್ನ ಎಡಬಲದ ಸೇವಕರು ಬಿಳಿಯ ಚಾಮರಗಳಿಂದ

ಮಾಣಸರಣಿಧರಣೀಕನುಂ, ಹೇಳಾವಲೋಕನಾಮೃತನಿಷಿಚ್ಯಮಾನತರುಲತಾಪ್ರತಾನನುಂ, ವನಮಹತ್ತರ ಪುರಸ್ಸರನುಮಾಗಿ ಬರ್ಪಾಗಳ್

ನೃಪನ ಮನಕ್ಕೆಸೆದುದು ಪನ ।
ಸಪಙ್ಕ್ತಿ ಸಾಲಕುಜರಾಜಿಯಾಮ್ರಾವಳಿ ಮ ॥
ತ್ತಪರಿಮಿತಂ ವಿಚಕಿಳವೀ ।
ಧಿ ಪಾಟಳೀಪಾಳಿ ಮಾಧವೀಮಾಳೆ ಕರಂ ॥ ೮೫

ಅಲ್ಲಿ

ಎಳವಲಸು ನಿಜಸ್ಕಂಧಾ ।
ವಳಂಬಿಯೆನಿಸಿರ್ದ ತೋರವಣ್ಗೊನೆಯಿಂ ಕ ॥
ಣ್ಗೊಳಿಸಿತ್ತು ಕಾಮಧಾತ್ರೀ ।
ತಳಪಾಲಕನಡಪವಳನ ದೊರೆಯೆನೆ ಪಿರಿದುಂ ॥ ೮೬

ಎಂದು ಮದನವೀಣೆಯೆಂಬರಸಿಯ ಪರಿಚಾರಕಿ ನುಡಿದೊಡದಂ ನೋಡುತ್ತುಂ ನಡೆಯೆ ನರ್ಮಸಚಿವಂ ನಂದನನೆಂಬನಿಂತೆಂದಂ:-

ಪಿಡಿ ಪಣೆ ತೋಳ್ ತುದಿ ಮೊಳೆ ಮೊಳೆ
ಮಿಡಿಯೆನೆ ತೋಟಿತ್ತು ವಿರಹಿಕೌರವಬಲಮಂ ॥
ಬಡಿವಲ್ಲಿ ಕಾಮಭೀಮಂ ।
ಪಿಡಿದ ಗದಾದಂಡಮೆನಿಸಿ ಮಾಮರನಿದಿರೊಳ್ ॥ ೮೭

ಬೀಸಿ ನಿವಾರಿಸುತ್ತಿರಲಾಗಿ, ಮಹಾಪ್ರತೀಹಾರರು ನೆಲವನ್ನು ಉಗ್ಗಡಿಸುತ್ತ ಪರಾಕು ಹೇಳುತ್ತಿರಲಾಗಿ ಸಂತೋಷದಿಂದ ಮರಬಳ್ಳಿಗಳತ್ತ ದೃಷ್ಟಿ ಹಾಯಿಸುತ್ತ, ಉದ್ಯಾನ ಮಹತ್ತರನನ್ನು ಮುಂದಿಟ್ಟುಕೊಂಡು ಬರುವಾಗ– ೮೫. ಹಲಸಿನ ಮರಗಳ ಸಾಲು, ಸಾಲವೃಕ್ಷಗಳ ಪಂಕ್ತಿ, ಮಾವಿನ ತೋಪು ಇವಲ್ಲದೆ ಅಸಂಖ್ಯವಾದ ಮಲ್ಲಿಗೆ ಬೀದಿ. ಪಾದರಿ ಸಮುದಾಯ ಹಾಗೂ ಅದಿರುಗಂತಿಯ ಸಾಲುಗಳು ಅರಸನ ಮನಕ್ಕೆ ಒಪ್ಪಿದುವು, ಅಲ್ಲಿ–೮೬. "ತನ್ನ ಹೆಗಲಲ್ಲಿ ತೋರವಾದ ಹಣ್ಣುಗಳ ಗೊಂಚಲನ್ನು ಹೊತ್ತು ನಿಂತ ಎಳೆಯ ಹಲಸಿನ ಮರವು ಕಾಮರಾಜನ ಹಡಪದಾಳಿಗೆ ಸದೃಶವಾಗಿ ಕಂಗೊಳಿಸಿತು." ವ॥ ಹೀಗೆಂದು ಮದನವೀಣೆಯೆಂಬ ಅರಸಿಯ ಪರಿಚಾರಿಕೆ ನುಡಿಯಲಾಗಿ, ಅದನ್ನು ನೋಡುತ್ತ ನಡೆದು, ನರ್ಮಸಚಿವನಾದ ನಂದನನೆಂಬವನು ಹೀಗೆಂದನು–೮೭. "ಈ ಮರದ ಕಾಂಡವೆ ಹಿಡಿಕೆ, ಶಾಖೆಯು ತುದಿ ಮೊಳಕೆಯಾದ ಮಿಡಿಯೆ ಮೊಳೆ–ಹೀಗೆ ವಿರಹಿಗಳೆಂಬ ಕೌರವರ ಸಮೂಹವನ್ನು ಬಡಿಯುವುದಕ್ಕೆ ಮನ್ಮಥನೆಂಬ ಭೀಮನು ಹಿಡಿದ ಗದಾದಂಡವಾಗಿ ಈ ಮಾವಿನ ಮರವು ತೋರುತ್ತದೆ."

ಅಂತವರಿರ್ವರ ನುಡಿಗಮರ್ಥದ್ರಷ್ಟತ್ವಕ್ಕಮನುರೂಪಮಾದುವೆನುತ್ತುಂ ಬರ್ಪನ್ನೆಗಂ

ತನಿವಣ್ಣಂ ಮಾರುತಾಂದೋಳದಿನೊಸರ್ವ ಪೊಸರಸಾಸಾರಮಂ ದೂರದಿಂ ಭೋಂ।
ಕನೆ ಕಂಡೈತಂದು ಕಂಠಂ ನಿಮಿರ್ದಮರ್ದಿರೆ ಪಕ್ಷದ್ವಯಂ ಜೋಲೆಕಣ್ ಮೀ ॥
ಲನದೊಳ್ ಸಮ್ಮೇಳನಂ ಬೆತ್ತಿರೆ ತಣಿವಿನೆಗಂ ಪೀರ್ದು ಮೆಯ್ವೆರ್ಚಿ ಕೀೞಿಕ್ಕೊಂ।
ಬಿನೊಳಡ್ಡಂಮೆಟ್ಟಿ ತೆಟ್ಟುಂದೆಱಿಯೆಗಳಪಿದ ತ್ತಾಮ್ರದೊಳ್ ತಾಮ್ರತುಂಡಂ ॥ ೮೮

ಆಗಳಾಗಿಳಿಯ ಗಿಳಿಗೆಡಪಕ್ಕೆ ಮುಗುಳ್ನಗೆನಗುತ್ತುಮೀಷದಾನತಾನನೆಯಾದೋಪಳಂ ಭೂಪಾಳಂ ಚಾಳಿಸಿ ವಾಮಕೋಮಳಸೂಚೀಹಸ್ತದಿಂ ತೋಱಿ

ಪ್ರಣವೋತ್ಥಶ್ರುತಿಮಧುರ।
ಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ ॥
ಪೆಣೆದಿರೆ ಪುರೋಹಿತಬ್ರಾ।
ಹ್ಮಣನೆನಿಸಿದುದತನುನೃಪತಿಗೀಪರಪುಷ್ಟಂ ॥ ೮೯

ಮತ್ತಂ

ಪ್ರಿಯೆ ನಿನಗೆ ಪುಟ್ಟಿದೀಕಳಿ।
ಕೆಯೆ ತಾನೆನಗಂತಱಿಂದೆ ಮಾವಂ ನೀಂ ನಿ ॥
ಶ್ಚಯಮೆಂಬ ತೆಱದೆ ಮಾವಂ।
ನಯದಿಂ ಸಾರ್ದಳಿಯನಳಿಯನೆನ್ನದರೊಳರೇ ॥ ೯೦

ವ॥ ಹೀಗೆ ನುಡಿದ ಅವರಿಬ್ಬರ ಮಾತಿಗೂ ಅರ್ಥದೃಷ್ಟಿಗೂ ಪರಸ್ಪರ ಅನುರೂಪತೆಯುಂಟೆಂದು ಹೇಳುತ್ತ ಬಂದನು. (ಒಂದು ಪ್ರದೇಶದಲ್ಲಿ–) ೮೮. ಒಂದು ಮಾವಿನ ಮರದಲ್ಲಿ ಗಾಳಿಯು ರಭಸಕ್ಕೆ ಒಡೆದು ಒಸರುತ್ತಿರುವ ಸವಿಯಾದ ಹಣ್ಣನ್ನು ದೂರದಿಂದಲೆ ನೋಡಿದ ಗಿಳಿಯೊಂದು ಬಂದು ಕೊರಳು ಚಾಚಿ, ಪಕ್ಕಗಳನ್ನು ಇಳಿಬಿಟ್ಟುಕೊಂಡು ಕಣ್ಣುಗಳನ್ನು ಮುಚ್ಚಿ ತೃಪ್ತಿಯಾಗುವಂತೆ ರಸವನ್ನು ಹೀರುತ್ತ, ಮೈಯುಬ್ಬಿ ಕೆಳಗಿನ ಕೊಂಬೆಯನ್ನು ಅಡ್ಡವಾಗಿ ಮೆಟ್ಟಿ ಸಂತೋಷದಿಂದ ಧ್ವನಿಮಾಡಿತು. ವ॥ ಆ ಗಿಳಿಯ ಗಳಹಕ್ಕೆ ಮುಗುಳ್ನಗೆ ನಗುತ್ತ ನಸುವೆ ತಲೆಬಾಗಿದ ನಲ್ಲೆಯನ್ನು ಅರಸನು ವಿನೋದದಿಂದ ತಿವಿದು ಎಡಗೈಯಿಂದ ಬೆರಳಿಟ್ಟು ತೋರಿ–೮೯. "ಪ್ರಣವ"(೧. ಅತ್ಯಂತ ನವೀನ, ೨. ಓಂಕಾರ) ದ ಉನ್ನತವೂ ಕರ್ಣಮಧುರವೂ ಆದ ಧ್ವನಿಯಿಂದಲೂ, "ದ್ವಿಜ" (೧. ಪಕ್ಷಿ, ೨. ಬ್ರಾಹ್ಮಣ) ಶ್ರೇಷ್ಠವಾಗಿರುವುದರಿಂದಲೂ "ಕೃಷ್ಣರುಚಿ" (೧. ಕಪ್ಪು ಬಣ್ಣ, ೨. ವಿಷ್ಣುಭಕ್ತಿ) ಯಿಂದಲೂ ಕೂಡಿಕೊಂಡು ಈ ಕೋಗಿಲೆ ಮನ್ಮಥರಾಜನಿಗೆ ಪುರೋಹಿತನೆನಿಸಿತು. ಮತ್ತು–೯೦. "ನನಗೆ ಪ್ರಿಯೆಯಾದ ಈ ಮೊಗ್ಗನ್ನು ಹಡೆದವನು ನೀನು, ಅದರಿಂದ ನಿಶ್ಚಯವಾಗಿಯೂ ನೀನು ನನಗೆ ಮಾವನೆ" ಎಂದು ಹೇಳುವುದೊ ಏನೊ ಎಂಬಂತೆ ಬಳಿ ಸಾರಿದ ಅಳಿ (ದುಂಬಿ)

ಎನುತ್ತುಂ ನಡೆಯೆ ಮುಂದೊಂದೆಡೆಯೊಳ್

ಇಡಿದಡರೆ ಪೂತು ಮೊದಲಿಂ।
ಮಡಲ್ತು ಸುತ್ತಿಱಿದ ಮಲ್ಲಿಗೆಯ ಪೊದಱಿರೆ ಪಾ॥
ಲ್ಗಡಲ ಸುೞಿ ಬಳಸಿದಂತಿರೆ।
ನಡುವಿರ್ದುದು ಪಾರಿಜಾತದಂದದೆ ಚೂತಂ॥ ೯೧

ಇದು ಧಾತ್ರೀಪಾರಿಜಾತಂ ಸಕಲಸುಕವಿವೃಂದಪ್ರಣೂತಂ ವಸಂತಾ।
ಭ್ಯುದಯಪ್ರೀತಂ ಮನೋಭೂನೃಪವಿಜಯರಥಖ್ಯಾತಸೂತಂ ವನಶ್ರೀ॥
ಸುದತೀಪ್ರೇಮಾತ್ಮಜಾತಂ ಫಲತರುವರವೃಂದಾರಕತ್ವಾಭ್ಯುಪೇತಂ।
ಮದಭೃಂಗೀಗೀತಗೀತಂ ಕೃತವಿರಹಿವಿಘಾತಂ ದಲೀ ಬಾಲಚೂತಂ॥ ೯೨

ಮತ್ತಂ

ತಳಿರ್ವೊಱಿಪೊತ್ತುದಲ್ಲದಲರಂ ಸಲೆ ತಾಳ್ದುವ ಸೈಪುವೆತ್ತುದೇ।
ಮಳಯಜಮೆಯ್ದೆ ಕೆಂದಳಿರ್ಗಳಿಂದಲರಿಂ ಬಳಸಿರ್ದುದಲ್ಲದೇ॥
ಫಳಿಯಿಸಲಾರ್ತುದೇ ಅಸುಕೆ ಚೆಂದಳಿರಿಂದಲರಿಂ ಪೊದಟ್ಟಿ ಪ।
ಣ್ಗಳಿನಳವಟ್ಟ ಚೂತಮಿದು ಭೂತಳಕಲ್ಪಕುಜಾತಮಲ್ಲವೇ॥ ೯೩

ಎಂದು ಉದಾತ್ತವಚನಂಗಳಂ ಕಾವ್ಯನೌಕರ್ಣಧಾರಂ ನುಡಿದು ಮಾಣಲೊಡಮರಸಿ ಮದನವೀಣೆಯ ಕಿವಿಯಂ ಪಚ್ಚುವುದುಮಾಕೆ ದೇವಿಯೆಂದಪಳೆಂದಿಂತೆಂದಳ್:-

ಯನ್ನು "ಅಳಿಯ" ಎನ್ನದವರುಂಟೆ ? ವ॥ ಹೀಗೆ ನುಡಿಯುತ್ತ ನಡೆಯಲಾಗಿ ಮುಂದೆ ಒಂದು ಸ್ಥಳದಲ್ಲಿ-೯೧. ಮೈತುಂಬ ಹೂಬಿಟ್ಟು ಸುತ್ತಲೂ ಬಳಸಿಕೊಂಡ ಮಲ್ಲಿಗೆ ಹೊದರು ಇರಲಾಗಿ ನಡುವೆ ಇದ್ದ ಮಾವಿನ ಮರವು-ಕ್ಷೀರ ಸಾಗರದ ಸುಳಿಯ ನಡುವಿರುವ ಪಾರಿಜಾತದಂತೆ ತೋರಿತು. ೯೨. ಇದು ಭೂಮಿಯ ಮೇಲಿರುವ ಪಾರಿಜಾತ; ಸಮಸ್ತ ಸುಕವಿಗಳ ಹೊಗಳಿಕೆಗೆ ಪಾತ್ರವಾದುದು; ವಸಂತದ ಏಳಿಗೆಯಿಂದ ಪ್ರಸನ್ನವಾದುದು; ಮನ್ಮಥರಾಜನ ವಿಜಯರಥವೆಂದು ಪ್ರಖ್ಯಾತವಾದುದು; ವನಲಕ್ಷ್ಮಿಯ ಅಕ್ಕರೆಯ ಪುತ್ರ; ಫಲವೃಕ್ಷಗಳಲ್ಲಿ ದೇವವೃಕ್ಷವೆಂದು ಪರಿಗಣಿತವಾದುದು; ಮದೋನ್ಮತ್ತ ಭೃಂಗಗಳಿಂದ ಹೊಗಳಿ ಹಾಡಿಸಿಕೊಳ್ಳುವ ಮರ; ವಿರಹಿಗಳಿಗೆ ಮಾರಕವೆನಿಸಿದುದು-ಈ ಎಳೆಯ ಮಾಮರ ಮತ್ತು-೯೩. ಗಂಧದ ಮರವು ತಳಿರನ್ನು ಹೊರೆಹೊರೆಯಾಗಿ ತಾಳುವುದಲ್ಲದೆ ಹೂಬಿಡುವ ಭಾಗ್ಯವನ್ನು ಪಡೆಯಿತೆ ? ಅಶೋಕವೃಕ್ಷವೇನೊ ತಳಿರಿನೊಡನೆ ಹೂಗಳನ್ನೂ ತಾಳಿತು; ಆದರೆ ಹಣ್ಣು ಬಿಡುವ ಪುಣ್ಯ ಅದಕ್ಕಿತ್ತೆ ? ಚಿಗುರನ್ನೂ, ಹೂಗಳನ್ನೂ,ಸೊಗಸಾದ ಹಣ್ಣುಗಳನ್ನೂ ಒಟ್ಟಿಗೆ ಅಳವಡಿಸಿಕೊಂಡ ಮಾವು ಭೂಮಿಯ ಮೇಲಿನ ಕಲ್ಪವೃಕ್ಷವೇ ಅಲ್ಲವೆ ? ವ॥ ಹೀಗೆ ಉತ್ತಮವಾದ ಮಾತುಗಳನ್ನು ಕಾವ್ಯನೌಕೆಗೆ ಕರ್ಣಧಾರನೆನಿಸಿದ ಅಜಿತಸೇನರಾಜನು ನುಡಿದು ಸುಮ್ಮನಾಗಲಾಗಿ, ಅರಸಿಯು ಮದನವೀಣೆಯ ಕಿವಿಯಲ್ಲಿ ಏನೋ ಪಿಸು

ತನುಸೋಂಕಿ ಸೋಂಕಿನೊಳ್ ಬಂ।
ದು ನಿಂದ ಸಹಕಾರಕಾಂತನೊಳ್ ಸೊಗಯಿಸಿದ ॥
ತ್ತೆನಸುಂ ನಿಜಸುಮನೋವಿಕ।
ಸನದಿಂ ಪ್ರಿಯಮಲ್ಲಿಕಾಲತಾವೇಷ್ಟಿತಕಂ ॥ ೯೪

ಎಂಬುದುಮರಸನದರ್ಕೆ ಮೆಚ್ಚಿ ನಂದನಂ ತಾನುಮೊಸೆಯಿಸುವ ಬಗೆಯಿಂ ಪೊಸತುಮಾತಂ ಪೊಸೆಯಿಸೆ ಕೆಲದೊಳೆಂದು ಮಾಕಂದಾನೋಕಹಮಂ ತೋಱಿ

ನೆಱಿಯ ಪಣ್ಮುಟ್ಟೆ ಕೈವಂ।
ದೆಱಗಿದುದಿದು ದೇವ ನಿನಗೆ ಹೃದಯಂ ತಾನೆ ॥
ತ್ತೆಱದುದೆನವೇಡ ಧಾರಿಣಿ।
ಯೆಱಿಯಂಗೆಱಗುವುದು ಚೋದ್ಯಮೇ ಧರಣೀಜಂ ॥ ೯೫

ಆಗಳರಸನದರ್ಕೆ ಪರಕೆಯೆಂದು ಮೆಚ್ಚುಗೊಟ್ಟು ನಡೆವುದುಂ ಮುಂದೊಂದು ಪಲ್ಲವಿತಕಂಕೆಲ್ಲಮಂ ನೋಡಿ

ಅತಿರಾಗತೆಯಿಂ ಸ್ತ್ರೀಪದ।
ಹತಿಗಂ ದಳವೇಱಿಯಲರ್ದಶೋಕಂ ಫಳಹೀ ॥
ನತೆಗೆಡೆಯಾದುದು ಕಡೆಯೊಳ್।
ಮತಿಗೆಟ್ಟಂಗೀಗುಮತ್ಯಯಂ ವ್ಯತ್ಯಯಮಂ ॥ ೯೬

ಮಾತಾಡಿದಳು. ಆಗ ಆಕೆ ದೇವಿಯುವರು ಹೀಗೆನ್ನುವರೆಂದು ನುಡಿದಳು-೯೪. "ತನ್ನ ವಲ್ಲಭನಾದ ಸಹಕಾರ (ಮಾಮರ) ವೆಂಬ ವೃಕ್ಷದಲ್ಲಿ ಮೈಗೆ ಮೈ ಸೋಂಕಿಸಿಕೊಂಡು 'ಲತಾವೇಷ್ಟಿತಕ' ವೆಂಬ ಆಲಿಂಗನ ಸುಖದಿಂದ ಮನಸ್ಸು ಅರಳಿದಂತೆ ಹೂವರಳಿಸಿ ನಿಂತುಕೊಂಡು ಮಲ್ಲಿಕಾಲತೆ ಸೊಗಸುತ್ತಲಿದೆ." ವ॥ ಈ ಮಾತಿಗೆ ಅರಸು ಮೆಚ್ಚಿದನು. ಆಗ ನಂದನನೆಂಬ ಸಚಿವನು ತಾನೂ ಒಂದು ಹೊಸ ಮಾತನ್ನು ಸೊಗಸಾಗಿ ಆಡಬೇಕೆಂದು ಪಕ್ಕದಲ್ಲಿದ್ದ ಇಮ್ಮಾವಿನ ಮರವನ್ನು ತೋರಿ- ೯೫. "ದೇವ, ಕಾಂಡದಿಂದ ತುದಿವರೆಗೆ ಚಿಗಿತ ಈ ಮರವು ಹಣ್ಮುಟ್ಟಿ ಕೈಜೋಡಿಸಿ ನಿನಗೆ ಎರಗಿದೆ. ಅದರ ಮನಕ್ಕೆ ಈ ಭಾವನೆ ಹೇಗೆ ಅರಿವಾಯಿತೆಂದು ಕೇಳಬೇಡ. ಭೂಮಿಯ ಒಡೆಯನಿಗೆ ಭೂಮಿಯಲ್ಲಿ ಹುಟ್ಟಿದವರು ಎರಗುವುದು ಸೋಜಿಗವೆ?" ವ॥ ಈ ಮಾತಿಗೆ ಹರಕೆಯೆಂದು ಮೆಚ್ಚಿ, ಮುನ್ನಡೆಯಲಾಗಿ ಮುಂದೆ ಒಂದು ಚಿಗುರಿಟ್ಟ ಅಶೋಕ ವೃಕ್ಷವನ್ನು ನೋಡಿ- ೯೬. ಅತಿಯಾದ ಪ್ರಣಯಕ್ಕೆ ಅಧೀನನಾಗಿ ಹೆಣ್ಣಿನ ಒದೆಗೆ ಮೈ ಚಿಗುರುವ ಅಶೋಕವು ಫಲ ಹೀನತೆಗೆ ಗುರಿಯಾಯಿತು. ಮತಿಗೆಟ್ಟು ಮಿತಿ ಮೀರುವವನಿಗೆ ದುರ್ಗತಿಯೆ?

ಎಂದಲ್ಲಿಂ ತಳರ್ದು ವನಶ್ರೀವಿಳಾಸಮಂ ಭಾವಿಸುತ್ತುಂ ಬರೆ ಮುಂದೊಂದೆಡೆಯ ತೆಱಪಿನೊಳ್ ನಳನಳಿಪ ಕೇಸರದ ಸಸಿಯೊಳ್ ತಡಂಗಲಿಸಿ ಬೆಳೆದ ದವನದ ಕಣ್ಗೆವಂದ ವನದ ನಡುವೆ ದಿಟ್ಟಿಗೆವರೆ ಕಟ್ಟೆ ನೇರ್ವಟ್ಟ ಬಾಳೆವೇರ ಕೇರ್ಗಳೊಳಂ, ಅಂದಂಬೆತ್ತ ಬಂದುಗೆಯೆಸಳಿಂ ಕತ್ತರಿಸಿ ಪತ್ತಿಸಿದ ಚಿತ್ರಪತ್ರಂಗಳಳುಂಬಮಾದ ಪೊಂಬಾಳೆಯ ಕಂಬಂಗಳೊಳಂ, ಅರಲ್ದ ತಾವರೆಯ ತಣ್ಣೆಲೆಯ ಪಲಗೆಗಟ್ಟಿನೋವರಿಗಳೊಳಗಣ ಕಪ್ಪುರವಳಿಕಿನಳವಟ್ಟ ಜಗಲಿಗಳ ಮೇಲೆ ಪಸರಿಸಿದ ಕುಸುಮದೆಸಳ ಪಸೆಗಳೊಳಂ, ಅಮರೆ ತಾವರೆಯ ನೂಲಿಂ ಕೀಲಿಸಿದೆಳವಾೞೆಯ ಸುೞಿಯೆಲೆಯ ತಳತಳಿಪ ಮೇಲ್ಕಟ್ಟಿನೊಳಂ, ಅದಱೊಳಲ್ಲಲ್ಲಿಗೊಂದೊಂದು ಕೆಂದಾವರೆಯರಲ್ಗಳಂ ಕೊಟ್ಟು ಕೊಸಗಿನೆಸಳಂ ಬಿಗಿಗಟ್ಟೆ ಪೊಸಯಿಸೆ ಮನಕ್ಕೆ ಪದೆಪನೀವ ಪದಂಗಳೊಳಂ, ಎಳದೆಂಗಿನೆಳೆಯೆಲೆಯನಮರ್ಕೆವಡೆಯೆ ಪೆಣೆದು ಸಂಪಗೆಯ ಮುಗುಳನಗೆಗಳಿಂ ತೆತ್ತಿಸಿ ಬಿತ್ತರಂಬಡೆದ ಜವಳಿವಡಿಗಳೊಳಂ, ಅಸುಗೆಯ ಮಿಸುಪ ಪೊಸದಳಿರಿಂದೆಸೆಯೆ ಪೊದೆಯಿಸಿ ವಾಸಂತಿಯ ಮುಗುಳ ಸೂಸಕದಿಂ ದೇಸೆವಡೆದ ವಿಳಾಸವಾಸಲಕ್ಷ್ಮಿಯ ಚುಂಬಿನಂತೆ ಚಂಚುರವಾದ ಚಂಚುಲೋವೆಗಳೊಳಂ, ಓರನ್ನವಾದ ಚಂದನದ ತಳಿರ ವಂದನಮಾಲೆಯೊಳಂ, ಇಮ್ಮಾವಿನೆಳದಳಿಸಿ ಪೊಳೆವ ಪೂಗುಡಿಯ ಗುಡಿಯೊಳಂ, ಅವಿರಳಮಾಗಿ ತಳಿದ ಕುಂಕುಮಜಳದ ಚಳೆಯದೊಳಂ, ಆವ ಬಗೆಗಂ ವಾಸರವಾದ ನಾಗಕೇಸರದ

ವ॥ ಹೀಗೆಂದು ನುಡಿದನು. ಆ ಬಳಿಕ ಅಲ್ಲಿಂದ ಹೊರಟು ಉದ್ಯಾನ ಸೌಂದರ್ಯವನ್ನು ಮೆಚ್ಚುತ್ತ ಬರಲಾಗಿ ಮುಂದೆ ಮರಗಳಿಲ್ಲದೆ ತೆರವಾದ ಪ್ರದೇಶದಲ್ಲಿ ಮಲಮಲಿಸುವ ಬಕುಳದ ಸಸಿಯನ್ನು ತಬ್ಬಿಕೊಂಡು ಬೆಳೆದ ದವನದ ನಯನಮನೋಹರವಾದ ವನದ ನಡುವೆ ಕಣ್ಣು ಸೆಳೆವಂತೆ ಕಟ್ಟಿ ಏರ್ಪಡಿಸಿದ ಬಾಳದ ಬೇರಿನ ಗೋಡೆಗಳು ಚೆಲುವಾದ ಬಂಧೂಕ ಪುಷ್ಪದ ದಳಗಳನು ಕತ್ತರಿಸಿ ಹತ್ತಿಸಿದ ಚಿತ್ರ ಚಿತ್ರವಾದ ಎಲೆಗಳ ಸಮುದಾಯ; ಮನೋಹರವಾದ ಹೊಂಬಾಳೆಯ ಕಂಬಗಳು; ಅರಳಿದ ತಾವರೆಯ ತಂಪಾದ ದಳಗಳಿಂದ ರಚಿಸಿದ ಹಲಗೆಗಳ ಲತಾಗೃಹ; ಅದರೊಳಗೆ ಕಪ್ಪುರದ ಹಳುಕುಗಳಿಂದ ಅಳವಡಿಸಿದ ಜಗಲಿ; ಆ ಜಗಲಿಗಳ ಮೇಲೆ ಹರಡಿದ ಹೂವಿನೆಸಳುಗಳ ಹಸೆಗಳು; ತಾವರೆ ನಾಳದ ನೂಲಿನಿಂದ ಅಚ್ಚುಕಟ್ಟಾಗಿ ಹೆಣೆದು ಕಟ್ಟಿದ ಎಳೆಯ ಬಾಳೆಯ ಸುಳಿಯೆಲೆಯ ತಳತಳಿಸುವ ಮೇಲ್ಕಟ್ಟು; ಅದರೊಳಗೆ ಅಲ್ಲಲ್ಲಿಗೆ ಒಂದೊಂದು ಕೆಂದಾವರೆಯ ಹೂವನ್ನಿಟ್ಟು ಬೆಟ್ಟದಾವರೆಯ ಎಸಳನ್ನು ಬಿಗಿದು ಕಟ್ಟಿ ಮನಃಸಂತೋಷವನ್ನುಂಟು ಮಾಡುವಂತೆ ಅಳವಡಿಸಿದ ಬಾಗಿಲುಗಳು; ಎಳೆತೆಂಗಿನ ಎಳೆಯ ಎಲೆಯನ್ನು ಒತ್ತಾಗಿ ಹೆಣೆದು ಸಂಪಗೆಯ ಮೊಗ್ಗುಗಳನ್ನು ಮೊಳೆಗಳಂತೆ ಅಳವಡಿಸಿ ಸೊಗಸಾಗಿ ರಚಿಸಿದ ಜೋಡಿ ಕದಗಳು; ಅಶೋಕದ ಮಿರುಗುವ ಹೊಸ ಚಿಗುರೆಲೆಗಳನ್ನು ಅಂದವಾಗಿ ಹೊದಿಸಿ, ಅತಿ ಮುಕ್ತಕದ ಮೊಗ್ಗುಗಳ ಸೂಸಕಗಳಿಂದ ಬೆಡಗು ಪಡೆದ ವಿಲಾಸ ಗೃಹಲಕ್ಷ್ಮಿಯ ಚುಂಬಿನಂತೆ ಸುಂದರವಾದ ಚುಂಚು ಲೋವೆಗಳು; ಓರಣವಾಗಿ ಕಟ್ಟಿದ ಶ್ರೀಗಂಧದ ತಳಿರ ತೋರಣಗಳು; ಇಮ್ಮಾವಿನ ಮಿರುಗುವ ಹೂಗುಡಿಗಳ ಧ್ವಜಗಳು; ದಟ್ಟವಾಗಿ ತಳಿದ

ರಜದ ರಂಗವಲ್ಲಿಯೊಳಂ, ಭಂಗಿವೆತ್ತು ಕಂತುರಾಜನ ಮಂತ್ರಶಾಲೆಯುಂ, ಶೈತ್ಯದ ನೃತ್ಯಭವನಮುಂ, ಕಂಪಿನ ಕಾರಾಗಾರಮುಂ, ಚೆಲ್ವಿನ ಕುಲಗೃಹಮುಮಿರ್ಪಂತಿರ್ದ ವಸಂತಗೃಹಮಂ ಪೊಕ್ಕು ನಡುವಣೆಳಗೌಂಗಿನ ಬಾಳ್ಗಂಬದೊಳ್ ತೊಡರ್ಚಿದ ಲತೆಯ ತೂಗುಂಮಂಚದೊಳ್ ಶಶಿಪ್ರಭಾಮಹಾ ದೇವಿಯುಂ ತಾನುಂ ಕುಳ್ಳಿರ್ದು

ತಾಳಮನಿತ್ತು ಸಮ್ಮನಿಸದೊತ್ತುವ ಪಂಚಮನುಣ್ಚರಕ್ಕಣಂ ॥
ಮೇಳತೆಯಿಲ್ಲ ಬೀಣೆಯ ಸರಂ ಬಿಡದಿಲ್ಲಿಯೆನಿಪ್ಪ ಠಾಯೆಯಿಂ ॥
ದಾಣತಿಮಾಡಿ ಸಾಳಗದ ದೇಸಿಯ ಗೀತಮನಂದು ಪಾಡುವಿಂ ।
ಪಾಣನನುರ್ವರಾಧಿಪತಿ ಲೀಲೆಯಿನೆಕ್ಕಲಗಾಣನೊರ್ವನಂ ॥ ೯೭

ಕೇಳುತ್ತುಮಿರ್ದಂ ಅನ್ನೆಗಮಿತ್ತ ಕುಸುಮಾಪಚಯದೋಹಳಹೃದಯಮಾಗಿ

ಕಳಹಂಸೀಯಾನಮುತ್ಕಂಪಿತಕುಚಭರಸಂವ್ಯಾನಮಾಕೇಕರತ್ವಿ ।
ಡ್ವಳಿತೋದ್ಯಾನಂ ಗಳದ್ವಿಶ್ಲಥಕಬರಿಭರಾಂತಃಪ್ರಸೂನಂ ಚಳದ್ದೋ ॥
ರ್ವಳಯೋದ್ಯದ್ಧ್ವಾನಮುತ್ಸಾರಿತಸರಣಿಲತಾನ್ಯೋನ್ಯಸಂಧಾನಮಂತಾ ।
ಗಳೆ ವಾರಸ್ತ್ರೀಪ್ರತಾನಂ ತಳರ್ದುದಳಿವಧೂಗಾನದತ್ತಾವಧಾನಂ ॥ ೯೮

ಕುಂಕುಮದ ನೀರಿನ ಚಳೆಯು; ಯಾರ ಮನಸ್ಸನ್ನಾದರೂ ಆಕರ್ಷಿಸಿ ಮೆಚ್ಚಿಸುವ ನಾಗ ಸಂಪಗೆಯ ಪರಾಗದಿಂದ ರಚಿಸಿದ ರಂಗವಲ್ಲಿ:- ಇವೆಲ್ಲವುಗಳೊಡನೆ ಸೊಗಸಾಗಿ ಮನ್ಮಥರಾಜನ ಮಂತ್ರಿಶಾಲೆಯೊ ಪರಿಮಳದ ಕಾರಾಗೃಹವೊ, ಸೌಂದರ್ಯದ ತವರುಮನೆಯೊ ಎಂಬಂತಿದ್ದ ವಸಂತಮಂಡಪವನ್ನು ಪ್ರವೇಶಿಸಿ, ನಡುವಿನ ಎಳೆಯಡಕೆ ಮರದ ಕಂಬಗಳಿಗೆ ಕಟ್ಟಿದ ಬಳ್ಳಿಹಗ್ಗದ ತೂಗುಮಂಚದಲ್ಲಿ ಶಶಿಪ್ರಭಾದೇವಿಯೂ ತಾನೂ ಕುಳಿತುಕೊಂಡರು. ೯೭. ತಾಳಕ್ಕೆ ಅನುಗುಣವಾಗಿ ಪಂಚಮ ಸ್ವರದಲ್ಲಿ ಹೊರಡುವ ಈತನ ಧ್ವನಿಯ ಮಾಧುರ್ಯ ವೀಣೆಗೆಂದೂ ಬಾರದು ಎಂದೆನಿಸುವಂತೆ ಠಾಯೆಯಿಂದ ಆಲಾಪಮಾಡಿ ಸಾಳಗದ ಹಾಗು ದೇಸಿಯ ಗೀತವನ್ನು ಹಾಡುವ ಒಬ್ಬ ತನಿ ಸಂಗೀತಗಾರನ ಗಾಯನವನ್ನು- ವ॥ ಅರಸನು ಕೇಳುತ್ತಿದ್ದನು. ಅಷ್ಟರಲ್ಲಿ ಹೂಗಳನ್ನು ಆಯುವ ಕ್ರೀಡೆಗೆ ಮನಸ್ಸಾಗಿ- ೯೮. ಕಲಹಂಸಗಳಂತೆ ಮೃದುಗತಿಯಿಂದ ನಡೆಯುತ್ತಿದ್ದರೂ ಕದಕ್ಕದಿಸುವ ಮೊಲೆಗಳಿಂದ ಹೊದೆದ ಸೆರಗು ಸರಿದಾಡುತ್ತಿರಲು, ಕಡೆಗಣ್ಣಿನ ಕಾಂತಿಯಿಂದ ಉದ್ಯಾನಪ್ರದೇಶವನ್ನೆಲ್ಲ ಬೆಳಗುತ್ತ, ಸಡಿಲಿದ ಕೇಶಭಾರದಿಂದ ಹೂಗಳು ಉದುರುತ್ತಿರ ಲಾಗಿ, ಬೀಸುವ ಕೈಗಳಲ್ಲಿ ಬಳೆಗಳ ಕಿಂಕಿಣಿ ಬಲವಾಗಿ ಉಲಿಯುತ್ತಿರಲು, ಕಾಲಿಗೆ ಅಡ್ಡವಾಗಿ ಬಂದ ಬಳ್ಳಿಗಳನ್ನು ಸರಿಸಿ ಹೊಂದಿಸುತ್ತ, ಹೆಣ್ದುಂಬಿಗಳ ಗುಂಜಾ

ಅಂತು

ತಳಿರ್ದಸುಕೆಯಿನಸುಕೆಗೆ ವಿಚ ।
ಕಿಳದಿಂ ವಿಚಕಿಳಕೆ ಮಾವಿನಿಂ ಮಾವಿಂಗೊ ॥
ಳ್ದಳಿರ್ಗಲರ್ಗೆ ಫಲಕ ಪರಿದ ।
ತ್ತೆಳವೆಂಡಿರ ನೆರವಿ ನಲಿದು ತಾಱುಂ ಬಱಿಯಂ ॥ ೯೯

ಅಳಿಗೆ ಕುರುಳ್ ತಳಿರ್ಗೆತಳಂ ।
ಕಳಿಕೆಗೆ ಬೆರಲಲರ್ಗೆಕಣ್ಮಲರ್ ದೊರೆಯೆನೆ ಕೋ ॥
ಮಳಲತೆಗಳೊಳಂ ಸಲೆ ಕೋ ।
ಮಳೆಯರ್ ತಡವಾಯ್ದರೆಯ್ದೆ ಪೂಗೊಯ್ವೆಡೆಯೊಳ್ ॥ ೧೦೦

ಆಗಳ್ ಮತ್ತೊರ್ವಳ್

ತೆಗೆದು ನನೆಗೊಯ್ದು ಬಿಡೆ ಮೇ ।
ಲೊಗೆವೆಳದಳಿರ್ಗೊಂಬು ಪೋಲ್ತುದಾಪೂವಿನ ಸೂ ॥
ಱಿಗೆ ತೊಪಲಂ ಪಿಡಿದು ಮದಾ ।
ಳಿಗಳುಲಿಯಿಂ ಪುಯ್ಯಲಿಡುವಶೋಕೆಯ ಕೈಯಂ ॥ ೧೦೧

ತತ್ಸಮೀಪದೊಳ್

ನಿಳ್ಕುವರಲ್ಗೊಳಲ್ಕೆವಱಿಕೊಳಪ್ಪುದೆನಿಪ್ಪ ಮರಲ್ದ ಪೂಮರಂ ।
ಗಳ್ಕೆಲವಿರ್ದೊಡಂ ಕೆಲದೊಳೊಲ್ಲದೆ ನಲ್ಲಳನುಚ್ಚಶಾಖೆಗಾ ॥
ಗಳ್ಕರದುಯ್ದನೊರ್ವನಲರ್ವಿಲ್ಲನ ಬಾಳ್ಕೆದಲಾದ ತೋಳ್ಕೆದಲ್ ।
ತುಳ್ಕುವ ನುಣ್ಪನೀಕ್ಷಿಪಳಿಪಂ ಬಗೆಯೊಳ್ ಮಿಗೆ ಕಾದು ಕಾದಲಂ ॥ ೧೦೨

ರವಕ್ಕೆ ಕಿವಿಗೊಟ್ಟು ವಾರಸ್ತ್ರೀಯರ ಸಮೂಹವು ಹೊರಟಿತು. ೯೯. ಚಿಗುರಿದ ಅಶೋಕವೃಕ್ಷಗಳನ್ನು ಕಂಡು ಮರದಿಂದ ಮರಕ್ಕೆ, ಮಲ್ಲಿಗೆಯ ಬಳ್ಳಿಯಿಂದ ಬಳ್ಳಿಗೆ, ಮಾವಿನಿಂದ ಮಾವಿಗೆ–ಚಿಗುರನ್ನೂ, ಹೂವನ್ನೂ, ಹಣ್ಣುಗಳನ್ನೂ ಹುಡುಕಿಕೊಂಡು ಎಳೆಹರಯದ ಹೆಣ್ಣುಗಳ ಹಿಂಡುಗಳು ಕೋಲಾಹಲದಿಂದ ನುಗ್ಗಿದವು. ೧೦೦. ದುಂಬಿಗಳಿಗೆ ಇವರ ತಲೆಗೂದಲೂ, ಚಿಗುರೆಲೆಗಳಿಗೆ ಅಂಗೈಗಳೂ, ಮೊಗ್ಗುಗಳಿಗೆ ಬೆರಳುಗಳೂ, ಹೂಗಳಿಗೆ ಕಣ್ಣುಗಳೂ ಸರಿಸಾಟಿಯೆನಿಸಲಾಗಿ, ಕೋಮಲವಾದ ಬಳ್ಳಿಗಳೊಡನೆ ಕೋಮಲೆಯರು ತಾವೂ ಅವುಗಳ ಬಳಗವೇ ಎನಿಸಿ ಹೂಗೊಯ್ದರು. ಆಗ ಒಬ್ಬಳು–೧೦೧. ಎಳೆದು ಹೂವನ್ನು ಕೊಯ್ದು ಬಿಟ್ಟೊಡನೆ ಮೇಲೆ ನೆಗೆದ ಎಳೆಯ ಚಿಗುರುಕುಡಿಯು–ಈ ಹೂವಿನ ಸುಲಿಗೆಗೆ ಬೆದರಿ, ಕೈಯಲ್ಲಿ ಹಸಿಯೆಲೆ ಹಿಡಿದು ದುಂಬಿಗಳ ಧ್ವನಿಯಿಂದ ಹುಯಿಲಿಡುವ ಕೈಯಂತೆ ತೋರಿತು. ಅದರ ಬಳಿಯಲ್ಲಿಯೆ–೧೦೨. ತನ್ನ ನಲ್ಲೆಯ ಕೈಗೆ ಸುಲಭವಾಗಿ ನಿಲುಕುವಂತಿರುವ ಹೂಮರಗಳು ಹತ್ತಿರವೆ ಇದ್ದರೂ, ಒಬ್ಬನು ಅವು ಬೇಡವೆಂದು, ಎತ್ತರವಾದ ಕೊಂಬೆಗಳಲ್ಲಿ ಹೂವಿರುವ ಮರಕ್ಕೆ ಅವಳನ್ನು ಕರೆದೊಯ್ದನು. ಮನ್ಮಥನ ಜೀವಸ್ಥಾನವೆನಿಸುವ ಅವಳ ಕಂಕುಳಿನ ನುಣುಪನ್ನು ನೋಡಬೇಕೆಂಬ ಹಂಬಲೇ ಅದಕ್ಕೆ ಕಾರಣವಾಗಿತ್ತು. ವ॥ ಇನ್ನೊಂದೆಡೆಯಲ್ಲಿ ಹೆಣ್ದುಂಬಿ

ಅದಲ್ಲದೆಯುಮೊಂದೊಂದೆಡೆಯೊಳ್ ಮಧುಕರೀಗೀತಶಾಲೆಯಂತಿರ್ದ ಮಾವಿನ ಮಾಲಿಕೆಯೊಳಲರ್ಗೊಯ್ವಲ್ಲಿ

ನಿನ್ನಯ ಸುಟೆಗುರುಳೆಲ್ಲವಿ ।
ವೆನ್ನಯ ಮಱೆಯೆಂದು ಬಂದು ತಲೆವಿಡಿದವೊಲಾ ॥
ಚೆನ್ನೆಯ ತಲೆವಿಡಿದಿರ್ದುದು ।
ತಾಂ ನಱುಗಂಪಿಂಗೆ ತುಂಬಿ ದುಱುದುಂಬಿ ಕರಂ ॥ ೧೦೩

ದಾಳಿಂಬದ ಬಿತ್ತಂ ಕೊ ।
ಳ್ವಾಳೋಚದೆ ನೋಟ್ಪ ಧವಳಲೋಚನೆಯ ಕಟಾ ॥
ಕ್ಷಾಳೋಕಂ ಮುತ್ತಿನ ಝುಂ ।
ಫಾಳಂ ಕವಿದಂತೆ ಬಳಸಿದುದು ತತ್ಕುಜಮಂ ॥ ೧೦೪

ಪೊಳೆವೆಲೆಮಱೆಯೊಳ್ ತಲೆಯಂ ।
ಗಿಳಿ ತೋಱುತ್ತಿರ್ದೊಡದಱ ಚಂಚೂಪುಟಮಂ ॥
ಕಳಿಕೆಯೆಗೆತ್ತು ಕೊಳಲ್ಕೊ ।
ರ್ವಳಬಲೆ ಕೈನೀಡಿ ನಗಿಸಿದಳ್ ಕೆಳದಿಯರಂ ॥ ೧೦೫

ನಣ್ಬುಟೆಲೊಳಗದಿರ್ಮುತ್ತೆ ಪ ।
ವಣ್ವಡೆ ಕಟ್ಟಲಿಸಿ ಬೆಳೆದು ಬಳಸಿರ್ದೊಡದಂ ॥
ತಣ್ಬೆಳಗನೀಯೆ ಬೆಳತಿಗೆ ॥
ಗಣ್ಬೆಳಗೊಳಪೊಕ್ಕು ಚಪಳೆ ಕಳಿಕೆಯನಾಯ್ದಳ್ ॥ ೧೦೬

ಗಳ ಗಾಯನಶಾಲೆಯಂತಿದ್ದ ಮಾವಿನ ತೋಪಿನಲ್ಲಿ ಹೂವೆತ್ತುತ್ತಿರುವಾಗ–೧೦೩. "ಸುಳಿಗುರುಳೆಂದು ಹೇಳಿ ನನ್ನ ಮರಿಗಳನ್ನೆಲ್ಲ ನಿನ್ನ ತಲೆಯಲ್ಲಿ ಇಟ್ಟುಕೊಂಡಿರುವೆಯಾ?" ಎಂದು ಅವಳ ತಲೆಯನ್ನೆ ಹಿಡಿದುಕೊಳ್ಳುವಂತೆ, ಅವಳ ನರುಗಂಪಿಗೆ ಮರುಳಾಗಿ ದುಷ್ಟ ದುಂಬಿಗಳು ಆಕೆಯ ತಲೆಯನ್ನು ಮುಸುಕಿದುವು. ೧೦೪. ದಾಳಿಂಬದ ಬೀಜವನ್ನು ತೆಗೆದುಕೊಳ್ಳಬೇಕೆಂಬ ಯೋಚನೆಯಿಂದ ಒಬ್ಬಳು ನೋಡುತ್ತಿರಲಾಗಿ ಅವಳ ಕಣ್ಣುಗಳ ಬೆಳ್ಳನೆಯ ಕಾಂತಿಯಿಂದ ಆ ಗಿಡಕ್ಕೆ ಮುತ್ತಿನ ಮೇಲ್ಮುಸುಕನ್ನು ಹೊದಿಸಿದಂತೆ ಆಯಿತು. ೧೦೫. ಹೊಳೆಯುವ ಎಲೆಯ ಮರೆಯಲ್ಲಿ ತಲೆಯಿಟ್ಟುಕೊಂಡಿದ್ದ ಗಿಳಿಯ ಕೊಕ್ಕನ್ನು ಕಂಡು, ಒಬ್ಬಳು ಅದು ಮೊಗ್ಗೆಂದು ಕಿತ್ತುಕೊಳ್ಳಲು ಕೈನೀಡಿ ಗೆಳತಿಯರನ್ನು ನಗಿಸಿದಳು. ೧೦೬. ಒಂದೆಡೆಗೆ ಅದಿರುಗಂತಿ ದಟ್ಟವಾಗಿ ಬೆಳೆದು ಏನೂ ಕಾಣದಂತೆ ಕತ್ತಲಿಟ್ಟಿತ್ತು. ಆದರೆ ಚಪಲೆಯೊಬ್ಬಳು ಅಲ್ಲಿ ಹೋಗಿ ತನ್ನ ಕಣ್ಣಿನ ತಂಬೆಳಕನ್ನು ಪಸರಿಸಿ ಒಳಹೊಕ್ಕು ಸುಲಭವಾಗಿ ಅದರ ಮೊಗ್ಗುಗಳನ್ನು ಆಯ್ದುಕೊಂಡಳು. ಮತ್ತೊಂದು ಪ್ರದೇಶದಲ್ಲಿ–

ಮತ್ತೊಂದೆಡೆಯೊಳ್

ಮಿಳಿರ್ವೆಳ ಮಾವಿನೊಳ್ದಳಿರ್ಗಳೊಳ್ ನಿಮಿರ್ದಲ್ಲಿ ಬೃಹತ್ಪಯೋಧರಂ ।
ಗಳ ಕಡುಬಿಣ್ಪು ಬಳ್ಕಿಸೆ ಲತಾಂಗಮಸಾಪದದಲ್ಲಿ ತೂಳ್ದಿ ಕೈ ॥
ಯಳವಿಗೆಗೊಂಬು ತೆಂಬೆಲರ ತೀಟದಿನೊಯ್ಯನೆ ಸಾರೆ ನಾರಿಯೇಂ ।
ತಳೆದಳೊ ತನ್ನ ಪೆರ್ಮೊಲೆಗಮಾಅಲರ್ಗಂ ಮುಳಿಸಂ ಪ್ರಸಾದಮಂ ॥ ೧೦೭

ಆ ವಿಳಾಸವತಿಯಲ್ಲದೆಯುಂ ಮತ್ತೊರ್ವಳ್

ಮೃದುತಳಕಾಂತಿಯಿಂ ಮಿಳಿರ್ವ ಪೂಗುಡಿ ಕೆಂದಳಿರ್ದೊಂಗಲಂತೆ ತೋ ।
ಱೆದೊಡದನಲ್ಲದೊಳ್ದಳಿರ್ಗೆ ನಿಳ್ಕಿದೊಡಂತಲರ್ಗೊಂಚಲಂತೆ ತೋ ॥
ಱೆದೊಡೆ ನಖಾಂಶುವಿಂದದುಮನೊಲ್ಲದೆ ಮಾಮರನಲ್ಲಿದೊಂದು ಮಾ ।
ಯದ ಮರನೆಂದು ಸಾರ್ದಳತಿಮುಗ್ಧೆ ಕುಜಾಂತರಮಂ ವನಾಂತದೊಳ್ ॥ ೧೦೮

ತಳಿರ್ದೊಂಗಲನುಡಿದೆಳಮಿಡಿ ।
ಗಳನಱಸುವ ಪದದೊಳಲ್ಲಿ ಮೆಯ್ಗರೆದಿರ್ದ ॥
ವ್ವಳಿಸೆ ಕಪಿ ಬೆದರಿ ಕೆಳೆಯನ ।
ನೆಳೆಯಳ್ ಬಂದಪ್ಪಿ ಬಿಡದೆ ನಡುಗುತ್ತಿರ್ದಳ್ ॥ ೧೦೯

೧೦೭. ಎಳಮಾವಿನ ಚೆಲುವಾದ ತಳಿರಿನಿಂದ ತುಂಬಿದ ಕೊಂಬೆಯೊಂದು ಮೇಲಕ್ಕೆ ನಿಮಿರಿಕೊಂಡಿತ್ತು. ಅದನ್ನು ಹಿಡಿದು ತಳಿರನ್ನು ಆಯಲೆಂದು ಹೊರಟ ಸ್ತ್ರೀಯೊಬ್ಬಳಿಗೆ ಘನವಾದ ಮೊಲೆಗಳ ಭಾರದಿಂದ ತನ್ನ ದೇಹ ಬಳುಕುತ್ತಿರುವುದರಿಂದ ಅದನ್ನು ನಿಲುಕಿ ಹಿಡಿಯುವುದು ಸಾಧ್ಯವೆನಿಸಲಿಲ್ಲ. ಆಗ ತೆಂಗಾಳಿಯ ಅಲೆಯೊಂದರಿಂದ ಆ ಕೊಂಬೆ ತನ್ನ ಕೈಯಳವಿಗೆ ಬಾಗಿ ಬರಲಾಗಿ ಅದನ್ನು ಹಿಡಿದುಕೊಂಡ ಆ ಹೆಣ್ಣಿಗೆ ತನ್ನ ಮೇಲೆ ಕೋಪವೂ, ಗಾಳಿಯ ಬಗೆಗೆ ಮೆಚ್ಚುಗೆಯೂ ಏಕಕಾಲದಲ್ಲಿ ಉಂಟಾದುವು. ಆ ಬೆಡಗುಗಾತಿಯಲ್ಲದೆ ಮತ್ತೊಬ್ಬಳು–೧೦೮. ತನ್ನ ಕೋಮಲವಾದ ಕೈಯಿಂದ ಮಿರುಗುವ, ಮಾವಿನ ಹೂಗುಡಿಗೆ ಕೈನೀಡಲಾಗಿ, ಅಂಗೈಕಾಂತಿಯಿಂದ ಅದು ಕೆಂದಳಿರ ಗೊಂಚಲಂತೆ ತೋರಿತು; ಅದನ್ನು ಬಿಟ್ಟು ಮಾವಿನ ಕೆಂದಳಿರಿಗೇ ಕೈನೀಡಿದಳು; ಅವಳ ಕೈಯುಗುರ ಕಾಂತಿಯಿಂದ ಅದು ಬಿಳಿಯ ಹೂಗೊಂಚಲಂತೆ ತೋರಿತು; ಆದುದರಿಂದ "ಛೇ! ಇದು ಮಾವಿನಮರ ವಲ್ಲ; ಮಾಯು (ಇಂದ್ರಜಾಲ) ದ ಮರ" ಎಂದುಕೊಂಡು ಆ ಮುಗ್ಧೆ ಅದನ್ನು ತೊರೆದು ಮತ್ತೊಂದು ಮರಕ್ಕೆ ಹೋದಳು. ೧೦೯. ತಳಿರೆಲೆಗಳನ್ನು ಹರಿದು ಎಳೆಯ ಮಿಡಿಗಳನ್ನು ಹುಡುಕುವ ಪ್ರಯತ್ನದಲ್ಲಿರುವಾಗ ಅದರೊಳಗೆ ಅಡಗಿ ಕೊಂಡಿದ್ದ ಕೋತಿ ಕವಕ್ಕನೆ ಎದ್ದು ಬರಲಾಗಿ, ಎಳೆಯಹೆಣ್ಣು ಗಾಬರಿಯಾಗಿ ಓಡಿಬಂದು

ಎತ್ತಣವಳಿಮಾಳಿಕೆ ನೆಲ ।
ಸಿತ್ತಿದಱಿಕೊಳೆನಿಪ್ಪ ತೆಱದೆ ಪೂಗೊಯ್ವೆಡೆಯೊಳ್ ॥
ಮುತ್ತಿದುದು ಕುವಲಯಾಕ್ಷಿಯ ।
ಬಿತ್ತರದ ಕಟಾಕ್ಷಮಾಳೆ ಮಿಗೆ ಸಂಪಗೆಯಂ ॥ ೧೦೦

ಮತ್ತೊರ್ವಳ ಲರ್ಗೊಳಲ್ ನಡೆವಲ್ಲಿ

ಮುಡಿಗಿಕ್ಕಿದೆನಾಂ ನಿನ್ನಯ ।
ಬೆಡಂಗುವಡೆದೆಸೆವ ಕರ್ಪನೆಂದು ತಮಾಳಂ ॥
ಮುಡಿಗಿಕ್ಕಿದವೋಲೆಲರಿಂ ।
ದುಡಿದಲರ್ಗುಡಿ ಬಿಟ್ಟುದೊಂದವಳ ಮುನ್ನಡಿಯೊಳ್ ॥ ೧೦೧

ಆಗಳ್

ಒದೆದೊಡೆ ದುಷ್ಟನಂತಸುಗೆ ಪಲ್ಲವಿಸಿತ್ತು ಮುಗುಳ್ತುದಾಸ್ಯಪ ।
ದ್ಮದ ಮಧುವಿಂದೆ ಸುಯ್ಯೆಲರ್ಗೆ ತಾಂ ಬಕುಳಂ ಶಠನಂತರಲ್ದುದ ॥
ಪ್ಪಿದೊಡೆ ಲತಾಂಗಿಯರ್ ಕುರವಕಂ ನೆರೆ ದಕ್ಷಿಣನಂತೆ ನೋಡೆ ಮಾ ।
ಡಿದುದನುಕೂಲನಂತೆ ತಿಳಕಂ ಬಹಳೋತ್ಕಳಿಕಾವಿಳಾಸಮಂ ॥ ೧೦೨

ಅಂತು ಕಾಂತಾಪ್ರಚಯಂ ಲತಾಂತಾಪಚಯಮಂ ತೀರ್ಚಿ

ಗಿಳಿಗೆ ಕುರ್ಚುಂಕಲಲ್ಲಿ ಮಱಿದುಂ ಫಲಮೊಂದು ಪಿಕಕ್ಕೆ ಚುಂಬಿಸಲ್
ಕಳಿಕೆಯಕೊಂದು ತುಂಬಿಗೆ ಮುಸುಂಬಿಟಿಪಲ್ಕರಲೊಂದು ತಳ್ತುಗೊಂ ॥
ದಳಿಸದಿನಿತ್ತು ವೃಕ್ಷಲತಿಕಾಕ್ಷುಪಜಾಳದೊಳೆಂದು ನೋಟಕ್ಕೊಡೇ ।
ನಳವಿಗಳುಂಬಮಾಯ್ತೊ ಪೊಸದೇಸೆಯನಾಂತ ವಿಳಾಸಿನೀಜನಂ ॥ ೧೦೩

ತನ್ನ ನಲ್ಲನನ್ನು ತಬ್ಬಿಕೊಂಡು ನಡುಗುತ್ತಿದ್ದಳು. ೧೧೦. ಈ ಪರಿಯ ದುಂಬಿಗಳ ಸಾಲು ಎಲ್ಲಿಂದ ಬಂದುವು ಎಂದು ಭ್ರಾಂತಿಯೇಳುವಂತೆ ನೈದಿಲೆಗಣ್ಣವಳ ಕುಡಿನೋಟದ ಹರಹು ಸಂಪಗೆಯ ಮರವನ್ನೆಲ್ಲ ಆವರಿಸಿತು. ವ॥ ಮತ್ತೊಬ್ಬಳು ಹೂಕೊಯ್ಯಲೆಂದು ನಡೆದಾಗ–೧೧೧. "ನಿನ್ನ ಬೆಡಗಿನ ಕಪ್ಪುವರ್ಣವನ್ನು ನನ್ನ ತಲೆಗಿಟ್ಟುಕೊಂಡೆನೆಂದು, ತಮಾಳವೃಕ್ಷವು ಪ್ರಮಾಣಮಾಡಿ ಹೇಳುವಂತೆ ಗಾಳಿಯಿಂದ ಸಡಿಲಿದ ಹೂವೊಂದು ಅವಳ ಕಾಲಮುಂದೆ ಬಿದ್ದಿತು. ಆಗ– ೧೧೨. ಒದೆ ತಿಂದು, ದುಷ್ಟನಂತೆ ಅಶೋಕ ಚಿಗುರೆದ್ದಿತು; ಬಾಯೆಂಜಲ ಮದ್ಯಸಂಪರ್ಕದಿಂದ ಶಠನಂತೆ ಬಕುಳವೃಕ್ಷ ಮೊಗ್ಗು ಬಿಟ್ಟಿತು; ಅಪ್ಪಿಕೊಂಡಾಗ ದಕ್ಷಿಣನಾಯಕನಂತೆ ಕುರವಕವು ಅರಳಿತು, ಕಣ್ಣೋಟದ ಅನುಗ್ರಹಕ್ಕೇ ಅನುಕೂಲ ನಾಯಕನಂತೆ ತಿಲಕ ತುಂಬ ಹೂದಾಳಿತು. ವ॥ ಹೀಗೆ ಸ್ತ್ರೀಯರು ಹೂ ಆಯುವುದನ್ನು ತೀರಿಸಿ ೧೧೩. ಗಿಳಿ ಕುಟುಕೇನೆಂದರೆ ಮರೆತು ಒಂದು ಹಣ್ಣಾಗಲಿ, ಕೋಗಿಲೆ ಮುತ್ತಿಡಲು ಒಂದು ಮೊಗ್ಗಾಗಲಿ, ದುಂಬಿಗೆ ಸವಿಯಲೊಂದು ಹೂವಾಗಲಿ ಗಿಡು ಬಳ್ಳಿಗಳಲ್ಲಿ ಉಳಿಯಲಿಲ್ಲವೆಂಬಂತೆ ಚೆಲುವೆಯರಾದ ವಿಳಾಸಿನಿಯರ

ತದನಂತರಂ

ಕನಕಮಣಿ ಭೂಷಣಂ ಕ।
ಣ್ಗೆನಿದಕ್ಕುಮಲರ್ವ್ವಾಚ್ಛದಂದದಿಂ ಲೋಚನಕಂ॥
ಮನಕಂ ಮೆಯ್ಗಂ ಸುಯ್ಗಂ।
ಜಿನುಂಗುವಳಿಯಿಂದೆ ಕಿವಿಗಮೀಗುಮೆ ಸವಿಯಂ॥ ೧೧೪

ಎಂದು ತಮ್ಮ ತನುಲತೆಗಳಂ ಕಿಸಲಯಾಭರಣಂಗಳಿನಲಂಕರಿಪಲಂಪನಾಂತು

ನನೆಯಲರೆಂಬಿವಂ ಬನದ ದೇವಿಯದಾವಗಮಾಯ್ದು ಕೊಯ್ದು ನ।
ಚ್ಚಿನ ಪದವಿಲ್ಗಮಗ್ಗದ ಸರಲ್ಗಮವಂ ಪಡದೀವೆನೆಂದು ಚಂ॥
ದನಗೃಹಮಂ ಲತಾನಿಳಯಮಂ ಕದಳೀಕುಳಮಂ ತೊಳಲ್ದು ಕಾ।
ಮನನರಿಸಲ್ಕೆ ಪೊಕ್ಕಪುದೊ ಪೇಟಿನೆ ಪೊಕ್ಕುದು ಕಾಮಿನೀಜನಂ॥ ೧೧೫

ಅಂತು ಪೊಕ್ಕು ಶತಪತ್ರಸೂತ್ರಂಗಳೊಳಂ ರಂಭಾವಲ್ಕಲಶಲ್ಕಂಗಳೊಳಂ ಶೀರ್ಣನಾಳಿಕೇರ ಪರ್ಣಂಗಳೊಳಂ ಅಮರ್ಕೆಯುಂ ಪೋಲ್ಕೆಯುಂ ಒಲ್ದುಂ ಚೆಲ್ವುಮಾಗೆ ಗೊಜ್ಜಗೆಯ ಮುಗುಳ ಗೆಜ್ಜೆಯುಮಂ, ಬಂದುಗೆಯಂದುಗೆಯುಮಂ, ನಂದಿವಟ್ಟದ ಪಾಯವಟ್ಟಮುಮಂ, ಕಾಂಚವಾರದ ಕಾಂಚಿಯುಮಂ, ಪಸುರ್ಮಿಡಿಯ ಪಚ್ಚೆಸಾರಮುಮಂ, ಚಂಪಕದ ಚಂಪಕಮಾಲೆಯುಮಂ, ಸುರಯಿಯ ಶುದ್ಧಸರಮುಮಂ, ವನಮಾಳಿಕೆಯ ಲಂಬಮಾಳಿಕೆಯುಮಂ ಕಂಕೆಲ್ಲಿಯ ಕಂಕಣಮುಮಂ, ವಿಚಕಿಳದ ಚಳಕಿಗೆಯುಮಂ, ಕುವಳಯದ ಕರವಳಯಮುಮಂ, ದಾಡಿಮೀದಳದಷ್ಟದಳ ಮುಮಂ, ಕೇಸರದ ಕೇಯೂರಮುಮಂ, ಕರ್ಣಿಕಾರದ ಕರ್ಣಪೂರಮುಮಂ, ಅದಿರ್ಮುತ್ತೆಯ

ಲೀಲೆ ಅಧಿಕವಾಗಿತ್ತು. ಅನಂತರ–೧೧೪. "ಚಿನ್ನದ ಆಭರಣಗಳಿಂದ ಕಣ್ಣಿಗಷ್ಟೇ ಸೊಗಸು; ಹೂವಿನಾಭರಣದಿಂದ ಕಣ್ಣಿಗೂ, ಮನಕ್ಕೂ, ಮೈಗೂ, ಉಸಿರಿಗೂ, ಗುಂಯಿಗುಡುವ ದುಂಬಿಗಳಿಂದ ಕಿವಿಗೂ ಸೊಗಸುಂಟಾಗುವುದು". ವ॥ ಎಂದು ತಮ್ಮ ಬಳ್ಳಿಮೈಗಳನ್ನು ಚಿಗುರಿನ ತೊಡವುಗಳಿಂದ ಅಲಂಕರಿಸುವ ಬಯಕೆಯಿಂದ –೧೧೫. "ಹೂಬಾಣಗಳೆಂಬ ಇವುಗಳನ್ನು ಆಯ್ದು ಕೊಯ್ದು ಕಾಮನ ಹದವಾದ ಬಿಲ್ಲಿಗೂ ಬಾಣಕ್ಕೂ ಸಂತೋಷದಿಂದ ಕೊಡುವೆನು" ಎಂದು ಬನದ ದೇವಿಯು ಗಂಧದ ಮಂಡಪವನ್ನೂ ಬಳ್ಳಿಮಾಡವನ್ನೂ, ಬಾಳೆಯ ಬನವನ್ನೂ ಸುತ್ತಿಸುತ್ತಿ ಕಾಮನನ್ನು ಹುಡುಕುತ್ತ ಹೊರಟಳೊ ಏನೊ ಎಂಬಂತೆ ಕಾಮಿನಿಯರು ಉದ್ಯಾನದಲ್ಲಿ ಹೊಕ್ಕರು. ವ॥ ಹಾಗೆ ಹೊಕ್ಕು ತಾವರೆಗೆ ನೂಲೆಳೆಯಿಂದಲೂ, ಬಾಳೆಪಟ್ಟೆಯ ನಾರಿನಿಂದಲೂ, ಸೀಳಿದ ತೆಂಗಿನ ಗರಿಗಳಿಂದಲೂ ಅಚ್ಚುಕಟ್ಟಾಗಿ, ಅಂದವಾಗಿ ಗೊಜ್ಜಗೆಯ ಮೊಗ್ಗುಗಳಿಂದ ಗೆಜ್ಜೆಗಳನ್ನು, ಬಂಧೂಕಪುಷ್ಪಗಳಿಂದ ಅಂದುಗೆಗಳನ್ನು, ನಂದಿಬಟ್ಟಲಿಂದ ನೇವುರವನ್ನು: ಕಂಚಿವಾರದಿಂದ ಉಡೆನೂಲನ್ನು, ಹಸುರುಮಿಡಿಗಳಿಂದ ಪಚ್ಚೆಸಾರವನ್ನು, ಸಂಪಗೆಯಿಂದ ಚಂಪಕಮಾಲೆಯನ್ನು, ಸುರಗಿ ಹೂಗಳಿಂದ ಶುದ್ಧಸರವನ್ನು, ವನಮಾಲಿಕೆಯಿಂದ ಜೋಮಾಲೆಯನ್ನು, ಅಶೋಕದಿಂದ ಕಂಕಣವನ್ನು, ಮಲ್ಲಿಗೆಯಿಂದ ಚಳಕಿಗೆಯನ್ನು, ನೈದಿಲೆಯ ಕೈ

ಮುಗುಳ ಮುಗುಳುಮಂ, ತಮಾಳಪತ್ರದ ತಮಾಳಪತ್ರಮುಮಂ, ಹೊನ್ನೆಯ ಚಿನ್ನಪೂವುಮಂ, ತಿಳಕದ ಹಂಸತಿಳಕಮುಮಂ, ಕುರವಕದ ಕುತ್ತುಂಗಜೆಯುಮಂ, ಮಾಂದಳಿರ ಪೊಂದಳಿರುಮಂ, ವಿವಿಧಕಿಸಲಯದ ಕಿಸಲಯಮುಮಂ, ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು

ವಿವಿಧಪ್ರವಾಳಫಳಕುಸು ।
ಮವಿಭೂಷಣಗಣಮನಾಂತು ಕಾಂತಾವಳಿ ಕಂ ॥
ತುವ ಜಂಗಮಕಲ್ಪಲತಾ
ನಿವಹದವೊಲ್ ಬಂದುದೋಲಗಕ್ಕವನಿಪನಾ ॥ ೧೧೬

ತತ್ಸಮಯದೊಳ್

ಕುಸುಮವಿಭೂಷಣಂಗಳ ಭರಕ್ಕಿನಿತಳ್ಕಿ ಬಳಲ್ದುದೀಗಳೀ ।
ಬಿಸಸುಕುಮಾರವಾರವನಿತಾಜನಮೆಂದು ಧರಾಧಿಪಂಗೆ ಸೂ ॥
ಚಿಸುವವೊಲೊಂದೆರಟ್ಬೆಮರ ಬಿಂದುಗಳಾಂತುವು ಪೊಣ್ಮೆ ಕಾಂತಿಯಂ ।
ಮಿಸುಪ ಕದಂಪಿನೊಳ್ ತಿವಳಿಯೊಳ್ ಕುಚಮೂಲದೊಳಗ್ರಭಾಗದೊಳ್ ॥ ೧೧೭

ಅನಂತರಮರಸನಾಕೆಯರ ವನವಿಹರಣಶ್ರಮಮಂ ವನಜವನವಿಹರಣಶ್ರಮದಿಂ ಕಳೆಯಲೆಂದುಮಲ್ಲಿಂ ಪೊಱಮಟ್ಟು ನಡೆವಲ್ಲಿ

ಸುಟಿವ ಮರಾಳಯಾನೆಯರಪಾಂಗಮರೀಚಿಚಯಂ ತ್ರಿವರ್ಣ ಮಂ ।
ಗಟಿಯಿಸೆ ಪೆರ್ಮೆ ಮುಂ ನೆರೆಯೆ ಬೀತವೊಲಿರ್ದ ಲತಾಳಿ ಮತ್ತೆ ಬೆಂ ॥

ಬಳೆಯನ್ನು, ದಾಳಿಂಬದ ಅಷ್ಟದಳವನ್ನು, ನಾಗಸಂಪಗೆಯ ತೋಳ್ಬಳೆಯನ್ನು, ಕರ್ಣಿಕಾರದ ಕರ್ಣಾಭರಣವನ್ನು, ಅದಿರುಗಂತಿಯ ಮೊಗ್ಗುಗಳಿಂದ ಮುಗುಳನ್ನು, ಹೊಂಗೆಯೆಲೆಯಿಂದ ತಮಾಲ ಪತ್ರವನ್ನು, ಹೊನ್ನೆಯ ಚಿನ್ನ ಹೂವನ್ನೂ, ತಿಲಕದ ಹಂಸತಿಲಕವನ್ನು, ಕುರವಕದಿಂದ ಕುತ್ತುಂಗರಿಯನ್ನು, ಮಾವಿನ ತಳಿರಿಂದ ಪೊಂದಳಿರನ್ನು, ಬಗೆ ಬಗೆಯ ಚಿಗುರೆಲೆಗಳಿಂದ ಕಿಸಲಯಾಭರಣವನ್ನು ಮನೋಹರವಾಗುವಂತೆ ರಚಿಸಿ, ಅಲಂಕರಿಸಿಕೊಂಡು ೧೧೬. ಬಗೆಬಗೆಯ ಚಿಗುರು–ಹೂ–ಕಾಯಿಗಳ ಆಭರಣಗಳನ್ನು ತೊಟ್ಟುಕೊಂಡು ಕಾಂತೆಯರು ಕಾಮನ ಜಂಗಮಲತೆಗಳೆಂಬಂತೆ ಸಮೂಹವಾಗಿ ರಾಜನ ಓಲಗಕ್ಕೆ ಬಂದರು. ಆ ಸಮಯದಲ್ಲಿ–೧೧೭. ಹೂವಿನ ತೊಡವುಗಳ ಭಾರಕ್ಕೆ ಸುಕುಮಾರಿಯರಾದ ಈ ವಾರವನಿತೆಯರು ಬಳಲಿದರೆಂದು ಅರಸನಿಗೆ ಸೂಚಿಸುವಂತೆ, ಅವರ ಹೊಳೆಯುವ ಕೆನ್ನೆಗಳ ಮೇಲೆ, ಒಡಲ ತ್ರಿವಳಿಯ ಮೇಲೆ ಹಾಗು ಮೊಲೆಗೆಲದಲ್ಲಿ ಒಂದೆರಡು ಬೆವರಬಿಂದುಗಳು ಮೂಡಿದುವು. ವ॥ ಆಗ ಅರಸನು ಅವರ ವನವಿಹಾರದ ಬಳಲಿಕೆಯನ್ನು ತಾವರೆಗೊಳದಲ್ಲಿಯ ಜಲವಿಹಾರದಿಂದ ಕಳೆಯುವೆನೆಂದು ಅಲ್ಲಿಂದ ಹೊರಟು ನಡೆಯುವಾಗ–೧೧೮. (ತನ್ನ ಬೆಂಬಳಿಯಲ್ಲಿ) ನಡೆದು ಬರುತ್ತಿರುವ ಹಂಸಗಮನೆಯರ ಕಡೆಗಣ್ಣುಗಳ ಕಾಂತಿ (ನಸುಗೆಂಪು, ಬಿಳುಪು ಹಾಗು ಕಪ್ಪು ಎಂಬ) ಮೂರು

ಬಟೆಯೊಳೆ ಪಲ್ಲವಪ್ರಸವಭೃಂಗಕುಳಂಗಳನಾಂತು ಸೊಂಪು ಪೊಂ।
ಪುಟೆಯೆನಿಪಂತೆ ತೋಱಿದುದು ಪುಟ್ಟೆ ಮಹೀಶನ ಕಣ್ಗೆ ಕೌತುಕಂ॥ ೧೧೮

ಅದಲ್ಲದೆಯುಂ

ಸೊಗಯಿಪ ರಾಜಹಂಸಮಿಥುನಂ ಬೆರಸಬ್ಜಲತಾವಿತಾನದೊ।
ಳ್ಪಗಲದೆ ಪಾಳಿವಂದಪುದೊ ತದ್ವನಪದ್ಮಿನಿಗೆಂಬ ರೇಖೆ ಕೈ॥
ಮಿಗೆ ಮೃದುಯಾನದಿಂ ಪತಿಯುಮಾಸತಿಯುಂ ಬರೆ ಬಂದುದಾವೃತಾ।
ಳಿಗಣಮಲಂಕೃತಪ್ರಗುಣಕೌಸುಮಲಕ್ಷ್ಮಿ ವಿಳಾಸಿನೀಜನಂ॥ ೧೧೯

ಅಂತೈದೆ ವರ್ಪಾಗಳ್

ಉರರೀಕೃತಪುಳಿನನಿತಂ।
ಬರಮ್ಯಮಾಪರಿಗತಾಳಿಕುಳಗಂಭೀರ॥
ಸ್ಫುರದಾವರ್ತಂ ಮೆಱೆದುದು।
ಸರಸಿ ವನಶ್ರೀಗೆ ಮಧ್ಯದೊಳ್ ನಾಭಿಯವೊಲ್॥ ೧೨೦

ಮತ್ತಂ ನಿಜಪರಿಸರದೊಳುಪಸರೋವರಂಗಳಂತಿರ್ದ ರಜತರತ್ನ ಕನಕ ಘಟಿತ ಮಹಾಕಟಾಹ ಪಟಳದೊಳಮಲ್ಲಲ್ಲಿ ಬೇಱೆವೇಱೆ ತೀವಿದ ಕಾಶ್ಮೀರಕರ್ಪೂರಕಸ್ತೂರಿಕಾಮಳಯಜಜಳಂಗಳೊಳಂ ಬಹುಪ್ರಕಾರಭಂಗುರ ಶೃಂಗಜಳಯಂತ್ರಾದಿಜಳಕೇಳೀವಿಳಾಸೋಪಯೋಗ್ಯಾತ್ಯುಚ್ಚಪರಿಚ್ಛದಂಗಳೊಳಂ

ಬಣ್ಣಗಳನ್ನು ವಿಶಾಲವಾಗಿ ಎಲ್ಲ ಕಡೆಗೆ ಹರಡಲಾಗಿ, ಈ ಮೊದಲು ಬಾಡಿದಂತೆ ತೋರುತ್ತಿದ್ದ ಬಳ್ಳಿಗಳು ಮತ್ತೆ ಚಿಗುರೆಲೆಗಳನ್ನೂ ಹೂಗಳನ್ನೂ, ದುಂಬಿಗಳನ್ನೂ ಹೊಂದಿದುವೊ ಏನೊ ಎಂಬಂತೆ ತೋರಿತು, ಅದನ್ನು ಕಂಡು ಅರಸನಿಗೆ ಕೌತುಕವಾಯಿತು. ಅದಲ್ಲದೆ–೧೧೯. ಅಂದವಾದ ರಾಜಹಂಸವು ತನ್ನ ನಲ್ಲೆಯೊಡನೆ ಕಮಲದ ಬಳ್ಳಿಯಲ್ಲಿ ಬೆಡಗಿನಿಂದ ಹಾಯ್ದು ಪದ್ಮಿನಿಯ ಸೇವೆಗೆ ಬರುತ್ತಿರುವುದೊ ಏನೊ ಎಂಬಂತೆ ನಯವಾದ ನಡೆಯಿಂದ ಅರಸನು ಸತಿಯೊಡನೆ ಬರಲಾಗಿ, ಹೂಗಳ ಸೌಂದರ್ಯದಿಂದ ಅಲಂಕರಿಸಿಕೊಂಡ ವಿಲಾಸಿನಿಯರೂ ಅವರನ್ನು ಅನುಸರಿಸಿ ಬಂದರು. ಹಾಗೆ ಬರುತ್ತಿರಲಾಗಿ–೧೨೦. ವಿಸ್ತಾರವಾದ ಮರಳು ದಂಡೆಯೆಂಬ ನಿತಂಬಗಳಿಂದ ರಮ್ಯವಾಗಿ, ಆಳವಾದ ಸುಳಿಯಿಂದೊಡಗೂಡಿದ ಸರೋವರವು ವನಲಕ್ಷ್ಮಿಯ ಹೊಕ್ಕುಳಂತೆ ಶೋಭಿಸಿತು. ವ॥ ಆ ಕೊಳದ ಪಕ್ಕದಲ್ಲಿಯು ಉಪಸರೋವರಗಳಂತೆ ಇದ್ದ ಬೆಳ್ಳಿ, ಚಿನ್ನ, ರತ್ನಗಳಿಂದ ನಿರ್ಮಿತವಾದ ದೊಡ್ಡ ದೊಡ್ಡ ಕೊಪ್ಪರಿಗೆಗಳಲ್ಲಿ ಬೇರೆಬೇರೆಯಾಗಿ ಕುಂಕುಮದ, ಕಪ್ಪುರದ, ಕಸ್ತೂರಿಯ ಹಾಗು ಗಂಧದ ನೀರುಗಳನ್ನು ತುಂಬಿಡಲಾಗಿತ್ತು; ನಾನಾ ಬಗೆಯ ಕೋಮಲವಾದ ತುದಿಗಳುಳ್ಳ ಜೀರ್ಕೊಳವೆಯೆ ಮೊದಲಾದ ಜಲಕ್ರೀಡೆಗೆ ಉಪಯುಕ್ತವಾದ ಉತ್ತಮವಾದ ಉಪಕರಣಗಳು ಅಣಿಯಾಗಿದ್ದವು; ಕೋಮಲೆಯರಾದ ಹೆಣ್ಣುಗಳಿಗೆ

ಅಬಳಾಜನಸುಖಾವರೋಹಣಾರೋಹಣಸಮರ್ಥಮಣಿಮಯಸೋಪಾನಪಙ್ಕ್ತಿಗಳೊಳಂ ಕಮಳಕುಮುದಕುವಳಯಕಲ್ಹಾರಶೋಭಿತನಾಭಿದ್ವಯಸಪಯಸದೊಳಂ ಆಟಿವಟ್ಟು ದಿಟ್ಟಗೊಲವ ನೋಲಗಿಪ ಲೀಲಾಸರೋವರಮಂ ರಾಜಹಂಸಂ ಲೀಲಾವತೀಜನಸಮೇತಂ ಪುಗೆ

ಆ ಸರಸಿಯರಸನಂ ಹಂ ।
ಸೀಸಾರಸರಸಿತದಿಂದೆ ಪರಸಿ ತರಂಗಂ ॥
ಸೂಸುವ ಶೀಕರವಿಸರದೆ ।
ಸೇಸಿಕ್ಕುವ ತೆಱದಿನೆಸೆದುದಸದಳಮದಱಿಕೊಳ್ ॥ ೧೨೧

ದೊರೆಕೊಳ್ಗುಂ ಕುಶಲವದಿಂ ।
ಪಿರಿದುಂ ಕುಶಲವದಿನೆಂದು ತದ್ವನಜವನ ॥
ಸ್ಥಿರಕುರವಕಾಕುರವದಿಂ ।
ಸಿರಿ ಪೇೞ್ವಂತಾಯ್ತು ಯೌವತಕ್ಕವತರಿಪಂ ॥ ೧೨೨

ಭ್ರಮರಚಿತಮನವರತವಿ ।
ಭ್ರಮರಚಿತಪ್ಲವನನಾರಸಂ ಮದಲೀಲಾ ॥
ಕ್ರಮಸಕಳಹಂಸಮುರುಚ ।
ಕ್ರಮಸಕಳಹಂಸರೋವರಂ ಸೊಗಯಿಸುಗುಂ ॥ ೧೨೩

ಈಕೆಯರ ಪಾದಪಾತದಿ ।
ನೇಕೇಂದ್ರಿಯಮಸುಕೆ ತಳಿರ್ವುದರಿದೆ ತಳಿರ್ದತ್ತ ॥
ಲ್ಲೀಕಲ್ಲೆರ್ದೆಯನೆ ಸೊಗಯಿಸಿ ।
ತಾಕಳಿತಪದಾಂಶು ಹರಿತಮಣಿಸೋಪಾನಂ ॥ ೧೨೪

ಇಳಿಯಲೂ, ಏರಲೂ ಅನುಕೂಲವಾದ ರತ್ನಸೋಪಾನಗಳಿಂದಲೂ, ಕೆಂದಾವರೆ, ಬೆಳ್ದಾವೆ, ಕಲ್ಹಾರ ಮೊದಲಾದುವುಗಳಿಂದ ಶೋಭಿಸುತ್ತ ಹೊಕ್ಕುಳವರೆಗೆ ಮಾತ್ರ ಬರುವಷ್ಟು ಆಳದ ನೀರುಳ್ಳ ಕ್ರೀಡಾಸರೋವರವನ್ನು ರಾಜೇಂದ್ರನು ಲೀಲಾಮಯರಾದ ಹೆಂಗಳೊಡನೆ ಹೊಕ್ಕನು. ೧೨೧. ಅರಸನನ್ನು ಆ ಸರೋವರವು ಹಂಸ-ಸಾರಸ ಪಕ್ಷಿಗಳ ಧ್ವನಿಯಿಂದ ಆಶೀರ್ವದಿಸಿ, ತೆರೆಗಳು ಸೂಸುವ ಸೀರ್ಪನಿಗಳಿಂದ ಸೇಸೆಯಿಡುವಂತೆ ಕಂಗೊಳಿಸಿತು. ೧೨೨. "ಇಲ್ಲಿ ಜಲಕ್ರೀಡೆಯಾಡುವುದರಿಂದ ನಿಮಗೆ ತುಂಬ ಸಂತೋಷವಾಗುವುದು, ಬನ್ನಿ ನೀರಿಗೆ ಇಳಿಯಿರಿ" ಎಂದು ಸರೋವರ ಲಕ್ಷ್ಮಿಯೆ ಹೇಳುವಳೊ ಏನೋ ಎಂಬಂತೆ ಕೊಳದೊಳಗಿದ್ದ ಜಲಪಕ್ಷಿಗಳ ಮಂದಮಧುರಧ್ವನಿ ಹೊಮ್ಮಿತು. ೧೨೩. ಭ್ರಮರಗಳಿಂದ ತುಂಬಿ, ಸತತವಾಗಿ ವಿಲಾಸಮಯವಾದ, ಹಾರಾಡುತ್ತಿರುವ ಸಾರಸಪಕ್ಷಿಗಳಿಂದಲೂ, ಮತ್ತವಾಗಿ ನಡೆದಾಡುವ ಹಂಸಪಕ್ಷಿಗಳಿಂದಲೂ ಆ ಸರೋವರವು ತುಂಬ ಮನೋಹರವಾಗಿ ಕಂಗೊಳಿಸಿತು. ೧೨೪. ಈಕೆಯರ ಪಾದಘಾತದಿಂದ ಏಕೇಂದ್ರಿಯವಾದ ಅಶೋಕವು ಚಿಗುರುವುದೇನು ಸೋಜಿಗ? ಈ ಕಲ್ಲಿನ ಎದೆ ಕೂಡ ಚಿಗುರಿತೆಂಬಂತೆ ಇವರ

ಅದಲ್ಲದೆಯುಂ

ಕೊಳದೊಳ್ ತಂತಮ್ಮ ನೆೞಲ ।
ಲ್ಗಳೊಳಬಳೆಯರುತ್ಕುಚಾಂತರಿತಮಮಂ ರೋಮಾ ॥
ವಳಿಯಂ ವಳಿಯಂ ನಾಭೀ ।
ಸ್ಥಳಿಯಂ ನೆರೆ ಕಣ್ಡರಂದು ಮುಂ ಕಾಣದುದಂ ॥ ೧೨೫

ಆಗಳ್

ಜಳಕೇಳಿಗೆ ಪುಗುತುಂ ನಿಱಿ ।
ಗಳನೋಸರಿಸುವ ಕಟಿಪ್ರಮಾಣಜಳಂ ಪೂ ॥
ಗೊಳನೆಂದಱಿದುಂ ಮೆಲ್ಲನೆ ।
ತಳರ್ದಡಿಯಿಡುವಬಲೆಯರ್ ಕರಂ ಸೊಗಯಿಸುವರ್ ॥ ೧೨೬

ಅಂತು ಪುಗಲೊಡಂ

ತೆರೆಗೈಯಿಂ ತುಡುಕುತ್ತುಮೊಳ್ತೊಡೆಯನಾದಂ ನೀವಿಯಂ ನೀವಿ ಬಿ ।
ತ್ತರಿಸುತ್ತುಂ ವಳಿಯಂ ಪಳಂಚಲೆಯುತುಂ ವಕ್ಷೋಜಮಂ ನಿಟ್ಕಿ ನೇ
ವರಿಸುತ್ತುಂ ನೆಲೆವೆರ್ಚಿ ಕಾಮುಕನವೊಲ್ ನೀರೇಱುತಿರ್ದತ್ತು ತ ।
ತ್ತರುಣೀಸಂಕುಳಮೆಲ್ಲಮೀಗಳೊಳಗಾಯ್ತೆಂಬಂತೆ ಪದ್ಮಾಕರಂ ॥ ೧೨೭

ಮತ್ತಂ

ಇದು ಪಿರಿದುಂ ವಸಂತಸಖಯೌವತರತ್ನ ನಿಧಾನವಂತದ ।
ಲ್ಲಿದು ಕುಸುಮಾಸ್ತ್ರಶಸ್ತ್ರಚಯಕೋಶಮಹೀಗೃಹಮಂತದಲ್ತು ಮ ॥

ಪಾದಕಾಂತಿಯಿಂದ ಕೆಂಪಿಡಿದ ಮರಕತದ ಸೋಪಾನಗಳು ಶೋಭಿಸಿದುವು ಅದಲ್ಲದೆ–೧೨೫. ಕೊಳದಲ್ಲಿ ಮೂಡಿದ ತಮ್ಮ ಪ್ರತಿಬಿಂಬಗಳಲ್ಲಿ ಆ ಅಬಲೆಯರು, ತಮ್ಮ ನೆಲೆ ಮೊಲೆಗಳು ಅಡ್ಡಗಟ್ಟಿದ್ದರಿಂದ ಈ ಮುಂಚೆ ಎಂದೂ ಕಾಣದಿದ್ದ ತಮ್ಮ ಬಾಸೆಯನ್ನೂ, ತ್ರಿವಳಿಯನ್ನೂ, ಹೊಕ್ಕುಳನ್ನೂ ಇಂದು ಚೆನ್ನಾಗಿ ನೋಡಿಕೊಂಡರು. ೧೨೬. ಜಲಕ್ರೀಡೆಗೆಂದು ನೀರಲ್ಲಿ ಇಳಿಯುತ್ತ ನಿರಿಗಳನ್ನು ಹಿಡಿದುಕೊಂಡು, ನಡುಮಟ್ಟದಷ್ಟಿದೆ ಈ ನೀರಿನ ಆಳವೆಂದು ಅರಿತಿದ್ದರೂ ಜೋಕೆಯಿಂದ ಮೆಲ್ಲಮೆಲ್ಲಗೆ ಹಜ್ಜೆಯಿಡುವ ಆ ಅಬಲೆಯರು ತುಂಬ ಸೊಗಸಾಗಿ ತೋರಿದರು. ಹಾಗೆ ನೀರಲ್ಲಿ ಇಳಿದಾಗ–೧೨೭. ತೆರೆಗಳೆಂಬ ತನ್ನ ಕೈಗಳಿಂದ ಆ ಹೆಣ್ಣುಗಳ ನುಣ್ದೊಡೆಗಳನ್ನು ಅವಚಿ ಹಿಡಿಯುತ್ತ, ಅವರ ಸೀರೆಗಳನ್ನು ಎಳೆದು ಅಗಲಿಸುತ್ತ, ತ್ರಿವಳಿಗಳನ್ನು ಮುಟ್ಟುತ್ತ, ಮೊಲೆಗಳನ್ನು ಮುಟ್ಟಿ ನೇವರಿಸುತ್ತ. ಕಾಮುಕನಂತೆ ಆ ಕಮಲ ಸರೋವರವು ಮೈಯುಬ್ಬಿ ತರುಣಿಯರ ಸಮೂಹವೆಲ್ಲ ತನಗೆ ಒಳಗಾದುದೆಂದು ಹಿಗ್ಗುತ್ತಿತ್ತು. ಮತ್ತು ೧೨೮. ಇಷ್ಟಣಿಸಿ ನಿಂತ ಸ್ತ್ರೀಯರಿಂದ ತುಂಬಿದ ಆ ಹೂಗೊಳವನ್ನು ನೋಡಿದರೆ, ಇದೇನು ಮನ್ಮಥನ ರತ್ನನಿಧಾನವೊ, ಅಲ್ಲ; ಕಾಮದೇವನ ಆಯುಧ ಶಾಖೆಯನ್ನೊಳ

ತ್ತಿದು ರತಿನಾಥಕಲ್ಪಲತಿಕಾಪ್ರಕರೈಕಕೃತಾಳವಾಳಮೆಂ ।
ಬುದನೆನಿಸಿತ್ತು ಸಂದಣಿಸಿ ನಿಂದಬಳಾವಳಿಯಿಂದೆ ಪೂಗೊಳಂ ॥ ೧೨೮

ಕೀರದ ಹಂಸದ ಪಿಕದ ಚ ।
ಕೋರದ ಚಕ್ರಾಹ್ವದಂತೆ ಮಾಡಿದ ಗರುಡೋ ॥
ದ್ಗಾರದ ಮುತ್ತಿನ ನೀಲದ ।
ಹೀರದ ಮಾಣಿಕದ ಪೊಳೆವ ಜೀರ್ಕೊಟಿವೆಗಳಂ ॥ ೧೨೯

ತಮತಮಗೆ ತಳೆದುಕೊಂಡು ವಿವಿಧಗಂಧಜಲಂಗಳಿಂದೋರೊರ್ವರಂ ಸಿಂಪಿಸುವಾಗಳ್

ಸುರದೀರ್ಘಿಕೆಯೊಳ್ ಕರಪು ।
ಷ್ಕರದಿಂದಭ್ರಮುಪನಭ್ರಮೂಪತಿ ತಳಿವಂ ॥
ತಿರೆ ಜಳಯಂತ್ರದೆ ತಳಿದು ।
ಸರಸಿಯೊಳರಸಂ ಶಶಿಪ್ರಭಾವಲ್ಲಭೆಯಂ ॥ ೧೩೦

ಜಳಯಂತ್ರದಿನೊತ್ತೆ ನೃಪಂ ।
ಲಳನೆಯ ಕುಚಯುಗಳಮಧ್ಯದಿಂದಿಟೆಯಲ್ ತ ॥
ಜ್ಜಳಕೆ ತೆಱಪೀಯದಿರ್ದ ।
ತ್ತೊಳಕೊಂಡ ಪಯೋಧರಾಖ್ಯೆಯಂ ಪ್ರಕಟಿಪವೋಲ್ ॥ ೧೩೧

ಗೊಂಡ ನೆಲವನೆಂಬೊ? ಅದೂ ಅಲ್ಲ; ಇದು ರತಿಪ್ರಿಯನ ಕಲ್ಪಲತೆಗಳಿಗೆಲ್ಲ ನೀರೂಡಲೆಂದು ನಿರ್ಮಿಸಿದ ನೀರಿನ ಪಾತಿ ಎಂದೆನಿಸಿತು. ೧೨೯. ಗಿಳಿ, ಹಂಸ, ಕೋಗಿಲೆ, ಚಕೋರ, ಚಕ್ರವಾಕ ಪಕ್ಷಿಗಳ ಆಕಾರದಲ್ಲಿ ನಿರ್ಮಿಸಿದ ಗರುಡಮಚ್ಚೆಯ, ಮುತ್ತಿನ, ನೀಲರತ್ನದ, ವಜ್ರದ ಹಾಗು ಮಾಣಿಕದ ಜೀಕಳಿಗಳಲ್ಲಿ ವ॥ ತಮಗೆ ಯಾವುದು ಮೆಚ್ಚಿಗೆಯೋ ಅದನ್ನು ಎತ್ತಿಕೊಂಡು ಬಗೆಬಗೆಯ ಪರಿಮಳಜಲವನ್ನೂ ಅದರಲ್ಲಿ ತುಂಬಿಕೊಂಡು ಒಬ್ಬರ ಮೇಲೊಬ್ಬರು ಎರಚುತ್ತಿರುವಾಗ–೧೩೦. ದೇವಗಂಗಾನದಿಯಲ್ಲಿ ಐರಾವತವು ತನ್ನ ನಲ್ಲೆಯಾದ ಅಭ್ರಿಮುವೆಂಬ ಆನೆಯ ಮೇಲೆ ಸೊಂಡಿಲಿಂದ ನೀರ ಧಾರೆಯನ್ನು ಎರಚುವಂತೆ, ಅರಸನು ಜೀರ್ಕೊಳವೆಯಿಂದ ಶಶಿಪ್ರಭೆಯ ಮೇಲೆ ನೀರನ್ನು ತಳಿದನು. ೧೩೧. ಜೀಕಳಿಯಿಂದ ಅರಸನು ಧಾರೆಯಾಗಿ, ಚಿಮ್ಮಿದ ನೀರಿಗೆ ಆಕೆಯ ಮೊಲೆಗಳು ನಡುವೆ ಇಳಿದು ಹೋಗಲು ಅವಕಾಶವನ್ನು ನೀಡದೆ, "ಪಯೋಧರ" (೧. ಮೊಲೆ, ೨. ನೀರನ್ನು ಹಿಡಿದಿಟ್ಟುಕೊಂಡುದು) ಎಂಬ ಹೆಸರನ್ನು ಅನ್ವರ್ಥಗೊಳಿಸಿದುವು. ೧೩೧. ನೀರಲ್ಲಿ ನೆನೆದು ಸೀರೆ ಒತ್ತಾಗಿ ಅಂಟಿಕೊಂಡ ಆಕೆಯ ಪೊರುವಾರುಗಳನ್ನು ನೋಡುತ್ತಿರುವ ಸ್ತ್ರೀಯರು, "ಈಗ ನಾವು ಗಂಡಸರಾಗಿರಬಾರದಿತ್ತೆ?" ಎಂದು ಮನಸ್ಸಿನಲ್ಲಿಯೆ

ನಾಂದಮರೆ ಪತ್ತಿದಂಬರ ।
ದಿಂದೆಸೆವರಸಿಯ ನಿತಂಬಬಿಂಬಮನಬಳಾ ॥
ವೃಂದಮದೀಕ್ಷಿಸಿ ಹೃದಯದೊ ।
ಳಂದೇಂ ಪುಂಭಾವಮಂ ಪುದುಂಗೊಳಿಸಿದುದೋ ॥ ೧೩೨

ತತ್ಸಮಯದೊಳ್

ತರಳಾಪಾಂಗಲಸದ್ವಿಲಾಸರಸದಿಂದೋರೊರ್ಮೆ ಲೀಲಾಪ್ರತಿ ।
ಸ್ಫುರಿತಭ್ರೂಯುಗವಿಭ್ರಮೈಕರಸದಿಂದೋರೊರ್ಮೆ ಸಸ್ನೇಹಭಾ ॥
ಸುರಚಿತ್ತಪ್ರಸಭೋತ್ಥಭಾವರಸದಿಂದೋರೊರ್ಮೆ ಮಾದೇವಿ ಭೂ ।
ವರನಂ ಸಿಂಪಿಸಿದಳ್ ಸುಗಂಧರಸದಿಂದೋರೊರ್ಮೆ ತತ್ಕೇಳಿಯೊಳ್ ॥ ೧೩೩

ಪ್ರಮದೆಯರಂ ಮನೋಭವನೆ ಸೂಟಿಜಿದೆಚ್ಚಪನಗ್ನಿಬಾಣದಿಂ ।
ಹಿಮಕರಬಾಣದಿಂ ತಿಮಿರಬಾಣದಿನೆಂಬಿನಮಿಂಬುವೆತ್ತದೇಂ ।
ನಿಮಿರ್ದುವೊ ಲೀಲೆಯಿಂದೆ ಜಳಯಂತ್ರಮನಂದು ಮಹೀಶನೊತ್ತೆ ಕುಂ ।
ಕುಮಜಳಚಂದನೋದಕಮೃಗೋದ್ಭವವಾರಿನಿಯುಕ್ತಧಾರೆಗಳ್ ॥ ೧೩೪.

ಆಗಳ್

ಕತ್ತುರಿನೀರಿಂ ಕರ್ಪಂ ।
ಪೆತ್ತಂಗಂ ಕುಂಕುಮಾಂಬುವಿಂ ಕಡುಗೆಂಪಂ ॥
ಪೊತ್ತ ನಿಱೆ ಮೆಱೆಯೆ ತಳಿರಂ ।
ಸುತ್ತಿದ ವನಚರಿಯನೊರ್ವಳನುಕರಿಸಿರ್ದಳ್ ॥ ೧೩೫

ಎಂದುಕೊಂಡರು. ಆ ಸಮಯದಲ್ಲಿ–೧೩೩. ಚಂಚಲವಾದ ಕುಡಿನೋಟದ ವಿಲಾಸರಸದಿಂದೊಮ್ಮೊಮ್ಮೆ, ಒಯ್ಯಾರದಿಂದ ಏರಿಳಿಯುವ ಹುಬ್ಬಿನ ವಿಭ್ರಮರಸ ದಿಂದ ಒಮ್ಮೊಮ್ಮೆ ಸ್ನೇಹಪೂರ್ಣವಾದ ಭಾವರಸದಿಂದ ಒಮ್ಮೊಮ್ಮೆ, ಸುಗಂಧ ರಸದಿಂದ ಒಮ್ಮೊಮ್ಮೆ ಮಹಾದೇವಿಯು ಅರಸನ ಮೈಯನ್ನು ಮುಸುಕಿದಳು. ೧೩೪. ಈ ಕಾಮಿನಿಯರನ್ನು ಮನ್ಮಥನೆ ಗುರಿಯಿಟ್ಟು ಅಗ್ನಿಬಾಣ ದಿಂದಲೂ, ಚಂದ್ರಬಾಣದಿಂದಲೂ, ತಿಮಿರಾಸ್ತ್ರದಿಂದಲೂ ಪ್ರಹಾರ ಮಾಡುತ್ತಿರುವನೋ ಎನೊ ಎಂಬಂತೆ ಆ ರಾಜನ ಜೇಕಳಿಯಲ್ಲಿ ತುಂಬಿ ತುಂಬಿ ಚಿಮ್ಮಿದ ಕುಂಕುಮದ ನೀರು, ಗಂಧದ ನೀರು ಹಾಗು ಕಸ್ತೂರಿಯ ನೀರುಗಳ ಧಾರೆಗಳು ಸೊಗಸಿದುವು. ಆಗ –೧೩೫. ಕಸ್ತೂರಿಯ ನೀರಿನಿಂದ ದೇಹವೆಲ್ಲ ಕಪ್ಪಾಗಿ, ಕುಂಕುಮದ ನೀರಿನಿಂದ ಸೀರೆ ಕಡುಗೆಂಪಾಗಲು ಚಿಗುರೆಲೆಗಳನ್ನು

ಮತ್ತಮೊರ್ವಳ್

ಘುಸೃಣರಸಂ ಮೊಲೆಯೆಡೆಯಿಂ।
ದಸಿಯಳ ಬಾಸೆವಿಡಿದಿಟಿದು ಸೊಗಯಿಸುದುದು ತೆ॥
ಳ್ವಸಿರ ಪೊಱಗಣ್ಗೆ ಮಿಸುಗುವ।
ವಿಸರತ್ತಾಂಬೂಲರಾಗರಸರೇಖೆಯವೊಲ್। ೧೩೬

ಧರಣೀಶನ ಯಂತ್ರದ ಕ।
ಸ್ತುರಿನೀರೆಸೆವಸಿಯ ಧಾರೆಯಗ್ರದೊಳೊರ್ವಳ್॥
ಸ್ಮರನಸಿಯ ಧಾರೆಯಗ್ರದೊ।
ಳಿರವಿಂತುಟು ವಿಜಯಲಕ್ಷ್ಮಿಗೆಂಬವೊಲಿರ್ದಳ್॥ ೧೩೭

ಆ ಮನೋಜವಿಜಯಲಕ್ಷ್ಮಿಯಲ್ಲದೆ

ಸರಸಿಜದ ಸಿರಿಯನಾನಪ।
ಹರಿಸೆಂ ಮನ್ಮುಖದಿನದುವೆ ನಿಜಮೆಂದು ತನೂ॥
ದರಿ ತಂಡಗುಂಡಿವುಗುವವೊ।
ಲರಸನ ಕೆಲದಲ್ಲಿ ಮುೞುಗಿದಳ್ ನಲಿದೊರ್ವಳ್॥ ೧೩೯

ತೊಳಗುವ ಪೊನ್ನ ಜೀರ್ಕೊಟವಿಯಗ್ರಮನೊಂದಿನಿತಟ್ಟೆ ಭಂಗಿ ಸಂ।
ಗಳಿಸಿರೆ ಮೇಲೆ ನೀರ್ದೆಗೆವ ಕೋಮಳೆ ಕಾಮನ ಕಲ್ಪಿಯಿಂದಮೇ॥
ನಳವಡೆ ಪತ್ರಕೂಟಮನೆ ಸುತ್ತುವಳೋ ರತಿಯೆಂಬ ಡಂಬರಂ।
ಬಳೆವಿನಮೊಪ್ಪಿದಳ್ ನೃಪನ ಪಕ್ಕದೊಳಾ ಜಳಕೇಳಿ ಲೀಳೆಯೊಳ್॥ ೧೩೯

ಉಟ್ಟ ಬೇಡರ ಯುವತಿಯೊ ಏನೊ ಎಂಬಂತೆ ಒಬ್ಬಳು ತೋರಿದಳು. ಮತ್ತೊಬ್ಬಳು–೧೩೬. ಕುಂಕುಮದ ನೀರನ್ನು ಚಿಮ್ಮಲಾಗಿ ಅದು ಮೊಲೆಗಳ ಇರುಕಿನಿಂದ ಎಸಳಾಗಿ ಬಾಸೆಯ ಗುಂಟ ರೇಖೆಯಾಗಿ ಇಳಿದು ಬರಲು, ತೆಳುವಾದ ಆಕೆಯ ಹೊಟ್ಟೆ ಪಾರದರ್ಶಕವಾಗಿ ಒಳಗೆ ಇಳಿಯುವ ತಾಂಬೂಲ ರಸದ ರೇಖೆಯನ್ನು ಹೀಗೆ ಹೊರಗೆ ತೋರುವುದೊ ಏನೊ ಎಂಬಂತೆ ಕಂಗೊಳಿಸಿತು. ೧೩೭. ರಾಜೇಂದ್ರನು ಜೀಕಳಿಯಿಂದ ಚಿಮ್ಮುವ ಕಸ್ತೂರಿರಸದ ಧಾರೆ ಮುಸುಕಿದವಳೊಬ್ಬಳು "ಕಾಮನ ಖಡ್ಗಧಾರೆಯಲ್ಲಿ ವಿಜಯಲಕ್ಷ್ಮಿ ಇರುವುದು ಹೀಗೆ" ಎಂದು ತೋರುವಂತೆ ಒಪ್ಪಿದಳು. ಆ ಕಾಮ ಜಯಲಕ್ಷ್ಮಿಯಲ್ಲದೆ– ೧೩೮. "ಈ ಕಮಲದ ಸೌಂದರ್ಯವನ್ನಿನ್ನು ನಾನು ನನ್ನ ಮುಖದಿಂದ, ಅಪಹರಿಸುವುದಿಲ್ಲ. ಇದು ನಿಜ" ಎಂದು ಹೇಳಿ ಕುಳಿ ಹೊಗುವವಳಂತೆ ವಿನೋದದಿಂದ ಅರಸನ ಪಕ್ಕದಲ್ಲಿ ಮುಳುಗಿದಳು. ೧೩೯. ಜಲಕ್ರೀಡೆಯ ಸಂದರ್ಭದಲ್ಲಿ ಸುಕುಮಾರಿಯೊಬ್ಬಳು ಚಿನ್ನದ ಜೀಕಳಿಯನ್ನು ನಸುವೆ ನೀರಲ್ಲಿ ಅದ್ದಿ ಚೆಲುವಾದ ಭಂಗಿಯಲ್ಲಿ ನಿಂತು ನೀರನ್ನು ಹೀರಿಕೊಳ್ಳುತ್ತಿರಲು, ಕಾಮದೇವನು ಹೇಳಿಕೊಡುತ್ತಿರುವಂತೆಯೆ ರತಿದೇವಿ ಬಾಣಕ್ಕೆ ಗರಿಗಳನ್ನು ಸುತ್ತಲೂ ಕಟ್ಟುತ್ತಿರುವಳೊ ಏನೊ ಎಂಬಂತೆ ಅರಸನ ಪಕ್ಕದಲ್ಲಿ ಶೋಭಿಸಿ

ತಳತಳಿಪ ಚಂದ್ರಕಾಂತದ ।
ಜಳಯಂತ್ರಂ ತೀವದಿರ್ದೊಡಂ ಮಗುಟ್ದುಂ ನಿ ।
ರ್ಮಳಜಳಮನುಗುಟ್ಟುದೋರಂ ।
ತೆಳೆಯಳ ದರಹಸಿತವದನವಿಧುಸನ್ನಿಧಿಯಿಂ ॥ ೧೪೦

ಅದಲ್ಲದೆಯುಂ ಮತ್ತೊರ್ವಳ್ ಲೀಲಾವತಿ ।

ಅರೆಮುಗಿದ ಮುಗಿದರಲ್ದಂ ।
ಬರುಹಂಗಳಿನೆಸೆವ ಬಿಸಲತೆಗೆ ದೊರೆಯಾದಳ್ ॥
ಮರಳೀಗವೆನಿಸಿ (?) ತೊಂದಿದ ।
ಚರಣದಿನಾಮುಗಿದ ಕರದಿನಲರ್ದಾನನದಿಂ ॥ ೧೪೧

ಕೆಳದಿಯನಡಂಗಿ ಕಾಡಲ್ ।
ಮುಳುಂಕೆ ಮತ್ತೊರ್ವಳೇಂ ಪಿಸುಣ್ಬೇಟ್ಟುವೊ ಕೋ ॥
ಮಳೆಯಿರ್ದೆಡೆಯಂ ತತ್ಪರಿ ।
ಮಳಕ್ಕೆ ಮೇಗೆಳಸಿ ಸುಟಿವ ಮಧುಕರನಿಕರಂ ॥ ೧೪೨

ಮತ್ತೊರ್ವಳ್

ನೆಗಪೆ ಮುಡಿಯಿಂದೆ ಮೇಗ ।
ಣ್ಗೊಗೆದ ಕನತ್ಕನಕಶೃಂಗಮದು ಪೆಡೆವೊಲ್ ದಿ ॥
ಟ್ಟಿಗೆವರೆ ಕೊಳದೊಳ್ ರಸೆಯಿಂ ।
ದೊಗೆವುರಗಿಯ ದೊರೆಗೆ ತರಳಲೋಚನೆ ಬಂದಳ್ ॥ ೧೪೩

ದಳು. ೧೪೦. ಮಿರುಗುವ ಚಂದ್ರಕಾಂತದ ಜೀಕಳಿಯೊಂದು ನೀರು ತುಂಬದಿದ್ದರೂ, ಅದನ್ನು ಹಿಡಿದ ನವತರುಣಿಯ ನಗುಮುಖದ ಸನ್ನಿಧಿಯಿಂದ ನೀರು ಚಿಮ್ಮುತ್ತಿತ್ತು. ಅದಲ್ಲದೆ ಇನ್ನೊಬ್ಬ ಚಲ್ಲಗಾರ್ತಿಯು–೧೪೧. ತನ್ನ ಹೊಂದಿಸಿದ ಪಾದಗಳಿಂದಲೂ, ಮುಗಿದ ಕೈಗಳಿಂದಲೂ, ಅರಳಿದ ಮುಖದಿಂದಲೂ, ಚೆಲುವಾಗಿ–ಅರೆಮುಚ್ಚಿದ, ಪೂರ್ತಿ ಮುಚ್ಚಿದ ಹಾಗು ಅರಳಿದ ಹೂಗಳುಳ್ಳ ತಾವರೆಯು ಬಳ್ಳಿಗೆ ಸಮನಾಗಿ ತೋರಿದಳು. ೧೪೨. ನೀರಲ್ಲಿ ಅಡಗಿ ತನ್ನ ಗೆಳತಿಯನ್ನು ಕಾಡಬೇಕೆಂದು ಒಬ್ಬಳು ಮುಳುಗು ಹಾಕಲಾಗಿ ಆಕೆಯ ಪರಿಮಳಕ್ಕೆ ಮರುಳಾಗಿ ಆ ಜಾಗದಲ್ಲಿಯೆ ಸುಳಿಯುತ್ತಿರುವ ದುಂಬಿಗಳು ಆಕೆ ಅಡಗಿದ ಸ್ಥಳವನ್ನು ಚಾಡಿ ಹೇಳಿ ತಿಳಿಸಿದುವು. ಮತ್ತೊಬ್ಬಳು ೧೪೩. ತನ್ನ ತಲೆಯ ಮೇಲೆ (ನೀರು ತುಂಬಿದ) ಚಿನ್ನದ ಕಲಶವನ್ನು ಎತ್ತಿ ಹಿಡಿದುಕೊಂಡು ಬರಲು ಪಾತಾಳಲೋಕದಿಂದ ಹೆಡೆಎತ್ತಿಕೊಂಡು ಬಂದ ನಾಗಾಂಗನೆಯಂತೆ ತೋರಿದಳು. ವ॥ ಆ ಬಳಿಕ ರಭಸದಿಂದ ಒಬ್ಬರ

ಅನಂತರಂ ತುಮುಲಕೇಳಿಯಿಂದೋರೊರ್ವರಂ ತುಳುಂಕಾಡುವಾಗಳ್ ।

ಘುಸೃಣರಸಂಗಳಿಂ ಮಳಯಜಾಂಬುಗಳಿಂ ಮೃಗಭೂದಕಂಗಳಿಂ ।
ಮಿಸಿಸಿದೊಡೊರ್ಮೆಗೊರ್ಮೆಸೆವ ಮಾಣಿಕದಿಂ ಪೊಸ ಚಂದ್ರಕಾಂತದಿಂ ॥
ಮಿಸುಗುವ ನೀಲದಿಂ ಸವೆದ ಪುತ್ಥಳಿಗಳ್ಗೆಣೆಯಾಗಿ ಕಾಂತೆಯರ್
ಪೊಸಯಿಸಿದರ್ ಮಹೀಶನ ಮನಕ್ಕೆ ಮನೋಜಮಹೇಂದ್ರಜಾಲಮಂ ॥ ೧೪೪

ಆಗಳ್

ಬಿತ್ತರದಿಂ ಜಳಯಂತ್ರಮ ।
ನೊತ್ತುವ ಕಾಂತಾಳಿ ಪುತ್ರಿಕಾಸಂತತಿಯಂ ॥
ತೆತ್ತಮಿರೆ ಸರಸಿ ಪೋಲ್ತುದು ।
ಚಿತ್ತಜನನಿಯಂತ್ರಯಂತ್ರಧಾರಾಗೃಹಮಂ ॥ ೧೪೫

ತತ್ಸಮಯದೊಳ್

ದಂತಚ್ಛದಾತಿರಾಗತೆ ।
ಕುತಳಕೌಟಿಲ್ಯವೃತ್ತಿ ಪಿಂಗಿದುದಬಳಾ ॥
ಸಂತತಿಗೆ ಪಯಃಕೇಳಿಯೊ ।
ಳೆಂತುಂ ನಿರ್ಮಲರ ಸಂಗದಿಂದಾಗದುದೇಂ ॥ ೧೪೬

ಜಳಕೇಳಿಗೆ ಮುನಿದುವು ಕ ।
ಣ್ಗಳೆನಿಸೆ ನಸುಗೆಂಪನಾಳ್ದುವಾಕ್ರೀಡೆಯೊಳಾ ॥

ಮೇಲೊಬ್ಬರು ನೀರನ್ನು ತುಳುಕಾಡುತ್ತಿರಲಾಗಿ– ೧೪೪. ಕುಂಕುಮ ದ್ರವದಿಂದಲೂ, ಗಂಧೋದಕದಿಂದಲೂ, ಕಸ್ತೂರಿಯ ನೀರಿನಿಂದಲೂ ಒಬ್ಬರನ್ನೊಬ್ಬರು ಸ್ನಾನಮಾಡಿಸಿದಂತೆ ತೋಯಿಸಲಾಗಿ, ಮಾಣಿಕದಿಂದ, ನವಚಂದ್ರಕಾಂತ ದಿಂದ ಹಾಗು ಹೊಳೆಯುವ ನೀಲರತ್ನದಿಂದ ಕಡೆದ ಪುತ್ತಳಿಗಳ ಸದೃಶರಾಗಿ ಕಾಂತೆಯರು ರಾಜನ ಮನಸ್ಸಿನಲ್ಲಿ ಕಾಮರಾಜನ ಇಂದ್ರಜಾಲವನ್ನು ಹೊಸತಾಗಿ ತೋರಿದರು. ಆಗ–೧೪೫. ಜೀರ್ಕೊಳವಿಗಳಿಂದ ನೀರೊತ್ತುತ್ತಿರುವ ಕಾಂತೆಯರು ಪುತ್ತಳಿಗಳಂತೆ ಎತ್ತೆತ್ತಲೂ ತುಂಬಿರಲಾಗಿ ಆ ಸರೋವರವು ಮನ್ಮಥನ ಧಾರಾಗೃಹ ದಂತೆ ಶೋಭಿಸಿತು. ಆ ಸಮಯದಲ್ಲಿ ೧೪೬. ಆ ಹೆಣ್ಣುಗಳಿಗೆ ಜಲಕೇಳಿಯಿಂದಾಗಿ ತುಟಿಗಳ ಅತಿರಾಗ (೧. ತುಂಬ ಕೆಂಪಾದ ವರ್ಣ. ೨. ಅತಿಶಯವಾದ ಪ್ರಣಯಾಸಕ್ತಿ) ವೂ, ಕೂದಲುಗಳ "ಕಾಟಿಲ್ಯವೃತ್ತಿ" (೧. ಸುಳಿಸುಳಿಯಾಗಿರುವಿಕೆ. ೨. ಮೋಸ ಗಾರಿಕೆಯ ವರ್ತನೆ) ಯೂ ಹಿಂಗಿಹೋದುವು. ನಿರ್ಮಲವಾದವರ ಸಹವಾಸದಿಂದ ಆಗದಿರುವ ಲಾಭ ಯಾವುದು? ೧೪೭. ಜಲಕ್ರೀಡೆಯು ಮೇಲೆಯೆ ಕೋಪಗೊಂಡುವೆಂಬಂತೆ ಕಣ್ಣುಗಳು ನಸುಗೆಂಪಾದುವು; ಆ ತರುಣಿಯರ

ಯೆಳವೆಂಡಿರ ರಾಗಮೆ ಸಂ ।
ಗಳಿಸದೆ ಪೋಪಂತೆ ಪೋದುದಧರದ ರಾಗಂ ॥ ೧೪೭

ಆ ಸಮಯದೊಳ್ ರಾಜರತ್ನಾಪೀಡಂ ನಿರ್ವರ್ತಿತಜಳಕ್ರೀಡನಾಗಿ

ಬೞಿಯನೆ ಬರೆ ಹಂಸೀಕುಳ ।
ಮುೞಿದು ಸರೋವರಮನದಱ ಪುಳಿಲೊಳ್ ನಲವಿಂ ॥
ಸುೞಿಯಲ್ಕೆ ತಳರ್ದ ಹಂಸನ ।
ನಿೞಿಪಿದನಾರಾಜಹಂಸನಬಳಾಳಿಯುತಂ ॥ ೧೪೮

ಉೞಿದು ವಧೂಸಂಕುಳಮೋ ।
ಕುೞಿಯಂ ಪೊಱಮಟ್ಟು ಪೋಪುದಂ ಪೆಱಗೆ ಕರಂ ॥
ಗಿೞಿದಾಗಿ ನಿಧನವೆತ್ತಿದ ।
ಕುೞಿಯಂತಿರ್ದತ್ತು ಕಣ್ಗೆ ಪೂಗೊಳನಾಗಳ್ ॥ ೧೪೯

ಅನಂತರಂ ತದಂತಿಕಪುಳಿನಸ್ಥಳದೊಳ್ ನಿಂದು

ವಿತರತ್ಸೀತ್ಕಾರವಕ್ತ್ರಂ ಜಳನಿಬಿಡಿತವಾಸಸ್ಸ್ಫುಟೀಭೂತನಿಮ್ನೋ ।
ನ್ನತಮುದ್ಯದ್ರೋಮಹರ್ಷಸ್ತನವಿನಿಹಿತದೋಃಸ್ವಸ್ತಿಕಂಲೋಚನೋಷ್ಠ ॥
ದ್ವಿತಯವ್ಯತ್ಯಸ್ತವರ್ಣಸ್ಥಿತಿ ತಿಮಿತಕಪೋಳಾವಳಗ್ನಾಳಕಂ ಯೌ ।
ವತಮಾದಂ ಕಣ್ಗೆ ವಂದಿರ್ದುದು ಕೃತಸಲಿಲಕ್ರೀಡಮುಸ್ತೋಷ್ಣಪೀಡಂ ॥ ೧೫೦

ಅನುರಾಗ ಸಂಗವನ್ನು ಕಾಣದೆ ತೊಲಗಿ ಹೋದಂತೆ ತುಟಿಯ ಬಣ್ಣ ಹೊರಟುಹೋಯಿತು. ವ॥ ಆಗ ಆ ರಾಜಚೂಡಾಮಣಿಯಾದ ಅಜಿತಸೇನನು ಜಲಕೇಳಿಯನ್ನು ಮುಗಿಸಿ–೧೪೮. ತನ್ನನ್ನು ಹಿಂಬಾಲಿಸಿ ಸ್ತ್ರೀಯರೆಲ್ಲ ಬರುತ್ತಿರಲಾಗಿ, ಹಂಸಿಗಳೊಡನೆ ಸರೋವರದಿಂದ ಹೊರಟು ದಂಡೆಯ ಮರಳು ನೆಲದಲ್ಲಿ ಸುಳಿಯುವ ರಾಜಹಂಸನನ್ನು ಸೋಲಿಸುವಂತೆ ಮನೋಹರವಾಗಿ ಕಂಡನು. ೧೪೯. ಓಕುಳಿಯಾಟವನ್ನು ಮುಗಿಸಿ ಸ್ತ್ರೀಯರೆಲ್ಲ ತನ್ನನ್ನು ಬಿಟ್ಟು ಹೊರಟು ಹೋಗಲಾಗಿ ಆ ಸರೋವರವು ಹೂಳಿದ ಧನವನ್ನು ಎತ್ತಿಕೊಂಡ ಬಳಿಕ ಭಣ ಗುಡುವ ಬರಿ ಕುಳಿಯಂತೆ ತೋರಿತು. ವ॥ ಅನಂತರ ಕೊಳದ ಬಳಿಯ ಮರಳು–ನೆಲದಲ್ಲಿ ನಿಂತು– ೧೫೦. (ಚಳಿಯ ಸೇಡಿನಿಂದ) ಸೀತ್ಕಾರ ಮಾಡುತ್ತ, ನೀರಿಂದ ತೊಯ್ದು ಸೀರೆಗಳು ಮೈಗೆ ಹತ್ತಿಯಾಗಿ ಅಂಟಿಕೊಂಡು ದೇಹದ ಉಬ್ಬುತಗ್ಗುಗಳನ್ನೆಲ್ಲ ಪ್ರಕಟಿಸುತ್ತಿರಲಾಗಿ, ಮೈಯೆಲ್ಲ ರೋಮಾಂಚವೆದ್ದು ಮೊಲೆಗಳಿಗೆ ಅಡ್ಡವಾಗಿ ಕೈಗಳನ್ನು ಕತ್ತರಿಯಾಕಾರದಲ್ಲಿ ಮರೆಮಾಡಿಕೊಂಡು, ಕಣ್ಣಿನ ಬಣ್ಣವನ್ನೂ ತುಟಿಗಳ ಬಣ್ಣವನ್ನು ಕಣ್ಣುಗಳು ವಿನಿಮಯಮಾಡಿಕೊಂಡಂತೆ ತೋರುತ್ತಿರಲು ಒದ್ದೆಯಾದ ಮುಂಗುರುಳು ಕೆನ್ನೆಗಳಿಗೆ ಅಂಟಿಕೊಂಡಿರಲಾಗಿ, ಜಲಕ್ರೀಡೆಯಿಂದ ಉಷ್ಣ

ಆಗಳ್ ಭಂಡಾರಿಗರ್ ವಿವಿಧಪಟಳಕಂಗಳೊಳ್ ತಂದು ಮುಂದಿಟಿಪಿದ ಸುಗಂಧಾನುಲೇಪನ ಕುಸುಮವಸನಭೂಷಣಂಗಳಿನರಸಿಯುಂ ತಾನುಂ ಶೃಂಗಾರಂಗೆಯ್ದು ವಿಳಾಸಿನೀಜನಕ್ಕಮೀಯಲೊಡ ಮವಳ್ದಿರುಂ ಕೈಗೈಯೊಳ್ ಕೈಗೈದು ಬಂದಿರೆ

ಸೊಗಯಿಪ ತಾರಕೋತ್ಕರದ ಮಧ್ಯದ ಶೀತಮರೀಚಿರೋಹಿಣೀ ।
ಯುಗಮೆನೆ ಚೆಲ್ವುವೆತ್ತ ಲತಿಕಾಳಿಯ ಮಧ್ಯದ ಚೂತಮಲ್ಲಿಕಾ ॥
ಯುಗಮೆನೆ ಶೋಭಿಸಿರ್ದ ವನಿತಾಳಿಯ ಮಧ್ಯದೊಳಂದು ನಾಡೆಯುಂ ।
ಬಗೆಗೊಳಿಸಿತ್ತು ಮತ್ತಜಿತಸೇನಮಹೀಶಶಶಿಪ್ರಭಾಯುಗಂ ॥ ೧೫೧

ತದನಂತರಂ ವನಮಹತ್ತರನಂ ಬರಿಸಿ

ಮಾವಿಂಗಿದು ಮಲ್ಲಿಗೆಗಿದು ।
ತಾವರೆಗೊಳಕಿದು ದಲೆಂದು ಪೆಸರ್ವೆಸರಿಂ ಭೂ ॥
ಪಾವಸನಕನಕಚಯಮನಿ ।
ತ್ತಾವಲ್ಲಭನಿತ್ತನಾತನೆಡಱಿಕೋಡುವಿನಂ ॥ ೧೫೨

ವನಮದು ಸುರಕುಜದಾರವೆ ।
ವನಜಾಕರಮದುವೆ ಸಿದ್ಧರಸಕೂಪಂ ತಾ ॥
ನೆನಿಸೆ ನೃಪಂ ವನಜಳಕೇ ।
ಳಿನಿಮಿತ್ತದಿನರ್ಥಿಗೀಪ್ಸಿತಾರ್ಥಮನಿತ್ತಂ ॥ ೧೫೩

ತೆಯ ತಾಪವನ್ನೆಲ್ಲ ಕಳೆದುಕೊಂಡ ಯುವತಿಯರು ಕಂಗೊಳಿಸಿದರು. ವ॥ ಆಗ ಭಂಡಾರಿಗರು ಬಗೆಬಗೆಯ ಹಡಲಿಗೆಗಳಲ್ಲಿ ತಂದು ಮುಂದೆ ಇರಿಸಿದ ಪರಿಮಳದ ಲೇಪನದ್ರವ್ಯ, ಪುಷ್ಪ, ವಸ್ತ್ರ, ಆಭರಣ ಮೊದಲಾದುವನ್ನು ಅರಸಿಯೂ ಅರಸನೂ ತೆಗೆದುಕೊಂಡು ಸಿಂಗರಿಸಿಕೊಂಡು ವಿಲಾಸಿನಿಯರಿಗೂ ಕೊಟ್ಟರು. ಅವರೂ ಅಲಂಕರಿಸಿಕೊಂಡು ಬರಲಾಗಿ– ೧೫೧. ಚೆಲುವಾದ ನಕ್ಷತ್ರಸಮೂಹದ ಮಧ್ಯದಲ್ಲಿರುವ ಚಂದ್ರ–ರೋಹಿಣಿಯರೊ, ಸುಂದರವಾದ ಬಳ್ಳಿಗಳ ನಡುವೆ ನಿಂತ ಮಲ್ಲಿಗೆ–ಮಾವುಗಳ ಜೊತೆಯೊ ಎಂಬಂತೆ ವನಿತೆಯರ ಮಧ್ಯದಲ್ಲಿ ಅಜಿತಸೇನ– ಶಶಿಪ್ರಭೆಯರ ಜೊತೆ ತುಂಬ ಮನೋಹರವಾಗಿ ಕಂಡಿತು. ಬಳಿಕ ಉದ್ಯಾನಪಾಲಕನನ್ನು–ಕರೆತರಿಸಿ–೧೫೨. "ಮಾವಿಗೆ ಇದು, ಮಲ್ಲಿಗೆಗೆ ಇದು, ಕಮಲಸರೋವರಕ್ಕೆ ಇದು" ಎಂದು ಬೇರೆಬೇರೆಯಾಗಿ ಹೆಸರಿಸಿ (ಆಯಾ ವಿಷಯದಲ್ಲಿ ವನಪಾಲಕನು ಮಾಡಿದ ಕೆಲಸವನ್ನು ಮೆಚ್ಚಿ) ವಸ್ತ್ರಾಭರಣಗಳನ್ನೂ ಚಿನ್ನದ ನಾಣ್ಯಗಳನ್ನೂ ಬಹುಮಾನವಾಗಿ ಕೊಟ್ಟು ಅರಸನು ಆತನಿಗೆ ಬಡತನದ ಬಾಧೆಯಿಲ್ಲದಂತೆ ಮಾಡಿದನು. ೧೫೩. ಆ ಉದ್ಯಾನವೊಂದು ಕಲ್ಪವೃಕ್ಷದ ವನ, ಆ ತಾವರಗೊಳವು ಒಂದು ಸಿದ್ಧರಸದ ಬಾವಿ ಎಂದೆನಿಸುವಂತೆ ಅರಸನು ವನಕೇಳಿ

ಅಂತು ಸಕಲಜನಪ್ರೀಣನಪ್ರದಮಂ ವಿಶ್ರಾಣವಿನೋದಮಂ ತೀರ್ಚಿ ಬಟಿಯಮುದ್ಯಾನದಿಂ ಪೊಱಮಟ್ಟರಸಿವೆರಸುಕರಿವರಸ್ಕಂಧಾಧಿರೂಢನುಂ ಪರಿವಾರಪರಿವೃತನುಮಾಗಿ ನಡೆದು ಪುರಮಂ ಪುಗುವಲ್ಲಿ

ವಿಭವಂ ಕಾಮಂಗಿನಿತ್ತೆತ್ತಣದಿವನಮರೇಂದ್ರಂ ಸುರೇಂದ್ರಂಗಮಿಂತೀ ।
ಸುಭಗತ್ವಂ ಮತ್ತಿನಿತ್ತೆತ್ತಣದುಭಯಗುಣಕ್ಕಂ ದಿಟಕ್ಕೊರ್ವನಾವೊಂ ॥
ಪ್ರಭುವಿಂ ಮತ್ಸ್ವಾಮಿತಾನಲ್ಲದೆ ಪೆಱರೆನುತುಂ ನೋಡೆ ತತ್ಪೌರಲೋಕಂ ।
ವಿಭು ಸದ್ಮಂಗಂಡು ಬಂದಂ ಜಿನಸಮಯಸರಸ್ಸಾರಕೇಳೀಮರಾಳಂ ॥ ೧೫೪

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿಪದಪದ್ಮನಿಧಾನದೀಪವರ್ತಿ

## ಶ್ರೀಮದಗ್ಗಳದೇವ

ವಿರಚಿತಮಪ್ಪ

## ಚಂದ್ರಪ್ರಭಪುರಾಣದೊಳ್

ಅಜಿತಸೇನಚಕ್ರಧರವಸಂತೋತ್ಸವಂ
ಸಪ್ತಮಾಶ್ವಾಸಂ

ಜಲಕೇಳಿಗಳ ನಿಮಿತ್ತವಾಗಿ ಅವರು ಬೇಡಿದುದನ್ನು ಕೊಟ್ಟನು. ವ॥ ಹೀಗೆ ಸಮಸ್ತ ಜನಕ್ಕೂ ತೃಪ್ತಿಯಾಗುವಂತೆ ದಾನ ವಿನೋದವನ್ನು ಮುಗಿಸಿ, ಬಳಿಕ ಉದ್ಯಾನದಿಂದ ಹೊರಟು ಅರಸಿಯೊಡನೆ ಆನೆಯನ್ನೇರಿ, ಪರಿವಾರದೊಡನೆ ನಡೆದು ಪುರಪ್ರವೇಶ ಮಾಡುವಾಗ–೧೫೪. "ಮನ್ಮಥನಿಗೆ ಇಷ್ಟೊಂದು ವೈಭವವೆಲ್ಲಿಂದ ಬಂದಿತು? ಇವನು ಕಾಮನಲ್ಲ, ದೇವೇಂದ್ರನೇ ಸರಿ. ದೇವೇಂದ್ರನಿಗೆ ಇಷ್ಟೊಂದು ಸೌಂದರ್ಯ ವೆಲ್ಲಿಂದ ಬರಬೇಕು? ಇವನು ದೇವೇಂದ್ರನಲ್ಲ ಹಾಗಾದರೆ, ಸೌಂದರ್ಯ ಹಾಗು ವೈಭವ ಈ ಎರಡಕ್ಕೂ ಸಮನಾಗಿ ಪ್ರಭುವಾದವನು ನಮ್ಮ ರಾಜನಲ್ಲದೆ ಬೇರೆ ಯಾರಾದರೂ ಉಂಟೆ?" ಎಂದು ಪುರಜನರು ನೋಡುತ್ತಿರಲಾಗಿ ಜಿನಧರ್ಮ ಸರೋವರದಲ್ಲಾಡುವ ಹಂಸನಾದ ಅರಸನು ಅರಮನೆಗೆ ಬಂದನು.

ಏಳನೆಯ ಆಶ್ವಾಸ ಮುಗಿದುದು.

# ಅಷ್ಟಮಾಶ್ವಾಸಂ

ಶ್ರೀಪತಿಪುರಸಮಮಂ ಚೂ ।
ಡಾಪೀಡಮೆನಿಪ್ಪ ಮಾಡಮಂ ಪೊಕ್ಕು ಸುಸೌ ॥
ಖ್ಯೋಪಚಯನಿರ್ದನುಚಿತ ।
ವ್ಯಾಪೃತಿಯಿಂ ಜೈನಜನಮನೋಹರಚರಿತಂ ॥ ೧

ಅಂತು ಸುಖದಿನಿರ್ದನನ್ನೆಗಂ

ಎನಗಂ ಭೂಪತಿಗಂ ಸಮಾನಮೆ ಕರವ್ಯಾಪ್ತಾಖಿಲಾಶತ್ವಮ ।
ತ್ಯನುರಕ್ತಪ್ರಕೃತಿತ್ವಮಭ್ಯುದಯವತ್ವಂ ಚಕ್ರಭೃತ್ತ್ವಂ ದಲೆಂ ॥
ದಿನನುದ್ಯಾನಪಯೋವಿನೋದಸದೃಶತ್ವಕ್ಕಂ ಮನಂದಂದವೋಲ್ ।
ವನಮಾಲಾಕುಲತೀರಮಪ್ಪಪರಪಾರಾವಾರಮಂ ಪೊರ್ದಿದಂ ॥ ೨

ಅಗಳ್

ಪ್ರತ್ಯಗ್ಭೂಧರವಾತ್ಮಾ ।
ಧಿತ್ಯಕದೊಳ್ ತಳೆದುದಸ್ತಗತಿಯಿಂ ಬಿಬ್ಬಾ ॥
ದಿತ್ಯನನೆಂದುಮದಾರ್ಗಂ ।
ನಿತ್ಯಪರಾರ್ಥೈಕವೃತ್ತನಕ್ಕುಂ ಗ್ರಾಹ್ಯಂ ॥ ೩

## ಅಷ್ಟಮಾಶ್ವಾಸಂ

೧. ವೈಕುಂಠಕ್ಕೆ ಸಮಾನವಾದ ಚೂಡಾಪೀಡವೆಂಬ ತನ್ನ ಅರಮನೆಯನ್ನು ಪ್ರವೇಶಿಸಿ, ಅನೇಕ ಬಗೆಯ ಭೋಗೋಪಭೋಗಗಳನ್ನು ಉಚಿತವಾಗಿ ಅನುಭವಿಸುತ್ತ ಜೈನಜನ ಮನೋಹರವಾದ ನಡತೆಯ ಚಕ್ರವರ್ತಿಯು ಇದ್ದನು. ವ॥ ಹಾಗೆ ಸುಖದಿಂದಿರುವಾಗ (ಒಂದು ದಿವಸ)– ೨. "ಕರವ್ಯಾಪ್ತಾಖಿಲಾಶತ್ವ" (೧. ಕಿರಣಗಳಿಂದ ಎಲ್ಲ ದಿಕ್ಕುಗಳನ್ನೂ ಆವರಿಸಿಕೊಂಡಿರುವಿಕೆ. ೨. ಎಲ್ಲ ದಿಕ್ಕಿನ ಪ್ರದೇಶಗಳಿಂದಲೂ ಕರವನ್ನು ತೆಗೆದುಕೊಳ್ಳುವ ಅಧಿಕಾರ–ಅಧಿರಾಜತ್ವ) ದಲ್ಲಿ, "ಅತ್ಯನುರಕ್ತ ಪ್ರಕೃತಿತ್ವ" (೧. ನಿಸರ್ಗಕ್ಕೆಲ್ಲ ಪ್ರಿಯನಾಗಿರುವಿಕೆ. ೨. ಪ್ರಜೆಗಳಿಗೆಲ್ಲ ಪ್ರಿಯನಾಗಿರುವಿಕೆ) ದಲ್ಲಿ, ಅಭ್ಯುದಯ ಹೊಂದುವ ಗುಣದಲ್ಲಿ, "ಚಕ್ರಭೃತ್ವ" (೧. ವರ್ತುಲಾಕೃತಿ ೨. ಚಕ್ರವರ್ತಿತ್ವ) ದಲ್ಲಿ–ಈ ಅರಸನೂ ನಾನೂ ಸರಿಸಮಾನರೇ ಆಗಿರುವೆವು. ಇವನಂತೆ ವನಕ್ರೀಡೆ ಜಲಕ್ರೀಡೆಗಳನ್ನು ನಾನೂ ಮಾಡಬೇಕು" ಎಂದು ಯೋಚಿಸಿದ ಹಾಗೆ ಸೂರ್ಯನು ವನಮಾಲೆಗಳು ದಂಡೆಯಾಗಿರುವ ಪಶ್ಚಿಮ ಸಮುದ್ರವನ್ನು ಹೊಕ್ಕನು. ಆಗ–೩. ಅಸ್ತಂಗತನಾಗಿ ಬೀಳುತ್ತಿರುವ ಸೂರ್ಯನನ್ನು ಪಶ್ಚಿಮ ಪರ್ವತವು ತನ್ನ ಸಾನು ಪ್ರದೇಶದಲ್ಲಿ ಇಳಿಸಿಕೊಂಡಿತು. ಎಂದಾದರೂ ಯಾರಿಗಾದರೂ ನಿತ್ಯ ಪರೋಪಕಾರಿ ಆಧಾರ

ಬಳಸಿದುದರ್ಕವಾಜಿಖುರಘಟ್ಟಿತಮಾದಪರಾದ್ರಿಯಿಂದಮು ।
ಚ್ಚಳಿಸಿದ ಧಾತುರೇಣುವೆನೆ ಚಕ್ರಯುಗಂಗಳಗಲ್ಕೆಗಿಚ್ಚು ಪಾಂ ॥
ಸುಳೆಯರ ರಾಗದೇಟ್ಗೆ ದೆಸೆವೆಣ್ಗಳ ರತ್ನವಿಭೂಷಣಾಂಶುವು ।
ತ್ವಳನಿಯ ಕುಂಕುಮೋದಕದ ಸಿಂಪಿಣಿ ಸಂಜೆಯ ಕೆಂಪು ಲೋಕಮಂ ॥ ೪

ಆ ಸಮಯದೊಳ್ ದೂಳಿಸೆಜ್ಜರಕ್ಕುಜ್ಜುಗಿಸಿ ಕಾಡಾನೆಗಳ ಕೋಡ ಮೊನೆಯಿನೀಡಿಱಿವ ಗಿರಿಯ ದರಿಯ ಗೈರಿಕಪರಾಗಮಂ ಸಂಧ್ಯಾರಾಗಮಿಷದಿನಾಗಸಕ್ಕೆ ಪಸರಿಸಿಯುಂ, ಪೊಗಸಿನೊಳ್ ಮೊಗಸಿ ಬೈಗುವರೆಗಂ ಬೇಟೆವೆಸದಿನಸುವರೆಯಾಗಿ ತಮ್ಮಿರ್ಕೆವೆಟ್ಟುಗಳ ಗುಹಾಶಯ್ಯೆಯಿಂದುಱಿ ಸನ್ನೆಗೆಯ್ದು ಪೊಱಗಣ ಪಾಸಱೆಗಳೊಳ್ ಪಾಸುವಸುಕೆದಳಿರಂ ಸೂಸಿ ಬೇಸಱೆಸಿದ ಪುಳಿಂದಿನಿಯರ ಮನದೊಳೊಂದಿನಿಸು ಸಂದಿಸಿಯುಂ, ತೊಱೆಯ ಪೊಱದಡಿಯ ಕರಂಜಕುಂಜದೊಳ್ ಸಂದಣಿಸಿ ನಿಂದು ರೋಮಂಥಲೀಲಾತತ್ಪರತೆಯಿಂದರನಿಮೀಲಿತಾಕ್ಷಂಗಳಾದ ಕಾಡೆರ್ಮೆಯ ಮೊಗದಿನುಗುವ ನೊರೆಯನುರುಳಿಗೊಂಡು ತಂದಡವಿಯ ಗಿಡುಗಳೊಳ್ ಗುಡಿಗಟ್ಟಿದಂತೆ ತೊಡರ್ಚಿಯುಂ, ಮೇಪುಗಾಡಿಂ ಹಕ್ಕಿದಲೆಗೆ ಹರಿಯಿಡುವ ಹರಿಣೀಗಣದ ಕಡೆವಾಯೊಳರೆಮೆಲ್ದುಟಿದೆಳೆಗಱುಂಕೆಯೆಸಳ್ಗಳಂ ಸೆಳೆದು

ವಾಗುತ್ತಾನೆ. ೪. ಸೂರ್ಯನ ಕುದುರೆಗಳ ಗೊರಸು ಹೊಡೆದು ಎದ್ದ ಪಶ್ಚಿಮಾದ್ರಿಯ ಗೈರಿಕದ ದೂಳೋ, ಚಕ್ರವಾಕದಂಪತಿಗಳ ವಿರಹದುರಿಯೊ, ಜಾರೆಯರ ಅನುರಾಗದ ಅಭ್ಯುದಯವೊ, ದಿಗ್ವನಿತೆಯರ ರತ್ನಾಭರಣಕಾಂತಿಯೊ, ನೈದಿಲೆ ಬಳ್ಳಿ (ಸಂತೋಷ ದಿಂದ ಚಿಮ್ಮಿದ) ಕುಂಕುಮದ ನೀರೊ ಏನೊ ಎಂಬಂತೆ ಸಂಧ್ಯಾಕಾಲದ ಕೆಂಪು ಲೋಕದಲ್ಲಿ ಪಸರಿಸಿತು. ವ॥ ಆ ಸಮಯದಲ್ಲಿ ದೂಳಾಟವಾಡಲೆಂದು ಕಾಡಾನೆಗಳು ಕೋರೆಗಳ ತುದಿಯಿಂದ ತಿವಿತಿವಿದು ಎತ್ತಿದ ಗಿರಿಯ ಪಕ್ಕದ ಗೈರಿಕದ ದೂಳನ್ನು ಸಂಜೆಗೆಂಪೆಂಬಂತೆ ಆಕಾಶದಲ್ಲಿ ಹರಡಿ; ಬೆಳಗಿನಲ್ಲಿ ಆರಂಭಿಸಿ ಸಂಜೆಯವರೆಗೂ ಬೇಟೆಯ ಉದ್ಯೋಗದಲ್ಲಿ ಬಳಲಿ ಅರೆಜೀವವಾಗಿ ತಮ್ಮ ನೆಲೆಮನೆಯಾದ ಗವಿಗಳ ಹೊರಗಿರುವ ಹಾಸುಗಲ್ಲುಗಳ ಮೇಲೆ ಅಶೋಕದ ಚಿಗುರೆಲೆಗಳನ್ನು ಸೂಸಿ ಬೇಸತ್ತ ಬೇಡಿತಿಯರ ಮನಸ್ಸಿನಲ್ಲಿ ಒಂದಿಷ್ಟು ಹೊಂದಿಕೊಂಡು; ನದಿಯ ತೀರದಲ್ಲಿರುವ ಹುಲಗಿಲ ಮರಗಳ ಸಂದಣಿಯಲ್ಲಿ ಒಟ್ಟಾಗಿ ನಿಂತು ಮೆಲುಕಾಡಿಸು ವುದರಲ್ಲಿ ಮಗ್ನವಾಗಿ ಕಣ್ಣುಗಳನ್ನು ಅರೆಮುಚ್ಚಿದ ಕಾಡೆಮ್ಮೆಗಳ ಬಾಯಿಂದ ಹೊಮ್ಮುವ ನೊರೆಯನ್ನು ಉಂಡೆಗಟ್ಟಿಕೊಂಡು ಒಯ್ದು ಅಡವಿಯ ಗಿಡಮರಗಳಲ್ಲಿ ಧ್ವಜಗಳನ್ನು ಕಟ್ಟಿದಂತೆ ಕೊಂಬೆಗಳ ತುದಿಗೆ ಅಂಟಿಸುತ್ತ; ಕಾಡಿನಲ್ಲಿ ಮೇದು ಬಂದು ತಮ್ಮ ನೆಲೆಬೀಡುಗಳಿಗೆ ಓಡುತ್ತಿರುವ ಜಿಂಕೆಗಳ ಬಾಯ್ದುದಿಯಲ್ಲಿ ತಿಂದುಳಿದ ಎಳೆಯ ಕರುಕೆಯ ಎಸಳುಗಳನ್ನು ಸೆಳೆದು ತಂದು ಆ ಬಯಲಲ್ಲಿ ಹೊಸ ಹುಲ್ಲುಗಾವಲನ್ನುಂಟು ಮಾಡಿ; ಹೆಮ್ಮರದ ನಡುಗೊಂಬೆಯ ಕವಲಿನಲ್ಲಿ ಕಟ್ಟಿದ ಗೂಡುಗಳಲ್ಲಿ ವಾಸವಾಗಿದ್ದ ಎಳೆಯ ಮರಿಗಳಿಗೆ ಕುಟುಕಿತ್ತು ತುಂಬ ಅಕ್ಕರೆಯಿಂದ ಗರಿದುದಿಗಳನ್ನು ಹೊದಿಸಿ ಸಂತೋಷಪಡುವ ವನಪಕ್ಷಿಗಳನ್ನು ಅವು ಕುಳಿತ

ತಂದಾ ಬಯಲೊಳ್ ಬಳ್ಳಿವಸಲೆಯಂ ಪೊಸಯಿಸಿಯುಂ, ಪೆರ್ಮರದ ನಟ್ಟೆಗೊಂಬಿನ ಕವಲ್ದಲೆಯೊಳಿಟ್ಟ ಗೂಡುಗಳೊಳ್ ಗೂಡುದೊಂಡಿರ್ದ ಕುಱಿಳೆವಱೆಗಳ್ಗೆ ಕುಟುಂಕನಿಕ್ಕಿ ಕಡುಗಂದಿತನದಿಂ ಕೋಡಗಱೆಯ ತುಱುಗಲೊಳ್ ಪೊದಯಿಸೆ ಪದೆದಿರ್ದ ವನವಿಹಂಗಂಗಳಂ ಕೊಂಬುವೆರಸಿ ತೂಗಿ ತೂಂಕಡನೊಡರ್ಚಿಯುಂ, ನಿದ್ರಾಭಾರಮುದ್ರಿತಂಗಳುಂ ಕಿಂಚಿದಾಕುಂಚಿತಪರ್ಣಂಗಳುಮಾದುಪವನದ ತರುಲತಾಗುಲ್ಮಜಾಲಮಂ ಸೋಂಕಿ ಬಂದು ತಿಳಿಗೊಳಂಗಳೊಳ್ ತೆರೆಯ ನೆರವಿಯಂ ತೆರಳ್ಚಿ ಸಂಜೆಯ ಕಡುವೆಳಗಿನಿಂ ತಡಿಯೊಳ್ ಪೊಳೆವ ತಮ್ಮ ನೆೞಲನೞಲ್ವೋದ ನಲ್ಲಳೆಂದು ಲಲ್ಲೈಸಿ ನೋೞ್ಪ ಜಕ್ಕವಕ್ಕಿಗಳಾಸೆಯಂ ಬೀಸರಂಮಾಡಿಯುಂ, ಸೇಡುಗೂಡಿದಂತೆ ಪುರಮಂ ಪೊಕ್ಕು ವಿಪಣಿವೀಧಿಯೊಳ್ ಮಾಲೆಗಾರ್ತಿಯರೆತ್ತಿದ ಬೆಲೆವೂವಿನ ಸರಂಗಳನಲರಂಬಂಗೆ ಪೊದೆಗೆದಱುವಂತೆ ಕೆದಱಿ ಪರಿಮಳಭಂಗಭಯಮನವಳ್ದಿರೊಳ್ ತಗುಳ್ಚಿ ಪಡಲಗೆಯಂ ಮಗುಳೆ ಪುಗಿಸಿಯುಂ, ಲೀಲೆಯಿಂ ಸುೞಿವ ಬೊಜಂಗರ ತುಱುಂಬುದೀಂಬಿದ ಕದಂಬದೂವಿನಿಡುಕುಱಿಳೊಳ್ ಮಡಂಗಿದ ಧೂಪವರ್ತಿಯ ಕರಂಡಕಂಗಳಿಂ ಸೌರಭದ ಸಸಿಯಂತಸಿದನೆ ನೆಗೆವಗುರುವಿನ ಪೊಗೆಯನಗೆಯೊತ್ತುಗೊಂಡು ವೇಶ್ಯಾಸೌಧವೇಶ್ಮಂಗಳನರ್ಧಶ್ಯಾಮಳಂ ಮಾಡಿಯುಂ, ಮೆಲ್ಲಮೆಲ್ಲಗೆ ಸೂೞ್ಗೇರಿಯಂ ಪೊಕ್ಕು ಪೊಱಗಣಮತ್ತವಾರಣಮಂ ಮಲಂಗಿ ನಿಂದು ಯೌವನೋನ್ಮತ್ತೆಯರುಟ್ಟ ಪಟ್ಟಣಿಗೆಯ ನಿಱಿ ತುಱುಂಗಲಂ ನೆಗಪಿ ನುಣ್ದೊಡೆಯ ಚೆಲ್ವಂ ನೋಡಲೆಂದು ಸಿಡಿಮಿಡಿವರ್ಪ ಕಾತರವಿಟರ ಕಣ್ಗೆ ಪಾರಣೆಯಂ ಮಾಡಿಸಿಯುಂ.

ಮರದ ಕೊಂಬೆಸಹಿತವಾಗಿ ತೂಗಿ ತೂಗಿ ನಿದ್ದೆ ಬರಿಸಿ; ನಿದ್ದೆಯ ಭಾರದಿಂದ ಎಲೆಗಳನ್ನು ನಸುವೆ ಮುದುಡಿಕೊಂಡು ಜೋತ ಉಪವನದ ಮರಬಳ್ಳಿ ಹೊದರುಗಳನ್ನು ಸೋಕಿ ಬಂದು, ತಿಳಿಯಾದ ಕೊಳಗಳಲ್ಲಿ ತೆರೆಗಳನ್ನು ಹುಟ್ಟಿಸಿ; ಸಂಜೆಯ ತುಂಬುಬೆಳಕಿನಲ್ಲಿ ಹೊಳೆಯುವ ತಮ್ಮ ಪ್ರತಿಬಿಂಬವನ್ನು ನೀರಂಚಿನಲ್ಲಿ ಕಂಡು ದುಃಖಿಸುತ್ತಿರುವ ತಮ್ಮ ನಲ್ಲೆಯರೆಂದು ಪ್ರೇಮದಿಂದ ನೋಡುವ ಚಕ್ರವಾಕಗಳ ಆಸೆಯನ್ನು (ನೀರನ್ನು ಕಲಕುವುದರಿಂದ) ವ್ಯರ್ಥಗೊಳಿಸಿ; ಚಳಿಯಾದಂತೆನಿಸಿ ಊರಲ್ಲಿ ಹೊಕ್ಕು ಮಾರುಕಟ್ಟೆಯ ಬೀದಿಯಲ್ಲಿ ಮಾಲೆಗಾರ್ತಿಯರು ಎತ್ತಿಹಿಡಿದ ಬೆಲೆಯುಳ್ಳ ಹೂವಿನ ಸರಗಳನ್ನು ಅಲುಗಿಸಿ, ಕಾಮನಿಗೆ ಬಾಣಗಳನ್ನಾಯ್ದು ಕೊಡುವಂತೆ, ಕೆದರಿಬಿಡಲಾಗಿ, ಪರಿಮಳವೆಲ್ಲಿ ಕುಗ್ಗಿಹೋದೀತೋ ಎಂಬ ಭಯದಿಂದ ಅವರು ಮರಳಿ ಆ ಮಾಲೆಗಳನ್ನು ಹಡಲಿಗೆಗಳಲ್ಲಿ ಮುಚ್ಚಿಡುವಂತೆ ಮಾಡಿ; ಒನಪಿನಿಂದ ಸುಳಿದಾಡುವ ವಿಟರು ಜಡಿದು ತುಂಬಿದ ಸುಗಂಧದ ಧೂಪಗಳ ರಾಶಿಯಲ್ಲಿ ಇಟ್ಟ ಧೂಪದ ಕರಡಿಗೆಗಳಿಂದ ಪರಿಮಳದ ಸಸಿಯಂತೆ ತೆಳುವಾಗಿ ಮೇಲೇಳುವ ಅಗುರುವಿನ ಹೊಗೆಯನ್ನು ಎತ್ತಿಕೊಂಡು ಬಂದು ವೇಶ್ಯಾಭವನಗಳನ್ನು ಅರ್ಧಮರ್ಧ ಕಪ್ಪುಗೊಳಿಸಿ; ಮೆಲ್ಲಮೆಲ್ಲಗೆ ಸೂಳೆಗೇರಿಯನ್ನು ಹೊಕ್ಕು ಹೊರಗಿನ ಮತ್ತವಾರಣಗಳಿಗೆ ಆತುಕೊಂಡು ನಿಂತ ಯೌವನ ಮದೋನ್ಮತ್ತೆಯರು ಉಟ್ಟ ನಿರಿಗಳನ್ನು ಬೀಸಿ ಮೇಲೆ ಹಾರಿಸಿ, ಅವರ ನುಣ್ದೊಡೆಗಳ ಚೆಲುವನ್ನು ನೋಡಲೆಂದು ಕಾತರಿಸಿಕೊಂಡಿದ್ದ ವಿಟರ ಕಣ್ಣಿಗೆ ಹಬ್ಬವನ್ನುಂಟುಮಾಡಿ; ಆಳವಾದ

ನಿಮ್ನ ನಾಭಿಮಂಡಳಮನೊಳಪೊಕ್ಕು ಒಳಗೆ ತೀವಿದ ಪುಡಿಗತ್ತುರಿಯ ಸುಟ್ಟುಱಿಯನಸಿದನೆ ಬೇಱೊಂದು ಬಾಸೆಯೆಂಬಂತೆ ನೆಗಪಿ ಮೇಗೊಗೆದು ಬಟ್ಟಮೊಲೆಯಿಟ್ಟೆಡೆಯೊಳ್ ಬಟ್ಟೆಗಾಣದೆ, ಬಳಸಿ ಸುೞಿದಾಡಿಯುಂ, ಸಾಯಂತನಸಮಯಸಮೀರಣಂ ಸೌಖ್ಯಸಾರಸರ್ವಸ್ವಮೆನಿಸಿದಾಗಳ್

॥ ಮಾಳಿನೀವೃತ್ತ ॥

ಅರಮೆ ಮಱೆ ಪತಂಗಂಗಾಗೆ ತಚ್ಛೈಲಶೃಂಗಂ ।
ವಿರಹಪರವಶಾಂಗಂ ತ್ಯಕ್ತಜಾಯಾನುಷಂಗಂ ॥
ಸ್ಮರವಿಶಿಖನಿಷಂಗಂ ಸಾಶ್ರುಪಾತಾನ್ತರಂಗಂ ।
ದರವಿಚಳದಪಾಂಗಂ ಮ್ಲಾನಮಾಯ್ತಾ ರಥಾಂಗಂ ॥ ೫

ಒಱೆದುಗುವ ಬಾಷ್ಪವಾರಿಯಿ ।
ನೆಱಂಕೆಗಳ್ ನಾಂದು ಮಗುಳೆ ವಿರಹಾನಳನಿಂ ॥
ನೆಱೆ ಬಱವಾಗಿರೆ ಪಡುನೇ ।
ಸಱಕೊಳಿರ್ದುವಗಲ್ದು ಚಕ್ರವಾಕದ್ವಂದ್ವಂ ॥ ೬

ನಲ್ಲರಗಲ್ಕೆಯಿಲ್ಲದೆಡೆಯಸ್ತಮಯಕ್ಕೆ ದಿನಾಧಿನಾಯಕಂ ।
ಸಲ್ಲದ ತಾಣಮಂಗಜಶರಾಹತಿ ಪೊರ್ದದ ದೇಶಮುಳ್ೊಡಂ ॥
ತಲ್ಲಿಯೆ ಮಾಱ್ಕೆ ಮಜ್ಜನನಮಂ ಬಿದಿಯೆಂದು ರಥಾಂಗಕಾಂತೆ ಹೃ ।
ದ್ವಲ್ಲಭವಿಪ್ರಯುಕ್ತಿ ಬಗೆಗೆಟ್ಟು ನೆಱಲ್ದುದು ಪದ್ಮಪತ್ರದೊಳ್ ॥ ೭

ಹೊಕ್ಕುಳದೊಳಗೆ ತುಂಬಿದ್ದ ಕಸ್ತೂರಿಪುಡಿಯನ್ನು ಹೊರಚೆಲ್ಲಿ ಇನ್ನೊಂದು ಬಾಸೆಯ ರೇಖೆಯೊ ಏನೊ ಎಂಬಂತೆ, ಅದರಿಂದ ಒಡಲ ಮೇಲೆ ಗುರುತುವಾಡಿ; ಮೇಲಕ್ಕೆ ನುಗ್ಗಿ ಬಟ್ಟಮೊಲೆಗಳ ನಡುವೆ ನುಗ್ಗಿ ಮುಂದೆ ಹೋಗಲು ಹಾದಿ ಕಾಣದೆ ಅವುಗಳನ್ನು ಬಳಸಿಕೊಂಡು ಸುಳಿದಾಡಿ, ಸಾಯಂಕಾಲದ ಗಾಳಿಯು ಸೌಖ್ಯದ ಸಾರಸರ್ವಸ್ವವೆನಿಸಿತು. ೫. ಪಶ್ಚಿಮಾದ್ರಿಯ ಶಿಖರವು ಸೂರ್ಯನನ್ನು ಅರ್ಧ ಮರೆಮಾಡಿತು; ತನ್ನ ನಲ್ಲೆಯ ಸಹವಾಸವನ್ನು ಕಳೆದುಕೊಂಡು ವಿರಹ ಪರವಶವಾಗಿ ಕಣ್ಣೀರ್ಗರೆಯುತ್ತ, ಕುಡಿನೋಟವನ್ನು ನಸುವೆ ಹೊರಳಿಸುತ್ತ ಕಾಮನ ಬಾಣಗಳನ್ನು ಹೊಡೆಯಿಸಿಕೊಂಡು, ತಾನೆ ಆ ಬಾಣಗಳಿಗೆ ಒಂದು ಬತ್ತಳಿಕೆಯೆಂಬಂತಾಗಿ ಚಕ್ರವಾಕವು ದುಃಖಿತವಾಯಿತು. ೬. ಧಾರೆಯಾಗಿ ಸುರಿವ ಕಣ್ಣೀರಿನಿಂದ ರೆಕ್ಕೆಗಳೆಲ್ಲ ನೆನೆದು ಹೋದವು; ಪುನಃ ವಿರಹಾಗ್ನಿಯ ತಾಪದಿಂದ ಒಣಗಿದ ಬರಲಾದವು. ಹೀಗೆ ಸೂರ್ಯಾಸ್ತ ಸಮಯದಲ್ಲಿ ಚಕ್ರವಾಕದಂಪತಿಗಳು ಅಗಲಿಕೆಯಿಂದ ಪರಿತಪಿಸಿದುವು. ೭. "ಎಲ್ಲಿ ಪ್ರಿಯಜನರ ಅಗಲಿಕೆಯಾಗದೊ, ಎಲ್ಲಿ ಸೂರ್ಯನಿಗೆ ಅಸ್ತವಿಲ್ಲವೊ, ಎಲ್ಲಿ ಮನ್ಮಥನ ಬಾಣಘಾತವಾಗ ಲಾರದೊ, ಅಂತಹ ಒಂದು ಎಡೆಯಿದ್ದರೆ, ಓ ವಿಧಿಯೆ, ನನ್ನನ್ನು ಅಲ್ಲಿ ಹುಟ್ಟಿಸು" ಎಂದು ಹಲುಬುತ್ತ ವಲ್ಲಭನ ವಿರಹದಿಂದ ಮತಿಗೆಟ್ಟ ಚಕ್ರವಾಕಿಯೊಂದು ತಾವರೆ

ತೆರೆಯ ಸಳೆಮಂಚದೊಳ್ ಬಿ ।
ತ್ತರಿಸಿದ ಗಳಿತಾಬ್ಜದಳದ ನುಣ್ಬಸೆಯೊಳ್ ಬೆ ॥
ಳ್ದೊರೆಯ ತೆರೆಸುತ್ತಿನೊಳ್ ಪ್ರಿಯೆ ।
ಗಿರದೊಳ್ಪನೆ ಬಯಸಿ ಕೋಕನಾಯ್ತು ಸಶೋಕಂ ॥ ೮

ಜಳಜದಳಪೀಠದೊಳ್ ನ ।
ಲ್ಲಳ ನುಣ್ಗಣೆ ಸೋಂಕೆ ಸೋಂಕಿ ಕುಳ್ಳಿರ್ದಳಿನೀ ॥
ಕಳಗೀತರವಮನಾಲಿಪ ।
ವಿಳಾಸಮಂ ನೆನೆದೊನಲ್ದುದೊಂದು ರಥಾಂಗಂ ॥ ೯

ಇದು ಮತ್ಪ್ರಾಣೇಶನನ್ನೊಳ್ ನೆರೆದ ಪುಳಿನಮೀಯಿರ್ದುದಾಕಾಂತೆ ಮೆಲ್ದೊ । ಲ್ಲದ ಮಾರ್ಣಾಳಾರ್ಧಮೀತೋರ್ಪುದು ನಸೆಮುಳಿಸಿಂ ಕಾಡಲೆಂದಾಕೆ ಪೊಕ್ಕಿ ॥ ರ್ದುದಿದಾನೀರೇಜಪ ಣ್ಣೋತ್ಕರಮೆನುತೆಮೊದಲ್ಗೊಂಡುದಂಭೋಜಸದ್ಮಾಂ । ತದೊಳುದ್ಯತ್ಕಂತುಚೇತಂ ತೊಟಲಲವಿರತಂ ಚಕ್ರವಾಕಂ ವರಾಕಂ ॥ ೧೦

ಅಗಳ್

ಇನನಸ್ಮತ್ಪ್ರಿಯನಾತನೊಳ್ ತವದ ಪೆರ್ಚಂ ನಿಚ್ಚಲುಂ ಗೈವ ಕೋ ।
ಕನಿಕಾಯಕ್ಕಿನಿತಾಯ್ತು ಶೋಕಮವನಸ್ತಪ್ರಾಪ್ತಿಯಂ ಸಾರ್ವುದುಂ ॥
ಇನಿತಾಯ್ತುತ್ಸವಮುತ್ಪಲಕ್ಕೆನುತವಂ ನೋಡಲ್ಕೆ ತಾನಾರದ ।
ಬ್ಜಿನಿ ಕಣ್ಮುಚ್ಚುವ ಮಾಟಕ್ಕಿಯಿಂ ಮುಗಿದುದೆತ್ತಂ ಪದ್ಮಪತ್ರೋತ್ಕರಂ ॥ ೧೧

ಯೆಲೆಯ ಮೇಲೆ ನಿಶ್ಚೇಷ್ಟವಾಗಿ ಒರಗಿತು. ೮. ತೆರೆಯ ಸೆಳೆಮಂಚ, ಕೆಳಗುದುರಿದ ಹರವಾದ ತಾವರೆಯೆಸಳಿನ ನುಣ್ಣನೆಯ ಹಾಸು, ಬೆಳ್ನೊರೆಯ ತೆರೆಸುತ್ತು– ಇವುಗಳನ್ನೊಡಗೊಂಡು ಪ್ರಿಯೆಯೊಡನೆ ರಮಿಸುವ ಸುಖಕ್ಕೆ ಹಂಬಲಿಸಿ, ಚಕ್ರವಾಕವು ಶೋಕಿಸಿತು. ೯. ತಾವರೆಯೆಸಳ ಪೀಠದಲ್ಲಿ ನಲ್ಲೆಯ ನುಣುಪಾದ ಗರಿಗಳನ್ನು ಸೋಕುವಂತೆ ಹತ್ತಿ ಕುಳಿತುಕೊಂಡು ಹೆಣ್ದುಂಬಿಗಳ ಮಧುರವಾದ ಗೀತವನ್ನು ಕೇಳುವ ಸುಖವನ್ನು ನೆನೆದು ನೆನೆದು ಚಕ್ರವಾಕವೊಂದು ಕೊರಗಿತು. ೧೦. "ನನ್ನ ಪ್ರಾಣವಲ್ಲಭೆಯೊಡನೆ ನೆರೆದ ಮರಳದಂಡೆ; ಆ ಕಾಂತೆ ಸವಿದು ಸಾಕೆಂದು ಬಿಟ್ಟ ತಾವರೆನಾಳದ ಅರ್ಧ ತುಂಡು ಇದು; ನನ್ನನ್ನು ಕಾಡಲೆಂದು ಹುಸಿ ಕೋಪದಿಂದ ಅವಳು ಹೊಕ್ಕಡಗಿದ ತಾವರೆಯೆಸಳುಗಳ ಹೊದರು ಇದು" ಎಂದು ಒಂದೊಂದನ್ನೆ ನೋಡಿ ನೆನೆಯುತ್ತ ದುರ್ದೈವಿಯಾದೊಂದು ಚಕ್ರವಾಕವು ಮದನಬಾಧೆಯಿಂದ ತೊಳಲುತ್ತಿತ್ತು. ಆಗ– ೧೧. "ಸೂರ್ಯನು ನಮ್ಮ ವಲ್ಲಭ; ಆತನು ಅಸ್ತಂಗತನಾದೊಡನೆ ಆತನಲ್ಲಿ ತೀರಿದ ಗೌರವವನ್ನು ಪ್ರತಿನಿತ್ಯ ತೋರುತ್ತಿರುವ ಚಕ್ರವಾಕಗಳಿಗೆ ಇಷ್ಟೊಂದು ಶೋಕವೊದಗಿತು ಆದರೆ ಅದೇ ಉತ್ಪಲಗಳಿಗೆ ಇಷ್ಟೊಂದು ಸಂತೋಷವಾಯಿತು" ಎಂದು ಅವುಗಳನ್ನು ನೋಡಲಾರದೆ ಕಮಲಿನಿಯು ಕಣ್ಮುಚ್ಚಿದಳೊ ಏನೊ ಎಂಬಂತೆ ಎತ್ತೆತ್ತಲೂ ಕೆಂದಾವರೆ

ಅಸಮಸಮವೃತ್ತಿಯಂ ಭಾ ।
ವಿಸುವಂದಲ್ಪತೆಯೆ ನಡೆ ಲೇಸೆಂಬವೊಲು ॥
ಲ್ಲಸಿತೋತ್ಪಲಂಗಳೊಳ್ ಮುಗಿ ।
ದು ಸರೋಜಂ ನೆನೆಯಿಸಿತ್ತು ಚತುರಕ್ರಮಮಂ ॥ ೧೨

ಪೊರೆಯದು ಜಾಡ್ಯದೊಳೆನಸುಂ ।
ಪಿರಿದು ಗುಣಂ ಸಿರಿಯುಮುಂಟು ತನಗೆನಿಪಾತಾ ॥
ವರೆಗಮರೆಯಾಯ್ತು ನಲವೆನೆ ।
ಧರೆಯೊಳ್ ಕಾಲಮನದಾರೊ ಕಳೆಯಲ್ ಬಲ್ಲರ್ ॥ ೧೩

ಪಿರಿದುಂ ಬಿದಿ ನಿಜಜನ್ಮಾ ।
ಕರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ ॥
ದೊರೆಕೊಳಿಸಿದನೆನೆ ಮತ್ತಿತ ।
ರರೊಳಾದಂ ಮಾಟ್ಪ ಕೃಪೆ ಖಪುಷ್ಪಮದಲ್ತೇ ॥ ೧೪

ಇನನಸ್ತಂಗತನಾಗೆಯುತ್ಪಲಿನಿ ಪೇೞ್ಗುಂ ಲಕ್ಷ್ಮಿಯುಂಟೆಂಬುದ ।
ಕೆನಗಂ ತಪ್ಪದು ರಾಜಬಾಧೆ ಬೞಿಯಂ ಲೇಸಲ್ತು ತಾನೆನ್ನ ಜೀ ॥
ವನಮೆಂಬುಬ್ಬೆಗದಿಂದೆ ನಂಜುರುಳಿಯಂ ಪೋ ನುಂಗಿಗಳ್ ಪೇೞಿದ ।
ಬ್ಜಿನಿಯೆಂಬಂತೆವೊಲಾಯ್ತು ಕುಟ್ಮಳಿತಕಂಜಾತೋದರೇಂದಿಂದಿರಂ ॥ ೧೫

ಗಳು ದಳಗಳನ್ನು ಜೋಡಿಸಿ ಮುಚ್ಚಿಕೊಂಡುವು. ೧೨. ಅಸಮಾನರೊಡನೆ ವರ್ತಿಸುವಾಗ ಅಲ್ಪನಾಗಿರುವುದೆ ಲೇಸೆಂಬಂತೆ ಅರಳಿದ ಬಿಳಿನೈದಿಲೆಗಳ ನಡುವೆ ಮುಚ್ಚಿಕೊಂಡ ಕೆಂದಾವರೆ ಚತುರ ನಡತೆಯನ್ನು ಸ್ಮರಣೆಗೆ ತಂದಿತು. ೧೩. "ನನ್ನ ಹಿರಿಯ ಗುಣಕ್ಕೆ ಎಂದೂ ಕುಂದಿಲ್ಲ; ನನ್ನಲ್ಲಿ ಸಿರಿಯೂ ಉಂಟು ಎಂದು ಕೊಂಬ ಆ ತಾವರೆಗೇ ಸಂತೋಷ ಕುಗ್ಗಿ ಹೋಯಿತು, ಎಂದ ಮೇಲೆ ಈ ಭೂಮಿಯಲ್ಲಿ ಕಾಲವನ್ನು ಮೀರುವವರು ಯಾರು? ೧೪. ತನ್ನ ಜನ್ಮಸ್ಥಾನವಾದ ತಾವರೆಯ ಬಳಗಕ್ಕೇ, ಬ್ರಹ್ಮನು ಈ ರೀತಿಯಾಗಿ ದುಃಖವನ್ನುಂಟು ಮಾಡಿದ ನೆಂದ ಮೇಲೆ ಇನ್ನು ಹೆರವರಿಗೆ ಅವನು ಕರುಣೆದೋರುವನೆಂಬುದು ಆಕಾಶಕುಸುಮವೇ (ಅಸಾಧ್ಯವೇ) ಅಲ್ಲವೇ? ೧೫. "ನನ್ನ ಪ್ರಿಯಕರನಾದ ಸೂರ್ಯನು ಮುಳುಗಲಾಗಿ, ನನ್ನಲ್ಲಿ "ಲಕ್ಷ್ಮಿ" (೧ ಲಕ್ಷ್ಮೀದೇವತೆ. ೨. ಧನಸಂಪತ್ತು) ಯುಂಟೆಂದು ಉತ್ಪಲಿನಿ ಚಾಡಿ ಹೇಳುವಳು ಆಮೇಲೆ ನನಗೆ "ರಾಜಬಾಧೆ" (೧. ಚಂದ್ರನಿಂದ ಪೀಡೆ. ೨. ರಾಜನಿಂದ ಧನದ ವಸೂಲಿಗಾಗಿ ಹಿಂಸೆ) ತಪ್ಪಲಾರದು, ಇನ್ನು ಮೇಲೆ ನಾನು ಬದುಕಿರುವುದು ಲೇಸಲ್ಲ." ಎಂದು ಕಮಲಿನಿಯು ವಿಷದ ಗುಳಿಗೆಯನ್ನು ನುಂಗಿಬಿಟ್ಟಳೋ ಏನೊ ಎಂಬಂತೆ ಮುಚ್ಚಿಕೊಳ್ಳುತ್ತಿರುವ

ಮಳಿನಾತ್ಮನಾಶೆಯಿಂದಿಂ ।
ತೆಳಸಿದಪಂ ಜಾರನಂಧಕಾರಮೆನುತ್ತಾ ॥
ಗಳೆ ಸಂಧ್ಯೆಯಿನನ ಬಟೆಯನೆ ।
ತಳರ್ದನುರಕ್ತತೆಗೆ ಮಾಡಿದಳ್ ಸಫಲತೆಯಂ ॥ ೧೬

ಆ ಸಮಯದೊಳ್

ಭೋರೆಂದಸ್ತಾಚಲದಿಂ ।
ವಾರಿಧಿಗಿಟಿದಾಟ್ವ ರವಿರಥಪ್ರಧ್ವಾನ ॥
ಕ್ಕೋರನ್ನಮಾಗಿ ಘಟಿಕಾ ।
ಭೇರೀಭೂರಿಪ್ರಣಾದಮೊಗೆದತ್ತಾದಂ ॥ ೧೭

ಅನಿತುಗ್ರಂ ತನ್ನ ತೇಜಂ ಮಸುಟ್ದಿಧಮತಮಂ ತತ್ತಮಂ ಪತ್ತೆ ಬೆನ್ನಂ ।
ದಿನನಾಥಂ ಚೀಃ ಪ್ರತೀಚೀಶರಧಿಗಿಟಿದನಾವೊಂ ವಿಘಾತವ್ಯಪೇತಂ ॥
ಜಿನನಾಥಂ ತಪ್ಪೆ ದೇವಂ ಸಲೆ ಪೆಜಿನೆನುತುಂ ಡಂಗುರಂಬೊಯ್ಯುತಿರ್ದಂ ।
ತೆನಸುಂ ಚೆಲ್ವಾಯ್ತು ಸಂಧ್ಯಾಪ್ರಭವದಭವಗೇಹಾನಕಧ್ವಾನಮೆತ್ತಂ ॥ ೧೮

ಆಗಳ್

ಇದು ತಿಮಿರಾಪಹಾಂಜನಮುಲೂಕಕುಲಕ್ಕಿದು ಪುಂಶ್ಚಲೀರತ ।
ಕ್ಕುದಿತತಮಾಲಮಂಡಪಮಿದುತ್ಪಲಲಕ್ಷ್ಮಿಯ ಮಂಡನಕ್ಕೆ ಸು ॥
ತ್ತಿದ ನವನೀಲಕಾಂಡ ಪಟಮಿಂತಿದು ಚಕ್ರಯುಗಕ್ಕಗಲ್ಚಲಿ ।
ಕ್ಕಿದ ಕಿಸುರ್ವಕ್ಕೆಕರ್ವೊಗೆಯೆನಿಪ್ಪಿನಮಾಯ್ತು ಮಹತ್ತಮಂ ತಮಂ ॥ ೧೯

ತಾವರೆಗಳ ಉದರದಲ್ಲಿ ದುಂಬಿಗಳು ಕಂಗೊಳಿಸಿದುವು. ೧೬. "ಪಾಪಾತ್ಮನಾದ ಅಂಧಕಾರವೆಂಬ ಹಾದರಿಗನು ಆಸೆಯಿಂದ ಬರುತ್ತಿರುವನು" ಎನ್ನುತ್ತ ಸಂಧ್ಯಾ ರಮಣಿಯು ತನ್ನ ವಲ್ಲಭನಾದ ಸೂರ್ಯನ ಬಳಿಗೇ ಹೊರಟು ಹೋಗಿ ಅನುರಾಗವನ್ನು ಸಾರ್ಥಕಗೊಳಿಸಿದಳು. ಆ ಸಮಯದಲ್ಲಿ– ೧೭. ಅಸ್ತಾದ್ರಿಯಿಂದ ಸಮುದ್ರಕ್ಕೆ ಧೊಪ್ಪೆಂದು ಬೀಳುವ ಸೂರ್ಯರಥದ ಮಹಾಧ್ವನಿಗೆ ಸರಿಸಾಟಿಯಾಗಿ ಸಾಯಂಕಾಲದ ಗಳಿಗೆಯನ್ನು ತಿಳಿಸುವ ಭೇರಿಯ ಘನಧ್ವನಿ ಹೊಮ್ಮಿತು. ೧೮. ಅಷ್ಟೊಂದು ಪ್ರಚಂಡವಾದ ತನ್ನ ತೇಜಸ್ಸು ಮಸುಳಿಸಿ ಹೋಗಿ, ತೀರ ಕೀಳೆನಿಸಿದ ಕತ್ತಲೆ ತನ್ನನ್ನು ಬೆನ್ನಟ್ಟಲಾಗಿ "ಹಗಲೊಡೆಯ" ನೆನಿಸಿದ್ದವನು ಪಶ್ಚಿಮ ಸಮುದ್ರ ದಲ್ಲಿ ಮುಳುಗಿ ಹೋದನು. ಛೀ! ಇದೇನು ವಿಧಿ! ಆ ಜಿನನಾಥ ದೇವನನ್ನು ಬಿಟ್ಟು ವಿಧಿಯನ್ನು ತಪ್ಪಿಸಬಲ್ಲವರು ಇನ್ನಾರು? ಎಂದು ಡಂಗುರ ಹೊಡೆಯಿಸುತ್ತಿರುವರೊ ಏನೊ ಎಂಬಂತೆ ಜಿನಾಲಯದಲ್ಲಿ ಸಾಯಂಕಾಲದ ಮಂಗಳವಾದ್ಯಗಳ ಧ್ವನಿ ಹೊಮ್ಮಿತು. ೧೯. ಇದು ಗೂಗೆಗಳ ಕಣ್ಣಿಗೆ ಅಂಧಕಾರ ನಿವಾರಕವಾದ ಅಂಜನ; ಇದು ಜಾರೆಯರ ಸುರತಕ್ಕಾಗಿ ನಿರ್ಮಿಸಿದ ತಮಾಲ ಮಂಡಪ; ಇದು ಉತ್ಪಲಲಕ್ಷ್ಮಿಯ ಅಲಂಕಾರಕ್ಕಾಗಿ ಸುತ್ತಲೂ ಕಟ್ಟಿದ ಕರಿಯ ಕಾಂಡಪಟ; ಇದು ಚಕ್ರವಾಕ ದಂಪತಿಗಳನ್ನು ಅಗಲಿಸುವುದಕ್ಕಾಗಿ ಹಾಕಿದ

ಇದು ಚೋರರದೃಶ್ಯಾಂಜನ ।
ಮಿದು ವೃದ್ಧಾಂಗನೆಯರೆಸೆವ ಪಲಿತೌಷಧಮಿಂ ॥
ತಿದು ಕಾಮನ ಕಾರಲಗೆನಿ ।
ಸಿದುದಪದೃಕ್ಸಾರಮಂಧಕಾರಮಪಾರಂ ॥ ೨೦

ಸರಳಂ ವಕ್ರಂ ತರಳಂ ।
ಸ್ಥಿರಮುಚ್ಚಂ ನೀಚಮಿಾಕ್ಷಣಕ್ಕೊದವೆ ತಮಂ॥
ಸರಿಯಾದುವಂತೆ ವಿಗತಾಂ ।
ತರವೆನಿಪನ ಮೆಚ್ಚು ಬಲ್ಲರಂ ಮೆಚ್ಚಿಕುಮೇ ॥ ೨೧

ಅನಂತರಂ

ಇರದುದಯಗಿರಿಯ ದರಿಯೊಳ್ ।
ಸುರಕರಿ ಸೆಜ್ಜರಕೆ ಸಾರ್ದು ಸುಯ್ಯಲೊಡಂ ಪು ॥
ಷ್ಕರದಿನೊಗೆದತಿವಿಶದಜಲಶೀ ।
ಕರಮೆನಿಸಿದುದಯಿಪಮಳತಾರಕನಿಕರಂ ॥ ೨೨

ಗಗನಂ ಮಿತ್ರವಿಯೋಗದಿ ।
ನೊಗೆವಂತಶ್ಶೂನ್ಯಭಾವದಿಂದಟಿ ಮೆಯ್ಯೊಳ್ ॥
ಮಿಗೆ ಪನಿತ ಕಣ್ಬನಿಯಿದೆನೆ ।
ಸೊಗಯಿಸಿದುವು ತರದಿನೊಗೆದು ತಾರಗೆ ಪಲವುಂ ॥ ೨೩

ಕಪ್ಪು ಹೊಗೆ ಎನಿಸುವಂತೆ ಅದ್ಭುತವಾದ ಕತ್ತಲೆ ಕವಿಯಿತು. ೨೦. ಇದು ಕಳ್ಳರು ಬಳಸುವ ಅದೃಶ್ಯಾಂಜನವೊ, ಮುದುಕೆಯರು ತಮ್ಮ ನರೆದಲೆಗೆ ಲೇಪಿಸಿಕೊಳ್ಳುವ ಕಪ್ಪೊ, ಮನ್ಮಥನ ಕೈಯಲ್ಲಿರುವ ಹರಿತವಾದ ಖಡ್ಗಧಾರೆಯೊ ಎಂಬಂತೆ ಕಣ್ಣುಗಳ ಶಕ್ತಿಯನ್ನೆ ಕಳೆದು ಹಾಕಿದ ಅಪಾರವಾದ ಕತ್ತಲೆ ಕವಿಯಿತು. ೨೧. ನೇರ ಯಾವುದು, ಕೊಂಕಾವುದು, ಚಂಚಲವಾವುದು, ಸ್ಥಿರ ಯಾವುದು, ದಿನ್ನೆ ಯಾವುದು ತಗ್ಗಾವುದು–ಎಂಬುದೇನೂ ತಿಳಿಯದೆ ಎಲ್ಲವೂ ಕತ್ತಲೆಯಲ್ಲಿ ಒಂದೇ ಸಮನಾದುವು. ಯಾವುದರಲ್ಲಿಯೂ ಅಂತರವನ್ನೆ ಕಾಣದವನ ಮೆಚ್ಚು ಬಲ್ಲವರಿಗೆ ಒಪ್ಪಿಗೆಯಾದೀತೆ ? ಆ ಬಳಿಕ– ೨೨. ಉದಯಪರ್ವತದ ಕೊಳ್ಳದಲ್ಲಿ ಐರಾವತವು ತನ್ನ ಕ್ರೀಡಾಸ್ಥಾನಕ್ಕೆ ಬಂದು ಉಸಿರಿಡಲಾಗಿ, ಅದರ ಸೊಂಡಿಲ ತುದಿಯಿಂದ ಚಿಮ್ಮಿದ ಹಸನಾದ ಸೀರ್ಪನಿಗಳೊ ಏನೊ ಎಂಬಂತೆ ಬೆಳ್ಳನೆಯ ನಕ್ಷತ್ರಗಳು ತಲೆದೋರಿದುವು. ೨೩. ತನ್ನ ಮಿತ್ರನಾದ ಸೂರ್ಯನ ಅಗಲಿಕೆಯಿಂದ ಶೂನ್ಯಮನಸ್ಕವಾಗಿ ಆಕಾಶವು ಕಣ್ಣೀರಿಡಲು, ಅದರ ಮೈಮೇಲೆ ಅಲ್ಲಲ್ಲಿ ನಿಂತ ಕಂಬನಿಗಳೊ ಏನೊ ಎಂಬಂತೆ ಹಲವು ತಾರಕೆಗಳು ಒಪ್ಪಿದುವು.

ಜವದಿಂ ಪೋದಿನನ ವರೂ ।
ಥವಾಜಿಗಳ ಮೊಗದೊಳೊಗೆದ ಫೇನಂಗಳ್ ವಾ ॥
ಯುವಶದೆ ಪಱಿವಱಿಯಾಗಿ ।
ರ್ದುವು ಗಗನಾಂಗಣದೊಳೆನಿಸಿದುವು ಭಗಣಂಗಳ್ ॥ ೨೪

ತತ್ಸಮಯದೊಳ್ ನಿರ್ವರ್ತಿತಾಪರಾಹ್ಣಿಕಕ್ರಿಯನಾಗಿ ಬಂದು ಕರುಮಾಡದ ಮುಂದಣ ಮಣಿಮಯಪ್ರಘಣದೊಳ್ ಕತಿಪಯಪ್ರಸಾದಿತಪರಿವಾರಪರಿವೃತಪಾದಪೀಠನುಂ, ಲಲನಾನಿಕಾಯನಿವಳಿತನೀರಾಜನದೀಪಕಳಿಕಾಪ್ರತಿಫಳಿತಮೌಳಿಮಾಣಿಕ್ಯನುಂ, ಅಪರಸಂಧ್ಯಾವಸರಪಠನತತ್ಪರಪುಣ್ಯಪಾಠಕನಿಕರಜಯಜೀಯನಂದವರ್ಧನವರ್ಧಸ್ವನಿನದನಿವೇಶಿತಕರ್ಣವಿವರನುಮಾಗಿ,

ಹರಿನೀಲೋಜ್ಜ್ವಲಕುಟ್ಟಿಮಸ್ಥಳಿ ನಭೋಭಾಗಂಬೊಲಿಂಬಾಗೆ ಸು ।
ತ್ತಿರೆ ಚಂಚತ್ಕರದೀಪಿಕಾವಳಿ ಲಸತ್ತಾರಾಳಿಯಂತುತ್ಪಲಾ ॥
ಭರಣಂ ರಾಗದೆ ಲೀಲೆಯೋಲಗದೊಳಿರ್ದಂ ರಾಜರಾಜಂ ಕಳಾ ।
ಧರನಾನಂದಿತಲೋಚನೋತ್ಪಲನಪೂರ್ವಂ ಚಂದ್ರನಿರ್ಪಂದದಿಂ ॥ ೨೫

ಆ ಪ್ರಸ್ತಾವದೊಳ್

ಇದು ಘುಸೃಣಾರುಣಂ ಸುರಹರಿದ್ವನಿತಾನಿಟಿಲಂ ದಿಟಕ್ಕೆ ತಾ ।
ನಿದು ಬರೆದಿರ್ದ ಸಿಂಧುರದ ಕೆಂಪಡರ್ದಿಂದ್ರಕರೀಂದ್ರಕುಂಭಮ ॥

೨೪. ಸೂರ್ಯರಥದ ಕುದುರೆಗಳು ಅತ್ಯಂತ ವೇಗದಿಂದ ಹರಿದೋಡುತ್ತಿರುವಾಗ ಅವುಗಳ ಬಾಯಿಂದ ಹೊಮ್ಮಿದ ನೊರೆ ಗಾಳಿಗೆ ಸಿಲುಕಿ ತುಂಡು ತುಂಡಾಗಿ ಆಕಾಶದಲ್ಲೆಲ್ಲ ಹರಡಿತೊ ಏನೊ ಎಂಬಂತೆ ಆಕಾಶದಲ್ಲಿ ನಕ್ಷತ್ರಗಳು ಕಂಡುವು. ವ॥ ಆ ಸಮಯದಲ್ಲಿ ಸಾಯಂಕಾಲದ ಕ್ರಿಯೆಗಳನ್ನು ತೀರಿಸಿಕೊಂಡು ಬಂದು ತನ್ನ ನೆಲೆಮಾಡದ ಮುಂದಿನ ರತ್ನಮಯವಾದ ಮೊಗಸಾಲೆಯಲ್ಲಿ ಕೆಲವೆ ಆಪ್ತರಾದ ಪರಿವಾರ ಜನರಿಂದ ಕೂಡಿಕೊಂಡು ಅರಸನು ಕುಳಿತನು; ಸ್ತ್ರೀಯರು ನಿವಳಿದೆಗೆದು ನೀರಾಜನ ಮಾಡುವ ದೀಪದ ಕುಡಿಗಳು ಆತನ ಕಿರೀಟದ ಮಾಣಿಕ್ಯ ಮಣಿಗಳಲ್ಲಿ ಪಡಿಮೂಡಿ ಶೋಭಿಸುತ್ತಿರಲಾಗಿ, ಸಂಧ್ಯಾಕಾಲಕ್ಕೆ ಯೋಗ್ಯವಾಗಿ ಪುಣ್ಯಪಾಠಕರ ಸಮೂಹವು ಬಂದು "ಜಯ ಜಯ ಜೀಯ, ನಿನಗೆ ಆನಂದವಾಗಲಿ, ಏಳಿಗೆಯಾಗಲಿ" ಎಂದು ಮುಂತಾಗಿ ಹೇಳುವ ಮಾತುಗಳು ಆತನ ಕಿವಿಯನ್ನು ತುಂಬುತ್ತಿರಲು—೨೫. ಥಳಥಳಿಸುವ ಇಂದ್ರನೀಲದ ನೆಲಗಟ್ಟು ಆಕಾಶದಂತೆ ವಿಸ್ತಾರವಾಗಿಯೂ ಚೆಲುವಾಗಿಯೂ, ತೋರಿ, ದೀಪಗಳ ಬಳಗ ನಕ್ಷತ್ರ ಸಮುದಾಯದಂತೆ ಶೋಭಿಸುತ್ತಿರಲಾಗಿ, ಸಮಸ್ತಕಲಾಪೂರ್ಣನಾದ (ಹುಣ್ಣಿಮೆಯ) ಚಂದ್ರನು ನೈದಿಲೆಗಳಿಗೆ ನಯನಮನೋಹರನಾಗಿರುವಂತೆ, ಸಮಸ್ತ ವಿದ್ಯಾನಿಪುಣನಾದ, ಉತ್ಪಲವನ್ನು ಮುಡಿದ ರಾಜೇಂದ್ರನು ಕಣ್ಣಿಗೆ ಹಬ್ಬವಾಗಿ ಓಲಗಗೊಟ್ಟಿದ್ದನು. ಆ ಸಮಯದಲ್ಲಿ—೨೬. ಇದು ಕುಂಕುಮದಿಂದ ಕೆಂಪಾದ ಪೂರ್ವದಿಗ್ವನಿತೆಯ ಹಣೆಯೊ? ಅಥವಾ ಹಣೆಗೆಲ್ಲ ಬಳಿದ ಸಿಂಧೂರದಿಂದ ಕೆಂಪೇರಿದ ಐರಾವತದ ಕುಂಭಸ್ಥಲವೊ ಇದು?

ಲ್ತಿದು ಜನಿತೇರ್ಷ್ಯೆಯಿಂ ಮುಳಿಯೆ ತಾರಗೆ ಪಾಟಲಮಾದ ಯಾಮಿನೀ ।
ವದನಮೆನಿಪ್ಪಿನಂ ಕ್ರಮದಿನುಣ್ಮಿದುದಿಂದುವ ರಕ್ತಮಂಡಲಂ ॥ ೨೬

ಬಿರಯಿಯ ಮನಮೆಂಬಂಕದೊ ।
ಳರಲಂಬನಡುರ್ತು ಕಾದೆ ಸೂಸಿದ ನೆತ್ತರ್ ॥
ಪೊರೆದೆಳವಳಿಕಿನ ವಿದ್ಯಾ ।
ಧರಗಳವೆನಿಸಿತ್ತು ರಕ್ತಬಿಂಬಂ ಶಶಿಯಾ ॥ ೨೭

ಪುದಿದಿರೆ ಪಣ್ತೆಂದುವ ಬಿಂ ।
ಬದಾಲದಿಂ ಪಣ್ಗಳುದಿರ್ದುವೆನೆ ಸೊಗಯಿಸಿದ ॥
ತ್ತುದಯದೊಳೊದವಿದ ಕೆಂಪಿಂ ।
ಪುದಿದೊಪ್ಪುವ ತಾರಕೋತ್ಕರಂ ಕೆಲಗೆಲದೊಳ್ ॥ ೨೮

ನೆರೆದ ತಿಮಿರಂ ನಿಶಾಕರ ।
ಕರಕುಂತಾಹತಿಗೆ ಬೆರ್ಚಿ ಮೂರ್ಚೆಯ ನೆವದಿಂ ॥
ಪರೆದೋಡಿ ಪೊಕ್ಕು ಸಲೆ ಮೈ ।
ಗರೆದುದು ಬಿರಯಿಸುವ ಜಕ್ಕವಕ್ಕಿಗಳೆರ್ದೆಯೊಳ್ ॥ ೨೯

ನಿನದತ್ಸಂಧ್ಯಾನಕಂ ನಿಗ್ಗವಣೆಯ ಪಱಿ ಪೂರ್ವಾಚಲಂ ತುಂಗರಂಗಂ ।
ತನಗಾದತ್ತೆಂಬಿನಂ ನೀಲಿಯ ಜವನಿಕೆವೋಲ್ ಪಿಂಗೆ ಸಂಧ್ಯಾತಮಂ ಮೆ ॥

ಅಲ್ಲ. ತಾರೆಗಳ ಮೇಲಿನ ಈರ್ಷ್ಯೆಯಿಂದ ಕೋಪಿಸಿಕೊಂಡ ರಾತ್ರಿರಮಣಿಯ ಕೆಮ್ಮೊಗವೋ ಏನೊ ಎಂಬಂತೆ ಚಂದ್ರನ ಕೆಂಪಾದ ಬಿಂಬವು ಕ್ರಮವಾಗಿ ಮೂಡತೊಡಗಿತು. [ತಾರೆಗಳು ಚಂದ್ರನ ಹೆಂಡಿರೆಂದು ಅವನ ಇನ್ನೊಬ್ಬ ಹೆಂಡತಿಯಾದ ರಾತ್ರಿಗೆ ಅವರ ಮೇಲೆ ಈರ್ಷ್ಯೆ.] ೨೭. ವಿರಹಿಯ ಮನವೆಂಬ ರಣರಂಗದಲ್ಲಿ ಮನ್ಮಥನು ಉಗ್ರವಾಗಿ ಕಾದಾಡುತ್ತಿರಲು, ಸೂಸಿದ ನೆತ್ತರು ಮುತ್ತಿಕೊಂಡ, ಸ್ಫಟಿಕದ "ವಿದ್ಯಾಧರಗಳ" (ಚಕ್ರ?) ವೊ ಏನೊ ಎಂಬಂತೆ ಚಂದ್ರನ ಕೆಂಪಾದ ಬಿಂಬ ಶೋಭಿಸಿತು. ೨೮. ಚಂದ್ರಬಿಂಬದಲ್ಲಿರುವ ಆಲದ ಮರದಲ್ಲಿ ತುಂಬಿದ ಹಣ್ಣುಗಳು ಉದಿರಿ ಬಿದ್ದುವೊ ಏನೊ ಎಂಬಂತೆ, ಉದಯಚಂದ್ರನ ಕೆಂಪಿನಿಂದ ಆವೃತವಾದ ನಕ್ಷತ್ರಗಳು ಆತನ ಕೆಲಬಲದಲ್ಲಿ ಕಂಗೊಳಿಸಿದುವು. ೨೯. ಆವರಿಸಿಕೊಂಡಿದ್ದ ಕತ್ತಲೆಯು ಚಂದ್ರನ ಕೊಂತದ ಪ್ರಹಾರಕ್ಕೆ ಬೆದರಿ ಮೂರ್ಛೆಯ ನೆವದಿಂದ ಓಡಿಹೋಗಿ, ವಿರಹದಿಂದ ದುಃಖಿಸುವ ಚಕ್ರವಾಕಗಳ ಹೃದಯದಲ್ಲಿ ಹೊಕ್ಕು ಅಡಗಿಕೊಂಡಿತು. ೩೦. ನುಡಿಯುತ್ತಿರುವ ಸಾಯಂಕಾಲದ ಭೇರಿಯೆ, ನಾಟ್ಯಾರಂಭದ ವಾದ್ಯರವವಾಗಿ ಮೂಡಣ ಬೆಟ್ಟವೆ ಉನ್ನತವಾದ ರಂಗಸ್ಥಳವಾಗಿ, ನೀಲಿಯ ತೆರೆಯಂತೆ ಸಾಯಂಕಾಲದ ಕತ್ತಲೆ

ಲ್ಲನೆ ತಾರಾನೀಕಪುಷ್ಪಾಂಜಳಿಯನೆಸೆವಿನಂ ಸೂಸಿ ತತ್ಪೂರ್ವ ರಂಗ।
ಕ್ಕನುಗೈವುದ್ಯನ್ನಿಶಾನರ್ತಕಿಯ ವದನದಂತಿಂದು ಕಣ್ಗೆಡ್ಡಮಾದಂ॥ ೩೦

ತಿಮಿರಾಧಮವರ್ಣಸ್ಪ।
ರ್ಶಮಾ ಪ್ರದೋಷದೊಳೊಡರ್ಚೆ ರಜನೀಸತಿ ಚಂ॥
ದ್ರಮಯೂಖಮಹಾಹ್ರದದೊಳ।
ಗೆ ಮುಲುಂಕಿದಳಾದವಂಬರಂಬೆರಸಾಗಳ್॥ ೩೧

ಪರೆದಿರೆ ತಿಮಿರಕಚಂ ನೆರೆ।
ದಿರೆ ಭಗಣಸ್ವೇದಜಲಕಣೌಘಂ ರಾಗಂ॥
ಬೊರೆದಿರೆ ಚಕೋರನಯನಂ।
ಕರಮೆಸದಳ್ ನೆರೆದು ರಜನಿ ರಜನೀಪತಿಯೊಳ್॥ ೩೨

ನೆರೆದೆತ್ತಂ ಭಗಣಂ ನಿರೀಕ್ಷಿಸೆ ಬೆಸಂಬೆತ್ತೇಱೆ ಚಿತ್ತೋದ್ಭವಂ।
ಬರೆ ಲಕ್ಷ್ಮಚ್ಛಲದಿಂದಮಬ್ದಪಥವೀಥೀಭಾಗದೊಳ್ ಬೇಗಮೊ॥
ತ್ತರಿಸುತ್ತುಂ ಪರಿಕಾಱನಂ ತಿಮಿರಮಂ ಬೆನ್ನಟ್ಟಿ ಪಾದಂಗಳಿಂ।
ದೊರಸಿತ್ತೇನತಿಚೋದ್ಯಮೋ ವಿಧುಮದೋನ್ಮತ್ತೇಭವಿಕ್ರೀಡಿತಂ॥ ೩೩

ರಜನೀಕಾಂತಾಪಯೋಭೃತ್ತಟಮಲಯಜಪತ್ರಂ ಮನೋಜಾಂಗನಾಶು
ಕ್ತಿಜಚಂಚತ್ಕರ್ಣಪತ್ರಂ ಸ್ಮರನೃಪವರಶುಭ್ರಾತಪತ್ರಂ ವಿಯನ್ನೀ॥

ಸರಿದು ಹೋಗಲಾಗಿ, ನಕ್ಷತ್ರಾವಳಿಗಳೆಂಬ ಪುಷ್ಪಾಂಜಲಿಯನ್ನು ಸೂಸಿ, ಪೂರ್ವರಂಗಕ್ಕೆ ಅಣಿಯಾದ ನಿಶಾನರ್ತಕಿಯ ಮುಖಬಿಂಬದಂತೆ ಚಂದ್ರನು ನಯನಾನಂದಕರನಾದನು. ೩೧. ಕತ್ತಲೆಯೆಂಬ ಶೂದ್ರನು ಮುಟ್ಟಿ ಪ್ರದೋಷ ಕಾಲದಲ್ಲಿ ಮೈಲಿಗೆಯಾದುದರಿಂದ ರಾತ್ರಿರಮಣಿ (ಆ ಮೈಲಿಗೆಯನ್ನು ಕಳೆಯಲು) ತನ್ನ ಬಟ್ಟೆಯಾದ ಆಕಾಶ ಸಹಿತವಾಗಿ ಬೆಳ್ದಿಂಗಳೆಂಬ ಮಹಾಸರೋವರದಲ್ಲಿ ಮುಳುಗಿದಳು. ೩೨. ಕತ್ತಲೆಯೆಂಬ ಕೂದಲು ಕೆದರಿರಲಾಗಿ, ನಕ್ಷತ್ರಗಳೆಂಬ ಬೆವರಹನಿಗಳು ಮೂಡಿ ನಿಂತಿರಲಾಗಿ, ಚಕೋರವೆಂಬ ಕಣ್ಣುಗಳು ಕೆಂಪೇರಿರಲಾಗಿ ರಾತ್ರಿರಮಣಿಯು ತನ್ನ ರಮಣನಾದ ಚಂದ್ರನೊಡನೆ ಕೂಟವನ್ನು ಹೊಂದಿ ತುಂಬ ಶೋಭಿಸಿದಳು. ೩೩. ನಕ್ಷತ್ರಗಳು ನೆರೆದು ನೋಡುತ್ತಿರಲಾಗಿ (ಚಂದ್ರಬಿಂಬ ದೊಳಗಿನ) ಕಪ್ಪು ಕಲೆಯೆಂಬ ರೂಪದಲ್ಲಿ ಮನ್ಮಥನು ಮೇಲೇರಿ ಕುಳಿತು ಆಕಾಶ ಮಾರ್ಗದಲ್ಲಿ ರಭಸದಿಂದ ಓಡಿಸುತ್ತ ಬರಲು, ಚಂದ್ರನೆಂಬ ಮದಗಜವು ಕತ್ತಲೆಯನ್ನು ಬೆನ್ನಟ್ಟಿ ತನ್ನ ಕಾಲುಗಳಿಂದ ಒರಸಿಹಾಕಿತು. ಈ ಮದ್ದಾನೆಯ ಕ್ರೀಡೆ ಅದೆಂತಹ ವಿಸ್ಮಯಕರವಾದುದು! ೩೪. ರಾತ್ರಿರಮಣಿಯ ಮೊಲೆಗೆಲದಲ್ಲಿ ಬರೆದ ಶ್ರೀಗಂಧದ ಚಿತ್ರಲೇಪವೊ, ರತಿದೇವಿಯ ಕಿವಿಯಲ್ಲಿ ಶೋಭಿಸುವ ಮುತ್ತಿನ

ರಜನಿ ಮಧ್ಯೋಲ್ಲಸತ್ಪಾಂಡುರತರಶತಪತ್ರಂ ಬೆಡಂಗಾಯ್ತುಯುಕ್ತ।
ವ್ರಜಗರ್ವೋರ್ವೀಧ್ರಶಂಬಂ ನಯನಸುಖಲತಾಸ್ತಂಬಮಾತ್ರೇಯಬಿಂಬಂ ॥ ೩೪

ಕುಮುದವಿಲಾಸಹಾಸಪರಿಹಾಸಕನಬ್ಧಿಜಲಪ್ರವರ್ಧನೋ।
ದ್ಯಮಿ ನಳಿನೀಪ್ರಮೋದಪರಿಹಾರವಿಶಾರದನುತ್ಕಕೋಕದು ॥
ರ್ದಮವಿರಹಕ್ರಿಯಾವ್ಯಸನಿ ಚಾರುಚಕೋರವಿದೂರಪಾರಣ।
ಕ್ಷಮನವವಲ್ಲಭಂ ಬೆಳಗಿದಂ ಪುರಮೊಂದೆನೆ ಲೋಕಮೆಲ್ಲಮಂ ॥ ೩೫

ಅತನುಗ್ರಹಚಂದ್ರಶಿಲಾ।
ಪ್ರತಿನಿಧಿಯೆನಿಸಿರ್ದ ಚಂದ್ರಮಂಡಲದೊಳ್ ಶೋ ॥
ಭಿತಮಾಯ್ತು ತೋರ್ಪ ತಾರಾ।
ಪಥದೊಪ್ಪಮನಪ್ಪುಕೆಯ್ದು ತೊಳಪ ಕಳಂಕಂ ॥ ೩೬

ವಾಸಿಸಲೆಂದು ಚಕೋರವಿ।
ಲಾಸಿನಿ ಶಶಿಚಷಕದೊಳೆ ನವೋತ್ಪಳದಳಮಂ ॥
ಸೂಸಿದಳೊ ವಿನಿಹಿತಜ್ಯೋ।
ತ್ಸ್ನಾಸವದೊಳೆನಿಪ್ಪ ಲಕ್ಷ್ಮಿವೆತ್ತುದು ಲಕ್ಷ್ಮಂ ॥ ೩೭

ಆಭರಣವೊ, ಮನ್ಮಥರಾಜೇಂದ್ರನ ಬೆಳ್ಗೊಡೆಯೊ, ಆಕಾಶವೆಂಬ ಕಮಲಿನಿಯ ಮಧ್ಯದಲ್ಲಿ ಶೋಭಿಸುತ್ತಿರುವ ಅತ್ಯಂತ ಧವಳವಾದ ತಾವರೆ ಹೂವೊ, ವಿರಹಿಸಮೂಹದ ಗರ್ವಪರ್ವತವನ್ನು ಹುಡಿಗುಟ್ಟುವ ವಜ್ರಾಯುಧವೊ ಎಂಬಂತೆ ಚಂದ್ರಬಿಂಬವು ಕಣ್ಣಿಗೆ ಸುಖಪ್ರದವಾಗಿ ಕಂಗೊಳಿಸಿತು. ೩೫. ನೈದಿಲೆಗಳ ನಗೆಯ ವಿಲಾಸವನ್ನುಂಟುಮಾಡುವ ಪರಿಹಾಸಕನೂ, ಸಾಗರದ ಜಲವನ್ನು ಉಕ್ಕೇರಿಸುವವನೂ, ಕೆಂದಾವರೆಗಳ ಸಂತೋಷವನ್ನು ಪರಿಹರಿಸುವುದರಲ್ಲಿ ನಿಷ್ಣಾತನೂ, ಉತ್ಕಂಠವಾದ ಚಕ್ರವಾಕಗಳಿಗೆ ದುಃಸಹವಾದ ವಿರಹವನ್ನುಂಟು ಮಾಡುವವನೂ, ಚಕೋರ ಪಕ್ಷಿಗಳಿಗೆ ಪಾರಣೆಯೊದಗಿಸುವುದಕ್ಕೆ ಸಮರ್ಥನೂ ಆದ ಚಂದ್ರನೆಂಬ ಹೊಸರಾಜನು ಸಮಸ್ತ ಲೋಕವನ್ನು ಒಂದು ಊರೆಂಬಂತೆ ಬೆಳಗಿದನು. ೩೬. ಮನ್ಮಥಗ್ರಹಕ್ಕೆ ಪ್ರತಿನಿಧಿಯಾಗಿ ಚಂದ್ರಕಾಂತಶಿಲೆಯ ಮೂರ್ತಿಯೆನಿಸಿದ ಚಂದ್ರಮಂಡಲದ ಮಧ್ಯದಲ್ಲಿ ಆಕಾಶದ ಚೆಲುವನ್ನು ಹೊಂದಿ ಹೊಳೆಯುವ ಕಪ್ಪು ಕಲೆ ಶೋಭಿಸಿತು. ೩೭. ಚಕೋರವೆಂಬ ವಿಲಾಸಿನಿಯು ಬೆಳ್ದಿಂಗಳೆಂಬ ಮದಿರಾರಸವನ್ನು ತುಂಬಿದ ಚಂದ್ರನೆಂಬ ಪಾನಪಾತ್ರೆಯಲ್ಲಿ ಪರಿಮಳಕ್ಕಾಗಿ ಸೇರಿಸಿದ ಕನ್ನೈದಿಲೆಯ ಎಸಳೊ ಏನೊ ಎಂಬಂತೆ ಚಂದ್ರಬಿಂಬದ

ಜನನಯನಹಂಸವಿಸರ।
ಕ್ಕೆ ನಿಶಾವಧು ಸಾಂದ್ರಚಂದ್ರಿಕಾದುಗ್ಧಮನಿಂ॥
ಬಿನೊಳೆಱೆವ ಗಗನಘಟದಾ।
ನನವಿವರದ ದೊರೆಗೆ ವಂದುದಿಂದುವಬಿಂಬಂ॥ ೩೮

ಪಾರದದಿಂದೆ ಲೇಪಿಸಿದುದೋ ದೆಸೆ ನೀರದಮಾರ್ಗಮೆಯ್ದೆ ಕ।
ರ್ಪೂರಪರಾಗದಿಂದಿಡಿಯೆ ತುಂಬಿದುದೋ ಸ್ಫಟಿಕೋಪಲಂಗಳಿಂ॥
ಧಾರಿಣಿ ಕೂಡೆ ಹಪ್ಪಳಿಗೆಯೊತ್ತಿದುದೋ ಸಲಿಲಾಶಯಂ ಪಯಃ।
ಪೂರಮನಾಂತುದೋ ದಿಟಕೆ ತಾನೆನಿಸಿತ್ತಮೃತಾಂಶುರಶ್ಮಿಯಿಂ॥ ೩೯

ಇದು ವಿರಹಕ್ಕಲ್ಲದೆ ಕಾ।
ಯದ ಬಿಸಿಲಿದು ದಿಟ್ಟಿಗಲ್ಲದೀಂಟಲ್ಕಂ ಬಾ॥
ರದ ಸೊದೆಯಿದು ತಾಂ ಮನಕ।
ಲ್ಲದುಡಲ್ ಸಮನಿಸದ ದುಗುಲಮೆಳವೆಳ್ದಿಂಗಳ್॥ ೪೦

ದ್ಯುನದೀಸಮ್ಮೋಹದಿಂದಂ ಜಡೆಗೆದಱಿಲುಮಾವಲ್ಲಭಂ ನಾಡೆಯುಂ ಸಾ।
ರ್ವಿನೆಗಂ ಪೀಯೂಷವಾರ್ಧಿಪ್ಲವಪರಿಣತೆಯಿಂ ಸಜ್ಜಗಬ್ಜೋದರಂ ಪಾ॥
ರ್ವಿನೆಗಂ ಹಂಸಂ ಮೆಲಲ್ಕೆಂದೆಳಸಿ ಬಿಸಲತಾಶಂಕೆಯಿಂ ಚಂಚುವಿಂ ನೇ।
ರ್ವಿನೆಗಂ ಪ್ರೋನ್ಮುದ್ರಿತಂ ಮುದ್ರಿಸಿದುದು ಜಗಮಂ ಚಾರುಚಂದ್ರಾಂಶುಜಾಲಂ॥ ೪೧

ಕಲಂಕವು ಚೆಲುವಾಗಿ ತೋರಿತು. ೩೮. ಜನರ ಕಣ್ಣುಗಳೆಂಬ ಹಂಸಸಮುದಾಯಕ್ಕೆ ರಾತ್ರಿರಮಣಿಯು ಮಂದವಾದ ಬೆಳ್ದಿಂಗಳ ಹಾಲನ್ನು ಎರೆಯುವ ಆಕಾಶವೆಂಬ ಕಲಶವೊ ಏನೊ ಎಂಬಂತೆ ಚಂದ್ರಬಿಂಬವು ಶೋಭಿಸಿತು. ೩೯. ದಿಕ್ಕುಗಳೆಲ್ಲ ಪಾದರಸದ ಲೇಪನವನ್ನು ಹೊಂದಿದುವೊ, ಆಕಾಶಮಂಡಲವೆಲ್ಲ ಕಪ್ಪುರದ ಹುಡಿಯಿಂದ ತುಂಬಿಕೊಂಡಿತೊ, ಭೂಮಿಯಲ್ಲೆಲ್ಲ ಸ್ಫಟಿಕ ಶಿಲೆಗಳಿಂದ ನೆಲಗಟ್ಟು ಮಾಡಲಾಯಿತೊ, ಜಲಾಶಯಗಳೆಲ್ಲ ಹಾಲಿನಿಂದ ತುಂಬಿದುವೊ ಏನೊ ಎಂಬಂತೆ ಬೆಳ್ದಿಂಗಳು ತೋರಿತು. ೪೦. ಇದು ವಿರಹಿಗಳಿಗೆ ಅಲ್ಲದೆ ಬೇರೆಯವರಿಗೆ ಕಾವಿಲ್ಲದ ಬಿಸಿಲು; ಕಣ್ಣಿಗೆ ಅಂದವಾಗಿ ಕಾಣುವುದಷ್ಟೆ, ಕುಡಿಯಲು ಬಾರದು ಹಾಲು ; ಮನಕ್ಕೆ ವಸ್ತ್ರವೆನಿಸಿದರೂ ಉಡಲುಬಾರದ ಬಿಳಿಯ ರೇಷ್ಮೆ ವಸ್ತ್ರ-ಎಂಬಂತೆ ಬೆಳ್ದಿಂಗಳು ಹಬ್ಬಿತು. ೪೧. ತನ್ನ ತಲೆಯಲ್ಲಿ ದೇವಗಂಗೆ ಹೊಮ್ಮಿ ಹೊರಗೂ ಹರಿಯುತ್ತಿರುವಳೆಂದು ಭ್ರಮಿಸಿ ಶಿವನು ತನ್ನ ತಲೆಗೂದಲನ್ನು ಇನ್ನಷ್ಟು ಹರಡಿಕೊಂಡನು; ಕ್ಷೀರಸಮುದ್ರ ಎಷ್ಟೊಂದು ಉಕ್ಕೇರಿ ನನ್ನ ಬಳಿಗೂ ಬಂದಿತಲ್ಲ ಎಂದು ಬ್ರಹ್ಮನು ಮೇಲಕ್ಕೆ ನೆಗೆದನು; ಹೊಸ ತಾವರೆನಾಳ ಹೇರಳವಾಗಿ ದೊರೆಯಿತೆಂದು ಹಂಸಗಳು ಕೊಕ್ಕು ಚಾಚಿ ಕಚ್ಚಲು ಹೊರಟವು-ಹೀಗೆ ಎಲ್ಲರಿಗೂ ಭ್ರಾಂತಿಯಾಗುವಂತೆ ಸೊಗಸಾದ ಬೆಳ್ದಿಂಗಳು ಜಗತ್ತನೆಲ್ಲ

ಅಂ ಬೇಱಿ ಪೊಗೞ್ವುದೇಂ ಬೆ ।
ಳ್ಪಂ ಬೆಳಗುಮನಾಗಸಕ್ಕೆ ನಿಜಮಲಿನತೆಯಂ ॥
ಮುಂ ಬಿಡಿಸಿ ಮತ್ತನಂಗಸು ।
ಮಂ ಬೇಱಿ ಜನಕ್ಕೆ ತೋಱಿದುದು ಬೆಳ್ದಿಂಗಳ್ ॥ ೪೨

ಇದು ದಲ್ ಸ್ವಚ್ಛಂದಮಂದಾಕಿನಿ ಮಹಿತಳಮಂ ಕೂಡೆ ಪರ್ವಿತ್ತು ನೋಡೆಂ ।
ಬುದನೆಂದಲ್ಲಲ್ಲಿಗೆಲ್ಲಂ ಜನಮನಿತುವಲಂಪಿಂ ತುಳುಂಕಾಡಲುಂ ರಾ ॥
ಗದಿನೆತ್ತಂ ನೀಡುಮೋಲಾಡಲುಮೆರ್ದೆಯೊಲವಿಂ ಪೊಕ್ಕು ಮಿಕ್ಕೀಸಲುಂ ಚಿ ।
ತ್ತದ ಮೆಚ್ಚಿಂ ದ್ರೋಣಿಯಿಟ್ಟೇಱಿಲುಮೆಳಸುವಿನಂ ಪರ್ಚಿದತ್ತಚ್ಚಜೊನ್ನಂ ॥ ೪೩

ಕೆಂಪಿಲ್ಲದ ಬಿಸಿಲುಣ್ಮುವ ।
ಕಂಪಿಲ್ಲದ ಸಾಂದ್ರಚಂದನಕ್ಷೋದಂ ಮ ॥
ತ್ತಿಂಪಿಲ್ಲದ ಪಾಲ್ಗಡಲೆಂ ।
ಬೆಂ ಪೊಸಬೆಳ್ದಿಂಗಳಂ ಬಟಿಕ್ಕೇನೆಂಬೆಂ ॥ ೪೪

ಅದಲ್ಲದೆಯುಮಾಕಾಶಗಂಗಾಪ್ರವಾಹಮನಾಧಾರತೆಯಿಂದವನಿಗಲ್ಲೊಕ್ಕಿತೆಂಬಂತೆ ಓರೊಂದೆಡೆಯ ಬಯಲೊಳ್ ಬೆಳ್ಳಂಗೆಡೆದು ಬಳ್ಳಿವರ್ಚಿಯುಂ, ಉಪವನದ ತರುಲತಾನಿಕರದೆಲೆದುಱುಂಗಲೆಡೆಗಳಿಂ ಬಿಳಿಯ ಬಿಟಲಿಂತಿಟಿದಾಳವಾಳವಳಯಂಗಳನಾವಗಂ ತೀವಿ ತೇಂಕಾಡಿಯುಂ, ಚಂದ್ರಕಾಂತದ ನೆಗೆದ ಮುಗಿಲಟ್ಟಣೆಗಳಂ ಮೆಟ್ಟಿ ಬಡಹಮನೊಡರ್ಚಿ ಬಳಸಿದಗಟಿನೊಗುಮಿಗೆ ತಿಂಬಿ ತುಂಬುವರಿಯಿಸಿಯುಂ

ವ್ಯಾಪಿಸಿತು. ೪೨. ನಾನಿನ್ನು ಬೇರೆ ಏನೆಂದು ಹೊಗಳಲಿ ? ಆಕಾಶದ ಕಪ್ಪನ್ನು ತೊಲಗಿಸಿ ಬಿಳುಪನ್ನೂ ಬೆಳಕನ್ನೂ ಕೊಟ್ಟು, ಬೆಳ್ದಿಂಗಳು ಜನಕ್ಕೆ ಮನ್ಮಥನನ್ನು ತೋರಿಕೊಟ್ಟಿತು. ೪೩. ಭೂಮಿಯನ್ನು ಕೂಡಬೇಕೆಂದು ಸೂಸಿ ಬಂದ ಆಕಾಶಗಂಗೆಯೆ ಇದು ಎಂದು ಬಗೆದು ಅಲ್ಲಲ್ಲಿಯ ಜನವೆಲ್ಲ ಸಂತೋಷದಿಂದ ಅದರಲ್ಲಿ ತುಳುಕಾಡಲೂ, ಮುಳುಘುಳುಗಿ ಏಳಲೂ, ಉತ್ಸಾಹದಿಂದ ಈಸಾಡಲೂ, ದೋಣಿಯಿಟ್ಟು ನಡೆಯಿಸಲೂ ಬಯಸುವಂತೆ ಸ್ವಚ್ಛವಾದ ಬೆಳ್ದಿಂಗಳು ಹಬ್ಬಿ ಹರಡಿಕೊಂಡಿತು. ೪೪. ಕೆಂಪಿಲ್ಲದ ಬಿಸಿಲು, ಪರಿಮಳವಿಲ್ಲದ ಗಂಧೋದಕ, ರುಚಿಯಿಲ್ಲದ ಹಾಲಿನ ಕಡಲು ಎಂದು ಹೇಳಬಲ್ಲೆನಲ್ಲದೆ ಬೆಳ್ದಿಂಗಳನ್ನು ಇನ್ನೇನೆಂದು ಬಣ್ಣಿಸಲಿ ? ವ॥ ಅದಲ್ಲದೆ, ಆಕಾಶಗಂಗೆಯ ಪ್ರವಾಹವು ಆಧಾರತಪ್ಪಿ ಭೂಮಿಗೆ ಬಂದು ನುಗ್ಗಿತೆಂಬಂತೆ ಒಂದೊಂದೆಡೆಗೆ ಮಹಾಪೂರವಾಗಿ ಬೆಳುದಿಂಗಳು ಬಳ್ಳಿಯಂತೆ ಮಡಲಿರಿಯಿತು; ಉದ್ಯಾನದ ಗಿಡಬಳ್ಳಿಗಳಲ್ಲಿ ದಟ್ಟವಾದ ಎಲೆಗೊಂಚಲುಗಳ ಸಂದುಗಳಿಂದ ಬೀಳಿಲುಗಳಂತೆ ಇಳಿದು, ಪಾತಿಗಳ ಮಂಡಲಗಳನೆಲ್ಲ ತುಂಬಿ ತುಳುಕಾಡಿಸಿತು; ಚಂದ್ರಕಾಂತದ ಉಪ್ಪರಿಗೆಗಳನ್ನು ಮೆಟ್ಟಿ ಧಾರಾಕಾರದ ಮಳೆಯಂತೆ ನೀರನ್ನೊಸರಿಸಿ ಊರ ಸುತ್ತಣ ಅಗಳ್ತೆಯನ್ನು

ಸಸಿಯ ಬೆಸದಿನಸಿಯೇಱೆಂಗೆ ಬಂದ ಸುಟ್ಟುಂಬೆಸಕಾಱನಂತಸಿದನೆ ಸುಸಿರದಿಂ ಪೊಕ್ಕು ದೇವಕುಲಂಗಳಾದಲೆಯೊಳೊತ್ತುಂಗೊಂಡಿರ್ದ ಕತ್ತಲೆಗೆ ಮಿೞ್ತುವಾಗಿಯುಂ, ಸಂಕೇತಕ್ಕೆ ಪೋಱಮಡಲ್ ಪಡೆಯದೆ ಪೊಱಗಣ ಬೆಳಗಿಂಗೆ ಕಾಯ್ದು ಕಿಸುಗಣ್ಣಿಂ ನೋಡುವ ಜೋಡೆಯರ ಕಡೆಗಣ್ಣ ಕೆಂಬೆಳಗಿಂ ಪುದಿದುದಯದೊಳೊಳಕೆಯ ರಾಗಮಂ ಮಗುಳುಗುಟ್ವ ಪರಿಯನಿನಿತನುಕರಿಸಿಯುಂ, ಸೂಳೆಗೇರಿಯೋವರಿಯ ಬಾದಣದಿನೊಗೆವ ಅಗುರುವಿನ ಕರ್ಬೊಗೆಯ ಸುರ್ಬಿನೊಳ್ ತಳ್ವೊಯ್ದು ವಿಧುವ ಪಗೆಯಪ್ಪ ರಾಹುವಿನೊಳ್ ಕಡುಪಿನಿಂ ತೊಡರ್ದು ಮೆಯ್ವೊಣರ್ದಪ್ಪುದೆಂಬ ನುಡಿಗಡರ್ಪಾಗಿಯುಂ, ಆನಂದದಿಂದ ಮಂದಿರಾಂಗಣದೊಳ್ ಸುೞಿವ ಪುರಪುರಂಧ್ರಿಯರ ಸಂದಣಿಸಿ ಬಳೆದ ಮೊಲೆಯೆಡೆಯಿನಿೞಿದೆಂದುಮಿಲ್ಲದ ಮುತ್ತಿನಾರಮಿಂದೆ ಸಂದುದೆಂಬ ಸಂದೆಗದ ದಂದುಗಮನವರೊಡನಾಡಿಗಳ ಚಿತ್ತದೊಳ್ ಬಿತ್ತಿಯುಂ, ರಾಜಾಂಗಣದ ಬಯಲ ಬಾಳ್ಗಂಬಂಗಳೊಳ್ ಸೆಱೆಗೆಯ್ದಿರ್ದ ಜಾವದಾನೆಗಳ ಮೇಲೆಡೆಗೆಡೆದು ಮೂವಳಸಾಗಿ ಮುಸುಂಕಿ ತದ್ಗಜಂಗಳ್ಗೆ ಪಾಲ್ಗಡಲ ನಡುವಣ್ಣೈರಾವತದ ಲೀಲೆಯ ನೋಲಗಿಸಿಯುಂ, ಶಕುಂತಪಾಳಿಕೆಯರ್ ಪೊಱಗೆ ವಾಸಯುಷ್ಟಿಗಳೊಳ್ ನಿಱಿದ ಪೊನ್ನ ಪಂಜರದ ಪುಗಿಲ್ಗಳಿಂ ಜಾಳಿಸಿ ಪೊಕ್ಕು ದೀಹದ ಚಕೋರಿಗಳಕ್ಕಱಿಂ ಮುಕ್ಕುಳಿಪ ಮುಂಡಾಡುವ ಕರ್ದುಂಕುವೊದೆವ ಚೆಲ್ಲಕೆ ಮೈಸಾರ್ಚಿಯುಂ, ಇಂತನೂನಮುಮತಿಸಾಂದ್ರಮುಮತ್ಯುಜ್ವಲಮುಮಾದ

ಬಡಬಡನೆ ತುಂಬಿ ನೀರು ಸೂಸುವಂತೆ ಮಾಡಿತು; ಚಂದ್ರನ ಅಪ್ಪಣೆಯಿಂದ ಕೂಟ ಯುದ್ಧಕ್ಕೆ ಹೊರಟ ಯೋಧನಂತೆ (ಜಾಲಂದರಗಳ) ರಂಧ್ರದ ಮೂಲಕ ಸೂಕ್ಷ್ಮವಾಗಿ ನುಸುಳಿ ದೇವಾಲಯುಗಳ ಆಚೆಯ ಪ್ರದೇಶದಲ್ಲಿ ಒತ್ತಾಗಿ ನೆಲಸಿದ ಕತ್ತಲೆಗೆ ಮೃತ್ಯುವಾಯಿತು; ಸಂಕೇತಸ್ಥಾನಕೆ ಹೊರಡಲು ಸಾಧ್ಯವಾಗದೆ ಹೊರಗಿನ ಬೆಳ್ದಿಂಗಳ ಬೆಳಕಿಗೆ ಕಡುಗೋಪಗೊಂಡು ಕೆಂಗಣ್ಣಿಂದ ದಿಟ್ಟಿಸುವ ಜಾರೆಯರ ನೋಟದ ಕೆಂಬೆಳಗಿನಲ್ಲಿ ಮುಳುಗಿ ಉದಯಕಾಲದಲ್ಲಿ ಒಳಸೇರಿಕೊಂಡಿದ್ದ ಕೆಂಪನ್ನು ಮರಳಿ ಹೊರದೂಡುತ್ತಿರುವುದೇನೋ ಎಂದೆನಿಸಿತು; ಸೂಳೆಗೇರಿಯ ಭವನಗಳ ಕಿಟಕಿಗಳಿಂದ ಹೊಮ್ಮುವ ಅಗುರು ಧೂಪದ ಕಪ್ಪು ಹೊಗೆಯ ರಾಶಿಗೆ ಎದುರಾಗಿ, ಚಂದ್ರನ ಶತ್ರುವಾದ ರಾಹುವಿನೊಡನೆ ರಭಸದಿಂದ ಹೋರಾಡುತ್ತಿರುವುದು ಎಂಬ ನುಡಿಗೆ ಆಧಾರವಾಯಿತು; ಆನಂದದಿಂದ ತಂತಮ್ಮ ಮನೆಗಳಲ್ಲಿ ಸುಳಿದಾಡುವ ಪುರಸ್ತ್ರೀಯರ ಇಟ್ಟಣಿಸಿದ ಮೊಲೆಗಳ ಪಕ್ಕದಲ್ಲಿ ಇಳಿದು, ಎಂದೂ ಇಲ್ಲದ ಮುತ್ತಿನ ಹಾರ ಇಂದು ಹೇಗೆ ಇವರಿಗೆ ಬಂದಿತೆಂದು ಅವರ ಒಡನಾಡಿಗಳ ಮನದಲ್ಲಿ ಸಂಶಯವನ್ನು ಹುಟ್ಟಿಸಿತು; ಅರಮನೆಯ ಅಂಗಳದಲ್ಲಿ ಕಂಬಗಳಿಗೆ ಕಟ್ಟಿ ನಿಲ್ಲಿಸಿದ ಜಾವದಾನೆಗಳ ಮೇಲೆ ದಟ್ಟವಾಗಿ ಆವರಿಸಿ, ಅವುಗಳಿಗೆ ಹಾಲುಗಡಲಿನ ನಡುವಿರುವ ಐರಾವತದ ಶೋಭೆಯುನ್ನು ಒದಗಿಸಿತು; ಪಕ್ಷಿಗಳನ್ನು ಪಾಲಿಸುವ ಹೆಣ್ಣುಗಳು ಹೊರಗೆ ಇಟ್ಟ ಚಿನ್ನದ ಪಂಜರಗಳಲ್ಲಿ ತೂರಿ ಹೊಕ್ಕು ಅಡ್ಡಪಟ್ಟಿಯ ಮೇಲೆ ಕುಳಿತ ಚಕೋರಿಗಳಿಗೆ ಅಕ್ಕರೆಯಿಂದ ಮುಕ್ಕುಳಿಸುವ, ಮುಂಡಾಡುವ, ಕುಟುಕುವ ಮೊದಲಾದ ಲೀಲೆಗಳಿಗೆ ಮೈಯೊಡ್ಡಿತು; ಹೀಗೆ ಅತ್ಯಧಿಕವೂ, ಬಲುದಟ್ಟವೂ, ಅತ್ಯಂತ

ಚಂದ್ರಾತಪದೊಳ್ ನರೇಂದ್ರಚಂದ್ರಂ ಚಕೋರನಂತೆ ಚಂದ್ರಿಕಾವಿಹರಣವಿನೋದಕ್ಕೆ ಬಗೆದಂದು ದಕ್ಷಿಣಾನುಕೂಲಶಠಧೃಷ್ಟರೆಂಬ ನಾಯಕರುಂ ನಾಗರಿಕವಿಟವಿದೂಷಕಪೀಠಮರ್ದಕರೆಂಬ ನಾಯಕರುಂ ಬೆರಸು,

> ಮಳಯಜದಣ್ಪು ಮಲ್ಲಿಗೆಯ ಚೆನ್ನತುಱುಂಬು ನವೀನಚೀನದು ।
> ಜ್ಜ್ವಳಿಪ ದಳಿಂಬವಾವರಿಸಿದಂಚಲಗಪ್ಪುರದೊಪ್ಪುವಾರಮಾ ॥
> ರಳವಿಯ ಮುತ್ತಿನೆಕ್ಕಸರದೋಲೆ ವಿಲಾಸಮನೀಯೆ ಲೀಲೆಯಿಂ ।
> ತಳರ್ದನಿಳಾಧಿಪಂ ಸಫಲಮಾಗೆ ವಸಂತದ ಚಂದ್ರಿಕೋತ್ಸವಂ ॥ ೪೪

ಅಂತು ರಾಜವೀಥೀಲತಿಕೆಯಂ ಪದನಖಮಯೂಖಮಂಜರಿಯಿಂ ಮಂಜರಿತಂ ಮಾಡುತುಂ ಸೂಳೆಗೇರಿಯನೆಯ್ದೆವರ್ಪಾಗಳ್

> ಕಳಕೇಳೀಕೀರಪಾರಾವತಕುಹರಣವಾಚಾಲಮುಜ್ಜೃಂಭಮಾಣೋ ।
> ತ್ಪಳರಾಜಂ ನಿಷ್ಕುಟಾಂಭೋರುಹನಿಲಯಜಲಾರ್ದ್ರಂ ರತಿಶ್ರಾಂತಿನಿರ್ಯ ॥
> ಲ್ಲಳನಾನಿಶ್ವಾಸಪುಷ್ಪಪ್ರಸರದಗುರುಸೌರಭ್ಯಸಂದೋಹಭಾರಾ ।
> ಕಳಿತಂ ಬಂದೊಯ್ಯನೇನೂದಿದುದೊ ಪಣವಧೂಗೇಹದಿಂ ಗಂಧವಾಹಂ ॥ ೪೫

ಅಂತು ವಿನೋದಸುಖಸಸ್ಯಸಮುದಯಕ್ಷೇತ್ರಾಘಾಟಮೆನಿಪ ಗಣಿಕಾವಾಟಮಂ ಪುಗುವಾಗಳೊಂದು ಸೌಧಾಂಗಣದೊಳ್ ವಿಚಿತ್ರವರ್ಣವಸನವಿರಚಿತೋತ್ತುಂಗಶ್ರೀಖಂಡಶಾಖಾಸ್ತಂಭಂಗಳೊಳಂ,

ಉಜ್ವಲವೂ ಆದ ಬೆಳ್ದಿಂಗಳಲ್ಲಿ ರಾಜೇಂದ್ರನು ಚಕೋರನಂತೆ ಬೆಳ್ದಿಂಗಳ ವಿಹಾರಕ್ಕೆ ಮನಸ್ಸು ಮಾಡಿದನು; ಆ ಮೇರೆಗೆ ದಕ್ಷಿಣ, ಅನುಕೂಲ, ಶಠ, ಧೃಷ್ಟರೆಂಬ ನಾಯಕರನ್ನೂ, ನಾಗರಿಕ, ವಿಟ, ವಿದೂಷಕ, ಪೀಠಮರ್ದಕರೆಂಬ ಅನುನಾಯಕರನ್ನೂ ಒಡಗೊಂಡು– ೪೪. ಶ್ರೀಗಂಧದ ಅಂಗಲೇಪನ, ತಲೆಗೂದಲಲ್ಲಿ ಚೆಲುವಾದ ಮಲ್ಲಿಗೆ ದಂಡೆ, ರೇಷ್ಮೆಯ ಹೊಸ ಬಿಳಿಯ ವಸ್ತ್ರ, ಅಚ್ಚಕಪ್ಪುರದ ಹುಡಿ, ಮುತ್ತಿನ ಏಕಾವಳಿ– ಇವೆಲ್ಲವುಗಳಿಂದ ಅಲಂಕೃತನಾಗಿ ಅರಸನು ಚಂದ್ರಿಕೋತ್ಸವವನ್ನು ಸಫಲಗೊಳಿಸಲು ಹೊರಟನು. ವ॥ ಆತನ ಕಾಲುಗುರುಗಳ ಕಾಂತಿಗಳಿಂದ ಬೆಳಗುವ ರಾಜಮಾರ್ಗವು ಹೂದುಂಬಿದ ಬಳ್ಳಿಯಂತೆ ಶೋಭಿಸಲಾಗಿ, ನಡೆಯುತ್ತ ಸೂಳೆಗೇರಿಯ ಬಳಿಗೆ ಬಂದನು. ೪೫. ಕಲಧ್ವನಿ ಮಾಡುತ್ತಿರುವ ಗಿಳಿ ಪಾರಿವಾಳಗಳ ಕೂಜನದ ನೆವದಿಂದ ಮಾತಾಡುತ್ತ, ಅರಳಿದ ಉತ್ಪಲಪುಷ್ಪಗಳಿಂದ ಕಾಂತಿ ಪಡೆದು, ಉಪವನದ ಹೂಗೊಳದಲ್ಲಿ ಹೊಕ್ಕು ತೋಸಿಕೊಂಡು, ಸುರತಶ್ರಮ ಹೊಂದಿದ ಲಲನೆಯರ ನಿಶ್ವಾಸದಿಂದಲೂ, ಹೂಗಳಿಂದಲೂ, ಅಗುರು ಧೂಪ ಧೂಮದಿಂದಲೂ ಬಂದ ಪರಿಮಳದ ಭಾರವನ್ನು ಹೊತ್ತುಕೊಂಡು ಬಳಲಿದ ಗಾಳಿ ವಾರವನಿತೆಯ ಮನೆಯಿಂದ ಮೆಲ್ಲಮೆಲ್ಲಗೆ ಸುಳಿದು ಬಂದಿತು. ವ॥ ವಿನೋದಸುಖಗಳೆಂಬ ಸಸ್ಯಸಮುದಯ ಅಭಿವೃದ್ಧಿಗೆ ಫಲವತ್ತಾದ ಕ್ಷೇತ್ರವೆನಿಸಿದ ಸೂಳೆಗೇರಿಯನ್ನು ಹೊಗಲಾಗಿ ಒಂದು ಮಹಲಿನ ಅಂಗಳದಲ್ಲಿ ನಾನಾ

ಯಥಾಪ್ರದೇಶೋಚಿತವರ್ಣಕ್ರಮೋಪರಚಿತರತ್ನಮಯಮಯೂರಮಂಡಿತಾತುಳತುಳಾದಂಡಂಗಳೊಳಂ ಅಂತರಾಂತಸ್ಥಿತಕಮನೀಯಕನಕಕಲಶಮಣಿದರ್ಪಣಂಗಳೊಳು, ಆಲಂಬಿತಘಂಟಿಕಾಜಾಲಕುಸುಮದಾಮ ಚಾಮರೋದ್ದಾಮಚೀನಾಂಬರಾಚ್ಛಾದ್ಯಂಗಳೊಳಂ ನಿಷ್ಕಶೃಂಖಲಾಚತುಷ್ಕಘಟಿತನಿರ್ವ್ಯೂಹದಂತ ಪರ್ಯಂಕಿಕಾಪಟ್ಟದೊಳಮಳವಟ್ಟು ಮದನಮಂಗಳಾಗಾರದ್ವಾರಮಕರತೋರಣದಂತಿರ್ದ ನವಿಲುಯ್ಯಲ ಕೆಲಕ್ಕೆವೆಂದು

ನಲಿದು ಸಖೀಸಖವ್ರಜಕೆ ತಳ್ಕೆಗೆ ಮೊಕ್ಕಳಮೀವ ಮಾಲೆವೂ ।
ಬೆಲೆಗಸಿಯಿಂದಮೀವ ಘನಸಾರದ ಬಾಯಿನಮೆತ್ತಿ ಪೊನ್ನಬ ॥
ಟ್ಟಲೊಳೆಱೆದೀವ ಕುಂಕುಮರಸಂ ಹಿಡಿಹಾರದಿನೀವ ಚೊಕ್ಕದಂ ।
ಬುಲಮೆಸೆವನ್ನೆಗಂ ಮೆಱೆದಳಿಂದು ವಿಲಾಸಿನಿ ತದ್ವಿಲಾಸಮಂ ॥ ೪೬

ಅನಂತರಮಾಂದೋಳಪಟ್ಟಮಧ್ಯದ ಮರಾಳತೂಳಮಯಮಸೂಲಿಕಾಗೃಹಮನಲಂಕರಿಸಿ

• ಸುಯ್ಯೆಲರುಯ್ಯಲಾಡಿಸೆ ಮದಾಳಿಯಸುಯ್ಯಲ ನುಣ್ಚರಂ ಸ್ಮರಂ ।
ಗುಯ್ಯಲವಿಲ್ಗೆ ಕೈಯನಿರದೆಂಬವೊಲುಣ್ಮೆ ಮರಲ್ದು ನೋಟಕಿ॥
ರ್ಪುಯ್ಯಲನೊಯ್ಯನಾಕೆಯೊಡನಾಡಿಗಳೋಳ್ ಕುಡೆ ಮುತ್ತಿನೈಸರಂ ।
ಮೆಯ್ಯೊಲೆಪಕ್ಕೆ ರಯ್ಯಮೆನೆ ತೂಗೆ ವಿಲಾಸದಿನುಯ್ಯಲಾಡಿದಳ್ ॥ ೪೭

ರೀತಿಯ ಬಣ್ಣಬಣ್ಣದ ಬಟ್ಟೆಗಳ ಸುತ್ತಿನಿಂದ ಶೋಭಿಸುವ ಎತ್ತರವಾದ ಗಂಧದ ಮರದ ಕಂಬಗಳಿಂದಲೂ, ಉಚಿತವಾದ ವರ್ಣವಿನ್ಯಸದಿಂದ ಮಯೂರಾಕಾರವಾಗಿ ಅಲಂಕರಿಸಿದ ರತ್ನಮಯವಾದ ತೂಗುದಂಡಗಳಿಂದಲೂ, ಅಲ್ಲಲ್ಲಿಗೆ ಅಳವಡಿಸಿದ ಮನೋಹರವಾದ ಚಿನ್ನದ ಗಾಡಿಗಳಿಂದಲೂ, ರತ್ನದ ಕನ್ನಡಿಗಳಿಂದಲೂ, ತೂಗುಬಿಟ್ಟ ಗಂಟೆಗಳ ಸಾಲು, ಹೂವಿನ ಹಾರ ಹಾಗು ಚಾಮರಗಳಿಂದಲೂ, ರೇಷ್ಮೆಯ ಹೊದಿಕೆಯಿಂದಲೂ, ಬಂಗಾರದ ನಾಲ್ಕು ಚಿನ್ನದ ಸರಪಳಿಗಳಿಂದ ಬಿಗಿಗೊಳಿಸಿದ ಹಸ್ತಿದಂತದ ತೂಗುಮಣೆಯಿಂದಲೂ ಸನ್ನದ್ಧವಾಗಿ ಮನ್ಮಥನ ಮಂಗಳದ್ವಾರದ ಮಕರತೋರಣದಂತೆ ಕಂಗೊಳಿಸುವ ನವಿಲುಯ್ಯಾಲ ಬಳಿಗೆ ಬಂದು–೪೬. ಸಂತೋಷದಿಂದ ಕೆಳೆಯರಿಗೂ ಕೆಳದಿಯರಿಗೂ ಮುಡಿಯಲು ಹೂಮಾಲೆಗಳನ್ನು, ಲೇಪಿಸಿಕೊಳ್ಳಲು ಪಾತ್ರೆಯಿಂದ ಮೊಗೆಮೊಗೆದು ಕಪ್ಪುರದ ಬಾಗಿನಗಳನ್ನು, ಚಿನ್ನದ ಬಟ್ಟಲಲ್ಲಿ ತುಂಬಿದ ಕುಂಕುಮರಸವನ್ನೂ, ಹೇರಳವಾದ ಚೊಕ್ಕ ತಾಂಬುಲವನ್ನೂ, ಮೆಚ್ಚುವಂತೆ ವಿಲಾಸಿನಿಯೊಬ್ಬಳು ಬೆಡಗಿನಿಂದ ಕೊಟ್ಟಳು. ವ॥ ಆ ಉಯ್ಯಾಲೆಯ ಮಧ್ಯದಲ್ಲಿರುವ ತೂಗುಮಂಚಕ್ಕೆ ಹಂಸದುಪ್ಪುಳದ ಹಾಸನ್ನು ಅಳವಡಿಸಿ, ಕಾಂಡಪಟವನ್ನಿಟ್ಟು ಅಲಂಕರಿಸಲಾಗಿ–೪೭. ತನ್ನ ಬಾಯುಸಿರು ಮತ್ತ ದುಂಬಿಗಳನ್ನು ಉಯ್ಯಾಲೆಯಾಡಿಸುತ್ತಿರಲಾಗಿ, ಉಯ್ಯಾಲೆಯ ನುಣ್ದನಿ ಮನ್ಮಥನ ಕೈಯನ್ನು ಹೂಬಿಲ್ಲಿಗೆ ಪ್ರೇರಿಸದೆ ಇರದೆಂಬಂತೆ ಹೊಮ್ಮುತ್ತಿರಲಾಗಿ ನೋಟಕರು ತನ್ನ ಒಡನಾಡಿಗಳಲ್ಲಿ ಹುಯಿಲೆಬ್ಬಿಸುತ್ತಿರಲಾಗಿ, ಮೈಯ ಚಲನೆಯಿಂದ ಮುತ್ತಿನ ಐದೆಳೆಯ ಹಾರ ರಮ್ಯವಾಗಿ ತೂಗಾಡುತ್ತಿರಲಾಗಿ ಅವಳು ಬೆಡಗಿ

ಆ ವಿಲಾಸವತಿಯ ಲೀಲಾವಿಲಾಸಮಂ ನೋಡುತ್ತುಂ ಪೋಗೆ ಮುಂದೊಂದೆಡೆ ಪಳುಕಿನ ಸಜ್ಜೆ ಮಾಡದ ಮುಂದಣಸುಕೆಯ ತಳಿರುಲಯ್ಯಲನೊರ್ವಳಪೂರ್ವಯೌವನೋನ್ಮತ್ತೆ ಎನಗೆ ಮನೋಭವನೆ ದೇವಂ, ಬಸನಮೆ ಬವಸೆ, ಒಲವೆ ಕುಲಧನಮೆಂದು ಕೆಳದಿಯರ್ಗೆ ಪೂಣ್ದದಟನೇಱುವಂತೇಱಿ

ಮೂಡಿದುದಿತ್ತಲೊಂದಭಿನವಂ ಶಶಿಬಿಂಬಮೆನಿಪ್ಪ ಶಂಕೆಯಂ ।
ಮಾಡೆ ಮನಕ್ಕೆ ಮುದ್ದುಮೊಗಮುಜ್ಜ್ವಲಚಂದ್ರಿಕೆಯಲ್ಲಿ ನೀಡುಮೋ ॥
ಲಾಡುವ ಲೀಲೆಯಿಂದೊಲೆಯಲೀ ಮೃಗಲಕ್ಷ್ಮ ಮೃಗಕ್ಕೆ ಗೋರಿಯಂ ।
ಪಾಡುವ ಮಾಟಕ್ಕೆಯಿಂ ಬಳೆಯೆ ಗೀತರವಂ ತಳಿರುಯ್ಯಲಾಡಿದಳ್॥ ೪೮

ಅಗಳ್ ವಿದೂಷಕನಿವಳ್ದಿರ್ ನೋಟಕರನುತ್ಕಂಠಾವಸ್ಥೆಗುಯ್ಯಲಾಡುವಂದಮಲ್ಲದಯ್ಯಲಾಡುವಂದಮಲ್ಲಮೆಂದು ನುಡಿದು ನಡೆಯೆ ಮತ್ತೊಂದು ನೃತ್ಯಾಭ್ಯಾಸನಿವಾಸಪುರಃಪ್ರದೇಶದೊಳ್ ಮನೋಜರಾಜಚ್ಛತ್ರಚಾಮರಂಗಳಂತೆ ಸೊಗಯಿಸುವ ಸೋಗೆಯುಂ ಪೊಂಬಾಳೆಯಂ ಬೆರಸು ಕಟ್ಟಿದೆಳಗೌಂಗಿನುಯ್ಯಲಂ ತೂಗಾಡುವ ಲಾವಣ್ಯಲಕ್ಷ್ಮೀಲತೆಯ ಕಳಿಕೆಗಳನ್ನೆಯರಪ್ಪ ಕನ್ನೆಯರಂ ಚೆನ್ನೆಯರಂ ವೀಕ್ಷಿಸಿ ನಾಗರಿಕನಿಂತೆಂದಂ:-

ಮೀಸಲ್ವಾಯ್ದೆಱೆ ನಗೆ ಪೊಱೆ ।
ಸೂಸದ ಕಣ್ ಬಳಸಲೆಳಸದೊಳ್ತೊಡೆ ಲಜ್ಜಾ ॥

ನಿಂದ ಉಯ್ಯಾಲೆಯಾಡಿದಳು. ವ॥ ಆ ಚೆಲ್ಲಗಾರ್ತಿಯ ವೈಯ್ಯಾರದಾಟವನ್ನು ನೋಡುತ್ತ ಮುಂದೆ ಹೋಗಲಾಗಿ ಒಂದು ಎಡೆಯಲ್ಲಿ ಸ್ಫಟಿಕದ ಶಯ್ಯಾಗೃಹದ ಮುಂದಿರುವ ಅಶೋಕಕ್ಕೆ ಅಳವಡಿಸಿದ ಉಯ್ಯಾಲೆಯನ್ನು ಅಪೂರ್ವ ತಾರುಣ್ಯದಿಂದ ಮದೋನ್ಮತ್ತೆಯಾದೊಬ್ಬಳು "ನನಗೆ ಕಾಮದೇವನೆ ದೇವರು, ಸುರತವೆ ಉದ್ಯೋಗ, ಪ್ರೇಮವೆ ಕುಲಧನ" ಎಂದು ಗೆಳತಿಯರೆದುರು ನಿರ್ಧಾರವಾಗಿ, ನುಡಿಯುತ್ತ, ಏರಿ- ೪೮. "ಇತ್ತ ಇನ್ನೊಂದು ಚಂದ್ರಬಿಂಬ ಮೂಡಿತು" ಎಂಬ ಭ್ರಾಂತಿಯನ್ನು ಮುದ್ದುಮುಖವುಂಟುಮಾಡುತ್ತಿರಲಾಗಿ, ಉಜ್ವಲವಾದ ಬೆಳ್ದಂಗಳಲ್ಲಿ ಬೆಡಗಿನಿಂದ ಈಸಾಡುವಂತೆ ಮೈ ಒಲೆದಾಡುತ್ತಿರಲಾಗಿ ಚಂದ್ರಬಿಂಬದೊಳಗಿರುವ ಜಿಂಕೆಯನ್ನು ಸೆಳೆಯಲು 'ಗೋರಿ' ಗೀತವನ್ನು ಹಾಡುತ್ತಿರುವಳೊ ಏನೊ ಎಂಬಂತೆ ಇಂಪಾಗಿ ಗಾಯನ ಮಾಡುತ್ತ ಬಳ್ಳಿಯುಯ್ಯಾಲೆಯಲ್ಲಿ ಆಡಿದಳು. ವ॥ ಆಗ "ಇವರ ರೀತಿಯನ್ನು ನೋಡಿದರೆ ಈಕೆಯರು ನೋಟಕರನ್ನು ಉತ್ಕಂಠಾವಸ್ಥೆಗೆ ಉಯ್ಯಲಾಡಿಸುವವರಲ್ಲದೆ ತಾವೆ ಉಯ್ಯಾಲಾಡುವವರಲ್ಲ" ಎಂದು ವಿದೂಷಕನು ನುಡಿದನು; ಹಾಗೆಯೆ ಮುಂದೆ ಸಾಗಲಾಗಿ, ಮತ್ತೊಂದು ಎಡೆಗೆ ನರ್ತನಶಾಲೆಯ ಪ್ರದೇಶದಲ್ಲಿ ಮನ್ಮಥರಾಜನ ಛತ್ರಚಾಮರಗಳಂತೆ ಶೋಭಿಸುವ ಸೋಗೆಯನ್ನು ಹೊಂಬಾಳೆಯನ್ನೂ ಕಟ್ಟಿದ ಎಳೆಯ ಅಡಕೆ ಮರದ ಉಯ್ಯಾಲೆಯನ್ನು ತೂಗಾಡುವ, ಸೌಂದರ್ಯಲಕ್ಷ್ಮಿಯ ಕುವರಿಯರಂತಿರುವ ಚೆಲುವಾದ ಕನ್ಯೆಯರನ್ನು ನೋಡಿ ನಾಗರಿಕನು ಹೀಗೆಂದನು- ೪೯. "ಮೀಸಲು ತುಟಿ, ನಗೆಯನ್ನು ಹೊರಸೂಸುವ ಕಣ್ಣು, ಮುಚ್ಚಲು ಬಯಸದ ಒಳ್ತೊಡೆ(?)

ಭಾಸಮನೋಸರಿಸದ ಬಗೆ।
ಮಾಸರಮಾಯ್ತಿವರೊಳಡರ್ದ ಕೊಡಗೂಸುತನಂ॥ ೪೯

ಎಂಬುದಮರಸನವಳಂ ತೂಗುವೆರಡನೆಯ ಕನ್ನೆಯಂ ನೋಡಿ,

ಪೀರ್ದಪುದು ಲಜ್ಜೆಯಂ ಬಗೆ।
ಸಾರ್ದಪುದುರಮುಗುಟಲುರುಕುಚಂಗಳನೀಗಳ್॥
ಮೀರ್ದಪುದು ಕಣ್ಣ ಸರಲತೆ।
ಸಾರ್ದಪುದು ನವೀನಯೌವನೋದಯಮಿವಳಂ॥ ೫೦

ಎಂದವಳ್ದಿರೆಳವೆಯ ಬಳ್ವಳಿಕೆಯಂ ಮೆಚ್ಚುತುಂ ಪೋಗೆ ಮುಂದೊಂದು ಮತ್ತವಾರಣದ ಕೆಲದೊಳೊತ್ತೆಗೆಂದು ನಿಂದಿರ್ದಳಂ ನಾಗರಿಕಂ ನೋಡಿ

ನಸುದೊಡೆದೋರ್ಪ ಪಟ್ಟಣಿಗೆಯೊಳ್ನಿಜೆ ಕತ್ತುರಿಬೊಟ್ಟು ಕಟ್ಟಿ ಬಿ।
ಟ್ಟಸೆವ ಕುರುಳ್ ಮೊಗಕ್ಕೆ ಪಿರಿದೊಪ್ಪುವ ಬಿಂಕದ ಸಂಕದೋಲೆ ಕ॥
ರ್ಪಸದಳಮಾದ ಸಣ್ಣವಳೆ ಕತ್ತರಿಪೀಲಿಯನಾಂತ ಚೊಲ್ಲೆಯಂ।
ಮಿಸುಗುವ ದೋರೆವಲ್ ಕರಮೆ ಮಾಸರಮಾದುದು ದೇಸೆಕಾರ್ತಿಯೊಳ್॥ ೫೧

ಎಂದು ಮಾಣದಿವಳ ದೇಸೆವೆತ್ತ ಶೃಂಗಾರಂ ವಿಟಜನಕ್ಕೆ ಹೃದಯಾಂಗಾರಮಾಯ್ತೆಂಬಿನಂ ವಿಟನಿವಳಂತರಂಗಶೃಂಗಾರಮಂ ವಿಚಾರಿಪೆನೆಂದು ಪೋಗಿ ನೋಡಿ ಬಂದು

ಹುಸಿನಾಚುಗೆಯುನ್ನು ತೋರದ ಬಗೆ ಇವುಗಳಿಂದ ಇವರ ಕೊಡಗೂಸುತನ ಚೆಲುವಾಯಿತು" ವ॥ ಹೀಗೆನ್ನಲಾಗಿ ಅರಸನು ಅವಳನ್ನು ತೂಗುತ್ತಿರುವ ಇನ್ನೊಬ್ಬ ಕನ್ಯೆಯನ್ನು ನೋಡಿ– ೫೦. "ಮನಸ್ಸು ಲಜ್ಜೆಯನ್ನು ಹೀರುತ್ತಲಿರುವುದು; ಎದೆ ಉನ್ನತವಾದ ಕುಚಗಳನ್ನು ಇದೀಗ ಮುಂದೂಡುತ್ತಲಿರುವುದು; ಕಣ್ನೋಟದಲ್ಲಿ ಸರಳತೆ ಅಧಿಕವಾಗಿರುವುದು; ಇವಳಲ್ಲಿ ಇದೀಗ ಯೌವನೋದಯವಾಗುತ್ತಲಿದೆ" ವ॥ ಎಂದು ಅವರ ತಾರುಣ್ಯದ ಬೆಳವಣಿಗೆಯುನ್ನು ಮೆಚ್ಚುತ್ತ ಹೋಗಲಾಗಿ ಮುಂದೆ ಒಂದು ಮನೆಯಂಗಳದಲ್ಲಿ ಒತ್ತೆಗೆ ನಿಂತವಳನ್ನು ನೋಡಿ ನಾಗರಿಕನು (ಹೀಗೆಂದನು)– ೫೧. "ತೊಡೆಗಳನ್ನು ನಸುವೆ ಕಾಣಿಸುವ ಪಟ್ಟೆಸೀರೆಯ ಚೆಲುವಾದ ನಿರಿಗೆ, (ಹಣೆಗಿಟ್ಟುಕೊಂಡ) ಕಸ್ತೂರಿಯ ತಿಲಕ, ಕಟ್ಟಿ ಇಳಿಬಿಟ್ಟ ಕೂದಲು, ಮುಖಕ್ಕೆ ಒಪ್ಪುವಂತೆ ಬಿಂಕದಿಂದ ಧರಿಸಿದ ಶಂಖದ ಓಲೆ, ಅಚ್ಚಗಪ್ಪಿನ ತೆಳುವಾದ ಕೈಬಳೆ, ಕತ್ತರಿಯಾಕಾರದಲ್ಲಿ ಅಳವಡಿಸಿದ ನವಿಲ್ಗರಿಯ ಹೆರಳುದುದಿ, ಹೊಳೆಯುವ ನಸುಗೆಂಪಾದ ಹಲ್ಲುಗಳು– ಇವುಗಳಿಂದ ಈಕೆಯ ಚೆಲವು ಮನೋಹರವಾಗಿದೆ" ವ॥ ಹೀಗೆನ್ನಲಾಗಿ, ವಿಟನು ಮುಂದುವರಿದು "ಇವಳ ಬೆಡಗಿನ ಶೃಂಗಾರವು ವಿಟಜನರ ಹೃದಯಕ್ಕೆ ಇಡುವ ಬೆಂಕಿಯೆ ಆಗಿದೆ, ಇವಳ ಅಂತರಂಗ ಶೃಂಗಾರವನ್ನು ವಿಚಾರಿಸುವೆನು" ಎಂದು ಹೋಗಿ

ನೋಟದೆ ಬೇಟಮಂಕುರಿಸಿದಪ್ಪುದು ಮೇಳದೊಳಿಂಪುವೆತ್ತ ಮಾ।
ತಾಟದೆ ಮತ್ತೆ ಪಲ್ಲವಿಸಿದಪ್ಪುದು ಲಲ್ಲೆಯನಪ್ಪುಕೆಯ್ವ ಕೊಂ॥
ಡಾಟದ ಮುದ್ದುಗೆಯ್ತದಲರ್ದಪ್ಪುದಿವಳ್ ಬಗೆ ಮೆಚ್ಚಿ ಬಿಚ್ಚತಂ।
ಕೂಟಮನೊಲ್ದೊಡರ್ಚೆ ಫಲಮಪ್ಪುದು ತಪ್ಪದು ಸೂಳೆ ಕೇಳ ಗೇ॥ ೫೨

ಎನೆ ಪೆಱತೊಂದೆಡೆಯೊಳುಲ್ಲಸಿತಮಲ್ಲಿಕಾಮಂಡಪದ ನಡುವಣೆಸಳ ಪಸೆಯೊಳೊರ್ವನಳವಿದಪ್ಪಿ ಕೂರ್ತಳೆಯಳಂ ಪಟಿಕೆಯ್ದೆಯೆಂದು ಪುಸಿಮುಳಿಸಂ ತಳೆವುದುಮವಳ್ ಬೆಚ್ಚಿ ಪೆರ್ಚಿದ ಭಯದ ಭಾರದಿನೆಱಗುವಂತೆ ಕಾಲ್ಗೆಱಗುವುದುಂ, ಪ್ರಣಯಸಾರಸರ್ವಸ್ವನಿಧಾನಮನೆತ್ತುವಂತೆತ್ತಿ,

ನಲವಿಂದಂಕದೊಳಿಟ್ಟು ಕರ್ಚಿ ಕದಪಂ ಬಾಯ್ವಾಯೊಳೊಲ್ದಿಕ್ಕಿ ತಂ।
ಬುಲಮಂ ಕಣ್ಬೊಣರಿರ್ಪನೊತ್ತಿ ತಳದಿಂ ಪಾದಾನತಿವ್ಯಸ್ತಕುಂ॥
ತಲಮಂ ತಿರ್ದಿ ವಿನೋದದಿಂ ಮುಳಿದೆನಾಂ ನೀನಂಜಲೇಕೆಂದು ಕೋ।
ಮಲೆಯಂ ಕೋಟಿಚಟೂಕ್ತಿಯಿಂದೊಸೆಯಿಸುತ್ತಿರ್ದಂ ರತೋತ್ಕಂಠೆಯಂ॥ ೫೩

ಆಗಳರಸನಾ ಧೃಷ್ಟನ ಖಾತ್ವಾಸಮೀಕರಣನ್ಯಾಯಮಾದ ಮುಳಿಸುಂ ತಿಳಿಪುಮಿರ್ವರ್ಗಮುಬ್ಬೆಗಮಂ ಪಡೆದುದೆಂದಿಂತೆಂದಂ:–

ನೋಡಿ ಬಂದು– ೫೨. "ನೋಟದಲ್ಲಿ ಪ್ರಣಯವು ಅಂಕುರಿಸುವುದು; ಸಮೀಪಿಸಲಾಗಿ ಸವಿ ಮಾತಿನಲ್ಲಿ ಚಿಗುರಿಡುವುದು; ಲಲ್ಲೆಮಾತಿನ ಮುದ್ದಾಟದಲ್ಲಿ ಅರಳು ವುದು; ಇವಳು ಮನಮೆಚ್ಚಿ ಉತ್ಸಾಹದಿಂದ ಕೂಟಕ್ಕೆ ತೊಡಗಿದರೆ ಸೂಳೆಯ ಲೀಲೆಗೆ ಫಲವಾಗುವುದು ತಪ್ಪದು" ವ॥ ಹೀಗೆ ನುಡಿಯುತ್ತ ಹೋಗಲಾಗಿ ಇನ್ನೊಂದೆಡೆ ಯಲ್ಲಿ ಉಲ್ಲಾಸಮಯವಾದ ಮಲ್ಲಿಗೆಯ ಮಂಟಪದ ನಡುವೆ ಎಸಳ ಹಸೆಯ ಮೇಲೆ ಇದ್ದ ಪ್ರಣಯಿಯೊಬ್ಬನು ತನ್ನ ಮನದನ್ನೆಯನ್ನು "ನನಗೆ ಅಪಮಾನ ಮಾಡಿದೆ" ಯೆಂದು ಹುಸಿಮುನಿಸನ್ನು ತೋರಲಾಗಿ, ಅಕೆ ಬೆಚ್ಚಿಬಿದ್ದು, ಭಯದ ಭಾರದಿಂದಲೊ ಏನೊ ಎಂಬಂತೆ ಅವನ ಕಾಲಿಗೆ ಎರಗಿದಳು; ಆಗ ಅವನು ಪ್ರಣಯದ ಸಾರಸರ್ವಸ್ವವನ್ನೆ ಎತ್ತುವಂತೆ ಅವಳನ್ನೆತ್ತಿ– ೫೩. ಪ್ರೇಮದಿಂದ ತೊಡೆಯ ಮೇಲಿರಿಸಿಕೊಂಡು, ಕೆನ್ನೆಯನ್ನು ಕಚ್ಚಿ, ಬಾಯಲ್ಲಿ ಬಾಯಿಟ್ಟು ತಂಬುಲಕೊಟ್ಟು, ತನ್ನ ಕೈಗಳಿಂದಲೆ ಆಕೆಯ ಕಣ್ಣೀರನ್ನು ಒತ್ತಿ ತೆಗೆದು, ಆಕೆ ತನ್ನ ಕಾಲಿಗೆರಗಿದಾಗ ಅಸ್ತವ್ಯಸ್ತವಾದ ತಲೆಗೂದಲನ್ನು ನೇವರಿಸಿ ತಿದ್ದಿ, "ಸುಮ್ಮನೆ ವಿನೋದಕ್ಕೆ ನಾನು ಕೋಪಿಸಿಕೊಂಡರೆ ನೀನು ಅಂಜಬೇಕೆ?" ಎಂದು ಅನೇಕ ಬಗೆಯಾದ ಚಾಟುವಚನಗಳಿಂದ ಸುರತಕ್ಕೆ ಉತ್ಕಂಠೆಯಾದ ಆ ನಲ್ಲೆಯ ಮನಸ್ಸನ್ನು ಪ್ರಸನ್ನಗೊಳಿಸುತ್ತಿದ್ದನು. ವ॥ ಆಗ ಅರಸನು ಆ ಧೃಷ್ಟನ ಖಾತ್ವಾ ಸಮೀಕರಣ ನ್ಯಾಯವಾದ ಕೋಪವೂ ಆಮೇಲಿನ ಸಮಾಧಾನ ಪ್ರಯತ್ನವೂ ಇಬ್ಬರಿಗೂ ಉದ್ವೇಗವನ್ನು ಒದಗಿಸಿತು" ಎಂದು ನುಡಿದು

ಪ್ರಣಯದಿನಾದ ಹೋರಟೆಯೆ ಹೋರಟೆ ಮಾಣ್ದೊಡೆ ಕೂಟದೊಳ್ ಮನಂ।
ತಣಿಯದದೊಂದು ಕೋಟಲೆಯೆ ಕೋಟಲೆ ಮಾಣ್ದೊಡಗಲ್ದ ಪೊಟ್ಟಿನೊಳ್॥
ರಣರಣಕೋತ್ಥವೇದನೆಯೆ ವೇದನೆ ಮಾಣ್ದೊಡೆ ಮತ್ತಮಿನ್ನವ।
ಪ್ಪಣಕಮೆ ಪುಟ್ಟುಗೆಂದೊಡಕಟೇನಪಸೌಖ್ಯರೊ ಕೂರ್ತ ಮಾನಸರ್॥ ೫೪

ಎಂಬುದುಮನುಕೂಲನೆಂದಂ–ದೇವರ್ ಬೆಸಸಿದಂದವಪ್ಪುದಾದೊಡಂ

ನುಡಿ ಸವಿ ನೋಟಮೊಂದು ಸವಿ ಸೋಂಕು ದಿಟಂ ಸವಿ ತೋಟಿಯಾವಗಂ।
ಕಡುಸವಿ ಪೊಯ್ಮೆ ಮುನ್ನ ಸವಿ ಬಯ್ಕೆ ಕರಂ ಸವಿಯಪ್ಪು ಚುಂಬನಂ॥
ಗಡಣಮುಮೆಂತುಮೆಯ್ದೆ ಸವಿಯಪ್ಪುವು ತನ್ನ ಪಸಾದದಿಂದಮೆಂ।
ದೊಡೆ ಸವಿ ಬೇಟದಿಂದೆ ಪೆಱತಾವುದೊ ಭಾವಿಸಿ ನೋಡೆ ನಾಡೆಯುಂ॥ ೫೫

ಎನೆ ಸಾರ್ವಭೌಮಸರ್ವಜ್ಞಂ ಧುತ್ತೂರಮತ್ತರೊಳ್ ಸ್ತಂಭಕುಂಭಾದಿಗಳೆಲ್ಲಂ ಶಾತಕುಂಭಾಭಾಸಂಗಳಾಗಿ ತೋರ್ಪಂತೆ ಕಾಮಕಾತರೆಯೊಳಂ ಬಸನದೊಳ್ ಬೆರಸಿದಾಯಾಸಂಗಳುಂ ಪ್ರಿಯಾಪ್ತಿಯಂಗಳೆ ಅಕ್ಕುಮೆನೆ ತತ್ಸಮೀಪದ ಸೌಧದೊಳ್ ಸನ್ನಿದಮಾದ ಕನ್ನೆವೇಟಕ್ಕೆ ತನ್ನಂ ಮಾಱುಗೊಟ್ಟ ಪಾಱುಗೆಯ್ತದ ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವುಮಾಡಿ ಮೆಱೆವುದನವಳೋಕನಾಡಿ ನೋಡಿ ಕಂಡು,

ಮತ್ತೆ ಹೀಗೆಂದನು– ೫೪. "ಪ್ರಣಯದಲ್ಲಿ ಆದ ಕಲಹವೇ ಕಲಹ; ಅದಿಲ್ಲದೆ ಕೂಟದಲ್ಲಿ ಮನಸ್ಸು ತಣಿಯದು; ಅದು ತಪ್ಪಿದರೆ ಕಾಟವೆ ಕಾಟ; ಅದಿಲ್ಲದಿದ್ದಾಗ ವಿರಹದಲ್ಲಿ "ಅಯ್ಯೋ! ಎಷ್ಟು ಹಿಂಸಿಸಿದೆನಲ್ಲ! ಆ ಪ್ರಿಯ ಜೀವವನ್ನು ಮರಳಿ ಎಂದು ಕಂಡೇನು?" ಎಂಬ ಹಳವಂಡದ ವೇದನೆಯೆ ವೇದನೆ; ಅದೂ ಇಲ್ಲವಾದರೆ ಮೂದಲಿಕೆಯೆ ಹುಟ್ಟುವುದು, ಹೀಗಿದ್ದ ಮೇಲೆ ಪ್ರಣಯಿಗಳು ಎಂತಹ ದುರ್ದೈವಿಗಳು! ಸುಖಕ್ಕೆ ಯಾವಾಗಲೂ ಎರವಾಗಿಯೆ ಇರುವರಲ್ಲ" ವ॥ ಈ ಮಾತಿಗೆ ಅನುಕೂಲ ನಾಯಕನು ಹೀಗೆಂದನು– "ದೇವ, ನೀನು ಹೇಳಿದುದು ಸರಿಯೆ, ಆದರೂ– ೫೫. ಮಾತು ಸವಿ; ನೋಟವೊಂದು ಸವಿ; ಸ್ಪರ್ಶ ದಿಟಕ್ಕೂ ಸವಿ; ಕಲಹ ಯಾವಾಗಲೂ ಸವಿ; ಏಟು ಬಿದ್ದರೆ ಸವಿ; ಬಯ್ದರೆ ಇನ್ನೂ ಸವಿ; ಅಪ್ಪುಗೆ, ಚುಂಬನ ಮತ್ತು ಕೂಟವೆಂಬುವಂತೂ ಹೇಗಾದರೂ ತುಂಬ ಸವಿಯೆ; ಪ್ರಣಯದ ಅನುಗ್ರಹದಿಂದ ಈ ಎಲ್ಲ ಸವಿಯೊದಗುತ್ತಿರುವಾಗ ಅದಕ್ಕಿಂತ ಸವಿಯಾದುದು ಇನ್ನಾವುದಿದೆ ಹೇಳಿ ನೋಡೋಣ" ವ॥ ಈ ಮಾತಿಗೆ ಉತ್ತರವಾಗಿ ಸರ್ವಜ್ಞನಾದ ಚಕ್ರವರ್ತಿಯು "ದತ್ತೂರ ಸೇವನೆಯಿಂದ ಮತಿಗೆಟ್ಟವನ ಕಣ್ಣಿಗೆ ಎಲ್ಲವೂ ಚಿನ್ನವೆ ಆಗಿ ತೋರುವಂತೆ ಕಾಮೋತ್ಕಂಠೆಯೊಡನೆ ಕೂಡಿದಾಗ ಸುರತದ ಆಯಾಸಗಳೂ ಪ್ರಿಯೆಗೆ ಆಪ್ಯಾಯಮಾನವೆ ಆಗುವುವು," ಹೀಗೆನ್ನುತ್ತ ಸಾಗಲಾಗಿ ಅದರ ಬಳಿಯ ಭವನದಲ್ಲಿ ಕನ್ನೆತನದ ಪ್ರಣಯಕ್ಕೆ ತನ್ನನ್ನೆ ಒಪ್ಪಿಸಿಕೊಂಡ ಯೌವನದ ಜಾರೆಯೊಬ್ಬಳು ತನ್ನ ಪ್ರಿಯಕರನು ಮಾಡಿದ ಹಲ್ಲುಗಾಯ ಉಗುರು ಗಾಯಗಳನ್ನೆ ತನ್ನ ದೇಹಕ್ಕೆ ಆಭರಣ

ಕೊರಲಿಂ ಬರಿಯಿಂದಗ್ರಂ ।
ಬರೆಗಂ ಕೆಂಪೆಸೆಯೆ ನೀಳ್ದ ನಖರೇಖೆಯೆಸ ॥
ಳ್ಗೊರೆಯೆನಿಸೆ ಪದ್ಮಕುಟ್ಮಲ ।
ದಿರವಂ ಪರಿಭವಿಸಿತೀಕೆಯುತ್ಕುಚಯುಗಳಂ ॥ ೫೬

ಎಂಬುದುಮದರ್ಕೆ ಸೈರಿಸದವರಕ್ಕನಿಂತೆಂದಳ್ :-

ಮಿಱುಗುವ ವಿದ್ರುಮಾಧರದ ಮಧ್ಯದೊಳಾಯತವೃತ್ತಮಾದ ನು ।
ಣ್ಗಱಿಯಿದು ಮನ್ಮನಕ್ಕೆ ಪಡೆದಪ್ಪುದು ಮನ್ಮಥವಹ್ನಿತಾಪದಿಂ ॥
ಮಱುಕಮುನಪ್ಪುಕೆಯ್ದೆರ್ದೆಯೊಳಿರ್ಪುದನೊಲ್ಲದೆ ಬಾಯ ಬಾಗಿಲಿಂ ।
ನೆಱೆ ಪೋಱಮಟ್ಟು ಪೋದಿವಳ ಲಜ್ಜೆಯ ಪಜ್ಜೆಯಿದೆಂಬ ಪೋಲ್ವೆಯಂ ॥ ೫೭

ಎನೆ ಧೃಷ್ಟನವಳ ಚುಂಬನಂ ಚೆನ್ನನೊಳಕೈದುದೆನಲೊಡಂ ಅಲ್ಲಿಂ ತಳರ್ವುದುಮೊರ್ವಂ ಕಣ್ಣಿಟ್ಟು ಪಲದೆವಸವಟ್ಟಟ್ಟಿಯುಮಟ್ಟುತ್ತುಮಿರ್ದವಳ ಬೇಂಟದ ಬೊಜಂಗನುಱಿವುದುಮೆಡೆವಡೆ ದೊತ್ತೆಯಿಟ್ಟು ಪುಗಲೊಡಮವನಂ ಕಂಡು,

ಮನದಿನಿತೊಂದನವ್ವಳಿಪ ದಿಟ್ಟಿಯನೊಯ್ಯನೆ ಸುತ್ತುವಾಸೆಯಂ ।
ಘನತರಭೋಗಮಂ ಗತಿಯ ವಕ್ರತೆಯಂ ತೆಱಪಾಗೆ ಸಾರ್ದುಱಿಮೆ ॥

ವೆಂದು ಭಾವಿಸಿ ಹಿಗ್ಗುತ್ತಿದ್ದಳು, ಅದನ್ನು ಅವಳ ಒಡನಾಡಿಯೊಬ್ಬಳು ನೋಡಿ- ೫೬. "ಕೊರಳಿಂದ ಹಿಡಿದು ಪಕ್ಕೆಯ ತುದಿಯುವರೆಗೆ ಕೆಂಪಗೆ ಉದ್ದುದ್ದವಾಗಿ ಮೂಡಿದ ಉಗುರುಗಾಯದ ರೇಖೆಗಳುಳ್ಳ ಈಕೆಯ ನೆಲೆಮೊಲೆಗಳು, ಪೊರೆಯುಳ್ಳ ತಾವರೆಯ ಮೊಗ್ಗುಗಳನ್ನು ಹೀಯಾಳಿಸಿದುವು". ವ॥ ಹೀಗೆಂದುದಕ್ಕೆ ತಾಳದೆ ಅವರ ಅಕ್ಕನು ಇಂತೆಂದಳು-೫೭. "ತೊಳಗುವ ಹವಳದುಟಿಯ ಮಧ್ಯದಲ್ಲಿ ದೀರ್ಘವರ್ತುಲಾಕಾರವಾದ ಈ ದಂತಕ್ಷತದ ನಯವಾದ ಕಲೆಯನ್ನು ನೋಡಿದರೆ, (ಅದು ಕೇವಲ ದಂತಕ್ಷತವಲ್ಲ), ಕಾಮಾಗ್ನಿಯ ತಾಪದಿಂದ ಕುದಿಗೊಂಡು ಎದೆಯ ಒಳಗೆ ಇರಲಸಾಧ್ಯವಾಗಿ, ಬಾಯ ಬಾಗಿಲಿಂದ ಹೊರಗೆ ಹೊರಟು ಹೋದ ಇವಳ ಲಜ್ಜೆಯ ಹೆಜ್ಜೆಯ ಗುರುತೇ ಅದು ಎಂದು ನನಗೆ ಎನಿಸುತ್ತದೆ". ವ॥ ಈ ಮಾತನ್ನು ಕೇಳಿ ಧೃಷ್ಟನಾಯಕನು, "ಅವಳ ಚುಂಬನ ತುಂಬ ಸೊಗಸನ್ನು ಒಳಗೊಂಡಿತು" ಎಂದನು. ಅಲ್ಲಿಂದ ಮುನ್ನಡೆಯಲಾಗಿ ಒಂದೆಡೆ ಒಬ್ಬನು ಒಬ್ಬಳ ಮೇಲೆ ಕಣ್ಣಿಟ್ಟು, ದೂತರಿಂದ ಅವಳಿಗೆ ಹೇಳಿಕಳಿಸಿ, ಕಳಿಸಿ, ಇನ್ನೂ ಹೇಳಿಕಳಿಸುತ್ತಲೆ ನಿಂತುಕೊಂಡಿದ್ದನು. ಅವಳಿಗೆ ಮೆಚ್ಚಿಗೆಯಾದ ವಿಟನು ಮನೆಯಿಂದ ಹೊರಟು ಹೋದುದನ್ನು ನೋಡಿ, ಅವಕಾಶ ದೊರೆಯಿತೆಂದು ಈತನು ಒತ್ತೆಹಣವನ್ನು ಇಟ್ಟು ಒಳಹೊಕ್ಕನು,ಇವನನ್ನು ಕಂಡು-೫೮. ಮನಸ್ಸಿಗೆ ಭೀತಿಯಾಗುವಂತೆ ನೋಡುವ ಇವನ ಕಣ್ಣು, ಮೆಲ್ಲಗೆ ತನ್ನನ್ನು ಸುತ್ತಿಕೊಳ್ಳಬೇಕೆಂಬ ಇವನ ಬಯಕೆ, ಇವನ "ಘನತರಭೋಗ" (೧. ಹೇರಳವಾದ ಒತ್ತೆಹಣ. ೨. ಭೀಕರವಾದ ಹೆಡೆ), ಗತಿಯ ವಕ್ರತೆ (೧. ಕಪಟವೃತ್ತಿ. ೨. ಅಂಕುಡೊಂಕಾಗಿ ಮುನ್ನಡೆಯು

ಲ್ಲನೆ ಪುಗುವಂದಮಂ ನೆಱೆಯೆ ಭಾವಿಸಿ ಬಂದ ಭುಜಂಗನಂ ಭುಜಂ।
ಗನೆ ದಿಟಮೆಂದು ದಾರಿಕೆ ಮಯೂರಿಕೆಯಂದದಿನೇಂ ಕನಲ್ದಳೋ ॥ ೫೮

ಅದಂ ವಿವೇಕವಿದ್ಯಾಧರಂ ಕಂಡು

ಮನಮದು ಮನದನ್ನನ ಬೆ ।
ನ್ನನೆ ಪೋಗಿರೆ ತನ್ನ ಬಸನದಿಂದವಳೊಳ್ಪಂ ॥
ಮನಮಂ ಬಿಡೆ ಬಳೆಯಿಪ ಬೆ ।
ಳ್ತನಮಿದು ಪಾಳ್ಮನೆಗೆ ಬಾಯಿನಂಗುಡುವಂದಂ ॥ ೫೯

ಎಂದು ನುಡಿಯೆ; ಮತ್ತೊರ್ವಂ ತನ್ನೊಳಾದೊಲವಿನೆಸಕಂ ಮಸಮಸನಾಗೆ ಮತ್ತೊರ್ವನೊಳ್ ಮನಕ್ಕೆಡೆಮಾಡುವಳ್ಗೆ ತನ್ನ ಮೋಹದವನ ನಣ್ಪಂ ಬಿಟ್ಟೆನೆಂದು ಸೂರುಳ್ತೊಡಲ್ಲನೆಂದು ರೋಸದಿಂ ಪುಸಿಮಾಟ್ಟುದುಂ, ಬಜ್ಜೆಗುಂಟಣಿ ಸಜ್ಜೆವನೆಯ ಬಾಗಿಲಂ ಪತ್ತಿ ಮಱೆಗೇಳುತ್ತಿರ್ದೊಳಗಂ ಪೊಕ್ಕು

ಕುಡಿದೊಡೆ ಪೊಟ್ಟೆಯಿಂದೆ ಬಟೆನೀರ್ ಪೊಱಪಾಯ್ದುವೆ ಸುತ್ತಿ ಕಾಲನೇಂ।
ತೊಡರ್ವುವೆ ದಾಂಟುವಲ್ಲಿ ನಿಱೆ ಪುತ್ತುರಿಯೂದಿದೊಡಂತೆ ಬಾಯನೇಂ ॥
ಸುಡುವುದೆ ಮುಟ್ಟೆ ದೇವರೊಳೆ ಕೀಲಿಪುದೇ ಕರಮೇಕೆ ಸೂರುಳೆಂ।
ದೊಡರಿಸಲಣ್ಣ ಪೆಣ್ಣ ಪುಸಿಮನ್ನಣೆಯುಳ್ಳೊಡಮಂತದೆಯ್ದದೇ ॥ ೬೦

ವಿಕೆ), ತೆರವಾದ ಜಾಗವನ್ನು ನೋಡಿ ಮೆಲ್ಲಗೆ ನುಸುಳಿ ಹೋಗುವ ರೀತಿ- ಇವೆಲ್ಲವನ್ನು ಚೆನ್ನಾಗಿ ಮನವಿಟ್ಟು ನೋಡಿ ಆಕೆ ಈ ಭುಜಂಗ (ವಿಟಪುರುಷ)ನು, ದಿಟಕ್ಕೂ ಭುಜಂಗನೆ(ಸರ್ಪವೆ)ಎಂದು ಹೆಣ್ಣುನವಿಲಂತೆ ಅದೆಷ್ಟು ಕೋಪಗೊಂಡಳು! ವ॥ ಅದನ್ನು ಕಂಡು ವಿವೇಕಶಾಲಿಯಾದ ಅರಸನು-೫೯. "ಆಕೆಯು ಮನಸ್ಸು ಮನೋವಲ್ಲಭನ ಹಿಂದೆಯೆ ಹೊರಟುಹೋಗಿರುವಾಗ ಈತನು ಪ್ರಣಯಾತುರನಾಗಿ ಅವಳ ಅನುಗ್ರಹಕ್ಕಾಗಿ ಬಯಸಿ ಪ್ರಯತ್ನಿಸುತ್ತಿರುವುದು ಹಾಳುಮನೆಗೆ ಬಾಗಿನ ಕಳಿಸಿದಂತೆ, ಮೂರ್ಖತನವೇ ಸರಿ". ವ॥ ಎಂದು ನುಡಿದನು. (ಮುಂದೆ ಹೋಗಲಾಗಿ) ಮತ್ತೊಬ್ಬನು ತನ್ನ ಮೇಲಿನ ಪ್ರೀತಿ ಕುಗ್ಗಿ ತನ್ನ ಮನದನ್ನೆಯಾಗಿದ್ದವಳು ಇನ್ನೊಬ್ಬನ ಮೇಲೆ ಮನಸಿಟ್ಟುದನ್ನು ಕಂಡು, "ನಿನ್ನ ಮೋಹದ ಈ ಹೊಸ ವಿಟನನ್ನು ಬಿಟ್ಟುಕೊಟ್ಟೆನೆಂದು ಆಣೆ ಮಾಡಿದರೆ ಸರಿ ಇಲ್ಲವಾದರೆ ನೀನು ನನಗೆ ಬೇಡ" ಎಂದು ರೋಷದಿಂದ ಹಠಹಿಡಿದನು. ಶಯ್ಯಾಗೃಹದ ಬಾಗಿಲಲ್ಲಿ ಮರೆಯಾಗಿ ನಿಂತು ಈ ಮಾತನ್ನೆಲ್ಲ ಕೇಳುತ್ತಿದ್ದ ಧೂರ್ತ ಕುಂಟಣಿಯು ಕೂಡಲೆ ಒಳಹೊಕ್ಕು- ೬೦. "ಆಣೆಮಾಡಿ ದೇವರ ತೀರ್ಥವನ್ನು ಕುಡಿದರೆ ಅದರಿಂದೇನು ಹೊಟ್ಟೆಯೊಡೆದು ನೀರು ಹೊರಬರುವುದೆ? ದಾಟುವ ಶಪಥದಲ್ಲಿ ನಿರಿಗೆಯೇನು ಕಾಲಿಗೆ ತೊಡಕು ವುದೆ ? ಹುತ್ತಿಗೆ ಉರಿ ಹಾಕಿ ಊದಿದರೆ ಆ ಬೆಂಕಿಯಿಂದ ಬಾಯಿ ಏನಾದರೂ ಸುಡುವುದೆ ? ದೇವರ ಪಾದ ಮುಟ್ಟಿ ಆಣೆ ಇಟ್ಟುಕೊಂಡರೆ ಕೈಯೇನು ದೇವರಿಗೆ ಅಂಟಿಕೊಂಡು ಬಿಡುವುದೆ? ಆಣೆಯಿಟ್ಟುಕೊಳ್ಳಲು ಏಕೆ ತೊಡಗಿಸುವೆ ಅಣ್ಣ?

ಎನೆ ಶಠಂ ಹಠವೃತ್ತಿಯಿನವಳಿರ್ವರಾಗ್ರಹಕ್ಕಂ ನಿಗ್ರಹಮಂ ಪಡೆದರೆಂಬುದುಂ, ಅನತಿ ದೂರದೊಳೊರ್ವಳ್ ಕೂರಿಸಿದ ಬರವಿಗನ ಬರವಿಂಗೆ ಶಯ್ಯಾಸನಮಂ ರಯ್ಯಂ ಮಾಡಿರಿಸೆ ಪೀಠಮರ್ದಕಂ ಸಾರ್ದು ನೋಡಿ

ಪಗಲನುದಂಶುವಿಂದುಗುಟ್ವ ದೀವಿಗೆ ತೆಳ್ವಳಿಕಿಂದಮಾದ ನು ।
ಣ್ಣಗಲಿಯೊಳಾಯ್ತು ಮೆಲ್ಪೆನಿಪ ಪಾಸಲರ್ವಟಿಕ್ಕೆಯ ತಾಣಮೆಂಬ ಚೆ ॥
ಲ್ವಗಲದ ಪೀಲಿವಿಜ್ಞಣಿಗೆ ತಣ್ಪಿನ ನೀರ್ ಸೆಱಿಯಾದ ಪೊಂಗಳಂ ।
ತಿಗೆಯಿರೆ ಸಜ್ಜೆಯೋವರಿಯಿದೋವರಿಮಾಡಿತು ಕಂತುಗೆಮ್ಮುಮಂ ॥ ೬೧

ಎಂಬನ್ನೆಗಂ ತತ್ಪಾರ್ಶ್ವಕ್ರೀಡಾವೇಶ್ಮದಿಂದಸವಸದಿನಾದ ಕಿಸುರ ಮಸಕದಿನೊರ್ವಂ ಪೊಱಮಟ್ಟು ಪೋಗೆ

ಇನಿಯನ ಕಾಲ್ಗೆ ಕಾಮಿನಿಯ ಕಾಲ್ ನಿಲವೇಟ್ಟವೊಲುಣ್ಮೆ ನೂಪುರ ।
ಧ್ವನಿ ನೆಱೆ ಕಣ್ಗೆ ಕಣ್ಣಿಮಿರೆ ಕಣ್ಬನಿಯಂ ಬಿಡಲಾಗೆನುತ್ತೆ ಬೆ ॥
ನ್ನನೆ ಪರಿವಂದದಿಂ ಪರಿಯೆ ಬಂದು ಪದಾನತೆಯಾಗೆ ಪೋದುದಾ ।
ತನ ಮುನಿಸಂತೆ ಕಾದಲನ ಕಾಲ್ವಿಡಿಪಿಂ ಕಳೆದಳ್ ಕನಲ್ಕೆಯಂ ॥ ೬೨

ಅದಲ್ಲದೆ ಮತ್ತೊರ್ವಳ್ ತಾನೊಲ್ದುಮೊಲ್ಲದಂತವನೊಳ್ ನೆಗಟ್ಟುವ ಮಗಳಣಕಕ್ಕೆ ತಲೆ ಕಣಕಣಿಸೆ,

ಹೆಣ್ಣು ತೋರುವ ಮನ್ನಣೆ ಹುಸಿಯೆ ಆಗಿದ್ದ ಪಕ್ಷದಲ್ಲಿ (ಆಗಲೆ ಹೇಳಿದ) ಕೇಡು ಬರದೆ ಇರುವುದೆ? " ವ॥ ಈ ಮಾತನ್ನು ಕೇಳಿ ಶಠನಾಯಕನು, "ಈ ಇಬ್ಬರ ಒತ್ತಾಯ ಅವಳಿಗೆ ನಿಗ್ರಹವನ್ನುಂಟುಮಾಡಿತು" ಎಂದನು, ಮುಂದೆ ಸ್ವಲ್ಪ ದೂರದಲ್ಲಿಯೆ ಒಬ್ಬಳು ತನ್ನನ್ನು ಒಲಿಸಿದ ಮನದನ್ನನ ಆಗಮನಕ್ಕಾಗಿ ಹಾಸುಗೆಯನ್ನು ಅಂದವಾಗಿ ಅಣಿಗೊಳಿಸಿ ಇರಲಾಗಿ, ಪೀಠಮರ್ದಕನು ಬಳಿ ಹೋಗಿ ನೋಡಿ– ೬೧. "ತನ್ನ ಉಜ್ವಲ ಕಿರಣಗಳಿಂದ ಹಗಲನ್ನೆ ಉಂಟು ಮಾಡುತ್ತಿರುವ ದೀವಿಗೆ, ನಯವಾದ ಸ್ಫಟಿಕದ ಜಗಲಿಯ ಮೇಲೆ ರಚಿಸಿದ ಮೆದುವಾದ ಹೂವಿನ ಹಾಸಿಗೆ, ಚೆಲುವಾದ ಹಾಗು ಅಗಲವಾದ ನವಿಲ್ಗರಿಯ ಬೀಸಣಿಗೆ, ತಂಪಾದ ನೀರು ತುಂಬಿಟ್ಟ ಚಿನ್ನದ ಕಳಶ ಇವುಗಳಿಂದ ಸಜ್ಜಾದ ಶಯ್ಯಾಗೃಹವು ನಮ್ಮನ್ನು ಮನ್ಮಥನಿಗೆ ಬಲಿಯಾಗಿಸಿತು." ವ॥ ಹೀಗೆ ಅವನು ನುಡಿಯುತ್ತಿರುವಾಗ ಅದರ ಪಕ್ಕದ ಕ್ರೀಡಾಗೃಹದಿಂದ ಮನಸ್ತಾಪದಿಂದಾದ ಕೋಪದಿಂದ ಒಬ್ಬನು ಹೊರಗೆ ಹೊರಟನು, ಆಗ –೬೨. ತನ್ನ ನಲ್ಲನ ಕಾಲುಗಳಿಗೆ ನಿಲ್ಲೆಂದು ಹೇಳುವಂತೆ ಕಾಮಿನಿಯ ನೂಪುರಧ್ವನಿ ಹೊಮ್ಮುತ್ತಿರಲು ಕಣ್ಣಿಗೆ ಕಣ್ಣಿಟ್ಟು ಕಂಬನಿದಂದು "ನನ್ನನ್ನು ಬಿಟ್ಟು ಹೋಗಬೇಡ" ವೆಂದು ನುಡಿಯುತ್ತ ಬೆನ್ನ ಹಿಂದೆಯೆ ಧಾವಿಸಿ ಬಂದು ಕಾಲಿಗೆ ಬಿದ್ದೊಡನೆ ಆತನ ಕೋಪವೆಲ್ಲ ಕರಗಿ ಹೋಯಿತು. ಹೀಗೆ ಆಕೆ ಕಾಲುಹಿಡಿದು ಮನದನ್ನನ ಮುನಿಸನ್ನು ನಿವಾರಿಸಿದಳು, ವ॥ ಮತ್ತೊಬ್ಬಳು ತಾನು ಒಲಿದರೂ ಒಲಿಯದಂತೆ ಒಬ್ಬನೊಡನೆ ವರ್ತಿಸುವ ಮಗಳ

ಸಲೆ ಮುಂಗೈಯಿಂದಮೀ ಕುಂದದ ಬಳೆ ಮುಡಿಪಿಂ ಪೋಗದೀ ಕಂಚುಕಂ ಮುಂ।
ದಲೆಯಿಂದಂ ಪಿಂಗದಿರ್ಪೀ ತಲೆದೊಡವಿದು ನೀನೊಲ್ಲದಿರ್ಪಂದಮಂ ಕಾ॥
ದಲನೊಲ್ದೊಂದಂದಮಂ ಪೇಟಿವೆ ದಿಟದಿನವಂ ಮುನ್ನ ತಾನೊಲ್ಲದಿರ್ದಂ।
ದೆಲೆಗೇ ನೀನೆಲ್ಲರೊಂದಂಗದಿನಿರೆ ಬಱಿಮೆಯ್ಯಿಂದಮಿರ್ಪಂತುಟಕ್ಕುಂ॥ ೬೩

ಎನೆ ನಾಗರಿಕನೀ ಕುಂಟಣಿಯ ವಕ್ರಭಣಿತೆಯಾಕೆಗೆ ಶಿರಃಪ್ರಣಯಿಯಂ ಮಾಡಿತ್ತೆನುತ್ತುಂ ಬರೆ ಮುಂದೊಂದು ಕೆಂದಳಿರ ಪಂದರೊಳಗಣ ಬಾಳವೇರ ಕೇರ್ಗಟ್ಟಿನೋವರಿಯೊಳಗೆ

ದೂರಿಸಿ ಸುಯ್ದು ಕೈಯ ತಳಮಂ ಕದಪಿಂಗಿರದುಯ್ದುದಾತ್ತನಂ।
ಪಾರದೆ ಬಯ್ದು ಕಣ್ಬನಿಯಿನಂಶುಕಮಂ ನೆರೆ ತೊಯ್ದು ತಾಯ್ಗಿದಂ॥
ಸೈರಿಪಳೆಂದೆ ಕಾಯ್ದು ನೆಱಿಗೊಂಡಿರೆ ಪೂಗಣೆಯೈದುಮೊರ್ವಳಿ।
ನ್ನಾರಿದನಿಂಬುಕೆಯ್ದು ಕುಡುವನ್ನರೆನುತ್ತೆನಸುಂ ಪಲುಂಬಿದಳ್॥ ೬೪

ಆಗಳಾಕೆಯರ ಕೆಳದಿಯರ್ಕೈದೆ ವಂದು ಶಿಶಿರೋಪಚಾರಂಗಳಿಂದಂ ಸಂತೈಸಲೊಡರ್ಚುವಚ್ಚಿಗಮಂ ಕಂಡು

ಇನಿಯನ ತೋಳ ತಳ್ಪವನ ಕೂಟದೊಳುಣ್ಮುವ ಘರ್ಮಬಿಂದುವಾ॥
ತನ ನಱುಸುಯ್ಯ ಪೊಯ್ಲವನ ಸಾರ್ದ್ರವಿಲೋಕನಮಾತನೊಂದು ಸೋಂ।

ನಟನೆಯನ್ನು ಕಂಡುಕಂಡು, ತಲೆ ಚಿಟ್ಟೆನಿಸಿ ಹೀಗೆ ನುಡಿದಳು–೬೩. "ನಿನ್ನ ಮುಂಗೈಯಲ್ಲಿ ಕುಗ್ಗದಿರುವ ಬಳೆ, ಮುಡಿಪು ಹೋಗದಿರುವ ಈ ಕುಪ್ಪಸ, ಮುಂದಲೆಯಿಂದ ಅಗಲದಿರುವ ಈ ಶಿರೋಭೂಷಣ–ಇವೆಲ್ಲ ನೀನು ಒಲಿಯದ ಸ್ಥಿತಿಯನ್ನೂ ನಲ್ಲನು ಒಲಿದ ಸ್ಥಿತಿಯನ್ನೂ ಸ್ಪಷ್ಟವಾಗಿ ತಿಳಿಸುವುದಿಲ್ಲವೆ? ಅವನು ನಿನ್ನನ್ನು ಒಲಿಯದೆ ಇದ್ದು, ಎಲ್ಲರಂತೆ ನೀನೂ ಇದ್ದರೆ ಬರಿಮೈಯಿಂದ ಇದ್ದಂತೆಯೆ ಸರಿ" ವ॥ ಈ ಮಾತನ್ನು ಕೇಳಿ ನಾಗರಿಕನು, " ಈ ಕುಂಟಣಿಯ ವಕ್ರೋಕ್ತಿ ಆಕೆಗೆ ಶ್ರೇಷ್ಠ ಪ್ರಣಯಿಯನ್ನು (?) ಉಂಟುಮಾಡಿತು" ಎನ್ನುತ್ತ ಬರಲಾಗಿ, ಮುಂದೆ ಕೆಂದಳಿರಿನ ಹಂದರದೊಳಗಿನ ಬಾಳದ ಬೇರಿನ ಗೋಡೆಗಳುಳ್ಳ ಒಳಕೋಣೆಯಲ್ಲಿ–೬೪. ಚಿಂತಿಸಿ, ನಿಟ್ಟುಸಿರಿಟ್ಟು, ಅಂಗೈಮೇಲೆ ಕೆನ್ನೆಯೂರಿಕೊಂಡು, ಉದಾತ್ತನಾದ ತನ್ನ ಪ್ರಣಯಿಯು ಹಾದಿ ನೋಡುವುದನ್ನು ಬಿಟ್ಟು ಬಯ್ದು ಕಣ್ಣೀರಿನಿಂದ ಸೆರಗನ್ನೆಲ್ಲ ತೋಯಿಸಿಕೊಂಡು, ತಾಯಿಯ ಮೇಲೆ ಕೋಪಿಸಿ, ಮನ್ಮಥನ ಐದೂ ಹೂಬಾಣಗಳು ಮರ್ಮಕ್ಕೆ ನಟ್ಟಿರಲಾಗಿ, ಕಾಮಕಾತರೆಯೊಬ್ಬಳು "ಈ ದುಃಖವನ್ನು ತಪ್ಪಿಸುವವರು ಇನ್ನಾರು?" ಎಂದು ಹಲುಬಿದಳು. ವ॥ ಆಗ ಆಕೆಯ ಸಖಿಯರು ಬಳಿಗೆ ಬಂದು ಶಿಶಿರೋಪಚಾರಗಳಿಂದ ಆಕೆಯ ತಾಪವನ್ನು ಆರಿಸಲು ಪ್ರಯತ್ನಿಸಿದರು, ಅದನ್ನು ಕಂಡು (ಆಕೆ ಹೀಗೆಂದಳು)– ೬೫. ನನ್ನ ಪ್ರಿಯಕರನ ಅಪ್ಪುಗೆ, ಅವನ ಕೂಟದಲ್ಲಿ ಹೊಮ್ಮುವ ಬೆವರು, ಆತನ ಕಂಪುಳ್ಳ ಉಸಿರಿನ ಸೋಂಕು, ಪ್ರೇಮಾರ್ದ್ರವಾದ ನೋಟ, ಆತನ ಒಂದು ಸ್ಪರ್ಶ–ಇವು

ಕಿನಿತಿರದಾಱಿಪಂತೆನಗೆ ತಾಪಮನಾಱಿಸಲಾರವೀ ಮೃಣಾ ।
ಳನಿಕರವೀ ಹಿಮಾಂಬುಲವಮೀಯೆಲರೀ ಶಶಿಯೀ ವಿಲೇಪನಂ ॥ ೬೫

ಅಂತು ಮನದೊಳಿರ್ದವನೆ ಮರ್ದಾದವಳ ವಿರಹಜ್ವರಾವಸ್ಥೆಯಂ ಕಂಡು ಅನುಕೂಲನಿಂತೆಂದಂ:-

ನೆಟ್ಟನೆ ಕೂರ್ತ ನಲ್ಲರನಗಲ್ದಟಿಲಂ ತಳೆದಿರ್ಪ ಮಾಟ್ಕೆಯಿಂ ।
ಪುಟ್ಟದೆ ಪೋಪುದೊಳ್ಳಿತು ಮನುಷ್ಯಭವಾಂತರದಲ್ಲಿ ದೈವದಿಂ ॥
ಪುಟ್ಟಿದೊಡೇನೊ ಕೂರದಿರವೊಳ್ಳಿತು ಕೂರ್ತೊಡಮೇನಗಲ್ವುದುಂ ।
ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾಮರಂಗಳೊಳ್ ॥ ೬೬

ಎನೆ ವಿದೂಷಕನಿದು ಸತ್ತೊಡಲ್ಲದೆ ಪರಿವ ಕುತ್ತಮಲ್ಲಮೆಂದು ನಗಿಸುತ್ತುಂ ಪೋಗೆ, ಮತ್ತೊಂದು ಸುರತಕರಣಚಿತ್ರಸಂದರ್ಭವಪ್ಪ ಗರ್ಭಗೃಹದೊಳಗೆ ನಿರ್ಭರಪ್ರಣಯಪರವಶತೆಯಿಂ ನೆರೆವ ಕಾದಲರ ಕಾಮಕೇಳೀಕೂಜಿತದೊಳ್ ಕೂಡಿ ಕಿವಿಯಂ ಪಳಂಚಲೆವ ಮಂಚದ ಶಕುನಿಯಂಚೆಯ ಗಿಳಿಯ ಪುರುಳಿಯ ಪಾರಿವದ ಕೊರಲುಲಿಯ ದಳವುಳವನಾಲಿಸಿ ಪೆಣ್ಬುಯ್ಯಲನಾರಯ್ಯದೋಸರಿಪುದೆನ್ನ ಗಂಡುಗೂಸುತನಕ್ಕೆ ಪಸುಗೆಯಲ್ತೆಂದು ಪೀಠಮರ್ದಕಂಬೆರಸು ಪರಿದು ಗವಾಕ್ಷನಿಕ್ಷಿಪ್ತಾಕ್ಷನಾಗಿ ನೋಟ್ಪನ್ನೆಗಂ

ನನ್ನ ತಾಪವನ್ನು ಆರಿಸಬಲ್ಲುವೆ ಹೊರತು, ಈ ತಾವರೆಯ ನಾಳದ ರಾಶಿ, ಈ ತಂಪಾದ ನೀರಿನ ಸಂಚಯ, ಈ ಗಾಳಿ, ಈ ಚಂದ್ರ, ಈ ಲೇಪನಗಳು ಆರಿಸಬಲ್ಲುವೆ?" ವ॥ ಹೀಗೆ ಮನದಲ್ಲಿ ಇದ್ದವನೆ ಮುದ್ದು ಎಂಬವಸ್ಥೆಗೆ ಬಂದವಳ ವಿರಹಜ್ವರ ಸ್ಥಿತಿಯನ್ನು ಕಂಡು ಅನುಕೂಲ ನಾಯಕನು ಹೀಗೆ ನುಡಿದನು–೬೬. "ಒಲಿದ ನಲ್ಲರನ್ನು ಅಗಲಿ ದುಃಖಿಸುವುದಕ್ಕಿಂತಲೂ ಹುಟ್ಟದಿರುವುದೆ ಲೇಸು. ದೈವವಶದಿಂದ ಮನುಷ್ಯ ಜನ್ಮವನ್ನು ಪಡೆದರೇನಾಯಿತು? ಪ್ರೇಮಿಸದಿರುವುದೆ ಒಳ್ಳೆಯದು. ಪ್ರೇಮಿಸಿ ಅಗಲುವ ಪ್ರಸಂಗ ಬಂದುದೇ ಆದರೆ, ಆ ಅವಸ್ಥೆಯಲ್ಲಿ ಕಾಮನ ಬಾಧೆಗಳಿಗೆ ಈಡಾಗಿ ಸಂಕಟ ಪಡುವುದಕ್ಕಿಂತ ತಟ್ಟನೆ ಸತ್ತು ಹೋಗುವುದು ಲೇಸು." ವ॥ "ಹಾಗಾದರೆ ಸತ್ತಲ್ಲದೆ ಹರಿಯದ ರೋಗವಲ್ಲವೆ" ಎಂದು ವಿದೂಷಕನು ನಗಿಸುತ್ತ ಹೋಗಲಾಗಿ, ಮತ್ತೊಂದು ಸುರತಾಲಯದ ಗರ್ಭಗೃಹದೊಳಗೆ ಗಾಢವಾದ ಪ್ರಣಯ ಪರವಶತೆಯಿಂದ ರತಿಕ್ರೀಡೆಯಾಡುತ್ತಿರುವ ನಲ್ಲನಲ್ಲೆಯರ ಸುರತಧ್ವನಿ ಯೊಡನೆ ಮಂಚದ ಶಕುನಿಗಳ ಧ್ವನಿಯೂ ಬೆರೆತು ಕಿವಿ ತಾಕಲಾಗಿ, ಗಿಳಿಯಂತೆ, ಸಾರಿಕೆಯಂತೆ, ಪಾರಿವಾಳದಂತೆ ಸೀತ್ಕಾರ ಚೀತ್ಕಾರ ಮಾಡುವ ಹೆಣ್ಣಿನ ಕೊರಳುಲಿಯ ಹುಯಿಲನ್ನು ಕೇಳಿ "ಹೆಣ್ಣಿನ ಹುಯಿಲನ್ನು ಕೇಳಿ ವಿಚಾರಿಸದೆ ಹೋಗುವುದು ನನ್ನ ಗಂಡಸುತನಕ್ಕೆ ಭೂಷಣವಲ್ಲ" ವೆಂದು ಪೀಠಮರ್ದಕದೊಡನೆ ಹೋಗಿ ಗವಾಕ್ಷಿಯಲ್ಲಿ

ಕೆಂದೊಡೆ ಸಾಯಲುಜ್ಜುಗಿಸುವಾಸನಪಲ್ಲಟಿದಟ್ಟಿ ಬಾಯ್ಗೆ ವಂ ।
ದಂದದೊಳೆಂದೊಡೆಂದುದನೊಡಂಬಡಿಪಿಚ್ಚೆಯ ಬಿಚ್ಚತಿಕ್ಕೆ ನಾ ॥
ಣೆಂದಮಗಲ್ದು ಗಂಡುವೆಸದೊಳ್ ಬಸದಪ್ಪ ಪೊಡರ್ಪುರ್ಮ ರೂಪು ಮೈ ।
ಗುಂದದ ಚೆಂದವಿಂಗೊರಲ ಮೆಲ್ಲುಲಿಯೊಪ್ಪಿದುದೊಲ್ವ ಕೂಟದೊಳ್ ॥ ೬೭

ಮೊಱಿಯಂ ಮೀಱುವ ಮಾತು ಕೆಂದೆಸಪ ನಾಣ್ವಾಣಂ ತನಿತ್ತಿಂಬುಮೈ ।
ಮಱಿಪಂ ಪುಟ್ಟುವ ಸೊರ್ಕು ಸೂಟ್ಟಡೆದ ಕೂಟಂ ಪಲ್ಲಟಂಬಾಯ್ವ ಬಾ ॥
ಯ್ಮಱುಕಂ ತಾಂಗಿಗೆಟಲ್ವ ನಾಣೆಲಿತನಂ ಬೆಂಡೇಟ್ವ ಕಣ್ ಬೀಯದ ।
ಳ್ಕಱಕೊಳಂ ಪಾಸಿಗೆ ನಾಂಬ ಮುಂಬದಮಳುಂಬಂ ಕೂಟದೊಳ್ ನಲ್ಲರಾ॥ ೬೮

ನಾಣ್ಣುಣ್ಣೆ ಸೋಲದೊದವಿಂ ।
ಕಣ್ಣಸು ಮುಗುಳ್ದಿಸೆಯ ನಸೆಯನೆಸಗುವ ಪಲವುಂ ॥
ಸುಣ್ಣುಡಿ ಪಸರಿಸೆ ಮನದಿಂ ।
ಜಾಣ್ಣುಡಿಗೊಳೆ ತೊಡರ್ದರಿನಿಯ ಕೂಟದೊಳಿನಿಯರ್ ॥ ೬೯

ಅನಂತರಮೊಡರ್ಚಿದ ಪಸಂತಸಖಸುಖಪರಮಕೋಟಿಯೆನಿಸಿದ ರತಾಂತಸುಖದೊಳಿಕಾಸುಂ ಬೇಗಮಿರೆ,

ಹರವಸಮೊಯ್ಯನಾಱಿ ಮುಗುಳ್ದಕ್ಕಿಗಳೆಟ್ವಱಿ ಕೂಡೆ ಮೆಯ್ಯೊಳು ।
ಬ್ಬರಿಸಿದ ರೋಮರಾಜಿ ನಸುವಕ್ಕೆಗೆ ಸಾಱಿ ಬಱಲ್ದ ಮೆಯ್ಗೆ ಚೇ ॥

ಕಣ್ಣಿಟ್ಟು ನೋಡಲು–೬೭. ಸಂಭೋಗಿಸಿದೊಡನೆ ಸಾಯುತೊಡಗುವ, ಬೇರೆಯ ರತಿಬಂಧದ ಬಯಕೆ ಬಾಯಿಗೆ ಬಂದೊಡನೆ ಕೂಡಲೆ ಒಪ್ಪಿಕೊಳ್ಳುವ, ಕಾತರತೆಯ ರಭಸ ಮಿಗಿಲಾಗಿ ನಾಚುಗೆಯನ್ನು ತೊಲಗುವ, ಗಂಡುಸಿನಂತೆ ಆಸಕ್ತಿಯಿಂದ ರಭಸವೇರುವ, ರೂಪುಗೆಡದ ಮೈಯ ಚೆಲುವು ಹಾಗು ಇಂಪಾದ ಕಂಠಧ್ವನಿ ಒಲವಿನ ಕೂಟದಲ್ಲಿ ಒಪ್ಪಿದುವು. ೬೮. ಚೀತ್ಕಾರವನ್ನು ಮೀರುವ ಮಾತು, ನಸೆಯೇರುತ್ತಿರುವ ಕಾಮೇಂದ್ರಿಯ, ಹಿತವಾದ ಮೈಮರೆವಿನ ಮಾದಕತೆ, ಮರಳಿ ಮರಳಿ ನಡೆಯುವ ಕೂಟ, ಆಸನ ಪಲ್ಲಟಿಸಿದ ಸಲಕ್ಕೊಮ್ಮೆ ಮೊರೆಯಿಡುವ ಬಾಯಿ, ಸ್ಪರ್ಶಕ್ಕೊಮ್ಮೆ ಹಾಯ್ದುಡುವ ಲಜ್ಜಾಹೀನತೆ, ತೇಲುವ ಕಣ್ಣು, ಕುಗ್ಗದ ಪ್ರಣಯ, ಹಾಸುಗೆಯನ್ನು ನೆನೆಯಿಸುವ ಮದನ ದ್ರವ–ಕೂಟದಲ್ಲಿ ಇವೆಲ್ಲ ಅತ್ಯಧಿಕವಾದುವು. ೬೯. ಲಜ್ಜೆ ನುಣುಚಿಹೋಗಿ, ಪರವಶತೆಯಿಂದ ಕಣ್ಣು ನಸುಮುಚ್ಚಿ ರತಿಯನ್ನು ಬೆಳೆಸುವ ಹಲವಾರು ಸವಿಮಾತು ಕಳೆಯೇರುತ್ತಿರಲಾಗಿ ನಲ್ಲ–ನಲ್ಲೆಯರು ಸವಿಯಾದ ಕೂಟದಲ್ಲಿ ಕುಶಲತೆಯಿಂದ ತೊಡಗಿದರು. ವ॥ ಬಳಿಕ ಮದನ ಸುಖದ ಪರಮಸೀಮೆಯೆನಿಸಿದ ರತಾಂತಸುಖದಲ್ಲಿ ಸ್ವಲ್ಪ ಸಮಯವಿದ್ದು– ೭೦. ಸುಖದ ಮೂರ್ಛೆ ಮೆಲ್ಲನೆ ತಿಳಿದು, ಮುಚ್ಚಿದ ಕಣ್ಣು ಎಚ್ಚರವಾಗುತ್ತ, ಮೈತುಂಬ ಉಬ್ಬರಿಸಿ ಎದ್ದ ನವಿರು ನಸುವೆ ತಗ್ಗಿ ಬಾಗಲಾಗಿ, ಸುರತ ಶ್ರಮ ದಿಂದ ಬಳಲಿದ ಮೈ ಮರಳಿ ಚೇತರಿಸಿಕೊಳ್ಳುತ್ತ ಬಾಯಿ ಮತ್ತೆ ಬಯಕೆಯಿಂದ

ತರಣೆಯಲರ್ಚೆ ಬಾಯ್ಗೆ ಬಜಿಪಂ ಬರಿಸುತ್ತಿರೆ ಪೋದ ಕೂಟಮಂ ।
ಪರಿವಿಡಿಗೆಯ್ಯೆ ಚಿತ್ತಮೆಳಸಿತ್ತು ರತಾಂತಸುಖಾಂತಮೋಪರಾ ॥ ೭೦

ಆಗಳಲ್ಲಿಂ ತಳರ್ದು ಬರೆ ವಿಟನಿದೇಕೆ ತಡೆದಿರೆನೆ, ಪೀಠಮರ್ದಕನುಜ್ಜುಗಿಸಿದ ಕಜ್ಜಮಂ ಕಡೆಯೆಯ್ದಿಸಲೆಂಬುದುಂ, ವಿದೂಷಕನಿವಂದಿರ ಕೂಟಕ್ಕೆ ಬೇಟಮೆ ಕಡೆಯೆನೆ, ರಾಜಮನೋಜಂ ಮುಗುಳ್ನಗೆವೆರಸು

ಎಂತೆಳಸಿರ್ದರಿರ್ದ ಪರಿಯಿಂದಮೆ ಕೂಟಮದಿಂಬುಕೆಯ್ದುದೋ ।
ರಂತಿರೆ ಮೆಯ್ಯೊಳೆಲ್ಲಿ ದೊರೆಕೊಂಡೊಡಮಲ್ಲಿಯೆ ಚುಂಬನಂ ಕರಂ ॥
ಸಂತಸಮೀವುದಾವೆಡೆಯುಗುರ್ ತೊಡರ್ದಾಯೆಡೆ ರೇಖೆ ಪತ್ತಿ ಚೆ ।
ಲ್ವಂ ತಳೆದಿರ್ಪುದೆಂದೊಡದನೇವೆಸಗೊಂಡಪೆ ಬೇಟದಾಟಮಂ ॥ ೭೧

ಎಂದು ನುಡಿಯುತ್ತುಂ ಬರ್ಪನ್ನೆಗಂ, ಮನೋಹರಕ್ರೀಡಾಗಾರದ್ವಾರದೇಶದೊಳ್ ತಾರುಣ್ಯವತಿ ಅತಿಮಧುರಪುರುಷಾಯತನಿಧುವನಪರಂಪರಾಪರಿಮಳಿತಮಾದ ಶರೀರದ ಸಹಜಸುರಭಿಗಂಧಮಂ ಗಂಧವಹಂಗೊಪ್ಪಿಸಿಂಗುಜುವಂತಿರೆ ಲಜೆಯಿಂದಿರೆ ಕಂಡು

ಚುಂಬಿಸಿ ಬೀಗಿ ಬೆಳ್ಪಡರ್ದ ಬಾಯ್ದೆಱೆಯಾಳಿಸಿದಪ್ಪಿನೊತ್ತಿನಿಂ ।
ದಂ ಬಿಡೆ ಗುಜ್ಜುಗೊಂಡ ಮೊಲೆ ಪೊರ್ಕುಟಿಯಂದಮೆ ಹಂತಿದಪ್ಪಿ ತಾ॥
ಱುಂಬಟೆಯುಂ ತೆರಳ್ದ ಕುರುಳುಣ್ಮೆ ಬೆಮರ್ ನಸುಬಾಲನಾದ ಬೊ ।
ಟ್ಟೆಂಬಿವು ಕೂಟಕೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ ॥ ೭೨

ತುಡಿಯುತ್ತಿರಲಾಗಿ, ಈ ಮುಂಚೆ ನಡೆದು ಹೋದ ಕೂಟವನ್ನು ಮತ್ತೆ ಮೊದಲಿಂದ ಉಪಕ್ರಮಿಸುವುದಕ್ಕೆ ರತಾಂತಸುಖದ ಮನಸ್ಸು ಬಯಸುತಿತ್ತು. ವ॥ ಆಗ ಅಲ್ಲಿಂದ ಹೊರಟು ಬಂದ ಪೀಠಮರ್ದಕನನ್ನು ನೋಡಿ ವಿಟನು, "ಇಷ್ಟೇಕೆ ತಡಮಾಡಿದಿರಿ?" ಎಂದು ಕೇಳಿದನು. ಪೀಠಮರ್ದಕನು, "ಆರಂಭವಾದ ಕೆಲಸ ಮುಗಿಸುವುದಕ್ಕೆ" ಎನ್ನಲು ವಿಟನು, "ಇವರ ಕೂಟಕ್ಕೆ ಪ್ರಣಯವೇ ಕಡೆ" ಎಂದನು. ರಾಜಮನ್ಮಥನು ಮುಗುಳ್ನಗುತ್ತ ಹೀಗೆಂದನು–೭೧. "ಬಯಕೆ ಕೆರಳಿದಾಗ ಆಗಿಂದಾಗಲೆ ಇದ್ದಂತೆಯೆ ಕೂಟವಾದರೆ ಬಲು ಸೊಗಸು; ಮೈಯಲ್ಲಿ ಎಲ್ಲೆಂದರಲ್ಲಿ ಚುಂಬನ ತುಂಬ ಸುಖಕೊಡುವುದು; ಯಾವ ಜಾಗದಲ್ಲಿ ಉಗುರು ತಾಕುವುದೊ ಅಲ್ಲಿ ರೇಖೆ ಮೂಡಿ ಚೆಲುವನ್ನು ತಾಳುವುದು ಎಂದ ಮೇಲೆ ಪ್ರಣಯದ ಆಟವನ್ನು ಏನೆಂದು ಕೇಳುವೆ ?". ವ॥ ಹೀಗೆ ನುಡಿಯುತ್ತ ಬರುವಾಗ ಮನಮೋಹಕವಾದ ಲೀಲಾಗೃಹದ ಬಾಗಿಲೆಡೆಯಲ್ಲಿ ನವಯುವತಿಯೊಬ್ಬಳು ಅತಿ ಸವಿಯಾದ ಪುರುಷಾಯಿತ ಬಂಧದಿಂದ ಸುರತ ಹೊಂದಿ ತನ್ನ ದೇಹದ ಸಹಜ ಪರಿಮಳದೊಡನೆ ಅಳವಡಿಸಿಕೊಂಡ ಪರಿಮಳವನ್ನು ಬೆರಸಿ ಗಾಳಿಗೆ ಒಪ್ಪಿಸುವಂತೆ ಲಜ್ಜೆಯಿಂದ ಇರಲಾಗಿ ಅದನ್ನು ಕಂಡು– ೭೨. "ಚುಂಬನದಿಂದ ಹಿಗ್ಗಿ ಬಿಳಿಚಿಕೊಂಡ ತುಟಿ, ಬಿಗಿದಪ್ಪಿಕೊಂಡು ಒತ್ತಿದುದರಿಂದ ನಜ್ಜುಗುಜ್ಜಾದ ಮೊಲೆ, ರತಿಕೇಳಿಯ ರಭಸದಲ್ಲಿ ಓರಣಗೆಟ್ಟು ಕೆದರಿಕೊಂಡ ಕೂದಲು ಬೆವರು ಹೊಮ್ಮಿ ನಸುವೆ ಮಸುಳಿಸಿದ ಹಣೆ

ಎಂಬ ನಾಗರಿಕನುಕ್ತಿಗೆ ಚತುರೋಕ್ತಿಚತುರ್ಮುಖಂ ಮೆಚ್ಚುತ್ತುಂ ಪೋಗೆ ಮುಂದೊಂದು ವಿಶಾಲಶಾಲಾಂಗಣದ ಬಳ್ಳಿಮಾವಿನ ಕಾವಣದೊಳಗಣ ಅಗಲ್ದ ಸಿಂದುರದ ಜಗಲಿಯೊಳ್ ಗೊಟ್ಟಿಯಿಂದಿರ್ದ ವಿವಿಧನಾಯಿಕಾ ನಾಯಕಭೇದದ ಮಿಂಡರೆಳವೆಂಡಿರ ತಂಡಮಂ ಮೈಗರೆದು ನೋಟ್ಪನ್ನೆಗ ಮೊರ್ವಳ್ ಕುಚಕಲಶಕ್ಕೆ ತನ್ನ ತಳಮಂ ಕೆಂದಳಿರ್ಮಾಡಿ

ಉನ್ನತಿಯಿಂದುತ್ಕಂಠತೆ।
ಯನ್ನೆರೆ ನಿನಗೀವುದಿವರ್ಗೆ ಮಾಡವೆ ಕೊರ್ವಿಂ॥
ನಿನ್ನನೆರ್ದೆಗಿಡಿಪುವುಟಿದರ।
ನಿನ್ನೆರ್ದೆಗಿಡಿಸವೆ ಲತಾಂಗಿ ಕಠಿನಕುಚಂಗಳ್॥ ೭೩

ಎಂದು ರೂಪಸೌಭಾಗ್ಯಂಗಳಂ ಪೊಗೞೆ ಮತ್ತೊರ್ವಳ್ ಪಲವುಂದೆವಸಮಗಲ್ದಿರ್ದು ಬಂದು ತನ್ನ ಕೆಳದಿಯಂ ತಿಳಿಪಿದೆಳೆಯನಂ ನೋಡಿ,

ಕಂದಿದಳುಟಿದೊಡೆ ಬೆಳ್ಪಿನೊ।
ಳೊಂದಿದಳೊಂದದೊಡೆ ಬಂದೊಡತಿರಾಗಕ್ಕಂ॥
ಸಂದಳಿವಳ್ ಮೂವಣ್ಣಂ।
ಬಂದಳ್ ನಿಷ್ಕರುಣ ತರುಣಿ ನಿಷ್ಕಾರಣದಿಂ॥ ೭೪

ಬೊಟ್ಟು–ಇವು ಈ ಬಳ್ಳಿಮೈಯವಳ ಸುರತಸುಖವನ್ನು ಬಹಿರಂಗಗೊಳಿಸುವುವು." ವ॥ ಎಂಬ ನಾಗರೀಕನ ಮಾತಿಗೆ ಚತುರೋಕ್ತಿನಿಪುಣನಾದ ಅರಸನು ಮೆಚ್ಚುತ್ತ ಮುನ್ನಡೆದನು. ಮುಂದೆ ವಿಸ್ತಾರವಾದ ಅಂಗಳದ ಬಳ್ಳಿಮಾವಿನ ಲತಾಮಂಡಪದೊಳಗೆ ಅಗಲವಾದ ಕುಂಕುಮದ ಜಗಲಿಯ ಮೇಲೆ ಗೋಷ್ಠಿ ನಡೆಸುತ್ತಿರುವ ನಾನಾಬಗೆಯ ನಾಯಿಕಾ–ನಾಯಕ ವರ್ಗದ ವಿಟರು ನವತರುಣಿಯರ ಹಿಂಡನ್ನು ಅಡಗಿಕೊಂಡು ಕದ್ದು ನೋಡುತ್ತಿದ್ದರು. ಆಗ ಒಬ್ಬಳು ಕಲಶದಂತಹ ಮೊಲೆಗಳಿಗೆ ಕೆಂದಳಿರಂತಿರುವ ಕೈಯಿಟ್ಟು–೭೩. "ಎಲೈ ಬಳ್ಳಿಮೈಯ ಹೆಣ್ಣೆ, ಉನ್ನತವಾಗಿ ಬೆಳೆದ ನಿನ್ನ ಕರ್ಕಶಕುಚಗಳು ಉತ್ಕಂಠತೆಯನ್ನು ನಿನಗೆ ಮಾಡಿದಂತೆ ಇವರಿಗೂ ಮಾಡದಿರುವುವೆ? ಕೊಬ್ಬಿ ಕೊಬ್ಬಿ ನಿನ್ನ ಎದೆಯನ್ನೆ ಕೆಡಿಸುವುವು; ಇನ್ನು ಹೆರವರ ಎದೆಗಳನ್ನು ಕೆಡಿಸವೆ?" ವ॥ ಎಂದು ಆಕೆಯ ರೂಪದ ಸೌಭಾಗ್ಯಗಳನ್ನು ಹೊಗಳಿದಳು. ಇನ್ನೊಂದೆಡೆಗೆ ಒಬ್ಬಳು ಎಷ್ಟೊ ದಿನಗಳ ಅಗಲಿಕೆಯ ನಂತರ ಈಗ ಬಂದು ತನ್ನ ಗೆಳತಿಯನ್ನು ಸಮಾಧಾನಪಡಿಸುತ್ತಿರುವ ಯುವಕನನ್ನು ನೋಡಿ (ಹೀಗೆ ನುಡಿದಳು)– ೭೪. "ನಿರ್ದಯನೆ, ನಿನ್ನ ಅಗಲಿಕೆಯಿಂದ ಇವಳು ಕೊರಗಿ ಕಪ್ಪಾದಳು; ಸಹವಾಸವನ್ನು ಪಡೆಯದೆ ಬಿಳಿಚಿಕೊಂಡಳು; ಈಗ ನೀನು ಬಂದುದರಿಂದ "ಅತಿರಾಗ" (೧. ಅತ್ಯಂತ ಸಂತೋಷ. ೨. ಕೆಂಪುವರ್ಣ) ವನ್ನು ಪಡೆದಳು. ನಿಷ್ಕಾರಣವಾಗಿ ಅವಳು ಮೂರು ಬಣ್ಣದಲ್ಲಿ ಹಾಯ್ದು ಬಂದಳು.

ಎನೆ ಮತ್ತೊರ್ವಂ ಪೂರ್ವಾನುಭವಮಂ ನೆನೆದು

ಒಸೆದಪ್ಪುವ ಪದದೊಳ್ ಮೆಯ್ ।
ನಸುಸೋಂಕದ ಮುನ್ನಮೆಡೆಯೊಳೆಡಗುಡದವೊಲು ॥
ರ್ವಿಸುವ ಪುಳಕಕ್ಕೆ ಕಂಟಕ ।
ವೆಸರಂ ಕೊಟ್ಟಜನ ಸುಜನತೆಗೆ ಬೆಱಗಪ್ಪೆಂ ॥ ೭೫

ಎಂದು ಕೆಳದಿಯೊಳ್ ನುಡಿದಂ. ಪೆಱತೊರ್ವಳ್
ಮಳಯಜರೇಣುಜಾಲಪರಿಪಾಂಡುರಮಾಯ್ತು ಕುಚದ್ವಯಂ ವಿಕ ।
ಜ್ಜಳಕೃತರೇಖಿಕಾರಚನಮಾದುದು ಲೋಚನಯುಗ್ಮಮೈದೆ ನಿ ॥
ರ್ಗಳಿತಸರಾಗಭಾವಮೆನಿಸಿತ್ತು ರದಚ್ಛದಮೀಗಳಿಂದುಮಂ ।
ಡಳಲಲಿತಾಸ್ಯೆ ಪೇಟ್ ನಿಜಮನಃಪ್ರಿಯನಪ್ಪಿದನೋ ಅಗಲ್ದನೋ ॥ ೭೬

ಎಂದು ಮೇಳದಾಳಿಯೊಳ್ ಆಳಿಯೊರ್ವಳ್ ನುಡಿದಳನ್ನೆಗಮೊರ್ವಂ ನಿಜಮನೋಹರಿಯ ಸುರತಭಾವಂಗಳಂ ಭಾವಿಸಿ

ಸುಸಿಲ ಸೊಕಕ್ಕೆ ಸೊರ್ಕಡರೆ ಮೆಯ್ಯಳವಾರಿದ ತೋಳ ತಳ್ಪನಾ ।
ಳಿಸುವಿರದೊಟ್ಟಮಂ ಸವಿವ ಬಾಯ್ಬಿಡುತಂದೊಡೆ ಮೆಚ್ಚಿದಂತೆ ಚುಂ ॥
ಬಿಸುವಲರ್ದಿರ್ದ ಕಣ್ಮುಗುಳ್ದೊಡೆಚ್ಚಱಿಸುತ್ತುಮಲಂಪಿನಿಂ ನಿರೀ ।
ಕ್ಷಿಸುವವಳೊಂದು ಗೆಯ್ತಮದು ಬೈತವೊಲಿರ್ದಪುದೆನ್ನ ಚಿತ್ತದೊಳ್ ॥ ೭೭

(ಕಷ್ಟಕ್ಕೊಳಗಾದಳು)" ವ॥ ಮತ್ತೊಬ್ಬನು ತನ್ನ ಈ ಮೊದಲಿನ ಅನುಭವವನ್ನು ನೆನಸಿಕೊಂಡು–೭೫. "ಒಲವಿನಿಂದ ಅಪ್ಪಿಕೊಳ್ಳಬೇಕೆಂದಾಗ ಇನ್ನೂ ಮೈ ಸೋಕಿತೊ ಇಲ್ಲವೊ ಎಂಬಷ್ಟರಲ್ಲಿ ಎಡೆಬಿಡದೆ ಉಬ್ಬರಿಸಿ ಏಳುವ ರೋಮಾಂಚಗಳು! ಇವುಗಳಿಗೆ "ಕಂಟಕ" ವೆಂಬ ಹೆಸರಿತ್ತವರ ಸೌಜನ್ಯಕ್ಕೆ ಬೆರಗಾಗುತ್ತೇನೆ." ವ॥ ಎಂದು ಗೆಳತಿಯೊಡನೆ ನುಡಿದನು, ಇನ್ನೊಬ್ಬಳು–೭೬. "ನಿನ್ನ ಎರಡು ಮೊಲೆಗಳು ಶ್ರೀಗಂಧದ ಹುಡಿಯಿಂದ ಬೆಳ್ಳಗಾಗಿವೆ, ಕಣ್ಣಿನಲ್ಲಿ ಕಾಡಿಗೆಯ ರೇಖೆಯೆಲ್ಲ ಮಸುಳಿಸಿ ಹೋಗಿದೆ; ತುಟಿಯು ತನ್ನ ಕೆಂಬಣ್ಣವನ್ನು ಕಳೆದುಕೊಂಡು ನಿಂತಿದೆ; ಎಲೈ ಚಂದ್ರಮುಖಿಯೆ, ನಿನ್ನ ಮನದನ್ನನೇನು ಅಪ್ಪಿಕೊಂಡನೊ ಅಥವಾ ಅಗಲಿ ಹೋದನೊ?" ವ॥ ಎಂದು ತನ್ನ ಮೇಳದ ಸಖಿಗೆ ನುಡಿದಳು. ಇನ್ನೊಬ್ಬನು ತನ್ನ ಮನದನ್ನೆಯ ಸುರತಭಾವಗಳನ್ನು ನೆನೆದು– ೭೭. "ಸುರತದ ಸುಖದಿಂದ ಮೂರ್ಛೆಯೊದಗಿ ನನ್ನ ಮೈ ಜೋಲಲು ತನ್ನ ತೋಳಪ್ಪುಗೆಯಿಂದ ಹಿಡಿದುಕೊಳ್ಳುವ, ತುಟಿಯನ್ನು ಸವಿಯುವ, ಬಾಯಿ ತೆರೆದೊಡನೆ ಮೆಚ್ಚಿ ಮುದ್ದಿಡುವ ಅರಳಿದ ಕಣ್ಣು ಮತ್ತೆ ಮುಚ್ಚಿಕೊಳ್ಳಲು ಎಚ್ಚರಿಸುತ್ತ, ಸಂತೋಷದಿಂದ ನನ್ನನ್ನು ನಿರೀಕ್ಷಿಸುವ ಅವಳ ಆ ಲೀಲೆಯು ನನ್ನ ಮನಸ್ಸಿನಲ್ಲಿ ನಿಧಿಯಂತೆ ಹೂತು

ಎಂದು ಮನದನ್ನಳಪ್ಪ ಕೆಳದಿಗುಸಿರ್ದಂದು ಸಿಪ್ಪಡಂಬಡೆದನನ್ನೆಗಂ ಬಿನ್ನನಿರ್ದ ವಯಸ್ಯೆಯಾಸ್ಯಮಂ ಅವನೊಡನಾಡಿ ಕಂಡಿದೇನೆನೆ,

ಅವನೆತ್ತಾನೆತ್ತ ಕಣ್ಬೇಟದ ಸಮುನಿಪುದೆತ್ತೇಸುವಾರ್ದಿರ್ಪ ಚಿತ್ತೋ ।
ದ್ಭವನೆತ್ತೀ ಚೈತ್ರಮೆತ್ತೊಯ್ಯನೆ ತಳರ್ವೆಲರೆತ್ತುದ್ಯದುದ್ಯಾನಮೆತ್ತು ॥
ಣ್ಮುವ ಗೀತಾರಾವಮೆತ್ತುಜ್ಜ್ವಳಿಸುವ ಪೊಸವೆಳ್ದಿಂಗಳೆತ್ತೆನ್ನ ತಾರು ।
ಣ್ಯವಿಡಂಬಂ ತಾನಿದೆತ್ತೊತ್ತರಿಪ ವಿಧಿಯುಮೆತ್ತೇನನೇನೆಂಬೆನೀಗಳ್ ॥ ೭೮

ಎಂದಾಸಱಾದ ಬೇಸಱಿಂ ತೋಱಿ ಮತ್ತೊರ್ವಳ್ ಪುರುಡಿನಿಂ ಪುಟ್ಟಿದ ಮುಳಿಸಂ ತಿಳಿಪ ಲೊಡರಿಸಿದ ವಲ್ಲಭಂಗೆಡೆಗುಡದೆ ಬಿಡುನುಡಿಯಂ ನುಡಿದು ಕಳೆದು ಬಱಿಯಂ ಕಳವಳಿಸಿ ಕೆಳದಿಗೇವೆ ನೆಂಬುದುಮವಳೆಣಿಕೆದಪ್ಪಿದಂದಕ್ಕೆ ತಕ್ಕುದನಿಂತೆಂದಳ್ :–

ಪತ್ತುಗೆಗೆಟ್ಟುಮೊಂದು ನುಡಿಗೊಂಬತನೆಂದೆರಡೆಂಟನೀಗಳಾ ।
ನೆತ್ತಱಿವಂದಮೆಂಬ ತೆಱದಿರ್ದಪೆ ನಲ್ಲನ ತಾಯ ತಂದೆಯ ॥
ಚ್ಚೊತ್ತಿದ ಮೂಱು ಮೋಹಮುಮನೇೞಿಲೆವೋಗದೆ ಕಲ್ತೆ ನಾಲ್ಕುಸೂೞ್ ।
ಸತ್ತೊಡದಾರೆಯೆಂದಱಿಪಲೈದೊಲವೆಯ್ದುಗುಮಿನ್ನೆಗಂ ಪ್ರಿಯಂ ॥ ೭೯

ಕೊಂಡಿದೆ" ವ॥ ಎಂದು ಮನಮೆಚ್ಚಿದ ಸಖಿಗೆ ಹೇಳಿದನು. ಖಿನ್ನಳಾಗಿ ಸುಮ್ಮನಿದ್ದ ಸಖಿಯ ಮುಖವನ್ನು ಕಂಡು ಅವಳ ಒಡನಾಡಿ "ಇದೇನು ಹೀಗೆ" ಎನ್ನಲಾಗಿ ಅವಳು– ೭೮. "ಅವನೆತ್ತ ನಾನೆತ್ತ? ಕಂಡು ಪ್ರಣಯವಾಗುವುದೆತ್ತ, ಬಾಣಾಘಾತ ಮಾಡಲೆಳಸಿದ ಕಾಮನೆತ್ತ ? ಮತ್ತು ಈ ವಸಂತವೆತ್ತ ? ಈ ಸುಳಿಗಾಳಿಯೆತ್ತ ? ಉದ್ಯಾನವೆತ್ತ? ಹೊಮ್ಮಿ ಬರುವ ಗೀತಧ್ವನಿಯೆತ್ತ? ಉಜ್ವಲವಾದ ಹೊಸ ಬೆಳ್ದಿಂ ಗಳೆತ್ತ? ನನ್ನ ಯೌವನದ ವಿಡಂಬವೆತ್ತ ? ತಳ್ಳಿಬಿಡುವ ಈ ದೈವವೆತ್ತ ? ಈಗ ನನ್ನ ಸ್ಥಿತಿಯನ್ನು ಏನೆಂದು ಹೇಳಲಿ?" ವ॥ ಎಂದು ಆಯಾಸಗೊಳಿಸುವ ಬೇಸರವನ್ನು ಪ್ರಕಟಿಸಿದಳು. ಮತ್ತೊಬ್ಬಳು ಹೇವಕ್ಕೆ ಬಿದ್ದು ಕೋಪಗೊಂಡಾಗ ತನ್ನನ್ನು ಸಮಾಧಾನಗೊಳಿಸತೊಡಗಿದ ಪ್ರಿಯಕರನಿಗೆ ಅವಕಾಶವೀಯದೆ ನಿಷ್ಠುರವಾಗಿ ಮಾತಾಡಿ ಕಳಿಸಿ, ಅನಂತರ ಕಳವಳಗೊಂಡು ಗೆಳತಿಯ ಬಳಿಗೆ ಬಂದು "ಈಗೇನು ಮಾಡಲಿ?" ಎಂದಳು. ಮಿತಿಮೀರಿದ ಅವಳ ವರ್ತನೆಗೆ ತಕ್ಕಂತೆ ಆ ಗೆಳತಿ ಹೀಗೆ ನುಡಿದಳು– ೭೯. "ಸಂಬಂಧ ಹರಿದುಕೊಂಡು ಒಂದು ಮಾತಿಗೆ ಒಂಬತ್ತೆಂದು ಹತ್ತಾರು ಮಾತುಗಳನ್ನಾಡಿ ಈಗ ಏನೂ ತಿಳಿಯದವಳಂತೆ ವರ್ತಿಸುತ್ತಿರುವೆ. ನಲ್ಲನ ತಾಯಿ ತಂದೆಯ– ಈ ಮೂರೂ ಮೋಹವನ್ನು ಸಹಜವಾಗಿಯೆ ಕಲಿತೆ ಯೇಳು. ನಾಲ್ಕು ಸಲ ಸತ್ತು ಹುಟ್ಟಿ ಬಂದರೂ ನೀನು ಒಲವನ್ನು ಅರಿಯಲಾರೆ, ಒಲ ವನ್ನು ನಿಜವಾಗಿ ಅರಿತಾಗಲೆ ನಿನಗೆ ಪ್ರಿಯನು ದೊರೆಯುವನು. [ಪದ್ಯದಲ್ಲಿ ಮೂರರಿಂದ ಏಳರವರೆಗೆ ಸಂಖ್ಯೆಗಳ ಅರ್ಥವನ್ನಿಟ್ಟು ಶ್ಲೇಷೆ ಮಾಡಲಾಗಿದೆ. ಕೊನೆಯ

ಅವಳುಕ್ತಿವಕ್ರಿಮಕ್ಕೆ ಸೂಕ್ತಿರತ್ನಾಕರಂ ಮನದೊಳ್ ಮೆಚ್ಚಿ ಮತ್ತೊರ್ವನಾ ಪ್ರಸ್ತುತಕ್ಕಿಂತೆಂದಂ :–

ಒಲವೊಳಗಾಗೆ ದೈವದಿನದಂ ಬಡವಂ ನಿಧಿಗಂಡ ಮಾಟ್ಕಿಯಿಂ ।
ಸಲಪಲುಮೋವಲುಂ ಸುಖಮನಾರ್ಜಿಸಲುಂ ಬಗೆದಾರದೊಳ್ಪನೊ ॥
ಕ್ಕಲಿಸಿಕೆಯಂ ನಿಮಿರ್ಚಿ ಪುರುಡಂ ಪೊಸೆದೆಯ್ದೆ ಪೊಲಂಬುದಪ್ಪಿ ಕೋ ।
ಟಲೆಗೊಳಗಪ್ಪ ಪಾಟ್ಮನದ ಮಾನಸರಂ ಸುಡು ಸಂದ ಗೊಡ್ಡರಂ ॥ ೮೦

ಅದಲ್ಲದೆಯುಂ,

ಸವಿ ತವದನ್ನೆಗಂ ಮನದ ಪತ್ತುಗೆಗಳ್ ಕಿಡದನ್ನೆಗಂ ಪೆಱಂ ।
ಗವಳೆಡೆಯಾಗದನ್ನೆಗಮೊಡಂಬಡುಮೇವಮುಮಿಲ್ಲದನ್ನೆಗಂ ॥
ತವಿಪುದು ತನ್ನನೊಪ್ಪಿಸುವುದೆಂದುದನೆಂಬುದು ಕೂರೆ ಕೂರ್ಪುದೋ ।
ಱುವುದು ಪಲುಂಬಿ ಪೋದ ಬಟಿಕಂ ಪರೆಪುತ್ತರೆಯಾಗಯಂಗಳಂ ॥ ೮೧

ಅದಲ್ಲದೆಯುಮೊರ್ವಳೆರಡಱೆಯಲೀಯದೆ ಕಡುಗೂರ್ತ ತನ್ನ ಕೆಳದಿಯ ಸಂಭೋಗಸುಖಾನುಭವಸಮುದಯಮಂ ಬೆಸಗೊಳ್ವುದುಮಿಂತೆಂದಳ್–

ಇನಿಯನ ಚೆಲ್ವನೀಕ್ಷಿಪ ಸೊಕಂ ನುಡಿಗೇಳ್ವಳಿಪಂ ನಿಮಿರ್ಚದಾ ।
ತನ ನುಡಿಯೊಳ್ಪದಪ್ಪನಪವರ್ತಿಪುದಪ್ಪಿನದೊಂದು ನೇರ್ಪು ಚುಂ ॥

ಎರಡು ಪಾದಗಳ ಅರ್ಥ ಕ್ಲಿಷ್ಟ] ವ॥ ಅವಳ ವಕ್ರೋಕ್ತಿಗೆ ಸೂಕ್ತಿನಿಪುಣನಾದ ಅರಸನು ಮನದಲ್ಲಿಯೆ ಮೆಚ್ಚುತ್ತ ಮುಂದೆ ಸಾಗಿದನು. ಮತ್ತೊಬ್ಬನು ಆ ಪರಿಸ್ಥಿತಿಯನ್ನು ಕುರಿತು ಹೀಗೆಂದನು– ೮೦. "ಒಲವು ಫಲಿಸಿದಾಗ ಬಡವನು ಭಾಗ್ಯದ ನಿಧಿಯನ್ನು ಕಂಡಂತೆ ಅದನ್ನು ಉಳಿಸಿಕೊಂಡು, ಪೋಷಿಸಿ, ಸುಖವನ್ನು ಪಡೆಯಲು ಮನಸ್ಸು ಮಾಡಬೇಕಲ್ಲದೆ, ಅದನ್ನು ಬಿಟ್ಟು ಸೊಗಸನ್ನು ಕೆಡಿಸಿ, ಸೊಕ್ಕಿನಿಂದ ಹುರುಡಿಗೆ ಬಿದ್ದು, ಹಾದಿ ತಪ್ಪಿ ದುಃಖಕ್ಕೆ ಒಳಗಾಗುವ ಹಾಳು ಮನಸ್ಸಿನ ಮನುಷ್ಯರನ್ನು – ಆ ನಿಷ್ಪ್ರಯೋಜಕರನ್ನು, ಸುಡು. ಅದಲ್ಲದೆ– ೮೧. ಸವಿ ತೀರದವರೆಗೆ ಮನದ ಸ್ನೇಹ ಕೆಡದವರೆಗೆ ಇನ್ನೊಬ್ಬನಿಗೆ ಅವಳು ಒಲಿಯದವರೆಗೆ, ವಿರೋಧವಾಗಲಿ ಹೇವವಾಗಲಿ ಹುಟ್ಟದವರೆಗೆ, ಹಣವನ್ನು ಕೊಡುತ್ತಿರಬೇಕು; ತನ್ನನ್ನು ಒಪ್ಪಿಸಿಕೊಳ್ಳಬೇಕು; ಅವಳು ನುಡಿದುದಕ್ಕೆ ಒಪ್ಪಬೇಕು; ಒಲವಿಗೆ ಪ್ರತಿಯಾಗಿ ಒಲವುದೋರಬೇಕು. ಕಳೆದುಹೋದ ಬಳಿಕ ಹಲುಬಿ ಏನು ಪ್ರಯೋಜನ? ವ॥ ಅನನ್ಯವಾಗಿ ಒಲಿದು ದೃಢವಾದ ಅನುರಾಗವುಳ್ಳ ತನ್ನ ಸಖಿಯ ಸಂಭೋಗಸುಖಾನುಭವವನ್ನು ಕುರಿತು ಒಬ್ಬಳು ಕೇಳಿದಾಗ ಅವಳು ಹೀಗೆಂದಳು– ೮೨. "ಮನದನ್ನನ ಚೆಲುವನ್ನು ನೋಡುತ್ತಲೆ ಇದ್ದರೆ ಆ ಸುಖ, ಮಾತು ಕೇಳುವ ಆಸೆಯನ್ನು ಮರೆಸಿಬಿಡುವುದು; ಆತನ ಮಾತಿನ ಸುಖ ಅಪ್ಪುಗೆಯನ್ನೆ

ಬನಮನವಜ್ಞೆಮಾಡುವುದು ಚುಂಬನದಿಂಪು ರತಕ್ಕೆನಿತ್ತು ಸ।
ಮ್ಮನಿಸದು ತದ್ರತಂ ಮಱಪುದೇನುಮನೊರ್ಮೊದಲಾಗಳೇಗುವೆಂ ॥ ೮೨

ಎಂದು ತನ್ನ ಮನದಿಚ್ಛೆಗಳಂ ನುಡಿವುದುಂ, ಕೇಳ್ದರಸನಿದು ಕಾಮಮೀಮಾಂಸೋಪನ್ಯಾಸಪ್ರಾಸಾದ ಮಾದುದೆಂದಾ ಮಂಡಪದಿಂ ಮಗುಳ್ದು ಬರ್ಪಾಗಳೊರ್ವಂ ಸರ್ವಾಂಗೀಣಮಲಯರುಹಮೃಗಮದ ಕದಂಬಪರಿಮಳಾಧಿವಾಸಿತವಿಲಾಸಿನೀಸೌಧಮಂ ನಿರತಿಶಯದೇಶೀಶೃಂಗಾರಸಂಗತಿದ್ವಿಗುಣೀಭೂತಪಂಚ ವಿಂಶತಿವರ್ಷದೇಶೀಯಕಾಯಸೌಂದರ್ಯನುಂ, ಕತಿಪಯಲಾಟಭಟಗಮನಖೇಟಕಫಲಕಕೀಲಿತಗರ್ಘರೀ ರುತಾಹೂತಯುವತೀನಿಕರಚಿಕುರಕಾಂತಿಕುವಲಯಿತವೀಧೀಭಾಗನುಂ, ತಾಂಬೂಲಕರಂಕವಾಹಕ ಪ್ರದೀಯ ಮಾನವೀಟಿಕಾಗ್ರಹಣಲೀಲಾಸಕೃತ್ಪ್ರಸಾರಿತವಾಮಪಾಣಿಪಲ್ಲವನುಂ, ಏಕೈಕವಾರವಿತಸ್ತಿ ಮಾತ್ರಾಸಿಧೇನುಚಾಲನೋಚ್ಚಲಿತ ದಕ್ಷಿಣಕರಕಲಿತಕನಕಕಂಕಣಝಣತ್ಕಾರನುಂ, ವಾಮಚರಣನಿಕ್ಷಿಪ್ತಚಂಪಕ ದಾಮಾ ನುಕಾರಿ ಹೇಮಮಯದಾಮನುಂ, ವಿಷಮಬಿರುದನಿಗಡಪ್ರಕಟಿತಪರಾಕ್ರಮನುಮೆನಿಸಿದ ಸೇವಕರಾಜ ಪುತ್ರಂ ಬಂದೊಂದು ಮತ್ತವಾರಣದೊಳ್ ಕುಳ್ಳಿರ್ದೊಡವಂದವೈಣಿಕವೀಣಾನಿನಾದಮಂ ಕೇಳುತ್ತು ಮಿರ್ಪಿನಮೊರ್ವಳವನ ಕಾದಲಳ ದೂದವಿ ಬಂದು ಪೊಡೆಮಟ್ಟು ಪೊರ್ದಿ ಕುಳ್ಳಿರ್ದು

ತಪ್ಪಿಸುವುದು; ಅಪ್ಪುಗೆಯ ಒಂದು ಸೊಗಸಿನಲ್ಲಿ ಚುಂಬನವನ್ನೆ ನೆನೆಯಲಾಗುವುದಿಲ್ಲ; ಚುಂಬನದ ಸವಿಯಲ್ಲಿ ಸುರತದ ಯೋಚನೆ ಕೂಡ ಹೊಳೆಯದು; ಇನ್ನು ಸುರತದಲ್ಲಿ ಬೆರತೆನೊ, ಅದು ಎಲ್ಲವನ್ನೂ ಒಮ್ಮೆಲೆ ಮರೆಸಿಬಿಡುವುದು. ಏನು ಮಾಡಲಿ ಹೇಳು?" ವ॥ ಹೀಗೆಂದು ತನ್ನ ಮನದ ಇಚ್ಛೆಗಳನ್ನು ನುಡಿದು ತೋರಲಾಗಿ, ಅದನ್ನು ಕೇಳಿಸಿಕೊಂಡ ಅರಸನು "ಇದು ಕಾಮಶಾಸ್ತ್ರದ ಉಪನ್ಯಾಸಕ್ಕೆ ಪ್ರಾಸಾದವಾಯಿತು". ಎಂದು ಆ ಮಂಡಪದಿಂದ ಮುಂದೆ ಹೋದನು. ಮುಂದೆ ಒಬ್ಬನು ತನ್ನ ಮೈತುಂಬ ಬಳಿದುಕೊಂಡ ಶ್ರೀಗಂಧ ಕಸ್ತೂರಿ ಮೊದಲಾದ ಸುಗಂಧ ಲೇಪನಗಳಿಂದ ಸೂಳೆಗೇರಿಯನ್ನೆಲ್ಲ ಪರಿಮಳಿಸುತ್ತ, ದೇಶೀಯ ಅಲಂಕಾರಗಳಿಂದ ತನ್ನ ಇಪ್ಪತ್ತೈದು ವರ್ಷದ ದೇಹ ಸೌಂದರ್ಯವನ್ನು ಇಮ್ಮಡಿಸಿಕೊಂಡು ತನ್ನೊಡನೆ ಬರುವ ಕೆಲವು ಭಟರ ಅಡ್ಡಣಗಳಿಗೆ ಅಳವಡಿಸಿದ ಕಿರುಗಂಟೆಗಳ ಧ್ವನಿಯಿಂದ ಯುವತಿಯರ ಸಮೂಹವನ್ನು ಆಕರ್ಷಿಸಿ, ಆ ಹೆಣ್ಣುಗಳ ತಲೆಗೂದಲ ಕಾಂತಿಯಿಂದ ಬೀದಿಯನ್ನೆಲ್ಲ ಕನ್ನೈದಿಲೆಗಳಿಂದ ತುಂಬಿದಂತೆ ಮಾಡುತ್ತ, ತಾಂಬೂಲ ವಾಹಕರು ಕೊಡುತ್ತಿರುವ ತಂಬುಲದ ವೀಡಗಳಿಗೆ ಒಮ್ಮೊಮ್ಮೆ ಎಡಗೈಯನ್ನು ನೀಡುತ್ತ, ಗೇಣುದ್ದದ ಕಿರುಗತ್ತಿಯನ್ನು ಚಿನ್ನದ ಕೈಗಡಗಗಳನ್ನು ಜಣಜಣಿಸುವ ಬಲಗೈಯಿಂದ ಒಮ್ಮೊಮ್ಮೆ ತಿರುಗಿಸುತ್ತ, ಸಂಪಗೆಯ ಸರದಂತಿರುವ ಚಿನ್ನದ ಪೆಂಡೆಯವನ್ನು ಎಡಗಾಲಲ್ಲಿ ಧರಿಸಿಕೊಂಡು, ಅಸಾಮಾನ್ಯವಾದ ತನ್ನ ಬಿರುದುಗಳನ್ನು ಹೊಗಳಿಸಿಕೊಳ್ಳುವ ಮೂಲಕ ತನ್ನ ಪರಾಕ್ರಮವನ್ನು ಪ್ರಕಟಿಸುತ್ತ, ಸೇವಕರಾಜಪುತ್ರನು ಬಂದನು. ಹಾಗೆ ಬಂದು ಒಂದು ಅಂಗಳದಲ್ಲಿ ಕುಳಿತು ತನ್ನೊಡನೆ ಬಂದ ವೈಣಿಕನಿಂದ ವೀಣೆ ನುಡಿಯಿಸಿ

ಘನಶಿಶಿರೋಪಚಾರಮಿಷದಿಂ ಹೃದಯಸ್ಥಿತನಪ್ಪ ದೇವ ನಿ ।
ನ್ನನೆ ಕನದಬ್ಜಚಂದನದಳಂಗಳಿನರ್ಚಿಸಿ ನಿನ್ನ ರೂಪಭಾ ॥
ವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯೆಯಲ್ಲಿ ನಿಟ್ಟಿವ ।
ಟ್ಟನತಿಶಯಾಂಗಿ ಸಾಧಿಸಿದಪಳ್ ನಿಜದೇಹವಿದಾಹಮುಕ್ತಿಯಂ ॥ ೮೩

ಎಲೆ ನಿರ್ದಯ ನಿಜವಿರಹಾ ।
ನಲಮುಖದೊಳ್ ಬಾಷ್ಪಜಲಕಣಾಭ್ಯುಕ್ಷಿತಮಂ ॥
ಲಲನಾಂಗಾಹುತಿಯಂ ಕೋ ।
ಕಿಲರವಮಂತ್ರಸ್ವರಂ ಸ್ಮರಂ ನಿರವಿಸಿದಂ ॥ ೮೪

ಅದಲ್ಲದೆಯುಂ,

ಘನಬಾಷ್ಪಾಂಬುಕಣಾರ್ದ್ರಯುಕ್ತನಳಿನೀಪತ್ರಾಂಶುಕಾಶ್ಲೇಷೆ ಮು ।
ಕ್ತನಿಜಾಳೀಸಹಭಾಷಣೋತ್ತರೆ ಕಪೋಲನ್ಯಸ್ತಹಸ್ತಪ್ರವ ॥
ರ್ತನೆ ಚಿತ್ರಾರ್ಪಿತಕಾಂತೆಯಂತೆ ತಳೆದಳ್ ಸ್ವಾತೀವಚಿಂತಾವಿಚೇ ।
ತನೆಯಂ ನಿನ್ನ ವಿಯೋಗದುಃಖದಿನವಳ್ ನಿಷ್ಪಂದಕಾರಿತ್ವಮಂ ॥ ೮೫

ತೆಕ್ಕನೆ ತೀವಿರೆ ತಾಪ ।
ಕ್ಕಿಕ್ಕಿದ ಸಿರಿಗಂಪು ಪಣೆಯೊಳೆಸೆದುದು ಕೋಪಂ ॥
ಮಿಕ್ಕತನು ಬೆಸಸಿದೊಡೆ ನೊಸ ।
ಲಕ್ಕರಮಂ ತೊಡೆಯಲೆಂದು ಬಂದಿಂದುವವೋಲ್ ॥ ೮೬

ಕೇಳುತ್ತ ಇರಲಾಗಿ, ಅವನ ನಲ್ಲೆಯು ದೂತಿಯೊಬ್ಬಳು ಬಂದು ನಮಸ್ಕರಿಸಿ, ಹೊಂದಿಕುಳಿತು (ಹೀಗೆ ನುಡಿದಳು) – ೮೩. "ಅತಿಶಯವಾದ ಶಿಶಿರೋಪಚಾರದ ನೆವದಿಂದ, ದೇವನೇ, ನಿನ್ನ ನಲ್ಲೆಯು ಹೃದಯದಲ್ಲಿ ನೆಲಸಿದ ನಿನ್ನನ್ನೇ ಕಮಲಚಂದನಗಳಿಂದ ಅರ್ಚಿಸಿ, ನಿನ್ನ ರೂಪವನ್ನೆ ಧ್ಯಾನಿಸುತ್ತ, ನಿನ್ನ ಅಸದೃಶವಾದ ಹೆಸರನ್ನ ಜಪಿಸುತ್ತ ನಿಷ್ಠೆಯಿಂದ ತನ್ನ ದೇಹತಾಪದಿಂದ ಮುಕ್ತಿಯನ್ನು ಸಾಧಿಸುತ್ತಿರುವಳು. ೮೪. ಎಲೈ ನಿಷ್ಕರುಣಿಯೆ, ನಿನ್ನ ವಿರಹವೆಂಬ ಅಗ್ನಿಕುಂಡದಲ್ಲಿ, ಕಂಬನಿಯ ಜಲವನ್ನೆ ಪ್ರೋಕ್ಷಣೆ ಮಾಡಿ, ಕೋಕಿಲ ಧ್ವನಿಯೆಂಬ ಮಂತ್ರನಾದದೊಂದಿಗೆ ಸ್ತ್ರೀದೇಹದ ಆಹುತಿಯನ್ನು ಕೊಡಲು ಮನ್ಮಥನು ತೊಡಗಿರುವನು. ಅದಲ್ಲದೆ– ೮೫. ಸೂಸಿ ಸುರಿವ ಕಣ್ಣೀರಿಂದ "ಆರ್ದ್ರೆ"ಯಾಗಿ, ತಾವರೆಯೆಸಳುಗಳ "ಆಶ್ಲೇಷ", ಹೊಂದಿ (ಹೊದಿಸಿಕೊಂಡು), ತನ್ನ ಸಖಿಯರು ಮಾತಾಡುತ್ತಿದ್ದರೂ ಅವಳಿಗೆ "ಉತ್ತರ"ವನ್ನು ಕೊಡದೆ, ಕೆನ್ನೆಗೆ "ಹಸ್ತ"ವನ್ನಿಟ್ಟುಕೊಂಡು "ಚಿತ್ರ"ದಲ್ಲಿ ಬರೆದ ಹೆಣ್ಣಿನಂತೆ "ಸ್ವಾತಿಚಿಂತೆ" (ಮನಸ್ಸಿನಲ್ಲಿ ಅತಿಯಾದ ಚಿಂತೆ) ಯಿಂದ ಮೈಮರೆತು ವಿರಹದುಃಖದಿಂದ ನಿಶ್ಚೇಷ್ಟಳಾಗಿರುವಳು [ಈ ಪದ್ಯದಲ್ಲಿ 'ಆರ್ದ್ರೆ'ಯಿಂದ 'ಸ್ವಾತಿ'ಯವರೆಗೆ ನಕ್ಷತ್ರಗಳ ಹೆಸರು ಬರುವಂತೆ ಪದಯೋಜನೆಯಿದೆ] ೮೬. ಮನ್ಮಥನ ಅಪ್ಪಣೆಯಾದೊಡನೆಯೆ ಹಣೆಬರೆಹವನ್ನು ಒರಸಿ ಬಿಡಲೆಂದು ಸಿದ್ಧನಾಗಿ ಬಂದ ಚಂದ್ರನೊ ಏನೊ ಎಂಬಂತೆ, ವಿರಹಜ್ವರದ ತಾಪ

॥ ಮಾಳಿನೀವೃತ್ತ ॥

ಬಳೆದ ವಿರಹತಾಪವ್ಯೂಹದೊಳ್ ನೇಹಮಾದಂ।
ಮುಳುಗೆ ಕಳವಳಂಗೊಂಡಿರ್ದವಳ್ಗೊರ್ವಳೇವಂ ॥
ದಳೆದು ಬಿಡುಗುಮೆಂದಾತಂ ಪೆಱಳ್ಗೋತನೆಂದಾಂ।
ತಿಳಿದೆನೆನೆ ಕನಲ್ದಿರ್ದಿಲಂತಿರ್ಮೆ ಬೆಂದಳ್ ॥ ೮೭

ಅಂತುಮಲ್ಲದೆಯುಂ,

ಎನಗಂತಾಂ ಪ್ರತಿಪನ್ನಮೆಂಬ ಬಗೆಯುಂ ತಾನಂತುಪಾದೇಯಮೇ।
ವನಿತಾಕ್ರೀಡಿತಮೆಂತುಮೀಡಿತಮೆ ಪೇೞೀ ಜೀವನಂ ಮತ್ತೆ ಪಾ ॥
ವನಮೇ ಬಂಧುಜನೋಪಜಾಪ್ಯಮದು ಕರ್ಣಪ್ರಾಪ್ಯಮೇ ನಲ್ಲನೊ।
ಲ್ಲನೆ ಪೋದೀವಿರಹಪ್ರಘಟ್ಟಕದೊಳೀ ನೈಪಥ್ಯಮುಂ ಪಥ್ಯಮೇ ॥ ೮೮

ಎಂದು ಮಾಣದೆ ಮತ್ತಮೆಮ್ಮ ಬಿತ್ತರಿಪ ಶಿಶಿರಕ್ರಿಯೆಯಂ ತನ್ನ ಮನೋರುಜೆಗವಕ್ರಿಯೆಯಾಗೆ ಕಂಡು,

ನೀರರುಹಂ ಮಲಯರುಹಂ।
ಹಾರಂ ಕಲ್ಹಾರಮಮಲವಾಃಪೂರಂ ಕ ॥
ರ್ಪೂರಂ ತಾಪಮನುಡುಗಿಪೊ।
ಡಾರಾಧಿಸುಗವನ ತೋಳ ತಳ್ಪಿನ ತಣ್ಪಂ ॥ ೮೯

ನಿವಾರಣೆಗಾಗಿ ಅವಳ ಹಣೆಗೆ ಲೇಪಿಸಿದ ಕೆಂಪು ಚಂದನ ಕಂಗೊಳಿಸುವುದು, ೮೭. ಅತಿಶಯವಾಗಿ ಹೆಚ್ಚಿದ ವಿರಹ ತಾಪದಲ್ಲಿ, ಸ್ನೇಹ ಮುಳುಗಿ ಕಳವಳಿಸುತ್ತಿರುವವಳಿಗೆ ಒಬ್ಬಳು "ಹೇವ ತಾಳಿದರೆ ಇವಳ ಜ್ವರ ಬಿಡುವುದು" ಎಂದು ಭಾವಿಸಿ, "ನಿನ್ನ ನಲ್ಲನೆಂಬವನು ಇನ್ನೊಬ್ಬಳಿಗೆ ಒಲಿದನು, ನಾನಿದನ್ನು ತಿಳಿದೆನು" ಎಂದಳು. ಅದನ್ನು ಕೇಳಿದೊಡನೆ ಆ ವಿರಹಿಣಿಯು ಇದ್ದಿಲಂತೆ ಎರಡು ಸಲ ಬೆಂದಳು ಅದಲ್ಲದೆ ೮೮. "ನನಗಿನ್ನು ಆತನು ದೊರೆತಾನೆಂಬ ಯೋಚನೆ ಗ್ರಾಹ್ಯವೇ? ಸ್ತ್ರೀಯರೊಡನೆ ಚಿನ್ನಾಟವಾಡುವುದೇನು ಪ್ರಶಂಸಾರ್ಹವೆ? ಹೇಳು, ಈ ಜೀವನ ಪಾವನವೆ? ಬಂಧು ಜನಗಳು ಬಂದು ರಹಸ್ಯವಾಗಿ ಉಸಿರುವ ಮಾತು ಕಿವಿಗೆ ಹಿತವೆ? ನಲ್ಲನೆ ಒಲ್ಲನೆಂದು ಹೋದ ಈ ವಿರಹ ಪ್ರಸಂಗದಲ್ಲಿ ಈ ಅಲಂಕಾರ ಯೋಗ್ಯವೆ?" ವ॥ ಹೀಗೆಂದು ನುಡಿದು, ನಾವು ಮಾಡುತ್ತಿರುವ ಶಿಶಿರೋಪಚಾರವು ತನ್ನ ಮನೋರೋಗಕ್ಕೆ ಅಪಕಾರವೆ ಎಂದು ಭಾವಿಸಿ– ೮೯. ತಾವರೆ, ಗಂಧ, ಹಾರ, ಕಲ್ಹಾರ, ನೀರಿನ ಧಾರೆ, ಕಪ್ಪುರ – ಇವೆಲ್ಲ ತಾಪವನ್ನು ಕಳೆಯ ಬೇಕಿದ್ದರೆ ಅವನ ತೋಳ ತೆಕ್ಕೆಯ ತಂಪನ್ನು ಆರಾಧಿಸಿ

ಈಯಲರ್ವಿಜ್ಜಣಿಗೆಯನಿನಿ ।
ತಾಯಾಸದೆ ಬೀಸಲೇಕೆ ಸಖಿ ಮತ್ಪ್ರಿಯನಾ ॥
ಬಾಯೆಲರಿಂದಲ್ಲದೆ ಪೇ ।
ಟೀಯೆಲರಿಂ ಬರ್ದುಕಲೆಂತುಮಾನಾರ್ತಪೆನೇ ॥ ೬೦

ಎನಲೊಡಮವಳ ಮನಮನಱಿದು,

ಒಂದಿನಿತು ಧೈರ್ಯಮಂ ದಳಿ ।
ತೇಂದೀವರನಯನೆ ತಾಳ್ದು ಕಯ್ಯಂ ಪಿಡಿದಾಂ ॥
ತಂದಿನಿಯನನೀ ಪಾಸೊಳ್ ।
ತಂದೆಳದಳಿರಿಂದೆ ತೋರಣಂಗಟ್ಟಿಸುವೆಂ ॥ ೬೧

ಎಂದು ಕಿವಿವುಗೆ ನುಡಿದೊಡಂಗೊಂಡು ಪೋಪುದುಂ ದಕ್ಷಿಣನವಳ ದೂತೀಜಲ್ಪಂ ವಿಸೃಷ್ಟಾರ್ಥ ಮಾದುದೆಂದುಮಲ್ಲಿಂ ತಳರ್ದು ರಾಜಭವನಾಭಿಮುಖನಾಗಿ

ಅಂಗಜನೆ ಸೂತ್ರಧಾರಂ ।
ಶೃಂಗಾರಮೆ ನಾಟಕಂ ತದಂಕಂಗಳ್ ನಾ ॥
ಲ್ಕಂಗಂಗಳಾಗೆ ಕಾಮಿಜ ।
ನಂಗಳ್ ವರ್ಗಿಗರ ತೆಱದೆ ನಟಯಿಸುತಿರ್ದರ್ ॥ ೬೨

ಎಂದು ಕಾಮವ್ಯಾಮೋಹದುದ್ದಾಮತೆಯನನುಕೂಲಾದಿಗಳೊಳ್ ನುಡಿಯುತ್ತುಂ ಬಂದು

ಆ ಗುಣವನ್ನು ಸಂಪಾದಿಸಲಿ. ೬೦. ಈ ಹೂವಿನ ಬೀಸಣಿಗೆಯಿಂದ ಬೀಸಿಬೀಸಿ ಏಕೆ ಇಷ್ಟೊಂದು ಆಯಾಸಗೊಳ್ಳುವಿರಿ ? ಸಖಿಯೆ, ನನ್ನ ಮನದನ್ನನ ಬಾಯುಸಿರಿನಿಂದಲ್ಲದೆ ಈ ಗಾಳಿಯಿಂದ ನಾನೇನಾದರೂ ಬದುಕಬಲ್ಲೆನೆ ? ವ॥ ಹೀಗೆ ಅವಳು ನುಡಿಯಲಾಗಿ ಅವಳ ಮನಸ್ಸನ್ನು ಅರಿತುಕೊಂಡು ೬೧."ಕಮಲಾಕ್ಷಿಯೆ ಸ್ವಲ್ಪ ಧೈರ್ಯತಾಳು. ನಿನ್ನ ಇನಿಯನನ್ನು ನಾನು ಕೈಹಿಡಿದು ತಂದು ಈ ಹಾಸಿಗೆಯಲ್ಲಿರಿಸಿ ಎಳೆಯ ತಳಿರಿಂದ ತೋರಣವನ್ನು ಕಟ್ಟಿಸುವೆನು" ವ॥ ಎಂದು ಹೇಳಿ ಬಂದಿರುವುದಾಗಿ ಕಿವಿದಾಗುವಂತೆ ನುಡಿದು, ಅವನನ್ನೊಡಗೊಂಡು ಹೋದಳು. ಆಗ ದಕ್ಷಿಣನಾಯಕನು, "ಅವಳ ದೂತೀವಚನ ಸಫಲವಾದ ರಾಯಭಾರವೆ ಆಯಿತು" ಎಂದನು. ಆಗ ಅಲ್ಲಿಂದ ಅರಮನೆಗೆ ಅಭಿಮುಖವಾಗಿ ಹೊರಟು– ೬೨. "ಮನ್ಮಥನೆ ಸೂತ್ರಧಾರ; ಶೃಂಗಾರವೆ ನಾಟಕ; ಅದಕ್ಕೆ ನಾಲ್ಕು ಅಂಕಗಳು; ಪ್ರಣಯಿ ಜನಗಳೆ ಅದರಲ್ಲಿ ಪಾತ್ರಧಾರಿಗಳಂತೆ ನಟಿಸುತ್ತಿರುವರು." ವ॥ ಎಂದು ಕಾಮವ್ಯಾಮೋಹದ ಅತಿಶಯತೆಯನ್ನು ಅನುಕೂಲಾದಿ ನಾಯಕರೊಡನೆ

ಜಗದಧಿಪತಿಯರಮನೆಯಂ ।
ಪುಗುವಲ್ಲಿ ಗೃಹಪ್ರವೇಶಮಂಗಳತೂರ್ಯಂ ॥
ಮಿಗೆ ಮೊಳಗಿತ್ತೆನೆ ಪೊಣ್ಮಿದು ।
ದು ಗಭೀರಂ ತತ್ತ್ರಿಯಾಮತೂರ್ಯಾರಾವಂ ॥ ೯೩

ಅಂತು ಪೊಕ್ಕು ಅವರಂ ವಿಸರ್ಜಿಸಿ ಸಜ್ಜೆವನೆಗೆ ವರ್ಪುದುಂ ಮುನ್ನಮೆ ಸೂಟಿಗ್ಗಿವಂದು ತನ್ನ ಬರವಂ ಪಾರುತ್ತುಂ ತಳ್ಪತಳದೊಳಿರ್ದಿದಿರೆೞ್ದೀರ್ಷ್ಯಾರೋಷದಿಂ ಶಶಿಪ್ರಭೆ ನವೋದಯಶಶಿಪ್ರಭೆಯಂತೆ ಪಾಟಳಿತಮುಖಿಯಾಗಿ,

ಮುನಿದು ಕಟಾಕ್ಷದಿಂದಡರೆ ನೋಡೆ ಭಯಾದ್ಯತನಂತೆ ತೋಱಿ ಸ ।
ಮ್ಮನಿಸದೆ ಮತ್ತೆ ಕಾಯ್ದೊದೆಯೆ ಕಾಲ್ವಿಡಿದೋವದೆ ಬಯ್ಕೆ ತಳ್ತು ಚುಂ ॥
ಬನಮನೊಡರ್ಚಿ ತತ್ತದುಚಿತಕ್ರಿಯೆಯಿಂದಮೆ ನಂದೆವೊಯ್ದು ತ ।
ನ್ಮನಮುಮನಂತೆ ಸಂತಸಮನೆಯ್ದಿಸಿದಂ ರತಸೌಖ್ಯದಿಂ ನೃಪಂ ॥ ೯೪

ಅನಂತರಂ,

ಸುದತಿ ರತಾಂತಸೌಖ್ಯಮನಧೀಶನ ದೇಹದಿನಂದು ಪೋಗಲೀ ।
ಯದೆ ಪಿಡಿವಂದದಿಂ ತೊಡೆಯ ತೋಳ ತಗುಳ್ಪಮರ್ದೊಪ್ಪೆ ನಾಡೆಯುಂ ॥
ಪದೆದಮರ್ದಪ್ಪಿದಂತಿರಮರ್ದಪ್ಪಿರೆ ಬಂದ ಸುಷುಪ್ತಿ ಚಿತ್ತಮಂ ।
ಪುದಿಯೆ ಮಹೀಶನಿರ್ದನಿನಿಸಂ ನಿಜಯೋಗದೆ ಯೋಗಿಯಿರ್ಪವೋಲ್ ॥ ೯೫

ನುಡಿಯುತ್ತ ಬಂದು ೯೩. ಚಕ್ರವರ್ತಿಯು ಅರಮನೆಯನ್ನು ಪ್ರವೇಶಿಸುತ್ತಿರುವಾಗ ಗೃಹಪ್ರವೇಶದ ಉತ್ಸವಕ್ಕೆಂದೇ ಮಂಗಳವಾದ್ಯ ಮೊಳಗಿತೆಂಬಂತೆ ಇರುಳಿನ ತೂರ್ಯ ಧ್ವನಿ ಗಂಭೀರವಾಗಿ ಹೊಮ್ಮಿತು. ವ॥ ಅರಸನು ತನ್ನ ಸಂಗಡಿಗರನ್ನೆಲ್ಲ ಕಳುಹಿ, ಶಯ್ಯಾಗೃಹಕ್ಕೆ ಬಂದನು. ಮುಂಚಿತವಾಗಿಯೆ ಸಹವಾಸಕ್ಕೆಂದು ಬಂದು ಪತಿಯ ಆಗಮನವನ್ನು ಎದುರು ನೋಡುತ್ತ ಹಾಸುಗೆಯಲ್ಲಿದ್ದ ಶಶಿಪ್ರಭೆಯು ಇದಿರಿಗೆ ಎದ್ದು ಬಂದು ಈರ್ಷೆ–ರೋಷಗಳಿಂದ ಅದೇ ಮೂಡಿದ ಚಂದ್ರಬಿಂಬದಂತೆ ಕೆಮ್ಮೊಗವಾಗಿ – ೯೪. ಕೋಪದಿಂದ ಕಡೆಗಣ್ಣಿಂದ ಇರಿಯುವಂತೆ ನೋಡಲಾಗಿ, ಅಂಜಿದವನಂತೆ ನಟಿಸಿ ಅಲ್ಲಿಗೇ ಬಿಡದೆ ಅವಳು ಸಿಟ್ಟಿನಿಂದ ಒದೆಯಲಾಗಿ, ಅವಳ ಕಾಲಿಗೆ ಬಿದ್ದು, ಬಂಧ್ಯಲಾಗಿ ಅಪ್ಪಿಕೊಂಡು ಮುದ್ದಿಸಿ– ಆಯಾ ಕ್ರಿಯೆಗಳಿಗೆ ಯೋಗ್ಯವಾವುದೋ ಅದನ್ನು ಮಾಡಿ ಅವಳ ಕೋಪವನ್ನು ಆರಿಸಿ, ಒಲಿಸಿ, ರತಿಸೌಖ್ಯದಿಂದ ಅರಸನು ಅವಳನ್ನು ಸಂತೋಷಪಡಿಸಿದನು. ಆ ಬಳಿಕ– ೯೫. ರತಾಂತ ಸುಖವನ್ನು ತನ್ನ ಅಧಿರಾಜನ ದೇಹದಿಂದ ಹೊರಟುಹೋಗಲು ಬಿಡದೆ ಹಿಡಿದು ಇಟ್ಟುಕೊಳ್ಳುವಂತೆ ಆ ಸತಿಯು ತೋಳಿಂದಲೂ ತೊಡೆಯಿಂದಲೂ ಬಿಗಿಯಾಗಿ ಬಂಧಿಸಿ ತಬ್ಬಿ ಹಿಡಿದ ದೃಢವಾದ ಆಲಿಂಗನದಲ್ಲಿ ನಿದ್ದೆ ಬಂದು ಚಿತ್ತವನ್ನು ಕವಿಯಲು ಅರಸನು ಸಮಾಧಿಯಲ್ಲಿದ್ದ ಯೋಗಿಯಂತೆ ಒಪ್ಪಿದನು.

ಅಂತನಲ್ಪತಲ್ಪತಳದೊಳ್ ನಿದ್ರಾಸುಖಾಭಿಮುಖಂ ತೀರೆ ಮನೋಹರೀನಾಮಯಾಮಂ ಮುಹೂರ್ತಮಾತ್ರಾವಶಿಷ್ಟಮಾಗೆ,

ನೊರೆಯೊಡನೆ ತಡಿಗೆ ಬೆಳ್ದಾ ।
ವರೆಯ ಕಟಿಲ್ದೆಸಳ್ಗಳ್ಗಿದೆ ಕೊಳನೊಳ್ ಸಾರ್ವಂ ॥
ತಿರೆ ಪಡುವಣ ದೆಸೆಗಿರದೋ ।
ಸರಿಸಿರ್ದುವು ತಿಂಗಳೊಡನೆ ಮೀಂಗಳ್ ನಭದೊಳ್ ॥ ೯೬

ಮತ್ತಮಿನಿಸಾನುಂ ಬೇಗದಿಂ

ಅಲಸಿಕೆ ಜಕ್ಕವಕ್ಕಿಗೆ ಜಗುಳ್ತರೆ ಪಕ್ಕದೊಳಾಟಿಪೊಕ್ಕು ಜ ।
ಕ್ಕುಲಿಸಿ ಸಡಿಲ್ದ ತಾವರೆಯೆಸಳ್ಗುಜುಪಿಂದೊಳವಿಟ್ಟು ನಿದ್ದೆಯಂ ॥
ತೊಲಗಿಸಿದಂಚೆವೆಣ್ಣೆಸೆವ ಗಾಂದವದಿಂದನಿದೊಂಗಲೊಳ್ ತಡಂ ।
ಗಲಿಸಿ ಮನಕ್ಕೆ ಗೋಸಗೆಯ ಬೀಸುವೆಲರ್ ಪಡೆದತ್ತಲರ್ಕೆಯಂ ॥ ೯೭

ಕೂಡೆ ಮನೆಮನೆಯೊಳೊಯ್ಯನೆ ।
ಬಾಡಿದುದೊಡನೊಡನೆ ಮಿಥುನತತಿಯಿರುಳೊಲವಿಂ ॥
ಸೂಡಿದ ಪೂಮಾಲೆಗಳುಂ ।
ಮಾಡಿದ ಸೊಡರ್ಗುಡಿಗಳುಂ ನಿಶಾನಿರಸನದೊಳ್ ॥ ೯೮

ನೆಱೆ ಕೂಟಂಗಳ ಗೂಡೊಳ ।
ಗೋಱಗಿದ ಪಾರಾವತಂಗಳಂ ತರದಿಂದೆ ॥
ಟ್ಚಱಿಸುತ್ತುಮೊಗೆದು ಗಗನದ ।
ತೆಱಪಂ ತೀವಿತ್ತು ಚೈತ್ಯಭವಶಂಖರವಂ ॥ ೯೯

ವ॥ ಹಾಗೆ ವಿಶಾಲವಾದ ಹಾಸುಗೆಯಲ್ಲಿ ನಿದ್ರಾಸುಖದ ಅನುಭವ ತೀರಿ, "ಮನೋಹರಿ" ಎಂಬ ಯಾಮವು ಒಂದು ಮುಹೂರ್ತದಷ್ಟು ಮಾತ್ರ ಉಳಿದಿರುವಾಗ– ೯೬. ಸರೋವರದಲ್ಲಿ ನೊರೆಯೊಡನೆ ತಾವರೆಗಳಿಂದ ಕಳಚಿದ ಎಸಳುಗಳೂ ತೇಲಿ ದಂಡೆಗೆ ಸಾಗುವಂತೆ, ಚಂದ್ರನೊಡನೆ ನಕ್ಷತ್ರಗಳೂ ಪಶ್ಚಿಮ ದಿಗಂತಕ್ಕೆ ಹೋಗಿ ಮರೆಯಾದುವು. ವ ॥ ಮುಂದೆ ಸ್ವಲ್ಪ ಸಮಯದಲ್ಲಿಯೆ– ೯೭. ಚಕ್ರವಾಕಗಳ ನಿದ್ರಾಜಡತೆ ಜಾರಿತು: ತಾವರೆಗಳ ಸಂದಿನಲ್ಲಿ ಆಳವಾಗಿ ಸೇರಿಕೊಂಡು ನಿದ್ದೆಹೋಗಿದ್ದ ಹಂಸಿಗಳು ಸಡಿಲಿದ ತಾವರೆಯೆಸಳುಗಳಿಂದ ಎಚ್ಚರವಾಗಿ ಮಧುರವಾಗಿ ಧ್ವನಿಮಾಡಿದುವು; ಅದನ್ನು ಒಳಗೊಂಡು ಪ್ರಭಾತದ ಒಸಗೆಯನ್ನು ಬೀರುತ್ತ (ಹೂಗಳನ್ನು) ಅರಳಿಸುತ್ತ ಗಾಳಿ ಬೀಸಿತು. ೯೮. ಮನೆಮನೆಗಳಲ್ಲಿ ದಂಪತಿಗಳು ರಾತ್ರಿ ಉತ್ಸಾಹದಿಂದ ಮುಡಿದುಕೊಂಡಿದ್ದ ಹೂಮಾಲೆಗಳೂ ಹಚ್ಚಿಟ್ಟ ದೀಪಗಳೂ ಮೆಲ್ಲಗೆ ಬಾಡಿದುವು. ೯೯. ಶಿಖರದಲ್ಲಿಯ ಗೂಡುಗಳಲ್ಲಿ ಮಲಗಿದ ಪಾರಿವಾಳಗಳನ್ನು ವೇಗವಾಗಿ ಎಚ್ಚರಿಸುತ್ತ ಜಿನಮಂದಿರದ

ಪರೆದುದು ಸಂಧ್ಯಾರುಚಿ ಮೆ ।
ಯ್ಗರೆದುದು ತಾರಾಳಿ ಮುಕುಳಭಾವದೊಳಿನಿಸಂ ॥
ಪೊರೆದುದು ನೀಳಾಬ್ಜವನಂ ।
ನೆರೆದುದು ಚಕ್ರಾಹ್ವಯದ್ವಯಂ ದಿನಮುಖದೊಳ್ ॥ ೧೦೦

ಪರಿಪರಿತಂದು ಮೆಯ್ಗಳೆರಡಿಲ್ಲೆನೆ ಪಕ್ಕದಿನಪ್ಪಿ ಕಣ್ಗಳಿಂ ।
ಸುರಿಯೆ ಮುದಶ್ರು ಮುಂದಲೆಯ ತುಪ್ಪುಳನೊಯ್ಯನೆ ಕರ್ಚಿ ಚಂಚುವಿಂ॥
ಸರಸಿಜಪತ್ರಕೋಟಿಯ ಕುಸುಂಕುಳಿನತ್ತೆಳೆದುಯ್ದು ಕಾಂತನೊಳ್ ।
ನೆರೆದು ರಥಾಂಗಕಾಂತೆಯೆರ್ದೆಯಾಳಿದುದಾದಮೆ ತತ್ಪ್ರಭಾತದೊಳ್ ॥ ೧೦೧

ಒಂದಿನಿಸಪ್ಪೊಡಂ ಪಗಲಗಲ್ಕೆಗೆ ಸೈರಿಸಲಾರವೆಂತಿರುಳ್ ।
ನಿಂದುವೊ ಜಕ್ಕವಕ್ಕಿಗಳೆಲೇ ಬಗೆಪೋಯ್ತು ವಿಯೋಗದಿಂದೆ ಸ ॥
ತ್ತೊಂದಱ ಜೀವಮೊಂದಱೊಡಲಂ ಪುಗೆ ಮತ್ತೆ ಸಚೇತನಂಗಳಾ ।
ಗೊಂದಿದುವಲ್ಲದಂದು ಬಟಿಕೆತ್ತಣದಿರ್ಪುದುಮೆಯ್ದಿವರ್ಪುದುಂ ॥ ೧೦೨

ಅದಲ್ಲದೆಯುಂ

ನಡು ನಸು ಪೊಂಗಿ ಸುತ್ತಿಱುದು ಪತ್ತಿದೆಸಳ್ಗೊನೆ ಬಿರ್ಚಿ ತಣ್ಣೆರ ।
ಲ್ಗೆಡೆದೆಱಪಾಗೆ ಪೊಕ್ಕು ಸುಟಿಯುತ್ತಿರೆ ತಳ್ಪ ಸಡಿಲ್ದಗಲ್ದರ ॥

ಶಂಖಧ್ವನಿ ಮೇಲಕ್ಕೆ ನೆಗೆದು ಆಕಾಶಮಂಡಲವನ್ನು ವ್ಯಾಪಿಸಿತು. ೧೦೦. ದಿನಾರಂಭದ ಈ ಸಮಯದಲ್ಲಿ ಪ್ರಭಾತಸಂಧ್ಯೆಯ ಬೆಳಕು ಎಲ್ಲ ಕಡೆಗೆ ಹರಡಿತು: ನಕ್ಷತ್ರಗಳು ಮರೆಯಾದುವು: ಕನ್ನೈದಿಲೆಗಳು ಮುಚ್ಚಿಕೊಂಡು ಪುನಃ ಮೊಗ್ಗುಗಳಂತಾದುವು: ಚಕ್ರವಾಕದಂಪತಿಗಳು ಕೂಡಿಕೊಂಡುವು. ೧೦೧. ಓಡೋಡಿ ಬಂದು, ತಮ್ಮಿಬ್ಬರ ಮೈ ಎರಡಲ್ಲ, ಒಂದೇ ಎಂಬಂತೆ ಪಕ್ಕದಿಂದ ತಬ್ಬಿಕೊಂಡು ಆನಂದಾಶ್ರುಗಳನ್ನು ಸುರಿಸುತ್ತ, ಚುಂಚಿನಿಂದ ಇನಿಯನ ಮುಂದಲೆಯ ತುಪ್ಪುಳನ್ನು ಮೆದುವಾಗಿ ಕಚ್ಚಿ, ತಾವರೆಯೆಸಳುಗಳ ಮರೆಯಲ್ಲಿಗೆ ನಲ್ಲನನ್ನು ಎಳೆದುಕೊಂಡು ಹೋಗಿ ಸುಸಿಲಸುಖವನ್ನು ಅನುಭವಿಸಿ ಚಕ್ರವಾಕಿ ಮನದಣಿಯಿತು. ೧೦೨. ಹಗಲು ಹೋಗಲೊಡನೆ ಒಂದಿಷ್ಟೂ ಸಹಿಸಲಾರದ ಚಕ್ರವಾಕಗಳು ಇರುಳೆಲ್ಲಾ ಅದು ಹೇಗೆ ತಡೆದುಕೊಂಡುವು ? ಒಂದನ್ನೊಂದು ಅಗಲಿ ಬಗೆಗೆಟ್ಟು, ಒಂದು ಸತ್ತು, ಇನ್ನೊಂದು ಅರೆಜೀವವಾಗಿತ್ತು. ಈಗ ಒಂದರ ಒಡಲಲ್ಲಿ ಇನ್ನೊಂದು ಸೇರಿದಾಗ ಮತ್ತೆ ಎರಡೂ ಜೀವಂತವಾಗಿ ಕೂಡಿಕೊಂಡಿರಬೇಕು, ಹಾಗಲ್ಲವಾದರೆ ಅವು ಬದುಕಿದುದೆಂತು ? ಬಂದುದೆಂತು? ಅದಲ್ಲದೆ–೧೦೩. ಮಧ್ಯಭಾಗ ದಪ್ಪನಾಗಿ ಉಬ್ಬುವಂತೆ ಸುತ್ತಲೂ ಒಂದಕ್ಕೊಂದು ಹತ್ತಿಕೊಂಡು ಮುಚ್ಚಿದ ಎಸಳುಗಳು ಬಿಚ್ಚಿ, ತಂಗಾಳಿ ಒಳಹೊಕ್ಕು ಸುಳಿಯುತ್ತಿರಲಾಗಿ.

ಲ್ವಿಡಿದುಡುಗಿರ್ದ ಕೇಸರದ ನುಣ್ಮೊನೆ ಸೂಸೆ ಮರಲ್ದು ಚೆಲ್ವಿನೊಳ್ ।
ಗಡಣಿಸಿದತ್ತು ಮುಂಬಗಲೊಳಂಬುರುಹಂ ಸರಸೀಸಮೂಹದೊಳ್॥ ೧೦೩

ಸುರದಿಕ್ಕಾಮಿನಿ ಪೊಯ್ಯೆ ಮೇಗೊಗೆದ ಶೋಣಂ ಕಂದುಕಂ ತಾನಿದೆಂ ।
ಬರ ಮಾತಿರ್ಕೆಮ ಮೀಂಗಳೆಂಬಲರ್ಗಳಂ ಕೊಯ್ಯಲ್ಕೆ ತತ್ಕಾಂತೆ ಬಿ ॥
ತ್ತರದಿಂದೆತ್ತಿದ ಕೆಂದಳಂ ದಲೆನೆ ಕಣ್ಗಾದಂ ಬೆಡಂಗಾದನಂ ।
ಬರಲಕ್ಷ್ಮೀವೃತ ಚಂದ್ರಿಕಾಧವಳವಾಸಸ್ತಸ್ಕರಂ ಭಾಸ್ಕರಂ ॥ ೧೦೪

ನಿದ್ರಾಂಧಕಾರಹರನು ।
ನ್ಮುದ್ರೀಕೃತನಯನಸರಸಿಜಂ ನೃಪಹೃತ್ಪೂ ॥
ರ್ವಾದ್ರಿಯೊಳೊಗೆತಂದತ್ತು ।
ನ್ಮುದ್ರಿತತೇಜಂ ಪ್ರಬೋಧದಿನಕೃದ್ಬಿಂಬಂ ॥ ೧೦೫

ಅಂತನಂತರಂ ದಂತಧಾವನಾಸವನಾದಿವೈಭಾತಿಕಂಗಳಂ ತೀರ್ಚಿ ಸಕಲಾರ್ಚನಾದ್ರವ್ಯಸಂಸೇವ್ಯಮಪ್ಪ ದೇವಪೂಜಾನಿವಾಸಮಂ ವಾಸವನ ಕೃತ್ರಿಮಚೈತ್ಯಾಲಯಮಂ ಪುಗುವಂತೆ ಪೊಕ್ಕೀರ್ಯಾಪದಶುದ್ಧಿಯಂ ಮಾಡಿ ಕ್ರಿಯಾಪೂರ್ವಕಮಭಿವಂದಿಸಿ,

ಪದೆದರ್ಹದ್ಬಿಂಬಮಂ ಪೂಜಿಸಿದನಮಲತೀರ್ಥಾಂಬುವಿಂ ಚಂದನಕ್ಷೋ ।
ದದಿನುನ್ಮುಕ್ತಾಕ್ಷತಾದ್ರಾಕ್ಷತದಿನಳಿಮಿಳತ್ಪುಷ್ಪದಿಂ ಮೃಯಸನ್ನಾ ।

ಬಿಗಿದುಕೊಂಡಿದ್ದ ಹೂವು ಅರಳಿ ಅಗಲವಾದಂತೆಲ್ಲ ಉಡುಗಿದಂತಿದ್ದ ಕೇಸರದ ನಯವಾದ ತುದಿ ಸಚೇತನವಾಗಿ ಎದ್ದುನಿಂದು ಸೂಸುತ್ತಿರಲಾಗಿ, ತುಂಬ ವಿಕಾಸವಾದ ಬೆಳಗಿನ ಕಮಲಗಳು ತಾವರೆಗೊಳದಲ್ಲಿ ಸಂದಣಿಸಿದುವು. ೧೦೪. ಪೂರ್ವ ದಿಗಂಗನೆ ಪುಟಿಸಲಾಗಿ ಮೇಲಕ್ಕೆ ನೆಗೆದ ಕೆಂಬಣ್ಣದ ಚೆಂಡಿದು ಎಂಬವರ ಮಾತು ಹಾಗಿರಲಿ, "ನಕ್ಷತ್ರಗಳೆಂಬ ಹೂಗಳನ್ನು ಕೊಯ್ಯಲು ಆ ದಿಗಂಗನೆ ಎತ್ತಿ ಚಾಚಿದ ಕೆಂಪಾದ ಅಂಗೈಯ ತಳವೇ ಇದು" ಎಂಬಂತೆ, ಆಕಾಶಲಕ್ಷ್ಮಿ ಸುತ್ತಿದ್ದ ಬೆಳ್ದಿಂಗಳೆಂಬ ಬಟ್ಟೆಯನ್ನು ಕದ್ದ ಸೂರ್ಯನು ನಯನ ಮನೋಹರನಾಗಿ ಮೂಡಿ ಬಂದನು. ೧೦೫. ನಿದ್ದೆಯೆಂಬ ಕತ್ತಲೆಯನ್ನು ನಿವಾರಿಸಿ, ಕಣ್ಣುಗಳೆಂಬ ತಾವರೆಗಳನ್ನು ಅರಳಿಸುತ್ತ ಅರಸನ ಹೃದಯವೆಂಬ ಉದಯಾಚಲದಲ್ಲಿ ತೇಜಃಪುಂಜವಾದ ಎಚ್ಚರವೆಂಬ ಸೂರ್ಯಬಿಂಬವುದಯಿಸಿತು. ವ॥ ಅನಂತರ ದಂತಧಾವನ–ಸ್ನಾನ ಮೊದಲಾದ ಬೆಳಗಿನ ಕಾರ್ಯಗಳನ್ನು ತೀರಿಸಿಕೊಂಡು, ದೇವೇಂದ್ರನು ಅಕೃತ್ರಿಮ ಜಿನಾಲಯವನ್ನು ಹೊಗುವಂತೆ ಸಮಸ್ತ ಪೂಜಾದ್ರವ್ಯಗಳೊಂದಿಗೆ ಈರ್ಯಾ ಪಥ ಶುದ್ಧಿಪೂರ್ವಕವಾಗಿ (ಕ್ರಿಮಿಕೀಟಾದಿ ಜೀವಗಳ ಹಿಂಸೆಯಾಗದಂತೆ ಮುಂದೆ ನಾಲ್ಕು ಮೊಳ ಪರೀಕ್ಷಿಸಿ ನೋಡುತ್ತ) ನಡೆದು ವಿಧಿಪೂರ್ವಕವಾಗಿ ಅಭಿವಂದಿಸಿ– ೧೦೬. ಪವಿತ್ರವಾದ ತೀರ್ಥಜಲದಿಂದಲೂ, ಗಂಧೋದಕದಿಂದಲೂ ಉತ್ಕೃಷ್ಟವಾದ ಮುತ್ತಿನ ಸೇಸೆ, ಆದ್ರಾಕ್ಷತೆ, ಸುಗಂಧಪುಷ್ಪ ಹಾಗು ಸಾನ್ನಾಯ

ಯದಿನುದ್ಯದ್ದೀಪ್ತಿಮದ್ದೀಪದಿನಗುರುಲಸದ್ಧೂಪದಿಂ ಸತ್ಫಲವ್ರಾ।
ತದಿನಾ ಶುದ್ಧಾಂತರಂಗಂ ಸುಲಲಿತಕವಿತಾನರ್ತಕೀನೃತ್ಯರಂಗಂ ॥ ೧೦೬

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿಪದಪದ್ಮನಿಧಾನದೀಪವರ್ತಿ

## ಶ್ರೀಮದಗ್ಗಳದೇವ

ವಿರಚಿತಮಪ್ಪ

ಚಂದ್ರಪ್ರಭಪುರಾಣದೊಳ್
ಅಜಿತಸೇನಚಕ್ರಧರಚಂದ್ರಿಕಾವಿಹರಣವಿನೋದಂ

## ಅಷ್ಟಮಾಶ್ವಾಸಂ

ಗಳಿಂದಲೂ, ಉಜ್ವಲವಾದ ದೀಪಗಳಿಂದಲೂ, ಅಗುರು ಧೂಪದಿಂದಲೂ, ಉತ್ತಮವಾದ ಹಣ್ಣುಗಳಿಂದಲೂ ಅರ್ಹಂತನ ಮೂರ್ತಿಯನ್ನು ಆ ಶುದ್ಧ ಮನಸ್ಕನಾದ ಕವಿತಾ ನಿಪುಣರಾಜನು ಪೂಜಿಸಿದನು.

—ಎಂಟನೆಯ ಆಶ್ವಾಸ ಮುಗಿದುದು—

ದ್ವಿತೀಯ ಸಂಪುಟ

# ನವಮಾಶ್ವಾಸಂ

ಶ್ರೀಜಿನಮಂದಿರದಿಂದಂ ।
ಪೂಜೋತ್ಸವಪುಲಕಕಲಿತತನು ಪೋಱಮಟ್ಟಂ ॥
ರಾಜಶಿರೋಮಣಿ ಸುಕೃತಸ ।
ಮಾಜಾಕೃತಿ ಜೈನಜನಮನೋಹರಚರಿತಂ ॥ ೧

ಅನಂತರಂ

ಶೃಂಗಾರಸದನಮಂ ಮಕು ।
ಟಾಂಗದಮಣಿಹಾರಕಟಕಕುಂಡಲನವದೇ ॥
ವಾಂಗವಸನಾತ್ತಪಟಲಕ ।
ಸಂಗತಮಂ ಬಂದು ಲೀಲೆಯಿಂದೊಳಪೊಕ್ಕಂ ॥ ೨

ಅಂತು ಪೊಕ್ಕು,

ಇದೆ ಸೀಮೆಯೆನಗೆ ಸಾಮ್ರಾ ।
ಜ್ಯದ ವಿಭವಕ್ಕೆಂದು ತೋರ್ಪ ತೆಱದಿಂ ಶೃಂಗಾ ॥
ರದ ಚೆಲ್ವೆಸೆದಿರೆ ಕೈಗೈ ।
ದುದಾತ್ತನಾಸ್ಥಾನಮಂಟಪಕ್ಕೇಱ್ದಂದಂ ॥ ೩

ಅಂತು ಚತುರ್ಮುಖದ್ವಾರೋದಾರಮುಪ್ಪುತ್ತುಂಗಸರ್ವಾವಸರತವಂಗಮನೇಱ ಸಕಲ ಪ್ರಧಾನಮಂತ್ರಿಪುರೋಹಿತಾಂತರ್ವಂಶಿಕಾಧಿಕೃತರಾಜಪುತ್ರಸಮಾಜಪರಿವೇಷ್ಟಿತನಿಷ್ಟಪ್ರಾಪ್ತಾಪದವಿಷ್ಟರೋಪವಿಷ್ಟನಜಿತಸೇನಚಕ್ರಧರನಿರೆ

## ನವಮಾಶ್ವಾಸಂ

೧. ಪೂಜೋತ್ಸವದಿಂದ ಪುಲಕಿತ ಶರೀರನಾಗಿ ಜೈನಜನಪ್ರಿಯನಾದ ರಾಜೇಂದ್ರನು ಜಿನಾಲಯದಿಂದ ಮರಳಿ ಬಂದನು. ಆ ಬಳಿಕ– ೨. ಕಿರೀಟ, ರತ್ನಹಾರ, ಕಡಗ, ಕುಂಡಲ, ನವೀನವಾದ ರೇಷ್ಮೆವಸ್ತ್ರ ಮೊದಲಾದವುಗಳಿಂದ ಸಮೃದ್ಧವಾದ ಅಲಂಕಾರ ಗೃಹಕ್ಕೆ ಬಂದು ಬೆಡಗಿನಿಂದ ಒಳಹೊಕ್ಕನು. ಹಾಗೆ ಒಳಸೇರಿ–೩. ನನ್ನ ಸಾಮ್ರಾಜ್ಯ ವೈಭವಕ್ಕೆ ಇದೇ ಸೀಮೆಯೆಂದು ತೋರುವಂತೆ ಅಂದವಾಗಿ ಅಲಂಕರಿಸಿಕೊಂಡು ಒಡ್ಡೋಲಗದ ಮಂಟಪಕ್ಕೆ ಬಂದನು. ವ॥ ನಾಲ್ಕು ದಿಕ್ಕಿಗೆ ಬಾಗಿಲುಗಳುಳ್ಳ ಆ ಮಂಡಪದಲ್ಲಿಯ ಉನ್ನತವಾದ ಜಗಲಿಯ ಮೇಲೆ ತನ್ನ ಸಮಸ್ತ ಪ್ರಧಾನ ಮಂತ್ರಿ ಪುರೋಹಿತ ಕಂಚುಕಿ ಮೊದಲಾದ ಅಧಿಕಾರಿಗಳೂ ರಾಜಕುಮಾರರೂ ಸುತ್ತಲೂ

ವರಪಟ್ಟಾಂಶುಕರಾಶಿಯಂ ಸಮದಹಸ್ತಿವ್ರಾತಮಂ ಘೋಟಕೋ ।
ತ್ಕರಮಂ ರತ್ನಸಮೂಹಮಂ ಪತಿಗೆ ದೂತರ್ ತೋರಿದರ್ ದೇವ ಗು ॥
ರ್ಜರರಾಜಂ ಪದೆದಿತ್ತನಿತ್ತನೊಲವಿಂ ಕಾಳಿಂಗಭೂಪಾಲನಾ ।
ದರದಿಂ ಸಿಂಧುಮಹೀಶನಿತ್ತನೊಸೆದಿತ್ತಂ ಸಿಂಹಳಾಧೀಶ್ವರಂ ॥ ೪

ಎಂದು ತಂದ ಕಪ್ಪಂಗಳಂ ಪೆಸರ್ವೆಸರೊಳೆ ಪೇೞ್ದು ಕಂಡೆ ತದಧೀಕೃತರಪ್ಪರನೊಪ್ಪುಗೊಳ ಲ್ವೇೞ್ದು ಉಚಿತಸನ್ಮಾನಂಗಳಿನವರಂ ಬೀಡಿಂಗೆ ಕಳುಪಿ ಬೞಿಯಂ ವಸಂತಸಮಯಸಂಗತಿಯಿನಪಗತ ಜೀಮೂತನಾಗಿ ಜಿನಮತದಂತತಿಸ್ವಚ್ಛಮುಂ ನಿಶ್ಚಲಮುಂ ಮಹಾಂತಮುಮವಗಾಹಿತಸಮಸ್ತ ಪದಾರ್ಥಮುಮಾದ ಗಗನಮಂಡಲಮಂ ಚಕ್ರವರ್ತಿ ಮುಖಮಂಡನಕ್ರೀಡೆಯಿಂ ನೋಡುತ್ತಿರ್ಪನ್ನೆಗಂ ತದೇಕದೇಶದೊಳ್

ಇದು ಸುೞಿಗಾಳಿಯಿಂ ನೆಗೆದು ತೋಱುವ ಕಿಂಶುಕಶುಷ್ಕಪತ್ರಮಿಂ ।
ತಿದು ಗಗನಕ್ಕೆ ನಾಡೆ ನಲಿವಾೞೆದದೊಂದು ಕಪೋತಮಂತುಮ ॥
ಲ್ತಿದು ಪರಿದಿರ್ದ ಪಾವಸಿ ಮುಗಿಲ್ಮುೞಿಯೆಂಬಿನಮಿಂಬುಗೆಟ್ಟು ಕಂ ।
ದಿದ ಪಟಿಗಂಚುಗನ್ನಡಿವೊಲೇನಿಟಿದಾದುದೊ ಚಂದ್ರಮಂಡಲಂ ॥ ೫

ಆಗಳ್

ನೆರೆದಿರಲಾಗಿ, ನಡುವೆ ಪುಟವಿಟ್ಟ ಚಿನ್ನದ ಸಿಂಹಾಸನದ ಮೇಲೆ ಅಜಿತಸೇನ ಚಕ್ರವರ್ತಿ ಕುಳಿತಿರಲಾಗಿ–೪. "ದೇವ, ಇದು ಗುರ್ಜರ ರಾಜನು ಸಂತೋಷದಿಂದ ಇತ್ತುದು, ಇದು ಕಳಿಂಗರಾಜನು ಒಲವಿನಿಂದ ಒಪ್ಪಿಸಿದುದು, ಇಕೋ ಇದು ಸಿಂಧು ದೇಶದ ಅರಸನಿಂದ ಬಂದುದು, ಇದು ಸಿಂಹಳಭೂಪತಿಯ ಸ್ನೇಹದ ಕಾಣಿಕೆ ಎಂದು ಉತ್ಕೃಷ್ಟವಾದ ಪಟ್ಟೆವಸ್ತ್ರಗಳ ರಾಶಿಯನ್ನೂ ಮದ್ದಾನೆಗಳ ಹಿಂಡನ್ನೂ ಕುದುರೆಗಳ ಸಮುದಾಯವನ್ನೂ, ರತ್ನಸಮೂಹವನ್ನೂ ದೂತರು ತೋರಿಸಿದರು. ವ॥ ಹಾಗೆ ಆಯಾ ರಾಜರ ಹೆಸರೊಡನೆ ಅವರವರು ಕಳಿಸಿದ ಕಪ್ಪಗಳನ್ನು ತಂದು ಒಪ್ಪಿಸಲಾಗಿ, ಭಾಂಡಾರದ ಅಧಿಕಾರಿಗಳಿಗೆ ಅವುಗಳನ್ನು ಒಪ್ಪಿಸಿಕೊಳ್ಳಲು ಆಜ್ಞಾಪಿಸಿ ರಾಜನು ಯೋಗ್ಯವಾದ ಮನ್ನಣೆಗಳೊಡನೆ ಅವರನ್ನು ಬೀಡಿಗೆ ಕಳಿಸಿದನು; ಬಳಿಕ ವಸಂತ ಸಮಯದಿಂದಾಗಿ ಮೋಡಗಳಿಲ್ಲದೆ ಜಿನಮತದಂತೆ ಅತ್ಯಂತ ಸ್ವಚ್ಛವಾಗಿಯೂ, ನಿಶ್ಚಲವಾಗಿಯೂ, ಅನಂತವಾಗಿಯೂ ಸಮಸ್ತ ಪದಾರ್ಥ ಗಳನ್ನಾವರಿಸಿಕೊಂಡಿರುವ ಆಕಾಶಮಂಡಲವನ್ನು ವಿನೋದದಿಂದ ನೋಡುತ್ತ ಇರುವಾಗ ಒಂದು ದಿಕ್ಕಿನಲ್ಲಿ – ೫. ಸುಳಿಗಾಳಿಯಿಂದ ಮೇಲಕ್ಕೆ ನೆಗೆದ ಮುತ್ತುಗದ ತರಗೆಲೆಯೊ, ಸಂತೋಷದಿಂದ ಆಕಾಶಕ್ಕೆ ಹಾರಲು ಹೊರಟ ಪಾರಿವಾಳವೊ, ಅಥವಾ ಹರಿದ ಹಾವಸೆಯೊ, ಮುಗಿಲ ತುಂಡೊ ಏನೊ ಎಂಬಂತೆ ಹಸಗೆಟ್ಟು ಮಸುಕಾದ ಹಳೆಯ ಕನ್ನಡಿಯ ಹಾಗೆ ಚಂದ್ರಬಿಂಬವು ಕಾಂತಿಹೀನ

ಆಪರಿಪಾಂಡುರಪ್ರತತಿಯಾದ್ಯುತಿಯಾತತಿಯಾಮನೋಭವೋ।
ದ್ದೀಪನವೃತ್ತಿಯಾಗ್ರಹಪರಿಗ್ರಹಸಂಗತಿಯಾಸುಧಾಮಯ ॥
ವ್ಯಾಪೃತಿಯಾಪ್ರಪೂರ್ಣವಲಯಾಕೃತಿಯೀಗಳದೆತ್ತವೋದುದೆಂ।
ದಾಪೃಥಿವೀಶ್ವರಂ ಪಗಲ ತಿಂಗಳನಚ್ಚರಿವಟ್ಟು ನೋಡಿದಂ ॥ ೭

ತಿಂಗಳ ಸಿರಿಯಿದು ಮುನ್ನಮೆ।
ತಿಂಗಳ ಸಿರಿಯಲ್ತು ಪಕ್ಷಮೆಂಬಾಪಕ್ಷಂ ॥
ಸಂಗತಿವಡೆಯದು ಪಗಲೀ।
ಭಂಗಿ ದಲದಱಂದವಾರೋ ನೆರೆಸಿರಿಯೆಱೆಯರ್ ॥ ೭

ದೇವಗತಿಯಲ್ಲಿ ಪೆಸರ್ವೆ।
ತ್ತೀವಿಧುಗಂ ಕಾಲವಶದೊಳಿಂತಾಯ್ತಾಮಿ ॥
ನ್ನೀವಿಷಮಭವದೊಳಾಗದ।
ದೇವಿಧಿವಟ್ಟಪೆವೊ ಮುಂದೆ ಶಲಭೋಪಾಯರ್ ॥ ೮

ಇರುಳಾದ ಚೆಲ್ವು ಪಗಲೋ।
ಸರಿಪುದು ಚಂದ್ರಂಗೆ ರವಿಗೆ ಪಗಲಾದೊಪ್ಪಂ ॥
ಪರಿಹರಿಪುದಿರುಳ್ ತಾನೆನೆ।
ನರಂಗೆ ಲೇಸೆಂದುಮೆಂತುಮೇಂ ನಿಂದಪುದೇ ॥ ೯

ವಾಗಿ ತೋರಿತು. ಆಗ–೬. ಪರಿಶುಭ್ರವಾದ ಬೆಳಕಿನುಂಡೆಯಾಗಿದ್ದ, ಕಾಮೋದ್ದೀಪಕ ವಾಗಿದ್ದ, ಗ್ರಹಗಳೊಡನೆ ಶೋಭಿಸುತ್ತ, ಅಮೃತರಸವನ್ನು ತುಂಬಿಕೊಂಡಿದ್ದ, ಪರಿಪೂರ್ಣ ಮಂಡಲಾಕೃತಿಯಾಗಿದ್ದ ಆ ಚಂದ್ರನ ಶೋಭೆ ಈಗ ಎತ್ತ ಹೊರಟು ಹೋಯಿತು ಎಂದು ಅರಸನು ವಿಸ್ಮಯಭರಿತನಾಗಿ ಹಗಲ ಚಂದ್ರನನ್ನು ದಿಟ್ಟಿಸಿದನು. ೭. "ತಿಂಗಳು" ಎನಿಸಿಕೊಂಡು ಚಂದ್ರನ ವೈಭವ ತಿಂಗಳವರೆಗಂತೂ ಅಲ್ಲವೇ ಅಲ್ಲ; ಕೊನೆಗೆ ಪಕ್ಷವೆಂದರೆ ಆ ಪಕ್ಷವೂ ಪೂರ್ತಿಯಲ್ಲ, ರಾತ್ರಿ ಕಳೆದು ಹಗಲಾದೊಡನೆ ಅವನಿಗೆ ಈ ಅವಸ್ಥೆ! ಸ್ಥಿರವಾದ ಸಿರಿಗೆ ಒಡೆಯರಾಗಿರುವವರಾರು ? ೮. ದೇವ ಗತಿಯಲ್ಲಿ ಪ್ರಸಿದ್ಧನೆನಿಸಿಕೊಂಡ ಚಂದ್ರನಿಗೇ ಕಾಲವಶದಿಂದ ಈ ಗತಿಯೊದಗಿತು ಎಂದ ಮೇಲೆ ವಿಷಮವಾದ ಈ ಸಂಸಾರದಲ್ಲಿ ಏನೇನು ಒದಗಲಿಕ್ಕಿಲ್ಲ? ದೀಪಕ್ಕೆ ಮುತ್ತುವ ಹುಳುಗಳಂತಿರುವ ನಾವು ಯಾವ ಗತಿಗೆ ಮುಟ್ಟುವೆವೊ ? ೯. ಚಂದ್ರನಿಗೆ ಇರುಳಲ್ಲಿ ರುವ ಚೆಲುವು ಹಗಲಿಗೆ ಉಳಿಯುವುದಿಲ್ಲ; ಸೂರ್ಯನಿಗೆ ಹಗಲಲ್ಲಿರುವ ಶೋಭೆ ರಾತ್ರಿಯ ಹೊತ್ತಿಗೆ ಹೊರಟು ಹೋಗುವುದು ಎಂದ ಮೇಲೆ ಮನುಷ್ಯನಿಗೆ "ಲೇಸು" ಎಂಬ

ಇಂದೆಮಗೆ ಚಂದ್ರಬಲಮುಂ ।
ಟೆಂದು ಕೆಲರ್ ನಲಿದು ನಚ್ಚುವರ್ ಚಂದ್ರಂಗಂ ॥
ಕಂದುಂ ಕುಂದುಂ ದಿವಸದೊ ।
ಳೊಂದಿದುದೆನೆ ಕಳಿವರಾರೊ ಕಾಲದ ಗುಣಮಂ ॥ ೧೦

ಅಂತು ವಾಸರೇಂದುದರ್ಶನಂ ವೈರಾಗ್ಯಸಾಗರವೃದ್ಧಿಯಂ ಪಡೆಯಲೊಡಂ ಶರೀರಸಂಪದಾಯುರ್ಯೌವನಂಗಳಧ್ರುವಭಾವನೆಯೆ ಮನದೊಳ್ ನಟ್ಟು ನಿಂದು

ಘನಮೆನಿಪುದು ಮತ್ತಂತಪ ।
ಘನಮೆನಿಪುದು ಭಾವಿಪೊಡೆ ಘನಾಘನಮುಂ ತಾ ॥
ನೆನಿಪುದು ಪೆಸರ್ಗೇಕಸ್ಥಿತಿ ।
ಯಿನಿತಿಲ್ಲವಯವದೊಳಕ್ಕುಮೇ ಅಱಿಯೊಡಲುಂ ॥ ೧೧

ಪಿಡಿವಿಡಿಯೆ ಕರಗುವುದು ಬ ।
ಯ್ತೊಡೆ ಮಸಿಯಾಗಿರ್ಪುದಲ್ಲದಿರ್ದೊಡೆ ಪೆಱರ್ಗಾ ॥
ಗಡೆ ಬಂದಪೆನೆಂಬುದು ಗಡ ।
ಸುಡು ಧನಮೆ ಜಗಕ್ಕೆ ದುಃಖಸಾಧನಮಲ್ತೇ ॥ ೧೨

ಕುತ್ತಂ ಬಿಟ್ಟೊಡೆ ಪಗೆ ಬೆಂ ।
ಬತ್ತುವನವನುಱಿಯೆ ಕೊಲ್ವುದಹಿಯದು ಮುಂ ತ ॥
ಪ್ಪಿತ್ತೆನೆ ಪೊಡೆವುದು ಬಱಸಿಡಿ ।
ಲೆತ್ತಿದು ಮಾನವರ್ಗೆ ಜವನ ಜತ್ತಕುಱಲ್ತೇ ॥ ೧೩

ಸ್ಥಿತಿ ಏನಾದರೂ ಸ್ಥಿರವಾಗಿ ನಿಲ್ಲವುದೆ? ೧೦. ಇಂದು ನಮಗೆ ಚಂದ್ರಬಲವುಂಟೆಂದು ಕೆಲವರು ನಚ್ಚಿನಲಿದಾಡುವರು. ಆ ಚಂದ್ರನಿಗೇ ದಿನದಿನಕ್ಕೆ ಕಂದುವುದೂ ಕುಂದುವುದೂ ಉಂಟೆಂದ ಮೇಲೆ ಕಾಲದ ಪ್ರಭಾವವನ್ನು ಮೀರುವವರು ಯಾರು? ವ॥ ಹೀಗೆ ಹಗಲ ಚಂದ್ರನ ದರ್ಶನದಿಂದ ವೈರಾಗ್ಯವೆಂಬ ಸಮುದ್ರ ಉಕ್ಕೇರಲಾಗಿ, ದೇಹ, ಸಂಪತ್ತು, ಆಯುಸ್ಸು, ಯೌವನ–ಇವೆಲ್ಲ ಅನಿತ್ಯವೆಂಬ ಭಾವನೆಯೆ ಮನಸ್ಸಿನಲ್ಲಿ ನಟ್ಟು ನಿತುವು. ೧೧. ಮೋಡದಂತೆ ದೇಹವು ಕೂಡ "ಘನ" (೧. ಮೋಡ, ೨. ಸದೃಢವಾದುದು) "ಅಪಘನ" (೧. ನೀರಿಲ್ಲದುದು ೨. ಅವಯವಗಳುಳ್ಳದು) "ಘನಾಘನ" (೧. ಮಳೆಮೋಡ. ೨. ಅತ್ಯಂತ ಉತ್ತಮವಾದುದು) ಎಂದು ಎನಿಸಬಹುದು. ಹೆಸರಲ್ಲಿ ಎರಡೂ ಒಂದೇ, ಇನ್ನು ಗತಿಯಲ್ಲಿ ಈ ನಶ್ವರದೇಹಕ್ಕೂ ಮೋಡಕ್ಕೂ ಭೇದವಿದ್ದೀತೆ? ೧೨. ಧನವೆಂಬುದು ಹಿಡಿಹಿಡಿಯುವುದರಲ್ಲಿ ಕರಗಿ ಹೋಗುವುದು; ಹೂಳಿಟ್ಟರೆ ಮಸಿಯಾಗಿ ಬಿಡುವುದು; ಇಲ್ಲವೆ ಹೆರವರ ಪಾಲಾಗುವೆನೆನ್ನುವುದು, ಧನವೇ ಜಗತ್ತಿಗೆ ದುಃಖಕಾರಣವಲ್ಲವೆ? ೧೩. ರೋಗ ಬರುವುದು; ಅದರಿಂದ ಮುಕ್ತನಾದರೆ ಶತ್ರು ಬೆನ್ನಟ್ಟುವನು; ಅವನಿಂದ ಪಾರಾದರೆ ಹಾವು ಕಚ್ಚಿ ಕೊಲ್ಲುವುದು; ಅದೂ ತಪ್ಪಿದರೆ ಬರಸಿಡಿಲು ಬಂದು ಬಡಿಯುವುದು, ಮಾನವ

ಬಿಡದೆ ಜರೆಯೆಂಬ ಕಾಟ್ಕಿ ।
ಚ್ಚಡರ್ದೆತ್ತಲುಮಟುರೆ ಮೋಹದಿಂದೋವುವ ಕೆ ॥
ಟ್ಟೊಡಲಿನಿತು ಮೋಹದಿರವಂ ।
ಪಡೆದಪುದೊ ಬಟಿಕ್ಕೆ ಮಿಕ್ಕು ಯೌವನವನದೊಳ್ ॥ ೧೪

ಮಂದಗತಿ ಪಿಂಗೆ ಬುಧವೃ ।
ತ್ತಂ ದೊರೆಕೊಳೆ ವಕ್ರತರತಮೋರಿವಿಜಯಧಿ ॥
ಷ್ಣ್ಯಂ ದಲೆನಿಸಿತ್ತು ಮನ್ಮನ ।
ಮಿಂದೆನಗೀದಿವಸದಿಂದು ಗುರುವಾದುದಱಿಂ ॥ ೧೫

ಎಂದು ಮಾಣದೆ

ಆ ವಧುವಂ ಶಶಿಪ್ರಭೆಯನಾದ್ಯಶಶಿಪ್ರಭೆಯೆಂದು ಚಕ್ರಮಂ ।
ಕೋವರ ಚಕ್ರಮೆಂದು ನಿಧಿಯಂ ಲಯಸನ್ನಿಧಿಯೆಂದು ತನ್ನ ಕೇ ॥
ಳೀವನಮಂ ಪರೇತವನಮೆಂದವನೀಶನವಂ ಸಮಂತು ಸಂ ।
ಭಾವಿಸಿದಂದು ಭಾವಿಸದನೊಂದನೆ ದಂದುಗದಿಂದಗಲ್ದುದಂ ॥ ೧೬

ಆ ಪ್ರಸ್ತಾವದೊಳ್

ಆ ನೃಪನೋಲಗಕ್ಕೆ ಋಷಿಯಾನನಿವೇದಕನೊರ್ವನೆಯ್ದಿ ಬಂ ।
ದಾನತನಾಗಿ ದೇವ ನಿಜಪುಣ್ಯವೆ ತಂದವೊಲಿಂದು ಬಂದು ಸಂ ॥
ಜ್ಞಾನಮಯಂ ದಯಾರ್ದ್ರಹೃದಯಂ ಸುತಪೋವಿಭವಂ ಶಿವಂಕರೋ ।
ದ್ಯಾನದೊಳಿರ್ದಪಂ ಪರಿವೃತವ್ರತಿವೃಂದಸಭಂ ಗುಣಪ್ರಭಂ ॥ ೧೭

ನೆಂಬವನು ಯಮನಿಗೆ ಆಟದ ವಸ್ತುವಲ್ಲವೆ? ೧೪. ಮುಪ್ಪೆಂಬ ಕಾಡುಗಿಚ್ಚು ಎತ್ತೆತ್ತಲೂ ಅವರಿಸಿಕೊಂಡು ಮುತ್ತುವಾಗ, ಅದನ್ನು ಮೀರಿ ಈ ಹಾಳೊಡಲು ಯೌವನವೆಂಬ ವನವನ್ನು ಮೋಹದಿಂದ ಉಳಿಸಿಕೊಳ್ಳಬಲ್ಲುದೆ? ೧೫. ಮಂದಗತಿ ತೊಲಗಿ, ಜ್ಞಾನವೃತ್ತಿ ಉಂಟಾಗುವಂತೆ ಇಂದು, ನನಗೆ ಗುರುವಾಗಿ ನಿಂತು ಬಹುಕಪಟಿಯಾದ ಅಜ್ಞಾನ ವೈರಿಯನ್ನು ಗೆಲ್ಲುವುದಕ್ಕೆ ನನ್ನ ಮನಸ್ಸು ಯೋಗ್ಯಸ್ಥಾನವಾಯಿತು [ಈ ಪದ್ಯದಲ್ಲಿ "ಇಂದು" (ಚಂದ್ರ), "ತಮೋರಿ" (ಸೂರ್ಯ), "ವಕ್ರ" (ಮಂಗಳ) "ಬುಧ," "ಗುರು" ಧಿಷ್ಣ್ಯ "(ಶುಕ್ರ), ಮತ್ತು "ಮಂದಗತಿ" (ಶನಿ) ಎಂದು ಏಳೂಗ್ರಹಗಳ ಹೆಸರು ಬರುವಂತೆ ಪದರಚನೆಯಿದೆ]. ವ॥ ಎಂದು (ಅಷ್ಟಕ್ಕೇ) ಬಿಡದೆ–೧೬. ತನ್ನ ಹೆಂಡತಿಯಾದ ಶಶಿಪ್ರಭೆಯನ್ನು "ಅನಾದ್ಯ ಶಶಿಪ್ರಭೆ" "(ಅಮಾವಾಸ್ಯೆಯ ಚಂದ್ರಕಾಂತಿ) ಯೆಂದೂ, ಚಕ್ರರತ್ನವನ್ನು ಕುಂಬಾರನ ತಿಗುರಿಯೆಂದೂ, ನವನಿಧಿಗಳನ್ನು ಪ್ರಳಯ ಸಹವಾಸವೆಂದೂ, ತನ್ನ ಕ್ರೀಡೋದ್ಯಾನವನ್ನು ಸ್ಮಶಾನವೆಂದೂ, ಭಾವಿಸಿದನು, ಎಲ್ಲಕ್ಕೂ ಮೇಲಾಗಿ! ಸಂಸಾರದ ಈ ಕಷ್ಟಗಳೆಲ್ಲವುಗಳಿಂದ ಅಗಲುವ ಭಾವನೆ ಮುಖ್ಯವಾದುದು, ಆ ಸಮಯದಲ್ಲಿ–೧೭. ಆತನ ಓಲಗಕ್ಕೆ ಋಷಿನಿವೇದಕನೊಬ್ಬನು ಬಂದು, ನಮಸ್ಕರಿಸಿ "ದೇವ, ನಿಮ್ಮ ಪುಣ್ಯವೇ ಕರೆತಂದಂತೆ ಇಂದು ಜ್ಞಾನಮಯನೂ,

ಎಂದು ಬಿನ್ನವಿಪುದುಂ ರಥಾಂಗಧರನಾತ್ಮಮನೋರಥಕ್ಕೆ ಸಾರಥಿಯಂ ಪಡೆದೆನೆಂದು ಸಂತಸದಂತನೆಯ್ದಿ

ಪುದಿದ ತೊಡರೆಲ್ಲಮಂ ಪಱಿ।
ಯೊದಿದು ಬನಕ್ಕಾಗಿ ನೆಗೆದು ಕದುಪಂ ಕೂಡಲ್ ॥
ಮದಗಜರಾಜಂ ನಡವಂ।
ದದೆ ನಡದಂ ಮುದದಿ ಮುನಿಜನಕ್ಕವನೀಶಂ ॥

೧೮

ಅಂತು ಸಕಲಪುರಜನಪರಿಜನಂ ಬೆನ್ನನೆ ಬರೆ ಬಂದತ್ಯಂತಶುಚಿಯುಂ ವಿವಿಕ್ತಮುಂ ಮನೋಹರಮುಮಪ್ಪ ಋಷ್ಯಾಶ್ರಮಮನಾಶ್ರಿತಶ್ರೇಯನೆಯ್ದಿವರ್ಪಾಗಳ್

ಸುತಪಃಕೃಶೀಕೃತಂ ಸಂ।
ಶ್ರಿತಧೈರ್ಯಂ ಸೂರ್ಯಧಾಮಸಮುದಯಲಕ್ಷ್ಮೀ ॥
ಕೃತತನು ತಪಸ್ವಿಯಿರ್ದಂ।
ಪ್ರತಿಮಾಯೋಗದೊಳಖರ್ವಗುಣಗಣನೊರ್ವಂ ॥ ೧೯

ಮತ್ತಂ,

ಸರ್ವಾಂಗಮಲಧರಂ ಪರಿ।
ನಿರ್ವೃತಿಸೌಖ್ಯೋನ್ಮುಖಂ ವ್ಯಪಾಕೃತಮೋಹಂ ॥
ಸರ್ವಜ್ಞಸೂಕ್ತಿಪಠನದಿ।
ನೊರ್ವಂ ಋಷಿಯಿರ್ದನಾತ್ತಗುರುಸೌಹಾರ್ದಂ ॥ ೨೦

ಕರುಣಾಂತರಂಗನೂ, ತಪೋಧನನೂ ಆದ ಗುಣಪ್ರಭಮುನಿಯತಿಸಮೂಹದೊಡನೆ ಬಂದು ಶಿವಶಂಕರವೆಂಬ ಉದ್ಯಾನದಲ್ಲಿ ಉಳಿದುಕೊಂಡಿರುವನು" ವ॥ ಎಂದು ಬಿನ್ನವಿಸಿದನು. ಚಕ್ರವರ್ತಿಯು ತನ್ನ ಮನವೆಂಬ ರಥಕ್ಕೆ ಸಾರಥಿಯನ್ನೆ ಪಡೆದೆನೆಂದು ಅತ್ಯಂತ ಸಂತುಷ್ಟನಾಗಿ–೧೮. ಮೈ ತುಂಬ ಇದ್ದ ಆಭರಣಗಳನ್ನೆಲ್ಲ ಕಿತ್ತೆಸೆದು, ತನ್ನ ಹಿಂಡನ್ನು ಕೂಡಿಕೊಳ್ಳಲು ಮದಿಸಿದ ಗಜೇಂದ್ರನು ವನಕ್ಕೆ ಹೊರಡುವಂತೆ ಮುನಿಜನರನ್ನು ಕೂಡಿಕೊಳ್ಳಲು ಭೂಪಾಲನು ಉದ್ಯಾನಕ್ಕೆ ಹೊರಟನು. ವ॥ ಪುರಜನರೆಲ್ಲರೂ ತನ್ನ ಬೆನ್ನ ಹಿಂದೆಯೆ ಬರಲಾಗಿ, ಅವರೊಡನೆ ಪವಿತ್ರವೂ ಮನೋಹರವೂ ಆದ ಆ ಋಷ್ಯಾಶ್ರಮವನ್ನು ಸಮೀಪಿಸಿದನು, ಅಲ್ಲಿ– ೧೯. ತಪಸ್ಸಿನಿಂದ ಸೊರಗಿ ಸಣ್ಣಾಗಿದ್ದರೂ ಸೂರ್ಯನಂತೆ ತೇಜಃಪುಂಜವಾದ ಶರೀರವುಳ್ಳ ಮುನಿಯೊಬ್ಬನು ಪ್ರತಿಮಾಯೋಗದಲ್ಲಿದ್ದನು, ಮತ್ತು– ೨೦. ಸಮಸ್ತದೇಹವೆಲ್ಲ ಮಲಧಾರಿಯಾಗಿ, ಮೋಕ್ಷಸುಖಕ್ಕೆ ಅಭಿಮುಖನಾದ ಋಷಿಯೊಬ್ಬನು ಮೋಹಮುಕ್ತನಾಗಿ ಸರ್ವಜ್ಞರ

ರಾದ್ಧಾಂತಪಾರಗಂ ಗುಣ ।
ವೃದ್ಧಂ ಮಾರ್ಗಪ್ರಭಾವನಾರ್ಥದಿನಿರ್ದಂ ॥
ಸದ್ಧರ್ಮಕಥಾಕಥನದಿ ।
ನಿರ್ದನದೊರ್ವಂ ತಪೋಧನಂ ಜ್ಞಾನಧನಂ ॥ ೨೧

ತನ್ನಿಂದೆ ತಿಳಿದು ತನ್ನಂ ।
ತನ್ನೊಳೆ ತಾಂ ನಿಂದು ತನ್ನೊಳುದಯಿಸಿದ ಸುಖಂ ॥
ತನ್ನನೆ ತಣಿಪುತ್ತಿರೆ ಮುನಿ ।
ಪನ್ನಿಹಿತಧ್ಯಾನನೊಪ್ಪಿದವಂ ಪೆಱನೊರ್ವಂ ॥ ೨೨

ಉದ್ಯನ್ನಯಪ್ರಮಾಣಮ ।
ಹಾದ್ಯುತಿಯಿಂ ಮಸುಳೆ ಕುನಯಖದ್ಯೋತಂ ತ ॥
ತ್ತ್ವೋದ್ಯೋತಿಕನೆಸೆದಿರ್ದಂ ।
ಹೃದ್ಯಾಕೃತಿಸಾಧುಭಾಸ್ಕರಂ ಮತ್ತೊರ್ವಂ ॥ ೨೩

ಅಂತನೇಕಯೋಗನಿಯೋಗಯುಕ್ತರಪ್ಪ ಪಲಂಬರ್ ಮುನೀಂದ್ರಚಂದ್ರರಂ ಪ್ರತಿವಿಕಸಿತ ವಿಲೋಚನಾಲೋಕಸಮುದಯಕುಮುದಸ್ರಜಂಗಳಿಂ ಸಾರ್ವಭೌಮನರ್ಚಿಸುತುಂ ತದಾಶ್ರಮಮಂ ಪುಗುವಾಗಳ್

ತೊಳಪ ಗುಣೋತ್ಕರಂ ಬಳಸಿದೂರ್ಜಿತಧರ್ಮದೆ ಸನ್ನಯೋತ್ಕರಂ ।
ಬಳಸಿದ ತತ್ವನಿಶ್ಚಯದೆ ಕೂಡೆ ನಿಜಾಂಚಿತಲಕ್ಷಣೋತ್ಕರಂ ॥
ಬಳಸಿದಗಾಧಬೋಧದ ವಿಲಾಸಮನೇಟಿಸಿ ತಾಪಸೋತ್ಕರಂ ।
ಬಳಸಿದ ತದ್ಗುಣಪ್ರಭಮುನಿಪ್ರಭುವೊಪ್ಪಿದನಂದು ನಾಡೆಯುಂ ॥ ೨೪

ಸೂಕ್ತಿಗಳನ್ನು ಪಠಿಸುತ್ತಿದ್ದನು. ೨೧. ಜ್ಞಾನನಿಧಿಯೂ ಸಿದ್ಧಾಂತ ವಿಶಾರದನೂ, ಗುಣದಿಂದ ಹಿರಿಯನೂ, ಆದ ಜ್ಞಾನಿ ತಪಸ್ವಿಯೊಬ್ಬನು ಸನ್ಮಾರ್ಗದರ್ಶನಕ್ಕಾಗಿ ಸದ್ಧರ್ಮ ಕಥೆಗಳನ್ನು ಹೇಳುತ್ತಿದ್ದನು. ೨೨. ತನ್ನನ್ನು ತನ್ನಿಂದಲೆ ತಿಳಿದುಕೊಂಡು, ತನ್ನಲ್ಲಿ ಉಂಟಾದ ಸುಖದಲ್ಲಿ ತಣಿಯುತ್ತಿರುವ ಮುನಿಶ್ರೇಷ್ಠನೊಬ್ಬನು ಧ್ಯಾನ ಮಗ್ನನಾಗಿ ಶೋಭಿಸಿದನು. ೨೩. ಉಜ್ವಲವಾದ ನಯಪ್ರಮಾಣದಿಂದ ಕುನಯದ ಕಾಂತಿಯನ್ನು ಮಸುಳಿಸುತ್ತ ತತ್ವಗಳನ್ನು ಬೋಧಿಸುವ ಮನೋಹರಾ ಕಾರದ ಸಾಧು ಸೂರ್ಯನೊಬ್ಬನು ಕಂಗೊಳಿಸಿದನು. ವ॥ ಹೀಗೆ ಅನೇಕ ಯೋಗಗಳಲ್ಲಿ ನಿರತರಾದ ಹಲವರು ಮುನೀಂದ್ರ ಚಂದ್ರರನ್ನು ತನ್ನ ಅರಳಿದ ಕಣ್ಣುಗಳ ನೋಟವೆಂಬ ನೈದಿಲೆಗಳ ಮಾಲೆಗಳಿಂದ ಅರ್ಚಿಸುತ್ತ ಚಕ್ರವರ್ತಿಯು ಆ ಆಶ್ರಮವನ್ನು ಪ್ರವೇಶಿಸಿದನು. ಅಲ್ಲಿ ೨೪. ಶ್ರೇಷ್ಠವಾದ ಧರ್ಮಾಚರಣೆಯಿಂದ ಗುಣಸಮೂಹ ಸಂಪನ್ನನು; ತತ್ವನಿಶ್ಚಯದಿಂದ ಉತ್ತಮವಾದ ನಯ ಸಮುದಾಯಗಳಿಂದ ಕೂಡಿದವನು ಅಗಾಧವಾದ ಜ್ಞಾನವಿಲಾಸದಿಂದ ಅನೇಕ ಲಕ್ಷಣಯುಕ್ತನು ಎಂದೆನಿಸಿದ ಗುಣಪ್ರಭಮುನಿ ತಪಸ್ವಿಗಳ ಸಮೂಹ

ಅಗ್ರದೊಳೊಪ್ಪುವ ವಿಮಳಶಿ ।
ಲಾಗ್ರದೊಳಿರೆ ಮುನಿಯ ಮೂರ್ತಿ ನೆನೆಯಿಸಿದುದು ಲೋ ॥
ಕಾಗ್ರದೊಳೊಪ್ಪುವ ವಿಮಲಶಿ ।
ಲಾಗ್ರದೊಳೆಸೆದಿರ್ದ ಸಿದ್ಧಶುದ್ಧಾಕೃತಿಯಂ ॥ ೨೫

ಅದಲ್ಲದೆಯುಂ,

ಕಾವೆಸೆವ ಕಱೆಯ ನೆಯ್ದಿಲ ।
ಪೂವಂ ಪೂಜಿಸಿದ ತೆಱದೆ ತನುಮುನಿಪದರಾ ॥
ಜೀವದ ಕೆಲದೊಳ್ ವೇತ್ರಲ ।
ತಾವೃತವೆಸೆದತ್ತು ಮಸೃಣಪಿಂಛಗುಳುಚ್ಛಂ ॥ ೨೬

ಸ್ಥಳಕಮಳಶಂಕೆಯಿಂ ಯತಿ ।
ಚಳನಂಗಳನಳಿಪಿ ಸಾರ್ದ ಹಂಸನ ಚೆಲ್ವಂ ॥
ತಳೆದೇನೆಸೆದುದೊ ತೊಳತೊಳ ।
ತೊಳಗುವ ಶಶಿಕಾಂತಮಣಿಕಮಂಡುಲು ಕೆಲದೊಳ್ ॥ ೨೭

ಅಂತು ಸಮೀಚೀನಸಂಯಮೋಪಕರಣಾಲಂಕೃತನಾಗಿರ್ದ ಮುಮುಕ್ಷುಮುಖ್ಯನಂ ತ್ರಿಪ್ರದಕ್ಷಿಣಂಗೆಯ್ದು ಗುರುಭಕ್ತಿಪೂರ್ವಕಮಭಿವಂದಿಸಲೊಡಂ

ಯತಿ ಪರಸೆ ಧರ್ಮವೃದ್ಧಿ ।
ಶ್ರುತಿಯೊಗೆದುದು ತನ್ಮುಖೇಂದುವಿಂದಂ ಕರ್ಣಾ ॥
ಮೃತಮುತ್ಥಿತಪುಳಕಾಂಕುರ ।
ತತಿಯುಪಹೃತಮೋಹತಾಪಮತಿಮೃದುಮಧುರಂ ॥ ೨೮

ದೊಡನೆ ಕಂಗೊಳಿಸಿದನು. ೨೫. ಎತ್ತರದಲ್ಲಿರುವ ನಿರ್ಮಲವಾದ ಬಂಡೆಗಲ್ಲಿನ ಮೇಲೆ ಇರುವ ಮುನಿಯ ಆಕೃತಿಯು ಲೋಕದ ತುದಿಯಲ್ಲಿರುವ (ಸಿದ್ಧಾ) ಶಿಲೆಯ ಮೇಲಿನ ಸಿದ್ಧನ ಪವಿತ್ರಾಕೃತಿಯನ್ನು ಸ್ಮರಣೆಗೆ ತಂದಿತು. ಅದಲ್ಲದೆ–೨೬. ನಾಳ ಸಹಿತವಾದ ನೈದಿಲೆಯ ಹೂವನ್ನೆ (ಮುನಿಗೆ) ಪೂಜೆಯೇರಿಸಿದರೊ ಏನೊ ಎಂಬಂತೆ, ಆ ಮುನಿಯ ಪಾದಕಮಲಗಳ ಬಳಿಯಲ್ಲಿ ಬೆತ್ತದ ಸಳೆಗೆ ಅಳವಡಿಸಿದ ಮೃದುವಾದ ನವಿಲ್ಗರಿಯ ಕುಂಚ ಶೋಭಿಸಿತು. ೨೭. ಮುನಿಯ ಪಾದಗಳನ್ನು ನೆಲದಾವರೆಗಳೆಂದು ಭ್ರಮಿಸಿ ಬಳಿಗೆ ಬಂದ ಹಂಸವೊ ಏನೊ ಎಂಬಂತೆ ಆತನ ಪಕ್ಕದಲ್ಲಿ ಹೊಳೆಯುವ ಚಂದ್ರಕಾಂತದ ಕಮಂಡಲು ಒಪ್ಪಿತು. ವ॥ ಹೀಗೆ ತಪಸ್ವಿಗಳಿಗೆ ಯೋಗ್ಯವಾದ ಉಪಕರಣಗಳಿಂದ ಶೋಭಿಸುವ ಯತಿಶ್ರೇಷ್ಠನನ್ನು ಮೂರುಸಲ ಪ್ರದಕ್ಷಿಣೆಗೊಂಡು ಅರಸನು ಗುರುಭಕ್ತಿಯಿಂದ ಅಭಿವಂದಿಸಲಾಗಿ– ೨೮. ಆ ಮುನಿಯ ಮುಖದಿಂದ ಅತ್ಯಂತ ಮಧುರವೂ ಮೋಹತಾಪ ನಿವಾರಕವೂ, ರೋಮಾಂಚಜನಕವೂ ಕಿವಿಗಳಿಗೆ ಅಮೃತಪ್ರಾಯವೂ ಆದ ಆಶೀರ್ವಾದ ವಚನದೊಡನೆ "ನಿನಗೆ ಧರ್ಮವೃದ್ಧಿಯಾಗಲಿ" ಎಂಬ ಮಾತು ಸೂಸಿ

ಅನಂತರಮಾ ಪರಕೆಯೊಡನೊಗೆದಶೇಷರ್ಷಿವೃಷಭದತ್ತಾಶೀರ್ವಾದಮಂ ನೃಪಚಿಂತಾಮಣಿ ಕರ್ಣಪೂರಂಮಾಡಿ ಸಂತಸದಿಂ ಕುಳ್ಳಿರ್ದು

ಚಿತ್ತಶುಭದುದಯವಶದಿಂ ।
ದೆತ್ತಾನುಂ ನೆನೆಯೆ ನಿಮ್ಮನಂತವನೆ ಮುನೀಂ ॥
ದ್ರೋತ್ತಮ ಕೃತಾರ್ಥನೆನೆ ಕಾ ।
ಣುತ್ತೆಱಗುತ್ತಿರ್ದನೊಳ್ಪನದನೇವೇೞ್ವೆಂ ॥ ೨೯

ಜನಿತಕುದೃಷ್ಟಿಭ್ರಮಮತಿ ।
ಘನಮೋಹತಮಃಪಟಾವೃತಂ ಜಗಮದಱೊಳ್ ॥
ಮುನಿಭಾನು ಭವದ್ವಾಕ್ಪ್ರಭೆ ।
ಯನಿಶಂ ಬೆಳಗದೊಡೆ ಸತ್ಪ್ರವರ್ತನಮುಂಟೇ ॥ ೩೦

ನೀನಾಲಂಬನಮಾದೆಯ ।
ಧೋನಿಪತಜ್ಜನಕೆ ನಿನ್ನ ನುಡಿ ಸೋಪಾನಂ ॥
ತಾನಾದುದು ಕೈವಲ್ಯಸು ।
ಧಾನಿಳಯಾಗ್ರಾರುರುಕ್ಷುಗಕ್ಷಯಬೋಧಾ ॥ ೩೧

ಮುನಿಪವಚೋರುಚಿಯಿಂದಂ ।
ದಿನಪನವೋಲ್ ಬೆಳಗೆ ಲೋಕಮಂ ಸತ್ಪಥವ ॥
ರ್ತನಮಿಲ್ಲ ತಮಗೆನಿಪ ದು ।
ರ್ಜನಮನಿತುಮುಲೂಕಜನ್ಮಮಾಗಲೆ ವೇೞ್ಕುಂ ೩೨

ಬಂದಿತು ವ॥ ಆ ಬಳಿಕ ಆ ಆಶೀರ್ವಾದದೊಡನೆ ಸಮಸ್ತ ಯತೀಂದ್ರರಿಂದಲೂ ಬಂದ ಆಶೀರ್ವಾದಗಳನ್ನು ತನ್ನ ಕಿವಿಗಳಿಗೆ ಅಲಂಕಾರವೆಂಬಂತೆ ಗ್ರಹಿಸಿಕೊಂಡು ಸಂತೋಷದಿಂದ ಚಕ್ರವರ್ತಿಯು ಕುಳಿತುಕೊಂಡು (ಹೀಗೆ ನುಡಿದನು) – ೨೯. "ನನ್ನ ಚಿತ್ತಕ್ಕೆ ಶುಭೋದಯವಾದ ಭಾಗ್ಯದಿಂದ ನಿಮ್ಮನ್ನು ಎಂದಾದರೊಮ್ಮೆ ನೆನೆದವನೂ ಕೃತಾರ್ಥನಾಗುತ್ತಾನೆ. ಎಂದ ಮೇಲೆ ನಿಮ್ಮನ್ನು ಪ್ರತ್ಯಕ್ಷವಾಗಿ ಕಂಡು ನಮಸ್ಕಾರಮಾಡುವವನ ಭಾಗ್ಯವನ್ನು ಏನೆಂದು ಹೊಗಳಲಿ? ೩೦. ಕುದೃಷ್ಟಿಯಿಂದ ಭ್ರಮೆಗೊಳಗಾಗಿ ಘನವಾದ ಮೋಹಾಂಧಕಾರದಿಂದ ಜಗತ್ತು ಮುಚ್ಚಿ ಹೋಗಿರುವುದು. ಮುನಿಸೂರ್ಯನೇ, ಅದರಲ್ಲಿ ನಿನ್ನ ವಚನ ಪ್ರಭೆಯಿಂದ ನೀನು ಬೆಳಗದಿದ್ದರೆ ಸದ್ಗತಿಯುಂಟೆ ? ೩೧. ಕೆಳಗೆ ಬಿದ್ದು ಹೋಗುತ್ತಿರುವ ಜನಕ್ಕೆ ಎತ್ತಿ ಹಿಡಿಯುವ ಆಧಾರ ನೀನು; ಅಕ್ಷಯಜ್ಞಾನಿಯೆ ಮೋಕ್ಷನಿವಾಸಕ್ಕೆ ಏರ ಬಯಸುವವನಿಗೆ ನಿನ್ನ ನುಡಿ ಸೋಪಾನವಾಯಿತು. ೩೨. "ಮುನಿವಚನದ ಪ್ರಭೆಯಿಂದ ಸೂರ್ಯನ ಹಾಗೆ ಲೋಕವನ್ನೆಲ್ಲ ನೀನು ಬೆಳಗಿದರೆ ನಮಗೆ ಮಾರ್ಗವೆ ಉಳಿಯಲಿಲ್ಲ" ಎಂಬ ದುರ್ಜನರು ಗೂಗೆಗಳಾಗಿ

ಎಂದತ್ಯಂತಪ್ರಶ್ರಯಸಮಾಶ್ರಿತೋಕ್ತಿಮುಕ್ತಾಕ್ಷತಂಗಳಂ ದಂತಕಾಂತಿಚಂದನಚರ್ಚೆವೆರಸರ್ಚಿಸಿದ ಭೂಕಾಂತನಂತರಂಗವಿಶುದ್ಧಿಯಂ ತಪೋನಿಧಿ ಮನದೊಳವಧಾರಿಸಿ ಗುಣಾನುರಾಗಿತ್ವದಿಂದಮಿಂತೆಂದರ್:–

ಇದು ದಲ್ ನಿಮಿತ್ತಭಾವಂ ।
ಮದಕ್ಕೆ ಸಾಜದಿನೆನಿಪ್ಪ ಸಾಮ್ರಾಜ್ಯಂ ತಾ ॥
ನದೆ ನಿನ್ನೊಳ್ ಮತ್ತೊಂದಾ ।
ದುದರ್ಕೆ ನೃಪ ಸಮನಿಸಿತ್ತು ವಿಸ್ಮಯಮೆಮಗಂ ॥ ೩೩

ನಯದಿಂ ಜನಕ್ಕೆ ಪುಣ್ಯೋ ।
ದಯದಿಂ ಪಾರ್ಥಿವಜನಕ್ಕೆ ವಿನಯವಚೋನಿ ॥
ಶ್ಚಯದಿಂ ಯೋಗಿಜನಕ್ಕಂ ।
ದಯೆಮಾಡುವೆ ನೀನೆ ದಲ್ ಚಮತ್ಕೃತಿಯೊದವಂ ॥ ೩೪

ಇನಿವಿರಿದು ರಾಜ್ಯಪದದೊಳ ।
ಮಿನಿವಿರಿದು ಸುಖಾನುಭವದೊಳಂ ಕಾಣಲ್ಕಾ ॥
ಗೆನಿಪೆಜಿಕಮವಜಿಕೊಳಾದುದು ।
ನಿನಗಂತುಟೆ ಹಿತದೊಳಲ್ಲದೆಸಪನೆ ಚದುರಂ ॥ ೩೫

ಎಂದ ಮುನೀಶಂಗಂದಿಂ ।
ತೆಂದಂ ಧರಣೀಶನೀಶ ನೀಮಿರ್ದೆಡೆಗೇ ॥
ಟ್ಟಿಂದಪೆನೆಂದಿರೆ ನಿಮ್ಮನೆ ।
ತಂದತ್ತಿಲ್ಲಿಗೆ ಪುರಾಕೃತಂ ಮತ್ಸುಕೃತಂ ॥ ೩೬

ಹುಟ್ಟಿತಕ್ಕವರೆ ಸರಿ ವ॥ ಹೀಗೆಂದು ಅತ್ಯಂತಗೌರವಾನ್ವಿತವಾದ ಮಾತುಗಳೆಂಬ ಮುತ್ತಿನ ಸೇಸೆಯಿಂದಲೂ, ತನ್ನ ದಂತಕಾಂತಿಯೆಂಬ ಗಂಧಲೇಪನದಿಂದಲೂ ಅರ್ಚಿಸಿದ ಅರಸನ ಮನಃಶುದ್ಧಿಯನ್ನು ಮನದಲ್ಲಿಯೆ ಭಾವಿಸಿನೋಡಿ ತಪಸ್ವಿಗಳು ಗುಣಾನುರಾಗದಿಂದ ಹೀಗೆ ನುಡಿದರು–೩೩. ಸಾಮ್ರಾಜ್ಯವೆನ್ನುವುದು ಗರ್ವಕ್ಕೆ ಕಾರಣವಾಗುವುದುಂಟು. ಆದರೆ ಅದು ನಿನ್ನಲ್ಲಿ ಹಾಗಾಗದೆ ಬೇರೊಂದು ಪರಿಣಾಮವನ್ನುಂಟು ಮಾಡಿದುದನ್ನು ಕಂಡು ನಮಗೆ ಆಶ್ಚರ್ಯವಾಯಿತು. ೩೪. ನ್ಯಾಯದಿಂದ ಜನಕ್ಕೆ, ಪುಣ್ಯೋದಯದಿಂದ ಅರಸುಗಳಿಗೆ, ವಿನಯ ವಚನಗಳಿಂದ ಯೋಗಿಗಳಿಗೆ ನೀನು ಚಮತ್ಕಾರವನ್ನುಂಟು ಮಾಡುತ್ತಿರುವೆ. ೩೫. ಇಷ್ಟೊಂದು ಘನವಾದ ರಾಜ್ಯಪದವಿಯಲ್ಲಿ, ಇಷ್ಟೊಂದು ಸಮೃದ್ಧವಾದ ಸುಖಾನುಭವದಲ್ಲಿ ಇರುವವನಿಗೆ ಸಾಮಾನ್ಯವಾಗಿ (ಮೇಲೆ ಹೇಳಿದ) ಜನರಲ್ಲಿ ಪ್ರೀತಿಯುಂಟಾಗುವುದೇ ಅಪರೂಪ. ಆದರೆ ಅದು ನಿನಗೆ ಉಂಟಾಗಿದೆ. ಜಾಣನಾದವನು ಹಿತದಲ್ಲಿ ಅಲ್ಲದೆ ಬೇರೆಯುದರಲ್ಲಿ ತೊಡಗುವನೆ ?" ೩೬. ಹೀಗೆಂದ ಯತೀಂದ್ರನಿಗೆ ರಾಜನು ಹೀಗೆಂದನು– "ದೇವ, ನೀವಿದ್ದ ಎಡೆಗೇ ನಾನು ಬರಬೇಕೆಂದುಕೊಳ್ಳು

ಪರಮದಯಾನಿಧಿಯೆನ್ನೊಳ್ ।
ಕರುಣಂ ನಿಮಗುಳ್ಳೊಡೆನಗೆ ದಯೆಗೆಯ್ವುದು ನೀ ॥
ಮಿರದೆ ಜಿನದೀಕ್ಷೆಯಂ ಬಿ ।
ತ್ತರಿಸುಗುಮೆನಗದುವೆ ಬೞಿಕೆ ನಿರ್ವೃತಿಸುಖಮಂ ॥ ೩೭

ಪಾಪಾರಾತಿಯನಾಂಪುದಲ್ತು ಚತುರಂಗಂ ಸೈನಿಕಂ ಕಾಲಶಂ ।
ಪಾಪತಕ್ಕೆ ಸಿತಾತಪತ್ರನಿಕರಂ ಕಾಪಲ್ತನಿತ್ತೊರ್ಮೆ ದಲ್ ॥
ಪೋಪಾಗಳ್ ನಿರಯಕ್ಕೆ ಬಂಧುಗಳೊಡಂ ಬಂದಪ್ಪರಲ್ತಿಂ ಭವ ।
ಚ್ಛ್ರೀಪಾದಾಂತಿಕದೀಕ್ಷೆ ತಾನೆನಗೆ ಮಾೞ್ಕುಂ ಸ್ವಸಂರಕ್ಷೆಯಂ ॥ ೩೮

ಎನೆ ಮುನಿವೃಷಭಂ ಭೂಪನ ।
ಮನದೊಳ್ ಮಾಣದೆ ಪೊದೞ್ದ ವೈರಾಗ್ಯದ ಪೆಂ ॥
ಪನೆ ಪರಿಕಿಸಲೆಂದಾಗ್ರಹ ।
ವಿನಿವರ್ತನಸೂಚಕೋಕ್ತಿಗಳನಿಂತೆಂದಂ ॥ ೩೯

ಕಾರುಣಿಕರ್ ಧರ್ಮಜ್ಞರ್ ।
ಚಾರಿತ್ರಸಮೇತರೆನಿಪ ನಿಮ್ಮನ್ನರನಾ ॥
ಗಾರತೆಯಿಂ ಪಾವನಮನ ।
ಗಾರತೆಯಿಂದೆಸಗುವೆಸಕಮಿಂ ಪೆಱತುಂಟೇ ॥ ೪೦

ತ್ತಿರುವಾಗ ನನ್ನ ಪೂರ್ವಾರ್ಜಿತ ಪುಣ್ಯ ನಿಮ್ಮನ್ನೇ ಇಲ್ಲಿಗೆ ಕರೆತಂದಿತು. ೩೭. ಪರಮ ಕರುಣಾನಿಧಿಗಳೇ, ನನ್ನ ಮೇಲೆ ಕನಿಕರವಿದ್ದರೆ ಈಗ ತಡಮಾಡದೆ ನನಗೆ ಜಿನದೀಕ್ಷೆಯನ್ನು ದಯಪಾಲಿಸಿ. ಅದೇ ನನಗೆ ಮೋಕ್ಷಸುಖವನ್ನು ತಂದೀಯುವುದು. ೩೮. ಚತುರಂಗ ಸೈನ್ಯವು ಪಾಪವೈರಿಯನ್ನು ಎದುರಿಸಿ ಹೋರಾಡುವುದಲ್ಲ; ಕಾಲನ ಸಿಡಿಲು ಹೊಡೆಯುವಾಗ ಬೆಳ್ಗೊಡೆಗಳೆಷ್ಟಿದ್ದರೂ ನನ್ನನ್ನು ರಕ್ಷಿಸಲಾರವು; ನರಕಕ್ಕೆ ಹೋಗುವಾಗ ಬಂಧುಗಳು ಯಾರೂ ಜೊತೆಗೆ ಬಾರರು. ಇನ್ನು ನನಗೆ ಇರುವ ಒಂದೇ ಒಂದು ಆತ್ಮರಕ್ಷೆಯೆಂದರೆ ತಮ್ಮ ಪೂಜ್ಯಪಾದಗಳ ಸನ್ನಿಧಿಯಲ್ಲಿ ಕೈಕೊಳ್ಳುವ ದೀಕ್ಷೆಯೆ." ೩೯. ಈ ಮಾತನ್ನು ಕೇಳಿ ಮುನೀಂದ್ರರು ಅರಸನ ಮನಸ್ಸಿನಲ್ಲಿ ಹುಟ್ಟಿದ ವೈರಾಗ್ಯದ ಘನತೆಯನ್ನು ಪರೀಕ್ಷಿಸಬೇಕೆಂದು, ಅವನು ನಿಶ್ಚಯವನ್ನು ಬದಲಿಸುವಂತೆ ಸೂಚಿಸುತ್ತ ಹೀಗೆ ನುಡಿದರು– ೪೦. "ದಯಾವಂತರೂ, ಧರ್ಮಜ್ಞರೂ, ಚಾರಿತ್ರವಂತರೂ ಆದ ನಿಮ್ಮಂತಹ ಜನರು ಗೃಹಸ್ಥರಾಗಿದ್ದುಕೊಂಡು ಮಾಡುವ ಧರ್ಮಕಾರ್ಯ ಮುನಿಗಳ ಕಾರ್ಯ

ಅದಲ್ಲದೆಯುಂ,

ತಳೆವೊಡೆ ಮದ್ವಿಧರ್ ನಿಯಮದಿಂ ಯಮಿಗಳ್ ಕಠಿನಾಂಗಸಂಗತರ್ ।
ತಳೆಗುಮತೀವದುರ್ಧರಮೆನಿಪ್ಪ ತಪೋಭರಮಂ ಭವದ್ವಿಧರ್ ॥
ತಳೆಯಲದೆಂತುಮಾರ್ತಪರೆ ತದ್ಭರಮಂ ಭರದಿಂ ನಿಕಾಮಕೋ ।
ಮಳಕಮನೀಯಕಾಯರವನೀಪತಿ ಕುಂಕುಮಲೇಪಲಾಲಿತರ್ ॥ ೪೧

ಅದುಕಾರಣದಿಂ

ಧರೆಯಂ ಸದ್ಧರ್ಮಾಶ್ರಯ ।
ಧರೆಯನನಾಧೇಯನಱೆಯದಾಕಲ್ಪಂ ನೀಂ ॥
ಧರಿಯಿಸೆ ತಪಮದೆ ಹೀನೋ ।
ದ್ಧರಣದಿನತ್ತೊಂದುಮಲ್ತೆ ಪೇೞ್ ತಪಮುಂಟೇ ॥ ೪೨

ಎನಲೊಡಮಜಿತಸೇನಮಹಾರಾಜಂ–ಮುನಿರಾಜ, ಸಂಸಾರಭಯದಿಂ ದೀನಭಾವಮಂ ತಾಳ್ದಿದೆ ಮ್ಮನುದ್ಧರಿಸೆ ನಿಮಗಮಂತೆಯೆಂದು ತನ್ನ ಹೃದಯದ ಪರಿಚ್ಛೇದಮನೆ ನಿಲೆ ನುಡಿದು ಸಮಸ್ತಕ್ಷಾತ್ರಭಾರಮಂ ಜಿತಶತ್ರುವೆಂಬ ಪುತ್ರನೊಳ್ ನಿಱಿಸಿ ತಾನುಮುಪಶಮಭಾವದೊಳ್ ನಿಂದು ಬೞಿಯುಂ ಲೋಕಾಯತವಾದಿಯಂತೆ ಆಸಾಧಿತಗುರುಮತನುಂ ವಿರಹಿಯಂತೆ ಮುಕ್ತಾಭರಣನುಂ ಸಾಯಂತನ

ಕ್ಕಿಂತಲೂ ಪವಿತ್ರವಾದುದು. ಅದಕ್ಕಿಂತ ಹೆಚ್ಚಿನದು ಯಾವುದು ? ಅದಲ್ಲದೆ– ೪೧. ಯತಿಧರ್ಮ ನನ್ನಂತಹ ಕಠಿನದೇಹವುಳ್ಳವರಿಗೇ ಸರಿ; ಏಕೆಂದರೆ ಅದು ತುಂಬ ಕಷ್ಟಕರವಾದುದು. ಸ್ವಾಭಾವಿಕವಾಗಿ ಕೋಮಲಕಾಯರಾಗಿ ಕುಂಕುಮಲೇಪನ ಮಾಡಿಕೊಳ್ಳುವ ನಿಮ್ಮಂತಹರಿಗೆ ಅದನ್ನು ನಿತ್ತರಿಸಲಾದೀತೆ ? ಆದುದರಿಂದ– ೪೨. ಯಾವ ಆಧಾರವನ್ನೂ ಬಯಸದೆ ಸದ್ಧರ್ಮಕ್ಕೆ ಆಶ್ರಯವಾದ ಭೂಮಿಯನ್ನು ಕೊನೆವರೆಗೂ ನೀನು ಪಾಲಿಸು. ಅದೇ ತಪಸ್ಸು. ದೀನರನ್ನು ಉದ್ಧರಿಸುವುದಕ್ಕಿಂತ ಹೆಚ್ಚಿನ ತಪವುಂಟೆ ?" ವ॥ ಅವರ ಮಾತಿಗೆ ಉತ್ತರವಾಗಿ ಅಜಿತಸೇನಮಹಾರಾಜನು– "ಮುನಿರಾಜ, ಸಂಸಾರ ಭೀತಿಯಿಂದ ದೀನನಾದ ನನ್ನನ್ನು ಉದ್ಧರಿಸಬೇಕಲ್ಲವೆ ? ದೀನೋದ್ಧರಣವೆ ತಪವೆಂಬ ಮಾತು ನಿಮಗೂ ಅನ್ವಯವಾಯಿತು." ಎಂದು ಮನಃಪೂರ್ವಕ ನಿರ್ಧಾರವನ್ನು ನುಡಿದು, ಸಕಲರಾಜ್ಯಭಾರವನ್ನು ಜಿತಶತ್ರುವೆಂಬ ತನ್ನ ಮಗನಿಗೆ ಒಪ್ಪಿಸಿ, ತಾನು ವೈರಾಗ್ಯಭಾವದಲ್ಲಿ ನಿಂತು ಬೌದ್ಧಮತಾನು ಯಾಯಿಯಂತೆ "ಆಸಾಧಿತ ಗುರುಮತನು" (೧. ಬೃಹಸ್ಪತಿ ಪ್ರಣೀತವಾದ ಮತವನ್ನು ಅನುಸರಿಸುವವನು. ೨. ಗುರುಗಳು ತಿಳಿಸಿದ ಮಾರ್ಗದಲ್ಲಿ ನಡೆಯುವವನು.), ವಿರಹಿಯಂತೆ ಆಭರಣಗಳನ್ನು ತೊರೆದವನು, ಸಾಯಂಕಾಲದ ಸೂರ್ಯ ನಂತೆ "ಪರಿಹೃತಾಂಬರ"ನು (೧. ಆಕಾಶದಿಂದ ತೊಲಗಿದವನು. ೨. ಬಟ್ಟೆ ಗಳನ್ನು ಕಳಚಿ ದಿಗಂಬರನಾದವನು), ಪ್ರಭಾತ ಸಮಯದ ತಾವರೆಗೊಳದಂತೆ

ತರಣಿಯಂತೆ ಪರಿಹೃತಾಂಬರನುಂ ದಿನಮುಖಸರೋಜಾಕರದಂತೆ ವಿಕಚತಾಸಮೇತನುಂ ಶಿಶಿರಸಮಯದಂತಾರೂಢತಪನುಮಾಗಲೊಡಂ,

ಸುತಯುವತಿಜ್ಞಾತಿ ಪ್ರಕೃ ।
ತಿತತಿವ್ಯಾಮೋಹಶಿಶರದಿಂ ಕೊರಗಿದ ಭೂ ॥
ಪತಿಯ ಮುಖಾಬ್ಜಂ ಸಂಶೋ ।
ಭಿತಮಾದತ್ತಾತಪಃಪ್ರಭಾವಾತಪದಿಂ ॥ ೪೩

ತಿಳಿಯೆ ಜಡಾಶಯಮೆಸಕ ।
ಕ್ಕಳವಡೆ ಮಾರ್ಗಂ ದಿಗಂಬರಶ್ರೀ ತನ್ನೊಳ್ ॥
ಬೆಳಗೆ ಸಮಂತಾತಪಮಂ ।
ತಳೆದೂರ್ಜಿತನಾದನೂರ್ಜದಂದದಿನಾದಂ ॥ ೪೪

ಅರಿಗಳನಂಜಿಸುತುಂ ಪರಿ ।
ಹರಿಸುತ್ತುಂ ವಿಷಯಬಾಧೆಯಂ ಸದ್ಧನಮಂ ॥
ಪರಿವರ್ಧಿಸುತುಂ ಕಿಡುತರೆ ।
ಸಿರಿ ಕಿಡದಭ್ಯಾಸಮೆನಿಪ ತೆಱದಿಂ ನಡೆದಂ ॥ ೪೫

"ವಿಕಚತಾ ಸಮೇತ"ನು, (೧. ವಿಕಾಸ ಹೊಂದಿದುದು-ಅರಳಿದ ಹೂಗಳುಳ್ಳುದು. ೨. ತನ್ನ ಕೂದಲನ್ನು ಕಿತ್ತು ತೆಗೆದವನು). ಚಳಿಗಾಲದಂತೆ "ಆರೂಢ ತಪ"ನು (೧. ಮಾಘ ಮಾಸವನ್ನು ಒಳಗೊಂಡುದು. ೨. ತಪಸ್ಸನ್ನು ಕೈಕೊಂಡವನು) ಆದನು. ೪೩. ಪುತ್ರ ಪತ್ನಿ ಜ್ಞಾತಿ ಪ್ರಜೆ ಮೊದಲಾದವರ ಮೋಹವೆಂಬ ಚಳಿಗಾಲ ದಿಂದ ಕೊರಗಿ ಹೋಗಿದ್ದ ಅರಸನ ಮುಖಕಮಲವು ಈಗ ತಪಸ್ಸಿನ ಸೂರ್ಯಕಾಂತಿ ಯಿಂದ ಸುಶೋಭಿತವಾಯಿತು. ೪೪. "ಜಡಾಶಯ" (ಜಲಾಶಯ, ೨. ಅಜ್ಞಾನ)ವು ತಿಳಿಯಾಗಿ, ಕಾರ್ಯವಾಡಲು ಮಾರ್ಗ ಅನುಕೂಲವಾಗಿ, "ದಿಗಂಬರ ಶ್ರೀ" (೧. ದಿಕ್ಕುಗಳು ಹಾಗು ಆಕಾಶದ ಸ್ವಚ್ಛವಾದ ಶೋಭೆ. ೨. ನಗ್ನತೆ, ದಿಗಂಬರವ್ರತ) ತನ್ನಲ್ಲಿ ಬೆಳಗಲಾಗಿ, "ಆತಪ" (೧. ಬಿಸಿಲು ೨. ಉತ್ತಮವಾದ ತಪಸ್ಸು) ವನ್ನು ಅಳವಡಿಸಿಕೊಂಡು ಕಾರ್ತಿಕಮಾಸದಂತೆ ಆತನು ಏಳ್ಗೆ ಹೊಂದಿ ಕಂಗೊಳಿಸಿದನು. ೪೫. ರಾಜನಂತೆ " ಅರಿ " (೧. ಶತ್ರು. ೨. ಮೋಹ ಮದಾದಿ ಷಡ್ರಿಪುಗಳು) ಗಳನ್ನು ಅಂಜಿಸುತ್ತ ವಿಷಯ ಬಾಧೆ (೧. ದೇಶಕ್ಕೆ ಉಂಟಾಗುವ ತೊಂದರೆ. ೨. ಇಂದ್ರಿಯಾಪೇಕ್ಷೆಗಳ ಬಾಧೆ)ಯನ್ನು ನಿವಾರಿಸುತ್ತ "ಸದ್ಧನ" (೧. ಉತ್ತಮವಾದ ಭಾಂಡಾರದ ಸಂಪತ್ತು. ೨. ತಪಸ್ಸೆಂಬ ಧನ) ವನ್ನು ಅಭಿವೃದ್ಧಿಗೊಳಿಸುತ್ತ, ಸಿರಿ ಕೆಟ್ಟರೂ ಅಭ್ಯಾಸ ಕೆಡದೆಂಬಂತೆ, ಮುನಿಯಾಗಿ ತಪಶ್ಚರಣೆಯಲ್ಲಿ ಮುಂದು

ಮತ್ತಂ

ಗೀತಪ್ರೀತಿ ಜಿನಶ್ರುತಿಶ್ರವಣದಿಂ ಶ್ವೇತಾತಪತ್ರಾರ್ಥಿ ಭೂ ।
ಜಾತಚ್ಛಾಯೆಯಿನಂಗನಾರುಚಿ ವಿರಕ್ತ್ಯಾಸಕ್ತಿಯಿಂ ಹರ್ಮ್ಯಚೂ ॥
ಡಾತರ್ಷಂ ಗಿರಿಕೂಟಸಂಪಸನದಿಂ ಗೆಂಟಾಗೆ ಸಾಮ್ರಾಜ್ಯಲೀ ।
ಲಾತಾತ್ಪರ್ಯಮನಾ ತಪಸ್ವಿ ತಳೆದಿರ್ದಂ ತತ್ತಪೋರಾಜ್ಯದೊಳ್ ॥ ೪೬

ಅಂತುಪಶಾಂತಮೋಹಸಂತಮಸಂ ಪರಮತಪಃಪ್ರದೀಪಸ್ನೇಹಭೂತಜೀವಿತಂ ನಭಸ್ತಿಲಕಾಚಲದೊಳುಪಜೀವಿತಪ್ರಾಯೋಪಗಮನವಿಧಾನನಾತ್ಮೀಯಜೀವಿತಾತ್ಯಯದೊಳ್

ಸುರ...ಶಮೂಲದಿಂದಾ ।
ಱುರಜ್ಜ ಮೇಗೊಗೆದ ತಾಣದೊಳ್ ದಿವ್ಯಸುಖಾ ॥
ಕರಮೆನೆ ಪದಿನಾಱನೆಯದು
ವರಶೋಭಾನಲ್ಪಮಿರ್ಪುದಚ್ಯುತಕಲ್ಪಂ ॥ ೪೭

ಆಕಲ್ಪದೊಳುಜ್ಜ್ವಲಸಹ ।
ಜಾಕಲ್ಪಂ ಷಡ್ವಿತಸ್ತಿಮಾತ್ರಸುಗಾತ್ರಂ ॥
ಸ್ವೀಕೃತತದಧೀಂದ್ರತ್ವನ ।
ನಾಕುಳನಣಿಮಾದಿಗುಣಗಣಾನ್ವಿತನೊಗೆದಂ ॥ ೪೮

ವರಿದನು. ಮತ್ತು–೪೬. ಜಿನವಚನಗಳನ್ನು ಕೇಳುವುದರಿಂದ ಗೀತವಿನೋದದ ಆಸಕ್ತಿಯೂ, ಮರಗಳ ನೆರಳಿನಿಂದ ಬೆಳ್ಗೊಡೆಗಳ ಬಯಕೆಯೂ, ವಿರಕ್ತಿಯ ನಿರ್ಭರತೆಯಿಂದ ಸ್ತ್ರೀವ್ಯಾಮೋಹವೂ, ಗಿರಿಶಿಖರವಾಸದಿಂದ ಅರಮನೆಯ ಉಪ್ಪರಿಗೆಯ ಅಪೇಕ್ಷೆಯೂ ನಿವಾರಣೆಯಾಗಿ–ಆ ತಪೋರಾಜ್ಯದಲ್ಲಿಯೆ ಆ ತಪಸ್ವಿ ಸಾಮ್ರಾಜ್ಯಸುಖವನ್ನು ಪಡೆದನು. ವ॥ ಹೀಗೆ ಮೋಹವೆಂಬ ಕಗ್ಗತ್ತಲೆಯನ್ನು ಪರಿಹರಿಸಿ, ಉತ್ತಮ ತಪಸ್ಸೆಂಬ ದೀಪಕ್ಕೆ ತನ್ನ ಜೀವನವೆ ಎಣ್ಣೆಯಾಗಲಾಗಿ ನಭಸ್ತಿಲಕವೆಂಬ ಬೆಟ್ಟದಲ್ಲಿ ಪ್ರಾಯೋಪಗಮನದಿಂದ ದೇಹವನ್ನು ತೊರೆದನು. ೪೭. ಮೇರುಪರ್ವತ ಮೂಲದಿಂದ ಮೇಲೆ ಆರು ರಜ್ಜುವಿನ ಅಂತರದಲ್ಲಿ ದಿವ್ಯಸುಖಗಳಿಗೆ ನೆಲೆವೀಡಾಗಿ ಅಚ್ಯುತವೆಂಬ ಹದಿನಾರನೆಯ ವಿಸ್ತಾರವಾದ ಕಲ್ಪವಿರುವುದು. ೪೮. ಆ ಕಲ್ಪದಲ್ಲಿ ಅಣಿಮಾದಿ ಗುಣಗಳಿಂದೊಡಗೂಡಿ, ಜನ್ಮದೊಡನೆ ಸಹಜವಾಗಿ ಬಂದ ಆಭರಣಗಳಿಂದ ಅಲಂಕೃತನಾಗಿ, ಆರು ಗೇಣಿನ ದೇಹವನ್ನು ಧರಿಸಿ, ಅಚ್ಯತೇಂದ್ರನಾಗಿ

ಅಂತು ಪುಟ್ಟಿ ತನ್ನ ಸಮಕಟ್ಟಿದಾಯುಷ್ಯದ

ಸಾಗರವಿರ್ಪತ್ತೆರಡಱ ।
ಭಾಗದನಿತೆ ಮಾಸಮಾಗೆ ಸುಯ್ವಂ ನೆನೆವೊಂ ॥
ಭೋಗೇಚ್ಛೆ ಪುಟ್ಟಿದೊಡೆ ತ ।
ತ್ಸಾಗರಸಮ್ಮಿತಸಹಸ್ರಮಾಸಕ್ಕುಣಿಸಂ ॥ ೪೯

ಮೂನೂಱೆಯ್ವತ್ತೆಸೆವ ವಿ ।
ಮಾನಂಗಳ್ಗಮಲಮಣಿಮಯಂಗಳ್ಗೆ ಸಮೀ ॥
ಚೀನನವಚೀನರಚಿತವಿ ।
ತಾನಂಗಳ್ಗೊಡೆಯನಾದನಾ ದಿವಿಜೇಂದ್ರಂ ॥ ೫೦

ಮೂವತ್ತಿರ್ವರ್ ಸ್ವೀಕೃತ ।
ದೇವಿಯರಱುವತ್ತು ಮೂವರಾವಲ್ಲಭಿಕಾ ॥
ದೇವಿಯರೆಸೆವೆಣ್ಬರ್ ಮಾ ॥
ದೇವಿಯರಾತನ ಮನಕ್ಕೆ ಸಲೆ ನೆಲೆಯಾದರ್ ॥ ೫೧

ಎಣಿಕೆಗಳುಂಬಂ ಪರಿಜನ ।
ಗಣನೆಗೆ ಬಂದಚ್ಚರಿಯರುಮಂ ತದ್ದೇವೀ ॥
ಗಣದೊಳಗಾರೊರ್ವರ ವಿಕ ।
ರಣಸಂಭವದೇವಿಯರ್ಕಳಂ ಫಣಿಪತಿಗಂ ॥ ೫೨

ಹುಟ್ಟಿದನು ವ॥ ಹಾಗೆ ಹುಟ್ಟಿ, ತನಗೆ ಗಳಿಸಿಕೊಂಡ ಆಯುಷ್ಯದ–೪೯. ಇಪ್ಪತ್ತೆರಡು ಸಾಗರ ವರ್ಷಗಳಲ್ಲಿ ಇಪ್ಪತ್ತೆರಡು ತಿಂಗಳಿಗೊಮ್ಮೆ ಸುಯ್ಯುವನು; ಇಪ್ಪತ್ತೆರಡು ಸಾವಿರ ತಿಂಗಳಿಗೊಮ್ಮೆ ಊಟವನ್ನು ನೆನೆಯುವನು. ೫೦. ವಿಸ್ತಾರವಾದ ನವೀನ ಚೀನ ವಸ್ತ್ರ ವಿತಾನಗಳಿಂದ ಚೆಲುವಾದ ಮುನ್ನೂರೈವತ್ತು ರತ್ನಮಯ ವಿಮಾನಗಳಿಗೆ ಆತನು ಒಡೆಯನಾದನು. ೫೧. ಮೂವತ್ತೆರಡು ಸ್ವೀಕೃತ ದೇವಿಯರು; ಅರುವತ್ತು ಮೂವರು ವಲ್ಲಭದೇವಿಯರು; ಎಂಟು ಜನ ಮಹಾದೇವಿಯರು ಆತನ ಮನಕ್ಕೆ ನೆಲೆಯಾದರು. ೫೨. ಪರಿಜನರಾದ ಅಪ್ಸರೆಯರನ್ನಾಗಲಿ, ಆ ದೇವೀಗಣದೊಳಗೆ ವಿಕರಣ ಸಂಭವ ದೇವಿಯರನ್ನಾಗಲಿ ಎಣಿಸಿ ಹೇಳುವುದು ಆದಿಶೇಷನಿಗೂ ಅಸಾಧ್ಯ. [ಇದಲ್ಲದೆ ೧೦೬೩ ಅಗ್ರದೇವಿಯರೂ ಉಂಟೆಂದು ಜೈನ ಸಿದ್ಧಾಂತ ಕೋಶದಲ್ಲಿ ಹೇಳಲಾಗಿದೆ. ಇವರಲ್ಲಿ ಪ್ರತಿಯೊಬ್ಬ ದೇವಿಯೂ ೧೦೨೪೦೦೦ ವೈಕ್ರಯಿಕ ರೂಪುಗಳನ್ನು ತಾಳಬಲ್ಲಳು.

ಪ್ರಕಟಂ ಮೂವತ್ತುಮೂವರ್ ಸುಮನರಯುತಸಂಖ್ಯಾಸ್ವತರ್ ಸಂದ ಸಾ।
ಮಾನಿಕಲೋಕರ್ ದೇವಪಾಲಾಹ್ವಯಯುತದಿವಿಜರ್ ನಾಲ್ವರಿತ್ತಂಗರಕ್ಷಾ॥
ಧಿಕೃತರ್ ನಾಲ್ವತ್ತುಸಾಸಿರ್ವರಮರರಿವರಾತ್ಮೀಯಪಾದದ್ವಯಾರಾ।
ಧಕರಾದರ್ ತತ್ಸುರೇಂದ್ರಂಗಮಲತರತಪಸ್ಸಾರ್ಥಸಾಮರ್ಥ್ಯದಿಂದಂ॥ ३३

ಒಳಗಣ ಪೊಱಗಣ ನಡುವಣ।
ವಿಳಾಸಮಂ ತಳೆದ ಮೂಱುಸಭೆಯುಂ ದೇವಂ॥
ಗಳವಟ್ಟುವಾತನೊಳ್ ಸಂ।
ಗಳಿಸಿದ ಪುಣ್ಯಪ್ರಭಾವಮಂ ತ್ರಿಗುಣಿಪವೋಲ್॥ ३४

ವರಕರಿತುರಗಂ ರಥಕಿಂ।
ಕರವೃಷಗಂಧರ್ವನರ್ತಕೀಪ್ರಮುಖಂ ಬಂ॥
ಧುರಸಪ್ತಾನೀಕಂ ನಿಜ।
ಪರಿಕರಮೆನೆ ಸುರನ ಸೈಪದೇನಚ್ಚರಿಯೋ॥ ३५

ಎನಿಸಿ ತತ್ಕಲ್ಪವಲ್ಲರಿಗೆ ನಿಜಶರೀರಪಾರಿಜಾತಮನಡರ್ಪುಮಾಡಿ

ಒಯ್ಯದೆ ಪೊಯ್ಯದೊಂದು ಪುರುಡಪ್ಪದ ಚುಂಬಿಸದಿಂಪು ದೇವಿಯರ್।
ಮೆಯ್ಯಳವಾಱಿ ಕೂಡಿಸದ ಕೂಟದ ಸಂತಸಮೆಂಬಿವೆಲ್ಲಮಾ॥
ರಯ್ಯೆ ಮನಃಪ್ರವೀಚರಣದಿಂ ಸಮಸಂದುಚಿತಾರ್ಥವೃತ್ತಿ ತ।
ಳ್ಪೊಯ್ಯೆ ಮನೋಜಕೇಳಿಗಮರಂ ತಣಿದಂ ಸುರತೋಪಭೋಗದೊಳ್॥ ३६

ವಿಕರಣ ಸಂಭವ ದೇವಿಯೆಂದರೆ ದೇವಿಯು ವಿಕ್ರಿಯಾರೂಪ]. ३३. ಮೂವತ್ತುಮೂವರು ಸುಮನರು, ಅಯುತ ಸಂಖ್ಯೆಯ ಸಾಮಾನಿಕರು ನಾಲ್ವರು ಲೋಕಪಾಲರು, ನಾಲ್ವತ್ತುಸಾವಿರ ಅಂಗರಕ್ಷಕ ಕೇವರು,–ಆ ಅಚ್ಯುತೇಂದ್ರನಿಗೆ ಆತನ ತಪಃಸಾಮರ್ಥ್ಯದ ಫಲವಾಗಿ ಪಾದಸೇವಕರಾದರು. ३४. ಆತನ ಗಳಿಸಿದ ಪುಣ್ಯಪ್ರಭಾವವನ್ನು ಮೂವಡಿಗೊಳಿಸುವಂತೆ ಒಳಗೊಂದು, ನಡುವೊಂದು ಹಾಗು ಹೊರಗೊಂದು ಹೀಗೆ ಮೂರು ಸಭೆಗಳು ಏರ್ಪಟ್ಟಿದ್ದುವು. ३५. ಆನೆ, ಕುದುರೆ, ರಥ, ಪದಾತಿ, ವೃಷಭ, ಗಂಧರ್ವ ಮತ್ತು ನರ್ತಕೀ ಎಂಬ ಏಳು ಬಗೆಯ ಸೈನ್ಯ ಅವನಿಗೆ ಅಧೀನವಾಗಿತ್ತು. ಅವನ ಪುಣ್ಯವೇನು ಸಾಮಾನ್ಯವೆ? ವ॥ ಹೀಗೆ ಆ ಕಲ್ಪವೆಂಬ ಬಳ್ಳಿಗೆ ತನ್ನ ದೇಹವೆಂಬ ಪಾರಿಜಾತವನ್ನೆ ಆಧಾರವಾಗಿ ಮಾಡಿ–३६. ವಹನ, ತಾಡನ, ಹುರುಡು, ಅಪ್ಪುಗೆ, ಚುಂಬನ ಈ ಯಾವ ಕ್ರಿಯೆಗಳೂ ಇಲ್ಲದೆಯೆ, ದೇವಿಯರ ಮೈಯನ್ನು ಕೂಡ ಮುಟ್ಟದೆ, ಮನಃಪ್ರವಿಚಾರದಿಂದಲೆ ಆತನು ಕೂಟದ ಸುಖವನ್ನು ಸಮೃದ್ಧವಾಗಿ ಪಡೆದು ತಣಿಯುತ್ತಿದ್ದನು.

ಅದಲ್ಲದೆಯುಮಾತನೋರೊಮ್ಮೆ ತನಗೆ ಸಹಜಮಾದಣಿಮಾಣುಸಾಮಗ್ರಿಯಿಂ ನೆಲನನ ವ್ಯಗ್ರತೆಯಿನುರ್ಚಿ ಪೋಗಿ ನಾಗಭವನದ ಕೃತ್ರಿಮಚೈತ್ಯಯಾತ್ರೆಯಂ ನಿರ್ವರ್ತಿಸಿಯುಂ, ಓರೊರ್ಮೆ ಮಹಿಮಾಮಹಾತ್ಮ್ಯದಿಂ ಮೇರುಗಿರಿಯ ನಾಲ್ಕುಂ ಬನದ ಜಿನಭವನಂಗಳಂ ತಚ್ಛೈಲಮೂಲದಿಂ ಚೂಳಿಕೆವರಂ ಬಳೆದು ಬಲವಂದು ಬಂದಿಸಿಯುಂ, ಓರೊರ್ಮೆ ಗರಿಮೋರುತಾಶ್ಚರ್ಯದಿಂ ವರ್ಯಜಿನಬಿಂಬಸವನಪಾವನೀಭೂತಸ್ರೋತಮಪ್ಪಗಾಧ ಗಂಗಾನದೀಹ್ರದಂಗಳೊಳ್ ಪಾತಾಳಮೂಲಂ ಬರಂ ಮುಳುಗಿ ನಿಜಗಾತ್ರಮಂ ಪವಿತ್ರೀಕರಿಸಿಯುಂ, ಓರೊರ್ಮೆ ಲಘಿಮಾಲಘುಬಲದಿಂ ನಿತ್ಯಚೈತ್ಯ ಸವನನಿಮಿತ್ತಂ ಸ್ವಯಂಭೂರಮಣಸಾಗರೋದಕಾದಾನಕ್ಕಸಂಖ್ಯಾತದ್ವೀಪಸಮುದ್ರಂಗಳಂ ನಿಮಿಷ ಮಾತ್ರದಿನತಿಕ್ರಮಿಸಿಯುಂ, ಓರೊರ್ಮೆ ನಿಜಪ್ರಾಪ್ತಿಸಾಮರ್ಥ್ಯದಿಂದಿರ್ದೆಡೆಯೊಳಿರ್ದು ನಿಜಭುಜಲತಾ ಪ್ರತಾನಮಂ ನಿಮಿರ್ಚಿ ನಂದೀಶ್ವರದ್ವೀಪದ ಜಿನೇಂದ್ರಾಗಾರಸಾಂಧ್ಯಬಂಧುರತೂರ್ಯಂಗಳಂ ಬಾಜಿಸಿಯುಂ, ಓರೊರ್ಮೆ ನಿಜಪ್ರಾಕಾಮ್ಯಪ್ರಭಾವದಿಂ ವಿದೇಹತೀರ್ಥಕೃತ್ಕಲ್ಯಾಣಮಂಗಳಂಗಳೊಳ್ ಸೌಧರ್ಮೇಂದ್ರನೊಡನೆ ಲಾಸ್ಯತಾಂಡವಚ್ಛುರಿತನೃತ್ಯಂಗಳಂ ತತ್ತದ್ರೂಪಂಗಳಿಂ ಸಂಪಾದಿಸಿಯುಂ, ಓರೊರ್ಮೆ ತನ್ನೀಶತ್ವಶಕ್ತಿಯಿಂ ಪಂಚಗುರುಚರಣಪೂಜೋಪಚಾರಸಜ್ಜೀಕರಣದೊಳ್ ಸಕಲಸುರ ಸಮಾಜಮಂ ಪರಿಚಾರಕತ್ವದೊಳ್ ಯೋಜಿಸಿಯುಂ, ಓರೊರ್ಮೆ ವಶಿತ್ವಾತಿಶಯದಿಂ ವೀತರಾಗ ರೂಪಗುಣವಸ್ತುವರ್ಣನಾನುಬದ್ಧತ್ರಮಾರ್ಗಗೀತಂಗಳಂ ತ್ರಿವಿಧಮಾರ್ಗಂಗಳೊಳ್ ಪಾಡಿ ಗಂಧರ್ವ

ವ॥ ಅದಲ್ಲದೆ ಆತನು ಒಮ್ಮೊಮ್ಮೆ ತನ್ನ ಅಣಿಮಾ ಸಾಮರ್ಥ್ಯದಿಂದ ನೆಲದಿಂದ ಸಹಜವಾಗಿ ಚಿಮ್ಮಿಹೋಗಿ ನಾಗಲೋಕದ ಅಕೃತ್ರಿಮ ಜಿನಾಲಯಕ್ಕೆ ಯಾತ್ರೆ ಮಾಡುವನು; ಒಮ್ಮೊಮ್ಮೆ ಮಹಿಮಾ ಬಲದಿಂದ ಮೇರುಗಿರಿಗೆ ಹೋಗಿ ಅದರಷ್ಟೆ ಎತ್ತರವಾದ ದೇಹಾಕಾರವನ್ನು ಧರಿಸಿ ಆ ಪರ್ವತ ನಾಲ್ಕು ವನಗಳಲ್ಲಿರುವ ಜಿನಗೃಹಗಳನ್ನು ಪ್ರದಕ್ಷಿಣೆಮಾಡಿ ವಂದಿಸುವನು; ಒಮ್ಮೊಮ್ಮೆ ಗರಿಮಾಶಕ್ತಿಯಿಂದ ಜಿನಬಿಂಬ ಸ್ನಾನದಿಂದ ಪಾವನವಾದ ಗಂಗಾನದಿಯ ಮಡುಗಳಲ್ಲಿ ಪಾತಾಳದವರೆಗೆ ಮುಳುಗಿ ತನ್ನ ದೇಹವನ್ನು ಪವಿತ್ರಗೊಳಿಸುವನು; ಒಮ್ಮೊಮ್ಮೆ ಲಕ್ಷಿಮಾಗುಣದಿಂದ ನಿತ್ಯ ಜಿನಾಭಿಷೇಕಕ್ಕಾಗಿ ಸ್ವಯಂ ಭೂರಮಣ ಸಾಗರದ ಜಲವನ್ನು ತರಲೆಂದು ಅಸಂಖ್ಯವಾದ ಅದರ ದ್ವೀಪಸಮುದ್ರಗಳನ್ನು ನಿಮಿಷ ಮಾತ್ರದಲ್ಲಿ ದಾಟುವನು; ಒಮ್ಮೊಮ್ಮೆ ಪ್ರಾಪ್ತಿಬಲದಿಂದ ಇದ್ದೆಡೆಯಲ್ಲಿಯೆ ಇದ್ದು ತನ್ನ ತೋಳು ಚಾಚಿ ನಂದೀಶ್ವರ ದ್ವೀಪದ ಜಿನಾಲಯದಲ್ಲಿರುವ ಸಂಧ್ಯಾವಾದ್ಯಗಳನ್ನು ಬಾರಿಸುವನು; ಒಮ್ಮೊಮ್ಮೆ ಪ್ರಾಕಾಮ್ಯ ಸಾಮರ್ಥ್ಯದಿಂದ ವಿದೇಹ ತೀರ್ಥಂಕರರ ಕಲ್ಯಾಣ ಮಂಗಳೋತ್ಸವಗಳಲ್ಲಿ ಸೌಧರ್ಮೇಂದ್ರನೊಡನೆ, ಆತನಂತೆಯೆ ರೂಪತಾಳಿ ಲಾಸ್ಯತಾಂಡವಾದಿ ನೃತ್ಯಗಳನ್ನು ನೆರವೇರಿಸುವನು; ಒಮ್ಮೊಮ್ಮೆ ತನ್ನ ಈಶತ್ವ ಗುಣದಿಂದ ಪಂಚಪರಮೇಷ್ಠಿಗಳ ಪಾದಪೂಜೆಯಲ್ಲಿ ಮುಖಂಡನಾಗಿ ಸಮಸ್ತ ದೇವಪರಿವಾರವನ್ನು ಪರಿಚಾರ ಕಾರ್ಯಕ್ಕೆ ನಿಯೋಜಿಸುವನು; ಒಮ್ಮೊಮ್ಮೆ ವಶಿತ್ವ ಸಾಮರ್ಥ್ಯದಿಂದ ಜಿನನ ರೂಪಸ್ತವ, ಗುಣಸ್ತವ, ವಸ್ತುಸ್ತವಗಳನ್ನು ವರ್ಣ

ಗೀರ್ವಾಣರಂ ವಶೀಕೃತರಂ ಮಾಡಿಯುಂ ಇಂತಷ್ಟಗುಣಂಗಳನಿಷ್ಟದೇವತೋಪವಿಷ್ಟಿಯಿಂ ಸಫಲಂ ಮಾಡುತ್ತುಮಿಂತು

ಅನತಿಶಯಪುಣ್ಯಪುಣ್ಯಾ ।
ರ್ಚನತತ್ಪರನಾಮರುದ್ವರಂ ವಿವಿಧವಿನೋ ॥
ದನಸೇತುಯಾನದಿಂ ಜೀ ।
ವನಸಾಗರನಿಕರದಂತನಿಂತೈತಂದಂ ॥ ೫೭

ಅಂತು ದೂರಾಯುಸ್ಸಾಗರಪಾರಗನಾಗಲೊಡಂ

ನಿಜಕುಸುಮಸ್ರಜಂ ಕೊರಗಿದತ್ತು ಮೊಗಂ ಕೊರಗಿತ್ತೆ ಭೂಷಣ ।
ವ್ರಜರುಚಿಸಂಚಯಂ ತೊಲಗಿದತ್ತಜಿತಂ ತೊಲಗಿತ್ತೆ ನೋಡೆ ಭೂ ॥
ಮಿಜನಿಕರಂ ಕರಂ ನಡುಗಿದತ್ತು ಮನಂ ನಡುಗಿತ್ತೆ ಪೇಟೆ ಕ ।
ಲ್ಪಜಪತಿಗೆಂದು ತಮ್ಮೊಳುಲಿದರ್ ಸುರರೇಂ ವಿಭು ಭಾವಿತಾತ್ಮನೋ ॥ ೫೮

ಅಮರಾಹ್ವಯಮೊಂದುಂ ವ್ಯ ।
ರ್ಥಮಾದೊಡೇನಚ್ಯುತೇಂದ್ರನಾಯುಶ್ಚ್ಯುತಿಯೊಳ್ ॥
ಸುಮನೋಲೋಕಸ್ವವಿಬುಧ ।
ಸಮಾಖ್ಯೆಗಂ ನಾಡೆ ಮಾಡಿದಂ ಸಾರ್ಥತೆಯಂ ॥ ೫೯

ಅಂತು ಸಮಾಹಿತಚಿತ್ತನಾಗಿ

ಸ್ಮೃತಿನುತತತ್ತ್ವದೊಳ್ ನುತಿ ಜಿನೇಂದ್ರ ಪದಾಬ್ಜದೊಳುಕ್ತಿ ತದ್ಗುಣ ।
ಸ್ತುತಿಶತದೊಳ್ ಮನೋವಿರತಿ ಭೋಗಕದಂಬದೊಳಿಂಬುವೆತ್ತ ಸಂ ॥

ನಾನುಬದ್ಧವಾದ ತ್ರಿವರ್ಗಗೀತಗಳಲ್ಲಿ ಹಾಡಿ ಗಂಧರ್ವದೇವತೆಗಳನ್ನು ವಶೀಕರಿಸಿಕೊಳ್ಳುವನು; ಹೀಗೆ ತನ್ನ ಅಷ್ಟಗುಣಗಳನ್ನು ಇಷ್ಟದೇವತಾ ಪೂಜೆಗೆ ವಿನಿಯೋಗಿಸಿ ಸಾರ್ಥಕಗೊಳಿಸುತ್ತ–೫೭. ಅತ್ಯಧಿಕವಾದ ಪುಣ್ಯಪೂಜಾನಿರತನಾಗಿ ಆ ದೇವೇಂದ್ರನು ವಿವಿಧ ವಿನೋದಗಳೆಂಬ ಸೇತುಗಳಿಂದ ಸಾಗುತ್ತ ತನ್ನ ಆಯುಷ್ಯಸಾಗರದ ದಂಡೆಗೆ ಹತ್ತಿರವಾದನು. ವ॥ ಹೀಗೆ ದೀರ್ಘವಾದ ಆಯುಸ್ಸಾಗರ ತೀರಕ್ಕೆ ಸನ್ನಿಹಿತನಾಗಲಾಗಿ ೫೮. "ಧರಿಸಿಕೊಂಡ ಹೂಮಾಲೆ ಬಾಡಿತ್ತು. ಮುಖ ಬಾಡಿತ್ತೆ? ಆಭರಣಗಳ ಕಾಂತಿ ತೊಲಗಿತು, ಅರಿವು ತೊಲಗಿತ್ತೆ ? ವೃಕ್ಷಗಳು ನಡುಗಿದುವು. ಮನ ನಡುಗಿತ್ತೆ ? ಈ ಪ್ರಭು ಎಂತಹ ಆತ್ಮಜ್ಞಾನಿ !" ಎಂದು ದೇವತೆಗಳು ತಂತಮ್ಮಲ್ಲಿ ಮಾತಾಡಿಕೊಂಡರು. ೫೯. "ದೇವ" ಎಂಬ ಹೆಸರೊಂದು ಅವನಿಗೆ ಇನ್ನು ಮೇಲೆ ಇಲ್ಲವಾದರೇನಂತೆ? ಅಚ್ಯುತೇಂದ್ರನು ಆಯುಷ್ಯಾಂತದಲ್ಲಿ "ಸುಮನ" (೧. ಸಚ್ಚಿತ್ತ, ೨. ದೇವತೆ) ಮತ್ತು "ವಿಬುಧ" (೧. ಜ್ಞಾನಿ, ೨. ದೇವತೆ) ಎಂಬ ಹೆಸರುಗಳನ್ನು ಸಾರ್ಥಕಗೊಳಿಸಿದನು. ವ॥ ಆಗ ಶಾಂತ ಚಿತ್ತನಾಗಿ – ೬೦. ತತ್ವಭಾವನೆಯಲ್ಲಿಯೆ ನೆನಹಿಟ್ಟು, ಜಿನೇಂದ್ರ ಪಾದಗಳನ್ನು ಸ್ತುತಿಸುತ್ತ, ಜಿನಸ್ತುತಿ ಶತಗಳನ್ನು ಪಠಿಸುತ್ತ, ಭೋಗಗಳಲ್ಲಿ ನಿರಾಸಕ್ತನಾಗಿ, ಸಮಾಧಿವಿಧಿಯಿಂದ "ಬಾಲಪಂಡಿತ ಮರಣ" (ಮರಣ ಸನ್ನಿಹಿತವಾಗಿ ಶರೀರ

ಗತಿ ಸತತಂ ಸಮಾಧಿವಿಧಿಯೊಳ್ ಸಮಸಂದಿರೆ ಸಾರ್ದ ಬಾಳಪಂ ।
ಡಿತಮೃತಿಯಿಂ ಸುರಂ ಸುಮನರಂ ತಲೆದೂಗಿಸಿದಂ ನಿರಂತರಂ ॥ ೬೦

ಅಮೃತಮುಣಿಸಾತ್ಮರಕ್ಷಕ ।
ರಮರ್ತ್ಯರಾರಯ್ಯೆ ಸಗ್ಗಮದು ದುರ್ಗಮೆನಿ ॥
ಪ್ಪಮರರ್ಗಂ ಮೃತಿಯುಮನಿಂ ।
ಸಮನಿಸಿತೆನೆ ಮತ್ತಿನವರ್ಗೆ ನಿತ್ತರಮುಂಟೇ ॥ ೬೧

ಅನಂತರಂ

ಸುಮನಸ್ಸ್ಥಿತ್ಯನುಗಮದೊಳ್ ।
ದ್ರುಮದಿಂದ ನೆಲಕ್ಕೆ ಬೀೞ್ವವೋಲಾಯುರ್ವ್ಯ ॥
ತ್ಕ್ರಮದೊಳ್ ನಾಕಾನೋಕಹ ।
ದೆ ಮಹೀಭಾಗಕ್ಕೆ ವಂದನಂದಾಸುಮನಂ ॥ ೬೨

ಬಂದು ಕನಕಪ್ರಭಂಗಮ ।
ನಿಂದಿತೆ ತತ್ಸತಿ ಸುವರ್ಣಮಾಲೆಗಮುಖಿಲಾ ॥
ನಂದಕರಚರಿತನಂತಾ ।
ವೃಂದಾಕರನಂದು ಪುಟ್ಟಿದ..... ನಾದ್ಯಂ ॥ ೬೩

ಕ್ರಮದಿಂದಿಂತೆಲ್ಲಮಂ ಶ್ರೀಧರಯತಿಪತಿ ಸರ್ವಾವಧಿಶ್ರೀಧರಂ ಪೇ ।
ೞೆ ಮಹೀಶಂ ಪದ್ಮನಾಭಂ ಭವಸಮುದಯದೃತ್ತಾಂತಮಂ ತಾನೆ ಕೇಳು ॥
ತ್ತೆ ಮನಂಗೊಂಡೀಶಲೋಕಕ್ಕೆ ದಿಟಮೆನಿಪಂತಿಂದೆ ಮುಂದಪ್ಪುದೇನಾ ।
ನುಮನೊಂದಂ ಪೇೞಿಮೆಂದಂ ಬೞಿಕ ಮುಕುಳಿತಾತ್ಮೀಯಹಸ್ತಾರವಿಂದಂ ॥ ೬೪

ಸಲ್ಲೇಖನವಾಗಲಿ ಕಷಾಯ ಸಲ್ಲೇಖನವಾಗಲಿ ಇಲ್ಲದೆ ಮನೆಯಲ್ಲಿಯೆ ಕುಳಿತು ಕೊಂಡು ಧ್ಯಾನಾಸಕ್ತನಾಗಿ ಪ್ರಾಣವನ್ನು ತ್ಯಜಿಸುವುದು) ಹೊಂದಿ ದೇವತೆಗಳನ್ನು ತಲೆದೂಗಿಸಿದನು. ೬೦. ಅಮೃತವೇ ಊಟ, ದೇವತೆಗಳೆ ಅಂಗರಕ್ಷಕರು, ಸ್ವರ್ಗವೆ ದುರ್ಗ– ಇಂತಹ ವೈಭವವುಳ್ಳ ದೇವತೆಗಳಿಗೆ ಕೂಡ ಯಮನಿಂದ ಮರಣವೊದಗಿತು, ಎಂದ ಬಳಿಕ ಇನ್ನುಳಿದವರಿಗೆ ಅದು ತಪ್ಪೀತೆ ? ಆ ಬಳಿಕ– ೬೧. "ಸುಮನ ಸ್ಥಿತಿ" (೧. ಹೂವಿನ ಆಯುಷ್ಯ, ೨. ದೇವಗತಿಯ ಆಯುಷ್ಯ) ಮುಗಿದೊಡನೆ ಮರದಿಂದ ನೆಲಕ್ಕುರುಳುವ ಹೂವಿನಂತೆ ಆ ದೇವನು ಸ್ವರ್ಗದಿಂದ ಭೂಮಿಗೆ ಬಂದನು. ೬೨. ಹಾಗೆ ಬಂದು ಕನಕಪ್ರಭನಿಗೂ ಆತನ ಸತ್ಸತಿಯಾದ ಸುವರ್ಣ ಮಾಲೆಗೂ ಸರ್ವಾನಂದಕರನಾದ ಸಚ್ಚರಿತ್ರ ಪುತ್ರನಾಗಿ ಆ ದೇವನು ಹುಟ್ಟಿದನು. (ಅವನೇ ನೀನು). ೬೩. ಈ ಮೇರೆಗೆ ಶ್ರೀಧರಯತೀಂದ್ರರು ಪದ್ಮನಾಭರಾಜನಿಗೆ ಕ್ರಮವಾಗಿ ಆತನ ಪೂರ್ವ ಭವಾವಳಿಯನ್ನು ತಿಳಿಸಿಕೊಡಲಾಗಿ, ಅದನ್ನೆಲ್ಲ ಭಾವಿಸಿ ನೋಡಿ ರಾಜನು, "ದೇವ, ಜನಕ್ಕೆ ದಿಟವೆಂದು ತಿಳಿಯುವಂತೆ ಮುಂದೆ ಒದಗುವ

ಎನಲೊಡಂ ತತ್ಸಭಾಜನಮನಸ್ಸಂಶಯತಮಸ್ಸಮುದಯಮಂ ತೂಳ್ದುವಂತೆ ದಂತಕಾಂತಿ ಚಂದ್ರಾತಪಮಂ ಪಸರಿಸೆ ತನ್ಮುನೀಂದ್ರಚಂದ್ರನವರ್ಗಿಂತೆಂದಂ :-

ಯುಷ್ಮತ್ಪುರಕ್ಕೆ ಕರಿಪತಿ ।
ಭೀಷ್ಮ ಮಹಾವರ್ಷಮೊಂದು ಬರ್ಕುಂ ಬರ್ಪಿ ॥
ಗ್ರೀಷ್ಮರ್ತುವಿನೊಳಧಿಕಮ ।
ದೋಷ್ಮಮದಂ ಕಂಡು ನುಬಿಮಿನ್ನುಳಿದುದುಮಂ ॥ ೬೫

ಎಂದು ಬೆಸಸುವುದುಮನಂತರಂ ತದೀಯಪಾದಪದ್ಮಂಗಳಂ ಪದ್ಮನಾಭಂ ಸನಾಭಿಜನಸಮೇತಂ ಬೀೞ್ಕೊಂಡು ಬಂದು ನಿಜರಾಜಧಾನಿಯಂ ರತ್ನಸಂಚಯಮಮಂ ಪೊಕ್ಕು ರತ್ನತ್ರಯಾಲಂಕೃತಂ ಸುಖದಿನಿರ್ಪನ್ನೆಗಂ

ಅತಿತಪ್ತೋದ್ಧಪ್ತಧೂಳೀಪಿಹಿತಮಹಿತಳಂ ತುಂಗವಾತೂಳಿಕಾಲಿಂ ।
ಗಿತರೋದೋಮಂಡಲಂ ಪ್ರೋಚ್ಚಲಿತಮರುಮರೀಚೀಜಾಲದಿಕ್ಸಂ ॥
ತತಿ ಬಂದತ್ತಂದಗುರ್ವಿಂ ಬಗೆಗೆ ಪಡೆದಮೋಘಂ ಸಮುದ್ಧೂತಮಾಘಂ ।
ಹೃತನದ್ಯೌಘಂ ವಿಮೇಘಂ ಜನಿತಜನಮನೋಗ್ಲಾನಿದಾಘಂ ನಿದಾಘಂ ॥ ೬೬

ನದನದ್ಯೌಘಾಂಬುವಂ ಪೀರ್ದೆಳೆ ನೆಱೆಯದೆ ಬಾಯ್ಬಿಟ್ಟವೊಲ್ ಬೀಡೆಗಳ್ ಪ ।
ರ್ವಿದುವುಷ್ಣಾಂಶುಪ್ರಭಾಮಂಡಲದ ಪುದುವಿನಿಂ ಬೆಂದವೋಲಾಗಸಂ ಕಂ ॥

ಏನಾದರೊಂದು ಕುರುಹನ್ನು ಹೇಳಿ" ಎಂದು ಕೈಮುಗಿದು ಬಿನ್ನವಿಸಿದನು. ವ॥ ಹೀಗೆನ್ನಲಾಗಿ, ಆ ಸಭಾಜನರ ಮನಸ್ಸಂಶಯವೆಂಬ ಕತ್ತಲೆಯನ್ನು ಹೊಡೆದೋಡಿಸುವಂತೆ ತನ್ನ ದಂತಕಾಂತಿಯೆಂಬ ಬೆಳ್ದಿಂಗಳನ್ನು ಹರಡುತ್ತ ಆ ಯತೀಂದ್ರನು ಅವರಿಗೆ ಹೀಗೆ ನುಡಿದನು- ೬೫. "ಅತ್ಯದ್ಭುತವಾಗಿ ಮದೋದಕವನ್ನು ಸುರಿಸುತ್ತ ಗಜೇಂದ್ರವೊಂದು ಬರಲಿರುವ ಬೇಸಗೆಯಲ್ಲಿ ನಿಮ್ಮ ಪಟ್ಟಣಕ್ಕೆ ಬರುವುದು. ಅದನ್ನು ಕಂಡು ಉಳಿದುದನ್ನು ನಂಬಿ" ವ॥ ಅವರ ಮಾತನ್ನು ಕೇಳಿಕೊಂಡು ತರುವಾಯ ಪದ್ಮನಾಭ ರಾಜನು ತನ್ನ ಬಂಧುಗಳೊಡನೆ ಅವರನ್ನು ಬೀಳ್ಕೊಟ್ಟು ಬಂದು ತನ್ನ ರಾಜಧಾನಿಯಲ್ಲಿ (ಸಮ್ಯಗ್ದರ್ಶನ, ಸಮ್ಯಗ್ಜ್ಞಾನ ಹಾಗೂ ಸಮ್ಯಕ್ ಚಾರಿತ್ರ ಎಂಬ) ರತ್ನತ್ರಯಗಳಿಂದ ಅಲಂಕೃತನಾಗಿ ಸುಖದಿಂದ ಇದ್ದನು. ಹೀಗಿರುತ್ತಿರುವಾಗ- ೬೬. ಪ್ರಚಂಡವಾಗಿ ಕಾದ ದೂಳಿಯಿಂದ ಭೂಮಂಡಲವನ್ನೆಲ್ಲ ಮುಸುಕುತ್ತ, ದಿಗ್ ದಿಗಂತಗಳಲ್ಲೆಲ್ಲ ಬಿಸಿಲ್ಗುದುರೆಗಳನ್ನು ಓಡಿಸುತ್ತ, ಮಾಘದ ಚಳಿಯನ್ನು ಓಡಿಸಿ, ನದೀಜಲವನ್ನೆಲ್ಲ ಹೀರಿಕೊಂಡು, ನಭದಲ್ಲಿ ಮೋಡವಿಲ್ಲದಂತೆ ಮಾಡಿ ಜನಮನಕ್ಕೆ ತಾಪವನ್ನೊದಗಿಸುತ್ತ ಬೇಸಗೆ ಅಬ್ಬರದಿಂದ ಬಂದಿತು. ೬೭. ನದನದಿಗಳ ನೀರನ್ನೆಲ್ಲ ಹೀರಿಕೊಂಡರೂ ಸಾಲದೆ ಭೂಮಿಯೆ ಬಾಯಿ ಬಿಡುತ್ತಿರುವಂತೆ ಬೀಡೆಗಳು ಹಬ್ಬಿದವು; ಬಿಸಿಲಿನ ಅತಿಶಯದಿಂದ ಬೆಂದು

ದಿದುದಾದಂ ದಿಗ್ವಧೂಸಂತತಿಯೊದವಿದ ತಾಪಕ್ಕೆ ಮೆಯ್ಯಂನದಳ್ಳಂ ।
ದದೆ ಭೇರೀರಾವಮುರ್ವೆಟ್ಟುದು ಬೆಸೆಗಳೊಳೇಂ ಗ್ರೀಷ್ಮಮಾದತ್ತೊ ಭೀಷ್ಮಂ ॥ ೬೭

ನಯನೌಘಚ್ಛಲದಿಂದೆ ನೈದಿಲೆಸಳಂ ಶಕ್ರಂ ಮುಸುಂಕಿಟ್ಟನೈ ।
ದೆ ಯಮಂ ಛಾಯೆಯನೊಂದಿನಿತ್ತಗಲದಿರ್ಪಂ ಪಾಶಹಸ್ತಂ ಪಯೋ ॥
ಧಿಯನಾಶ್ರೈಸಿದನಾವಗಂ ತುಹಿನಭೂಮೀಧ್ರಕ್ಕೆ ಸಾರ್ದಂ ಹರ ।
ಪ್ರಿಯನಾವರ್ತಿಸೆ ತಳ್ತು ನಾಲ್ದೆಸೆಯುಮಂ ಗ್ರೀಷ್ಮಪ್ರತಾಪೋದಯಂ ॥ ೬೮

ಜ್ವಲನೋಷ್ಮಗ್ರೀಷ್ಮತಾಪಕ್ಕಗಿದಡವಿಗಳೊಳ್ ಬೈಗುವೊಟ್ಟಿಪ್ಪಿನಂ ಪ ।
ಲ್ವಲಶಯ್ಯೋದ್ದೇಶಮಂ ಪೊರ್ದಿದುದಿರದೆ ಮುಹುಶ್ಯೃಂಗನಿಸ್ತಾಡನಪ್ರೋ ॥
ಚ್ಛಲಿತಾಂಭಶ್ಶೀಕರಂ ಸೈರಿಭವಿಸರಮಗಾಧಸ್ರವಂತೀಹ್ರದಾಂತ ।
ರ್ಜಲದೊಳ್ ನಿಷ್ಕಂಪಿತಾಂಗಂ ಮುಳುಗಿದುದು ಬಹಿಃಪುಷ್ಕರಂ ಹಸ್ತಿಯೂಥಂ ॥ ೬೯

ಬಿಡದಿನ್ನುಂ ತನ್ನನೆಮ್ಮನ್ವಯದ ಗಜಮವೆಂಟುಂ ಕೊರಲ್ಗೊಂಡು ಪೊತ್ತಿ ।
ರ್ದೊಡಮೆಮ್ಮೊಳ್ ಕಾಯ್ಪನಿಂತೀಯವನಿ ಮೆಱಿದಪಳ್ ಮಾಣದೆಂದೆಂದು ಪುಯ್ಯಲ್ಗು ॥
ಡುವಂತಾತ್ಮಾಗ್ರಹಸ್ತಂಗಳೊಳಿನಕಿರಣೋದ್ಭೀತಿಯಿಂ ಪಲ್ಲವಂಗ ।
ಳ್ವಿಡಿದುಗ್ರಗ್ರೀಷ್ಮದೊಳ್ ಸಾಮಜವಿತತಿ ತೊಟಲ್ದತ್ತು ವಾರ್ವಾಂಛೆಯಿಂದಂ ॥ ೭೦

ಹೋದಂತೆ ಆಕಾಶ ಕಂದಿತು; ಬೇಸಗೆಯ ತಾಪಕ್ಕೆ ಮೈ ತಾಳದೆ ದಿಗ್ವನಿತೆಯರು ಭೋರಿಟ್ಟು ಅಳುತ್ತಿರುವರೊ ಏನೋ ಎಂಬಂತೆ ದಿಕ್ಕು ದಿಕ್ಕುಗಳಲ್ಲಿ ಭೇರಿಧ್ವನಿಯೆದ್ದಿತು. ಹೀಗೆ ಗ್ರೀಷ್ಮಕಾಲವು ಭೀಕರವಾಯಿತು. ೬೮. ತನ್ನ (ಸಾವಿರಾರು) ಕಣ್ಣುಗಳೆಂಬ ನೆವದಿಂದ ಇಂದ್ರನು ಮೈತುಂಬ ನೈದಿಲೆಯೆಸಳುಗಳನ್ನು ಮುಸುಕಿಕೊಂಡನು; ಯಮನು ಛಾಯೆಯನ್ನು ಒಂದಿಷ್ಟೂ ಅಗಲದೆ ಅಂಟಿಕೊಂಡನು; ವರುಣನು ಸಮುದ್ರದ ಆಶ್ರಯ ಹೊಂದಿದನು; ಕುಬೇರನು ಹಿಮಗಿರಿಯ ಬಳಿಗೆ ಸಾಗಿದನು, ನಾಲ್ಕೂ ದಿಕ್ಕಿನಿಂದ ಗ್ರೀಷ್ಮದ ತಾಪ ಆವರಿಸಿ ಬರಲು ದಿಕ್ಪಾಲರು,; ಪಾಪ, ಇನ್ನೇನು ಮಾಡಿಯಾರು ೬೯. ಕಾಡುಕೋಣಗಳ ಹಿಂಡುಗಳು ಬೆಂಕಿಯಂತಹ ಬೇಸಗೆಯ ತಾಪಕ್ಕೆ ಅಂಜಿಕೊಂಡು ಅಡವಿಗಳಲ್ಲಿ ಸಂಜೆಯವರೆಗೆ ನೀರಿನ ಹೊಂಡದ ಪ್ರದೇಶಗಳನ್ನೆ ಮೊರೆಹೊಕ್ಕವು; ಪುನಃ ಪುನಃ ತಮ್ಮ ಕೋರೆಗಳಿಂದ ಬಡಿ ಬಡಿದು ನೀರಿನ ಸೀಕರಗಳನ್ನು ಚಿಮ್ಮುತ್ತ ನದಿಗಳ ಅಗಾಧವಾದ ಮಡುಗಳಲ್ಲಿ ಸೊಂಡಿಲನ್ನು ಮಾತ್ರ ಹೊರಗಿಟ್ಟುಕೊಂಡು, ನಿಶ್ಚೇಷ್ಟವಾಗಿ ಆನೆಯ ಹಿಂಡುಗಳು ಮುಳುಗಿದ್ದುವು ೭೦. "ನಮ್ಮ ವಂಶದವೇ ಆದ ಎಂಟು ದಿಗ್ಗಜಗಳು ತಮ್ಮ ಕೊರಳುಗಳ ಮೇಲೆ ತನ್ನನ್ನು ಹೊತ್ತುಕೊಂಡು ನಿಂತಿದ್ದರೂ ಈ ಭೂಮಿ ನಮ್ಮ ಮೇಲೆ ಈ ರೀತಿಯಾಗಿ ತಾಪವನ್ನು ಹುಯ್ಯುತ್ತಿದ್ದಾಳೆ" –ಎಂದು ಹುಯಿಲಡುವುವೊ ಏನೊ ಎಂಬಂತೆ ಬಿಸಿಲ ಭಯದಿಂದ ಸೊಂಡಿಲ ತುದಿಯಲ್ಲಿ ಚಿಗುರೆಲೆಗಳನ್ನು ಹಿಡಿದು

ಉರಿವ ನಿದಾಘತಾಪದೊಳೆ ಮೇರುನಗಂ ಪೊಱೆಪೋಗೆ ಸುತ್ತಲುಂ ।
ಕರಗಿ ಬಟೆಕ್ಕಿಳಾವಳಯದೆಣ್ದೆಸೆಗಂ ನೆಱೆ ಸೂಸಿ ಕಾಟ್ಪುರಂ ॥
ಬರಿದು ಬಿಲಸ್ಥಲಂಗಳೊಳಪೊಕ್ಕುಟೆದಿರ್ದುದದಲ್ಲದಂದು ಪೇೞ್ ।
ಜರಗಿನ ಪೊಂಗ ಮೀ ನೆಲಕಮಾವುದೊ ಸಂಗತಿವೆತ್ತಕಾರಣಂ ॥ ೭೧

ಬೇಸಗೆಯ ಬಿಸಲೊಳಾಕೈ ।
ಲಾಸನಗಂ ನೆಱೆಯೆ ಕರಗಿ ಕಣ್ಗೆಟ್ಟು ಕರಂ ॥
ಸೂಸಿ ಪರಿದಪುದು ದೆಸೆಗೆನೆ ।
ಮಾಸರಮಾಗಿರ್ದುವೊಗೆದ ಮೃಗತೃಷ್ಣಿಕೆಗಳ್ ॥ ೭೨

ಬಿಸಿಲಟುರೆ ಕರಗಿ ಹರಿವ ।
ಶ್ಮಸಾರಮಂ ಗಿರಿಯ ನಿರ್ಝರಂಗೆತ್ತೇಂ ಚುಂ ॥
ಬಿಸಿ ಚಂಚು ಬೇಯೆ ತಲೆಬಿದಿ ।
ರ್ದಸುವರೆಯಾದುದೊ ತೃಷಾರ್ತನೊಂದು ಮಯೂರಂ ॥ ೭೩

ಕಡುವಿಸಿಲ ಕಾಯ್ಪಿನಿಂ ಬಿದು ।
ವೊಡೆದುಗೆ ಬಿಸುಮುತ್ತು ಸೋರ್ವ ಸೀರ್ಪನಿಗೆತ್ತೊಂ ॥
ದೆಡೆಮಡಗದೆ ನೋಣೆದು ನವಿಲ್ ।
ಮಿಡುಕಿದುದತಿತೃಷ್ಣೆಯೀಗುಮೆರ್ದೆಗದವಟಿಲಂ ॥ ೭೪

ಕೊಂಡು ನೀರಿನ ಬಯಕೆಯಿಂದ ಆನೆಯ ಹಿಂಡುಗಳು ತೊಳಲುತ್ತಿದ್ದುವು. ೭೧. ಉರಿ ಉರಿಯಾದ ಈ ಬೇಸಗೆಯ ತಾಪದಿಂದ ಮೇರು ಪರ್ವತವು ಸುತ್ತಲೂ ಪದರೊಡೆದು, ಕರಗಿ ಭೂಮಿಯಲ್ಲಿ ಎಂಟು ದಿಕ್ಕಿಗೂ ಮಹಾಪೂರವಾಗಿ ಸೂಸಿಹರಿದು ಅಲ್ಲಲ್ಲಿಯ ರಂಧ್ರಗಳಲ್ಲಿ ಹೊಕ್ಕು ಉಳಿದುಕೊಂಡಿತು. ಹಾಗಲ್ಲದಿದ್ದರೆ ಜರಗಿನ ಚಿನ್ನಕ್ಕೂ ಈ ನೆಲಕ್ಕೂ ಸಂಬಂಧವುಂಟಾಗಲು ಕಾರಣವೇನು ? ೭೨. ಬೇಸಗೆಯ ಬಿಸಿಲಲ್ಲಿ ಆ ಕೈಲಾಸಪರ್ವತವು ಪೂರ್ಣವಾಗಿ ಕರಗಿ ಕಂಗೆಟ್ಟು ದಿಕ್ಕು ದಿಕ್ಕಿಗೆ ಹರಿದು ಹೋಗುತ್ತಿರುವುದೊ ಏನೊ ಎಂಬಂತೆ, ಮೃಗಜಲಗಳು ಒಪ್ಪಿದುವು. ೭೩. ಉರಿಯುವ ಬಿಸಿಲಿಗೆ ಕರಗಿ ಹರಿಯುವ ಕಬ್ಬಿಣದ ರಸಪ್ರವಾಹವನ್ನು ಬೆಟ್ಟದಿಂದಿಳಿದ ನೀರ ಝುರಿಯೆಂದು ಭ್ರಮಿಸಿ ಬಾಯಾರಿದ ನವಿಲೊಂದು ಕುಡಿಯಲೆಂಬು ಬಾಯಿಟ್ಟು, ಚುಂಚು ಬೇಯಲಾಗಿ ತಲೆಕೊಡಹಿ ನಿರ್ವಿಣ್ಣವಾಗಿ ನಿಂತಿತು. ೭೪. ಕಟ್ಟುಗ್ರವಾದ ಬಿಸಿಲ ಕಾವಿನಿಂದ ಆನೆಯ ತಲೆ ಒಡೆದು ಮುತ್ತುಗಳು ಬೀಳಲಾಗಿ ಸೋರುವ ಸೀರುಹನಿಗಳೆಂದು ಭ್ರಮಿಸಿ ನವಿಲೊಂದು ಬಂದು, ಗಡಬಡಿಸಿ ಬಾಯಿಗಿಟ್ಟು ಕೊಂಡು ಮಿತಿಮೀರಿದ ಬಾಯಾರಿಕೆಯಿಂದ ತಲ್ಲಣಿಸಿತು. ಅತಿಯಾದ ತೃಷ್ಣೆ ಎದೆಗುದಿ

ಪಱು ಬೇಗೆವೋಗೆ ತನ್ನಯ ।
ನೆೞಲನೆ ಬೇಱೊಂದುಗೆತ್ತು ಸಾರ್ವಳಿಪಿಂದಂ ॥
ಸುೞಿದೆಡಕಂ ಬಲಕಂ ಬಸ ।
ವೞಿದುದು ಬೇಸಗೆಯ ಬಿಸಿಲೊಳೊಂದಿಭಕಳಭಂ ॥ ೭೫

ಬಿಸಿಲೊಳೆ ಬಿಬ್ಬರಂ ಬಿಜೆದ ಮಸ್ತಕಶುಕ್ತಿಕೆಯಿಂದೆ ಮುತ್ತು ಮುಂ ।
ದೆಸೆ ಕವಿತಂದೊಡಾಂತಿರುತೆ ನೋವುಮನಿಂತಿದಪೂರ್ವತೋಯಬ್ಬ ॥
ದ್ವಿಸರದೆ ವಾಃಕಣಂಗಳುಗುತಂದಪುವೆಂದೆ ಪೊಡರ್ಪುಗೆಯ್ದು ಪೂ ।
ರಿಸುವಳಿಪಿಂದೆ ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ ॥ ೭೬

ಪರಿಪೂರ್ಣಗರ್ಭಭರದಿಂ ।
ಬರಲಾಱದೆ ನಿಂದೊಡೈದಿ ನದಿಯಂ ಜಲಮಂ ॥
ಪಿರಿದೂಡಿ ಬಂದು ತೆಗೆತೆಗೆ ।
ದಿರದೆಱೆದುದು ಕರಣೆಯಿಂದೆ ಕರಿಣಿಗಿಭೇಂದ್ರಂ ॥ ೭೭

ಒದವಿದ ಬೆಟ್ಟ ಬೇಸಗೆಯ ಕೂರ್ವಿಸಿಲರ್ವಿಸೆ ಬೆರ್ಚಿ ವಾಯುವೇ ।
ಜಿದ ಹರಿಣಂ ಸಮುತ್ಪ್ಲುತದಿನಿಂದುವ ಬಿಂಬವ ನೋಡಿ ಪೊಕ್ಕು ಮ ॥
ಧ್ಯದೊಳೊಸಱುತ್ತುಮಿರ್ಪ ಸುಧೆಗಂ ಕುಳಿರ್ವಾಲ ನೆೞಲ್ಗಮಲ್ಲಿ ಪೋ ।
ಗದೆ ನೆಲಸಿರ್ದುದಲ್ಲದೊಡದೆಲ್ಲಿಯದೇಣಶಶಾಂಕಸಂಗಮಂ ॥ ೭೮

ಯನ್ನೆ ಒದಗಿಸುವುದು. ೭೫. ಕಾಡಿಗೆ ಬೆಂಕಿ ಬಿದ್ದಾಗ ತನ್ನ ನೆಳಲನ್ನು ಇನ್ನೊಂದು ಆನೆಯೆಂದು ಭಾವಿಸಿ ಅದರ ನೆಳಲಿಗೆ ಸೇರಬೇಕೆಂಬ ಬಯಕೆಯಿಂದ ಆನೆಮರಿಯೊಂದು ಎಡಕ್ಕೂ ಬಲಕ್ಕೂ ಸುಳಿದಾಡಿ ಬೇಸಗೆಯ ಬಿಸಿಲಲ್ಲಿ ಬಸವಳಿಯಿತು. ೭೬. ಬಿಸಿಲಿಗೆ ಬಿಕ್ಕನೆ ಬಿರಿದ ತನ್ನ ತಲೆಯೊಳಗಿನ ಮುತ್ತುಗಳು ತನ್ನ ಮುಂದೆ ಬೀಳುತ್ತಿರಲಾಗಿ ಆ ನೋವಿನಲ್ಲಿಯೂ, ಅಪೂರ್ವವಾದ ನೀರಹನಿಗಳು ದೊರೆತುವೆಂದು ಉತ್ಸಾಹದಿಂದ ಅವುಗಳನ್ನು ಹೀರಿಕೊಳ್ಳಲು ಆನೆಯೊಂದು ಸೊಂಡಿಲ ತುದಿಯನ್ನೆತ್ತಿ ನಿಂತಿತು. ೭೭. ಹೆಣ್ಣಾನೆಯೊಂದು ತುಂಬಿದ ಬಸಿರ ಭಾರದಿಂದ ಹೆಜ್ಜೆಯಿಡಲಾರದೆ ನದಿಯ ತೀರದಲ್ಲಿ ನಿಂತು ಬಿಡಲಾಗಿ, ಗಂಡಾನೆ ತನ್ನ ಸೊಂಡಿಲಿಂದ ತುಂಬಿ ತುಂಬಿ ತಂದು ಅದಕ್ಕೆ ನೀರೆರೆಯಿತು. ೭೮. ಬೆಟ್ಟ ಬೇಸಗೆಯ ಕಡುಬಿಸಿಲು ಉಗ್ರವಾಗಿ ತಾಳಲಾರದೆ ಆಕಾಶಕ್ಕೆ ನೆಗೆದ ಜಿಂಕೆಯು ಹಾರುತ್ತ ಚಂದ್ರನ ಬಿಂಬವನ್ನು ನೋಡಿ ಅದರಲ್ಲಿ ಹೊಕ್ಕಿತು; ಅದರ ಮಧ್ಯದಲ್ಲಿ ಒಸರುತ್ತಿರುವ ಅಮೃತರಸಕ್ಕೂ ಅಲ್ಲಿಯ ಆಲದ ಮರದ ತಂಪಾದ ನೆಳಲಿಗೂ ಮೆಚ್ಚಿ ಅಲ್ಲಿಂದ ಅಗಲದೆ ನೆಲೆಯಾಗಿ ನಿಂತುಬಿಟ್ಟಿತು,

ಭಾವಿಸಿ ನೋಡಿ ದೂರದೊಳೆ ಕಂಡು ವನಾಂತರದೊಳ್ ನಿಪಾನಪಂ।
ಕಾವಿಳವಾರಿಯಂ ಹರಿಣಿಯೊಂದತಿತುಚ್ಛಮನಲ್ಲಿಗುಷ್ಣತೃ॥
ಷ್ಣಾವಶಮಂದಮಂದಗತಿ ಬರ್ಪನಿತರ್ಕಿನತಾಪದಿಂದೆ ತ।
ಜ್ಜೀವನಮುಂ ಮೃಗಾಂಗನೆಯ ಜೀವನಮುಂ ತವುತಂದುವೊರ್ಮೊದಲ್॥ ೭೯

ಒದವಿದ ಧೂಳಿಯಾವಗೆಯ ಧೂಳಿವೊಲಿರ್ದುದು ಬೆಟ್ಟು ಸುಟ್ಟ ಸು।
ಣ್ಣದ ಕಱೆಗಲ್ಗಳೊಟ್ಟಿಲೆನಿಸಿರ್ದುದು ನೀರಱಲಿಂ ಸರಸ್ತಟಾ॥
ಕದ ಶಫರಾಳಿ ಕುತ್ತೆಸಱ ಮೀನವೊಲಿರ್ದುದು ತಾಱೆ ತಳ್ತು ಪ।
ರ್ವಿದ ಪಟುವಗ್ನಿಯುಂಡುಱಿದ ಕಾಂಡವದಂತೆವೊಲಿರ್ದುದಾವಗಂ॥ ೮೦

ಪೆಡೆಯ ಮೊದಲ್ಗೆ ತಂದಡರೆ ಮಂಡಳಿಸಿತ್ತಹಿ ಶೇಷಕಾಯಮಂ।
ಕೊಡೆವಿಡಿದಂತಲರ್ಚಿದುದು ಸೋಗೆಯನೋವದೆ ಸೋಗೆ ಪೀರ್ದುದೋ॥
ಗಡಿಸದೆ ಪೀರ್ವ ನಾಲಗೆಯ ಬಿಂದುವಿನಂದೆರ್ದೆಯಾಱೆ ಸಿಂಗಮಿಂ।
ತುಡುಗದದೇನಲಭ್ಯತರಮೋ ನೆೞಲುಂ ಜಳಮುಂ ನಿದಾಘದೊಳ್॥ ೮೧

ನೆತ್ತಿಯೊಳಾವಗಂ ತಳೆದ ಬಾಂದೊಱೆ ಮಾಣದೆ ಭಾಳಚೂಳದೊಳ್॥
ಪತ್ತಿಸಿದಾಹಿಮಾಂಶುಕಲೆಯಪ್ಪಿದ ಹೈಮವತೀಲತಾಂಗಮೊ॥
ಷ್ಪುತ್ತಿರೆಯುಂ ಪೊದಟ್ದುರಿವ ಬೇಸಗೆಯುಮ್ಮೆಗೆ ಬೆರ್ಚಿ ರೌಪ್ಯಭೂ।
ಭೃತ್ತಟನಂದನಾವಳಿಯ ತಣ್ಬುೞಲಂ ಬಿಡನೊರ್ಮೆಯುಂ ಮೃಡಂ॥ ೮೨

ಹಾಗಲ್ಲವಾದರೆ ಜಿಂಕೆಗೂ ಚಂದ್ರನಿಗೂ ಸಂಬಂಧವೆತ್ತಣದು ! ೭೯. ತೀವ್ರವಾದ ನೀರಡಿಕೆಯಿಂದಲೂ ದಾಹದಿಂದಲೂ ಬಳಲುತ್ತಿರುವ ಹೆಣ್ಣು ಜಿಂಕೆಯೊಂದು ನೀರಿಗಾಗಿ ಹುಡುಕಾಡುತ್ತ ಕಾಡಿನಲ್ಲಿ ದೂರದಲ್ಲಿ ಚಿಕ್ಕದೊಂದು ಕೆಸರು ನೀರಿನ ಪಲ್ವಲವನ್ನು ಕಂಡು ಧಾವಿಸಿ ಅಲ್ಲಿಗೆ ಓಡಿ ಹೋಗುತ್ತಿತ್ತು. ಅಷ್ಟರಲ್ಲಿ ಬಿಸಿಲಿನ ಉಗ್ರತೆಯಿಂದ ಹೊಂಡದ "ಜೀವನವೂ" (ನೀರೂ) ಆ ಜಿಂಕೆಯ "ಜೀವನವೂ" (ಜೀವವೂ) ಒಡನೊಡನೆ ಇಂಗಿ ಹೋದುವು. ೮೦. ಎದ್ದ ದೂಳಿ ಕಂಬಾರನ ಆವಗೆಯ ದೂಳಿಯಂತಿತ್ತು; ಪರ್ವತವು ಸುಟ್ಟ ಸುಣ್ಣದ ಕರಿಗಲ್ಲುಗಳ ರಾಶಿಯೆನಿಸಿತು; ನೀರು ಬತ್ತಿದ ಕೆರೆಯ ಮೀನುಗಳು ಕುತ್ತೆಸರಿಗೆ ಬಿದ್ದ ಮೀನಗಳಾಗಿದ್ದವು; ಒಣಗಿ ನಿಂತ ಅಗಲವಾದ ಅಡವಿ ಅಗ್ನಿಯುಂಡು ಉಳಿದ ಖಾಂಡವವನದಂತೆ ಇತ್ತು. ೮೧. ತನ್ನ ಹೆಡೆಯು ನೆಳಲಿಗೇ ಬರುವಂತೆ ಹಾವು ಸಾಧ್ಯವಾದಷ್ಟು ಮಟ್ಟಿಗೆ ತನ್ನ ದೇಹವನ್ನು ಸುತ್ತಿಕೊಳ್ಳುತ್ತಿತ್ತು; ನವಿಲು ಕೊಡೆಯಂತೆ ತನ್ನ ಸೋಗೆಯನ್ನು ಹರಡಿಕೊಂಡು ನೆಳಲು ಮಾಡಿಕೊಳ್ಳುತ್ತಿತ್ತು; ತನ್ನ ನಾಲಿಗೆಯಿಂದ ಸೋರುವ ಹನಿಗಳನ್ನೆ ಎದೆಯಾರೆ ನೆಕ್ಕಿ ಸಿಂಹವು ಸಂತೋಷಪಡುತ್ತಿತ್ತು; ಬೇಸಗೆಯಲ್ಲಿ ನೆಳಲೂ ನೀರೂ ಎಷ್ಟೊಂದು ಅಲಭ್ಯವಾದುವು ! ೮೨. ನೆತ್ತಿಯ ಮೇಲೆ ಸತತವಾಗಿ ಧರಿಸಿಕೊಂಡ ದೇವಗಂಗೆ; ಹಣೆ ದುಡಿಗೆ ಹತ್ತಿಸಿಕೊಂಡ ತಂಪಾದ ಚಂದ್ರಕಳೆ; ಹಿಮವಂತನ ಮಗಳಾದ ಪಾರ್ವತಿಯ ಅಪ್ಪುಗೆ– ಇಷ್ಟೆಲ್ಲ ಇದ್ದರೂ ಉಬ್ಬರಿಸಿ ಉರಿವ ಬೇಸಗೆಯ ತಾಪಕ್ಕೆ ಬೆಚ್ಚಿ ಶಿವನು ಬೆಳ್ಳಿಬೆಟ್ಟದ ತಪ್ಪಲಲ್ಲಿ

ತನುಪಂಕಾಗ್ರಮುಹುರ್ಲುಠಚ್ಛಫರಮಾಬದ್ಧಾಶ್ಮಸಂಧ್ಯಂತರಾ।
ಳನಿವಿಷ್ಟೋರುಕುಳೀರಕಂ ತಳತಟೀನಿರ್ಮಗ್ನಕೂರ್ಮಂ ಚಿರಾ ॥
ಭ್ಯನುಸಂಧಾನವಿನಾಶದೀನಮುಖಹಂಸಂ ಮ್ಲಾನಕಲ್ಹಾರಕೋ।
ಕನದಂ ಕಣ್ಗೆಟಿದಾಯ್ತು ತತ್ಸಮಯದೊಳ್ ಶುಷ್ಯತ್ಸರಸ್ಸಂಚಯಂ ॥ ೮೩

ಹಿಮತಾಂಬೂಲೋರುರಾಗಾಧರಮದೃಢನಿತಂಬಾಂಬರಂ ತಾಲವೃಂತೋ।
ತ್ಥಮರುದ್ವ್ಯಸ್ತಾಲಕಂ ನಿಸ್ಸೃತಮಧುಲವಸಾರ್ದ್ರೋದ್ಗಮಾಲಂಬಿಕೇಶಂ ॥
ವಿಮಲೋದ್ಯದ್ಯಂತ್ರಧಾರಾಜಲಕಲುಷಿತನೇತ್ರಾಂಜನಂ ಚಂದನಾಪಾಂ।
ಡಿಮಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು ಬಾಲಾಕಲಾಪಂ ॥ ೮೪

ಅಂತು ಬಂದ ಘರ್ಮಸಮಯದೊಳ್ ಸಮಯೋಚಿತಹಿಮಕರಾಯಮಾನಕಾಯಮಾನದೊಳಗೆ ಕತಿಪಯಪರಿಜನಪರಿವೃತನೊಂದು ದಿವಸಂ ಪ್ರಥಮಯಾಮದೊಳ್ ಮಹೀಪಾಲಂ ಲೀಲೆಯಿಂ ದಿರ್ಪಣ್ನೆಗಂ

ಮುರಿದ ಕೊರಲ್ಗಳಿಂ ದೆಸೆಯನಾಲಿಸೆ ದೀವದ ಹುಲ್ಲೆವಿಂಡು ಕ।
ತ್ತರಿಸಿರೆ ಮೇಪುವಿಟ್ಟು ಕಿವಿಯಂ ಹಯಸಂತತಿ ಕರ್ಣತಾಳವಿ ॥
ಸ್ಫುರಿತಮನೊಕ್ಕು ಕೇಳೆ ಗಜರಾಜಿ ಲಯಾಂತಕಘೋಷಭೀಷಣಂ ॥
ಪುರದೊಳಗುಣ್ಮಿದತ್ತು ಭಯವಿಹ್ವಲಪೌರಕೃತಂ ಮಹಾರುತಂ ॥ ೮೫

ರುವ ತೋಟಗಳ ತಂಪಾದ ಪ್ರದೇಶವನ್ನು ಒಂದಿಷ್ಟೂ ಬಿಟ್ಟು ಹೋಗದಾದನು. ೮೩. ತೆಳುವಾದ ಕೆಸರಲ್ಲಿ ಪುನಃ ಪುನಃ ಹೊರಳಾಡುವ ಮೀನುಗಳು; ದಂಡೆಯ ಕಲ್ಲು ಸಂದುಗಳಲ್ಲಿ ಸೆರೆಯಾದಂತೆ ಸಿಕ್ಕಿಕೊಂಡ ದೊಡ್ಡ ದೊಡ್ಡ ಏಡಿಗಳು; ಕೆಳಗೆ ಮುಳುಗಿಕೊಂಡ ಆಮೆಗಳು; ತನಗೆ ಇಷ್ಟು ದಿನಗಳ ಸಂಬಂಧ ಈಗ ತಪ್ಪಿತಲ್ಲವೆಂದು ಮುಖಬಾಡಿದ ಹಂಸಗಳು; ಕಂದಿ ಜೋತು ಬಿದ್ದ ಕಲ್ಹಾರ ಕಮಲಗಳು– ಇವೆಲ್ಲವುಗಳಿಂದ ಕೂಡಿ, ಬತ್ತುತ್ತಿರುವ ಜಲಾಶಯವು ತುಂಬ ಕಳೆಗುಂದಿ ತೋರಿತು. ೮೪. ಕರ್ಪೂರ ತಾಂಬೂಲ ಸೇವನೆಯಿಂದ ಇನ್ನಷ್ಟು ಕೆಂಪಾದ ತುಟಿ; ನಿತಂಬಗಳ ಮೇಲೆ ಸಡಿಲಾಗಿ ಉಟ್ಟಸೀರೆ; ಬೀಸಣಿಗೆಯ ಗಾಳಿಯಿಂದ ಚೆದುರಿದ ಮುಂಗುರುಳು; ಮಕರಂದವಿಲ್ಲದಿದ್ದರೂ ಆರ್ದ್ರವಾದ ಹೂಗಳನ್ನು ಮುಡಿದುಕೊಂಡ ಕೂದಲು; ಧಾರಾಯಂತ್ರ ಚಿಮ್ಮುವ ನೀರಿನಿಂದ ಕಣ್ಣಲ್ಲಿ ಕದಡಿದ ಕಾಡಿಗೆ; ಬಳಿದುಕೊಂಡ ಚಂದನದಿಂದ ಬೆಳ್ಳಗಾದ ಮೈ– ಹೀಗೆ ತರುಣಿಯರ ಸಮೂಹವು ಬೇಸಗೆಯ ಸಾಯಂಕಾಲದಲ್ಲಿ ಶೋಭಿಸಿತು. ವ॥ ಹೀಗೆ ಬಂದ ಬೇಸಗೆಯಲ್ಲಿ ತಂಪಾದ ಬಳ್ಳಿಮಂಟಪದಲ್ಲಿ ಕೆಲವೇ ಜನ ಪರಿವಾರದೊಂದಿಗೆ ಅರಸನು ಒಂದು ದಿವಸ ಮೊದಲ ಯಾಮದಲ್ಲಿ ಸಂತೋಷದಿಂದ ಕುಳಿತಿರುವಾಗ– ೮೫. ದೀವದ ಜಿಂಕೆಗಳ ಹಿಂಡು ಕೊರಳು ಹೊರಳಿಸಿ ದಿಕ್ಕು ದಿಕ್ಕಿಗೆ ಕಿವಿಗೊಟ್ಟು ಕೇಳುತ್ತಲಿವೆ; ಮೇವು ಬಿಟ್ಟು ಕುದುರೆಗಳೆಲ್ಲ ಕತ್ತರಿಗಿವಿಯಾಗಿ ನಿಂತಿವೆ; ಕಿವಿಯಲ್ಲಾಡಿಸುವುದನ್ನು ಬಿಟ್ಟು ಆನೆಗಳೆಲ್ಲ ಕೇಳುತ್ತಿವೆ; ಇದೆಲ್ಲಿಯ ಪ್ರಳಯಾಂತಕವಾದ ಭೀಕರವಾದ ಮಹಾ

ಪುಗು ಪುಗು ಪೋಗು ಪೋಗಡರಡರ್ ಗೃಹಕೂಟಮನಕ್ಕಟಕ್ಕಟಾ ।
ತೆಗೆ ತೆಗೆ ಮಕ್ಕಳಂ ಬಿಡದೆ ಕೂಗಿಡು ಕೂಗಿಡಡಂಗಡಂಗು ಮಂ ॥
ದಿಗೆ ಮುನಿದೆತ್ತಿತೆತ್ತಿತದೆ ಕೊಂದುದು ಕೊಂದುದು ಬಂದುದೆತ್ತಣ ।
ಚ್ಚಿಗಮೆಮಗೆಂದು ಬಾಯಟಿವ ಭೀರುಗಳಬ್ಬರಮಾದುದುಬ್ಬರಂ ॥ ೮೬

ಆಗಳರಸನಿದೇನೆಂಬುದುಂ ಪ್ರತೀಹಾರನೋರ್ವನತಿತ್ವರಿತಗತಿಯಿಂ ಪೋಗಿ ಬಂದು,

ದೇವ ಮದೇಭದಾಕೃತಿಯನಾಂತು ಕೃತಾಂತನೆ ಬಂದನೆಂಬ ರೌ ।
ದ್ರಾವಹಮಪ್ಪುದೊಂದು ಗಜಮೆತ್ತಣಿನಕ್ಕೆ ಪುರಕ್ಕೆ ಬಂದು ಪೊ ॥
ಕ್ಕೋವದೆ ಮರ್ತ್ಯಸಪ್ತಿಕರಭದ್ವಿಪಸ್ಶೈರಿಭರಾಸಭಾದಿಜೀ ।
ವಾವಳಿಯಂ ಕೊಲುತ್ತೆ ಬರುತಿರ್ದಪುದಂತಜಿನಾಯ್ತು ಸಂಭ್ರಮಂ ॥ ೮೭

ಎನಲೊಡಂ ಮುನಿವಚನದಮೋಘತೆಗೆ ಮನದೊಳ್ ಮುದಮನಪ್ಪುಕೆಯ್ದು ಅದಂ ನೋೞ್ಪೆ ನೆಂದರಮನೆಯಂ ಪೊಱಮಟ್ಟು ಪಟ್ಟಮಾರ್ಗದಿಂ ಬರ್ಪನ್ನೆಗಂ ತೊಟ್ಟನೆ ಕಟ್ಟಿದಿರೊಳ್ ಕಂಡು

ಪಸರಿಪ ಸಂಜೆಯೋ ಕಿವಿಯ ಕೆಂಬೆಳಗೋ ತಮಮೋ ಮದಾಂಬುವೋ ।
ಮಿಸುಗುವ ತಾರೆಯೋ ಪೊಳೆವ ದಿಟ್ಟಿಯೊ ರಾಹುವೊ ಕೈಯೊ ಮೇಣಿದಾ ॥
ಗಸಮೊ ಗಜೇಂದ್ರಮೋ ಕೊಱಿಯೊ ಕೋಡೊ ವಿಚಾರಿಸೆ ವಿಸ್ಮಯಂ ।
ಮನಕ್ಕಸದಳಮೆಂದು ನೀಡುಮವನೀಪತಿ ನಾಡೆ ಮರಳ್ದು ನೋಡಿದಂ ॥ ೮೮

ಧ್ವನಿ! ಊರ ಜನವೆಲ್ಲ ಭಯಭೀತರಾಗಿರುವರು. ೮೬. "ನಡೆನಡೆ! ಒಳಹೋಗು! ಹೋಗು ಹೋಗು! ಮನೆಯ ಮಾಳಿಗೆಯೇರು! ಅಯ್ಯೊ ಅಯ್ಯೊ! ಮಕ್ಕಳನ್ನು ಈಚೆಗೆ ಎಳೆದು ತಾ! ಕೂಗು! ಬಾಯಿ ಮಾಡು! ಅಡಗಿಕೊಳ್ಳೋ ಅಡಗಿಕೋ! ಅದು ನೋಡು ಮುಂದಿಯನ್ನು ಕಂಡು ಅಗೊ ಕೋಪದಿಂದ ಎತ್ತಿ ಹಾಕಿತು ! ಕೊಂದಿತೋ ಕೊಂದಿತು! ಇದೆಲ್ಲಿಂದ ಬಂತಪ್ಪಾ ನಮಗೆ ಪಿಡುಗು!" –ಹೀಗೆಂದು ಅಂಜಿದ ಜನರ ಕೋಲಾಹಲ ಅಬ್ಬರಿಸಿತು. ವ॥ ಆಗ ಅರಸನು ಇದೇನೆಂದು ವಿಚಾರಿಸುತ್ತಿರಲಾಗಿ, ಪ್ರತೀಹಾರನೊಬ್ಬನು ಧಾವಿಸಿ ಬಂದು –೮೭. "ದೇವಾ ಮದ್ದಾನೆಯ ರೂಪತಾಳಿ ಯಮದೇವನೇ ಬಂದನೋ ಏನೋ ಎಂಬಂತೆ ಭಯಾನಕವಾದೊಂದು ಆನೆ ಎಲ್ಲಿಂದಲೋ ಪಟ್ಟಣಕ್ಕೆ ನುಗ್ಗಿ ಬಂದು ಜನ, ಕುದುರೆ, ಆನೆ, ಎಮ್ಮೆ, ಕತ್ತೆ ಮೊದಲಾದ ಎಲ್ಲ ಬಗೆಯ ಜೀವಗಳನ್ನು ಕೊಲ್ಲುತ್ತಲಿದೆ. ಅದರಿಂದಲೆ ಈ ಕೋಲಾಹಲ" ವ॥ ಎಂದು ನುಡಿದನು. "ಮುನಿಗಳ ಭವಿಷ್ಯವಚನ ಸುಳ್ಳಾಗಲಿಲ್ಲ" ವೆಂದು ಮನದಲ್ಲಿಯೆ ಸಂತೋಷಪಟ್ಟು, "ಸರಿ ಅದನ್ನು ನೋಡೋಣ" ಎಂದು ಅರಮನೆಯಿಂದು ಹೊರಟು ರಾಜಮಾರ್ಗದಿಂದ ಬರುತ್ತಿರುವಾಗ, ದಿಢೀರನೆ ಅದನ್ನು ತನ್ನ ಎದುರಿಗೇ ಕಂಡು– ೮೮. "ಹಬ್ಬುತ್ತಿರುವ ಸಂಜೆಯೊ ಕಿವಿಯ ಕೆಂಬೆಳಕೊ? ಕತ್ತಲೆಯೋ, ಮದೋದಕವೊ? ಮಿರುಗುವ ನಕ್ಷತ್ರಗಳೊ, ಕಣ್ಣುಗಳೊ? ರಾಹುವೊ, ಸೊಂಡಿಲೊ? ಏನಿದು ಆಕಾಶವೊ, ಆನೆಯೊ? ವಿಚಾರಿಸಿ

ಅಂತು ನೋಟಿಪ್ಪಾಗಳ್

ಘನಕುಂಭಕೂಟಸಂಘ।
ಟ್ಟನದಿಂದಲ್ಲೊಕ್ಕ ತಾರಕಾವಳಿ ಮೊಗದೊ॥
ಡ್ಡಿನೊಳಲ್ಲಲ್ಲಿಗೆ ನೆಲಸಿ।
ತ್ತೆನೆ ಸುಂದರಮಾಯ್ತು ಬಿಂದುಜಾಲಕಮದಱಾ॥ ೮೯

ಎರಡುಂ ಕಟದಿಂದೊಗೆದನ।
ವರತಂ ದಾನಾಂಬುಧಾರೆ ಮುಸಲಸ್ಥೂಲಂ॥
ಸುರಿತರುತಿರೆ ಕರಿ ಕಟ್ಟಾ।
ಸುರಮಾದುದು ಕಣ್ಗೆ ಮೂಱುಕೈಯಾನೆಯವೋಲ್॥ ೯೦

ಅತಿತರಳಕರ್ಣತಾಳಾ।
ಹತಿಗಳ್ಕಿ ಕಪೋಲಯುಗಳದಿಂದೊಗೆವ ಮಧು॥
ವ್ರತನಿಚಯದ ನಿನದಮದೇಂ।
ರುತಿಯಂ ನೆನೆಯಿಸಿತೊ ಮೇಗೆ ಮದಡಿಂಡಿಮದಾ॥ ೯೧

ವಸುಧೇಶನ ಕಣ್ಗೆನಸುಂ।
ಮಿಸುಗುವ ಪೊಸಮಸೆಯ ಪೊನ್ನ ಕೂರಂಕುಸವಾ॥
ಳಿಸಿ ಬರಿಯ ಬೀರಗಚ್ಚೆಯೊ।
ಳೆಸೆದುದು ಕಾರ್ಮುಗಿಲ ಕೆಲದ ಕುಡುಮಿಂಚಿನವೊಲ್॥ ೯೨

ಒಟ್ಟಿದ ಬೆನ್ನ ಮಣ್ಣೊಳೊಗೆದತ್ತೆನೆ ಪೆರ್ದೊಡೆ ಮುಟ್ಟೆ ತೀವಿ ಕ।
ಣ್ಗೆಟ್ಟಳಮಾದುವಂದು ಸಿರಿಯಂತಿರೆ ತೋಲೊಳಗರ್ದುವಾವಗಂ॥
ಕಟ್ಟಿದ ಮುಟ್ಟು ಬಾಹಿರಿಗೆ ಕಿಟಿಕ್ತೊಡಪಂದುದು ನೆಟ್ಟನೊರ್ಮೆಯುಂ।
ಬಿಟ್ಟಿರದಾಗಿಯುಂ ಮದದೊಳೀಕರಿ ತಪ್ಪದು ಸಾರ್ವಕಾಲಿಕಂ॥ ೯೩

ದರೆ ಮನಕ್ಕೆ ಅದ್ಭುತವೆನಿಸುವುದು" ಎಂದುಕೊಳ್ಳುತ್ತ ಅರಸನು ಅದನ್ನು ನಿಟ್ಟಿಸಿದನು. ೮೯. ಅದರ ಕುಂಭಸ್ಥಳದ ತುದಿ ತಾಕಿ ಉದುರಿದ ನಕ್ಷತ್ರಗಳೊ ಏನೊ ಎಂಬಂತೆ ಅದರ ಮುಖದ ಮೇಲೆಲ್ಲ ಬಿಂದುಗಳು ಸಂದಣಿಸಿದ್ದುವು. ೯೦. ಅದರ ಗಂಡಸ್ಥಳದ ಇಕ್ಕಡೆಗಳಿಂದಲೂ ಒನಕೆಯ ಗಾತ್ರವಾಗಿ ಒಂದೇ ಸಮನೆ ಮದೋದಕ ಸುರಿಯುತ್ತಿದ್ದರಿಂದ ಆ ಆನೆ ಮೂರು ಸೊಂಡೆಗಳ ಆನೆಯಂತೆ ಉಗ್ರವಾಗಿ ತೋರಿತು. ೯೧. ನಿಂತಲ್ಲಿ ನಿಲ್ಲದೆ ಸತತವಾಗಿ ಬೀಸುತ್ತಿರುವ ಅದರ ಕಿವಿಗಳ ಹೊಡೆತಕ್ಕೆ ಅಂಜಿ ಗಂಡಸ್ಥಳದಿಂದ ಎದ್ದೆದ್ದು ಹಾರುತ್ತಿರುವ ದುಂಬಿವಿಂಡುಗಳ ಧ್ವನಿ ಮದಡಿಂಡಿಮದ ಧ್ವನಿಯನ್ನು ನೆನಪಿಗೆ ತರುತ್ತಿತ್ತು. ೯೨. ಕರಿಮೋಡದ ಪಕ್ಕದಲ್ಲಿಯ ಕುಡುಮಿಂಚಿನಂತೆ, ವೀರಗಚ್ಚೆಯ ಪಕ್ಕದಲ್ಲಿ ಹೊಸದಾಗಿ ಮಸೆದು ಸಿಕ್ಕಿಸಿದ ಚಿನ್ನದ ಅಂಕುಶವು ಅರಸನ ಕಣ್ಣಿಗೆ ಚೆಲುವಾಗಿ ಕಂಡಿತು. ೯೩. ಮಣ್ಣಲ್ಲಿಯೆ ಹುಟ್ಟಿ ಬಂದಿತೊ ಏನೊ ಎಂಬಂತೆ ಅದು ಬೆನ್ನ ಮೇಲೆ ಮಣ್ಣೊಟ್ಟಿಕೊಂಡಿತ್ತು; ಹೆದ್ದೊಡೆ ಮುಟ್ಟುವಂತೆ, ತೊಗಲಲ್ಲಿ ಒಳಸೇರುವಷ್ಟು ಬಿಗಿಯಾಗಿ ಅಳವಡಿಸಿದ ಹೊರಜೆಗಳು ಅಲಂಕಾರದಂತೆ

ಅದಲ್ಲದೆಯುಂ

ಬೀಱಳವಟ್ಟು ಬೆಳ್ಪೆಸೆವ ಕೊಂಬು ನಖಾಗ್ರದಿನತ್ತ ಮತ್ತೆ ಕೈ ।
ಮೀಱೆದ ಕೈ ಕನಲ್ವ ಕಿಡಿವಣ್ಣದ ಕಣ್ ಬೆಳರ್ಗೆಂಪಸಾವಗಂ ॥
ಬೀಱುವ ಕರ್ಣಮೊಡ್ಡಿ ಕಡೆದಂದದೊಳೊಂದಿದ ಕುಂಭಕೂಟದು।
ತ್ತಾಱೆಲನೇಕಮುನ್ನತಿಯಿದಾನಱೆವಾನೆಯೊಳಿಲ್ಲಮೆಲ್ಲಿಯುಂ ॥ ೯೪

ಎಂದು ವಿಚಾರಿಸುವೊಡಮೀ ।
ಯಂದದಿಭಂ ಬನದೊಳಿಲ್ಲ ಸಾಹಣದೊಳಮಿ ॥
ಲ್ಲೆಂದರಸನಾನೆಯಂ ತಾಂ ।
ನಿಂದೆನಸುಂ ನೋಡಿ ವಿಸ್ಮಯಮುತ್ತಂ ॥ ೯೫

ಅಂತು ಮದೋಗ್ರಮುಂ ಅಖಿಲಲಕ್ಷಣಸಮಗ್ರಮುಮಾದ ಗಜಪತಿಯೊಳುಪಲಾಲನೋಕ್ತಿಗಳಂ ಪ್ರಯೋಗಿಪುದುಂ ಮಂತ್ರವಾದಿಯಂ ಕಂಡ ಮಹಾಗ್ರಹದಂತೆ ಮದಾಟೋಪಮಂ ಬಿಸುಟ್ಟು ಕರ್ಣಜಾಹಮನೆಟಲೆವಿಟ್ಟಾಲಿಸುವುದುಂ ಬೆಸನಿತ್ತುಮಱೆದು ಪತ್ತೆಸಾರ್ದು ಸೂಸಕಂಬಿಡಿದೊಂದು ಮುಟ್ಟಿಯೊಳಗೆ ಬೆಂಗೆವಾಯ್ದು

ವಿಸಟಂಬರ್ಪಾನೆಯಂ ವಾಕ್ತ್ರಣಿಧಿಯೊಳೆ ಬೆಸಂಬೆತ್ತು ಕಾಲ್ಗೋದು ಕೂರಂ ।
ಕುಸದಿಂದಗುಷ್ಠದಿಂ ಪಾರ್ಷ್ಣಿಯನಳವಡಿಸುತ್ತುಂ ನಿಷಾದಿವ್ರಜಂ ಬೆ ॥

ಶೋಭಿಸಿದುವು: ಈ ಆನೆಗೆ ಮದ ಒಮ್ಮೆಯೂ ಬಿಟ್ಟಂತೆಯೆ ತೋರದು. ಸದಾಕಾಲ ಇದು ಮದಗಜವೆ ಎನಿಸಿತು. [ಮೂರನೆಯ ಪಾದದಲ್ಲಿ ಕ್ಲೇಶವಿದೆ] ೯೪. "ನೀಳವಾಗಿ ಬೆಳ್ಳಗೆ ಕಂಗೊಳಿಸುವ ಕೋರೆಗಳು, ಕಾಲುಗುರುಗಳನ್ನು ತಾಕಿ ಅದರಾಚೆಗೆ ನೀಡುವ ಸೊಂಡಿಲು, ನಿಗಿನಿಗಿಯಾದ ಕಿಡಿಯಂತಹ ಕಣ್ಣು, ನಸುಗೆಂಪಾಗಿ ಶೋಭಿಸುವ ಕಿವಿ, ಕಡೆದು ನಿರ್ಮಿಸಿದಂತಿರುವ ಕುಂಭದ ತುದಿಯಲ್ಲಿ ಒಪ್ಪುವ ಚುಕ್ಕೆ–ಇವೆಲ್ಲ ಶ್ರೇಷ್ಠತೆಯ ಲಕ್ಷಣಗಳು, ನಾನು ಕಂಡು ತಿಳಿದ ಆನೆಗಳಲ್ಲಿ ಇಂತಹ ಲಕ್ಷಣಗಳೆಲ್ಲಿಯೂ ಇಲ್ಲ. ೯೫. ವಿಚಾರಿಸಿ ನೋಡಿದರೆ ಇಂತಹ ಆನೆ ವನದಲ್ಲಿಯೂ ಇಲ್ಲ; ಗಜಶಾಲೆಯಲ್ಲಿಯೂ ಇಲ್ಲ." ಹೀಗೆಂದುಕೊಳ್ಳುತ್ತ ಅರಸನು ನಿಡು ನೋಟದಿಂದ ಆ ಆನೆಯನ್ನು ನೋಡುತ್ತ ವಿಸ್ಮಿತನಾದನು. ವ॥ ಹೀಗೆ ಸಮಸ್ತ ಸುಲಕ್ಷಣಗಳಿಂದ ಕೂಡಿದ ಆ ಮದಗಜದ ಮೇಲೆ ಗಜಪತಿಯಾದ ಆ ಅರಸನು ಚಾಟೂಕ್ತಿಗಳನ್ನು ಪ್ರಯೋಗಿಸಿದನು. ಕೂಡಲೆ ಮಾಂತ್ರಿಕನನ್ನು ಕಂಡ ಮಹಾಗ್ರಹದಂತೆ ಆ ಆನೆ ತನ್ನ ಮದವನ್ನು ಮರೆತು, ಕಿವಿಗಳನ್ನು ಇಳಿಬಿಟ್ಟು ಆ ಮಾತುಗಳನ್ನು ಚಿತ್ತಗೊಟ್ಟು ಕೇಳಿತು; ಆಗ ಅರಸನು ಅದನ್ನು ತನ್ನ ಆಜ್ಞೆಗೆ ಒಳಪಡಿಸಿಕೊಂಡು, ಹತ್ತರ ಹೋಗಿ, ಚಕ್ಕನೆ ಅದರ ಬೆನ್ನಮೇಲೇರಿದನು, ೯೬. ಹುಚ್ಚೆದ್ದು ಹರಿದಾಡುತ್ತಿರುವ ಉಗ್ರವಾದ ಆನೆಯನ್ನು ಗಜವಿದ್ಯಾವಿಶಾರದನಾದ ಪದ್ಮನಾಭನು ತನ್ನ ಚತುರವಚನಗಳಿಂದಲೆ ಅಂಕೆಗೊಳಪಡಿಸಿಕೊಂಡು, ಮೇಲೇರಿ ಕುಳಿತು ಹರಿತವಾದ

ಕ್ಕಸಮುತ್ತಿರ್ಪಂತು ಬಂಬಲ್ವರಿಯಿಸಿ ಬೆಸೆಗೆಲ್ಲಂ ಬಟಿಕ್ಕುಯ್ದು ನೀರೂ ।
ಡಿಸಿದಂ ಕಂಭಕ್ಕೆ ತಂದು ಮಗುಟಿ ಗಜಕಳಾಖಂಡಲಂ ಪದ್ಮನಾಭಂ ॥ ೯೬

ಆರಯೆ ಬೇರ ಬೇಂಜನದ ಧೂಪದ ಮುರ್ಮದ ಮಂತ್ರದಾಸೆಯಂ ॥
ಪಾರದೆ ಪಿಂದೆ ಕೊಟ್ಟು ಪಿಡಿಯಂ ಕೆಲದೊಳ್ ಬಿದಿಯಂ ಮೊಗಕ್ಕೆ ಮ ॥
ತಾರಯಲೆಯ್ದೆ ಪೇಟಿದೆ ನೃಪಾಲಕನೀತೆಱದೊಂದೆ ಮೆಯ್ಯೊಳಾ ।
ಧೋರಣವೃತ್ತಿಯಂ ಮೆಚಿದನಾವನೊ ದೇವ ಮಹೀವಿಭಾಗದೊಳ್ ॥ ೯೭

ಎಂದಾನೆವಾಂಗಿನವರೆಲ್ಲಮೊಲ್ಲನುಲಿದು ಕೊಂಡುಕೊನೆವಿನೆಗಮಾರೋಹ ಕೌಶಲಮಂ ವಿಧಾನ ಕೌಶಲಮಂ ಮೆಚಿದುಮಪೂರ್ವಭದ್ರಗಜಸಮಾಸಾಧನಾಹ್ಲಾದಹೃದಯನಾಗಿ ದರ್ಶನದಿನದಂದು ಪದ್ಮನಾಭಮಹಾರಾಜಂ ಸುವರ್ಣನಾಭಯುವರಜಂ ಬೆರಸು ಆಸ್ಥಾನಮಂಡಲಮಧ್ಯಸ್ಥಿತನಾಗಿರ್ಪುದು ಮೊರ್ವಂ ದೌವಾರಿಕನಿವೇದಿತಾಗಮದರ್ಶನಾಗ್ರಹನುಂ ಲಬ್ಧಭೂಪಾಲಕಾನುಗ್ರಹನುಂ ಪರಿಗೃಹೀತ ಪ್ರಧಾನೋಚಿತವೇಷವಿಗ್ರಹನುಮಾತ್ಮಾಯತ್ತ ಸಂಧಿವಿಗ್ರಹನುಮಪ್ಪ ದೂತಮುಖ್ಯಂ ಬಂದು ವಿನಯವಿನಮಿತೋತ್ತಮಾಂಗನುಚಿತಾಸನದೊಳಿರ್ಪುದುಮಿನಿತಾನುಂ ಬೇಗದಿಂ ಯುವರಾಜಭ್ರೂ ಪಲ್ಲವಪ್ರೇರಿತಂ ಪುರುಭೂತಿಯೆಂಬ ಮಂತ್ರಿವರನಾತನಂ ನೋಡಿ

ಅಂಕುಶದಿಂದಲೂ ಕಾಲುಂಗುಟದಿಂದಲೂ ತಿವಿಯುತ್ತ, ಮಾವುತರೆಲ್ಲ ಬೆಕ್ಕಸ ಬೆರಗಾಗಿ ನೋಡುತ್ತರಲಾಗಿ, ಅದನ್ನು ದಿಕ್ಕುದಿಕ್ಕಿಗೆ ಓಡಾಡಿಸಿ, ಬಳಿಕ ನೀರು ಕುಡಿಸಿ ಕಂಬಕ್ಕೆ ಕಟ್ಟಿ ಹಾಕಿದನು. ೯೭. ಬೇರು, ಅಂಜನ, ಧೂಪ, ಮಾಟ, ಮಂತ್ರಗಳನ್ನು ಪ್ರಯೋಗಿಸುವುದು, ಹಿಂದೆ ಹೆಣ್ಣಾನೆಯನ್ನು ಒಡ್ಡುವುದು, ಪಕ್ಕದಲ್ಲಿ ಆಹಾರವನ್ನು ತೋರಿಸುತ್ತ, ಮುಂದೆ ಎಚ್ಚರಿಕೆಯಿಂದ ಕಾಯುತ್ತಿರುವುದು–ಇವೆಲ್ಲ ಆನೆಯನ್ನು ಹಿಡಿಯುವಾಗ ಕೈಕೊಳ್ಳುವ ಉಪಾಯುಗಳು. ಆದರೆ ಇದಾವುದರ ನೆರವನ್ನೂ ಬಯಸದೆ ಏಕಾಂಗ ವೀರನಾಗಿ ಒಮ್ಮೆಲೆ ಹೋಗಿ ಏರಿ, ಗಜವಶೀಕರಣ ವೃತ್ತಿಯನ್ನು ನಮ್ಮ ಅರಸನಂತೆ ಸಾಧಿಸಿದವನು ಈ ಭೂಮಿಯ ಮೇಲೆ ಇನ್ನಾವನುಂಟು? ವ॥ ಎಂದು ಗಜವಿದ್ಯಾವಿಶಾರದರು ಎಲ್ಲರೂ ಮೆಚ್ಚಿನುಡಿದು ಕೊಂಡಾಡುತ್ತಿರಲು. ಆರೋಹಣ ಕೌಶಲವನ್ನೂ, ನಡೆಸುವ ಕೌಶಲವನ್ನೂ ವಿಜೃಂಭಣೆಯಿಂದ ತೋರ್ಪಡಿಸಿ, ಅಪೂರ್ವವಾದ ಭದ್ರಗಜವನ್ನು ಸಾಧಿಸಿದೆನೆಂದು ಹರ್ಷಿತನಾಗಿ, ಪದ್ಮನಾಭ ಮಹಾರಾಜನು ಸುವರ್ಣನಾಭ ಯುವರಾಜನೊಡನೆ ಒಡ್ಡೋಲಗದಲ್ಲಿ ಕುಳಿತಿದ್ದನು. ಆ ಸಮಯದಲ್ಲಿ ದ್ವಾರಪಾಲಕನಿಂದ ಹೇಳಿಕಳಿಸಿ, ಅರಸನ ಅನುಮತಿಯನ್ನು ಪಡೆದು, ಪ್ರಧಾನಯೋಗ್ಯವಾದ ವೇಷಭೂಷಣಗಳಿಂದ ಅಲಂಕೃತನಾಗಿ, ಸಂಧಿವಿಗ್ರಹಗಳೆರಡರಲ್ಲೂ ಸಮರ್ಥನಾದ ದೂತಾಗ್ರಣಿಯೊಬ್ಬನು ಬಂದು ವಿನಯದಿಂದ ತಲೆಬಾಗಿ ಉಚಿತವಾದ ಪೀಠದಲ್ಲಿ ಕುಳಿತುಕೊಂಡನು. ಕೆಲ ಸಮಯದ ಬಳಿಕ ಯುವರಾಜನು ಹುಬ್ಬಿನಿಂದ ಸನ್ನೆ ಮಾಡಲಾಗಿ ಪುರುಭೂತಿಯೆಂಬ

ಎಲ್ಲಿಂದೇಂ ಕಾರಣದಿಂ ।
ದಿಲ್ಲಿಗದಾರ್ ಕಳುಪೆ ಬಂದೆಯೆಂಬುದನವನೀ ॥
ವಲ್ಲಭನಱೆವಂದದಿನಱೆ ।
ಪೆಲ್ಲಮನೆನೆ ದೂತಮುಖ್ಯನಂದಿಂತೆಂದಂ ॥ ೯೮

ಪೃಥುಸತ್ವಂ ಸಫಲೀಕೃತಾಖಿಲಕಳಾವಿನ್ಮರ್ತ್ಯಮಾಲಾಮನೋ ।
ರಥನುನ್ಮೂಲಿತಶತ್ರುವರ್ಗನನುರಕ್ತಾಶೇಷತಂತ್ರಂ ಜಗ ॥
ತ್ಪ್ರಥಿತಕ್ಷಾತ್ರಗುಣಂ ಭವತ್ಪದಪಯೋಜಾತಾಂತಿಕಕ್ಕಟ್ಟಿದಂ ।
ಪೃಥಿವೀಪಾಲನೃಪಾಲನುಜ್ಜ್ವಲಯಶಂ ಮತ್ಸ್ವಾಮಿ ಸತ್ಪ್ರೇಮದಿಂ ॥ ೯೯

ಅದರ್ಕೆ ಕಾರಣಮಾವುದೆಂದೊಡೆ

ಹರಿನೀಲಚ್ಛವಿ ರೋಚನಾರುಚಿರನೇತ್ರಂ ವೃತ್ತಗಾತ್ರಂ ಪರಂ ।
ಗುರುಕುಂಭಂ ಪುರುವಂಶನಾಯತಕರಂ ಬದ್ಧೋದರಂ ದಕ್ಷಿಣೋ ॥
ಚ್ಛರದಂ ಕ್ರೋಡನಿತಂಬನಂಬುದರವಂ ವ್ಯಾಲಂಬಿವಾಲಂ ಕ್ಷರ ।
ತ್ಕರಟಂ ಪ್ರಾಂಶುಮುಖಂ ದಶದ್ವಯನಖಂ ಕ್ರೋಧೋದ್ಧುರಂ ಸಿಂಧುರಂ ॥ ೧೦೦

ಅದು ಬೀರಸಿರಿಯ ಕರುಮಾ ।
ಡದ ತೆಱದಿಂ ಭದ್ರಲಕ್ಷಣೋಪೇತಂ ಮ ॥

ಮಂತ್ರಿಶ್ರೇಷ್ಠನು ಆ ದೂತನನ್ನು ನೋಡಿ ಹೀಗೆ ಕೇಳಿದನು– ೯೮. "ಎಲ್ಲಿಂದ, ಯಾವ ಕಾರಣದಿಂದ, ಯಾರು ನಿನ್ನನ್ನು ಇಲ್ಲಿಗೆ ಕಳಿಸಿಕೊಟ್ಟರು? ನಮ್ಮ ಮಹಾರಾಜರಿಗೆ ಸ್ಪಷ್ಟವಾಗಿ ಎಲ್ಲವನ್ನೂ ತಿಳಿಸು" ಆಗ ಆ ದೂತಾಗ್ರಣಿ ಹೀಗೆಂದನು– ೯೯. "ನನ್ನನ್ನು ಪರಮ ಸ್ನೇಹದಿಂದ ತಮ್ಮ ಪಾದಕಮಲಗಳ ಸನ್ನಿಧಿಗೆ ಕಳುಹಿಸಿದವನು ನಮ್ಮ ದಣಿಯಾದ ಪೃಥ್ವೀಪಾಲ ಮಹಾರಾಜ; ಆತನು ಮಹಾ ಬಲಶಾಲಿ; ಸಮಸ್ತ ಕಲಾವಿದರ ಮನೋರಥಗಳನ್ನು ಸಫಲವಾಗಿ ನೆರವೇರಿಸುವವನು; ಶತ್ರುಗಳನೆಲ್ಲ ನಿರ್ಮೂಲಗೊಳಿಸಿದವನು; ಸಮಸ್ತ ಪ್ರಜಾವರ್ಗಕ್ಕೆ ಪ್ರಿಯನಾದವನು; ಜಗಪ್ರಸಿದ್ಧವಾದ ಕ್ಷಾತ್ರಗುಣವುಳ್ಳವನು. ವ॥ ಅದಕ್ಕೆ ಕಾರಣವೇನೆಂದರೆ–೧೦೦. ಇಂದ್ರನೀಲ ಕಾಂತಿಯುಳ್ಳ, ಸುಂದರವಾದ ಕಣ್ಣುಗಳಿಂದ, ವೃತ್ತಾಕಾರವಾಗಿ ತುಂಬಿದ ಮೈಯಿಂದ ಘನವಾದ ಕುಂಭಗಳಿಂದ, ಪುರುವಂಶ ಶ್ರೇಷ್ಠವೂ, ಹೊರಜೆಯಿಂದ ಕಟ್ಟಿ ಸನ್ನದ್ಧವೂ ಉನ್ನತವಾದ ಬಲಗಡೆಯುದ್ದ ಕೋರೆಯುಳ್ಳದೂ ಆದ ವರಾಹದಂತೆ ವಿಶಾಲವಾದ ನಿತಂಬ ಇಳಿಬಿದ್ದ ಬಾಲ, ಅಗಲವಾದ ಮುಖ ಹಾಗು ಇಪ್ಪತ್ತೆರಡು ನಖಗಳಿಂದ ಕೂಡಿಕೊಂಡು ಕ್ರೋಧೋನ್ಮತ್ತವಾದ ಆನೆ. ೧೦೧. ಅದು ವೀರಶ್ರೀಯ ನೆಲೆಮನೆಯಂತೆ "ಭದ್ರ ಲಕ್ಷಣ"ಗಳಿಂದ ಕೂಡಿದುದು. (೧. ಉತ್ತಮವಾದ 'ಭದ್ರವೆಂಬ ಸೌಧದ ಲಕ್ಷಣಗಳುಳ್ಳದು. ೨. 'ಭದ್ರ'ವೆಂಬ ಆನೆಯ ಲಕ್ಷಣಗಳುಳ್ಳದು): ಮತ್ತು ಮಂದರ

ತ್ತದು ಮಂದರಭೂಧರದಂ।
ದದಿನುಪಗತನಿತ್ಯದೇವಸತ್ವಸಮಗ್ರಂ ॥ ೧೦೧

ಒದವಿದ ಮದದಿಂ ತೀರ್ಣ ಮಸ।
ಗಿದ ಗಂಡಮನುರುತರುಪ್ರಕಾಂಡದೊಳೊರಸಲ್ ॥
ಪದೆದೆದುಂ ಬನಮೆನೆ ಪುಗು।
ವುದಱಂ ವನಕೇಳಿಯೆಂದು ಪೆಸರಾಗಿರ್ಕುಂ ॥ ೧೦೨

ಆ ಮಹಾಮದೇಭಂ ಪೃಥ್ವೀಪಾಲದೇವನ ಪಟ್ಟವರ್ಧನಮಾಗಿರ್ಪುದುಂ ಮತ್ತೊಂದು ಮದಗಜದ ಸೊವಡು ತೀಡದಂತು ಬೀಡಿಂಗೊರ್ಗಾವುದದೞ ಬಾಳ್ಗಂಬದೊಳ್ ಸೆೞಿಗೆಯ್ದುಮಿರ್ದೊಂದು ದಿವಸಂ ಕ್ರೋಧಿನಿಯಂಬ ಸಪ್ತಮದಾವಸ್ಥೆಯಿಂದಾದ ಮನದ ಮಸಕದಿನಸವಸದೆ ನೆಲದ ನಾಲಗೆಯಂ ಕೀೞ್ವಂತೆ ಬಾಳ್ಗಂಬಮಂ ಕಿೞ್ತು ಅಗ್ಗರಣೆಯಂ ನುರ್ಗುಮಾಡಿ ಮಂಕಡದಂದದಿಂ ಕಟ್ಟಿದ ಲೋಹಚರ್ಮಜಮಪ್ಪ ಮುಟ್ಟುಗಳನಿತುಮಂ ತಕ್ಕೈಸಿ ಬೆಲಂಗಯಿಸಿ ಬಿಸತಂತುವಂ ಪಱಿವಂತೆ ಪಱಿದು ಬೆಳ್ಳಾಳನಾಗೆ ಪೋಗಲೀಯದೆ ತೆಗೆದಾೞಿಕಾಱರ ಗಳೆಯ ಪುದುವಿನೊಳಿದಿರ ಪೊದೞಿಸೊಳಗಣ ಬೆನಕನ ಜೋಹದಂತೆ ಕಿಱಿದು ಬೇಗಮಿರ್ದುಮ್ಮಳಿಸಿ ಮುಳಿದು ಸುತ್ತಿದಾನೆವಾಂಗಿನ ವೀರರೆಲ್ಲರುಮಂ ಪನ್ನೆರಡುಂ ಹಸ್ತಪ್ರಹಾರದೊಳಂ ಪದಿನೆಂಟುಂ ಕೋಡೇಱಿನೊಳಂ ಏೞುಂತೆಱದ ತಾಳವಟ್ಟದ

ಪರ್ವತದಂತೆ ""ಉಪಗತನಿತ್ಯದೇವ ಸತ್ವಸಮಗ್ರ" (೧. ದೇವತೆಗಳೆಲ್ಲರೂ ಪ್ರತಿನಿತ್ಯ ಇರತಕ್ಕ ಸ್ಥಾನ, ೨. "ದೇವಸತ್ವ" ವೆಂಬ ಆನೆಯ ವರ್ಗದ ಸಮಸ್ತಗುಣಗಳನ್ನು ಒಳಗೊಂಡುದು) ೧೦೨. ಮದವುಕ್ಕಿಬರಲು ನವೆಯಿಡುವ ತನ್ನ ಗಂಡಸ್ಥಳವನ್ನು ಉಜ್ಜಿಕೊಳ್ಳಲು ಹೆಮ್ಮರದ ಬೊಡ್ಡೆಗಳನ್ನು ಹುಡುಕಿಕೊಂಡು ಅದು ಅಡವಿಗೆ ಹೋಗುವುದುಂಟು. ಆದುದರಿಂದ ಈ ಆನೆಗೆ "ವನಕೇಳಿ"ಯೆಂಬ ಹೆಸರು ಪ್ರಸಿದ್ಧವಾಗಿದೆ. ವ॥ ಆ ಮಹಾ ಮದಗಜವು ಪೃಥ್ವೀಪಾಲ ಮಹಾರಾಜನ ಪಟ್ಟದಾನೆಯಾಗಿರುವುದು, ಮತ್ತೊಂದು ಮದಗಜದ ಸೊವಡು ತಾಗದಂತೆ ಬೀಡಿನಿಂದ ಒಂದು ಗಾವುದ ಆಚೆ ಅದನ್ನು ಕಂಬಕ್ಕೆ ಕಟ್ಟಿ ಹಾಕುವೆವು; ಹಾಗೆ ಕಟ್ಟಿದ್ದರೂ ಒಂದು ದಿನ ಕ್ರೋಧಿನಿಯೆಂಬ ಸಪ್ತಮದಾವಸ್ಥೆಯಿಂದಾದ ಮನಃಕ್ಷೋಭೆಯಿಂದ ಅದು ನೆಲದ ನಾಲಗೆಯನ್ನೆ ಕೀಳುವಂತೆ ಕಟ್ಟಿದ ಕಂಬವನ್ನು ಕಿತ್ತು, ಹಗ್ಗವನ್ನು ಚಿಂದಿ ಚಿಂದಿ ಮಾಡಿ, ಲೋಹದ ಹಾಗು ಚರ್ಮದ ಕಟ್ಟುಗಳನ್ನು ತಾವರೆಯ ನಾಳಗಳೆಂಬಂತೆ ಹರಿದು ಹಾಕಿ, ಸ್ವೈರವಾಗಿ ಹೊರಟಿತು; ಆಗ ಅದನ್ನು ಹೋಗಗೊಡದೆ ಅಡ್ಡಗಟ್ಟಿ ನಿಂತ ರಕ್ಷಕರ ಗಳೆಗಳ ನಡುವೆ ಗಣಪತಿಯ ವಿಗ್ರಹದಂತೆ ಸ್ವಲ್ಪಹೊತ್ತು ನಿಂತು, ಬಳಿಕ ಉರವಣಿಸಿ ಮುನಿದೆದ್ದು ಸುತ್ತಲಿನ ಗಜಶಾಲೆಯ ವೀರರನ್ನೆಲ್ಲ ಹನ್ನೆರಡು ಬಗೆಯ ಸೊಂಡಿಲ ಹೊಡೆತಗಳಿಂದಲೂ, ಹದಿನೆಂಟು ಬಗೆಯ ಕೋರೆಯ ಆಘಾತಗಳಿಂದಲೂ, ಏಳುಬಗೆಯ ಕಿವಿಯ ಬಡಿತ

ಪೊಯ್ಲೊಳಂ ನಾಲ್ವತ್ತು ನಾಲ್ಕು ಗಾತ್ರಾಪರಪಾತದೊಳಂ ದೆಸೆವಲಿಗೆಯ್ದು ಪೂರ್ವಾಸನದೊಳಿರ್ದ ಮಹಾಮಾತ್ಯನನಡ್ಡಂಬರಿದ ಪೆರ್ಮರದ ತೋೞಗೊಂಬಿನೊಳ್ ಪೊಂಗಿ ಪರಿದರೆದು ಕೊಂದು ಮಹಾವನಮಂ ವನಕೇಳಿಗಜಂ ಪೊಕ್ಕುದಂ ಕೇಳ್ದು

॥ ಹರಿಣೀವೃತ್ತಂ ॥

ತಿವಳಿವಿಡಿದುಗ್ರೇಭಂ ಪೋದತ್ತು ಮಾಣದೆ ಪೋಗಿಮೆ ।
ಲ್ಲಿವರಮದು ಪೋಯ್ತೆಲ್ಲಿರ್ದತ್ತೆಂಬ ವಾರ್ತೆಯನೊಂದೆರ ॥
ಡ್ದಿವಸದೊಳೆ ತನ್ನಿಂ ನೀಮೆದಟ್ಟಿದಂ ಸಮಕಟ್ಟಿ ಕ ।
ಟ್ಟವಧಿಗವನೀನಾಥಂ ಜಂಘಾಳಮಂ ಚರಜಾಳಮಂ ॥ ೧೦೩

ಅನಂತರಂ ತದ್ವಿಜ್ಞಾಪನದಿನನೇಕಪಂ ಭವದೀಯನಗರಿಯಂ ಪುಗುತಂದುದುಮಂ ಬೇವರಾ ರೂಢವಿದ್ಯಾಪ್ರಭಾವದಿಂ ಕಂಭಕ್ಕೆ ತಂದುದುಮನಱಿದೆನದುಕಾರಣದಿಂ

ಇಭಪತಿಯದು ಮದವನಿವ ।
ಲ್ಲಭಂಗೆ ವಲ್ಲಭಗಜೇಂದ್ರನದನಟ್ಟಿ ಭವ ॥
ತ್ಪ್ರಭುತೆಯುಮಂ ಬಂಧುಪ್ರೀ ।
ತಿಭಾವಮುಮನಯ್ದೆ ನೆಱಪಿ ಮೆಱೆವುದು ಜಸಮಂ । ೧೦೪

ಮತ್ತಂ

ಪರಿಕಿಸೆ ಕಲ್ವ ಬಲ್ಲ ಸಮಯುಕ್ತಿಯಿನೆಟ್ಟಿರೆ ಬೇಗಮಂತದಂ ।
ಕರೆದಿರದೀವುದುತ್ತಮತೆ ಬೇಡಿದೊಡೀವುದು ಮಧ್ಯಮತ್ವಮೆ ॥

ದಿಂದಲೂ, ನಾಲ್ವತ್ತುನಾಲ್ಕು ಬಗೆಯ ಮುಂಗಾಲು–ಹಿಂಗಾಲುಗಳ ತುಳಿತದಿಂದಲೂ, ದಿಗ್ಬಲಿಗೊಟ್ಟಿತು. ಪೂರ್ವಾಸನದಲ್ಲಿದ್ದ ಮಾವುತನನ್ನು ಅಡ್ಡಬಂದ ಹೆಮ್ಮರದೊಂದು ದೊಡ್ಡಕೊಂಬೆಗೆ ತಾಗಿಸಿ ಕೆಡಹಿ, ಅರೆದು ಕೊಂದಿತು; ಬಳಿಕ ವನಕ್ರೀಡೆಗೆಂದು ಕಗ್ಗಾಡನ್ನು ಹೊಕ್ಕಿತು. ಈ ಸಂಗತಿಯನ್ನು ಕೇಳಿ–೧೦೩. "ಪ್ರಚಂಡವಾದ ಈ ಆನೆ ಎಲ್ಲಿಯವರೆಗೆ ಹೋಗಿದೆ ಮತ್ತು ಎಲ್ಲಿ ಇದೆಯೆಂಬ ಸಮಾಚಾರವನ್ನು ಒಂದೆರಡು ದಿನಗಳಲ್ಲಿ ತೆಗೆದುಕೊಂಡು ಬನ್ನಿ" ಎಂದು ಅರಸನು ವೇಗಶಾಲಿಗಳಾದ ಪಾದಚಾರಿ ಸೇವಕರನೇಕರನ್ನು ಕೂಡಲೆ ಕಟ್ಟಪ್ಪಣೆ ಮಾಡಿ ಕಳಿಸಿದನು. ವ॥ ಅನಂತರ ಅವರು ತಂದ ಸುದ್ದಿಯ ಮೇರೆಗೆ ಆನೆ ನಿಮ್ಮ ನಗರವನ್ನು ಹೊಕ್ಕುದನ್ನೂ ತಾವು ಆರೋಹಣವಿದ್ಯಾ ನಿಪುಣತೆಯಿಂದ ಅದನ್ನು ವಶಪಡಿಸಿ ಕಂಬಕ್ಕೆ ಕಟ್ಟಹಾಕಿದುದನ್ನೂ ಅರಿತೆನು. ೧೦೪. ಆ ಗಜೇಂದ್ರವು ನಮ್ಮ ಮಹಾರಾಜನಿಗೆ ಪ್ರಿಯವಾದ ಪಟ್ಟದಾನೆ, ಆದುದರಿಂದ ಅದನ್ನು ಮರಳಿ ಆತನೆಡೆಗೆ ಕಳಿಸಿ ಅತನ ಪ್ರಭುತ್ವವನ್ನೂ ಬಂಧುಪ್ರೀತಿಯ ಭಾವವನ್ನೂ ಗೌರವಿಸಿ ತಾವು ಯಶೋವಂತರಾಗಬೇಕು. ೧೦೫. ವಿಚಾರಿಸಿ ನೋಡಿದರೆ ಬಲ್ಲವರು ಸಮಯುಕ್ತಿಯಿಂದ ಬಂದಾಗ ಬೇಗನೆ ಅವರನ್ನು ಕರೆದು ಕೊಡುವುದು ಉತ್ತಮತೆ;

ಯ್ತರೆ ತದಧೀಶ್ವರಂ ಬಟಿಕಮಂತದನೀವುದು ನೀಚವೃತ್ತಿ ದೇ ।
ವರ ಬಗೆಯೊಳ್ ವಿಚಾರಿಸುವುದೆನ್ನಯ ಬಿನ್ನಪದೊಂದು ಯುಕ್ತಿಯಂ ॥ ೧೦೫

ಪೊಕ್ಕಿಡೆಯನಾರಯಲ್ಕೆಂ ।
ದುಕ್ಕೆವಿಸಿದನಲ್ಲದಿನಿತುದಿನಮಿಭಪತಿ ಕೈ ॥
ಮಿಕ್ಕಿರೆ ತಡೆವನೆ ಕಡಲಂ ।
ಪೊಕ್ಕು ಕಲಂಕದೆ ಕುಳಾದ್ರಿಯಂ ಕಿಟಿದೆ ನೃಪಂ ॥ ೧೦೬

ಪೋರಿಪ ಬಿನದದಿನದಱಿಕೊಡ ।
ನೈರಾತಮುಂ ಕೊಳಕ್ಕೆ ಪರಿಯಿಡಲಾಶಾ ॥
ತೀರಕ್ಕೊಡರಿಪನೆನೆ ಕೈ ।
ಸಾರೆಯೊಳಿರೆ ಕರಿ ಬಟಿಕ್ಕೆ ಕೈದೆಗೆದಪನೇ ॥ ೧೦೭

ಆನೆಂದೆನ್ನಿಮಿಂ ನೀ ।
ಮಾನೆಯನೀಯದೊಡೆ ಕದಡುಗುಂ ಕೊಳನಂ ಕಾ ॥
ಡಾನೆ ಪುಗುತಂದುದೆನೆ ನಿ ।
ಮ್ಮೀನಗರಿಯನೆಯ್ದೆ ಕನಸಿನಾನೆಯ ತೆಱದಿಂ ॥ ೧೦೮

ಎಂದು ತನ್ನಾಳ್ದನ ಬಲ್ಮೆಯನೆ ನಚ್ಚಿ ಬಿಚ್ಚತಂ ನುಡಿದ ದೂತನ ದುರಭಿಹಿತಂಗಳಂ ಭೂಪಾಲ ನೇಟಿಲಂಗೇಳ್ದು ಮಂದಸ್ಮಿತಮುಖಸರೋಜಂ ಯುವರಾಜನಂ ನಿರೀಕ್ಷಿಪುದುಮಾತನಾಕ್ಷಣದೊಳೊಗೆದ ರೂಕ್ಷಭಾವಮಂ ಸಹಜಗಾಂಭೀರ್ಯದಿನಳವಡಿಸಿ ಬಟಿಯಮಿಂತೆಂದಂ:-

ಬೇಡಿದ ಮೇಲೆ ಕೊಡುವುದು ಮಧ್ಯಮತೆ; ಆ ರಾಜೇಂದ್ರನು ಏರಿ ಬಂದಾಗ ಕೊಡುವುದು ಅಧಮತೆ. ದೇವ, ನನ್ನ ಬಿನ್ನಹದಲ್ಲಿ ಸೂಚಿಸಿದ ಮಾತನ್ನು ತಾವು ಪರಾಮರಿಸಬೇಕು. ೧೦೬. ಆನೆ ಎಲ್ಲಿ ಹೋಯಿತೆಂದು ಶೋಧಿಸುವುದರಲ್ಲಿ ಇಷ್ಟು ದಿನ ನಮ್ಮರಸು ತಡೆದನಲ್ಲದೆ, ಗಜೇಂದ್ರವು ಕೈಬಿಟ್ಟು ಹೋದರೆ ಅದಕ್ಕಾಗಿ ಸಮುದ್ರವನ್ನು ಕಲಕದೆ, ಕುಲಪರ್ವತವನ್ನು ಕೀಳದೆ ಬಿಡುವನೆ? ೧೦೭. ಐರಾವತದೊಡನೆ ಆ ಆನೆಯನ್ನು ಹೋರಾಡಿಸಬೇಕೆಂದು ದಿಗಂತದ ಕೊಳಕ್ಕೂ ಅದನ್ನು ಒಯ್ಯಲು ಅವನು ಬಯಸುವನು, ಹೀಗಿರುವಾಗ ಅದು ಇಷ್ಟು ಹತ್ತಿರದಲ್ಲಿಯೆ ಇರುವಾಗ ಆತನು ಹಿಂದೆಗೆಯುವನೆ? ೧೦೮. ನಾನು ಹೇಳುವುದಾಯಿತು. ಇನ್ನು ನೀವು ಆನೆಯನ್ನು ಮರಳಿ ಕೊಡದಿದ್ದರೆ, ಕಾಡಾನೆ ಹೊಕ್ಕು ಕದಡಿದ ಕೊಳದಂತೆ ನಿಮ್ಮ ನಗರ ಕಳವಳಕ್ಕೆ ಈಡಾಗುವುದು". ವ॥ ಹೀಗೆಂದು ತನ್ನ ಅರಸನ ಬಲವನ್ನು ನೆಚ್ಚಿ ದರ್ಪದಿಂದ ನುಡಿದ ದೂತನ ಅಹಿತವಾಕ್ಯಗಳನ್ನು ಅರಸನು ಕಿವಿಯ ಮೇಲೆ ಹಾಕಿಕೊಳ್ಳದೆ, ನಸುನಗೆಯಿಂದ ಯುವರಾಜನನ್ನು ನೋಡಿದನು, ಆತನು ಆ ಕ್ಷಣಕ್ಕೆ ಉಂಟಾದ ಕ್ರೋಧವನ್ನು ತನ್ನ ಸಹಜಗಾಂಭೀರ್ಯ

ಚಾರಣರುಂ ಚಾರರುಮಿ ।
ನ್ನಾರೇಗೆಯ್ದಪರೊ ಸಮ್ಮನೆಂದುಸಿರ್ವರಹಂ ॥
ಕಾರದಿನಾ ನುಡಿಗೆ ಮಹೋ ।
ದಾರಂ ಮತ್ಸ್ವಾಮಿಯಿನಿತು ಮುನಿಗುಮೆ ಮುನಿಯಂ ॥ ೧೦೯

ಬಗೆದೊಡೆ ಕಿಚ್ಚಿನವೊಲ್ ನಾ ।
ಲಗೆಯತಿಪಟುವೆನಿಪ ನಿಮ್ಮ ದೊರೆಯರ್ ಸಚಿವರ್ ॥
ಮಿಗ ಪೊರ್ದಿರೆ ನಿಮ್ಮಯ ರಾ ।
ಜಗೃಹಂ ಪರಿದುಂ ವಿಭೂತಿಮಯಮಿನ್ನಕ್ಕುಂ ॥ ೧೧೦

ಗಜತುರಗರತ್ನಮಿವು ಭೂ ।
ಭುಜನಾವೊಂ ಪ್ರಬಲಪುಣ್ಯನವನನೆ ಸಾರ್ಗುಂ ।
ನಿಜದಿಂದಮೆಂದು ಮಾಣ್ಬುದು ।
ಸುಜನತೆ ಪುಣ್ಯಕ್ಕೆ ಮರುಡಿಪುದು ಗಾಂಪಲ್ತೇ ॥ ೧೧೧

ಅದಲ್ಲದೆಯುಂ,

ಕರಿಪತಿಯೆಮ್ಮ ಪುಣ್ಯಮೆ ನಿಷಾದಿಯವೋಲ್ ತರೆ ಬಂದುದಾದೊಡಂ ।
ಪರಧನಮೆಂತು ಬಂದೊಡಮಶೌರ್ಯಸಮಾರ್ಜಿತಮೇವುದೆಂಬ ಕೊ ॥
ಕ್ಕರಿಕೆಯಿನೀವೊಡಂ ಜರಿವು ಬಂದಪೆನೆಂದೊಡೆ ಕೊಟ್ಟರೆಂಗುಮೀ ।
ಧರೆಯದಜೆಂಬೆ ನಿಮ್ಮರಸರಿಂ ಬಿಡುಗಾನೆಯೊಳಾದ ಪಂಬಲಂ ॥ ೧೧೨

ದಿಂದ ಅಡಗಿಸಿಕೊಂಡು ಬಳಿಕ ಹೀಗೆಂದನು–೧೦೯. "ನಮ್ಮನ್ನು ಯಾರು ಏನು ಮಾಡಬಲ್ಲರು?" ಎಂಬ ಅಹಂಕಾರದಿಂದ ದೂತರೂ ಚಾರಣರೂ ಏನಾದರೂ ನುಡಿಯುವರು. ನಮ್ಮ ಮಹಾರಾಜರು ಪರಮೋದಾರರು, ಅಂತಹ ಮಾತಿಗೆ ಮುನಿಯುವರೆ? ಇಲ್ಲ. ೧೧೦. ಬೆಂಕಿಯಂತೆ ಪಟುವಾಗಿರುವ ನಾಲಗೆಯುಳ್ಳ ನಿಮ್ಮಂತಹ ಸಚಿವರನ್ನೆ ಹೊಂದಿದ್ದರೆ ನಿಮ್ಮ ರಾಜನ ಓಲಗ ತುಂಬ ವೈಭವವನ್ನೆ ಪಡೆಯುವುದು (ಬೂದಿಯಾಗುವುದು). ೧೧೧. ಆನೆ, ಕದುರೆ, ಮುತ್ತು ರತ್ನಗಳು ಮಹಾಪುಣ್ಯಶಾಲಿಯಾದ ಅರಸನಲ್ಲಿಗೆ ತಾವಾಗಿಯೆ ಬಂದು ಸೇರುವುವು; ಇದನ್ನು ತಿಳಿದು ಸುಮ್ಮನಿರುವುದು ಸಜ್ಜನಲಕ್ಷಣ, ಪುಣ್ಯಕ್ಕೆ ಮತ್ಸರಿಸುವುದು ಮೂರ್ಖತನ ವಲ್ಲವೆ? ಅದಲ್ಲದೆ– ೧೧೨. ಪುಣ್ಯವೇ ಕರೆತಂದಂತೆ ಗಜೇಂದ್ರ ನಮ್ಮ ಬಳಿಗೆ ಬಂದಿತು. "ಇದು ಪರಧನ; ಮೇಲಾಗಿ ಶೌರ್ಯಪ್ರಯೋಗವಿಲ್ಲದೆ ಪಡೆದು ಕೊಂಡುದು" ಎಂದು ಅಸಡ್ಡೆಯಿಂದ ಅದನ್ನು ಮರಳಿ ನಿಮಗೆ ಒಪ್ಪಿಸಿದರೆ, ನಿಮಗೆ ನಾವು ಅಂಜಿ ಕೊಟ್ಟೆವೆಂದು ಜನರು ಆಡಿಕೊಳ್ಳುವರು, ಆದುದರಿಂದ ಈ ಆನೆಯು

ಪಿರಿದುಂ ದಂಡೋಕ್ತಿಗಳನೆ ।
ಪರಿವಿಡಿಗೆಯ್ದೆ ತ್ವದೀಯಪತಿ ಕಲಿಸಿದುವಂ ॥
ಬರವೇೞಾತನನಿಂ ಚ ।
ಚ್ಚರಮೀ ನಯಸಿದ್ಧಿಯಲ್ತು ಸಚಿವಾಯತ್ತಂ ॥ ೧೧೩

ಎನಗಂ ದೋರ್ದಂಡಕಂಡೂಹೃತಿ ಸಮನಿಸುಗುಂ ತನ್ನಪಂನಂ ಕಟಿಲ್ಗುಂ ।
ಮನದೊಳ್ ತೊಟ್ಟಾಗ್ರಹಂ ಮದ್ವಿಭುಗಮಿಭುವರಂ ಶೌರ್ಯಸಂಲಬ್ಧಮಕ್ಕುಂ॥
ನಿನಗಂ ಚಿತ್ತಭ್ರಮಂ ಪಿಂಗುಗುಮಮರಗಣಕ್ಕಂ ಮಹಾಸಂಗರಾಲೋ ।
ಕನಸೌಖ್ಯಂ ಸಾರ್ಗುಮೀ ಧಾತ್ರಿಗಮೊದವಿಸುಗುಂ ವೀರಭಾರಾವತಾರಂ ॥ ೧೧೪

ಅದುಕಾರಣದಿಂ ಪೃಥ್ವೀಪಾಳಯಾನಮನೆ ಮುಂದಿಟ್ಟು ನುಡಿದ ನಿನ್ನ ನುಡಿಯಂ ನನ್ನಿಮಾಡೆಂದು ಮತಿಪ್ರಗಲ್ಭಂಗಳುಂ ಪ್ರತಾಪಗರ್ಭಂಗಳುಮಪ್ಪುತ್ತರಂಗಳಿಂ ದೂತಮುಖಮುದ್ರೆಯಂ ಪಡೆದಾತನಂ ಕಳಿಪೆ ಪದ್ಮನಾಭಮಹೀಭುಜಂ ತತ್ಸಮಯೋಚಿತಕಾರ್ಯಪರ್ಯಾಲೋಚನಾಭಿರುಚ್ಯಮಾನ ಮಾನಸನಾಸ್ಥಾನಮಂ ವಿಸರ್ಜಿಸೆ ಸುವರ್ಣನಾಭಕುಮಾರನುಂ ಪುರುಭೂತಿ ಮಂತ್ರಿಯುಮಲ್ಲಿಂ ತಳರ್ದು

ವಿರಹಿತಗವಾಕ್ಷಮಪ್ರತಿ ।
ವಿರಾಮಮಪಕೀರಶಾರಿಕುಲಮೆನಿಸಿದುಪ ॥
ಹ್ವರಮಂ ಪೊಕ್ಕಂ ಕಂಚುಕಿ ।
ಪರಿಕ್ಷಿತಾಂತರ್ಬಹಿಃಪ್ರದೇಶೋಚಿತಮಂ ॥ ೧೧೫

ಹಂಬಲವನ್ನು ಬಿಟ್ಟು ಬಿಡೆಂದು ನಿಮ್ಮ ಅರಸರಿಗೆ ಹೇಳು. ೧೧೩. ನಿಮ್ಮ ರಾಜನು ಕಲಿಸಿ ಕೊಟ್ಟ ದಂಡೋಪಾಯದ ಮಾತುಗಳನ್ನೇ ಅಬ್ಬರದಿಂದ ನೀನು ಆಡಿದೆ, ಇನ್ನು ಆತನಿಗೇ ಬರಹೇಳು. ಇದು ಸಚಿವರ ವ್ಯವಹಾರದಿಂದಲೆ ತೀರ್ಮಾನವಾಗಲಾರದ ವಿಷಯ. ೧೧೪. ನನ್ನ ತೋಳತೀಟೆಯನ್ನು ತೀರಿಸಿಕೊಳ್ಳುವ ಅವಕಾಶವೊದಗುವುದು; ನಿಮ್ಮ ಒಡೆಯನ ಬಿಂಕವೂ ತೊಲಗುವುದು; ಮನದಲ್ಲಿ ತೊಟ್ಟ ಆಗ್ರಹಕ್ಕನುಕೂಲವಾಗಿ ಈ ಗಜೇಂದ್ರನನ್ನು ಶೌರ್ಯದಿಂದ ಸಂಪಾದಿಸಿದಂತೆಯೂ ಆಗುವುದು; ನಿನ್ನ ಮನಸ್ಸಿನ ಭ್ರಮೆಯೂ ಹಿಂಗುವುದು; ದೇವತೆಗಳ ಸಮೂಹಕ್ಕೆ ಮಹಾಸಂಗ್ರಾಮವನ್ನು ನೋಡುವ ಸೌಖ್ಯ ದೊರೆಯುವುದು; ಈ ಭೂಮಿಗೆ ವೀರಭಾರಾವತಾರವೂ ಒದಗುವುದು. ವ॥ ಆದುದರಿಂದ ಪೃಥ್ವೀಪಾಲನ ದಂಡಯಾತ್ರೆಯನ್ನೆ ಮುಂದಿಟ್ಟು ನುಡಿದ ನಿನ್ನ ಮಾತನ್ನು ಕಾರ್ಯರೂಪಕ್ಕೆ ತಂದಿಡು". ಈ ಮೇರೆಗೆ ಬುದ್ಧಿ ಪ್ರೌಢಿಯಿಂದಲೂ, ಪರಾಕ್ರಮದಿಂದಲೂ ಕೂಡಿದ ಉತ್ತರಗಳಿಂದ ದೂತನ ಬಾಯಿಕಟ್ಟಿ ಆತನನ್ನು ಕಳಿಸಿ ಬಿಡಲಾಯಿತು. ಆಗ ಪದ್ಮನಾಭ ರಾಜನು ಆ ಕಾಲಕ್ಕೆ ಉಚಿತವಾದ ಪರ್ಯಾಲೋಚನೆ ಮಾಡಬೇಕೆಂಬ ಅಭಿಪ್ರಾಯದಿಂದ ಓಲಗವನ್ನೂ ವಿಸರ್ಜಿಸಿದನು, ಸುವರ್ಣನಾಭ ಕುಮಾರನನ್ನೂ ಪುರುಭೂತಿ ಮಂತ್ರಿಯನ್ನೂ ಒಡಗೊಂಡು–೧೧೫. ಗವಾಕ್ಷವೆ ಮೊದಲಾದ ಯಾವುದೇ ಬಗೆಯ ಕಿಂಡಿಗಳಿಲ್ಲದ, ಗಿಳಿ, ಶಾರಿಕೆ ಮೊದಲಾದ ಪಕ್ಷಿಗಳಿಲ್ಲದ ಮಂತ್ರಾಲೋಚನೆಯ ಗೃಹವನ್ನು ಕಂಚುಕಿಯಿಂದ ಒಳಹೊರಗೆಲ್ಲ ಪರೀಕ್ಷೆ ಮಾಡಿಸಿ,

ಅನಂತರಮಾಬದ್ಧ ಮಂಡಲಾಸೀನನಾಗಿರ್ದು ಸಚಿವಮುಖಮನತಿಪ್ರಸನ್ನ ದೃಷ್ಟಿಪಾತ ದಿನಭಿಮುಖಂ ಮಾಡಿ

ಅವಿರುದ್ಧಂ ನೃಪನೀತಿಗೆಂತುಮುಚಿತಂ ತಾನೀಪದಕ್ಕಾದಮು ।
ದ್ಧವಜೈತ್ರಪ್ರತಿಪಾದಕಂ ನಮಗನುದ್ವೇಜ್ಯಂ ಜನಕ್ಕೆಂಬುದಂ ॥
ಯುವರಾಜಂಗೆನಗಂ ಪ್ರಿಯಾಪ್ರಿಯಮಿದೆಂದೇವೈಸದಿಚ್ಚೈಸದಾ।
ಡುವುದುಳ್ಳಂತುಟನೆಂದು ಬೋಧಿಸಿದನೀಶಂ ಕಾರ್ಯತಾತ್ಪರ್ಯಮಂ ॥ ೧೧೬

ಆಗಳತಿಚತುರವಚನಂ ಸಚಿವನಿಂತೆಂದಂ:–

ವಿದಿತಂ ಪಂಚಾಂಗಮಂತ್ರಸ್ಥಿತಿ ಚತುರುಪಧಾಶುದ್ಧಿಸಿದ್ಧಿತ್ರಯಾಸಂ ।
ಪದಮಾಷಾಡ್ಗುಣ್ಯವೃತ್ತಂ ಚತುರಚತುರುಪಾಯಪ್ರಯೋಗಂ ತ್ರಿಶಕ್ತ್ಯು ॥
ತ್ಥದೃಢತ್ವಂ ದೇವ ಮುನ್ನಂ ನಿಮಗದನನುವಾದಕ್ಕೆ ತರ್ಪೆನ್ನೊಳೊಂದ ।
ಲ್ತೆ ದಿಟಕ್ಕಕ್ಕುಂ ವಿಶೇಷಂ ನಿಜನಿಪುಣಮನಃಕಾರ್ಯಸಂಸ್ಮಾರಕತ್ವಂ ॥ ೧೧೭

ಮತ್ತಂ

ಅಱಿಯದುದನಱಿದುದುಮನೀ ।
ತೆಱದಿಂ ಶಿಕ್ಷಿಪ ಪರೀಕ್ಷಿಪುಜ್ಜಗದೆನ್ನೊಳ್ ॥
ಕಿಱಿದಂ ಬೆಸಗೊಂಡಿರ್ ನೀ ।
ಮಱಿಯದುದೇನಂತುಮುಸಿರ್ವೆನೆನ್ನಱಿವನಿತಂ ॥ ೧೧೮

ಏಕಾಂತವೆಂದು ಖಚಿತಪಡಿಸಿಕೊಂಡು ಅರಸನು ಅದರಲ್ಲಿ ಹೊಕ್ಕನು. ವ॥ ಬಳಿಕ ಸಿದ್ಧವಾಗಿದ್ದ ಪೀಠದಲ್ಲಿ ಕುಳಿತು ಸಚಿವನ ಮುಖವನ್ನು ತುಂಬ ಪ್ರಸನ್ನಭಾವದಿಂದ ನೋಡಿ, ಆತನ ದೃಷ್ಟಿಯನ್ನು ತನ್ನೆಡೆಗೆ ಆಕರ್ಷಿಸಿಕೊಂಡು–೧೧೬. "ಈ ಪ್ರಸಂಗದಲ್ಲಿ ರಾಜನೀತಿಗೆ ವಿರುದ್ಧವಾಗದಂತೆ, ನಮಗೆ ಜಯಪ್ರದವಾಗಿಯೂ, ಜನಕ್ಕೆ ಮೆಚ್ಚಾಗಿಯೂ ನಾವು ಕೈಕೊಳ್ಳಬೇಕಾದ ಯೋಗ್ಯಕ್ರಮವೇನು ? ನನಗೆ ಮತ್ತು ಯುವರಾಜನಿಗೆ ಅದು ಪ್ರಿಯವಾಗಲಿ, ಅಪ್ರಿಯವಾಗಲಿ–ಸಂಕೋಚಪಟ್ಟುಕೊಳ್ಳದೆ ನಿನ್ನ ಅಭಿಪ್ರಾಯವನ್ನು ಇದ್ದುದಿದ್ದಂತೆ ಹೇಳು" ಎಂದು ತಿಳಿಸಿದನು. ವ॥ ಆಗ ವಾಕ್ಚತುರನಾದ ಸಚಿವನು ಹೀಗೆಂದನು–೧೧೭. "ದೇವ, ರಾಜನೀತಿಯೆಂಬುದು ಪಂಚಾಂಗ ಮಂತ್ರಗಳಿಂದಲೂ, ನಾಲ್ಕು ಉಪಧಾಶುದ್ಧಿಗಳಿಂದಲೂ ಮೂರುಸಿದ್ಧಿ ಗಳಿಂದಲೂ, ಆರುಗುಣಗಳಿಂದಲೂ, ಚಾತುರ್ಯದ ನಾಲ್ಕು ಉಪಾಯಗಳಿಂದಲೂ, ಮೂರು ಬಗೆಯ ಶಕ್ತಿಗಳಿಂದಲೂ ಕೂಡಿರುವುದು. ಇದು ನಿಮಗೆ ತಿಳಿದಿರುವ ವಿಷಯವೇ ಆಗಿದೆ. ಆದರೆ ಈ ವಿಶೇಷ ಸಂದರ್ಭದಲ್ಲಿ ಅದನ್ನು ಪುನಃ ಸ್ಮರಣೆಗೆ ತಂದುಕೊಳ್ಳಬೇಕಾಗಿದೆ ಮತ್ತು–೧೧೮. ತಿಳಿಯದಿರುವುದನ್ನು ತಿಳಿಸಿಕೊಡುವ, ಹಾಗು ತಿಳಿದುದನ್ನು ಪರೀಕ್ಷಿಸುವ ಕೆಲಸ ತಮ್ಮದು. ಆ ದೃಷ್ಟಿಯಿಂದಲೆ ನನಗೆ ತಿಳಿದಿರುವ ಅಲ್ಪಸ್ವಲ್ಪವನ್ನು ಹೇಳಲು ಆಜ್ಞಾಪಿಸಿರುವಿರಿ. ನಿಮಗೆ ತಿಳಿಯದ

ಅದೆಂತೆಂದೊಡೆ–ಪೃಥ್ವೀಪಾಲಭೂಪಾಲಂ ಭವದೀಯದೇಶಾಸನ್ನಸ್ಥಿತಂಗಳಪ್ಪ ಪನ್ನೆರಡುಂ ಮಂಡಲಂಗಳೊಳಂತರ್ಧಿಯುಂ ಮಿತ್ರದ್ವಿತಯದೊಳ್ ಕೃತ್ರಿಮಮಿತ್ರನುಂ ಮತ್ತಂ ಷಡ್ಬಲಬಲಿಷ್ಠನುಂ ದುರ್ಗಪಂಚಕಸಮಗ್ರನುಂ ಅನುರಕ್ತೋಭಯಪ್ರಕೃತಿಯುಂ ಯಮಪಟಿಕಾದಿಗೂಢಪ್ರಣಿದಿ ಪ್ರತ್ಯಕ್ಷೀಕೃತಕ್ಷಯವೃದ್ಧಿವಿಧಿತ್ರಯನುಮಾಗಿರ್ಪಂ. ಆತಂಗಂ ನಮಗಮೈದುಂ ತೆಱದ ವೈರದೊಳರ್ಥ ಸಂಭವಂ ವೈರಮಾಗಿಯುಂ ಅನ್ವರ್ಥಮಾತ್ರಮಲ್ತು. ಅವಂಗೆ ವಲ್ಲಭಗಜೇಂದ್ರಮಿರ್ಪುದು, ಆತನುಂ ತನ್ಮದೇಭಭ್ರಂಶದೊಳನುದಿನಾನ್ವೇಷಣಚಿಂತಾಪರತಂತ್ರತೆಯಿಂ ಮೂರ್ಖಭಾವಮನೆ ಮನದೊಳವಲಂಬಿಸಿರ್ಪಂ. ಅದುಕಾರಣದಿಂ ಮಂತ್ರೋಪಧಾಸಿದ್ಧಿಗುಣಶಕ್ತಿಗಳ್ಗಸಂಧೇಯನುಮಸಾಧ್ಯನುಮಾದಂ ಅವನೊಳಿನ್ನುಮುಪಾಯಂಗಳಂ ಪ್ರಯೋಗಿಸುವಿರಪ್ಪೊಡೆ

ಕಿಡುಗುಮುಪಪ್ರದಾನದೆ ಧನಂ ನಿಜಸೈನಿಕಹಾನಿ ದಂಡದಿಂ ।
ದೊಡರಿಕುಮೆಯ್ದೆ ಪೊರ್ದುಗುಮುಪಾಂಶತೆ ಭೇದದಿನಂತಜೆಂದಮಿಾ ॥
ಗಡಿನ ಪದಕ್ಕೆ ಸಾಮಮೆ ಸುಸಾಮ್ಯಮಣಂ ಪ್ರಿಯವಾಕ್ಯಮಂತ್ರದಿಂ ।
ಬಿಡುಗುಮದಲ್ಲದೇಂ ಬಿಡುಗುಮೇ ಮನಮಂ ಪಿಡಿದಾಗ್ರಹಗ್ರಹಂ ॥ ೧೧೯

ಮತ್ತಂ

ಪೆರ್ಚೆ ಮನದಭಿನಿವೇಶಮೊ ।
ಡರ್ಚದ ದಂಡಮನೆ ಪೂಣ್ದು ಬರೆ ರಿಪು ನಾಮುಂ ॥

ಇರುವುದೇನಿದೆ ? ಆದರೂ ನಾನು ಅರಿತಷ್ಟನ್ನು ಹೇಳುವೆನು. ವ॥ ನಿಮ್ಮ ದೇಶಕ್ಕೆ ಸಮೀಪವಾಗಿರುವ ಹನ್ನೆರಡು ಮಂಡಲಗಳಲ್ಲಿ ಪೃಥ್ವೀಪಾಲನು ಅಂತರ್ಧಿ (ಗುಟ್ಟಾಗಿಯೆ ಇರುವವನು); (ಸಹಜ ಮತ್ತು ಕ್ಷತ್ರಿಯ ಎಂಬ) ಎರಡು ಬಗೆಯ ಮಿತ್ರರಲ್ಲಿ ಕೃತಿಮಮಿತ್ರನು; ಮತ್ತು ಆರು ಬಗೆಯ ಬಲವುಳ್ಳವನು; ಐದು ಬಗೆಯ ದುರ್ಗಗಳುಳ್ಳವನು; ಅಧಿಕಾರಿಗಳಿಗೂ ಪ್ರಜೆಗಳಿಗೂ ಪ್ರಿಯನಾಗಿರುವವನು; ಚತುರರಾದ ಗೂಢಚಾರರ ಮುಖಾಂತರ ಪರರಾಜ್ಯಗಳ ಸ್ಥಿತಿ–ವೃದ್ಧಿ–ಕ್ಷಯಗಳನ್ನು ಚೆನ್ನಾಗಿ ತಿಳಿದುಕೊಳ್ಳುವವನು; ಐದುಬಗೆಯ ವೈರಗಳುಂಟು; ಅದರಲ್ಲಿ ನಮಗೂ ಆತನಿಗೂ ಉಂಟಾಗಿರುವುದು ಅರ್ಥಸಂಭವವೆಂಬ ವೈರ; ಅದು ಸಾಮಾನ್ಯವಲ್ಲ, ಅವನ ಆನೆ ಶ್ರೇಷ್ಠವಾದುದು. ಅದು ಕಳೆದುಹೋಗಲಾಗಿ ಅದನ್ನು ಹುಡುಕುವುದರಲ್ಲಿಯೆ ಅನುದಿನ ಚಿಂತೆಗೊಳಗಾಗಿ, ಈಗ ಮೂರ್ಖನೆ ಆಗಿರುವನು. ಆದುದರಿಂದ ಮಂತ್ರ, ಉಪಧಾಸಿದ್ಧಿ, ಗುಣ ಹಾಗು ಶಕ್ತಿಗಳನ್ನು ಅವನ ಮೇಲೆ ಪ್ರಯೋಗಿಸುವುದು ಸಾಧ್ಯವಿಲ್ಲ. ಇನ್ನು ಪ್ರಯೋಗಿಸುವುದಾದರೆ ನಾಲ್ಕು ಬಗೆಯ ಉಪಾಯಗಳಲ್ಲಿ– ೧೧೯. ದಾನೋಪಾಯದಿಂದ ಸುಮ್ಮನೆ ಧನ ಹಾಳಾಗುವುದು; ದಂಡೋಪಾಯದಿಂದ ಸೈನ್ಯಕ್ಕೆ ಹಾನಿ; ಭೇದೋಪಾಯದಿಂದ ಆಗುವ ಲಾಭವೂ ಅಷ್ಟೇ. ಆದುದರಿಂದ ಈ ಸಂದರ್ಭದಲ್ಲಿ ಸಾಮೋಪಾಯವೇ ಯೋಗ್ಯವಾಗಿದೆ. ಮನಸ್ಸಿನ ಆಗ್ರಹವನ್ನು ಬಿಡಿಸಬೇಕಾದರೆ ಪ್ರಿಯವಾಕ್ಯ ಪ್ರಯೋಗವಲ್ಲದೆ ಬೇರೆ ಯಾವ ರೀತಿಯಿಂದಲೂ ಅದು ಸಾಧ್ಯವಾಗದು. ಮತ್ತು ೧೨೦. ಛಲದ ಬಲುಮೆಗೊಳಗಾಗಿ ಶತ್ರುವು ದಂಡೋಪಾಯವನ್ನು ಕೈಕೊಂಡೇ ಬಂದನಾದರೆ ನಾವೂ ದಂಡೋ

ಚರ್ಚಿಸೆ ದಂಡಮನದು ತನಿ ।
ಗಿರ್ಚಂ ಕಿರ್ಚಿಂದೆ ನದಿಪುವಂತೆವೊಲಕ್ಕುಂ ॥ ೧೨೦

ಆರಯೆ ವಿಜಾತಿ ಮಲಿನಾ ।
ಕಾರಂ ಪರಪುಷ್ಟನಂತುಮದು ನಿಜಮಧುರೋ ॥
ದೀರಣದಿಂದಾಯ್ತು ಮನೋ ।
ಹಾರಿ ವಿರುದ್ಧನೆ ದಿಟಂ ಪ್ರಿಯಂವದನಾರ್ಗಂ ॥ ೧೨೧

ಅದಱಿನೀ ಸಾಹಸೋದ್ದಿಷ್ಟವಿದ್ವಿಷ್ಟನೊಳ್ ಸಾಮಜೋಪಾಯಮೆ ಪುರುಭೂತಿಕಾರಣಮೆಂದು ನುಡಿದ ಪುರುಭೂತಿಯ ನುಡಿಗೆ ಯುವರಾಜಂ ಸಾಜದೊಳೆ ಪೌರುಷಪ್ರಾಯನಪ್ಪುದಱಿನೊಡಂಬಡದೆ ಇದು ನಯಾಭಾಸಮುಮನುಚಿತೋಪನ್ಯಾಸಮುಮಾದುದೆಂದಿಂತೆಂದಂ:–

ಆನೆಯೊಳಳಿಪಂ ಬಿಸುಟ್ಟು ।
ಮೀ ನುಣ್ಣುಡಿಗಳ್ಗೆ ಸಿಲ್ಕಿ ನಿಲೆ ಪುಸಿಯಕ್ಕುಂ ॥
ಕೋನಾಮಾರ್ಥಾರ್ಥೀ ನಮ ।
ನೇನ ತು ಪರಿತುಷ್ಟ ಎಂಬ ಮನುಮುನಿವಚನಂ ॥ ೧೨೨

ಅದಲ್ಲದೆಯುಂ

ಒಡಮೆ ಪಡೆ ರೂಢಿಯಿಂಬಿವು ।
ಕಿಡುಗುಂ ತಾಮುಟಿದುಪಾಯದಿಂ ಸಾಮಮನಿಂ ॥

ಪಾಯಕ್ಕೆ ಕೈಯಿಕ್ಕಬೇಕಾಗುವುದು. ಅದರಿಂದಾಗುವ ಪರಿಣಾಮವೇನು? ನಿಗಿನಿಗಿಯಾದ ಕಿಚ್ಚನ್ನು ಕಿಚ್ಚಿನಿಂದಲೆ ಆರಿಸಲು ಹೊರಟಂತಾಗುವುದು. ೧೨೧. ವಿಚಾರಿಸಿ ನೋಡಿ, ಪಕ್ಷಿಜಾತಿಯಲ್ಲಿ ಕುರೂಪಿಯಾಗಿರುವುದು ಕೋಗಿಲೆ; ಆದರೂ ಅದು ತನ್ನ ಸಹಜ ಮಧುರವಾದ ಧ್ವನಿಯಿಂದ ಮನೋಹರವಾಯಿತು. ಪ್ರಿಯವಾಗಿ ಮಾತನಾಡುವವನು ಯಾರಿಗಾದರೂ ವಿರುದ್ಧನೆನಿಸುವನೆ? ವ॥ ಆದುದರಿಂದ ಸಾಹಸಕ್ಕೆಂದು ಚಡಪಡಿಸುತ್ತಿರುವ ಈ ಶತ್ರುವನ್ನು ನಾವು ಸಾಮೋಪಾಯದಿಂದಲೆ ವಶಗೊಳಿಸಿಕೊಳ್ಳಬೇಕು; ಅದು ನಮಗೆ ತುಂಬ ಶ್ರೇಯಸ್ಕರ. ಹೀಗೆಂದು ನುಡಿದ ಪುರುಭೂತಿಯ ಮಾತನ್ನು ಕೇಳಿದ ಯುವರಾಜನು ಸ್ವಭಾವತಃ ಪೌರುಷ ಪಕ್ಷಪಾತಿಯಾದುದರಿಂದ, ಆ ಅಭಿಪ್ರಾಯಕ್ಕೆ ಸಮ್ಮತಿಸದೆ, "ಇದು ರಾಜನೀತಿಯ ಆಭಾಸ; ಉಚಿತವಲ್ಲದ ಸೂಚನೆ, ಅಲ್ಲದೆ–೧೨೨. ಈತನು ಹೇಳುವಂತೆ ನಮ್ಮ ನಯವಾದ ಮಾತುಗಳಿಗೆ ಮರುಳಾಗಿ, ಆನೆಯ ಮೇಲಿನ ಆಸೆಯನ್ನು ಆ ಅರಸನು ತೊರೆಯುವನೆ? ಹಾಗೆ ಆದರೆ, 'ಅರ್ಥಾಪೇಕ್ಷಿಯಾಗಿ ಬಂದ ಮೇಲೆ ಕೇವಲ ನಮಸ್ಕಾರದಿಂದಲೆ ತುಷ್ಟನಾಗಿ ಹೋಗುವುದುಂಟೆ? ಎಂಬ ಮನು ಮುನಿಯ ವಚನ ಸುಳ್ಳಾಗುವುದು. ಅದಲ್ಲದೆ–೧೨೩. ಉಳಿದ ಮೂರು ಉಪಾಯಗಳಿಂದ ಧನ, ಸೈನ್ಯ ಮತ್ತು ರೂಢಿ ಹಾಳಾಗುವುವೆಂದೂ ಸಾಮವೇ ಸರಿ

ನುಡಿವೆಯೊಡಂಬಡದಂದವ।
ರೊಡವೆಯನವರ್ಗೀವುದೆಂಬ ತೆಱನಿದು ಪೆಱದೇಂ॥ ೧೨೩

ಎಂದು ಮಾಣದೆ ಪೂರ್ವಪಕ್ಷಾನಂತರಂ ಮುದ್ರಿಸಿದ ನೀತಿಸರ್ವಸ್ವಕೋಶದಂತೆ ಮಂತ್ರಿ ಹೃದಯಪರೀಕ್ಷಾನಿಮಿತ್ತಮುಸಿರದಿರ್ದ ಜನಕನ ವದನಮಂ ನೋಡಿ

ಸಮನಿಸಿದತ್ತಪ್ರತಿಷಿ।
ದ್ಧಮನುಮತಂ ಭವತಿಯೆಂಬ ನುಡಿಯಿಂದೀ ಕಾ॥
ರ್ಯಮೆ ದೇವರ ಮನದೊಂದು।
ದ್ಯಮಮೆಂಬಱವಾಯ್ತನುಕ್ತಸಿದ್ಧಮದೆನಗಂ॥ ೧೨೪

ಮತ್ತಮೆತ್ತಾನುಂ

ಪರಕರಿ ನಷ್ಟವಸ್ತುವಪರಾಕ್ರಮಲಬ್ಧಮಿದೇವುದೆಂಬನಾ।
ದರದೆ ತದರ್ಪಣಕ್ಕೆ ಬಗೆದಂದಪಿರಪ್ಪೊಡೆ ನೀಮೆ ಬಂದು ಪಿಂ॥
ತಿರೆಯಿರೆ ನಾಳೆ ಕಾಳೆಗದೊಳಾಂತನನಂತಕದಂತಕೋಟಿಕೋ।
ಟರದೊಳೆ ತೂಂತಿ ದಂತಿಗೆ ಭುಜಾರ್ಜಿತಮೆಂಬುದನುಂಟುಮಾಡುವೆಂ॥ ೧೨೫

ಎಂದು ಮತ್ತಮಾಶಂಕೋತ್ತರಮನಿಂತೆಂದಂ:– ಇದುವುಮಂ ಪುಷ್ಪೈರಪಿನಯೋದ್ಧವ್ಯಮೆಂಬ ನುಡಿವಿಡಿದತಿಕ್ರಮಿಸಿ ವನಕೇಳಿಯಂ

ಯೆಂದೂ ಹೇಳಿದೆ, ಅವರೊಡವೆಯನ್ನು ಅವರಿಗೆ ಕೊಟ್ಟುಬಿಡೆಂದು ಅಲ್ಲದೆ ಬೇರೇನು ಹೇಳಿದಂತಾಯಿತು ?" ವ॥ ಹೀಗೆ ನುಡಿದು ನಿಲ್ಲದೆ, ಪೂರ್ವಪಕ್ಷದ ತರುವಾಯ ಮುದ್ರೆಯಿಟ್ಟ ರಾಜನೀತಿ ಕೋಶದಂತೆ, ಮಂತ್ರಿಯ ಮನಸ್ಸನ್ನು ಪರೀಕ್ಷಿಸಲೆಂದು ಮಾತಾಡದೆ ಇದ್ದ ತಂದೆಯ ಮುಖವನ್ನು ನೋಡಿ_೧೨೪. ದೇವ, ನಿಷೇಧಿಸದೆ ಇದ್ದರೆ, ಅದು ಅನುಮತವೇ ಎಂಬ ಯುಕ್ತಿಯುಂಟು, ನೀವು ನುಡಿಯದೆ ಇರುವುದರಿಂದ ನನ್ನ ಅಭಿಪ್ರಾಯವೇ ನಿಮ್ಮ ಮನದಲ್ಲಿ ಇದೆಯೆಂದು ಅನುಕ್ತವಾದರೂ ಸಿದ್ಧವೆ ಆಯಿತು. ಆದರೆ ಏನಾದರೂ_೧೨೫. ಇದು ಹೆರವರು ಕಳೆದುಕೊಂಡ ವಸ್ತು: ಪರಾಕ್ರಮದಿಂದ ಗಳಿಸಿದ್ದೇನೂ ಅಲ್ಲ ಇದನ್ನು ಇಟ್ಟುಕೊಂಡೇನು ಮಾಡುವುದು–ಎಂದು ನೀವು ಆ ಆನೆಯನ್ನು ಮರಳಿ ಒಪ್ಪಿಸುವ ಮನಸ್ಸು ಮಾಡಿರುವಿರಾ ? ಹಾಗಿದ್ದರೆ ನೀವು ಬಂದು ಹಿಂದೆ ನಿಂತು ನೋಡಿ, ನಾಳೆ ಇದಿರಾದವನನ್ನು ಯಮನ ದವಡೆಯೊಳಗೆ ತುರುಕಿ, ಆ ಆನೆಗೆ ತೋಳ್ಬಲದಿಂದ ಗಳಿಸಿದುದು ಎಂಬ ಯೋಗ್ಯತೆಯನ್ನು ತಂದು ಕೊಡುತ್ತೇನೆ. ವ॥ ಇಷ್ಟಾಗಿಯೂ "ಪುಷ್ಪೈರಪಿನಯೋದ್ಧವ್ಯಂ" (ಹೂಗಳಿಂದಲೂ ಕೂಡ ಯುದ್ಧ ಮಾಡಕೂಡದು) ಎಂಬ ಉಕ್ತಿಗನುಸಾರವಾಗಿ, ನನ್ನನ್ನು ಧಿಕ್ಕರಿಸಿ 'ವನಕೇಳಿ'ಯೆಂಬ

ಒಪ್ಪಿಸುವೆನೆಂಬೊಡಾನಿರ ।
ದೊಪ್ಪಿಸುವೆಂ ಪರಮದೀಕ್ಷೆಗೆನ್ನಯ ತನುವಂ ॥
ತಪ್ಪೆತ್ತಲಾನುಮಿಾ ನುಡಿ ।
ಗಪ್ಪೊಡೆ ನಿಮ್ಮಾಣೆಯಿಟ್ಟ ನುಡಿಗೊಡನಕ್ಕುಂ ॥ ೧೨೬

ಅಂತು ಪರಾಕ್ರಮಾದಿಯುಂ ಪ್ರತಿಜ್ಞಾಂತಮುಮಾಗೆ ಯುವರಾಜಮೃಗರಾಜಂ ಗರ್ಜಿಸಿ ನಿಲಲೊಡಂ,

ವ್ಯಕ್ತಂ ಸಾಮಮಯಮಮಾ ।
ತ್ಯೋಕ್ತಿ ಸಮುಚ್ಚಂಡದಂಡಮಯಮಿತ್ತಲಪ ॥
ತ್ಯೋಕ್ತಿಯಿವೆರಡುಮನನುಸರಿ ।
ಪುಕ್ತಿಯೆ ವಕ್ತವ್ಯಮೆನಗೆ ಸುಘಟಿತಭಾವ್ಯಂ ॥ ೧೨೭

ಎಂದು ಬಗೆಯೊಳ್ ಬಗೆದು ಪದ್ಮನಾಭಮಹೀಭುಜಂ ಜಿನಮತದಂತುಭಯನಯಾವಿರುದ್ಧಮಂ ವೃಜಿನವಿಘಟನಕ್ಷಮುಮಂ ಪರಿಣಾಮಪಥ್ಯಮುಮಪ್ಪ ಕೃತ್ಯಮಂ ನಿಜಮನಶ್ಚತುರಸಚಿವಸಹಸಮಾಲೋಚದಿಂ ಕಂಡು

ರಿಪುಗಪಜಯಮಮಂ ಮನ್ನಂ ।
ತ್ರಿಪುತ್ರರಿರ್ವರ ಮನಕ್ಕಮನುನಯಮಂ ಭಾ ॥

ಆ ಆನೆಯನ್ನು — ೧೨೬. ಮರಳಿ ಕೊಡುವುದೇ ಆದರೆ, ನಾನು ಜಿನದೀಕ್ಷೆಯನ್ನು ವಹಿಸಿ ತಪಸ್ಸಿಗೆ ಹೊರಟು ಹೋಗುವೆನು. ನಿಮ್ಮ ಆಣೆಯಾಗಿ ಹೇಳುತ್ತೇನೆ ಈ ಮಾತು ತಪ್ಪಲಾರದು." ವ|| ಹೀಗೆ ಪರಾಕ್ರಮ ವಚನದಿಂದ ಆರಂಭಿಸಿ ಪ್ರತಿಜ್ಞೆಯಿಂದ ಕೊನೆಗೊಂಡ ಯುವರಾಜನ ಗರ್ಜನೆ ನಿಲ್ಲಲಾಗಿ – ೧೨೭. ಅಮಾತ್ಯನ ಮಾತು ಸಾಮಮಯ; ಮಗನ ಮಾತು ಪ್ರಚಂಡವಾದ ದಂಡೋಪಾಯಮಯ, ಇವೆರಡನ್ನೂ ಸಮನ್ವಯಗೊಳಿಸುವುದೆ ಯೋಗ್ಯವಾದ ಕ್ರಮ ವ|| ಎಂದು ಮನದಲ್ಲಿಯೆ ಆಲೋಚಿಸಿ, ಪದ್ಮನಾಭ ಮಹಾರಾಜನು ಜಿನಮತದಂತೆ "ಉಭಯನಯಾವಿರುದ್ಧವೂ" (೧. ದ್ರವ್ಯಾರ್ಥಿಕ ಹಾಗು ಪರ್ಯಾಯಾರ್ಥಿಕ ಎಂಬ ಎರಡೂ ನಯಗಳಿಗೆ ಸಮ್ಮತವಾದುದು. ೨. ಇಬ್ಬರ ಅಭಿಪ್ರಾಯಗಳಿಗೂ ಹೊಂದಿಕೆಯಾಗುವಂತಹುದು), "ವೃಜನ ವಿಘಟನಕ್ಷಮವೂ" (೧. ಪಾದ ನಾಶನಸಮರ್ಥ. ೨. ದುರ್ಜನವಧಕ್ಕೆ ಸಮರ್ಥ), ಹಿತಕರವಾದ ಪರಿಣಾಮವನ್ನುಂಟು ಮಾಡುವುದೂ ಆದ ಕ್ರಮವನ್ನು ತನ್ನ ಮನಸ್ಸಿನಲ್ಲಿಯೆ

ವಿಪುದರ್ಕಾತಿಶಯಮಂ ಮಾ ।
ಱ್ಪುಪಾಯಮಿನ್ನೆನಗೆ ತಾನೆ ದಲ್ ಪ್ರತಿಯಾನಂ ॥ ೧೨೮

ಎಂದು ನಿಶ್ಚೈಸಿ ಬೞಿಯಂ ಸಕಲಪ್ರಯೋಜನಕಂ ಕಾರ್ಯಸಮವಾಯಿಗಳೊಳೈಕಮತ್ಯಮೆ ಮೊದಲೊಳ್ ಕೃತ್ಯಮಪ್ಪುದಱೆನವರಿರ್ವರುಮನೊಡಂಬಡಿಸಲೆಂದಿಂತೆಂದಂ :–

ಹಿಮಜಲಲವಮಂ ಸೂಸು ।
ತ್ತುಮಂಬುದಂ ಸಿಡಿಲನುಗುೞ್ವವೊಲ್ ಸಾಮಮುಮಂ ॥
ಕ್ರಮದಿಂ ದಂಡಮುಮಂ ನಾ ।
ಮುಮೊಡರ್ಚುವಮಱಿದು ದೇಶಕಾಲೋಚಿತಮಂ ॥ ೧೨೯

ಎಂದು ಲಬ್ಧಾನುಮತನನಂತರಮಾತ್ಮೀಯಪ್ರತಿಭಾಪ್ರಸನ್ನದರ್ಪಣ ಪ್ರತಿಫಲಿತಕಾರ್ಯ ಸ್ವರೂಪಮನಿಂತೆಂದಂ :–

ಆತನ ಯಾನವಿಗ್ರಹದ ಮಾತನೆ ಪೂಣ್ದಡೆಮಾಡದಾಡಿದಂ ।
ದೂತನದರ್ಕೆ ತಕ್ಕುದಭಿಷೇಣನಮೊಂದೆ ನಯಂ ಮನಕ್ಕಭಿ ॥
ದ್ಯೋತಿಸುತಿರ್ದುದಂತದನೆ ಮುನ್ನೆಗೞ್ವಂ ನೆಗೞ್ದಿಂಬೞಿಕ್ಕಮಿ ।
ನ್ನೇತೆಱದಿಂದಮಾಗ್ರಹಮಡಂಗುಗುಮಂತುಟನಂದೆ ಚಿಂತಿಪಂ ॥ ೧೩೦

ಅಂತೈಕಮತ್ಯಮಪ್ಪ ಕೃತ್ಯಮಂ ನಿಶ್ಚೈಸಿ ಕುಮಾರನಂ ಮಂತ್ರಿವರನುಮಂ ವಿಸರ್ಜಿಸಿ,

ನಿಶ್ಚಯಿಸಿಕೊಂಡನು ೧೨೮. ಶತ್ರುವಿಗೆ ಸೋಲನ್ನೂ ನನ್ನ ಮಂತ್ರಿ ಹಾಗು ಪುತ್ರ ಇವರಿಬ್ಬರಿಗೆ ಸಂತೋಷವನ್ನೂ ಒದಗಿಸುವ ಉತ್ತಮವಾದ ಉಪಾಯವನ್ನೆ ನಾನು ಕೈಕೊಳ್ಳಬೇಕು. ವ॥ ಎಂದು ನಿರ್ಧರಿಸಿ ಬಳಿಕ, ಎಲ್ಲ ಕಾರ್ಯಗಳಲ್ಲಿಯೂ ಕಾರ್ಯಕರ್ತರು ಐಕಮತ್ಯದಿಂದಿರುವುದು ಅವಶ್ಯಕ. ಅದನ್ನು ಮೊದಲು ಸಾಧಿಸಬೇಕು. ಆದುದರಿಂದ ಅವರಿಬ್ಬರನ್ನೂ ಒಡಂಬಡಿಸಲೆಂದು ಹೀಗೆಂದನು– ೧೨೯. ಶೀತಲವಾದ ನೀರನ್ನು ಕರೆಯುತ್ತಿರುವಂತೆಯೆ ಮೋಡ ಸಿಡಿಲನ್ನೂ ಕಾರುವಂತೆ, ನಾವು ಸಾಮವನ್ನು ಪ್ರಯೋಗಿಸುತ್ತಿರುವಾಗಲೆ ದೇಶಕಾಲೋಚಿತವಾಗಿ ದಂಡೋಪಾಯವನ್ನೂ ಕೈಕೊಳ್ಳೋಣ ವ॥ ಎಂದು ಅವರಿಬ್ಬರನ್ನೂ ಒಡಂಬಡಿಸಿ, ತನ್ನ ಪ್ರತಿಭೆಯಿಂದ ಕಂಡುಕೊಂಡ ಕಾರ್ಯವಿಧಾನವನ್ನು ಹೀಗೆ ವಿವರಿಸಿದನು– ೧೩೦. "ನಮ್ಮ ಮೇಲೆ ದಂಡೆತ್ತಿ ಏರಿ ಬರುವ ಮಾತನ್ನೆ ಆ ದೂತನು ಮರೆಮಾಚದೆ ಆಡಿದನು. ಅದಕ್ಕೆ ತಕ್ಕ ಪ್ರತೀಕಾರವೆಂದರೆ ನಾವೇ ಶತ್ರುವಿನ ಮೇಲೆ ಏರಿಹೋಗುವುದು. ಹೀಗೆ ಮನಕ್ಕೆ ತೋರುತ್ತಲಿದೆ. ಮೊದಲು ಇದನ್ನೆ ಪ್ರಯೋಗಿಸಿ ನೋಡೋಣ, ಬಳಿಕ ಹೇಗೆ ಆತನ ಆಗ್ರಹವನ್ನು ನಿವಾರಿಸ ಬಹುದೆಂಬುದನ್ನು ನೋಡಿ, ಅದಕ್ಕೆ ತಕ್ಕಂತೆ ವರ್ತಿಸೋಣ" ವ॥ ಹೀಗೆ ಇಬ್ಬರಿಗೂ ಸಮ್ಮತವಾದ ಕ್ರಮವನ್ನು ನಿರ್ಧರಿಸಿ ಕುಮಾರನನ್ನೂ ಮಂತ್ರಿಯನ್ನು ಕಳಿಸಿಕೊಟ್ಟನು.

ಇದಮೋಘಂ ಕಾರ್ಯಸಿದ್ಧಿಪ್ರಮದೆಗೆ ಕುಲಗೇಹಂ ಮತಿಶ್ರೀಗೆ ನೃ।
ತ್ಯಾಸ್ಪದಮನ್ಯಕ್ಷ್ಮಾಪಲಕ್ಷ್ಮೀಲಲನೆಗೆ ಕೃತಸಂಕೇತಸದ್ಮಂ ದಲೆಂಬಂ॥
ದದ ಮಂತ್ರಾಗಾರದಿಂದಂ ಕ್ಷಿತಿಪತಿ ಪೊಱಮಟ್ಟಂ ವಿಶಿಷ್ಟಾರ್ಥಶಾಸ್ತ್ರೇ।
ಷ್ವದೃಢೀಭೂತಾತ್ಮಕೃತ್ಯಂ ಕವಿಕುಲಕಲಭವ್ರಾತಯೂಥಾಧಿನಾಥಂ॥ ೧೩೧

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿಪದಪದ್ಮನಿಧಾನದೀಪವರ್ತಿ

ಶ್ರೀಮದಗ್ಗಳದೇವ

ವಿರಚಿತಮಪ್ಪ

ಚಂದ್ರಪ್ರಭಪುರಾಣದೊಳ್

ಪದ್ಮನಾಭಮಹೀಶಮಂತ್ರಾಲೋಚನಂ

ನವಮಾಶ್ವಾಸಂ

೧೩೧. ಇದು ಕಾರ್ಯಸಿದ್ಧಿಯೆಂಬ ಸ್ತ್ರೀಗೆ ತವರುಮನೆ; ಬುದ್ಧಿಲಕ್ಷ್ಮಿಗೆ ನರ್ತನಶಾಲೆ; ಶತ್ರುರಾಜ್ಯಲಲನೆಗೆ ಸೂಚಿಸಿದ ಸಂಕೇತಸ್ಥಾನ–ಎಂಬತಿರುವ ಮಂತ್ರಗೃಹದಿಂದ, ಶಾಸ್ತ್ರಸಮ್ಮತವಾಗುವಂತೆ ತನ್ನ ಕಾರ್ಯವನ್ನು ದೃಢಪಡಿಸಿಕೊಂಡು ಅರಸನು ಹೊರಟನು.

–ಒಂಬತ್ತನೆಯ ಆಶ್ವಾಸ ಮುಗಿದುದು–

# ದಶಮಾಶ್ವಾಸಂ

ಶ್ರೀಗಂ ವಿದ್ವಿಡ್ವಿಜಯ ।
ಶ್ರೀಗಮಿದಾಕೃಷ್ಟಿಮಂತ್ರಮೆನಿಸಿದ ಮಂತ್ರೋ ॥
ದ್ಯೋಗದಿನಿರ್ದಂ ನೃಪನುಪ ।
ಯೋಗಪರಂ ಜೈನಜನಮನೋಹರಚರಿತಂ ॥ ೧

ಅನಂತರಂ ತಂತ್ರಾಧ್ಯಕ್ಷನಂ ಬರಿಸಿ ಬೆಸಸುವುದುಮಾತಂ ವಿಜಯಪ್ರಯಾಣಭೇರಿಯಂ ಪೊಯ್ಸಿದಾಗಳ್

ದಿಕ್ಕರಿಕರ್ಣಕೋಟರದೊಳುಳ್ಕಿ ಕುಲಾಚಲಸುಪ್ತಸಿಂಹಸಂ ।
ಘಕ್ಕಿರದೆಬ್ಬಿಱಂ ಪಡೆದು ಸೂರ್ಯಹಯಂ ಭಯಮುತ್ತು ಕುಂಬಿ ಧೀಂ ॥
ಕಿಕ್ಕಿವಿಣಂ ನಭಕ್ಕಡರ್ದು ಮಾಣ್ದುದೆ ಮಿಕ್ಕ ಜಗತ್ಪ್ರದೇಶಮಂ ।
ಮುಕ್ಕಳಿಸಿತ್ತು ಮತ್ತೆ ಜಯಭೇರಿಯ ಭೂರಿಗಭೀರನಿಸ್ವನಂ ॥ ೨

ಆಗಳ್ ಭೇರೀರವಸಮಾಕರ್ಣನಸಸಂಭ್ರಮಪ್ರಾಪ್ತಕತಿಪಯಾಪ್ತಪರಿವಾರಪರಿಕ್ಷಿಪ್ತನುಂ ಪ್ರರೂಢಪಟ್ಟವರ್ಧನಗಂಧಸಿಂಧುರಾರೂಢನುಂ ಪ್ರಸಾದಿತವಿಲಾಸಿನೀಜನಸಮೇತನುಂ ನವೀನನೇಪಥ್ಯ ರಚನಾದ್ವಿಗುಣಿತಾತ್ಮೀಯ ಮನೋಹರಾಕಾರಸೌಂದರ್ಯನುಂ ಆತ್ಮೀಯಪುರೋಹಿತೋಪದಿಷ್ಟಮುಹೂರ್ತದೊಳ್ ಪದ್ಮನಾಭಮಹಾರಾಜಂ ಯುವರಾಜಂಬೆರಸು ರಾಜಮಾರ್ಗದಿಂ ಪ್ರಸ್ಥಾನಶಿಬಿರಕ್ಕೆ ನಡೆವಾಗಳಾಲೋಕನಕುತೂಹಲಿತಮಾಗಿ

## ದಶಮಾಶ್ವಾಸಂ

೧. ಶ್ರೀಗೂ ಶತ್ರುಜಯಶ್ರೀಗೂ ಆಕರ್ಷಣಮಂತ್ರವೆನಿಸಿದ ಮಂತ್ರೋಪಾಯಗಳ ಯೋಜಿಸುತ್ತ ಅರಸನು ತಕ್ಕ ಸಿದ್ಧತೆಯನ್ನು ಎಣಿಸುತ್ತಿದ್ದನು. ವ॥ ಬಳಿಕ ಸೇನಾಪತಿಯನ್ನು ಕರೆಯಿಸಿಕೊಂಡು ಅಪ್ಪಣೆಯಿತ್ತನು. ಸೇನಾನಿಯು ಆ ಮೇರೆಗೆ ಪ್ರಯಾಣಭೇರಿಯನ್ನು ಹೊಡೆಯಿಸಿದನು– ೨. ಆ ಜಯಭೇರಿಯ ಮಹಾ ಗಂಭೀರವಾದ ನಿನಾದವು ದಿಗ್ಗಜಗಳ ಕರ್ಣರಂಧ್ರಗಳಲ್ಲಿ ಉಕ್ಕಿತು; ಕುಲಗಿರಿಗಳಲ್ಲಿ ಮಲಗಿದ ಸಿಂಹಗಳನ್ನು ದಿಮ್ಮನೆ ಎಚ್ಚರಿಸಿತು; ಸೂರ್ಯನ ರಥಗಳು ಮೆಟ್ಟಿಬಿದ್ದು ಧೀಂಕಿಡುವಂತೆ ಆಕಾಶಕ್ಕೆ ಅಡರಿತು; ಮಿಕ್ಕ ಜಗತ್ತಿನ ಪ್ರದೇಶವನ್ನೆಲ್ಲ ಮುಕ್ಕುಳಿಸಿತು ವ॥ ಆ ಭೇರೀ ಧ್ವನಿಯನ್ನು ಕೇಳಿ ಸಂಭ್ರಮಗೊಂಡ ಅರಸನು ಕೆಲವೇ ಜನ ಪರಿವಾರದವರೊಂದಿಗೆ, ಮೆಚ್ಚುಗೆಯ ವಿಲಾಸಿನಿಯರನ್ನೊಡಗೊಂಡು, ನವೀನವಾದ ವಸ್ತ್ರಲಂಕಾರಗಳಿಂದ ತನ್ನ ಸಹಜಸೌಂದರ್ಯವನ್ನು ಇಮ್ಮಡಿಸಿಕೊಂಡು, ತನ್ನ ಪುರೋಹಿತನು ಹೇಳಿದ ಸುಮುಹೂರ್ತದಲ್ಲಿ, ಪಟ್ಟದಾನೆಯನ್ನೇರಿ ಪ್ರಸ್ಥಾನಶಿಬಿರಕ್ಕೆ ಹೊರಟನು. ಆಗ ಆತನನ್ನು

ನಾರೀಲೋಕಮಿದೆಂಬಿನಂ ನೆರೆದು ಬಂತ್ತತ್ತಮುತ್ತಂ ಸಮಾ।
ನೋರೋಜದ್ವಯನ್ನತಾರಮಣಿಹಾರಂ ಸ್ಮೇರಸಾರೋದ್ಗಮೋ ॥
ದ್ಗಾರಿಸ್ರಸ್ತಕಚಂ ಕನನ್ಮಣಿವತಂಸಾಸ್ಫಾಲಿತಾಂಸಂ ಲಸ।
ದ್ದೋರಾಂದೋಳನಜಾತಕಂಕಣಝುಣತ್ಕಾರಂ ಪುರಸ್ತ್ರೀಜನಂ ॥ ೩

ಅಂತು ಬಂದು

ಲೋಲತೆಯಿಂದೀಕ್ಷಿಪ ಗಣಿ।
ಕಾಲಿಯಪಾಂಗತ್ರಿವರ್ಣರುಚಿಗಳ್ ನೀಳ್ದೆಂ ॥
ಲೀಲೆಯನಾಂತುವೊ ಮುತ್ತಿನ।
ನೀಲದ ಮಾಣಿಕದ ತೋರಣಂಗಳ ತೆಱದಿಂ ॥ ೪

ಆಗಳೊರ್ವಳಪೂರ್ವವಿಲಾಸವತಿ,

ಏಳಿಸೆ ಪುರ್ವದೂರ್ವೆಯನುರೋರುಹಮುಜ್ಜ್ವಲಕುಂಭಶೋಭೆಯಂ।
ಪಾಳಿಸೆ ಲೋಚನಾಂಶು ಮಿಗೆ ಲಾಜೆಯನಾಜಯಕೇತುಲೀಲೆಯಂ ॥
ಏಳಿಸೆ ಮೇಲುದಂದುಗೆಯ ಸುಣ್ದನಿ ದುಂದುಭಿರಾವದಂದಮಂ।
ಚಾಳಿಸೆ ಬಂದು ತದ್ಗಮನಮಂಗಳಲಕ್ಷ್ಮಿವೊಲಂದು ನೋಡಿದಳ್ ॥ ೫

ಮತ್ತೊರ್ವಳ್

ಪದನಖಕಾಂತಿ ಪುಷ್ಪರಥದಂತಿರೆ ನೂಪುರದಿಂಚರಕ್ಕೆ ಸೋ।
ಲದಿನೊಡವರ್ಪ ಹಂಸೆಗಳೆ ಪೂಡಿದ ಹಂಸೆಗಳಂತೆ ತೋಱಿ ಮೇ ॥

ನೋಡುವ ಕುತೂಹಲದಿಂದ_೩. ಇದೇನು ಸ್ತ್ರೀಯರದೇ ಒಂದು ಲೋಕ ಬಂದಿತೊ ಏನೊ ಎಂಬಂತೆ ಪುರಸ್ತ್ರೀಯರು ಸಂಭ್ರಮದಿಂದ ಬಂದರು. ಅವರ ಆತುರದ ನಡಗೆಯಿಂದಾಗಿ ತೊಟ್ಟ ರತ್ನಹಾರಗಳು ಮೊಲೆದುದಿಗಳ ಮೇಲೆ ಎದ್ದೆದ್ದು ಬೀಳುತ್ತಿದ್ದುವು; ತಲೆಗೂದಲಲ್ಲಿ ಮುಡಿದ ಅರಳು ಹೂಗಳು ಸಡಿಲೆ ಬೀಳುತ್ತಿದ್ದುವು; ಕರ್ಣಕುಂಡಲಗಳು ಭುಜಕ್ಕೆ ಬಂದು ಬಂದು ತಾಕುತ್ತಿದ್ದುವು; ತೋಳು ಬೀಸುವುದರಿಂದ ಕೈಯ ಕಂಕಣಗಳು ಜಣಜಣಿಸುತ್ತಿದ್ದುವು ಹಾಗೆ ಬಂದು _ ೪. ಆಸಕ್ತಿಯಿಂದ ನೋಡುವ ಅವರ ಕುಡಿನೋಟದ ಕಾಂತಿಗಳು_ಮುತ್ತಿನ, ಇಂದ್ರನೀಲದ ಹಾಗು ಮಾಣಿಕದ ತೋರಣಗಳ ಹಾಗೆ ನೀಳವಾಗಿ ಶೋಭಿಸಿದುವು ವ॥ ಆಗ ಒಬ್ಬ ಅಪೂರ್ವ ಬೆಡಗುಗಾರ್ತಿಯೊಬ್ಬಳು ೫. ಹುಬ್ಬು ಹುಲ್ಲುಗರಿಯನ್ನೂ, ಮೊಲೆಗಳು ಉಜ್ವಲವಾದ ಕಲಶಗಳ ಚೆಲುವನ್ನೂ, ಕಣ್ಣ ಬೆಳಗಿನ ಕಿರಣಗಳು ಲಾಜೆಯನ್ನೂ, ಮೇಲುದಿನ ಸೆರಗು ವಿಜಯಧ್ವಜವನ್ನೂ, ನೂಪುರಗಳ ಮಂಜುಳನಾದ ದುಂದುಭಿಧ್ವನಿಯನ್ನೂ ಹೀಯಾಳಿಸುವಂತೆ ಒಪ್ಪುತ್ತಿರಲಾಗಿ (ಅರಸನ ಯಾತ್ರೆಗೆ ಹರಸಲು ಬಂದ) ಮಂಗಳಲಕ್ಷ್ಮಿಯ ಹಾಗೆ ಬಂದು ನೋಡಿದಳು, ಮತ್ತೊಬ್ಬಳು_ ೬. ಕಾಲುಗುರುಗಳ ಪ್ರಭೆ ಪುಷ್ಪರಥದಂತಿರಲು, ಅಂದುಗೆಗಳ ಸವಿದನಿಗೆ ಸೋತು ಒಡನೊಡನೆ ಬರುವ ಹಂಸಗಳೆ ಆ ರಥಕ್ಕೆ ಹೂಡಿದ ಹಂಸಗಳಂತೆ

ಲುದು ಝುಷಕೇತುವಂ ಮಿಗೆ ಮನೋಜಮನೋಹರಿಯೇಱೆ ಬರ್ಪವೊಲ್ ।
ಸುದತಿ ವಿಲಾಸದಿಂದೆ ನಡೆತಂದು ನಿರೀಕ್ಷಿಸಿದಳ್ ನೃಪಾಲನಂ ॥ ೬

ನೋಡುವಲಂಪಿನಿಂ ನೆಱಿಯೆ ಕೈಗೆಯಲುಂ ಮಱಿದೊಂದೆ ಕಣ್ಣನು ।
ಕ್ಕಾಡಿಗೆಯೊಂದೆ ಕರ್ಣದ ಕನನ್ಮಣಿಕುಂಡಲಮೊಂದೆ ಕೆಯ್ಯ ಪೊಂ ॥
ಜಾಡಗಮೊಂದೆ ಕಾಲ ಮಿಸುಪಂದುಗೆಯೊಪ್ಪಿರೆ ಬಂದೊಡಂದು ಱೋ ।
ಡಾಡಿದುದರ್ಧನಾರಿಯಿವಳೆಂದು ಸಖೀಜನಮೆಯ್ದೆ ನಾರಿಯಂ ॥ ೭

ಅದಲ್ಲದೆಯುಮೊಂದುರಾಜವೀಧೀಸವಿಧಸೌಧದೂರ್ಧ್ವದೊಳಿರ್ದು

ಸಕಲೋರ್ವೀಪತಿಗೊರ್ವಳಂದು ಮೆಱಿದಳ್ ಯಾನಶ್ರಮಶ್ವಾಸಮಂ ।
ಶುಕಮಂ ತೂಳ್ದಿಘನಸ್ತನದ್ವಿತಯಮಂ ದೋರ್ಯುಗ್ಮದಿಂ ಮುಚ್ಚುವು ॥
ತ್ಸುಕತಾವ್ಯಾಜದಿನಪ್ಪಿನೊಂದು ಚದುರಂ ಬೇಱಿಕೊರ್ಮೆ ತಾಂಬೂಲವೀ ।
ಟಿಕೆಯಂ ಮೆಲ್ಲನೆ ಖಂಡಿಪೊಂದು ನೆವದಿಂದಂ ಚುಂಬನಪ್ರೌಢಿಯಂ ॥ ೮

ಆ ಮನೋಜವಿಜಯಕ್ಷ್ಮಿಯಲ್ಲದೆಯುಂ ಗರ್ಭೇಶ್ವರಿ ಮತ್ತೊರ್ವಳೆಯ್ದೆವರ್ಪಾಗಳ್

ಶ್ವಸಿತಕೃತೋಪಕಾರಭರದಿಂದಳಿಮಾಳಿಕೆ ಕಾಂತೆ ಕಂದುಗುಂ ।
ಬಿಸಿಲೊಳೆನುತ್ತುಮೆಯ್ದೆ ಮಱಿಯಾಯ್ತೆನೆ ಕುಂತಳಸೌರಭಕ್ಕೆ ವೇ ॥

ತೋರಲಾಗಿ, ಮೇಲುಸೆರಗು ಮೀನಧ್ವಜಕ್ಕೆ ಮಿಗಿಲಾಗಿರಲಾಗಿ, ಕಾಮದೇವನ ಮನೋವಲ್ಲಭೆಯೆ ರಥವೇರಿ ಬರುತ್ತಿರುವಂತೆ ಒನಪಿನಿಂದ ನಡೆದು ಬಂದು ಅರಸನನ್ನು ನೋಡಿದಳು. ೭. ನೋಡುವ ಸಂಭ್ರಮದಲ್ಲಿ ಅಲಂಕಾರವನ್ನು ಪೂರ್ಣಗೊಳಿಸಲು ಮರೆತು, ಒಂದೇ ಕಣ್ಣಿಗೆ ಕಾಡಿಗೆಯೆಬ್ಬಿಕೊಂಡು, ಒಂದೇ ಕಿವಿಗೆ ಕುಂಡಲವಿಟ್ಟು, ಒಂದು ಕೈಗೆ ಮಾತ್ರ ಸೂಡಗ ತೊಟ್ಟು, ಒಂದು ಕಾಲಿಗಷ್ಟೆ ನೂಪುರ ಧರಿಸಿ ಆತುರದಿಂದ ಬರಲಾಗಿ "ಹೋ ಇವಳೊಬ್ಬ ಅರ್ಧನಾರಿ ಬಂದಳೊ" ಎಂದು ಆಕೆಯ ಕೆಳದಿಯರು ವಿನೋದವಾಡಿದರು. ವ॥ ರಾಜ ಮಾರ್ಗದ ಒಂದು ಮಹಲಿನ ಉಪ್ಪರಿಗೆಯ ಮೇಲೆ ಬಂದು ನಿಂತುಕೊಂಡು– ೮. ಒಬ್ಬಳು ಧಾವಿಸಿ ಏರಿಬಂದ ಶ್ರಮದಿಂದಾಗಿ ತೇಕುತ್ತಿದ್ದುದರಿಂದ ಅವಳ ನೀಳವಾದ ಉಸಿರು ಎದೆಯ ಸೆರಗನ್ನು ಸರಿಸಿತು; ಕೂಡಲೆ ತನ್ನ ತೋರಮೊಲೆ ಗಳನ್ನು ಮುಚ್ಚಿಕೊಳ್ಳಲೆಂದು ಎರಡೂ ತೋಳುಗಳನ್ನು ಆತುರದಿಂದ ಅವುಗಳ ಮೇಲೆ ಅಡ್ಡವಾಗಿಟ್ಟುಕೊಂಡ ಆಕೆ ಅಪ್ಪುಗೆಯ ಚಾತುರ್ಯವನ್ನು ಅದರಿಂದ ತೋರ್ಪಡಿಸಿದಳು; ಇನ್ನೊಮ್ಮೆ ತಾಂಬೂಲದ ವೀಡವನ್ನು ಮೆಲ್ಲನೆ ಕಚ್ಚುವ ರೀತಿಯಿಂದ ಚುಂಬನದ ಪ್ರೌಢಿಯನ್ನೂ ಪ್ರಕಟಿಸಿದಳು. ವ॥ ಆ ಮನ್ಮಥ ವಿಜಯಲಕ್ಷ್ಮಿಯಲ್ಲದೆ ಆಗರ್ಭ ಶ್ರೀಮಂತ ಲಲನೆಯೊಬ್ಬಳು (ಬರುತ್ತಿರ ಲಾಗಿ)_ ೯. "ತನ್ನ ಉಸಿರನ ಪರಿಮಳದಿಂದ ನಮಗೆ ಉಪಕಾರ ಮಾಡಿದವಳು ಇವಳು ಈ ಕೋಮಲೆ ಬಿಸಿಲಿಗೆ ಕಂದಬಾರದು" ಎಂದು ಅವಳಿಗೆ ಮರೆ ಹಿಡಿಯುವುವೊ ಏನೊ ಎಂಬಂತೆ ಅವಳ ಕೂದಲ ಸುಗಂಧಕ್ಕೆ ದುಂಬಿ ಗಳು ಮುಸುರಿಕೊಂಡುವು; "ಇತ್ತ ಬನ್ನಿ, ಇತ್ತ ಬನ್ನಿ" ಯೆಂದು ಉಗ್ಘಡಿಸಿ

ಷ್ಪಿಸಿದುದು ಯಾನಸೌಮ್ಯದೊಲವಿಂ ನೆಲನುಘ್ಘಡಿಪಂತೆ ಮುಂದೆ ಸಂ।
ಧಿಸಿದುದು ನೂಪುರಸ್ವನಸಮಾಹೃತಗೇಹಮರಾಳಮಂಡಲಂ ॥ ೯

ಮತ್ತೊಂದೆಡೆಯೊಳೊರ್ವಳ್

ನಡೆ ಮದನೇಭದೊಂದು ನಡೆಯಂ ನಗೆ ಚಿತ್ತಜವಾಜಿವಾಲಮಂ।
ಮುಡಿ ಬಿಡುತಂದು ಪೋಲೆ ಮೊಲೆ ಮನ್ಮಥಕೇಳಿರಥಾಂಗಲೀಲೆಯಂ ॥
ಗೆಡೆಗೊಳೆ ಕಂತುಷಟ್ಪದಪಕಾತಿಯನಾ ಕುರುಳೋಳಿ ಪೋಲ್ತು ನೇ।
ರ್ಪಡೆ ಪಡೆದಳ್ ನಿಜಾಂಗದೊಳೆ ಚೆಲ್ವನನಂಗನ ಚಾತುರಂಗದಾ ॥ ೧೦

ಅದಲ್ಲದೆಯುಂ

ಇವಳವಲೋಕನಾಕುಳತೆಯಿಂದಟೆಯಳ್ ಪರಿವಾಗಳಿಂತು ಬ।
ಳ್ಕುವ ನಡು ಮಧ್ಯದಿಂದುಡಿಗುಮೆಂದು ಘನಸ್ತನಯುಗ್ಮಮಂಜಿದಂ ॥
ತೆವೊಲೆನಸುಂ ಕದಕ್ಕದಿಸೆ ಸೋರ್ಮುಡಿಯುಂ ಭರಭೀತಿಯಿಂದೆ ಸೂ।
ಸುವ ತೆಱದಿಂದೆ ಮಾಲೆಯನುಗುಟ್ತರೆ ಬಂದಳದೊಂದು ಲೀಲೆಯಿಂ ॥ ೧೧

ಮುಂದೊಂದೆಡೆಯೊಳೊರ್ವಳವನಿಪಾಲರೂಪವಿಲಾಸದರ್ಶನೈಕಲಾಲಸೆ

ಪಗಲನಿರುಳ್ಗೆ ಮಾಱಿ ನಯನಾಂಚಲಚಂದ್ರಿಕೆಯಾನಲೀಲೆ ಹಂ।
ಸೆಗೆ ಗುರುವಾಗೆ ಸುಯ್ಯ ನಱುಗಂಪಳಿಯಂ ಸೆಱೆಗೆಯ್ಯೆ ಕೊರ್ಬಿ ಮೇ ॥

ಪರಾಕು ಹೇಳುವುವೊ ಏನೊ ಎಂಬಂತೆ ಆಕೆಯ ಅಂದುಗೆಯ ಮಂಜುಳ ಧ್ವನಿಯಿಂದ ಆಕರ್ಷಿತವಾದ (ಮನೆಯಲ್ಲಿ ಸಾಕಿದ) ಹಂಸಗಳು ಮುಂದೆ ಮುಂದೆ ನಡೆದುವು ವ॥ ಮತ್ತೊಂದು ಪ್ರದೇಶದಲ್ಲೊಬ್ಬಳು– ೧೦. ತನ್ನ ನಡಗೆ ಮನ್ಮಥನ ಆನೆಯ ನಡಗೆಯನ್ನು ಹೀಯಾಳಿಸಲಾಗಿ, ಬಿಡುಮುಡಿ ಮದನನ ಕುದುರೆಯ ಬಾಲವನ್ನು ಹೋಲಲಾಗಿ, ಮೊಲೆಗಳು ಕಾಮನ ಲೀಲಾಚಕ್ರಗಳಿಗೆ ಸಮಾನವಾಗಲು ಸುಳಿಗೂದಲು ಕಾಮದೇವನ ಪದಾತಿಸೈನ್ಯವಾದ ದುಂಬಿ ವಿಂಡನ್ನು ಹೋಲಲಾಗಿ–ತನ್ನ ದೇಹದಲ್ಲಿ ಮನ್ಮಥನ ಚತುರಂಗಸೈನ್ಯದ ಚೆಲುವನ್ನು ತಾಳಿದಳು. ಅದಲ್ಲದೆ–೧೧. "ಇವಳು (ಅರಸನನ್ನು) ನೋಡುವ ಸಂಭ್ರಮದಿಂದ ಹೀಗೆ ಧಾವಿಸಿ ಹೋಗುತ್ತಿರಲಾಗಿ ಮಧ್ಯದಲ್ಲಿಯೆ ತನ್ನ ಬಳುಕುವ ನಡು ಮುರಿದುಹೋದೀತೆಂಬ ಎಚ್ಚರ ಇವಳಿಗಿಲ್ಲ. ಆದರೆ ನಮ್ಮ ಗತಿಯೇನು ?" ಎಂದು ಅಂಜಿಕೊಂಡಂತೆ ಮೊಲೆಗಳು ಕದಕ್ಕದಿಸುತ್ತಿದ್ದುವು; ಈ ವೇಗಕ್ಕೆ (ನಮ್ಮದೂ ಅದೇ ಗತಿಯೋ ಏನೊ ಎಂದು) ಭಯಗೊಂಡಂತೆ ಕೂದಲು ಮುಡಿದ ಮಾಲೆಯನ್ನು ಕಳಚಿ ಬಿಡುತ್ತಿರಲಾಗಿ ಒಯ್ಯಾರದಿಂದ (ಒಬ್ಬ ಸುಕುಮಾರಿ) ಬಂದಳು. ವ॥ ಮುಂದೆ ಒಂದೆಡೆಯಲ್ಲಿ ಅರಸನ ರೂಪದ ಬೆಡಗನ್ನು ನೋಡುವ ಹಂಬಲದಲ್ಲಿಯೆ ಆಸಕ್ತಳಾಗಿ–೧೨. ತನ್ನ ಕುಡಿನೋಟದ ಬೆಳ್ದಿಂಗಳಿಂದ ಹಗಲನ್ನು ಇರುಳುಗೊಳಿಸುತ್ತ, ಹಂಸಗಳಿಗೆ ಪಾಠಹೇಳು ವಂತೆ ಬೆಡಗಿನಿಂದ ನಡೆಯುತ್ತ, ಉಸಿರ ಪರಿಮಳದಿಂದ ದುಂಬಿಗಳನ್ನು ಸೆರೆ

ಗೊಗೆದ ಕುಚಂ ನಿಜಾಂಶುಮನೀಡಿಜೆದಾಡೆ ವಿಭೂಷಣಾಂಶು ದಿ ।
ಟ್ಟಿಗೆ ಸುರಚಾಪಮಂ ಕೆದಱಿ ಬಂದಳನಂಗನ ಲಕ್ಷ್ಮಿಯಂದದಿಂ ॥ ೧೨

ಆ ಸಮಯದೊಳ್

ಒಂದೆ ಶಶಿಬಿಂಬಮೀ ಜಗ ।
ದಿಂದೀವರಚಯಮನೈದೆ ತಣಿಪುವ ತೆಱದಿಂ ॥
ದೊಂದೆ ನೃಪಾಸ್ಯಂ ತಣಿಪಿದು ।
ದಂದಖಿಳಪುರಾಂಗನಾವಿಲೋಚನಚಯಮಂ ॥ ೧೩

ಅಂತು ಸಕಲನಗರನಾರೀಜನಮನಃಕಟಾಕ್ಷೈಕಲಕ್ಷ್ಯನಾಗಿ ನಡೆವಲ್ಲಿ

ಏಜೆದ ಸಂತವಿಟ್ಟ ಗಜಮಭ್ರಗಜಕ್ಕೆಣೆಯಾಗೆ ವಜ್ರಮಂ ।
ಮೀಱಿ ಕರಾಗ್ರದೊಳ್ ಪಳಿಕಿನಂಕುಶವಿಟ್ಟು ನಿಜಪ್ರದೇಶದೊಳ್ ॥
ತೋಱುವ ಪೌರನಾರಿಯರ ಕಣ್ಬೊಳೆಪಕ್ಷಿಸಹಸ್ರಶೋಭೆಯಂ ।
ಬೀಱಿ ಸುರೇಂದ್ರನಂ ವಿಭವದಿಂ ಗೆಲೆವಂದು ನರೇಂದ್ರನೊಪ್ಪಿದಂ ॥ ೧೪

ಅದಲ್ಲದೆಯುಂ

ಗಡಣಿಸಿದತ್ತಿದೊಂದು ಶಶಿಬಿಂಬಮದೊಂದು ಸುಧಾಂಶುಲೇಖೆ ಚೆ ।
ಲ್ವಡರೆ ನವೇಂದುಕಾಂತಮಣಿದಂಡಯುಗಾಗ್ರದೊಳೆಂದು ವಿಸ್ಮಯಂ ॥
ಬಡೆ ನಡೆ ನೋಡಿ ಪೌರನಿಕರಂ ಕರಮೊಪ್ಪಿದುದೆತ್ತಿ ನಿಂದ ಬೆ ।
ಳ್ಗೊಡೆ ಪಿಡಿದಿರ್ದು ಪಜ್ಜಳಿಸುಮಂಕುಶವಂದು ಧರಾಧಿನಾಥನಾ ॥ ೧೫

ಹಿಡಿಯುತ್ತ, ಕೊಬ್ಬಿ ಉಬ್ಬರಿಸುತ್ತಿರುವ ಕುಚಗಳಿಂದ ಮುಂಚೆರಗನ್ನು ತಿವಿದಾಡುತ್ತ ಆಭರಣಗಳ ಪ್ರಭೆಯಿಂದ ಕಾಮದಬಿಲ್ಲುಗಳನ್ನು ಹರಡುತ್ತ, ಮನ್ಮಥನ ಲಕ್ಷ್ಮಿಯಂತೆ ಬಂದಳು. ಆ ಸಮಯದಲ್ಲಿ–೧೩. ಒಂದೇ ಚಂದ್ರಬಿಂಬವು ಈ ಜಗತ್ತಿನ ನೈದಿಲೆಗಳನ್ನೆಲ್ಲ ತಣಿಸುವ ಹಾಗೆ, ಆ ಅರಸನ ಒಂದೇ ಮುಖಕಮಲವು ಸಮಸ್ತಪುರಸ್ತ್ರೀಯರ ಕಣ್ಣುಗಳನ್ನೆಲ್ಲ ತಣಿಸಿತು. ವ॥ ಹೀಗೆ ನಗರದ ಸಕಲಸ್ತ್ರೀಯರ ಮನಕ್ಕೂ ಕಣ್ಣಿಗೂ ಏಕೈಕಲಕ್ಷ್ಯನಾಗಿ ನಡೆಯುವಾಗ–೧೪. ಏರಿದ ಆನೆ ಐರಾವತಕ್ಕೆ ಸಮನಾಗಿ ತೋರಿ, ಕೈದುದಿಂಯ ಸ್ಫಟಿಕದ ಅಂಕುಶವು ಇಂದ್ರನ ವಜ್ರಾಯುಧಕ್ಕೆ ಮಿಗಿಲೆನಿಸಲಾಗಿ, ತನ್ನ ಮೈಯನ್ನೆಲ್ಲ ಆವರಿಸಿದ ಪೌರನಾರಿಯರ ಕಣ್ಣ ಹೊಳಪು ಸಾವಿರ ಕಣ್ಣುಗಳ ಶೋಭೆಯನ್ನುಂಟು ಮಾಡುತ್ತಿರಲಾಗಿ, ಅರಸನು ವೈಭವದಿಂದ ಇಂದ್ರನನ್ನು ಸೋಲಿಸುವಂತೆ ಒಪ್ಪಿದನು. ಅದಲ್ಲದೆ–೧೫. "ಇಲ್ಲೊಂದು ಪೂರ್ಣಚಂದ್ರಬಿಂಬ ಹಾಗು ಕೋರೆಚಂದ್ರದ ಬಿಂಬ ಹೊಸ ಚಂದ್ರಕಾಂತದ ಎರಡು ದಂಡಗಳ ತುದಿಗೆ ಹೊಂದಿಕೊಂಡು ನಿಂತಿವೆ. ಏನಿದು ವಿಚಿತ್ರ !" ಎಂದು ಪುರಜನರು ಸೋಜಿಗಗೊಂಡು ಆ ಅರಸನ (ತಲೆಯ ಮೇಲಿರುವ ಬೆಳ್ಗೊಡೆಯನ್ನೂ, ಕೈಯಲ್ಲಿ ಹೊಳೆಯುವ ಅಂಕುಶವನ್ನೂ ನೋಡುತ್ತಿದ್ದರು.

ತೋರಣದರ್ಪಣದೊಳ್ ಚಮ
ರೀರುಹಮಮಂ ನೃಪತಿಗಿಕ್ಕುವಬಲೆಯರ ನೆಟಿಲ್ ॥
ರಾರಾಜಿಸಿದುವು ರಿಪುರಾ ।
ಜೀರಾಜ್ಯಶ್ರೀಸಮೂಹಮಿದಿರ್ವಂದಿರವಂ ॥ ೧೬

ಮತ್ತಂ

ಮಿಳಿರೆ ಸೆಱಂಗು ವಾಯುವಶದಿಂ ಪಟದಂತೆ ಮುಖಪ್ರದೇಶದೊಳ್ ।
ಪೊಳೆಯೆ ವಿಲೋಚನಂ ಝುಷನಿಕಾಶತೆಯಿಂ ತನು ಹೇಮದಂಡದಂ ॥
ತಳವಡೆ ಶಂಬುಕಂಬೊಲಿರೆ ರಾಜ್ಞಿ ವಿರಾಜಿಸಿದಳ್ ನೃಪಾಂತದೊಳ್ ।
ಲಳನೆ ಬರುತ್ತೆ ಚಿತ್ತಜನ ಪಕ್ಕದೊಳೆತ್ತಿದ ವೈಜಯಂತಿವೊಲ್ ॥ ೧೭

ಅಂತು ಸಕಲಮಂಗಳಸಂಚಯಮಪ್ಪ ರತ್ನಸಂಚಯಪುರಮಂ ಪೊಱಮಟ್ಟು ನಡೆದು ಬೞಿಯಂ ಕ್ರೋಶದ್ವಿತಯಮಾತ್ರದೊಳ್ ಪ್ರಸಿದ್ಧ ದೂಷ್ಯಮಾಗಿಯುಮದೂಷ್ಯಮುಂ, ನಿಶಾಂತಸ್ಫಾರಚಾರುತ್ವಮಾಗಿಯುಂ ಅನಿಶಾಂತಸ್ಫಾರಚಾರುತ್ವಮುಂ, ಬಲವೀರಜನೋಪೇತಮಾಗಿಯುಂ ಅಬಲವೀರಜನೋಪೇತಮುಂ, ವಿಶಾಲಪರಿಧಿಯಾಗಿಯುಂ ಅವಿಶಾಲಪರಿಧಿಯೆನಿಸಿ ಗೃಹಮಹತ್ತರು ಮುನ್ನಮೆ ಸಮೆದು

೧೬. ತೋರಣದಲ್ಲಿ ಅಳವಡಿಸಿದ ಕನ್ನಡಿಗಳಲ್ಲಿ ಚಾಮರಗಿತ್ತಿಯರ ಅನೇಕ ಪ್ರತಿಬಿಂಬಗಳು ಮೂಡಿ, "ಇವು ಶತ್ರುರಾಜರನ್ನು ತೊರೆದು ಬಂದ ರಾಜ್ಯಲಕ್ಷ್ಮಿಯರ ಸಮೂಹವೊ ಏನೊ ಎಂಬಂತೆ ಶೋಭಿಸಿದುವು. ಮತ್ತು–೧೭. ಗಾಳಿಯಿಂದ ಪಟಪಟಿಸುತ್ತಿರುವ ಸೆರಗು ಧ್ವಜಪಟದಂತೆ, ಹೊಳೆಯುವ ಕಣ್ಣು (ಮನ್ಮಥಧ್ವಜದಲ್ಲಿಯ) ಮೀನಂತೆ, ದೇಹ ಬಂಗಾರದ ಧ್ವಜದಂಡದಂತೆ ಶೋಭಿಸಲಾಗಿ ಅರಸನ ಪಕ್ಕದಲ್ಲಿದ್ದ ರಾಣಿಯು ಮನ್ಮಥನ ಮಗ್ಗುಲಲ್ಲಿ ಎತ್ತಿ ಹಿಡಿದ (ವಿಜಯ)ಧ್ವಜದಂತೆ ಕಂಗೊಳಿಸಿದಳು. ವ॥ ಹೀಗೆ ಸಮಸ್ತಮಂಗಳನಿವಾಸದ ರತ್ನಸಂಚಯಪುರದಿಂದ ಹೊರಟು, ಅಲ್ಲಿಂದ ಎರಡು ಕ್ರೋಶದ ಅಂತರದಲ್ಲಿ ಈ ಮೊದಲೆ ನಿರ್ಮಿಸಲಾಗಿದ್ದ ಪ್ರಸ್ಥಾನಶಿಬಿರಕ್ಕೆ ಬಂದರು; ಆ ಶಿಬಿರವು " ಪ್ರಸಿದ್ಧ ದೂಷ್ಯ " (ಉತ್ತಮವಾದ ಬಟ್ಟೆಯಿಂದ ರಚಿತವಾದುದು,) ಆಗಿದ್ದರೂ "ಅದೂಷ್ಯ" (ದೋಷರಹಿತವಾದುದು): "ನಿಶಾಂತಸ್ಫಾರ ಚಾರುತ್ವ" (ಸೈನಿಕರ ನಿವಾಸಗಳ ಬಾಹುಲ್ಯದಿಂದ ಅಂದವಾದುದು) ಆಗಿದ್ದರೂ " ಅನಿಶಾಂತಸ್ಫಾರ ಚಾರುತ್ವ" (ಸತತವಾಗಿ ಹೆಚ್ಚುತ್ತಿರುವ ಚಟುವಟಿಕೆಗಳಿಂದ ಸುಂದರವಾದುದು): "ಬಲ ವೀರಜನೋಪೇತ" (ಸಮರ್ಥರಾದ ವೀರರಿಂದ ಒಡಗೂಡಿದುದು) ಆಗಿದ್ದರೂ "ಅಬಲವೀರಜನೋಪೇತ" (ಅಸಹಾಯಶೂರರಾದ ಯೋಧರಿಂದ ಒಡಗೂಡಿದುದು) ಮತ್ತು "ವಿಶಾಲಪರಿಧಿ" (ವಿಸ್ತಾರವಾದ ಆವರಣವುಳ್ಳುದು) ಆಗಿದ್ದರೂ "ಅವಿಶಾಲಪರಿಧಿ"(ಸುತ್ತಲೂ ಕಂಬಳಿಗಳ ಆವರಣವುಳ್ಳುದು) ಆಗಿತ್ತು. ಆ ಶಿಬಿರವನ್ನು ಪ್ರವೇಶಿಸಿ

ಪ್ರಸ್ಥಾನಶಿಬಿರಮಂ ಪೊಕ್ಕು ಯಥೋಚಿತಪ್ರಸಂಗದಿನಂದಿನ ದಿವಸಮಂ ಕಳಿಪಿ ಮಱುದಿವಸಂ ಮಿಳಿತ ಮೌಳಿಭೃತಕಶ್ರೇಣಿಮಿತ್ರಾಮಿತ್ರಾಟವಿಕ ಬಹಳ ಬಲಸಮೇತಂ ನಡೆವಾಗಳ್

ಸುವಿವೇಕಾಕೃತಿ ಮಂಗಳಾವಸರಯೋಗ್ಯತ್ವಂ ಲಸದ್ರಾಜಚಿ ।
ಹ್ನವಿಶೇಷೋನ್ನತಿ ನಿಮ್ಮೊಳಂ ಸಮನಿಕುಂ ಬನ್ನಿಂ ಜಡವ್ಯಾಪ್ತಿ ಪಿಂ ॥
ಗುವುದರ್ಕೆಂದು ಸಮುದ್ರಶಂಖನಿಕರಂಗಳ್ಗಂದು ಪೇೞ್ವಂದದಿಂ ।
ಶಿವಿರಾಭ್ಯುತ್ಥಿತಕಾಹಳಾಘನರವಂ ಮುಟ್ಟಿತ್ತು ದಿಕ್ಪಾರಮಂ ॥ ೧೮

ಎನ್ನಂದದೆ ತನಗರಸ ।
ತ್ವನ್ನಿತ್ಯಮೆನುತ್ತೆ ಬೆಸೆದ ಪೃಥ್ವೀಪಾಲಂ ॥
ಗಿನ್ನರಿದಾಯ್ತೆಂದಾಕಾ ।
ಶನ್ನಗುವಂತಾಯ್ತನೂನಭೇರೀಧ್ವಾನಂ ॥ ೧೯

ನೆರೆದೇೞ್ತಂದತ್ತು ಕಲ್ಪೋಪರಮಯಮಸಮೂಹೋದ್ಭಟಂ ಭರ್ಮವರ್ಮೋ ।
ತ್ಕರದೀಪ್ತಿವ್ಯಾಪ್ತಮುದ್ಯದ್ಬಿರುದನಿಗಡಝುಂಕಾರಘೋರಂ ಮಹಾಸಂ ॥
ಗರಕೇಳೀಲಾಲಸಂ ಭಾಸುರಬಹುವಿಧಮುಕ್ತಾವಮುಕ್ತಾ ವಿಮುಕ್ತೋ ।
ದ್ಧರದೋರ್ಯಂತ್ರಪ್ರಮುಕ್ತಾಯುಧನಿಧಿಗಣನಾಶೂನ್ಯ ಪಾದಾತಸೈನ್ಯಂ ॥ ೨೦

ಉಚಿತವಾದ ಕಾರ್ಯಗಳಿಂದ ಆ ದಿವಸವನ್ನು ಅಲ್ಲಿ ಕಳೆದು, ಮರುದಿನ ವೇತಾಲ, ಭೃತಕ, ಶ್ರೇಣಿ, ಮಿತ್ರ, ಅಮಿತ್ರ ಮತ್ತು ಆಟವಿಕ ಎಂಬ ಆರು ಬಗೆಯ ಸೈನ್ಯಸಹಿತವಾಗಿ ನಡೆದರು. ೧೮. "ಬುದ್ಧಿವಂತರ ಕೈಯಲ್ಲಿರುವ ಶೋಭೆ, ಮಂಗಲಪ್ರಸಂಗ ಯೋಗ್ಯತೆ ಹಾಗು ರಾಜಚಿಹ್ನಗಳಾಗಿ ವಿಜೃಂಭಿಸುವ ಅಗ್ಗಳಿಕೆ ನಿಮಗೂ ಲಭಿಸುವುದು; ನಿಮ್ಮ ಜಡವ್ಯಾಪ್ತಿ (೧. ನೀರಿನಲ್ಲಿ ಇರುವುದು, ೨. ನಿಷ್ಕ್ರಿಯವಾದ ಆಲಸ್ಯವೃತ್ತಿ) ತೊಲಗುವುದು' ಎಂದು ಸಮುದ್ರ ಶಂಖಗಳಿಗೆ ಹೇಳುತ್ತಿರುವುವೊ ಏನೊ ಎಂಬಂತೆ ಶಿಬಿರದಿಂದ ಹೊರಟ ಕಾಳೆಗಳ ಮಹಾಧ್ವನಿ ದಿಗಂತಗಳನ್ನು ಮುಟ್ಟಿತ್ತು. ೧೯. ನನ್ನಂತೆ ತನಗೂ 'ಅರಸತ್ವ' (೧. ವೇಗಶಾಲಿಗಳಾದ ಪಕ್ಷಿ, ಖೇಚರರು, ವಿಮಾನ ಮೊದಲಾದುವನ್ನು ಹೊಂದಿರುವಿಕೆ, ೨. ದೊರೆತನ; ರಾಜತ್ವ) ನಿತ್ಯವೆಂದು ಬಿಂಕ ತಾಳಿದ ಪೃಥ್ವೀಪಾಲನಿಗೆ ಇನ್ನು ಅದು ದಕ್ಕಲಾರದು' ಎಂದು ಆಕಾಶವು ನಗುತ್ತಿರುವುದೊ ಏನೊ ಎಂಬಂತೆ ಘನವಾದ ಭೇರೀನಿನಾದ ಹೊಮ್ಮಿತು. ೨೦. ತೊಟ್ಟುಕೊಂಡ ಚಿನ್ನದ ಕವಚಪ್ರಭೆಯಿಂದ ಬೆಳಗುತ್ತ, ಬಿರುದಿನ ಕಾಲ್ಬಳೆ ಗಳನ್ನು ಝಣಝಣಿಸುತ್ತ ಮಹಾ ಸಂಗ್ರಾಮಕೇಳಿಯ ಉತ್ಕಂಠತೆಯಿಂದ, ಮಿರಿ ಮಿರಿ ಮಿಂಚುತ್ತಿರುವ ಮುಕ್ತ (ಬಾಣ ಮೊದಲಾದ ಅಸ್ತ್ರ) ಅವಮುಕ್ತ, (ಕಠಾರಿ, ಖಡ್ಗ ಮೊದಲಾದ ಆಯುಧ), ವಿಮುಕ್ತ (ಈಟಿ ಭರ್ಜಿ ಮೊದಲಾದವು), ಕೈಗಳಿಂದಲೂ, ಯಂತ್ರಗಳಿಂದಲೂ ಎಸೆಯುವ ಗುಂಡು ಮೊದಲಾದುವುಗಳ ಹೀಗೆ ಅನೇಕ ಬಗೆಯ ಶಸ್ತ್ರಾಸ್ತ್ರಗಳೊಡನೆ ಸನ್ನದ್ಧರಾಗಿ ಕಲ್ಪಾಂತಯಮ ಸಮೂಹ ದಂತೆ ಭೀಕರರೂ, ಪ್ರಚಂಡ ಯೋಧರೂ ಆದ ಅಸಂಖ್ಯ ಪದಾತಿಗಳ ಸೈನ್ಯ ನೆರೆದು

ರಥಕಲ್ಪಾನ್ವಿತಶೂರಸಾರಥಿಸನಾಥಂ ವಿಭ್ರಮನ್ನೇಮಿನಿ ।
ರ್ಮಥಿತಾನೇಕಶಿಲಾತಳಂ ಚಪಲಯುಗ್ಯಾಶ್ವಪ್ಲುತಾವೇಗವೇ ॥
ಪಥುಮತ್ಕೇತುಪಟಂ ತನುತ್ರಶಿತಶಸ್ತ್ರಾಸ್ತ್ರಾದಿತಂತ್ರೋತ್ಕರ ।
ಗ್ರಥಿತಂ ಬಂದುದು ರಥ್ಯಮಾತ್ಯರಥಿನೀಸೈನ್ಯಪಥ್ಯಶೋಭಾವಹಂ ॥ ೨೧

ಘನಘೋಷಾತ್ಯಂತಭೀಷ್ಮಂ ವಿಧೃತವಿಲಸದಾವರ್ತಜಾಲಂ ಸ್ಫುರತ್ಫೇ ।
ನನಿಕಾಯೋದಾರಮುದ್ಯತ್ಕಿರಣಮಣಿಗಣಾಯೋಗರಮ್ಯಂ ಬೃಹತ್ಸ ॥
ತ್ವನಿಯುಕ್ತಂ ವ್ಯಕ್ತಮತ್ಸ್ಯಪ್ಲುತಗತಿ ವಿಚರದ್ವಾಡವಂ ಚಾರುವಾರಾ ।
ಶಿನಿಕಾಶಂ ತನ್ಮಯಾಶಂ ನಡೆದುದು ವಿತತಾಶ್ವೀಯಮುರ್ವೀಶ್ವರೀಯಂ ॥ ೨೨

ಬಲವಚ್ಚಾಪಧರಂ ಸಭದ್ರಮೃಗಸಂದೋಹಂ ಗಳದ್ಗಂಡಮಂ ।
ಡಲವಿಭ್ರಾಜಿ ಸಮುಚ್ಚಲತ್ಕದಳಿಕಂ ಪ್ರೋದ್ವಂಶಮುಕ್ತಾಸಮು ॥
ಜ್ಜ್ವಲದಂತಂ ದೆಸೆಯಂ ಮುಸುಂಕಿ ನಡೆದತ್ತಂತಂದು ತದ್ಭೂರಿಭೂ ।
ತಲಪಾಲೋದ್ಧುರಸಿಂಧುರೋತ್ಕರಚರದ್ವ್ಯಾನೀಲಭೂಭೃತ್ಕುಲಂ ॥ ೨೩

ಧರೆ ಕರಿಕುಳಮಶ್ವೋತ್ಕರ ।
ಮರದಚಯಂ ಖಳ್ಗಿ ಸಮುದಯಂ ನಡೆವೆಡೆಯೊಳ್ ॥
ಕರಿಮಯಮಶ್ವಮಯಂ ಮ ।
ತ್ತರದಮಯಂ ಖಳ್ಗಿಮಯಮದೆನಿಸಿದುದನಿಶಂ ॥ ೨೪

ಬಂದಿತು. ೨೧. ರಥಸೈನ್ಯದ ಮುಖ್ಯಾಧಿಕಾರಿಯೊಡನೆ ಅನೇಕ ಶೂರ ಸಾರಥಿಗಳನ್ನೊಡಗೂಡಿಕೊಂಡು, ಅಂಗಕವಚ, ಶಸ್ತ್ರಾಸ್ತ್ರಾದಿ ಸೈನ್ಯ ಸಾಮಗ್ರಿಗಳಿಂದ ಸಮೃದ್ಧವಾಗಿ, ರಥಗಳ ಸೇನಾಪಡೆಯು ವೇಗಶಾಲಿಗಳಾದ ಕುದುರೆಗಳನ್ನು ಹೂಡಿ, ತನ್ನ ಗಾಲಿಗಳಿಂದ ಕಲ್ಲುಗಳನ್ನು ಹುಡಿಗುಟ್ಟುತ್ತ ಬಂದಿತು. ೨೨. ತಮ್ಮ ಪ್ರಚಂಡವಾದ ಹೇಷಾರವದಿಂದ ಭೀಕರವಾಗಿ, ಶೋಭಾಯಮಾನವಾದ (ಸುಲಕ್ಷಣದ) ಸುಳಿಗಳನ್ನೊಡಗೊಂಡ, ಬಾಯಲ್ಲಿ ನೊರೆಯನ್ನು ಸೂಸುತ್ತ, ರತ್ನಾಭರಣಗಳ ಕಾಂತಿಯಿಂದ ಶೋಭಿಸುತ್ತ, ಪುಟನೆಗೆದು ಓಡುತ್ತಿರುವ, ಮಹಾಸತ್ವಶಾಲಿಗಳಾದ ಕುದುರೆಗಳ ಸೈನ್ಯವು ಸಮುದ್ರಸದೃಶವಾಗಿ ದಿಕ್ಕುಗಳೆಲ್ಲ ತುಂಬಿಹೋಗುವಂತೆ ವಿಸ್ತಾರವಾಗಿ ಬಂದಿತು. ೨೩. ತಮ್ಮ ಗಂಡಸ್ಥಲಗಳಿಂದ ಮದೋದಕವನ್ನು ಸುರಿಸುತ್ತ, ಜಾತಿಮುತ್ತುಗಳಂತೆ ಬೆಳ್ಳಗೆ ಮಿರುಗುವ ಕೋರೆಗಳಿಂದ ಒಪ್ಪುತ್ತ ಬೆನ್ನ ಮೇಲೆ ಉನ್ನತವಾದ ಕದಳಿಕಾಧ್ವಜಗಳನ್ನು ಅಳವಡಿಸಿಕೊಂಡು ಬಲಿಷ್ಠರಾದ ಧನುರ್ಧಾರಿಗಳ ಸಮೇತವಾಗಿ, ಜಂಗಮ ನೀಲಪರ್ವತಗಳಂತೆ ದಿಕ್ಕುಗಳನ್ನೆಲ್ಲ ಆಕ್ರಮಿಸುತ್ತ 'ಭದ್ರ' ಮತ್ತು 'ಮೃಗ' ಜಾತಿಗೆ ಸೇರಿದ ಆನೆಗಳ ಅರಸುಪಡೆ ನಡೆದು ಬಂದಿತು. ೨೪. ಭೂಮಿಯೆಂಬುದು ಆನೆಗಳಿಗೂ, ಕುದುರೆಗಳಿಗೆ, 'ಅರದ' (ಗಲಗು, ಅಥವಾ ಆಪು) ಮತ್ತು 'ಖಳ್ಗಿ' (ಖಡ್ಗ ಮೃಗ) ಗಳಿಗೆ ಆಶ್ರಯವೆಂಬುದೇನೋ ಸರಿ, ಆದರೆ ಈ ಸೈನ್ಯ ನಡೆವಾಗ ಭೂಮಿಯೆಂಬುದೆಲ್ಲ ಆನೆಗಳಿಂದಲೇ ತುಂಬಿದುದು, ಅಶ್ವಮಯವಾದುದು, 'ಅರದಮಯ' (ರಥಗಳಿಂದಲೆ ತುಂಬಿದುದು) ಮತ್ತು 'ಖಳ್ಗಿ' (ಖಡ್ಗಧಾರಿ)

ಜವದಿಂದಾಗಸದೊಳ್ ಪಾ ।
ಱುವ ಪಕ್ಕಿಯುಮಂತುಗಾಣಲಣಮಾಱದೆ ತೇಂ ॥
ಗುವುದು ಪತಾಕಾಗ್ರದೊಳೆನೆ ।
ಪವಣಿಸಲಾನಱಿಯೆನತುಳಮಮಂ ತದ್ಬಲಮಂ ॥ ೨೫

ಅದಲ್ಲದೆಯುಂ

ಪಱಿಯಿಗೆ ಮಿಂಚನೇಳಿಸೆ ವಿಭೂಷಣಕಾಂತಿ ಸುರೇಂದ್ರಚಾಪಮಂ ।
ಪಱಿಯೆ ಗಭೀರದುಂದುಭಿರವಂ ಮೊಳಗಂ ಮಿಗೆ ಮೇಘಡಂಬರಂ ॥
ಘಟಿಯಿಸೆ ಮೇಘಡಂಬರಮನೇಂ ಕಱಿದತ್ತೊ ವಿಭೀತಿಯೆಂಬ ಪೆ ।
ರ್ಮೞೆಯನರಾತಿಗಾಗಮನಿಮಂಬುಧರಾಗಮದಂದವೆಂಬಿನಂ ॥ ೨೬

ಅಮಿತಚತುರಂಗಸೇನಾ ।
ಗಮನದೊಳುತ್ತುಂಗಜಂಗಮಪ್ರಾಕಾರ ॥
ಭ್ರಮಮಂ ಪಡೆದುದು ತತ್ಪದ ।
ಸಮುತ್ಥಿತಂ ಬಳಸಿ ಬಹಳಧೂಳೀಪಟಲಂ ॥ ೨೭

ಮತ್ತಂ

ಇದಘರ್ಮರ್ತೂರ್ಜಿತಂ ಭೂಗೃಹಮಿದನನುರಾಗಾಂಧಪಾತಾಳಮಂತ ।
ಲ್ತಿದನಗ್ನಿಪ್ರೋತ್ಥಧೂಮಾವಳಿಯಿದಜಲನಿಷ್ಯಂದಿಮೇಘಾಗಮಂ ತಾ ॥
ನಿದನುದ್ಯತ್ತಾರಕೌಘಂ ಬಹಳನಿಶೆಯೆನಿಪ್ಪಂತು ಪರ್ವಿತ್ತು ಸೇನಾ ।
ಪದಪಾತೋದ್ಧೂತಮುತ್ಪಾದಿತದಿನಕೃದಪೂರ್ವೋಪರಾಗಂ ಪರಾಗಂ ॥ ೨೮

ಗಳಿಂದ ಇಡಿಕಿರಿದುದು ಎನಿಸಿತು. ೨೫. ಆಕಾಶದಲ್ಲಿ ವೇಗವಾಗಿ ಹಾರಾಡುವ ಪಕ್ಷಿ ಈ ಸೈನ್ಯ ಪತಾಕೆಗಳ ವಿಸ್ತಾರವನ್ನು ದಾಟಿ ಹೋಗಲಾರದೆ, ಯಾವುದೊ ಒಂದು ಧ್ವಜದ ತುದಿಯಲ್ಲಿ ಕುಳಿತು ಬಿಡುವುದು ಎಂದರೆ ಈ ಬಲದ ಅಸಾಮಾನ್ಯತೆಯನ್ನು ಏನೆಂದು ಹೇಳಲಿ? ಅದಲ್ಲದೆ– ೨೬. ಧ್ವಜಗಳು ಮಿಂಚನ್ನು ಹೀಯಾಳಿಸಲಾಗಿ, ಆಭರಣ ಪ್ರಭೆ ಇಂದ್ರಧನುವನ್ನು ಧಿಕ್ಕರಿಸಲಾಗಿ, ಗಂಭೀರವಾದ ಭೇರೀ ಧ್ವನಿ, ಗುಡುಗನ್ನು ಮೀರಲಾಗಿ, 'ಮೇಘಡಂಬರ'ವೆಂಬ ಅಲಂಕಾರದ ಕೊಡೆಗಳು ಮೋಡಗಳ ಸಮೂಹವನ್ನೆ ಉಂಟುಮಾಡಲಾಗಿ, ಮಳೆಗಾಲವೆ ಬಂದಿತೆಂಬಂತೆ ಶತ್ರುಗಳಿಗೆ ಭಯದ ಮಳೆಯನ್ನು ಕರೆಯುತ್ತ ಆ ಸೈನ್ಯ ಹೊರಟಿತು. ೨೭. ಅಸಂಖ್ಯವಾದ ಆ ಚತುರಂಗ ಸೈನ್ಯವು ನಡೆದಾಗ ಅದರ ಪಾದಹತಿಯಿಂದೆದ್ದ ಅದ್ಭುತವಾದ ಧೂಳಿಯ ರಾಶಿಯು, "ಇದೊಂದು ನಡೆದಾಡುವ ಕೋಟೆ' ಎಂಬ ಭ್ರಮೆಯನ್ನುಂಟುಮಾಡಿತು ಮತ್ತು– ೨೮. "ಇದೇನು ನೆಲ ಮನೆಯೊ ? ಅಲ್ಲ ಏಕೆಂದರೆ ಈಗ ಬೇಸಗೆಕಾಲವಲ್ಲ; ಪಾತಾಳವೆ? ಕೆಂಬಣ್ಣದ ಕಾಂತಿಯಿಲ್ಲ; ಇದು ಬೆಂಕಿಯಿಲ್ಲದೆ ಎದ್ದ ಹೊಗೆಯ ಹಬ್ಬುಗೆ, ಮಳೆಯಿಲ್ಲದ ಮೋಡಗಳ ನೆರವಿ, ನಕ್ಷತ್ರವಿಲ್ಲದ ಕಗ್ಗತ್ತಲ ರಾತ್ರಿ"– ಎಂಬಂತೆ ಸೇನೆಯ ಪಾದಘಾತದಿಂದ ಎದ್ದ ಅಪಾರವಾದ ಧೂಳಿ, ಸೂರ್ಯನಿಗೊಂದು ಅಪೂರ್ವವಾದ ಗ್ರಹಣದಂತೆ ಆವರಿಸಿತು.

ಆತತಸೈನ್ಯರಜಸ್ಸಂ ।
ಜಾತತಮೋವಿಕೃತಿ ತೂಳ್ದಿದುದು ಸತ್ವಮುಮಂ ॥
ಖ್ಯಾತರಿಪುಭೂಮಿಪಾಲ ।
ವ್ರಾತಕ್ಕಾಶ್ರಯವಿಶೇಷಮೇಂ ಕೇವಲಮೇ ॥ ೨೯

ಆಗಳ್

ಬಿಸಿಲಂ ನಾನಾತಪತ್ರಂ ಮಸುಳಿಸೆ ಸಿತಖಡ್ಗಪ್ರಭಾಮಂಡಲಂ ಕೊ ।
ರ್ವಿಸೆ ರೋದೋವಾತಮಂ ಕೇತುತತಿ ತೆಗೆಯೆ ತಚ್ಚಾಮರೋತ್ಥಾನಿಲಂ ಪ ॥
ರ್ವಿಸೆ ಮಾರ್ಗಾನೇಕತೋಯಾಶಯಮನುರುರಜಂ ಪೀಱೆ ದಾನಪ್ಲವಂ ಪೊ ।
ರಿಸೆ ತೋಱೆತ್ತೆತ್ತಮಾದಂ ಹರಣಭರಣಚಾತುರ್ಯಮಂ ಚಾತುರಂಗಂ ॥ ೩೦

ಅದಲ್ಲದೆಯುಮಾ ವಾಹಿನೀವ್ಯೂಹಂ ವಾಹಿನೀಪ್ರವಾಹದಂತಸ್ಸ್ಥಿತರಾಜಹಂಸಸನಾಥಮುಂ, ವಜ್ರಾಕರದಂತನೇಕಪವಿತತಿವಿಳಸಿತಮುಂ, ಲಂಕಾಧಿಪತಿಯಂತತಿಪ್ರಬಲಬಾಹಾವಳೀವಳಯಿತಮುಂ, ಶಿಶುಮುಖದಂತರದಪಙ್ಕ್ತಿಪರಿಕಲಿತಮುಂ, ವರ್ಷಾಗಮಸಮಯದಂತೆ ಬಹಳತರವಾರಿಧರಪರೀತಮುಂ, ಶರತ್ಕಾಲದಂತುಗ್ರಚಂಡಕರಭೋತ್ಕರಮುಂ, ಪುಂಡರೀಕಷಂಡದಂತೆ ಮುಕ್ತಾವದಾತಪತ್ರವಿಸ್ತೃತಮುಂ, ವಿದ್ಯಾಧರಾನ್ವಯದಂತೆ ಪರಿಪ್ರಾಪ್ತಜೀವಮೂತಕೇತುಸಮುದಯಮುಂ, ವಸುದೇವ

೨೯. ವಿಸ್ತಾರವಾಗಿ ಆವರಿಸಿದ ಆ ಪಡೆಯ ಕಾಲ್ಧೂಳಿಯಿಂದಾದ ಕಗ್ಗತ್ತಲೆಯು ಪ್ರಖ್ಯಾತರಾದ ಶತ್ರುರಾಜನ ಸಮೂಹದ ಉತ್ಸಾಹವನ್ನು ಉಡುಗಿಸಿ ಬಿಟ್ಟಿತು. ಮಹದಾಶ್ರಯವೆಂದರೇನು ಸಾಮಾನ್ಯವೆ ? (ದೂಳಿ ತನ್ನಷ್ಟಕ್ಕೇ ಅಸಮರ್ಥವಾದರೂ, ಈ ರಾಜನ ಮಹಾ ಆಶ್ರಯದಿಂದ ಅಂತಹ ಅದ್ಭುತ ಪ್ರಭಾವವನ್ನು ಪಡೆಯಿತು) ಆಗ– ೩೦. ಸೇನಾಪಡೆಯಲ್ಲಿರುವ ನಾನಾ ಬಗೆಯ ಕೊಡೆಗಳು ಬಿಸಿಲನ್ನು ಮಂಕುಗೊಳಿಸಿದುವು; ಆದರೆ ಖಡ್ಗಗಳ ಧವಳಪ್ರಭೆ ಅದನ್ನು ಪ್ರಖರಗೊಳಿಸಿತು. ಆಕಾಶದಲ್ಲಿಯ ಗಾಳಿಯನ್ನೆಲ್ಲ ಧ್ವಜಗಳು ತಡೆದು ಬಿಟ್ಟುವು; ಆದರೆ ಚಾಮರಗಳು ಬೀಸಿ ನಿಂದ ಗಾಳಿಗೆ ಬಲಕೊಟ್ಟುವು. ಮಾರ್ಗದಲ್ಲಿರುವ ಹಲವಾರು ಜಲಾಶಯಗಳನ್ನು ಕಾಲ್ಧೂಳಿ ಹೀರಿಬಿಟ್ಟಿತು; ಆದರೆ ಆನೆಗಳ ಮದೋದಕಧಾರೆಗಳು ಅವುಗಳನ್ನು ಮತ್ತೆ ತುಂಬಿಸಿದುವು. ಹೀಗೆ ಎತ್ತೆತ್ತಲೂ ಚತುರಂಗಬಲವು 'ಹರಣ' ಮತ್ತು 'ಭರಣ' ಎಂಬೆರಡನ್ನೂ ಏಕಕಾಲಕ್ಕೆ ಚತುರತೆಯಿಂದ ನಡೆಸಿತು. ವ॥ ಅದಲ್ಲದೆ ಆ ಸೈನ್ಯವ್ಯೂಹವು ನದೀಪ್ರವಾಹದಂತೆ "ಸ್ಥಿತರಾಜಹಂಸಸನಾಥ" (೧. ರಾಜಹಂಸಗಳಿಗೆ ನೆಲೆಯಾಗಿರುವುದು. ೨. ರಾಜಶ್ರೇಷ್ಠನಿಂದ ರಕ್ಷಿತವಾದುದು) ; ವಜ್ರದ ಗಣಿಯಂತೆ 'ಅನೇಕಪವಿತತಿ' (೧. ಅನೇಕ ವಜ್ರಸಮೂಹ ೨. ಆನೆಗಳ ಸಮುದಾಯ) ಗಳಿಂದ ಶೋಭಿಸುವುದು; ರಾವಣನಂತೆ ಅತಿ ಬಲಿಷ್ಠವಾದ ಅನೇಕ ಬಾಹುಗಳಿಂದ ಕೂಡಿದುದು; ಶಿಶುವಿನ ಬಾಯಿಯಂತೆ "ಅರದಪಂಕ್ತಿ ಪರಿಕಲಿತ'

ನಂತೆ ಸುಪ್ರಸಿದ್ಧಾನಕದುಂದುಭಿಧ್ವನಿಯುಂ, ನಿಶಾಸರೋವರದಂತುಜ್ಜೃಂಭಿತಕುವಲಯರಜಃಪಿಹಿತ ಪುಷ್ಕರಮುಂ, ದಿನಕರೋದಯದಂತೆ ಮಂಡಲಾಗ್ರರುಚಿನಿಚಿತದಿಙ್ಮುಖಮುಂ, ಕಾಳಿಯ ಸರ್ಪನಂತೆ ದಾನವಾರಿವಿಹಿತಪದ್ಧತಿಯುಮೆನಿಸಿ ಚತುರಂಗಬಲಮನೆಳೆ ಬಳೆದಂತೆಯುಂ, ಆಗಸಂ ಕಱಿದಂತೆಯುಂ, ದೆಸೆ ಬೆಸಲಾದಂತೆಯುಂ, ಕತಿಪಯಪ್ರಯಾಣಂಗಳಂ ನಡೆಯೆನಡೆಯೆ

> ಮಣಿಕೂಟಕೋಟಿಯೊಳ್ ದಿನ ।
> ಮಣಿ ಕೂಟಂಬೆತ್ತನೆನಿಸಿ ಬಳೆದುನ್ನತಿಯಿಂ ॥
> ಮಣಿಕೂಟಮೆಂಬ ಶೈಲಾ ।
> ಗ್ರಣಿ ಕಣ್ಬೊಲನಾಯ್ತು ಚತುರಚೂಡಾಮಣಿಯಾ ॥ ೩೧

(೧. ಹಲ್ಲಿಲ್ಲದೆ ಶೋಭಿಸುವುದು, ೨. ರಥಗಳ ಸಾಲುಗಳಿಂದ ಕೂಡಿದುದು) ; ಮಳೆಗಾಲದಂತೆ, "ಬಹಳತರವಾರಿಧರಪರೀತ" (೧. ಅತಿಶಯವಾದ ಮೋಡ ಗಳಿಂದ ಆವರಿಸಿದುದು ೨. ಅನೇಕ ಖಡ್ಗಧಾರಿಗಳಿಂದ ಕೂಡಿದುದು); ಶರತ್ಕಾಲದಂತೆ "ಉಗ್ರಚಂಡ ಕರಭೋತ್ಕರ" (೧. ಚುರುಕಾದ ಸೂರ್ಯಕಿರಣ ಸಮೂಹವುಳ್ಳದು, ಕಡುಬಿಸಿಲುಳ್ಳದು ೨. ಭೀಕರವೂ, ಬಲಶಾಲಿಗಳೂ ಆದ ಆನೆಗಳ ಸಮೂಹವನ್ನುಳ್ಳದು) ; ಕಮಲ ಸಮೂಹದಂತೆ "ಅವದಾತ ಪತ್ರವಿಸ್ತೃತ" (೧. ಸುಂದರವಾದ ಎಸಳುಗಳುಳ್ಳದು. ೨. ಹೊಳೆಯುವ ಖಡ್ಗಗಳುಳ್ಳದು) ವಿದ್ಯಾಧರವಂಶದಂತೆ "ಪರಿಪ್ರಾಪ್ತಜೀಮೂತಕೇತುಸಮುದಯ (೧. ಜೀಮೂತ ವಾಹನನೆಂಬ ಪ್ರಸಿದ್ಧರಾಜಕುಮಾರನಿಂದ ಏಳ್ಗೆ ಹೊಂದಿದುದು. ೨. ಆನೆಗಳ ಮೇಲೇರಿಸುವ ಧ್ವಜಗಳ ಸಮೂಹವುಳ್ಳದು) ವಸುದೇವನಂತೆ ಬಹುಪ್ರಸಿದ್ಧವಾದ "ಆನಕದುಂದುಭಿಧ್ವನಿ" (೧. ಆನಕದುಂದುಭಿಯೆಂಬ ಹೆಸರುಳ್ಳವನು. ೨. ಭೇರಿ ಹಾಗು ನಗಾರಿಗಳ ಧ್ವನಿಗಳಿಂದ ಕೂಡಿದುದು); ರಾತ್ರಿ ಕಾಲದ ಸರೋವರದಂತೆ "ಉಜ್ರೃಂಭಿತ ಕುವಲಯ ರಜಃಪಿಹಿತ ಪುಷ್ಕರ" (೧. ಅರಳಿದ ನೈದಿಲೆಗಳ ಪರಾಗದಿಂದ ಕೆಂದಾವರೆಗಳನ್ನೆಲ್ಲ ಮುಸುಕಿರುವುದು. ೨. ನೆಲದಿಂದ ಮೇಲೆದ್ದ ದೂಳಿಯಿಂದ ಆಕಾಶವನ್ನೆಲ್ಲ ಮುಚ್ಚಿರುವುದು): ಸೂರ್ಯೋದಯದಂತೆ "ಮಂಡಲಾಗ್ರರುಚಿನಿಚಿತದಿಙ್ಮುಖ" (೧. ಸೂರ್ಯಬಿಂಬದ ಧಾರಾಪ್ರಭೆಯಿಂದ ದಿಗಂತವನ್ನೆಲ್ಲ ಬೆಳಗಿದುದು. ೨. ಅಡಾಯುಧದ ಹೊಳಪಿನಿಂದ ದಿಗಂತವನ್ನೆಲ್ಲ ಬೆಳಗಿದುದು) ; ಕಾಲಿಯ ಸರ್ಪದಂತೆ "ದಾನವಾರಿವಿಹಿತಪದ್ಧತಿ" (೧. ಕೃಷ್ಣನ ಪಾದಘಾತವನ್ನು ಪಡೆದುದು. ೨. ದಾರಿಗುಂಟ ಮದೋದಕವನ್ನು ಸುರಿಸಿದುದು) – ಎನಿಸಿತು. ಈ ಚತುರ್ಬಲವನ್ನು ಭೂಮಿಯೆ ಬೆಳಸಿತೊ, ಆಕಾಶವೆ ಸುರಿಸಿತೊ ಅಥವಾ ದಿಕ್ಕುಗಳೆ ಹೆತ್ತುವೊ ಏನೊ ಎಂಬಂತೆ ಅಪಾರವಾದ ಪಡೆಯೊಡನೆ ಕೆಲವು ಪಯಣಗಳಲ್ಲಿ ಮುನ್ನಡೆಯಲಾಗಿ– ೩೧. ಇದರ ರತ್ನಮಯಶಿಖರದೊಡನೆ ಸೂರ್ಯನು ಬೆರೆತುಕೊಂಡನೊ ಏನೊ ಎಂಬಷ್ಟು ಎತ್ತರವಾಗಿ ಬೆಳೆದು ನಿಂತ

ಆ ನಗಚೂಳದೊಳ್ ಶಬರಬಾಲಕಿಯರ್ ವಿಧುಬಿಂಬದಲ್ಲಿ ತ।
ಮ್ಮಾನನಮಂ ನಿರೀಕ್ಷಿಸಿ ಮದಾಂಬುಲಲಾಮಮನುಯ್ದು ಬಿಂಬಮ॥
ಧ್ಯಾನನದಲ್ಲಿ ಬಿತ್ತರಿಸೆ ಮೌಗ್ಧ್ಯದೊಳಾಯ್ತು ತದಂಕಮೆಂಬೆನಿ।
ನ್ನಾನಜೆಯೆಂ ವಲಂ ನೆರೆಯೆ ಬಿಚ್ಚಳಿಸಲ್ಕದಱುಚ್ಚವೃತ್ತಿಯಂ॥ ೩೨

ಸುರದಂಪತಿತತಿ ಸಗ್ಗದೊ।
ಳಿರಲೊಲ್ಲದೆ ಬಂದು ತನ್ನ ಬಹುರತ್ನಗೃಹೋ॥
ದರದೊಳ್ ಕ್ರೀಡಿಪುದು ನಿರಂ।
ತರಮೆನೆ ಗಿರಿ ತವದ ಸುಖದ ತಾಯ್ವನೆಯಾಯ್ತೋ॥ ೩೩

॥ ಮಾಲಿನಿ ॥

ಪುದಿದ ಮಣಿಗಣಾಂಶುಶ್ರೇಣಿ ಸಂವ್ಯಾನಮೆಂಬಂ।
ದದಿನೆಸೆಯೆ ನಿಜಾಗ್ರೋದ್ದೇಶದಿಂ ನಿರ್ಝರಂ ಹಾ॥
ರದವೊಲಿಟೆದು ಚೆಲ್ವಂ ಬೀಱಿ ತೋಱೆತ್ತು ಪೃಥ್ವೀ।
ಸುದತಿಯ ಪೃಥುವಕ್ಷೋಜಾತಮೆಂಬಂತಗೇಂದ್ರಂ॥ ೩೪

ಸಾನುವಿನೊಳೆಱಗಿ ಘನಸಂ।
ತಾನಂ ಕಾರ್ಗಾಲದಲ್ಲಿ ಕಱೆವುದು ಮೇಗಿ॥
ರ್ದಾ ನಗದ ಸಿದ್ಧಕಿನ್ನರ।
ಮಾನಿನಿಯರ್ ಮಱಿಯ ಮಾತನಱಿಯರ್ ಮಱಿದುಂ॥ ೩೫

"ಮಣಿಕೂಟ" ವೆಂಬ ಮಹಾ ಪರ್ವತವೊಂದು ಅರಸನಿಗೆ ಕಂಡಿತು. ೩೨. ಆ ಪರ್ವತ ಶಿಖರದಲ್ಲಿ ವಾಸಿಸುವ ಶಬರಯುವತಿಯರು ಚಂದ್ರಬಿಂಬದಲ್ಲಿ ತಮ್ಮ ಮುಖವನ್ನು ನೋಡಿಕೊಂಡು, ಹಣೆಗೆ ತಿಲಕವಿಟ್ಟುಕೊಳ್ಳಲು ಮದೋದಕದ ಬೊಟ್ಟನ್ನು ತೆಗೆದುಕೊಂಡು ಮುಗ್ಧತೆಯಿಂದ ಚಂದ್ರಬಿಂಬದ ಮಧ್ಯಕ್ಕೇ ತಿಲಕವನ್ನಿಟ್ಟರು. ಅದರಿಂದಲೆ ಚಂದ್ರನಿಗೆ ಆ ಕಲೆಯಾಯಿತು ಎಂದು ಹೇಳುವೆನಲ್ಲದೆ, ಆ ಬೆಟ್ಟದ ಉನ್ನತಿಯನ್ನು ಬೇರೆ ಹೇಗೆ ಬಣ್ಣಿಸಬೇಕೋ ನನಗೆ ತಿಳಿಯದು. ೩೩. ದೇವದಂಪತಿಗಳು ಸ್ವರ್ಗವಾಸವನ್ನು ಮೆಚ್ಚದೆ, ಬಹುರತ್ನಗಳಿಂದ ತುಂಬಿದ ಇದರ ಮಡಿಲಲ್ಲಿಯೆ ಸತತವಾಗಿ ಕ್ರೀಡಿಸುವರು. ಎಂದ ಮೇಲೆ ಈ ಪರ್ವತವು ತೀರದಸುಖಕ್ಕೆ ತವರುಮನೆಯಲ್ಲವೆ ? ೩೪. ರತ್ನಗಳ ದಟ್ಟವಾದ ಕಾಂತಿ ಮೇಲು ಸೆರಗಿನಂತೆ ಶೋಭಿಸಿ, ಶಿಖರದಿಂದ ಹರಿದು ಬರುವ ನಿರ್ಝರಪ್ರವಾಹ ಮುತ್ತಿನ ಹಾರದಂತೆ ಚೆಲುವಾಗಿ ತೋರಲು, ಆ ಹಬ್ಬೆಟ್ಟವು ಭೂರಮಣಿಯ ತೋರಮೊಲೆಯೆಂಬಂತೆ ಕಂಗೊಳಿಸಿತು. ೩೫. ಮಳೆಗಾಲದ ಮೋಡಗಳ ಹಿಂಡುಗಳೆಲ್ಲವೂ ಆ ಬೆಟ್ಟದ ಪಕ್ಕಕ್ಕೆ ಎರಗಿ ಅಲ್ಲಿಯೆ ಮಳೆಗರೆಯುವುವು. ಆದುದರಿಂದ ಮೇಲೆ ವಾಸಿಸುವ ಸಿದ್ಧ ಹಾಗು ಕಿನ್ನರ ಸ್ತ್ರೀಯರಿಗೆ ಮಳೆಯ ಮಾತೇ ತಿಳಿಯದು,

ಮುಡಿದವರ ಕುಸುಮವಿಸರದ ।
ಕಡುಗಂಪಿಂಗೆಳಸುವಳಿಗಳಾಣತಿಯಂ ಮಾ ॥
ಟ್ಪಿಡೆಯೊಳ್ ಕಿನ್ನರ ಕನ್ನೆಯ ।
ರೊಡನೆಯೆ ತಾರೈಸಿ ಜಿಹಣತನಮಂ ಸಲಿಕುಂ ॥ ೩೬

ತರಣಿಕಿರಣಕ್ಕೆ ಭುಗಿಲೆಂ ।
ದುರಿವಿನಮಣಿಸಾನುವಿಂದಮೋಸಜಿಪೆಡೆಯೊಳ್ ॥
ಗುರುಕುಚಭರಕ್ಕೆ ಮನದೊಳ್ ।
ಕರಮೆ ಕನಲ್ವರ್ ತುರಂಗವದನೆಯರದಟಿಕೊಳ್ ॥ ೩೭

ಪ್ರಭವಮಹೌಷಧಿಗಂಧ ।
ಪ್ರಭಾವಪರಿಹೃತವಿಷಾಸ್ಯವಿಷಧರಮಾಲಾ ॥
ನಿಭೃತಮಲಯರುಹವೀಥಿಯೊ ।
ಳಭೀತಮನಮಲ್ಲಿ ವಿಹರಿಕುಂ ಖಚರಯುಗಂ ॥ ೩೮

ಅಂತುಮಲ್ಲದೆಯುಂ
ಕೃತಮರುದಮಂದರಾಗಂ ।
ವಿತತವಿಭವವಿಜಿತಮಂದರಾಗಂ ಕೇಳೀ ॥
ಕೃತಕಾಪ್ಸರೋಗಣಂ ವಿ ।
ಶ್ರುತವಿಮಲತರಾಪ್ಸರೋಗಣಂ ಮಣಿಕೂಟಂ ॥ ೩೯

೩೬. ಮುಡಿದುಕೊಂಡ ಅಚ್ಚ ಹೂಗಳ ಘನಪರಿಮಳಕ್ಕೆ ಮೋಹಿಸಿ ಗುಂಜಾರವದೊಡನೆ ಬರುವ ದುಂಬಿಗಳಿಗೆ ಮೇಳವಾಗಿ ಕಿನ್ನರ ಕನ್ನೆಯರು ತಾರಸ್ವರದಿಂದ ತಾವೂ ಗಾಯನ ಮಾಡುವರು. ೩೭. ಪರ್ವತದ ಸಾನುಪ್ರದೇಶದಲ್ಲಿರುವ ಸೂರ್ಯಕಾಂತಶಿಲೆಗಳು ಸೂರ್ಯಕಿರಣಕ್ಕೆ ಕಾಯ್ದು ಭುಗಿಲೆಂದು ಉರಿಯತೊಡಗುವುವು. ಗಾಬರಿಯಾಗಿ ಆ ಜಾಗದಿಂದ ಬೇಗನೆ ತೊಲಗಿ ಹೋಗಬೇಕೆಂಬ ಕಿನ್ನರಿಯರು (ಹಾಗೆ ಮಾಡಗೊಡದಿರುವ) ತಮ್ಮ ಮೊಲೆಗಳ ಭಾರಕ್ಕೆ ಮನದಲ್ಲಿಯೆ ಮುನಿಯುವರು. ೩೮. ಬೆಟ್ಟದಲ್ಲಿ ಬೆಳೆದ ಮಹಾ ಔಷಧಿಗಳ ವಾಸನೆಯಿಂದಾಗಿ ಹಾವುಗಳ ವಿಷವೆಲ್ಲ ಕಳೆದುಹೋಗಿರುವುದರಿಂದ, ಮಾಲೆಮಾಲೆಯಾಗಿ ಹಾವು ಸುತ್ತಿಕೊಂಡ ಶ್ರೀಗಂಧ ಮರಗಳ ತೋಪಿನಲ್ಲಿ ಖೇಚರ ದಂಪತಿಗಳು ನಿರ್ಭೀತರಾಗಿ ವಿಹರಿಸುವರು. ಅಷ್ಟೆ ಅಲ್ಲದೆ– ೩೯. ಬೀಸುವ ಗಾಳಿಯಿಂದ ಅತಿಶಯವಾದ ಸುಖವನ್ನೊದಗಿಸಿ, ತನ್ನ ಅಧಿಕವಾದ ವೈಭವದಿಂದ ಮಂದರಪರ್ವತವನ್ನು ಮಣಿಕೂಟಗಿರಿ ಸೋಲಿಸುತ್ತಿತ್ತು; ಕೃತಕವಾದ ಕ್ರೀಡಾಸರೋವರಗಳಿಂದ ಅದು "ವಿಶ್ರುತವಿಮಲತರೋಪ್ಸರಗಣ" (೧. ಸುಂದರವಾದ ತಿಳಿನೀರಿನಿಂದ ತುಂಬಿದ ಹಲವಾರು ಕೊಳಗಳುಳ್ಳುದು. ೨. ಪ್ರಸಿದ್ಧರಾದ ಅಪ್ಸರೆಯರನ್ನು

ಮತ್ತಮದು ವಿಚಿತ್ರರತ್ನಶೃಂಗಶಬಲಪ್ರಭಾಸುರಚಾಪಕೋಟಿಚುಂಬಿತಾಂಬರಮುಂ, ಭಾಸುರ ಚಾಪಕೋಟಿಚುಂಬಿತಾಂಬರಮುಂ, ವಿಗಳದವಿರಳನಿರ್ಝರತುಷಾರಕದಂಬಧವಳಿತಾಭಿರಾಮಮುಂ, ಕದಂಬಧವಳಿತಾಭಿರಾಮಮುಂ, ಮಧುರಗೀತಲೀಲಾನುಬದ್ಧಗಂಧರ್ವರಕ್ತಕಂಠೀರವಾಹತಿಪ್ರಭವಮೂರ್ಛಾವೇಗಮೃಗನಿಕಾಯಮುಂ, ಕಂಠೀರವಾಹತಿಪ್ರಭವಮೂರ್ಛಾವೇಗಮೃಗನಿಕಾಯುಮುಂ, ಕುಸುಮಾಪಚಯವಿಚರದ್ವನೇಚರಪ್ರಮದೋತ್ಕಟಕುಂಜರಾರಾಜಿತಮುಂ, ಮದೋತ್ಕಟಕುಂಜರಾರಾಜಿತಮು ಮೆನಿಸಿದುದು ಅದಲ್ಲದೆಯುಂ,

ಬಿಸಿಲುಂ ಬೆಳ್ದಿಂಗಳುಂ ಕಟ್ತಿಲೆಯುಮಿವು ಮಿಥಸ್ಸ್ಪರ್ಧೆಯಂ ಮಾಣ್ದು ಪೋಕ್ಕೊಂ।<br>
ದು ಸಖಿತ್ವಂ ಪೆರ್ಚೆ ನಿಚ್ಚಂ ನೆಲಸಿದುವು ಘನೀಭಾವಮಂ ತಾಳ್ದಿ ತಾಮಿ॥<br>
ಲ್ಲಿ ಸಮಂತೆಂಬನ್ನೆಗಂ ತದ್ಗಿರಿಪರಿಸರದೊಳ್ ರಾಗಮಂ ಚಿತ್ತದೊಳ್ ಪೆ।<br>
ರ್ಚಿಸುತಿರ್ಕುಂ ಪದ್ಮರಾಗಂ ಶಶಿಮಣಿ ಹರಿನೀಲಂ ವಿಲೋಲಾಂಶುಜಾಲಂ॥ ೪೦

ಮಣಿಯಲ್ಲದ ಕಲ್ ಜ್ಯೋತಿ।<br>
ಸ್ತೃಣಮಲ್ಲದ ಪುಲ್ ರಸಾಯಮಲ್ಲದ ಮಡು ಕಾ॥<br>
ರಣಮಲ್ಲದ ಲತೆ ಮುತ್ತಿನ।<br>
ಮಣಲಲ್ಲದ ಪುಣಿಲುಮಿಲ್ಲ ತತ್ಪರಿಸರದೊಳ್॥ ೪೧

ಒಳಗೊಂಡುದು) ಆಗಿತ್ತು. ವ॥ ಅದು ವಿಚಿತ್ರವಾದ ರತ್ನಮಯ ಶಿಖರ ಪ್ರಭೆಯಿಂದ ಆಕಾಶವನ್ನೆಲ್ಲ ಇಂದ್ರಧನುಗಳಿಂದ ತಟ್ಟುತ್ತಿತ್ತು; ಸುಂದರವಾದ ಬಿದಿರ ಕುಡಿಗಳಿಂದ ಆಕಾಶವನ್ನು ಮುದ್ದಿಡುತ್ತಿತ್ತು: ಹರಿಯುತ್ತಿರುವ ಗಿರಿಪ್ರವಾಹಗಳಲ್ಲಿ ಸಿಡಿದೇಳುವ ನೀರ ತುಂತುರುಗಳಿಂದ ಧವಳವರ್ಣವನ್ನು ಸೂಸಿ ಮನೋಹರವಾಗಿತ್ತು; ಕಡವದ ಹೂಗಳಿಂದ ಬೆಳ್ಳಗೆ ಶೋಭಿಸುತ್ತಿತ್ತು; ಇಂಪಾಗಿ ಹಾಡುತ್ತ ವಿನೋದಪಡುವ ಗಂಧರ್ವರ ಮಧುರ ಕಂಠಧ್ವನಿಗೆ ಮರುಳಾಗಿ ಹಿಂಡುಹಿಂಡಾದ ಜಿಂಕೆಗಳು ಅಲ್ಲಿ ಮೈಮರೆಯುತ್ತಿದ್ದುವು; ಸಿಂಹಗಳ ಆಘಾತದಿಂದ ಜಿಂಕೆಗಳ ಸಮೂಹ ಎಚ್ಚರದಪ್ಪಿ ಬೀಳುತ್ತಿತ್ತು; ಹೂಗಳನ್ನಾಯುಲು ಚಲಿಸುತ್ತಿರುವ ಸುಂದರ ಶಬರಕನ್ಯೆಯರಿಂದ ಅದು ಶೋಭಿಸುತ್ತಿತ್ತು; ಮದದಾನೆಗಳಿಂದಲೂ ಶೋಭಿಸುತ್ತಿತ್ತು. ಅದಲ್ಲದೆ– ೪೦. ಬಿಸಿಲು, ಬೆಟ್ಟಗಳು ಹಾಗು ಕತ್ತಲೆ– ಇವು ಮೂರೂ ತಂತಮ್ಮಲ್ಲಿಯೆ ಸುಮ್ಮನೆ ಸ್ಪರ್ಧೆಯೇಕೆಂದು ಅದನ್ನು ಬಿಟ್ಟು, ಅಧಿಕವಾದ ಸಖ್ಯವನ್ನು ಬೆಳಸಿಕೊಂಡು ಘನೀಭೂತವಾಗಿ ಅಲ್ಲಿ ನೆಲಸಿದುವೊ ಏನೊ ಎಂಬಂತೆ ಆ ಬೆಟ್ಟದ ಪರಿಸರದಲ್ಲಿ ಮಾಣಿಕದ, ಚಂದ್ರಕಾಂತದ ಹಾಗು ಇಂದ್ರನೀಲದ ಕಾಂತಿಗಳು ಒಂದಕ್ಕೊಂದು ಹೊಂದಿಕೊಂಡು ಅತ್ಯಂತ ಮನೋಹರವಾಗಿದ್ದುವು. ೪೧. ಅದರ ಪರಿಸರದಲ್ಲಿ ರತ್ನವಲ್ಲದ ಕಲ್ಲಾಗಲಿ, ಜ್ಯೋತಿಸ್ತೃಣವಲ್ಲದ ಹುಲ್ಲಾಗಲಿ, ರಸಮಯುವಲ್ಲದ ಮಡುವಾಗಲಿ, ಚೆಲುವಿಲ್ಲದ (?) ಬಳ್ಳಿಯಾಗಲಿ,

ರತಖಿನ್ನ ಕಿನ್ನರೀಸ ।
ನ್ನತೆಯಂ ತಣ್ಮಲೆದು ಕಳೆದು ಸುಯ್ಯಿಂ ಸುರಭೀ ॥
ಕೃತಮಾಗುತ್ತುಂ ಪ್ರತ್ಯುಪ ।
ಕೃತಿವಡೆವುದು ತದುಪವನದ ಪಾವನಪವನಂ ॥ ೪೨

ಕರಿಣೀಶೃಂಗಾರಮುಗ್ರೋರಗಭಯಮಗದೈರ್ಘ್ಯಾದ್ಭುತಂ ದಸ್ಯುವೀರಂ ।
ಶರಭಾಕಾರೋರುರೌದ್ರಂ ಪ್ಲವಗವಿಕೃತಿಹಾಸ್ಯಂ ಚಮೂರುಪ್ರಣಶ್ಯ ॥
ದ್ರುರುಬೀಭತ್ಸಂ ದವವ್ಯಾಕುಲಖಗಕರುಣಂ ಯೋಗಿರಾಟ್ಛಾಂತಶಾಂತಂ ।
ದೊರೆವೆತ್ತಾಶ್ಚರ್ಯಭೂತಂ ನವರಸಮಯಮಾಯ್ತಾ ನಗೇಂದ್ರೋಪಕಂಠಂ ॥ ೪೩

ಅಲ್ಲಿ

ಅಮಳಶಶಿಕಾಂತಶಶಿಬಿಂ ।
ಬಮಧ್ಯದೊಳ್ ಪೊಳೆವ ತಮ್ಮ ನೆೞಲಿಂ ಮಾಡು ॥
ತ್ತುಮೆ ಲಕ್ಷ್ಮಲಕ್ಷ್ಮಿಯಂ ವಿ ।
ಭ್ರಮದಿಂ ಭ್ರಮಿಯಿಪುದು ವನಚರೀನಿಕುರಂಬಂ ॥ ೪೪

ತುಱುಗಿರೆ ತಮ್ಮ ನುಣ್ದೊಡೆಯ ಕಾಂತಿ ಕವಲ್ತುದೆನಿಪ್ಪ ಸೀರೆಯೊ ।
ಳ್ನಿಱಿ ನವವಿದ್ರುಮಾಧರದ ಸೂಸಿದ ಕಾಂತಿಕಣಂಗಳೆಂಬಿನಂ ॥

ಮುತ್ತಿನ ಮರಳಲ್ಲದ ಮರುಳು ಪ್ರದೇಶವಾಗಲಿ ಒಂದೂ ಇಲ್ಲ. ೪೨. ಸುರತಶ್ರಮದಿಂದ ಬಳಲಿದ ಕಿನ್ನರಿಯು ನಿರ್ವಿಣ್ಣತೆಯನ್ನು ತನ್ನ ಹಿತವಾದ ಸ್ಪರ್ಶದಿಂದ ಪರಿಹರಿಸಿದ ಗಾಳಿ ಆಕೆಯ ನಿಶ್ವಾಸದ ಪರಿಮಳದಿಂದ ಪ್ರತ್ಯುಪಕಾರವನ್ನು ಪಡೆಯುವುದು ೪೩. ಹೆಣ್ಣಾನೆಗಳಿಂದ ಶೃಂಗಾರ, ಪ್ರಚಂಡವಾದ ಸರ್ಪಗಳಿಂದ ಭಯ, ಪರ್ವತದ ದೀರ್ಘತೆಯಿಂದ ಅದ್ಭುತ, ವನೇಚರರ ವೀರ, ಶರಭಗಳ ಆಕಾರದಿಂದ ರೌದ್ರ, ಮರ್ಕಟಗಳ ವಿಕಾರದಿಂದ ಹಾಸ್ಯ, ಹುಲಿಯ ಕೈಗೆ ಸಿಕ್ಕಿ ಸಾಯುವ 'ರುರು' ಜಿಂಕೆಯಿಂದ ಭೀಭತ್ಸ, ಕಾಡುಗಿಚ್ಚಿಗೆ ಒಳಗಾದ ಪಕ್ಷಿಗಳಿಂದ ಕರುಣ, ಯೋಗೀಂದ್ರರಿಂದ ಶಾಂತ– ಹೀಗೆ ಒಂಬತ್ತು ರಸಗಳಿಂದಲೂ ಕೂಡಿ ಆ ಬೆಟ್ಟದ ಪ್ರದೇಶವು ಆಶ್ಚರ್ಯಕರವಾಗಿತ್ತು. ಅಲ್ಲಿ– ೪೪. ನಿರ್ಮಲವಾದ ಚಂದ್ರಕಾಂತ ಶಿಲೆಗಳಲ್ಲಿ ಮೂಡಿದ ಚಂದ್ರನ ಪ್ರತಿಬಿಂಬಗಳ ಮೇಲೆ ಮಿರುಗುವ ತಮ್ಮ ಕಪ್ಪು ದೇಹಗಳ ಪ್ರತಿಬಿಂಬವನ್ನು ಮೂಡಿಸುತ್ತ ಶಬರಿಯರು ಒಯ್ಯಾರದಿಂದ ಆ ಚಂದ್ರಗಳಿಗೆ ಕಲೆಯ ಶೋಭೆಯನ್ನುಂಟು ಮಾಡುವರು. ೪೫. ತಮ್ಮ ನುಣುಪಾದ ತೊಡೆಗಳ ಕಾಂತಿಯೆ ಕವಲಿಟ್ಟಿತೋ ಏನೊ ಎಂಬಂತಿರುವ ಸೀರೆಯ ಚೆಲುವಾದ ನಿರಿಗೆ, ಹೊಸ ಹವಳದಂತಿರುವ ತುಟಿಗಳು ಸೂಸಿದ ಪ್ರಭೆಯ ಕಣಗಳೇನೊ ಎಂಬಂತಿರುವ ಗುಲಗಂಜಿಯ ಆಭರಣ; ಕಡೆಗಣ್ಣಿಂದ ಹೊಮ್ಮುವ ಕಿರಣ

ಮಿಱುಗುವ ಗುಂಜೆಯಾಭರಣಮುಣ್ಮುವಪಾಂಗಮರೀಚಿಮಾಲೆ ಸು ।
ತ್ತಿಱಿದುದೆನಿಪ್ಪ ಕೇದಗೆಯ ಬೆಳ್ಸುಟಿಯೋಲೆ ಬೆಡಂಗವಳ್ದಿರಾ ॥ ೪೫

ಅದಲ್ಲದೆಯುಂ

ಪ್ರಚುರತರಖಡ್ಗಿನಿಚಯಂ ।
ವಿಚಳಚ್ಚಾಮರಮನೂನಪತ್ರರಥಂ ದಂ ॥
ತಿಚಮೂರುಚಿರಸ್ಥಿತಿಸಮು ।
ಪಚಿತಂ ಕಟಕಂಬೊಲಿರ್ದುದಾ ನಗಕಟಕಂ ॥ ೪೬

ಆಗಳದಱ ಸಿರಿಯನರಸಂ ಭೀಮರಥನೊಳ್ ನುಡಿಯುತ್ತುಂ ಹಾಸ್ತಿಕ ಪ್ರಾಯಬಲಂ ಬರುತುಮಿರೆ ತತ್ಪಾರ್ಶ್ವದೊಳ್

ಅನಿಯತವಾರಿಸ್ಥಿತಿ ಫೇ ।
ನನಿಕರಸಿತದಂತಮುದಿತಬಿಂದುಚಯಂ ವಾ ॥
ಹಿನಿಯೆಂಬುದು ನದಿ ಗಜವಾ ।
ಹಿನಿಯಂದದಿನೆಸೆದುದೀ ಕ್ಷಣಕ್ಕವನಿಪನಾ ॥ ೪೭

ಮಾಲೆಯು ಸುಳಿಸುಳಿಯಾಗಿ ಏರಿತೊ ಏನೊ ಎಂಬಂತೆ ಒಪ್ಪುವ ಕೇದಗೆಯ ಬಿಳಿಯ ಸುಳಿಯ ಓಲೆ– ಇವುಗಳಿಂದ ಆ ಬೇಡಿತಿಯರು ತಮ್ಮ ಬೆಡಗನ್ನು ತೋರುತ್ತಿದ್ದರು. ಅದಲ್ಲದೆ– ೪೬. 'ಪ್ರಚುರತರ ಖಡ್ಗಿನಿಚಯ'ವೂ (೧. ಅಧಿಕರೆನಿಸುವ ಖಡ್ಗಧಾರಿಗಳ ಸಮೂಹದಿಂದ ಕೂಡಿದುದು. ೨. ಬೃಹದಾಕಾರದ ಖಡ್ಗಮೃಗಗಳ ಹಿಂಡನ್ನು ಒಳಗೊಂಡುದು) "ವಿಚಳಚ್ಚಾಮರ"ವೂ (೧. ಬೀಸುತ್ತಿರುವ ಚಾಮರಗಳುಳ್ಳುದು. ೨. ಚಲಿಸುತ್ತಿರುವ ಚಮರೀಮೃಗಗಳ ಹಿಂಡು ಉಳ್ಳುದು) "ಅನೂನಪತ್ರ ರಥ"ವೂ (೧. ಅನೇಕಾನೇಕ ವಾಹನಗಳೂ ರಥಿಕರೂ ಉಳ್ಳುದು, ೨. ಹೇರಳವಾದ ಎಲೆಗಳು, ಹಾಗೂ ಬೆತ್ತ ಬಿದಿರುಗಳಿಂದ ಕೂಡಿದುದು), "ದಂತಿ ಚಮೂರು ಚಿರಸ್ಥಿತಿ"ಯೂ (೧. ಆನೆಗಳ ಪಡೆಯಿಂದ ಅಂದವಾಗಿರುವುದು. ೨. ಆನೆಗಳಿಗೂ, 'ಚಮೂರು'ವೆಂಬ ಜಿಂಕೆಗಳಿಗೂ ಸ್ಥಿರವಾದ ಆಶ್ರಯ), ಆಗಿ ಆ ಬೆಟ್ಟದ ತಪ್ಪಲುಪ್ರದೇಶವು ಸೇನಾಪಡೆಗೆ ಸದೃಶವಾಯಿತು. ವ॥ ಆಗ ಅರಸನು ಅದರ ಚೆಲುವನ್ನು ಭೀಮರಥನಿಗೆ ಹೇಳುತ್ತ ಬರುತ್ತಿರಲಾಗಿ, ಆ ಬೆಟ್ಟದ ಪಕ್ಕದಲ್ಲಿ – ೪೭. "ಅನಿಯುತವಾರಿಸ್ಥಿತಿ"ಯೂ (೧. ನಿರಂತರವಾದ ನೀರಿನ ಪ್ರವಾಹವುಳ್ಳುದು, ೨. ಎಡೆಬಿಡದೆ ಸೂಸುವ ಮದೋದಕವುಳ್ಳುದು), "ಫೇನನಿಕರಸಿತದಂತ"ವೂ (೧. ನೊರೆಯ ರಾಶಿಯಿಂದ ಬೆಳ್ಳಗಾಗಿರುವುದು. ೨. ನೊರೆಯ ರಾಶಿಯಂತೆ ಬೆಳ್ಳನೆಯ ಕೋರೆಗಳುಳ್ಳುದು) "ಉದಿತಬಿಂದುಚಯ"ವೂ (೧. ಅಧಿಕವಾಗಿ ಸಿಡಿದೇಳುವ ಹನಿಗಳನ್ನು ಒಳಗೊಂಡುದು. ೨. ಮೈಮೇಲೆ ಅಲಂಕಾರಕ್ಕಾಗಿ ಬರೆದಿಟ್ಟ ಅನೇಕ ಬಣ್ಣದ ಚುಕ್ಕೆಗಳುಳ್ಳುದು)– ಆಗಿರುವ 'ವಾಹಿನಿ' ಎಂಬ ಹೊಳೆ ಅರಸನ ಕಣ್ಣಿಗೆ ಗಜಸೈನ್ಯದಂತೆ ಶೋಭಿಸಿತು.

ಮತ್ತಂ

ತೆರೆವೊಯ್ಲಿಂದೆ ತೆರಳ್ದೆರಟ್ಟಿಡಿಯೊಳಂ ಚೆಲ್ವಂ ವಿಲಾಸಂಬೊಲಾಂ।
ತಿರೆ ಪೌಷ್ಪಂ ರಜಮಲ್ಲಿಗಲ್ಲಿಗೆ ತರಂಗಂಗಳ್ ತರಂಗಂಗಳಂ॥
ತಿರೆ ನಾನಾವಿಧವರ್ಣದಿಂದೆಸೆವ ನಿರ್ವೂವೆಯ್ದೆ ಚೆಂಬೂವಿನಂ।
ತಿರೆ ಚಿತ್ರಾಂಬರವಾದುದಾ ನದಿ ತದುರ್ವೀಭೃನ್ನಿತಂಬಾವೃತಂ॥ ೪೮

ಪ್ರವಳಕರಿಮಕರಘೂತ್ಕಾ।
ರವಾತದಿಂದುದ್ದಮೊಗೆವ ಜಲಬಿಂದುಗಳಿಂ॥
ದಿವದೊಳೆ ತಾರಕಿತಂಮಾ।
ಡುವುದು ನಭೋಭಾಗಮಮಂ ತದಂಭಃಪೂರಂ॥ ೪೯

ಸರದದ ಮುಗಿಲ್ಗಳೆಱಗಿದ।
ತರಳಸ್ಫಟಿಕಾದ್ರಿನಿಕರಮೆನೆ ಕೊನೆಯೊಳ್ ಬೆ॥
ಳ್ನೊರೆವಿಂಡಂ ತಾಳ್ದಿದ ಪೆ।
ರ್ದೆರೆವಿಂಡುಗಳೆಸೆವುವಾ ಮಹಾವಾಹಿನಿಯೊಳ್॥ ೫೦

ಕಾರ ಮುಗಿಲ್ ನೀರ್ಮೊಗೆಯಲ್।
ವಾರಿಧಿಯೆಂದೆಱಗಿ ಸುರಿವ ಕರಕಂಗಳವೋಲ್॥
ತೀರದೊಳಿಡಿದೆಱಗಿದ ಧರ।
ಣೀರುಹದುಗುವಲರ್ಗಳೆಸೆವುವಸದಳಮದಱೊಳ್॥ ೫೧

ಮತ್ತು– ೪೮. ತೆರೆಗಳ ಹೊಡೆತದಿಂದ ಸರಿದು ಬಂದು (ತಾವರೆ)ಹೂಗಳ ಪರಾಗವು ಎರಡೂ ದಡಗಳಲ್ಲಿ ಸೆರಗಿನ ಹೊಳಪಿನಂತೆ ಒಪ್ಪುತ್ತಿರಲಾಗಿ, ಅಲ್ಲಲ್ಲಿಗೆ ಇರುವ ತೆರೆಗಳು ನಿರಿಗೆಯ ಮಡಿಕೆಗಳಂತಿರಲಾಗಿ, ನಾನಾ ವಿಧದ ಬಣ್ಣಗಳಿಂದ ಒಪ್ಪುವ ತಾವರೆಗಳು (ನಡುನಡುವೆ ಅಳವಡಿಸಿದ) ಜರತಾರಿಯ ಹೂವಿನಂತಿರಲಾಗಿ, ಬೆಟ್ಟದ ನಿತಂಬವನ್ನು ಸುತ್ತಿದ ಚಿತ್ರದ ಸೀರೆಯೆಂಬಂತೆ ಆ ನದಿ ಶೋಭಿಸಿತು. ೪೯. ಪ್ರಬಲವಾದ ನೀರಾನೆ ಹಾಗು ಹೆಮ್ಮೀನುಗಳ ಪೂತ್ಕಾರದಿಂದ ಎತ್ತರವಾಗಿ ಚಿಮ್ಮುವ ಜಲ ಬಿಂದುಗಳಿಂದಾಗಿ, ಅಲ್ಲಿಯ ಆಕಾಶಪ್ರದೇಶವು ನಕ್ಷತ್ರಮಯ ವಾದಂತೆ ತೋರುವುದು. ೫೦. ಶರತ್ಕಾಲದ ಮೋಡಗಳು ಎರಗಿದ ನಿರ್ಮಲ ಸ್ಫಟಿಕಗಿರಿಗಳ ಸಮೂಹವೊ ಏನೊ ಎಂಬಂತೆ, ಬಿಳಿನೊರೆಯ ರಾಶಿಯನ್ನು ಹೊತ್ತ ಹೆದ್ದೆರೆಗಳ ಹಿಂಡು ಆ ಮಹಾನದಿಯಲ್ಲಿ ಕಂಗೊಳಿಸುವುವು. ೫೧. ಮಳೆಯ ಮೋಡಗಳು ನೀರು ತುಂಬಿಕೊಳ್ಳಲು ಇದೇ ಸಮುದ್ರವೆಂದು ಬಂದೆರಗಿ ಸುರಿಸುವ ಆಲಿಕಲ್ಲುಗಳೊ ಏನೊ ಎಂಬಂತೆ, ದಂಡೆಗಳಲ್ಲಿ ದಟ್ಟವಾಗಿ ಬೆಳೆದ ಮರಗಳಿಂದಿರುವ ಹೂಗಳು ಅತಿಶಯವಾಗಿ ಶೋಭಿಸುವುವು. ೫೨. ಸೊಗಸಾದ ತಾವರೆನಾಳವನ್ನು ಪಡೆಯುವ ಬಯಕೆಯಿಂದ ಎದೆಮಟ್ಟ ನೀರಲ್ಲಿ ಹೊಕ್ಕ ಶಬರಿಯ ಮೊಲೆಗಳು, ನೀರಲ್ಲಿ ಅದ್ದಿಕೊಳ್ಳುತ್ತಿರುವ ಕಾಡಾನೆಯ ಕುಂಭಗಳಿಗೆ ಸರಿಸಮಾನವೆನಿಸು

ಸರಸಬಿಸವಿಸರವಾಂಛೆಯಿ ।
ನುರಂಬರಂ ಪೊಕ್ಕ ವನಚರೀಪೀನಪಯೋ ॥
ಧರಮೊಡನಟ್ಟಿ ಕೊಳುತ್ತಿ ।
ರ್ಪರಣ್ಯಕರಿಕುಂಭದಲ್ಲಿ ಸರಿವರುತಿರ್ಕುಂ ॥ ೫೨

ತಾನುಪಶೋಭಿತಚಲದಳ ।
ಕಾನನೆ ಪೃಥುತರಲಸತ್ವಯೋಧರೆ ವಿಚಲ ॥
ನ್ಮೀನಾಲೋಕವಿರಾಜಿತೆ ।
ಯಾ ನದಿ ವನರಾಶಿವನಿತೆಯೆನಿಸುವುದುಚಿತಂ ॥ ೫೩

ಅದಲ್ಲದೆಯುಂ

ಎಳನೀರಂ ಗೆಲೆವಂದ ತನ್ನ ತಿಳಿನೀರೊಳ್ ಬಂದು ಪೀಯೂಷಸಂ ।
ಕುಳದೊಳ್ ಸಿದ್ಧರಸಪ್ಲವಂ ಬೆರಸಿದತ್ತೆಂಬನ್ನೆಗಂ ತನ್ನಗಾ ।
ಮಳಚಂದ್ರೋಪಳಸಾರವಾರಿಚಯಪೂರಂ ಕೂಡೆ ತಾಂ ಕೂಡೆ ಕ ।
ಣ್ಗೊಳಿಸಿತ್ತಾ ವರವಾಹಿನೀವಿಸರದೋಘಂ ಶಾಂತಸೈನ್ಯೌಘಮಂ ॥ ೫೪

ಅಂತತಿಮನೋಹರಮಾದ ವಾಹಿನೀನಿಕಟದೊಳ್ ವಿಶ್ರಾಂತಕಟಕನಾಗಿರ್ಪುದುಮತ್ತ ದೂತಂಗಿತ್ತ ಮಱುಮಾತುಮನವಧಾರಿಸಿ

ವುವು. ೫೩. "ಉಪಶೋಭಿತ ಚಲದಳಕಾನನೆಯೂ" (೧. ಚೆಲುವಾಗಿ ಅಲುಗಾಡುವ ಎಲೆಗಳಿಂದ ಕೂಡಿದ ಕಾಡುಗಳನ್ನು ಹೊಂದಿರುವುದು; ೨. ಮುಖದ ಮೇಲೆ ಸುಂದರವಾಗಿ ಸುಳಿದಾಡುವ ಮುಂಗುರುಳುಳ್ಳವಳು), "ಪೃಥುತರಲಸತ್ಪ ಯೋಧರೆ"ಯೂ (೧. ಬಲು ಅಂದವಾಗಿ ಹರಿಯುತ್ತಿರುವ ನೀರುಳ್ಳದು; ೨. ತೋರವಾಗಿಯೂ ಚೆಲುವಾಗಿಯೂ ಇರುವ ಮೊಲೆಗಳುಳ್ಳವಳು), "ವಿಚಲನ್ಮೀನಾ ಲೋಕ ವಿರಾಜಿತೆ"ಯೂ (೧. ಚಪಲವಾದ ಮೀನುಗಳ ಕಣ್ಣುಗಳಿಂದ ಶೋಭಿಸು ವುದು; ೨. ಚಂಚಲವಾದ ಮೀನುಗಳಂತೆ ಕಣ್ಣುಗಳುಳ್ಳವಳು) ಆಗಿದ್ದುದರಿಂದ ಆ ನದಿಗೆ ಸಮುದ್ರರಾಜನ ಪತ್ನಿಯೆಂಬ ಹೆಸರು ಯೋಗ್ಯವೆ ಆಗಿದೆ [ನದಿಗಳೆಲ್ಲ ಸಮುದ್ರಪತ್ನಿಯರು.] ಅದಲ್ಲದೆ- ೫೪. ಅಮೃತದಲ್ಲಿ ಸಿದ್ಧರಸ ಪ್ರವಾಹವು ಬಂದು ಬೆರಸಿದ ಹಾಗೆ, ಎಳನೀರನ್ನು ಮೀರುವ ತನ್ನ ತಿಳಿನೀರಲ್ಲಿ ಆ ಬೆಟ್ಟದ ಚಂದ್ರಕಾಂತಶಿಲೆಗಳ ನೀರೂ ಮಹಾಪೂರವಾಗಿ ಬಂದು ಸೇರಲಾಗಿ ಆ ನದಿಯ ವಿಸ್ತಾರವಾದ ಪ್ರವಾಹವು ದಣಿದ ಸೈನ್ಯಕ್ಕೆ ತುಂಬ ಮನೋಹರವೆನಿಸಿತು. ವ॥ ಹೀಗೆ ತುಂಬ ಮನೋಹರವಾದ ನದೀತೀರದಲ್ಲಿ ಅರಸನು ಸೈನ್ಯವನ್ನು ಬೀಡುಬಿಡಿಸಿ

ಆಂ ಬಂದು ಕೊಳ್ವ ಗಜಮಂ ।
ತಾಂ ಬಂದಿತ್ತಪನೆ ಈ ವನಕ್ಕೆಮ ಸುತನಿಂ ॥
ದಂ ಬೇಳಾದಂ ನೆರೆ ಪಾ ।
ಱುಂಬಟ್ಟಪನಟ್ಟಿ ತಿಂಬ ದೈವಕ್ಕೀಗಳ್ ॥ ೫೫

ಎಂದು ಬರ್ಕರಕರ್ಕಸಂಗಳಂ ನುಡಿದು ಮಾಣದೆ ಅಭ್ಯಮಿತ್ರೀಣವೃತ್ತಿಯನೆ ಪೂಣ್ದು ಪೊಱ ಮಡುವಾಗಳ್

ಹಯನಯನಾಂಬುಗಳ್ ಸುರಿಯೆ ಹರ್ಷದಿನುಣ್ಮಿದುವೆಂದು ನಚ್ಚಿನಾ ।
ನೆಯ ಮದವೆತ್ತಿ ಕಟ್ಟೆ ವಿಕಳತ್ವಮನೊಕ್ಕುವಿವೆಂದಕಾರಣಂ ॥
ಜಯರಥಮೊರ್ಮೆ ದಲ್ ಮುಱಿಯೆ ಶತ್ರುಬಲಂ ಮುಱಿದಪ್ಪುದೆಂದು ದು ।
ರ್ಣಯಮನೆ ದರ್ಪದಿಂ ಸುನಯಮಾರ್ಗೋಣರ್ದಂ ಧೃತವಿಗ್ರಹಾಗ್ರಹಂ ॥ ೫೬

ಆನೆಯನಿರುಳುಂ ಪಗಲುಂ ।
ಜಾನಿಸಿ ತನು ಮೂರ್ಖವೃತ್ತಿ ಪೊರ್ದಿದವೋಲ ॥
ಜ್ಞಾನಿ ನಯಾನಯಚಿಂತೆಯ ।
ನೇನುಮನಱಿಯನೆ ಮುಮೂರ್ಷು ತೆಱನಱಿದಪನೇ ॥ ೫೭

ಅಂತತಿಕ್ರಮಿಸಿ

ದೆಸೆಯಂ ಖಡ್ಗಾಂಶುಜಾಲಂ ಬೆಳಗೆ ಧರಣಿಯಂ ದಾನಧಾರಾಂಬು ಜೌಗೇ
ಳಿಸೆ ರೋದೋಭಾಗಮಂ ಕೇತುತತಿ ಪುದಿಯೆ ಮೇಘಾಳಿಯಂ ಧೂಳಿಮೆಯ್ವೆ

ವಿಶ್ರಮಿಸಿದನು. ಅತ್ತ ದೂತನು ತಂದ ಮರುಮಾತನ್ನು ಕೇಳಿ– ೫೫. "ನಾನು ಬಂದು ಕಿತ್ತುಕೊಳ್ಳುವ ಆನೆಯನ್ನು ತಾನೇ ಈ ವನಕ್ಕೆ ಬಂದು ಕೊಡುತ್ತಾನಂತೆ ! ಮಗನ ಮಾತು ಕೇಳಿ ಮರುಳಾಗಿರುವನು, ಅಟ್ಟಿ ತಿನ್ನುವ ದೈವಕ್ಕೊಳಗಾಗಿ ಇನ್ನು ಹಾಳಾಗುವನು" ವ॥ ಎಂದು ಕರ್ಕಶವಾದ ಗರ್ವದ ಮಾತನ್ನಾಡಿ, ಶತ್ರುವನ್ನು ಶೌರ್ಯದಿಂದ ಎದುರಿಸುವ ಹಠವನ್ನೆ ತೊಟ್ಟು ಹೊರಡುವಾಗ– ೫೬. ತನ್ನ ಕುದುರೆಗಳು ಕಣ್ಣೀರು ಸುರಿಸಿದುವು; ಅವು ಹರ್ಷಾಶ್ರುಗಳೆಂದುಕೊಂಡನು. ನೆಚ್ಚಿಗೆಯ ಆನೆಗಳಿಗೆ ಮದವಿಳಿಯಿತು; ಏಕೊ ಬೆದರಿವೆಯೆಂದನು; ವಿಜಯರಥ ನಿಷ್ಕಾರಣವಾಗಿ ಒಮ್ಮಿಂದೊಮ್ಮೆಲೆ ಮುರಿದುಬಿದ್ದಿತು; ಶತ್ರುಬಲ ಮುರಿಯುವುದೆಂಬ ಸೂಚನೆಯಿದು ಎಂದು ಭಾವಿಸಿದನು : ದುಶ್ಚಿಹ್ನಗಳನ್ನೆಲ್ಲ ಶುಭ ಚಿಹ್ನೆಗಳೆಂದೇ ಭಾವಿಸಿದನು ; ಆತನು ಸಮರಾಗ್ರಹಕ್ಕೆ ಹಾತೊರೆದು ಅದಕ್ಕೇ ಅಂಟಿಕೊಂಡಿದ್ದನು. ೫೭. ಹಗಲೂ ಇರುಳೂ ಆನೆಯದೇ ಧ್ಯಾನವಾಗಿ ಮತಿಗೆಟ್ಟು ಹೋದನೋ ಏನೊ ಎಂಬಂತೆ ನೀತಿ ಯಾವುದು, ಅನೀತಿ ಯಾವುದು ಎಂಬ ವಿಚಾರವನ್ನೆ ಅರಿಯದಾದನು. ಸಾಯುವುದಕ್ಕೆ ಹೊರಟವನಿಗೆ ಪರಿಜ್ಞಾನವಿರುವುದೆ ? ಹಾಗೆ ಮಿಕ್ಕೂ ಮೀರಿ– ೫೮. ತನ್ನ ಸೇನೆಯ ಖಡ್ಗಕಾಂತಿಯಿಂದ ದಿಕ್ಕುಗಳನ್ನೆಲ್ಲ ಬೆಳಗುತ್ತ, ಆನೆಗಳ ಮದೋದಕದಿಂದ ನೆಲವನ್ನೆಲ್ಲ ಜೌಗುಗೊಳಿಸುತ್ತ,

ರ್ಚಿಸೆ ದಿಗ್ವೇತಂಡಮಂ ಡಿಂಡಿಮರುತಿ ಚಕಿತಂ ಮಾಡೆ ದೃಪ್ಯದ್ಬಳಂ ಮಾ ।
ಮಸಕಂಗೊಂಡೆತ್ತಿ ಬಂದಂ ಬಗೆಯದೆ ಪೃಥಿವೀಪಾಲನುಗ್ರಾಜಿಲೋಲಂ ॥ ೫೮

ಬಂದು ಸಾರ್ಚಿ ಬಿಟ್ಟಿರೆ

ಜಳರುಹಮಿತ್ರನಸ್ತಮಯಕಾಲಮದೊಂದು ವಸಂತಕಾಲದಂ ।
ತೆಳಸಿ ಕರಂ ವಿರಾಜಿಸಿದುದಂದಿನ ರಂಜಿಪ ಸಂಜೆಗೆಂಪು ತ ॥
ಳ್ತೆಳದಳಿರ್ಗೆಂಪು ತಾರಕಮುದಂಚಿತಕೋರಕಮುದ್ಗತೇಂದುಮಂ ।
ಡಳಮಲರ್ಗೊಂಚಲೆಂಬಿನೆಗಮಂಬರಮಾತ್ತಮಹೀಜಡಂಬರಂ ॥ ೫೯

ಅಂತು ನೇಸರ್ಪಡಲೊಡಮಿತ್ತ ಪದ್ಮನಾಭಮಹೀಭುಜನುಮತ್ತ ಪೃಥ್ವೀಪಾಲಭೂಪಾಲನುಮಾಸ್ಥಾನಮಂಡಪಿಕಾಮಧ್ಯದೊಳ್ ಭಾವಿಸಂಗ್ರಾಮಚರ್ಚಾವಚನಂಗಳನನ್ವಯಾಗತರುಂ ರಣದೀಕ್ಷಿತರುಮಪ್ಪ ವೀರಸಾಮಂತರೊಳ್ ಪಿರಿದು ಬೇಗಂ ನುಡಿಯುತ್ತುಮಿರ್ದು ಬಳಿಯಂ ರಮಣೀಯಕಾದಿಸಕಲಗುಣನಿಳಯಮಪ್ಪ ಶಯ್ಯಾನಿಳಯದೊಳ್ ನಿದ್ರಾಂಗನಾದತ್ತಾವಸರರಾಗಿ ಬೆಳಗಪ್ಪುದುಂ ಬೆಸಸೆ ತತ್ತನ್ನಿಯಾಮದಿನುಭಯಶಿಬಿರದೊಳಂ ಸೇನಾಣಾಯಕರ್ ಸನ್ನಾಹಭೇರಿಯಂ ಪೊಯ್ಸಿದಾಗಳ್

ಪುದಿದೆಂಟುಂ ದಿಕ್ತಟಕ್ಕಾ ಧ್ವನಿ ಪಸರಿಸೆ ಕೋರ್ವೈಸಿತೈರಾವತಂ ಕುಂ ।
ಬಿದುದೆತ್ತಂ ಪುಂಡರೀಕಂ ಸುಗಿದುದು ಕುಮುದಂ ಕಂದಿದತ್ತಂಜನಂ ಕುಂ ॥
ದಿದುದಾದಂ ವಾಮನಂ ಕಟ್ಟಿದುದತಿಮದಮಂ ಪುಷ್ಪದಂತಂ ಸಮಂತೊ ।
ಕ್ಕುದಗುರ್ವಂ ಸಾರ್ವಭೌಮಂ ನಡುಗಿದುದು ಭಯೋದ್ರೇಕದಿಂ ಸುಪ್ರತೀಕಂ ॥ ೬೦

ಆಕಾಶವನ್ನು ಧ್ವಜಸಮೂಹದಿಂದ ತುಂಬಿ, ಕಾಲ್ಧೂಳಿಯಿಂದ ಮೋಡಗಳನ್ನು ಹಿಗ್ಗಿಸಿ, ಡಿಂಡಿಮಧ್ವನಿಯಿಂದ ದಿಗ್ಗಜಗಳನ್ನು ಚಕಿತಗೊಳಿಸುತ್ತ, ಬಿಂಕದಿಂದ ಹೊರಟ ಬಲದೊಡನೆ ಕ್ರೋಧಾವಿಷ್ಟನಾಗಿ ಉಗ್ರವಾದ ಯುದ್ಧದ ಹಂಬಲಿಂದ ಪೃಥ್ವೀಪಾಲನು ಅವಿಚಾರಿಯಾಗಿ ಬಂದನು. ವ॥ ಹಾಗೆ ಬಂದು ಸಮೀಪದಲ್ಲಿಯೆ ಬೀಡುಬಿಟ್ಟಿರಲಾಗಿ– ೫೯. ಸೂರ್ಯಾಸ್ತವಾಯಿತು, ಶೋಭಿಸುವ ಸಂಜೆಗೆಂಪು, ಸಂದಣಿಸಿದ ಕೆಂದಳಿರ ಕೆಂಪಿನಂತಿರಲಾಗಿ, ನಕ್ಷತ್ರಗಳು ಮೂಡುತ್ತಿರುವ ಮೊಗ್ಗುಗಳಂತಿರಲಾಗಿ, ಅದೇ ಮೇಲೆದ್ದ ಚಂದ್ರನು ಹೂವಿನ ಗೊಂಚಲಂತೆ ಇರಲಾಗಿ, ಆಕಾಶವು ಮರಗಳ ಸಮೂಹದಂತೆ ತೋರಲಾಗಿ– ಆ ಅಸ್ತಕಾಲವು ಅದೊಂದು ವಸಂತಕಾಲದಂತೆ ತುಂಬ ಅಂದವಾಯಿತು. ವ॥ ಹೊತ್ತು ಮುಳುಗಿದಾಗ ಇತ್ತ ಪದ್ಮನಾಭರಾಜನೂ ಅತ್ತ ಪೃಥ್ವೀಪಾಲರಾಜನೂ ತಂತಮ್ಮ ಓಲಗದ ಮಂಟಪದಲ್ಲಿ ಕುಳಿತು, ಇನ್ನು ನಡೆಯಲಿರುವ ಕಾಳಗದ ವಿಷಯವಾಗಿ ಅನ್ವಯಾಗತರೂ ರಣೋದ್ಯೋಗಿಗಳೂ ಆದ ವೀರ ಸಾಮಂತರೊಡನೆ ಕೆಲಕಾಲ ಚರ್ಚಿಸುತ್ತಿದ್ದು ಬಳಿಕ ಸಕಲಗುಣಗಳಿಂದ ರಮಣೀಯವಾದ ಶಯ್ಯಾಗೃಹದಲ್ಲಿ ನಿದ್ದೆ ಹೋದರು. ಬೆಳಗಾದೊಡನೆ ಸೇನಾನಿಗಳು ಶಿಬಿರದಲ್ಲಿ ಸಿದ್ಧತಾಸೂಚಕ ಭೇರಿಗಳನ್ನು ಮೊಳಗಿಸಿದರು. ೬೦. ಆ ಭೇರಿಯ ಧ್ವನಿ ಎಂಟು ದಿಕ್ಕುಗಳನ್ನೂ ಆವರಿಸುತ್ತ ಹೊರಡಲಾಗಿ, ಐರಾವತವು ದಿಗಿಲುಗೊಂಡಿತು, ಪುಂಡರೀಕವು ಕುಗ್ಗಿತು ; ಕುಮುದವು ಅಂಜಿತು;

ಆರಣದುಂದುಭಿರಸಿತಂ ।
ವೀರರ್ಗುತ್ಸವಮನಿತ್ತುದರ್ಥಿಜನಸ್ವ ॥
ಸ್ತ್ಯಾರವಮೀವಂತೆ ಮಹೋ ॥
ದಾರಚರಿತ್ರರ್ಗೆ ಹೃತ್ಪ್ರಮೋದೋದಯಮಂ ॥ ೬೧

ಪಲದೆವಸಕ್ಕೆಮಗೀಗಳ್ ।
ಕಲಹಂ ದೊರೆಕೊಂಡುದಿಲ್ಲಿ ಮೆಱೆದಪೆಮಿಂ ದೋ ॥
ರ್ವಲದಳವನೆಂದು ಪೞಪು ।
ಣ್ಗಲೆಯೊಡೆವಿನಮುರ್ವಿ ಕೊರ್ವಿದರ್ ಕಡುಗಲಿಗಳ್ ॥ ೬೨

ಕದನಪ್ರಮೋದರೋಮಾಂ ।
ಚದೆ ಕವಚಿತಮಾದುವಿವರ ತನು ತಾಮೆಂದೊ ॥
ಲ್ಲದ ತೆಱದೆ ನಲಿದು ತನಿಗೊ ।
ರ್ವಿದ ವೀರರ ಮೆಯ್ಗೆ ಪುಗವೆ ಸನ್ನಾಹಂಗಳ್ ॥ ೬೩

ಸಂಗರಲಾಭೋತ್ಸವಪು ।
ಷ್ಟಾಂಗತೆಯಿಂ ಕಿಱಿಯವಾದೊಡಟ್ಟೆ ಜನಕ್ಕಾ ॥
ಪೊಂಗವಚಂಗಳನಿತ್ತರ್ ।
ಪಾಂಗವಚಂಬಡುವಿನಂ ಮಹಾವೀರಭಟರ್ ॥ ೬೪

ಅಂಜನವು ಕಂದಿತು; ವಾಮನವು ಕುಂದಿತು; ಪುಷ್ಪದಂತದ ಮದ ಇಳಿದು ಹೋಯಿತು. ಸಾರ್ವಭೌಮವು ಶಕ್ತಿಗುಂದಿತು; ಸುಪ್ರತೀಕವು ಭೀತಿಯಿಂದ ನಡುಗಿತು. ೬೧. ಯಾಚಕರ ಸ್ವಸ್ತಿವಾಚನವು ಉದಾರಶೀಲರಿಗೆ ಮನಸ್ಸಂತೋಷವನ್ನೀಯುವಂತೆ, ಆ ರಣಭೇರಿಯ ಧ್ವನಿ ವೀರರಿಗೆ ಉತ್ಸಾಹವನ್ನುಂಟುಮಾಡಿತು. ೬೨. "ಎಷ್ಟೋ ದಿನಗಳ ಮೇಲೆ, ಈಗ ನಮಗೊಂದು ಯುದ್ಧಯೋಗ ಲಭಿಸಿದೆ, ನಮ್ಮ ತೋಳ್ವಲದ ಘನತೆಯನ್ನು ಇನ್ನು ತೋರುವೆವು" ಎಂದು ಕಡುಗಲಿಗಳು ತಮ್ಮ ಹಳೆಯ ಗಾಯಗಳ ಕಲೆ ಬಿರಿಯುವಂತೆ ಮೈಯುಬ್ಬಿದರು. ೬೩. "ಯುದ್ಧಾನಂದದ ರೋಮಾಂಚದಿಂದ ಈಗಾಗಲೆ ಇವರ ಮೈಗೆ ಕವಚ ಕಟ್ಟಿದಂತಾಗಿದೆ. ಆದುದರಿಂದ ಅಲ್ಲಿ ನಾವೇಕೆ?" ಎಂದು ಕವಚಗಳು ಒಲ್ಲೆವೆಂಬುವೊ ಏನೊ ಎಂಬಂತೆ ವೀರರ ಹಿಗ್ಗಿದ ಮೈಗೆ ಕವಚಗಳು ಹಿಡಿಸಲೆ ಇಲ್ಲ. ೬೪. ಯುದ್ಧಲಾಭದ ಉತ್ಸಾಹದಿಂದ ಅಧಿಕವಾಗಿ ಉಬ್ಬಿದ ಮೈಗಳಿಗೆ ಇವು ಕಿರಿದಾದುವೆಂದು ಮಹಾವೀರರಾದ ಯೋಧರು ತಮ್ಮ ಚಿನ್ನದ ಕವಚಗಳನ್ನು ಯಾಚಕರಿಗೆ

ಅದಲ್ಲದೆಯುಂ

ಕರಿಸೇನಾಸಾರಿಭಾರಗ್ರಥನಮುರುತುರಂಗೌಘಪಲ್ಯಾಣಸಜ್ಜೇ ।
ಕರಣಂ ನಾನಾವರೂಥಪ್ರಕರಸಮುಚಿತಾಯೋಗಸಂಯೋಜನಂ ಕಿಂ ॥
ಕರಸಂದೋಹಾಂಗರಕ್ಷಾವರಣಮವನಿಪಾಲಾಹವೋತ್ಸಾಹದೀನೋ ।
ದ್ಧರಣಂ ತತ್ಕಾಲಜಾತಂ ಬಲಯುಗಳದೊಳಂ ಕಣ್ಗೆಗುರ್ವಾದುವಾದಂ ॥ ೬೫

ಅಂತು ಸಮರಸನ್ನದ್ಧಮಾದ ನಿಜಬಲಂಬೆರಸು ಸುವರ್ಣಮಾಲಂ ವನಕೇಳೀಸಮಾರೂಢಂ ಯುವರಾಜಪುರಸ್ಸರಂ ನಡೆಯೆ ಪೃಥ್ವೀಪಾಲಪಾಲನುಮಾತ್ಮಸಕಲಸಾಮಗ್ರಿವೆರಸದಿರದಿದಿರೆತ್ತಿ ಬರ್ಪಾಗಳ್

ಸುರಶೈಲಂ ಪೊಟ್ಟಿ ಪೊಂಗಟ್ಟೆವೊಲಿರೆ ಸಕಲೋದನ್ವದಂತಸ್ಥಕೂರ್ಮೋ ।
ತ್ಕರಮುರ್ವೀಚಕ್ರಮಂ ತಾಳ್ದಿದ ಕಮಠನವೋಲೊಪ್ಪೆ ಸೌರಂ ರಥಂ ಮೃ ॥
ದ್ಭರಯುಗ್ಯೈಚ್ಛಾಕಟಾಕಾರದಿನೆಸೆಯೆ ಜಗದ್ವ್ಯಾಪಿಯಾದತ್ತು ಯುದ್ಧೋ ।
ದ್ಧುರತತ್ಸೇನಾದ್ವಯಾಭ್ಯುಚ್ಚಲನದಳದಿಳೋತ್ಖಾತಪಾಂಸುಪ್ರತಾನಂ ॥ ೬೬

ಅದಲ್ಲದೆಯುಂ

ದ್ವಿಪಶುಂಡಾದಂಡಸೀತ್ಕಾರದಿನರದಚಲಚ್ಚಕ್ರಚೀತ್ಕಾರದಿಂ ಧ ।
ನ್ವಿಪದಾತಿವ್ರಾತಟಂಕಾರದಿನುರುಕಹಳಾಜಾಲಘೂತ್ಕಾರದಿಂ ವಾ ॥
ಜಿಪದಪ್ರೋದ್ಯಚ್ಛಟತ್ಕಾರದಿನನುಗತನಿಸ್ಸಾಣಭಾಂಕಾರದಿಂ ವಿ ।
ಷ್ಟಪಮಂ ಶಬ್ದಾತ್ಮಕಂಮಾಡಿದುದುಭಯಮಹೀಭೃಚ್ಚಮೂಚಕ್ರವಾಳಂ ॥ ೬೭

ಕೊಟ್ಟುಬಿಟ್ಟರು. ಅದಲ್ಲದೆ ೬೫. ಆನೆಗಳಿಗೆ ಗಂಟೆ ಹೊರಜೆ ಮೊದಲಾದುವುಗಳನ್ನು ಅಳವಡಿಸುವುದು, ಕುದುರೆಗಳನ್ನು ಹಲ್ಲಣದಿಂದ ಸಜ್ಜುಗೊಳಿಸುವುದು, ಹಲವಾರು ಬಗೆಯ ರಥಗಳಿಗೆ ಯೋಗ್ಯವಾದ ಕುದುರೆಗಳು, ನೊಗ ಮೊದಲಾದ ಸಲಕರಣೆಗಳನ್ನು ಸಂವರಿಸುವುದು, ಪದಾತಿಗಳಿಗೆ ಅಂಗಕವಚಾದಿ ರಕ್ಷಣವನ್ನು ಹೊಂದಿಸುವುದು, ಅರಸರಿಂದ ದೀನಜನರ ಉದ್ಧಾರ (ದಾನಧರ್ಮಾದಿಗಳು)– ಎರಡೂ ಸೈನ್ಯಗಳಲ್ಲಿ ಈ ಚಟುವಟಿಕೆ ರಭಸದಿಂದ ನಡೆಯಿತು. ವ॥ ಹೀಗೆ ಸಮರಕ್ಕೆ ಸಿದ್ಧವಾದ ತನ್ನ ಪಡೆಯೊಡನೆ ಚಿನ್ನದ ಹಾರವನ್ನು ತೊಟ್ಟ ಪದ್ಮನಾಭರಾಜನು 'ವನಕೇಳಿ'ಯನ್ನೇರಿ, ಯುವರಾಜನನ್ನು ಮುಂದಿಟ್ಟುಕೊಂಡು ನಡೆದನು. ಪೃಥ್ವೀಪಾಲನೂ ಸಮಸ್ತ ಸಾಮಗ್ರಿ ಸಹಿತನಾಗಿ ಇದಿರಾಗಿ ಬರುತ್ತಿರಲಾಗಿ ೬೬. ಆ ಎರಡೂ ಸೈನ್ಯಗಳ ಪಾದಾಹತಿಯಿಂದೆದ್ದ ದೂಳಿಯ ರಾಶಿ ಜಗತ್ತನ್ನೆ ಆವರಿಸುತ್ತ ಎಷ್ಟೊಂದು ಅದ್ಭುತವಾಯಿತೆಂದರೆ ಅದರಿಂದಾಗಿ, ಮೇರುಪರ್ವತವು ಹೂಳಿಹೋದ ಚಿನ್ನದ ಗಟ್ಟಿಯಂತಾಯಿತು; ಎಲ್ಲ ಜಲಾಶಯಗಳ ಆಮೆಗಳೂ ಭೂಮಂಡಲವನ್ನು ಹೊತ್ತ ಕೂರ್ಮನಂತಾದುವು; ಸೂರ್ಯನ ರಥ ಮಣ್ಣು ತುಂಬಿದ ಬಂಡಿಯಾಯಿತು; ಅದಲ್ಲದೆ– ೬೭. ಆನೆಗಳ ಸೊಂಡಿಲಿನ ಚೀತ್ಕಾರ, ರಥಚಕ್ರಗಳ ಚೀತ್ಕಾರ ಬಿಲ್ಲುಗಾರ ಧನುಷ್ಟಂಕಾರ, ಹಲವಾರು ಕಾಳೆಗಳ ಪೂತ್ಕಾರ, ಕುದುರೆಗಳ ಖುರಪುಟದ

ಅಂತುಭಯಸೇನೆಯುಂ ಪೃಷತ್ಕಪಾತಮಾತ್ರತೃತಯಾಂತರಧರಿತ್ರೀಭಾಗದೊಳ್ ವಿಚಿತ್ರ ವ್ಯೂಹಮಾಗಲೊಡಮೆರಡುಂ ಪಡೆಯ ಸೇನಾನಾಯಕರ್ ಕೈವೀಸಿದಾಗಳ್

ಇದು ನೆಲನಾಗಸಂ ದೆಸೆಯಿರುಳ್ಪಗಲೆಂಬ ವಿಕಲ್ಪಮಾರ ಚಿ ।
ತ್ತದೊಳಮಳಂಕೆಗೊಳ್ಳವಿಷುಜಾಲಮಯಂ ಬಗೆವಂದು ವಿಶ್ವಮಂ ॥
ಬಿದೆ ದೊರೆಕೊಳ್ಗುಮೆಂಬಿನೆಗಮಚ್ಚರಿವೆತ್ತಿರೆ ಬಿದ್ದ ಮೆಚ್ಚು ಕಾ ।
ದಿದುದು ತಗುಳ್ದು ಬಿಲ್ವಡೆ ಪಡಲ್ವಡೆ ಮಾಣದೆ ನಿಂದು ಪೂಣೆಗರ್ ॥ ೭೮

ಆಲೋಹನಿಮಗ್ನೇಷುಕ ।
ಜಾಲಂ ಮದಿದಿರೆ ಶರೀರಮಂ ಬೀಟಲ್ತ ॥
ಳ್ತಾಲದ ಪಣೆಯೆವೊಲೆಂತುಂ ।
ಚಾಲಿಸಲರಿದೆನಿಸಿ ನಿಂದರರೆಬರ್ ವೀರರ್ ॥ ೭೯

ತಿರು ಪಱಿದೊಡೆ ದಂಡಾದಂ ।
ಡಿರಣಂ ಬಿಲ್ಲಿಂದಮಾಯ್ತು ಬಿಲ್ಮುಱಿದೊಡೆ ಗೋ ॥
ಣ್ಮುರಿಗೆ ತಲೆಯೊತ್ತುತಿರ್ಪೊಂ ।
ದುರವಣೆಯಿಂದಾದುದಾ ಕಚಾಕಚಿಯುದ್ಧಂ ॥ ೮೦

ಪಱಿಯೆ ತಿರು ಮುಱಿಯೆ ಬಿಲ್ ತವೆ ।
ನೆಱಿಯೆ ಸರಲ್ ಬಿಲ್ಲ ಬಿತ್ತೆಗರ್ ಕಡುಪೊತ್ತುಂ ॥
ಬಱಿಯದೆ ತಮ್ಮೊಳ್ ಸಲೆ ಸುರಿ ।
ಗಿಱಿದಟಿದರವಂಧ್ಯಮಲ್ತೆ ವೀರೋದ್ರೇಕಂ ॥ ೮೧

ಚಟತ್ಕಾರ, ನಿಸ್ಸಾಳಗಳ ಭಾಂಕಾರ– ಈ ಎಲ್ಲ ಧ್ವನಿಗಳಿಂದ ಉಭಯಸೇನೆಗಳು ಜಗತ್ತನ್ನೆಲ್ಲ ಶಬ್ದಮಯಗೊಳಿಸಿದುವು. ವ॥ ಹೀಗೆ ಎರಡೂ ಬಲಗಳು ಬಾಣಪಾತದ ಅಳತೆಯೊಳಗೆ ಮೂರನೆಯ ಭಾಗದಷ್ಟು ಅಂತರದಲ್ಲಿ ತಂತಮ್ಮ ವಿಚಿತ್ರವ್ಯೂಹಗಳ ನ್ನೊಡ್ಡಿ ನಿಂತುವು. ಸೇನಾಧಿಪತಿಗಳು ಕೈಬೀಸಿ ಅಪ್ಪಣೆಕೊಟ್ಟೊಡನೆ– ೭೮. ಇದು ನೆಲ ಇದು ಆಕಾಶ, ಇದು ಹಗಲು ಇದು ರಾತ್ರಿ – ಎಂಬ ಭೇದ ಯಾರಿಗೂ ಹೊಳೆಯದಂತೆ ಬಾಣಗಳು ಮುಸುಕಿಕೊಂಡುವು. ಜಗತ್ತೆಲ್ಲ ಬಾಣಮಯವೆಂಬಂತೆ ಬಿಲ್ಗಾರರ ಪಡೆ ಹುಮ್ಮಸ್ಸಿನಿಂದ ಎದುರು ಪಡೆಯುರುಳುವಂತೆ ಕೆಚ್ಚಾಳುಗಳು ಕಾದಿದರು. ೭೯. ಮೈಯಲ್ಲೆಲ್ಲಾ ಬಾಣಗಳು ಆಳವಾಗಿ ನಟ್ಟು ನಿಲ್ಲಲಾಗಿ, ಬೀಳಲು ಬಿಟ್ಟ ಆಲದ ಕಾಂಡದಂತೆ ಅಚಲರಾಗಿ ಕೆಲವರು ವೀರರು ನಿಂತರು. ೮೦. ಹೆದೆ ಹರಿದು ಹೋಗಲು ಬಿಲ್ಲುಗಳಿಂದಲೆ ಕೋಲಾಕೋಲಿ ಯುದ್ಧವಾಯಿತು; ಬಿಲ್ಲೂ ಮುರಿದ ಮೇಲೆ ಗೋಣುಮುರಿ ಕಾಳಗಕ್ಕಾಗಿ ತಲೆಯುತ್ತಿ ಬಂದು ರಭಸದಿಂದ ಕೇಶಾಕೇಶಿ ಯುದ್ಧಕ್ಕೆ ತೊಡಗಿದರು. ೮೧. ಹೆದೆ ಹರಿದು, ಬಿಲ್ಲು ಮುರಿದು, ಬಾಣಗಳೆಲ್ಲ ತೀರಿಹೋಗಲಾಗಿ ಬಿಲ್ವಿದ್ಯೆಯ ನಿಪುಣರು ರಣೋತ್ಸಾಹವನ್ನು ಕಳೆದು ಕೊಳ್ಳದೆ ಕಠಾರಿಗಳಿಂದ ಇರಿದಾಡಿದರು, ವೀರೋದ್ರೇಕವು ಅಪ್ರತಿಹತವಲ್ಲವೆ ?

ಇವು ಸಮರಾಬ್ಧಿಯೊಳ್ ನೆಗದಗುರ್ವಿಸೆ ಘೂರ್ಮಿಪ ಕೂರ್ಮಕೋಟಿಯೆಂ ।
ಬವೊಲದಟಿಂದಮೆಯ್ದೆ ಪರಿತಂದು ಪಳಂಚಿದ ಬಾಳ್ಗಳಿಂದೆ ಸೂ ।
ಸುವ ಕಿಡಿಗಳ್ ರಣಾಂಧಕೃತಿಯಂ ಕ್ರಮದಿಂದೆ ಕಳಲ್ಚೆ ಕಾದೆ ನೋ ॥
ಡುವ ದಿವಿಜರ್ಗೆ ಕೌತುಕಮನಡ್ಡಣದೊಡ್ಡಣ್ಣಮಿತ್ತುದೆತ್ತಲುಂ ॥ ೭೨

ಆಗಳ್

ಕರವಾಳಘಾತದಿಂ ಪರಿ ।
ದುರುಳ್ವ ತಲೆಗಳನವುಂಕಿ ಪಿಡಿದರೆಬರ್ ಟೆ ॥
ಬ್ಬರಿಸಿ ಮಗುಟ್ದಟ್ಟೆಯೊಳ್ ಬಿ ।
ತ್ತರದಿಂ ಬೀರಕ್ಕೆ ಕಳಶಮಿಡುವಂತಿಟ್ಟರ್ ॥ ೭೩

ಮೊಕ್ಕಳಮೆನೆ ಬಸಿಱಿಂ ।
ದೊಕ್ಕ ಕರುಳ್ ತೊಡೆಯೊಳಾವಗಂ ತೊಡರ್ದನಸುಂ ॥
ಮಿಕ್ಕುವು ಬಿರುದರ ಬಿರುದಿಂ ।
ಗಿಕ್ಕಿದ ನುಣ್ಚೆಸದ ಮಿಸುಪ ತೊಡೆಸಂಕಲೆಯಂ ॥ ೭೪

ಅಂತು ಪಾಯದಳಿಮೆಲ್ಲಮೆಚ್ಚು ಮುಱಿದುಂ ಕುಱಿದಱಿಯಾಗೆ ತೆಱಪುವಡೆದಿದಿರೊಡ್ಡಿನ ತೇರೊಡ್ಡುಗಳ್ ಶೂರಸಾರಥಿಪ್ರೇರಣನೋರೊಂದಂ ಪತ್ತೆ ಸಾರ್ಚಿದಾಗಳ್

೭೨. ವೀರಾವೇಶದ ಖಡ್ಗಗಳು ಬಂದು ಅಪ್ಪಳಿಸಿದಾಗ ಸೂಸುವ ಕಿಡಿಗಳಿಂದ ರಣಗತ್ತಲೆ ಕ್ರಮವಾಗಿ ಹರಿದುಹೋಗಲು ಸ್ಪಷ್ಟವಾಗಿ ಕಾಣುತ್ತಿರುವ ಹರಿಗೆಗಳ ವ್ಯೂಹವನ್ನು ದೇವತೆಗಳು ನೋಡಿ, "ಇವು ಸಮರವೆಂಬ ಸಮುದ್ರದಲ್ಲಿ ನೆಗೆದು ಭೀಕರವಾಗಿ ಶಬ್ದ ಮಾಡುತ್ತಿರುವ ಕೂರ್ಮಗಳ ಹಿಂಡು" ಎಂದು ಕೌತುಕ ಪಟ್ಟರು. ೭೩. ಖಡ್ಗದ ಹೊಡೆತದಿಂದ ಕತ್ತರಿಸಿ ಉರುಳುವ ತಮ್ಮ ತಲೆಗಳನ್ನು ಅವಚಿ ಹಿಡಿದು, ರಭಸದಿಂದ ತಮ್ಮ ಅಟ್ಟೆಗಳಿಗೆ ಮತ್ತೆ ಇಟ್ಟುಕೊಂಡು ಕೆಲವರು ಶೌರ್ಯಕ್ಕೆ ಕಳಸವಿಡುವಂತೆ ತೋರಿದರು. ೭೪. ಹೊಟ್ಟೆಗೆ ಬಿದ್ದ ಆಯುಧಾಘಾತದಿಂದ ಕರುಳು ಹೊರಬಿದ್ದು ತೊಡೆಗಳಿಗೆ ತೊಡಕಿರಲಾಗಿ, ಬಿರುದಿನ ಭಟರು ಬಿರುದಿಗೆಂದು ತೊಟ್ಟುಕೊಂಡ ಕುಸುರಿಗೆಲಸದ ಹೊಳಪಿನ ತೊಡೆಬಳೆಗಳಿಗಿಂತಲೂ ಅಧಿಕವಾಗಿ ಅವು ಶೋಭಿಸಿದುವು. ವ॥ ಹೀಗೆ ಕಾಲ್ಬಲವೆಲ್ಲ ಇರಿದಾಡಿ ಮುರಿದು, ಛಿನ್ನವಿಚ್ಛಿನ್ನವಾಗಿ ಬಿದ್ದು, ಬಯಲಾಗಲು, ಎರಡೂ ಸೈನ್ಯಗಳ ರಥದ ಪಡೆಗಳನ್ನು ಶೂರರಾದ ಸಾರಥಿಗಳು ಪರಸ್ಪರರಿಗೆ ಎದುರು ಬದುರಾಗಿ

ಶಾತಶರಪ್ರಹಾರದೆ ರಥಾಂಗವಿದಾರಣಮಕ್ಷಖಂಡನಂ।
ಸೂತನಿಷೂದನಂ ಯುಗಸಮುದ್ದಳನಂ ಧ್ವಜಭಂಜನಂ ಹಯ॥
ವ್ರಾತನಿಶುಂಭನಂ ಸಮನಿಸುತ್ತಿರೆ ತಮ್ಮಯ ಚಾಪಚಾಪಲಂ।
ಕೌತುಕಮಪ್ಪಿನಂ ಸಮರಥಾರ್ಧರಥಾತಿರಥರ್ ಪಳಂಚಿದರ್॥ ೭೫

ಎಚ್ಚಂಬಂ ಬೇಗದೆ ಪೆಱ।
ಗೆಚ್ಚ ಸರಲ್ ತಾಲಿ ಪಿಳ್ಕಿನಿಂ ಮೊನೆವರೆಗಂ॥
ಪಚ್ಚಂತೆ ಸೀಳ್ದು ನಟ್ಟುವು।
ಬಿಚ್ಚತಮಿರ್ಮಡಿಸಿ ತೊಡರ್ದು ರಥಿಗಳನಾಗಳ್॥ ೭೬

ಬಿಡದೆಚ್ಚು ಸರಲ್ ತವೆ ಮನ।
ದಡರ್ಪು ತವದುರ್ವಿ ಮೈಯೊಳಿರ್ದಂಬಂ ಕೈ॥
ಯುಡಗದೆ ಕಿೞ್ತೆಚ್ಚರ್ ಪಡ।
ಲಿಡೆ ತೊಡರ್ದರ್ ಕದನಲಂಪಟರ್ ವೀರಭಟರ್॥ ೭೭

ಅಂತು ರಥಾರೂಢರೆಲ್ಲಂ ಪರಿಪೂರ್ಣಕದನಮನೋರಥರಾಗಲೊಡಂ

ಪರಿದುವು ಬಡಬಾಗ್ನಿಯ ಕೇ।
ಸುರಿ ಬಳಸಿದ ತೆರೆಗಳೆಂಬಿನಂ ಘೋಟಿಕಾಯ್ಲರ್॥
ಪರಿಯಿಸೆ ತರದಿಂ ಪೊಂಬ।
ಕ್ಕರಗೆಯ ತುರಗಂಗಳಾಹವಾಂಭೋನಿಧಿಯೊಳ್॥ ೭೮

ತಂದೊಡ್ಡಿದರು. ೭೫. ಹರಿತವಾದ ಬಾಣಪ್ರಹಾರದಿಂದ ಸಮರಥರು, ಅರ್ಧರಥರೂ, ಅತಿರಥರೂ ತಂತಮ್ಮ ಧನುರ್ವಿದ್ಯೆಯ ಚಳಕದಿಂದ ಆಶ್ಚರ್ಯಕರವೆನಿಸುವಂತೆ ಎಸಾಡಲಾಗಿ, ರಥದ ಗಾಲಿಗಳು ಮುರಿದುವು; ಅಚ್ಚು ತುಂಡಾದುವು; ಸಾರಥಿಗಳು ಮಡಿದರು; ನೊಗಗಳು ತುಂಡರಿಸಿದುವು; ಧ್ವಜಗಳು ಭಂಗಗೊಂಡುವು. ೭೬. ಬಿಟ್ಟ ಬಾಣಗಳು ಸಾಗುತ್ತಿದ್ದಂತೆ, ಅದರ ಹಿಂದಿನಿಂದ ಎಚ್ಚ ಬಾಣಗಳು ನುಗ್ಗಿ ಬಂದು ತಾಗಿ, ಅವುಗಳನ್ನು ಹಿಳುಕಿನಿಂದ ತುದಿಯುವರೆಗೆ ಸೀಳಿ ಹೋಳುಮಾಡಿ (ಅವುಗಳೊಡನೆ) ಇಮ್ಮಡಿಯಾಗಿ ರಥಗಳ ಮೈಗಳನ್ನು ನಟ್ಟುವು. ೭೭. ನಿರಂತರವಾಗಿ ಎಚ್ಚು ಎಚ್ಚು ಬಾಣಗಳೆಲ್ಲ ತೀರಿದುವು; ಆದರೆ ಮನದ ಉತ್ಸಾಹ ತೀರದೆ ತಮ್ಮ ಮೈಯಲ್ಲಿ ನೆಟ್ಟ ಬಾಣಗಳನ್ನೆ ಕಿತ್ತುಕಿತ್ತು ತಮ್ಮ ಬಿಲ್ಲಿಗೆ ಹೂಡಿ ಎದುರಪಡೆ ಚೆಲ್ಲಾಪಿಲ್ಲಿಯಾಗುವಂತೆ ಸಮರಲಂಪಟರಾದ ಶೂರಯೋಧರು ಪ್ರಹಾರಮಾಡಿದರು. ವ॥ ಹೀಗೆ ರಥಿಕವೀರರೆಲ್ಲರೂ ತಮ್ಮ ಸಂಗ್ರಾಮ ಮನೋರಥವನ್ನು ಪೂರ್ಣವಾಗಿ ಈಡೇರಿಸಿಕೊಂಡು (ತೀರಿದರು). ಆಗ–೭೮. ಸವಾರರು ರಭಸದಿಂದ ನುಗ್ಗಿಸಲಾಗಿ, ಚಿನ್ನದ ಪಕ್ಕರಕ್ಷೆಗಳನ್ನು ಕಟ್ಟಿಕೊಂಡ ಕುದುರೆಗಳು,–ವಾಡವಾಗ್ನಿಯ ಕೆಂಪು ಜ್ವಾಲೆಗಳು ಆವರಿಸಿದ ಸಮುದ್ರದ ತೆರೆಗಳೊ ಏನೊ

ಎಚ್ಚಡ್ಡಾಯುಧಮಂ ಕಿ ।
ಟ್ಟಿರಿಯೆನೆ ನೂಂಕೆ ತುರಗಮಂ ತುಕ್ಕಿಡಿಗಳ್ ॥
ಪಚ್ಚವಳದೆಡೆಗಳಂ ಮು ।
ನ್ನೆಚ್ಚ ಸರಲ್ ತಾಗೆ ಪಱೆದುವುರೆ ಚೆಚ್ಚಱದಿಂ ॥ ೭೯

ಅದಲ್ಲದೆಯುಂ

ಪವಣೆಲ್ಗುರ್ಚುವ ಕೋಲ್ಗೆ ತಾಗುವ ಚಲಚ್ಚಕ್ರಕ್ಕಸುಂಗೊಳ್ವ ಭಿಂ ।
ಡಿವಳಕ್ಕಿರ್ಮೊನೆಗಾಣ್ಬ ಕಕ್ಕಡೆಗೆ ಬಿದ್ದಂ ಬೀಟ್ವ ಕೊಂತಕ್ಕೆ ಸು ॥
ತ್ತುವ ಪಾಶಕ್ಕೆ ತಗುಳ್ದು ಪೊಯ್ವ ಗದೆಗಾದಂ ನೇರ್ವ ಕೂರ್ವಾಳ್ಗೆ ನಾಂ ।
ಟುವ ಗೇಣ್ಗೆಂಬಿಸಮಾದುದದ್ಭುತಮದಶ್ವವ್ಯೂಹದುಗ್ರಾಹವಂ ॥ ೮೦

ಪಸುವೆಂಬೇವದೆ ಕುದುರೆಯ ।
ಮಸೆಯಂ ಕಾದೊರ್ವರೊರ್ವರಂ ಪೊಯ್ದರ್ ಮಾ ॥
ಮಸಕದೆ ಪಣಿದಂಬೊಯ್ವಂ ।
ತಸಿಯಿಂ ಪಿಂಗದೆ ತುರಂಗಿಗಳ್ ಸಂಗರದೊಳ್ ॥ ೮೧

ಆತುರಂಗಸಂಗ್ರಾಮಾನಂತರದೊಳಾ ಘೋರಣರ್ ವಾರಣಮಂ ನೂಂಕೆ,

ಗುಱವಂ ಪಕ್ಕಂ ನಿಜಕರ ।
ಮೆಟಿಲ್ವ ಪೆರ್ವಾವು ಕೋಡೆ ಕೋಡುಂಗಲ್ ಮ ॥
ತ್ತಿಟಿವಮದಮರ್ಬಿಯೆನೆ ಕ ।
ಣ್ಗೊಟಲಿಗೆ ನೆಲೆಯಾದುವೆಱಕೆವೆಟ್ಟೆನೆ ಕರಿಗಳ್ ॥ ೮೨

ಎಂಬಂತೆ ವೇಗವಾಗಿ ಹೊರಟು ಬಂದುವು. ೭೯. ರಾವುತರು ಬಾಣಪ್ರಯೋಗ ಮಾಡಿದ ಬಳಿಕ ಉತ್ಸಾಹದಿಂದ ಅಡ್ಡಾಯುಧವನ್ನು ಹಿರಿದುಕೊಂಡು ಆಶ್ಚರ್ಯಕರವಾಗಿ ತಮ್ಮ ಕುದುರೆಗಳನ್ನು ಮುನ್ನುಗ್ಗಿಸಿದರು. ಮೊದಲು ಬಿಟ್ಟ ಬಾಣಗಳು ತಮ್ಮ ಹಿಂದಿನ ಚಪ್ಪೆಗೆ ತಾಗುವಂತೆ ಕುದುರೆಗಳು ವೇಗವಾಗಿ ಓಡಿದುವು. ಅದಲ್ಲದೆ–೮೦. ನಡುವ ಬಾಣ, ತಾಗುವ ಚಕ್ರ, ಕೊಲ್ಲುವ ಭಿಂಡಿವಾಳ, ಮೈಯನ್ನು ಭೇದಿಸಿಕೊಂಡು ಹೋಗುವ ಕಕ್ಕಡೆ ಮರ್ಮಕ್ಕೆ ನಾಟುವ ಕೊಂತ, ಸುತ್ತಿಬಿಗಿವ ಪಾಶ, ಆಕ್ರಮಿಸಿ ಹೊಡೆವ ಗದೆ, ಕತ್ತರಿಸುವ ಕತ್ತಿ, ಚುಚ್ಚುವ ಕಠಾರಿ– ಇವುಗಳಿಗೆ ಮಿತಿಯೆ ಇಲ್ಲವೆಂಬಂತೆ ಅಶ್ವದಳದ ಕಾಳಗ ಉಗ್ರವೂ ಅದ್ಭುತವೂ ಆಯಿತು. ೮೧. ಪಶುವೆಂದು ತಮ್ಮ ಕುದುರೆಗೆ ಸ್ವಲ್ಪವಾದರೂ ಗಾಯವಾಗದಂತೆ ನೋಡಿಕೊಂಡು, ರಾವುತರು ಪರಸ್ಪರರನ್ನು ಹಣಿದವಾಡಿದಂತೆ (ಕಬ್ಬು ಕತ್ತರಿಸುವಂತೆ) ಖಡ್ಗದಿಂದ ತುಂಡುತುಂಡು ಮಾಡಿದರು. ವ॥ ಹೀಗೆ ಅಶ್ವದಳಗಳ ಕಾಳಗ ಸಮಾಪ್ತವಾದಾಗ, ಮಾವುತರು ಆನೆಗಳನ್ನು ನುಗ್ಗಿಸಿದರು. ೮೨. ಪಕ್ಕರಕ್ಕಗಳೆ ರೆಕ್ಕೆ, ಸೊಂಡಿಲುಗಳೆ ಇಳಿಬಿದ್ದ ಹೆಬ್ಬಾವು, ಕೋರೆಗಳೆ ಶಿಖರಗಳು, ಇಳಿಯುತ್ತಿರುವ ಮದಜಲವೆ ಗಿರಿನಿರ್ಝರವಾಗಲಾಗಿ, ಆ ಆನೆಗಳು ರೆಕ್ಕೆ ಬೀಸಿ

ಅಂತು ಕವಿದು,

ದಿಗಿಭಂಗಳ್ ದಿಗಿಭಂಗಳೊಳ್ ಮಿಗೆ ಮೊಗಂಬೊಕ್ಕಂತಿರಾರ್ದೊಡ್ಡಿನಾ।
ನೆಗಳೊರೊಂದಜೊಳೊಂದು ತಾಗಿ ತಲೆಮಟ್ಟೆರ್ಪಲ್ಲಿ ಬಿಲ್ಲಂ ನಿಪಾ॥
ದಿಗಳಂದೊಲ್ಲದೆ ಕಿಟ್ಟಿ ಗೇಣೊಳೆ ತಡಂಬಾಯ್ದುಯ್ದೆ ತದ್ವೈರಿಯೋ।
ಧಿಗಳಂ ತಾನನೆ ತಕ್ಕಿನೆಕ್ಕತುಳದಿಂ ಕೈಯಾರ್ವಿನಂ ಕಾದಿದರ್॥ ೮೩

ಅದಲ್ಲದೆಯುಂ

ಒತ್ತುವ ಕಾಯ್ಪು ಪೊಯ್ವದಟು ಬಂಚಿಪ ಬಿನ್ನಣಮೊಂದನೊಂದು ಬೆಂ।
ಬತ್ತುವ ಬೇಗೆಮೆಯ್ಗೆ ತಗೆವುರ್ಕು ತೆಱಂದಿರಿದಾಂತ ಮೆಯ್ವಸಂ॥
ಸುತ್ತುವ ಬಲ್ಪು ಪುಣ್ಗಳವುಗುಂದದ ಸೊರ್ಕಿವು ತಮ್ಮೊಳೆಯ್ದೆ ಮೆ।
ತ್ತೆತ್ತಿರೆ ಬಿಚ್ಚತಂ ಪೊಣರ್ದುವಂದೆರಡುಂ ಬಲದಂಕದಾನೆಗಳ್॥ ೮೪

ರದಸಂಘಟ್ಟದಿನೆತ್ತಂ।
ಕೆದಱುತ್ತುಂ ತೋರಗಿಡಿಗಳಂ ಕಾದುವ ತ॥
ನ್ಮದಗಜಘಟೆ ಪೋಲ್ತುದು ಕೆಂ।
ಡದ ಮಱೆಯಂ ಕಱೆವ ವಿಲಯಜಲಧರಘಟೆಯಂ॥ ೮೫

ಆಗಳ್ ಕಾಲ್ಗಾಪಿನ ಕಟ್ಟಾಳ್ಗಳ್ ಕಡುಕೆಯ್ದು

ಮೋದೆ ಸಿತಾಸಿಯಿಂ ಪಱಿಯೆ ಕೈ ಕೆಲವಂದು ಮಹಾವರಾಹನಂ।
ತಾದುವು ಕೂಡೆ ಕುಕ್ಕುಱಿಸೆ ಪಿಂದೊಡೆಗಳ್ ಕೇಲವೇಕದಂತನಂ॥

ಹಾರಾಡುವ ಬೆಟ್ಟಗಳೊ ಏನೊ ಎಂಬಂತೆ ಕಂಗೊಳಿಸಿದುವು. ಹಾಗೆ ಆಕ್ರಮಿಸಿ– ೮೩. ದಿಗ್ಗಜಗಳು ದಿಗ್ಗಜಗಳಿಗೆ ಎದುರಾಗಿ ಹಣಾಹಣಿಯಾಗಿ ಹೋರಾಡುತ್ತಿರುವುವೊ ಏನೊ ಎಂಬಂತೆ ಇತ್ತಂಡಗಳ ಆನೆಗಳು ಒಂದನ್ನೊಂದು ಆಕ್ರಮಿಸಿ ತಲೆಗೆ ತಲೆ ತಿವಿಯುತ್ತಿರಲಾಗಿ ಮಾವುತರು ಬಿಲ್ಲುಗಳನ್ನು ಬಿಟ್ಟು, ಹಿರಿದ ಕಿರುಗತ್ತಿಗಳಿಂದಲೆ ಕೈಸೋಲುವವರೆಗೆ ದ್ವಂದ್ವಯುದ್ಧ ಮಾಡಿದರು. ಅದಲ್ಲದೆ– ೮೪. ಒತ್ತುವ ರಭಸ, ಹೊಡೆಯುವ ಅಬ್ಬರ, ಹೊಡೆತವನ್ನು ತಪ್ಪಿಸಿಕೊಳ್ಳುವ ಚಾತುರ್ಯ ಒಂದನ್ನೊಂದು ಬೆನ್ನಟ್ಟುವ ವೇಗ, ಆಕ್ರಮಿಸುವ ಕೆಚ್ಚು ಒಮ್ಮೆಲೆ ಹೊರಳಿ ಬಂದು ಸುತ್ತುವ ಸಾಮರ್ಥ್ಯ, ಗಾಯಗಳಿಗೆ ಅಳುಕದ ಕದನೋನ್ಮಾದ– ಇವೆಲ್ಲವನ್ನು ಅತ್ಯಧಿಕವಾಗಿ ಅಳವಡಿಸಿಕೊಂಡು ಎರಡೂ ಬಲದ ಆನೆಗಳು ಹೋರಾಡಿದುವು. ೮೫. ಕೋರೆಗೆ ಕೋರೆ ಅಪ್ಪಳಿಸಿ ತೋರವಾದ ಕಿಡಿಗಳನ್ನು ಹಾರಿಸುತ್ತ ಕಾದಾಡುವ ಆ ಮದಗಜ ಸೇನೆಗಳು ಕೆಂಡದ ಮಳೆಯನ್ನು ಕರೆಯುವ ಪ್ರಳಯ ಮೇಘಗಳ ಸಮುದಾಯಗಳಂತೆ ಕಂಡುವು. ವ॥ ಆಗ ಕಾಲ್ಗಾವಲಿನ ಕಡುಗಲಿಗಳು ರಭಸವೇರಿ – ೮೬. ಹರಿತವಾದ ಖಡ್ಗಗಳಿಂದ ಚಚ್ಚಲು, ಸೊಂಡಿಲು ಕತ್ತರಿಸಿ ಕೆಲವು ಆನೆಗಳು ಮಹಾವರಾಹಗಳಂತಾದುವು, ಹಿಂದೊಡೆಗಳು

ತಾದುವು ಬೀಟಿ ದಂತಯುಗಳಂ ಕೆಲವಾಕರಿಣೀಕದಂಬದಂ ।
ತಾದುವಗುರ್ವಿನಾನೆಗಳದೇನತಿಕೌತುಕಮಾಯ್ತೊ ಕಾಳೆಗಂ ॥ ೮೬

ಅಂತಡುರ್ತು ಕಾದಿ ತಮ್ಮ ಪಡೆಯ ಪದಾತಂಗಳುರಿಯೊಳೆಱಗಿದ ಪತಂಗಂಗಳಂತೆ ವಿನಾಶಮನೆಯ್ದಿಯುಂ ಅರದಂಗಳ್ ವಯೋಧಿಕನರದಂಗಳಂತೆ ಕಳಲ್ದುಳಲೆಯುಂ, ವಾಹಂಗಳ್ ಮರಮರೀಚಿಕಾವಾಹಂಗಳಂತೆ ಮಾಯಮಾಗಿಯುಂ, ಗಜಂಗಳ್ ನಿಧಾಘಸಮಯದ ಗಜಂಗಳಂತೆ ಪಡಲಿಡೆಯುಂ, ಅದಂ ಕಂಡು ಪೃಥ್ವೀಪಾಲತಂತ್ರಪಾಲಂ ಚಂದ್ರಶೇಖರಂ ಮೊದಲಾಗೆ ಕೇತುಮಹಾಕೇತು ವಿರೋಚನಂ ಮಹಾರಥಂ ಸೂರ್ಯರಥಂ ತಟಿದ್ವಕ್ತ್ರಂ ಸಿಂಹವಿಕ್ರಮಂ ವರುಣಂ ಚಂಡಕೀರ್ತಿಯೆಂಬ ಸಾಮಂತಕರಾತ್ಮಪಕ್ಷಕ್ಷಯದಿನಾದಾಕ್ಷೇಪದಿಂ ರೂಕ್ಷಭಾವಮನೊಳಕೆಯ್ದು ಪದ್ಮನಾಭಸೇನಾನಿಭೀಮಂ ಮೊದಲಾಗೆ ಒಡ್ಡಿನಿಂದ ಸುಭೀಮಂ ಮಹಾಸೇನಂ ಚಿತ್ರಾಂಗಂ ಪರಂತಪಂ ಕಂಬಂ ಸುಕುಂಡಲಂ ಭೀಮರಥ ಮಹೀರಥರೆಂಬ ಸಾಮಂತರೊಳಿದಿರ್ಚಿ ರಥಿಗಳ್ ರಥಿಗಳೊಳ್ ತುರಂಗಿಗಳ್ ತುರಂಗಿಗಳೊಳ್ ನಿಷಾದಿಗಳ್ ನಿಷಾದಿಗಳೊಳ್ ಮೂದಲಿಸಿ ತಾಗಿದಾಗಳ್

ಬಗೆವಂದೀ ದೊರೆತಾದುದದ್ಭುತತರಂ ಯುದ್ಧಂ ಮರುದ್ದಾನವೋ ।
ರಗವಿಧ್ಯಾಧರರಲ್ಲಿ ಮುಂ ಸಮನಿಸಿತ್ತಿಲ್ಲೆಂದುಮೆಂಬಂತುಟಾ ॥
ಯ್ತುಗಳಚ್ಛೋಣಿತಮುತ್ಪತತ್ಪಲಲಪಿಂಡಂ ಸಂಚರಚಂಡಗೃ ।
ಧ್ರಗಣಂ ಸ್ವೈರನಟತ್ಕಬಂಧತತಿ ಕೇಶಾಕೇಶಿ ರೌದ್ರಾವಹಂ ॥ ೮೭

ಹರಿದು ಕುಕ್ಕರಿಸಿ ಕೆಲವು (ಕುಳಿತ ಗಣಪತಿಯಂತಾದುವು, ಕೋರೆಗಳನ್ನು ಕಳಚಿಕೊಂಡ ಕೆಲವು ಹೆಣ್ಣಾನೆಗಳ ಹಿಂಡಿನಂತಾದವು.) ಪ್ರಚಂಡವಾದ ಆನೆಗಳ ಕಾಳಗವು ಹೀಗೆ ವಿಸ್ಮಯಕರವಾಯಿತು. ವ॥ ಹೀಗೆ ಕಟ್ಟುಗ್ರವಾಗಿ ಕಾದಾಡಿ ತಮ್ಮ ಸೈನ್ಯದ ಕಾಲಾಳುಗಳು ಉರಿಯ ಮೇಲೆ ಎರಗಿದ ದೀಪದ ಹುಳುಗಳಂತೆ ಸುರಟಿ ಬೀಳಲು, ರಥಗಳು ಮುದುಕನ ಹಲ್ಲುಗಳಂತೆ ಕಳಚಿ ಹೋಗಲು, ಕುದುರೆಗಳು ಬಿಸಿಲುಗುದುರೆಗಳಂತೆ ಮಾಯವಾಗಲು, ಆನೆಗಳು ಬೇಸಗೆಯ ಆನೆಗಳಂತೆ ಚೆಲ್ಲಾಪಿಲ್ಲಿಯಾಗಲು_ಅದನ್ನು ಕಂಡು ಪೃಥ್ವಿಪಾಲನ ಸೇನಾನಿಯಾದ ಚಂದ್ರಶೇಖರನೆ ಮೊದಲಾಗಿ ಕೇತು, ಮಹಾಕೇತು, ವಿರೋಚನ, ಮಹಾರಥ, ಸೂರ್ಯರಥ, ತಟಿದ್ವಕ್ತ್ರ, ಸಿಂಹವಿಕ್ರಮ, ವರುಣ, ಚಂಡಕೀರ್ತಿಯೆಂಬ ಸಾಮಂತರು ತಮ್ಮ ಪಕ್ಷದ ಸೇನೆಯೆಲ್ಲ ನಾಶವಾದುದನ್ನು ಕಂಡು ಕ್ರೋಧಗೊಂಡು, ಪದ್ಮನಾಭನ ಸೇನಾಪತಿಯಾದ ಭೀಮನೆ ಮೊದಲಾಗಿ ಒಡ್ಡಿ ನಿಂತ ಸುಭೀಮ, ಮಹಾಸೇನ, ಚಿತ್ರಾಂಗ ಪರಂತಪ, ಕಂಬ, ಸುಕುಂಡಲ, ಭೀಮರಥ, ಮಹಾರಥರೆಂಬ ಸಾಮಂತರನ್ನು ಎದುರಿಸಿದರು. ರಥಿಕರು ರಥಿಕರನ್ನು, ರಾವುತರು ರಾವುತರನ್ನೂ, ಮಾವುತರು ಮಾವುತರನ್ನೂ ಮೂದಲಿಸುತ್ತ ಒಬ್ಬರ ಮೇಲೊಬ್ಬರು ಏರಿ ಬಂದು ಆಕ್ರಮಿಸಲಾಗಿ_೮೭. ನೆತ್ತರು ಸುರಿಯುತ್ತಿರುವ ಮಾಂಸಖಂಡಗಳನ್ನು ಕುಕ್ಕುತ್ತ ರಣಹದ್ದುಗಳು ರಣಾಂಗಣದಲ್ಲಿ ಹರಿದಾಡುತ್ತಿದ್ದವು; ರುಂಡವಿಲ್ಲದ ಅಟ್ಟೆಗಳು (ಅಸ್ತವ್ಯಸ್ತ

ಅಂತು ಕಾದಿ ಕಡೆಗಾಲದ ಬಜಿಸಿಡಿಲ ಬಳಗದೊಳ್ ತೊಡರ್ದ ಪಕ್ಕೆವೆಟ್ಟುಗಳ ತಳ್ಕೆಯಂತೆಯುಂ, ಸಿಂಗದ ಜಂಗುಳಿಯೊಳಾಂತ ಮಾತಂಗಸಂಘಾತದಂತೆಯುಂ, ಭೇರುಂಡನ ಪಿಂಡಿನೊಳ್ ತಾಗಿದ ಶರಭದ ನೆರವಿಯಂತೆಯುಂ, ಪ್ರಳಯಪ್ರಭಂಜನಪ್ರತಾನದೊಳಿದಿರ್ಚಿದ ಮುಗಿಲ ಮೊಗ್ಗರದಂತೆಯುಂ, ಓಡಿಯುಮಟ್ಟೌಡಿಯುಂ ಪೋದ ನಿಜಸಾಮಂತಸಂದೋಹಮಂ ಪೃಥ್ವೀಪಾಲತನೂಭವಂ ಧರ್ಮಪಾಲಂ ಕಂಡು ತಂದೆಯ ಮುಂದಣ್ಗೆ ವಂದು

ಇನ್ನೆನ್ನ ಪದಂ ಬೞಿಕಂ ।
ನಿನ್ನ ಪದಂ ದೇವ ಬೆಸಸು ತೊಡರ್ದರಿಸೈನ್ಯಂ ॥
ಬೆನ್ನಿತ್ತೊಡಱಿಯೆನಾಂತೊಡ ।
ದೆನ್ನೆಱಿ ಪರ್ದಿಂಗೆ ಬಿರ್ದನಿಕ್ಕುವೆನೀಗಳ್ ॥ ೮೮

ಬೆಸಸೆನ್ನಂ ನೃಪ ನಿನ್ನಯ ।
ನೊಸಲೊಳ್ ತ್ರಿಪತಾಕೆಯೆತ್ತಿ ತೋಱಿದ ಮುನ್ನೆ ॥
ತ್ತಿಸಿ ತೋರ್ಪೆಂ ರಿಪುಬಳಮಮಂ ।
ದೆಸೆಬಿದ್ದಂ ತೂಳ್ದಿ ಜಯಪತಾಕಮನೀಗಳ್ ॥ ೮೯

ಎಂದು ಧಾತ್ರನೊಳ್ ಬೆಸಂಬೆತ್ತ ಧರ್ಮನಂತೆ ಧರ್ಮಪಾಲಂ ಬರ್ಪುದುಂ ಪದ್ಮನಾಭಭೂಭುಜನ ಮುಂತಿರ್ದ ಸುವರ್ಣನಾಭಂ ಕಂಡು ಪಾಳಿಕೇತನಂಗಳಿನಿವಂ ಪೃಥ್ವೀಪಾಲಯುವರಾಜನೆಂದಱಿದು ಸುಟ್ಟು ತೋಱಿ,

ವಾಗಿ) ಕುಣಿದಾಡುತ್ತಿದ್ದವು. ಇಷ್ಟೊಂದು ರುದ್ರವಾದ ಕೇಶಾಕೇಶಿಯುದ್ಧವು ಸುರರಲ್ಲಾಗಲಿ, ಅಸುರರಲ್ಲಾಗಲಿ, ನಾಗರಲ್ಲಾಗಲಿ, ವಿದ್ಯಾಧರರಲ್ಲಾಗಲಿ ಹಿಂದೆಂದೂ ನಡೆದಿಲ್ಲ ಎಂಬಂತೆ ಸಮರ ಅದ್ಭುತವಾಯಿತು. ವ॥ ಹೀಗೆ ಕಾದಾಡಿ ಬರಸಿಡಿಲ ಬಳಗವನ್ನೆದುರಿಸಿದ ಬೆಟ್ಟಗಳ ಸಮೂಹದಂತೆಯೂ, ಸಿಂಹಗಳ ಸಮುದಾಯವನ್ನು ತಾಗಿದ ಆನೆಗಳ ಹಿಂಡಿನಂತೆಯೂ, ಭೇರುಂಡ ನಿವಹದೊಡನೆ ಹೋರಾಡುವ ಶರಭಸಂಚಯದಂತೆಯೂ, ಪ್ರಳಯದ ಬಿರುಗಾಳಿಯನ್ನೆದುರಿಸಿದ ಮೋಡಗಳ ನೆರವಿನಂತೆಯೂ, ಪೃಥ್ವಿಪಾಲನ ಸಾಮಂತರು ಕೆಲವರು ಪಲಾಯನ ಮಾಡಿದರು, ಇನ್ನುಳಿದವರು ಸತ್ತುಹೋದರು. ಇದನ್ನು ಕಂಡು ಪೃಥ್ವಿಪಾಲನ ಮಗನಾದ ಧರ್ಮಪಾಲನು ತಂದೆಯ ಮುಂದೆ ಬಂದು_೮೮. ದೇವ, ಇನ್ನು ನನ್ನ ಸರದಿ, ಆಮೇಲೆ ನಿನ್ನ ಸರದಿ. ನನಗೆ ಅಪ್ಪಣೆ ಕೊಡು. ಶತ್ರು ಸೈನ್ಯವು ಓಡಿಹೋದರೇನೋ ನಾನು ತಿಳಿಯೆ. ಇದಿರಾದರೆ ಮಾತ್ರ ಅದನ್ನು ಹದ್ದಿಗೆ ಉಣಬಡಿಸುವೆನು. ೮೯. ಒಡೆಯನೆ ನನಗೆ ಕಾಳಗವನ್ನು ವಹಿಸು, ನಿನ್ನ ಹಣೆಯಲ್ಲಿ ತ್ರಿಪತಾಕೆ ಮೂಡುವ (ಹುಬ್ಬುಗಂಟಿಕ್ಕುವ) ಮುನ್ನವೆ ಶತ್ರುಸೈನ್ಯವನ್ನು ದಿಕ್ಕುಪಾಲು ಮಾಡಿ ಜಯಧ್ವಜವನ್ನು ಹಾರಿಸುವೆನು." ವ॥ ಎಂದು ಬಿನ್ನವಿಸಿ, ವಿಧಿಯ ಅಪ್ಪಣೆಯನ್ನು ಪಡೆದ ಯಮದೇವನಂತೆ ಧರ್ಮಪಾಲನು ಬಂದನು. ಪದ್ಮನಾಭರಾಜನ ಮುಂದಿದ್ದ ಸುವರ್ಣನಾಭನು ಅವನನ್ನು ಕಂಡು, ಪಾಳಿಕೇತನ ಧ್ವಜದಿಂದ ಈತನು ಧರ್ಮಪಾಲ

ಪೇಟಿದ್ದೀವೆನ್ನಂ ನಿಂದೊಡೆ ।
ತೊಳ್ದೀನಂ ಕಳೆದು ತಂದಪೆಂ ಪಂದಲೆಯಂ ॥
ತೂಟ್ದೆ ಪೆಱಮೆಟ್ಟೆ ಕೊಲ್ಲದೆ ।
ಬಾಟ್ದಿಲೆದಂದಪ್ಪೆನವನನವಧರಿಪುದಿದಂ ॥ ೯೦

ಅಂತತಿಪ್ರತಿಜ್ಞಾರೂಢನುಂ ರಥಾರೂಢನುಮಾಗಿ,

ರವಿಯ ರಥಕ್ಕಡ್ಡಂ ರಾ ।
ಹುವೆ ಬರ್ಪಂತೆಯ್ದೆ ವಂದನತ್ತತ್ತೆನುತಾ ॥
ಕುವರನ ರಥಕ್ಕೆ ತೂರ್ಣಂ ।
ಸುವರ್ಣನಾಭಂ ವಿರೋಧಿಜನಶಮನಾಭಂ ॥ ೯೧

ಅಂದುಭಯಸ್ಯಂದನಾಶ್ವಂಗಳುಂ ಮಿಳಿತಾಸ್ಯಂಗಳಾಗೆ,

ಇಸಲೆಡೆವಡೆಯದೆ ಶಕ್ತಿಯಿ ।
ನಸಮಭುಜಾಬಲನಳುರ್ಕೆಯಿಂದಿಡೆ ಬಿಟ್ದಂ ॥
ವಸುಧೆಗೆ ರಥದಿಂ ಮೂರ್ಛಾ ।
ವಸಕ್ತಮತಿ ಧರ್ಮಪಾಲನಭಿಹತಮರ್ಮಂ ॥ ೯೨

ಆಗಳವನನೆಯ್ದೆ ವಂದು

ಅಭಯವಚೋಮಂತ್ರದಿನೆ ।
ತ್ತಿ ಭಯಂಕರಶಕ್ತಿ ಸರ್ಪದಷ್ಟನನುಯ್ದಂ ॥
ಪ್ರಭುಪಾರ್ಶ್ವಕ್ಕಾಸೋಮ ।
ಪ್ರಭಾಸುತಂ ಕೃತವಿರೋಧಿಜೀವಗ್ರಾಹಂ ॥ ೯೩

ನೆಂದು ಅರಿತು, ಆತನೆಡೆಗೆ ಬೆರಳಿಟ್ಟು ನೋರಿ–೯೦. "ಸುಮ್ಮನೆ ಮಾತಾಡಲೇಕೆ? ಎದುರಿಸಿ ನಿಂತನಾದರೆ ನನ್ನ ತೋಳ ತೀಟೆಯನ್ನು ತೀರಿಸಿಕೋಂಡು ಅವನ ಹಸಿ ತಲೆಯನ್ನು ತಂದು ಕೊಡುವೆನು. ಅವನು ಬೆನ್ನು ತಿರುಗಿಸಿದನಾದರೆ ಜೀವಂತವಾಗಿ ಹಿಡಿ ತರುವೆನು, ಇದನ್ನು ಚಿತ್ತವಿಟ್ಟು ಕೇಳಿ" ವ॥ ಎಂದು ಭಾಷೆಮಾಡಿ ರಥವನ್ನೇರಿ ೯೧. ಸೂರ್ಯನ ರಥಕ್ಕೆ ಅಡ್ಡವಾಗಿ ಬರುವ ರಾಹುವಿನಂತೆ ಆ ಕುಮಾರನ ರಥಕ್ಕೆದುರಾಗಿ ವೈರಿಯುಮನಾದ ಸುವರ್ಣನಾಭನು ವೇಗವಾಗಿ ಬಂದನು. ವ॥ ಉಭಯತರು ಎದುರೆದುರಾಗಿ ನುಗ್ಗುತ್ತ. ಎರಡು ರಥಗಳ ಕುದುರೆಗಳು ಪರಸ್ಪರ ಮುಖಕ್ಕೆ ಮುಖ ತಾಗಿಸಲಾಗಿ– ೯೨. ಬಾಣ ಹೊಡೆಯಲು ಅವಕಾಶವಿಲ್ಲವಾಗಿ ಅಸಮಾನಭುಜಬಲದ ಸುವರ್ಣನಾಭನು ಶಕ್ತ್ಯಾಯುಧದಿಂದ ಪ್ರಹಾರ ಮಾಡಿದನು. ಮರ್ಮಾಹತನಾದ ಧರ್ಮಪಾಲನು ಕೂಡಲೆ ಎಚ್ಚರದಪ್ಪಿ ರಥದಿಂದ ನೆಲಕ್ಕುರುಳಿದನು. ಆಗ ಅವನ ಬಳಿಗೆ ಬಂದು–೯೩. ಭೀಕರವಾದ ಶಕ್ತಿಯೆಂಬ ಸರ್ಪದಿಂದ ಕಚ್ಚಿಸಿಕೊಂಡ ಆ ಕುಮಾರನನ್ನು ಅಭಯವೆಂಬ ಮಂತ್ರದಿಂದ ಎಚ್ಚರಿಸಿ, ಜೀವಂತವಾಗಿ ಆತನನ್ನು ಸೆರೆ ಹಿಡಿದುಕೊಂಡು, ತನ್ನ ಪ್ರಭುವಿನ ಬಳಿಗೆ ಸೋಮಪ್ರಭಾ

ಅದಂ ಕಂಡತಿಪ್ರವೃದ್ಧ ಕೋಪಾವಲೇಪಂ ಪೃಥ್ವೀಪಾಲಭೂಪಾಲನಾತ್ಮಗತದೊಳಿಂತೆಂದಂ:-

ಈ ರಣದೊಳೆ ಧಾರಿಣಿಯಂ।
ವಾರಣಮುಮಮೆನ್ನ ಸುತನುಮಂ ಪಿಡಿದ ದುರಾ॥
ಚಾರಮಿದಂ ಸ್ವಹಸ್ತಾಂ।
ಗಾರಾಕರ್ಷಣಸಮಾನಮಾದುದೆನಿಪ್ಪೆಂ॥ ೯೪

ಅನಂತರಂ ನಿಜಾರೂಢವ್ಯಾಳಶುಂಡಾಲಮಂ ಬಳಸಿ ನಿಂದ ಮೌಳಿಬಲಮನರನೆಲೆಗೆ ನೂಂಕಲ್ ವೇೞ್ದು ತದ್ಬಲದಿನರಾತಿಯವಜೆದು ಬಟಿಯಮೆನ್ನ ಕೂರ್ಪಂ ತೋರ್ಪೆನೆಂದಿರ್ಪಿನಂ ಪದ್ಮನಾಭನರನಾಥನಾತನ ಮನಮುಮಂ ಪತ್ತೆಸರ್ವ ತಳರ್ವದ ನಿಗ್ರಹವೃತ್ತಿಯುಮಂ ಕಂಡಿದು ಮದೀಯವಿಕ್ರಾಂತದರ್ಶನಾರ್ಥಮೆಂದು ಮುಂದಣ ತನ್ನ ತಳತಂತ್ರಮಂ ಕೆಲಕ್ಕೆ ತೊಲಗವೇೞ್ದುಸಿಂಗದಣ್ಮುಮನೈರಾವತದಳವುಮಂ ಪವನಜವಮುಮನೊಳಕೆಯ್ದು ಗುಳುಗಿಳಿಸುತಿರ್ದ ವನಕೇಳೀವಾರಣಮನಣೆದು ನೂಂಕಿ,

ವಿಸಟಂಬರಿಯಿಸಿದೊಡದೆ।
ಣ್ದೆಸೆಗಂ ತನ್ಮಯದೆ ಪರಿದು ಕಲ್ಪಕ್ಷಯದೊಳ್॥
ಮಸಗಿದ ದೆಸೆಯಾನಯಿದೆಂ।
ಬೆಸಕದೆ ತೋಱೆತ್ತು ಚಿತ್ರವಿಧಮಂ ವಧಮಂ॥ ೯೫

ಪುತ್ರ (ಸುವರ್ಣನಾಭ)ನು ಒಂದ್ದನು. ವ॥ ಅದನ್ನು ಕಂಡು ಕೋಪದಿಂದ ಉರಿದೆದ್ದ ಪೃಥ್ವಿಪಾಲರಾಜನು ತನ್ನೊಳಗೆಯೆ ಹೀಗೆಂದುಕೊಂಡನು-೯೪. ಈ ರಣರಂಗದಲ್ಲಿ ನನ್ನ ಭೂಮಿಯನ್ನೂ, ಆನೆಯನ್ನೂ, ಮಗನನ್ನೂ ಹಿಡಿದುಕೊಂಡನಲ್ಲವೆ ಈ ದುರಾಚಾರಿಯಾದ ವೈರಿ? ಇರಲಿ, ತಾನು ಕೈಯಾರೆ ಬೆಂಕಿಯನ್ನೆ ಹಿಡಿದೆನೆಂದು ಅವನಿಗೆ ತಿಳಿಸುವೆನು. ವ॥ ತಾನು ಏರಿ ಕುಳಿತ ಮದಗಜವನ್ನು ಬಳಸಿ ನಿಂತ ಮೌಳಿದಳವನ್ನು ಶತ್ರುರಾಜನು ನಿಂತ ನೆಲೆಗೆ ನುಗ್ಗಲು ಹೇಳಿ, ಅದರಿಂದ ವೈರಿಯ ಬಲವನ್ನು ಅರಿತು ಬಳಿಕ ತನ್ನ ಪರಾಕ್ರಮವನ್ನು ತೋರಬೇಕೆಂದು ಯೋಚಿಸಿದನು. ಪದ್ಮನಾಭರಾಜನು ಆತನ ಇಂಗಿತವನ್ನು ಅರಿತು, ತನ್ನ ಬಳಿಗೆ ಬರುತ್ತಿರುವ ಸೈನ್ಯದಳದ ರಭಸವನ್ನು ಕಂಡು, "ಇದು ನನ್ನ ಪರಾಕ್ರಮದರ್ಶನಕ್ಕೇ" ಎಂದು ತನ್ನ ಮುಂದಿನ ಕಾಲಾಳುಪಡೆಯನ್ನು ಪಕ್ಕಕ್ಕೆ ಸರಿಯ ಹೇಳಿ, ಸಿಂಹದ ಪರಾಕ್ರಮವನ್ನೂ ಐರಾವತದ ಸಾಮರ್ಥ್ಯವನ್ನೂ, ವಾಯುವೇಗವನ್ನೂ ಅಳವಡಿಸಿಕೊಂಡು, ವನಕೇಳಿಗಜವನ್ನು ತಿವಿದು ಮುನ್ನುಗ್ಗಿಸಿ-೯೫. ಯಥೇಷ್ಟವಾಗಿ ಓಡಿಸಲಾಗಿ, ಅದು ತನ್ಮಯವಾಗಿ ಎಂಟು ದಿಕ್ಕುಗಳಿಗೂ ತೊತ್ತಳದುಳಿಯುತ್ತ ಕ್ರೋಧಗೊಂಡ ದಿಗ್ಗಜವೊ ಏನೊ ಎಂಬಂತೆ ಚಿತ್ರವಿಚಿತ್ರವಾಗಿ ಶತ್ರುಗಳನ್ನು

ಚರಣತಳಪ್ರಘಾತದೆ ಪದಾತಿಗಳಂ ನಖರಪ್ರಹಾರದಿಂ ।
ತುರಗದಟಂಗಳಂ ಕರಸಮಾಹತಿಯಿಂ ರಥಸಂಕುಳಂಗಳಂ ॥
ಕರರದಘಾತದಿಂ ದ್ವಿರದಸೇನೆಗಳಂ ತವೆ ನುರ್ಗುಮಾಡಿ ಭೀ ।
ಕರತರಮಾಯ್ತಿಭಂ ವಿಲಯಕಾಲಕರಾಳಲುಲಾಯಸನ್ನಿಭಂ ॥ ೯೬

ತುಟಿದು ಕೆಲಂಬರಂ ಕೆಲಬರಂ ನಖದಿಂದಿಱಿದೆಯ್ದೆ ಹಸ್ತದಿಂ ।
ಪಿಟಿದು ಕೆಲಂಬರಂ ಕೆಲಬರಂ ತೆಱವಿಂದಣೆವೆತ್ತಿ ಕೋಡೊಳ ॥
ಪ್ಪಟಿಸಿ ಕೆಲಂಬರಂ ಕೆಲಬರಂ ಕಡೆವಾಯೊಳವುಂಕಿ ಕೊಂದುದು ।
ಳ್ಕಟೆಯದೆ ನಿಂದರಂ ತುಟಿಲಸಂದರನಾ ವನಕೇಳಿವಾರಣಂ ॥ ೯೭

ಆಗಳ್,

ಪುದಿದಿರ್ದಾಚತುರಂಗಸೇನೆ ಕಿಱಿದಾಂತಟ್ಕಾಡೆಯುಂ ಬಲ್ಪಡಂ ।
ಗಿದುದಿಲ್ಲೊಲ್ಲದೆ ಭೀತಿಯಿಂ ಕಿಱಿದು ಬೆನ್ನಿತ್ತೋಡೆಯುಂ ಕಾಯ್ಪುಗುಂ॥
ದಿದುದಿಲ್ಲೀತನೆ ಗಂಡನೆಂದೆನಿಸಿದಂ ಮಾರ್ಪಾಡಿಯಿಂ ಬೂದಿ ಪಾ ।
ಱಿದ ಕೆಂಡಕ್ಕೆಣೆಯಾಗಿ ನಿಂದು ಪೃಥಿವೀಪಾಲಾವನೀಪಾಲಕಂ ॥ ೯೮

ಅಂತವಲಂಬಿತಧೈರ್ಯನುಂ ದ್ವಿಗುಣಿತಶೌರ್ಯನುಮಾಗಿ ತನ್ನೊಳಿಂತೆಂದಂ:-

ಎನಿತಂ ಬೆಳ್ಮಿಗಮಂ ಗೆ ।
ಲ್ದನಿತಱಿಕೊಳಾಂತಪುದೆ ಶರಭಂ ಕೇಸರಿ ಮ॥
ತ್ತೆನಿತಂ ಬೆಳ್ಳಾಳಂ ಗೆ ।
ಲ್ದನಿತಱಿಕೊಳಂ ಪದ್ಮನಾಭನೆನಗಾಂತಪನೇ ॥ ೯೯

ಕೊಂದು ಹಾಕಿತು. ೯೬. ಕಾಲುಗಳಿಂದ ಕಾಲಾಳುಗಳನ್ನೂ, ಉಗುರುಗಳಿಂದ ಕುದುರೆ ಪಡೆಗಳನ್ನೂ ಸೊಂಡಿಲಿಂದ ರಥಸಮುದಾಯಗಳನ್ನು. ಕೋರೆಗಳಿಂದ ಆನೆಪಡೆಗಳನ್ನೂ ಸಂಪೂರ್ಣವಾಗಿ ನುಗ್ಗು ನುಸಿ ಮಾಡುತ್ತ, ಪ್ರಳಯಕಾಲದ ಯಮನ ಉಗ್ರವಾಹನದಂತೆ ಆ ಆನೆ ಅತ್ಯಂತ ಭಯಾನಕವಾಯಿತು. ೯೭. ಕೆಲವರನ್ನು ಮೆಟ್ಟಿ, ಕೆಲವರನ್ನು ಉಗುರಿಂದ ಇರಿದು, ಕೆಲವರನ್ನು ಸೊಂಡಿಲಿಂದ ಹಿಡಿದು ಹಿಸುಕಿ, ಕೆಲವರನ್ನು ಹೊಡೆದೆತ್ತಿ, ಕೆಲವರನ್ನು ಕೋರೆಗಳಿಂದ ಅಪ್ಪಳಿಸಿ, ಕೆಲವರನ್ನು ಸೋಟೆಯಿಂದ ಅಮುಕಿ, ಆ ವನಕೇಳಿಗಜವು ಸಾಹಸದಿಂದ ಎದುರಿಸಿದ ಶೂರ ಯೋಧರನ್ನು ಕೊಂದುಹಾಕಿತು. ಆಗ ೯೮. ತನ್ನ ಚತುರಂಗ ಸೈನ್ಯದಲ್ಲಿ ಕೆಲ ಭಾಗ ಹೋರಾಡಿ ನಾಶವಾದರೂ ಸಾಹಸ ಅಡಗದೆ, ಕೆಲಭಾಗ ಹೆದರಿ ಬೆಂಗೊಟ್ಟೋಡಿದರೂ ರಭಸಗುಂದದೆ," ವೀರನೆಂದರೆ ಇವನೇ" ಎಂದು ಶತ್ರು ಸೈನ್ಯದಿಂದ ಹೊಗಳಿಸಿಕೊಂಡು, ಬೂದಿಹಾರಿದ ಕೆಂಡಕ್ಕೆ ಸಮನಾಗಿ ಪೃಥ್ವಿಪಾಲ ಭೂಪಾಲನು ದೃಢವಾಗಿ ನಿಂತನು. ವ॥ ಹಾಗೆ ಧೈರ್ಯವನ್ನು ಆಶ್ರಯಿಸಿ, ಇಮ್ಮಡಿ ಕಲಿತನದಿಂದ ಆತನು ತನ್ನೊಳಗೆ ಹೀಗೆಂದುಕೊಂಡನು-೯೯. "ಬಲಹೀನ ವಾದ ಎಷ್ಟು ಮೃಗಗಳನ್ನು ಗೆದ್ದರೇನು? ಸಿಂಹವು ಶರಭವನ್ನು ಎದುರಿಸಿ ನಿಲ್ಲಬಲ್ಲುದೆ?

ಎಂದು ಮಾಣದೊಂದೆ ಮೆಯ್ಯೊಳ್ ಸಾವಂಗೆ ಸಂಗಡವೇಕೆಂಬಂತೆ ದಂತಿಯಂ ಕೀಱಿ ಬಿಟ್ಟು ಸೈತೆಯ್ತರ್ಪುದುಂ ಸೋಮಪ್ರಭಾಪ್ರಿಯನ ಪಕ್ಕದ ಪಿಡಿಗಳೊಳಿರ್ದ ಮಂತ್ರಿಮಂಡಳಿ ಕಂಡು ಪತ್ತೆಸಾರ್ದು

ಸಾಹಸಮಂ ಪೂಣ್ದಂ ರಿಪು ।
ಸಾಹಸಮುಂ ನಾಹವಸ್ಮಿಯೆಂಬಿನಿತದಱಿಂ ॥
ಸಾಹಸಿಕನೆ ಕಡುಗಲಿ ವಿಷ ।
ಮಾಹವಮೀ ನಿಮಗಮಪ್ರಮತ್ತತೆ ಕೃತ್ಯಂ ॥ ೧೦೦

ಎಂದಂತು ಬಿನ್ನವಿಸಿದ ಮಂತ್ರಿಗಳ ವಚನಕ್ಕನುಮತಿವಚನದಿಮುಮನಾಹವಕ್ಕವಗಾಹನವೃತ್ತಿಯುಮಂ ದರಸ್ಮಿತದಿನಱಿಪುತ್ತುಮವರನಿರಿಮೆಂದು ತಾನುಮೇಕಾಂಗದಿಂ ಮತ್ತಮತಂಗಜಮನಣೆದು ನೂಂಕಿ ನಿಶ್ಶಂಕವೃತ್ತಿಯಿಂ ನಡೆವಾಗಳ್

ದೂತಂಗೋಲಗದೊಳ್ ಪೆ ।
ರ್ಮಾತಂ ಮಗನಿಂದೆ ನಿಡಿಯಿಪೆಡೆಯಲ್ತಿದು ಸಂ ॥
ಜಾತಸಮರಾವಸರಮಿ ।
ನ್ನೀ ತೆಱದೊಳಮಱಿಯಲಕ್ಕುಮೆನಗಂ ನಿನಗಂ ॥ ೧೦೧

ಅಂತು

ಅಸಮರ್ಥರಾದ ಎಷ್ಟೋ ಯೋಧರನ್ನು ಗೆದ್ದಿರಬಹುದು, ಆದರೆ ಈ ಪದ್ಮನಾಭನು ನನ್ನೆದುರು ನಿಲ್ಲಬಲ್ಲನೆ ?" ವ॥ ಹೀಗೆಂದು ನಿಲ್ಲದೆ, "ಸಾಯುವವನಿಗೆ ಸಹಾಯಕರೇಕೆ? ಎಂಬಂತೆ ಎಕ್ಕಟೆಗಲಿಯಾಗಿ ತನ್ನ ಆನೆಯನ್ನು ತಿವಿದು ನುಗ್ಗಿಸಿ ನೇರವಾಗಿ ಏರಿ ಬರಲಾಗಿ ಪದ್ಮನಾಭನ ಪಕ್ಕದಲ್ಲಿ ಅನೆಗಳನ್ನೇರಿ ನಿಂತ ಮಂತ್ರಿಮಂಡಳಿ ಕಂಡು ತಮ್ಮ ಅರಸನ ಬಳಿ ಬಂದು–೧೦೦. "ಶತ್ರುವು ಸಾಹಸಕ್ಕೆ ಪಣ ತೊಟ್ಟಿರುವನು, ಆ ಸಾಹಸವಾದರೂ ಜೀವದ ಹಂಗು ತೊರೆದಂತಹುದು, ಸಾಹಸಿಕನು ಮಹಾಪರಾಕ್ರಮಿ, ಇವನ ಕಾಳಗ ನಿಮಗೆ ಕೂಡ ಸಾಮಾನ್ಯವಾಗದು, ಆದುದರಿಂದ ತಾವು ಜಾಗುರೂಕರಾಗಿರಬೇಕು. " ವ॥ ಎಂದು ಬಿನ್ನವಿಸಿದರು. ಪದ್ಮನಾಭನು ಅವರ ಬಿನ್ನಹಕ್ಕೆ ಅನುಮತಿಯನ್ನೂ, ತಾನು ಕಾಳಗಕ್ಕೆ ದುಮುಕುವ ನಿರ್ಧಾರವನ್ನೂ ನಸುನಗೆಯಿಂದ ಸೂಚಿಸುತ್ತ, ಅವರನ್ನು ಅಲ್ಲಿಯೆ ಇರ ಹೇಳಿ, ಏಕಾಂಗಿಯಾಗಿ ಮದಗಜವನ್ನು ತಿವಿದು ನೂಕಿ ನಿರ್ಭಯನಾಗಿ ಮುಂದುವರಿದನು. ಆಗ– ೧೦೧. "ಓಲಗದಲ್ಲಿ ನನ್ನ ದೂತನಿಗೆ ಮಗನಿಂದ ಜಂಬದ ಮಾತುಗಳನ್ನು ಹೇಳಿದಂತೆ ಅಲ್ಲ ಇದು, (ಆ ದೊಡ್ಡಸ್ತಿಕೆಯೇನೆಂಬುದನ್ನು) ಈ ಸಂಗ್ರಾಮ ಸಂದರ್ಭದಲ್ಲಿ

ಗಜರಿಪುನಾದದಿಂ ಗಜಱೆ ಗರ್ಜಿಸಿ ತತ್ಪಳನಿಟ್ಟ ಶಕ್ತಿಯಂ ।
ನಿಜಕರಶಕ್ತಿಯಿಂ ಪ್ರಬಳಸಂಕುವನುದ್ದರಸಂಕುವಿಂ ಸಮಂ ॥
ತಜನಿಪ ಕುಂತಮಂ ನಿಶಿತಕುಂತದಿನೋವದೆ ನುರ್ಗುಮಾಡಿದಂ ।
ಗುಜುಗುಜುಗೊಳ್ವ ಮಂತ್ರಿಗಳ ಚಿತ್ತದ ಸಂದೆಗಮೋಡೆ ನಾಡೆಯುಂ ॥ ೧೦೨

ಅನಂತರಮಿವಂ ವ್ಯರ್ಥಾಯಾಸನುಂ ಮುಕ್ತಮರಣತ್ರಾಸನುಮಪ್ಪುದಱೆಂ ಮೇಲ್ವಾಯ್ದುರ ವರಿಸನೆಂದಱೆದು ಮುನ್ನಮೆ ಕರಮುಕ್ತಶಸ್ತ್ರಪಾತಪ್ರಮಾಣಭೂಮ್ಯಂತರದೊಳ್

ಪೂಣಿಸಿ ಕಂಠಮಂ ತಿರಿಪಿ ಚಕ್ರದೊಳಿಟ್ಟೊಡೆ ನೀಳಶೈಳದಿಂ ।
ಕ್ಷೋಣಿಗುರುಳ್ವ ಗುಂಡೆನೆ ಶಿರಂ ಕರಿಯಿಂದೆ ನೆಲಕ್ಕೆ ಬೀೞ್ವ ಮುಂ ॥
ಕಾಣದ ಬೆನ್ನನಿಂ ಪಗೆಗೆ ತೋಱೆನೆನುತ್ತೆ ಮರಲ್ವವೋಲ್ ಗತ ।
ಪ್ರಾಣಮದೇಂ ಮಲಂಗಿದುದೊ ಸಾರಿಯನಂದು ಕಬಂಧಮಾತನಾ ॥ ೧೦೩

ಆ ಸಮಯದೊಳ್

ತೀವಿದುದು ನಭಮನಮರರ ।
ಹೋವೀರನಿನಾದದೊಡನೆ ತಕ್ಕರತಳಲೀ ॥
ಲಾವಿಗಳದಮರತರುನಿಕ ।
ರಾವಿರಳದಳತ್ಪ್ರಸೂನವಿಸರಾಸಾರಂ ॥ ೧೦೪

ನಾನು ನೀನೂ ಇಬ್ಬರೂ ಅರಿತುಕೊಳ್ಳಬಹುದು" ಎಂದು–೧೦೨. ಸಿಂಹನಾದದ ಆರ್ಭಟೆಯಿಂದ ಗರ್ಜಿಸಿ ಆತನು ಪ್ರಯೋಗಿಸಿದ ಶಕ್ತ್ಯಾಯುಧವನ್ನು ಪದ್ಮನಾಭನು ತನ್ನ ಶಕ್ತಿಯಿಂದ, ಬಲಿಷ್ಠವಾದ ಶಂಕುವನ್ನು ತನ್ನ ಉದ್ದಾಮ ಶಂಕುವಿನಿಂದ, ಭೀಕರವಾದ ಕೊಂತವನ್ನು, ತನ್ನ ಹರಿತವಾದ ಕೊಂತದಿಂದ ನುಗ್ಗುಮಾಡಿ, ಗುಜುಗುಜುಗೊಳ್ಳುತ್ತಿದ್ದ ತನ್ನ ಮಂತ್ರಿಗಳ ಸಂದೇಹವನ್ನು ಪೂರ್ಣವಾಗಿ ನಿವಾರಿಸಿದನು. ವ॥ ಆ ಬಳಿಕ "ಈತನು ವ್ಯರ್ಥವಾಗಿ ಶ್ರಮಿಸುತ್ತಿರುವನು. ಮರಣದ ಭಯವನ್ನಂತೂ ತೊರೆದೇ ಇರುವನು." "ಆದುದರಿಂದಲೇ ಮೇಲೇರಿ ಉರವಣಿಸಿದನು" ಎಂದು ಅರಿತು, ಬೇಗನೆ ಕೈಯಿಂದ ಎಸೆಯುವಷ್ಟು ಅಂತರದಲ್ಲಿದ್ದ ಅವನನ್ನು ಗುರಿಮಾಡಿ– ೧೦೩. ಚಕ್ರವನ್ನು ತಿರುಗಿಸಿ ಆತನ ಕೊರಳಿಗೆ ಪ್ರಹಾರ ಮಾಡಿದೊಡನೆ, ನೀಲಾದ್ರಿಯ ತುದಿಯಿಂದ ಉರುಳಿ ಬೀಳುವ ಗುಂಡು ಬಂಡೆಯಂತೆ ಆನೆಯ ಮೇಲಿಂದ ಆತನ ತಲೆ ನೆಲಕ್ಕೆ ಬಿದ್ದಿತು. ಆದರೆ ಮೊದಲಿಂದ ತೋರದಿದ್ದ ಬೆನ್ನನ್ನು ಈಗಲಾದರೂ ವೈರಿಗೆ ಏಕೆ ತೋರಲಿ ಎಂಬಂತೆ, ಪ್ರಾಣಹೋದರೂ ಆತನ ದೇಹ ಅಂಗಾತ್ತವಾಗಿ ಬಿದ್ದಿತು. ಆ ಸಮಯದಲ್ಲಿ–೧೦೪. "ಬಲೆ, ವೀರ!" ಎಂಬ ದೇವತೆಗಳ ಜಯ ಜಯಕಾರದೊಡನೆ ಅವರು ಸುರಿಸಿದ ದೇವಪುಷ್ಪಗಳ ಸುರಿ

ಘನಸಂಗ್ರಾಮಾಂಧಕಾರಂ ಪರೆಯೆ ರಿಪುಕಬಂಧೋಚ್ಚಲದ್ರಕ್ತಸಂಧ್ಯಾ ।
ಜನಿತಂ ರಾಗಂ ತೆರಳ್ದೋಸರಿಸೆ ನಿಜಚಮೂಚಕ್ರಚಕ್ರೋತ್ಸವಂ ಪೆ ॥
ರ್ಚೆ ನಮುದ್ಭೂಪಾನನಾಂಭೋರುಹಮಲರೆ ನವೀನೋದಯಾರ್ಕಂಬೊಲಾಗಳ್ ।
ವನಕೇಳೀಪೂರ್ವಶೈಲಾಗ್ರದೊಳೆಸೆದನೂನಪ್ರಭಂ ಪದ್ಮನಾಭಂ ॥ ೧೦೫

ತೃತೀಯದ್ವೀಪದಂತೆ ನಿವಿಷ್ಟೇಷ್ವಾಕಾರಮಾನುಷೋತ್ಕರಮುಂ, ಕುರುಧರೆಗಳಂತೆ ಪರಿಚ್ಛಿನ್ನ ಗಜದಂತನಿರತಮುಂ, ಐರಾವತಕ್ಷೇತ್ರದಂತೆ ರಕ್ತಾಪಗಾಪ್ರವಾಹಪರಿಚಿತಮುಂ, ನಿರಯನಿಳಯದಂತೆ ಪತಿತಾಸಿಪತ್ರಭೀಷಣಪ್ರದೇಶಮುಂ, ಕಾಲೋದಕವಾರ್ಧಿಯಂತೆ ಪರಿನಿಷ್ಕೃತಪುಷ್ಕರಾರ್ಧಮುಮಪ್ಪ ಸಂಗ್ರಾಮಭೂಮಿಯಂ ಪೊಱಮಟ್ಟು ತನ್ನಿಕಟದೊಳ್ ನಿಂದು ನಿರ್ನೀತವೇತನಋಣರುಂ ಶಸ್ತ್ರಘಾತ ಮರಣರುಮಾದ

ಬಂಧುನೃಪಾಲರ ನಿಜಸಂ ।
ಬಂಧಿಗಳ ಶರೀರದಹನಲೌಕಿಕಮಂ ನಿ ॥
ರ್ಬಂಧದೆ ಮಾಡಿಸಿದಂ ದಯೆ ।
ಯಿಂ ಧರಣಿಪನಿಂ ಧನೀಕೃತೇಷುಪ್ರಸರಂ ॥ ೧೦೬

ಮಳೆ ಆಕಾಶವನ್ನೆಲ್ಲ ತುಂಬಿತು. ೧೦೫. ಸಂಗ್ರಾಮದ ಕಗ್ಗತ್ತಲೆ ಹರಿದು, ಶತ್ರುಗಳ ಅಟ್ಟೆಗಳಿಂದ ಚಿಮ್ಮುವ ನೆತ್ತರಿನ ಸಂಧ್ಯಾರಾಗವು ಬಯಲಾಗಿ, ತನ್ನ ಸೈನ್ಯ ಸಮೂಹವೆಂಬ ಚಕ್ರವಾಕಗಳಿಗೆ ಉತ್ಸವ ಹೆಚ್ಚಲಾಗಿ, ನಮಸ್ಕರಿಸುವ ಅರಸುಗಳ ಮುಖಕಮಲಗಳು ಅರಳುತ್ತಿರಲು, ನವೀನವಾದ ಉದಯಸೂರ್ಯನಂತೆ ವನಕೇಳೀಗಜವೆಂಬ ಉದಯಪರ್ವತದ ಶಿಖರದಲ್ಲಿ ಅಧಿಕ ಪ್ರಭಾವಂತನಾದ ಪದ್ಮನಾಭನು ಶೋಭಿಸಿದನು. ವ॥ ತೃತೀಯದ್ವೀಪದಂತೆ "ನಿವಿಷ್ಟೇಷ್ವಾಕಾರ ಮಾನುಷೋತ್ಕಾರ"ವೂ ಕುರುಭೂಮಿಗಳಂತೆ "ಪರಿಚ್ಛಿನ್ನಗಜದಂತನಿರತ"ವೂ (೧. ಗಜದಂತವೆಂಬ ಬೆಟ್ಟಗಳಿಂದ ವಿಭಾಗಿಸಲ್ಪಟ್ಟುದು. ೨. ತುಂಡರಿಸಿ ಬಿದ್ದ ಆನೆಕೋರೆಗಳಿಂದ ತುಂಬಿದುದು), ಐರಾವತಕ್ಷೇತ್ರದಂತೆ "ರಕ್ತಾಪಾನಾ ಪ್ರವಾಹ ಪರಿಚಿತ"ವೂ (೧. ರಕ್ತೋದೆಯೆಂಬ ನದಿಯಿಂದ ಕೂಡಿದುದು. ೨. ನೆತ್ತರಿನ ಹೊಳೆಯಿಂದ ತುಂಬಿದುದು), ನರಕನಿವಾಸದಂತೆ "ಪತಿತಾಸಿಪತ್ರ ಭೀಷಣ ಪ್ರದೇಶ"ವೂ (೧. ಖಡ್ಗದಂತೆ ಹರಿತವಾದ ಎಲೆಗಳುಳ್ಳ ಮರಗಳಿಂದ ಭಯಾನಕವಾದುದು. ೨. ಭೂಮಿಯಲ್ಲಿ ಬಿದ್ದ ಖಡ್ಗಗಳಿಂದ, ಭೀಕರ ಪ್ರದೇಶವಾದುದು) ಕಾಲೋದಕಸಾಗರದಂತೆ "ಪರಿನಿಷ್ಕೃತ ಪುಷ್ಕರಾರ್ಧ"ವೂ ಆದ ಕಾಳಗದ ಕಣದಿಂದ ರಾಜನು ಹೊರಟನು, ಅನ್ನದ ಋಣವನ್ನು ತೀರಿಸಿದವರೂ, ಶಸ್ತ್ರಾಘಾತದಿಂದ ಮರಣ ಹೊಂದಿದವರೂ ಆದ ೧೦೬. ಬಂಧುರಾಜರ ಹಾಗು ಅವರ ಸಂಬಂಧಿಕರ ಕಳೇವರಗಳಿಗೆ ದಯಾಮಯನಾದ ರಾಜನು ಚಂದನದ ಚಿತೆಗಳನ್ನೇರ್ಪಡಿಸಿ ಅಗ್ನಿ ಸಂಸ್ಕಾರ ಮಾಡಿಸಿದನು.

ಅಂತು ಮಾಡಿಸಿ ಬಟೆಯಂ ದುಸ್ಸಹರಣವ್ರಣಿಮಾದ ಸೇನೆಯಂ ಸನ್ಮಾನವಾಹನಪುರಸ್ಸರಂ ಬೀಡಿಂಗೆ ಕಳಿಪುತ್ತಿರ್ಪನ್ನೆಗಂ

ಮಾಂದದೆ ಕುಂದದೆ ಬಣ್ಣಂ ।
ಬಂದು ತದ್ದಿಪುವೆನುತ್ತೆ ಭೀಭತ್ಸಲತಾ ॥
ಕಂದಮನೆ ತರ್ಪ ತೆಱದಿಂ ।
ತಂದಿಟೆಪಿದನಿದಿರೊಳೊರ್ವನಾ ಪಂದಲೆಯಂ ॥ ೧೧೭

ಅದಂ ಮದಗಜೋತ್ತುಂಗಮಸ್ತಕನ್ಯಸ್ತಸ್ವಸ್ತಿಕಂ ನೋಟಿಸ್ವಾಗಳ್

ಅರೆಮುಗಿರ್ದಿ ದಿಟ್ಟಿ ನಸುಗರ್ಚಿದ ನಾಲಗೆ ಬಿರ್ಚಿ ನೆತ್ತರೊಳ್ ।
ಪೊರೆದ ಶಿರೋರುಹಂ ಪುಡಿ ಪಗಿಲ್ತತಿಧೂಸರವಾದ ಮಿಾಸೆ ಭೋ ॥
ರ್ಗರೆದೆಱಗುತ್ತುಮಿರ್ಪ ನೊಟಮುಣ್ಮುವ ಪುಣ್ಪೊಲಸೆಂಬಿವೆಯ್ದೆ ಕೊ ।
ಕ್ಕರಿಕೆಯನೀಯೆ ಭೂಮಿಪಸುತಂ... ತನುವೆಂದು ಪೇಸಿದಂ ॥ ೧೧೮

ಅಂತನುಪ್ರೇಕ್ಷಾವಿಚಕ್ಷಣಮತಿಯಪ್ಪುದಱಿಂ ಶರೀರಾಶುಚಿತ್ವಾಧೃವತ್ವಂಗಳ್ ಮನದೊಳ್ ನೆಲಸೆ ಕೆಲದೊಳಿರ್ದ ಪುರುಭೂತಿಪ್ರಭೃತಿಮಂತ್ರಿವರ್ಗಕ್ಕಿಂತೆಂದಂ:–

ಸಲೆ ಶುಚಿಯೊಡಲೆಂದೆಗ್ಗರ ।
ತಲೆನಾಯಕನೆಂಗೆ ಬಲ್ಲವಂಗಾ ಮೊಲಗ ॥
ಟ್ಟಲೆಯಂತೆ ನೀಳ್ದ ತಲೆ ಮೂ ।
ದಲಿಸುತ್ತಿರ್ದಪುದನುಕ್ತಸಿದ್ಧಮದೀಗಳ್ ॥ ೧೧೯

ವ॥ ಬಳಿಕ ದುಃಸಹವಾಗಿ ಗಾಯುಗೊಂಡ ತನ್ನ ಸೈನಿಕರಿಗೆ ಸನ್ಮಾನ ಸಹಿತವಾಗಿ ವಾಹನಗಳನ್ನು ಕೊಟ್ಟು ಬೀಡಿಗೆ ಕಳಿಸುತ್ತಿರುವಾಗ–೧೧೭. ಹಿಂದೆಗೆಯದೆ, ಉತ್ಸಾಹಗುಂದದೆ (ಹೋರಾಡಿ) ಶತ್ರು ಭಂಗಪಟ್ಟನು ಎನ್ನುತ್ತ ಜುಗುಪ್ಸೆಯೆಂಬ ಬಳ್ಳಿಯ ಬೇರುಗಡ್ಡೆಯನ್ನೆ ತರುವಂತೆ ಒಬ್ಬನು ಆ ಹಸಿ ತಲೆಯನ್ನು (ಕತ್ತರಿಸಿದ ರುಂಡವನ್ನು) ತೆಗೆದುಕೊಂಡು ಬಂದನು. ವ॥ ಮದಗಜದ ಮೇಲೆ ಸ್ವಸ್ತಿಕಾಸನದಲ್ಲಿ ಕುಳಿತ ರಾಜನು ಅದನ್ನು ನೋಡಿದನು–೧೧೮. ಅರ್ಧ ಮುಚ್ಚಿದ ಕಣ್ಣು, ನಸುವೆ ಕಚ್ಚಿದ ನಾಲಗೆ, ಕೆದರಿ ನೆತ್ತರು ಬಳಿದ ಕೂದಲು, ದೂಳು ಮೆತ್ತಿ ಧೂಸರವಾದ ಮೀಸೆ, ಭೋರೆಂದು ಎರಗುತ್ತಿರುವ ನೊಣಗಳಿಂದ ಹೊಮ್ಮುವ ಗಾಯದ ಕೊಳೆ,– ಇವುಗಳನ್ನು ನೋಡಿ ಜುಗುಪ್ಸೆಗೊಂಡು "ಈ ದೇಹ ಎಷ್ಟು ಹೇಸಿ ?" ಎಂದು ಕೊಂಡನು. ವ॥ ಆತನು ಅನುಪ್ರೇಕ್ಷೆಗಳನ್ನು ಚೆನ್ನಾಗಿ ಬಲ್ಲವನಾದುದರಿಂದ, ದೇಹದ ಅಶುದ್ಧಿ ಹಾಗು ನಶ್ವರತೆಗಳು ಮನಸ್ಸಿನಲ್ಲಿ ಸ್ಥಿರವಾಗಿ ಬಿಂಬಿಸಿದುವು. ಆಗ ಆತನು ಬದಿಯಲ್ಲಿದ್ದ ಪುರುಭೂತಿಯೇ ಮೊದಲಾದ ಮಂತ್ರಿಗಳಿಗೆ ಹೀಗೆ ನುಡಿದನು–೧೧೯. "ದೇಹವು ಪರಿಶುದ್ಧವೆಂದು ಮೂರ್ಖಶಿರೋಮಣಿಯಾದವನು ಹೇಳಬಹುದು. ಕಗ್ಗತ್ತಲೆಯಂತೆ ನೀಡಿಕೊಂಡ ಆ ತಲೆ ಆ ಮಾತನ್ನು ಮೂದಲಿಸು

ಮಾತೇಂ ರೇತಶ್ಶೋಣಿತ ।
ಜಾತಕ್ಕೆತ್ತಣದೊ ಶುಚಿತೆ ಪರಿಭಾವಿಪೊಡಿಂ ॥
ತೀ ತನುಗೆ ರುಗ್ಜರಾಪರಿ ।
ಭೂತಕ್ಕೆತ್ತಣದೊ ಚಿರತೆ ನಚ್ಚುವನೆಗ್ಗಂ ॥ ೧೧೦

ತಾಂ ಜರೆಯ ಗೊತ್ತು ಕುತ್ತದ ।
ಪುಂಜಂ ಪಂದೊವಲ ಪಂಜರಂ ಪಾಪದ ಬೀ ॥
ಜಂ ಜೀವದ ಸೆಱೆಮನೆ ಜವ ।
ನೆಂಜಲಿಸಿದ ಬುತ್ತಿ ತನುವೆನಿಪ್ಪುದು ಪುಸಿಯೇ ॥ ೧೧೧

ಅಂಬಿಗನ ವಶದೆ ಪಱುಗೋಲ್ ।
ತುಂಬಿದ ತೊಱೆಯೊಳಗೆ ಸುೞಿವ ತೆಱದಿಂ ಸಂಸಾ ॥
ರಾಂಬುಧಿಯೊಳ್ ಸುೞಿವುದು ಜೀ ।
ವಂಬಿಡಿದೊಡಲಲ್ಲದಂದು ಚೇತನಮುಂಟೇ ೧೧೨

ಅಂತುಮಲ್ಲದೆಯುಂ

ಅಯ್ದುಂ ವಿಷಯಸುಖಂಗಳ ।
ನೆಯ್ದಿಪಮಿಾತನುಗೆನುತ್ತೆ ಸಿಂಗದ ತಲೆಗಂ ॥
ಪಾಯ್ದು ವಿಮೋಹದಿನಕ್ಕಟ ।
ಮಾಯ್ದ ಜನಂ ಬರ್ದುಕಿರ್ದಪುದು ಸಂಸೃತಿಯೊಳ್ ॥ ೧೧೩

ತ್ತಿರುವುದು. ಬಾಯುಲ್ಲಿ ಹೇಳದೆ ಇದ್ದರೂ ಅದು ಸ್ವಯಂ ಸ್ಪಷ್ಟವಾಗಿದೆ. ೧೧೦. ರೇತಸ್ಸು ಹಾಗು ರಕ್ತಗಳಿಂದ ಹುಟ್ಟಿದ ಈ ದೇಹಕ್ಕೆ ಶುಚಿತ್ವವೆಲ್ಲಿಂದ ಬಂದೀತು ? ವಿಚಾರಿಸಿ ನೋಡಿದರೆ, ಬೇನೆಗಳಿಗೂ ಮುಪ್ಪಿಗೂ ಈಡಾಗುವ ಶರೀರಕ್ಕೆ ಸ್ಥಿರತೆಯೆಲ್ಲಿಯದು ? ಅದನ್ನು ನೆಚ್ಚುವನು ಬುದ್ಧಿಗೇಡಿ. ೧೧೧. ದೇಹವೆಂಬುದು ಮುಪ್ಪಿನ ನೆಲೆ, ರೋಗದ ಪಿಂಡ; ಹಸಿ ತೊಗಲಿನ ಪಂಜರ; ಪಾಪದ ಬೀಜ; ಜೀವದ ಸೆರೆಮನೆ; ಮೃತ್ಯು ಎಂಜಲಿಸಿದ ಬುತ್ತಿ. ಇದೇನು ಸುಳ್ಳೆ ? ೧೧೨. ಅಂಬಿಗನು ನಡೆಸಿಕೊಂಡು ಹೋದರೆ ತುಂಬಿದ ಹೊಳೆಯುಲ್ಲಿ ಹರುಗೋಲು ನಡೆಯುವುದು. ಹಾಗೆಯೆ ಒಳಗೆ ಜೀವವಿದ್ದು ಚೇತನೆಯಿರುವವರೆಗೆ ಸಂಸಾರಸಾಗರದಲ್ಲಿ ದೇಹ ಸಂಚರಿಸುವುದು. ಹಾಗಲ್ಲದೆ, ಅದಕ್ಕೆ ಸ್ವತಂತ್ರ ಚೇತನವುಂಟೆ? ಅಷ್ಟೆ ಅಲ್ಲದೆ–೧೧೩. ಪಂಚೇಂದ್ರಿಯುಗಳಿಗೂ ಸುಖವೊದಗಿಸಬೇಕೆಂಬ ಹಂಬಲಿಂದ ತಿಳಿಗೇಡಿ ಜನ ಮೋಹವಶರಾಗಿ ಸಿಂಹದ

ಎಂದುಂ ಧರಣಿಯನುಯ್ದಾ ।
ಟಂದಂಡಲೆಯುತ್ತುಮಿರ್ಪುದಾಗ್ರಹದಿಂ ತ ॥
ಮ್ಮೊಂದಟೆಯೊಡಲಂ ರಕ್ಷಿಸ ।
ಲೆಂದೆನಲವಿವೇಕಮರಸುಗಳ್ಗೊಚ್ಚತಮೋ ॥ ೧೧೪

ಕಾವರಿವರೆಂದು ಕರಮಂ ।
ಜೀವಿತಮೆಂಬಂದದೀಯೆ ಷಡ್ಭಾಗಮನಿಂ ॥
ತೀವಸುಧಾಜನಮದಟಿಂ ।
ದಾವೆನಸುವರರಸರೆಂದು ಬಗೆದತಿವಿರಸಂ ॥ ೧೧೫

ಮತ್ತಂ

ನವರಾಜ್ಯಾಭಿಷವಾರಿಶೀತಜಲದಿಂದಂ ಸನ್ನಿಪಾತಂ ತಗು ।
ಳ್ದವೊಲಂತಿನ್ನುಡಿಯರ್ ತದುತ್ಸವಸಮುದ್ಯದ್ದುಂದುಭಿಧ್ವಾನದಿಂ ।
ಕಿವಿಗೆಟ್ಟಂತಿರೆ ಕೇಳರಾ ನೊಸಲ ಪಟ್ಟಂ ಜೋಲ್ದು ಕಣ್ಗಾವಗಂ ।
ಕವಿರ್ದಂದದೆ ಕಾಣರಿನ್ನುಮರಸರ್ಸಂಪನ್ಮದೈ(?)ಕಾಲಸರ್ । ೧೧೬

ತೊದಳಂ ನುಡಿವರ್ ನಡೆಯರ್ ।
ಪದುಳಂ ಕಿಸುಗಣ್ಣೆ ನೋಡುವರ್ ತಮ್ಮುಮನಿಂ ॥
ತಿದಿರುಮನೇನೆಂದಱಿಯರ್ ।
ಮದಿರೋನ್ಮತ್ತರವೊಲವನಿಪಾಲರ್ ಪಲರುಂ ॥ ೧೧೭

ತಲೆಗೂ ಹಾಯ್ದು ಬದುಕ ಬಯಸುತ್ತಾರೆ. ಇದು ಸಂಸಾರದ ಕತೆ, ೧೧೪. ಯಾವಾಗಲೂ ಭೂಮಿಯನ್ನು ಹಿಡಿದುಕೊಂಡು ತಮ್ಮೊಂದು ಕ್ಷುದ್ರ ದೇಹವನ್ನು ಸಲಹಿಕೊಳ್ಳಲೆಂದು ಅರಸರು ಆಗ್ರಹದಿಂದ (ಜನರನ್ನು) ಪೀಡಿಸುತ್ತಿರುವರಲ್ಲ ! ಈ ಅವಿವೇಕವೆಂಬುದು ಅರಸರಿಗೆ ಮೀಸಲೆ ? ೧೧೫. "ಇವರು ನಮ್ಮನ್ನು ಕಾಪಾಡುವವರು" ಎಂದುಕೊಂಡು ಲೋಕದ ಜನರು ಕೂಲಿ ಕೊಡುವಂತೆ ತಮ್ಮ ಉತ್ಪನ್ನದ ಆರನೆಯ ಒಂದು ಭಾಗವನ್ನು ಕಂದಾಯವೆಂಬ ಹೆಸರಿಂದ ಕೊಡುವರು. ಅದನ್ನು ತೆಗೆದುಕೊಂಡು ತಾವು ಅರಸುಗಳೆಂದು ಭ್ರಮಿಸುವುದು ಪರಮ ಮೂರ್ಖತನ, ಮತ್ತು–೧೧೬. ರಾಜ್ಯಾಭಿಷೇಕದ ತಣ್ಣೀರಿಂದ ಸನ್ನಿವಾತ ಬಡಿಯಿತೊ ಏನೊ ಎಂಬಂತೆ ಇವರು ಮಾತನ್ನೆ ಬಿಡುತ್ತಾರೆ; ಆ ಉತ್ಸವಕಾಲದಲ್ಲಿ ಹೊಮ್ಮಿದ ದುಂದುಭಿಧ್ವನಿಯಿಂದ ಕಿವಿ ಕೆಟ್ಟುಹೋದುವೊ ಏನೊ ಎಂಬಂತೆ ಇವರು ಯಾರ ಮಾತನ್ನೂ ಕೇಳಿಕೊಳ್ಳುವುದಿಲ್ಲ; ಹಣೆಗೆ ಕಟ್ಟಿದ ರಾಜಪಟ್ಟ ಕೆಳಗೆ ಜರಿದು ಕಣ್ಣಿಗೆ ಕವಿದು ಬಿಟ್ಟಿತೊ ಏನೊ ಎಂಬಂತೆ ಇವರು ಏನನ್ನೂ ಕಾಣದವರಾಗುತ್ತಾರೆ. ಸಂಪತ್ತಿನಲ್ಲಿ ಮುಳುಗಿ ಆಲಸಿಗಳಾಗುತ್ತಾರೆ. ೧೧೭. (ಅರಸರಾದೊಡನೆ) ಹಲವರು ಕಳ್ಳು ಕುಡಿದು ಸೊಕ್ಕೇರಿದವರಂತೆ ಹುಸಿಯನ್ನೆ ತೊದಲುವರು; ನೇರವಾಗಿ ನಡೆಯರು; ಕೆಂಗಣ್ಣಾಗಿಯೆ ನೋಡುವರು; ತಮ್ಮನ್ನೂ ಅರಿಯರು, ಸಮ್ಮುಖ

ಭಕ್ತದ್ವೇಷಂ ಜಡಸಂ।
ಸಕ್ತಿ ಸದಾಚರಿತಲಂಘನಂ ವಿಕಲವಚೋ॥
ಯುಕ್ತಿ ಕಟುಮುಖತೆ ಕುಂದದ।
ಮುಕ್ತಜ್ವರನಂದದಿಂದಮರಸರೊಳೆಂದುಂ॥ ೧೧೮

ಕುಂದು ಬೆಳ್ಗೊಡೆಯ ನೆೞಲ।
ಲ್ಗೊಂದಿನಿತುಂ ತೃಷ್ಣೆ ನೃಪರ ದುರ್ಗುಣದೊಳ್ ಮ॥
ತ್ತೊಂದಿನಿತು ಪಾಱದಿದು ಬಿಸ।
ವಂದಂ ಚಮರರುಹಪವನಪಾತದಿನೆಂದುಂ॥ ೧೧೯

ಮಱೆದುಂ ಕಾಣರ್ ಕಂಡೊಡ।
ಮಱಿಯರ್ ಮಾನ್ಯರಿವರೆಂದು ಮತ್ತಱಿದೊಡಮೇಂ॥
ತೋಱುವರ್ ದಾಕ್ಷಿಣ್ಯಮುಮಂ।
ತೆಱನಿಂತುಟು ನೋಡೆ ಸಿರಿಗರಂ ಪೊಡೆದವರಾ॥ ೧೨೦

ಕನಕಾಭಿಧಾನಸಾಮ್ಯದೆ।
ಜನಿಯಿಪುದುನ್ಮತ್ತವೃತ್ತಿಯಂ ಧುತ್ತೂರಂ॥
ಕನಕಮೆ ತಾಂ ತತ್‌ಕ್ಷಣದೊಳ್।
ಜನಿಯಿಪುದಚ್ಚರಿಯೆ ಜನದ ಮನದೊಳ್ ಮದಮಂ॥ ೧೨೧

ದವರನ್ನೂ ಅರಿಯುರು. ೧೧೮. ಅರಸರಾದವರಿಗೆ ಇನ್ನೂ ಜ್ವರ ಬಿಡದಿರುವ ರೋಗಿಯಂತೆ ಯಾವಾಗಲೂ "ಭಕ್ತದ್ವೇಷ" (೧. ತಮ್ಮ ಭಕ್ತರ ಮೇಲೆ ದ್ವೇಷ. ೨. ಆಹಾರ ಇಷ್ಟವಾಗದಿರುವುದು), "ಜಡಸಂಸಕ್ತಿ" (೧. ಅವಿವೇಕಿಗಳ ಸಹವಾಸ. ೨. ದೇಹಾಲಸ್ಯದಿಂದ ಕೂಡಿಕೊಂಡಿರುವಿಕೆ), "ಸದಾಚರಿತಲಂಘನ" (೧. ಸದಾಚಾರವನ್ನು ಮೀರುವಿಕೆ; ೨. ಉಪವಾಸವನ್ನು ಆಚರಿಸುವುದು), "ವಿಕಲ ವಚೋಯುಕ್ತಿ" (೧. ಸಮರ್ಪಕವಾಗಿ ಮಾತಾಡದಿರುವುದು. ೨. ಮಾತಾಡುವಾಗ ಅಶಕ್ತಿಯಿಂದ ತಡವರಿಸುವುದು), "ಕಟುಮುಖತೆ" (೧. ಕಠೋರವಾಗಿ ಮಾತಾಡುವಿಕೆ. ೨. ಆಹಾರಸೇವನೆ ಮಾಡಲಾಗದಂತೆ ಬಾಯಿ ಕಹಿಯಾಗಿರುವುದು)– ಇವು ತಪ್ಪುವುದಿಲ್ಲ. ೧೧೯. ಬೆಳ್ಗೊಡೆಯ ನೆಳಲಿನಿಂದ ಅವರ ದಾಹವೊಂದಿಷ್ಟು ಕೂಡ ತಗ್ಗದು; ಚಾಮರದ ಗಾಳಿಯಿಂದ ಅವರ ದುರ್ಗುಣದ ಲವಲೇಶವೂ ಹಾರದು. ಇದು ಸೋಜಿಗ. ೧೨೦. ಮರೆತು ಕೂಡ ಕಾಣರು; ಕಂಡರೂ "ಇವರು ಮಾನ್ಯರು" ಎಂದು ಅರಿಯುರು; ಅರಿತರೂ ದಾಕ್ಷಿಣ್ಯವನ್ನು ತೋರೆಯುವರೆ? ಸಂಪತ್ತು ಎಂಬ ಪಿಶಾಚಿ ಹಿಡಿತಕ್ಕೆ ಒಳಗಾದವರ ಗತಿಯೋ ಹೀಗೆ. ೧೨೧. 'ಕನಕ' ಎಂಬ ಹೆಸರು ಹೊಂದಿದ ಮಾತ್ರಕ್ಕೇ ಧುತ್ತೂರವು ಉನ್ಮಾದವನ್ನು ಉಂಟುಮಾಡುವುದು. ಹೀಗಿರುವಾಗ ಸಾಕ್ಷಾತ್ ಕನಕವೆ ಬಂದಾಗ

ಸಿರಿಯೆಂಬ ಪಾಣ್ಬೆಯಾಗಳೆ।
ಸರಕ್ತೆಯಾಗಳೆ ವಿರಕ್ತೆಯವಳೊಲವನದಂ॥
ಚಿರಮೆಂದು ನಚ್ಚುವಂಗಂ।
ಚಿರಮಕ್ಕುಮೆ ಬಗೆವೊಡಱೆವುಮಱಿವುಂ ನೆರವುಂ॥ ೧೨೨

ಮಿಥ್ಯಾಜ್ಞಾನತೆಯಿನಸ।
ನ್ಮಿಥ್ಯಾಚರಣಕ್ಕೆ ಸಂದು ಸಲೆ ಸತ್ಪಥಮಂ॥
ತಥ್ಯಮನೊಲ್ಲದೆ ರೋಗಿಗ।
ಪಥ್ಯಕ್ರಿಯೆಯಾದ ತೆಱದೆ ಕಿಡುವರ್ ಪಲರುಂ॥ ೧೨೩

ಎಂದು ನುಡಿದು ಮತ್ತಂ ತನ್ನೊಳಿತೆಂದಂ:-

ಒಡಲಧ್ರುಮಶುಚಿಯಿದಂ।
ಬಿಡುವುದು ಧರ್ಮಮನೆ ಪಿಡಿವುದೆಂದಾ ತೆಱದಿಂ॥
ನಡೆಯದೆ ಮಱೆದಾನಿಂತಿ।
ರ್ದೊಡೆ ಕಮ್ಮರಿಯೋಜನೆಂಬ ನುಡಿಗೆಡೆಯಪ್ಪೆಂ॥ ೧೨೪

ಕರಣಗ್ರಾಮಂಗಳ್ ಮಾಂ।
ಕರಿಸಿದುವಿನ್ನೆವರಮರಸುತನದೊಳಮೆನ್ನಂ॥
ಪರಮತಪೋಗ್ನೀಯಿನಿನ್ನವ।
ನುರಿಪುವೆನಲ್ಲದೊಡೆ ಬಲ್ಪು ಕಡೆಯೈದುಗುಮೇ॥ ೧೨೫

ಜನರ ಮನಸ್ಸನ್ನು ಉನ್ಮಾದಗೊಳಿಸುವುದು ಏನಾಶ್ಚರ್ಯ? ೧೨೨. ಸಂಪತ್ತು ಎಂಬ ಜಾರೆ ಅನುರಕ್ತಳಾಗಳು: ಅವಳು ವಿರಕ್ತೆಯೆ, ಅವಳ ಒಲವನ್ನು ಸ್ಥಿರವೆಂದು ನಂಬುವವನಿಗೆ ಅರಿವಾಗಲಿ, ಧರ್ಮವಾಗಲಿ, ನೆರವಾಗಲಿ ಸ್ಥಿರವಾದಾವೆ ? ೧೨೩. ಮಿಥ್ಯಾಜ್ಞಾನದಿಂದ ಅಯೋಗ್ಯವಾದ ಮಿಥ್ಯಾಚಾರಕ್ಕೆ ಒಳಗಾಗಿ, ಸದಾಚಾರವನ್ನಲ್ಲದೆ, ಕೆಲವರು ಅಪಥ್ಯಕ್ಕೆ ಒಳಗಾದ ರೋಗಿಗಳಂತೆ ಕೆಟ್ಟು ಹೋಗುವರು." ವ॥ ಎಂದು ನುಡಿದು, ಮತ್ತೆ ತನ್ನ ಮನದಲ್ಲಿ ಹೀಗೆಂದುಕೊಂಡನು–೧೨೪. "ದೇಹವೆಂಬುದು ಅಶುದ್ಧ: ಇದನ್ನು ಬಿಟ್ಟು ಧರ್ಮವನ್ನು ಹಿಡಿಯಬೇಕು, ಹಾಗೆ ನಡೆದುಕೊಳ್ಳದೆ ಮರೆವಿನಿಂದ ನಾನು ಹೀಗೆಯೆ ಇದ್ದರೆ ನಾನು "ತನ್ನ ಉಪದೇಶದಂತೆ ನಡೆಯದ ಉಪಾಧ್ಯಾಯ" ಎಂಬ ಅಪಹಾಸ್ಯಕ್ಕೆ ಈಡಾಗುವೆನು. ೧೨೫. ಇಂದ್ರಿಯಗಳು ಈವರೆಗೆ ಅರಸುತನದ ಮೋಹಕ್ಕೆ ಗುರಿಮಾಡಿ ನನ್ನನ್ನು ಅವಜ್ಞೆಗೊಳಿಸಿದುವು, ಅಧಿಕವಾದ ತಪಸ್ಸಿನ ಬೆಂಕಿ

ಅಂತು ಸಂಸಾರಶರೀರಭೋಗನಿರ್ವೇಗಪರತಂತ್ರನಾತ್ಮತಂತ್ರಮಂ ವಿಷತಂತ್ರಮೆಂದುಂ, ಮಂತ್ರಿಯನಾಭಿಚಾರಿಕಮಂತ್ರಿಯೆಂದುಂ, ಕೋಶಮಂ ಮಧುಕೋಶಮೆಂದುಂ ದೇಶಮನಹಿತೋಪದೇಶಮೆಂದುಂ, ಸಹಜಸಖನಂ ವಾಯುಸಖನೆಂದುಂ, ದುರ್ಗಮಂ ವೃಜಿನದುರ್ಗಮೆಂದುಮಿಂತು ಸಪ್ತಾಂಗಮುಮಂ ದೀರ್ಘಸಪ್ತಾಂಗಮಾಗೆ ಬಗೆದಿಟಿಕೆಯ್ದು

ಬಳವದ್ರಿಪುವಂ ಚಕ್ರದ ।
ಬಳದಿಂ ಗೆಲ್ದಿರ್ದ ಕಳದೊಳಘರಿಪುವುಮನಾ ॥
ಗಳೆ ಧರ್ಮಚಕ್ರಬಲದಿಂ ।
ದಿಳಾಧಿಪತಿ ಗೆಲಲೊಡರ್ಚಿದಂ ವಿಜಯಪರಂ ॥ ೧೨೬

ಅಂತೊಡರ್ಚಿ ಬಟಿಯಂ ನಿಜತನೂಧವಂ ಸುವರ್ಣನಾಭನುಮಂ ಪೃಥ್ವೀಪಾಲನಂದನಂ ಧರ್ಮಪಾಲನುಮಂ ಕುಲವೃತ್ತಿಯೊಳ್ ನಿಲಿಪುದೆಂದು ಸಾಮಂತಸಂದೋಹಕ್ಕೆ ಮಂತ್ರಿಮಂಡಳಿಗಮಪ್ಪಯಿಸಿ

ಪಱಿದಾತ್ಮಪ್ರಿಯದಾರದಾರಕಸುಹೃತ್ಸಂಬಂಧಬಂಧಂಗಳಂ ।
ಮುಱಿದುರ್ವೀವಲಯಾಧಿರಾಜ್ಯಸುಖಸೇವಾರಂಭಣಸ್ತಂಭಮಂ ॥
ಮೆಱೆದುದ್ಭೂತವಿರಕ್ತವೃತ್ತಮದಲೀಲಾವೇಗಸಂಯೋಗದಿಂ ।
ಪೊಱಮಟ್ಟತ್ತು ತಪೋವನಕ್ಕೆ ತದಿಳಾಪಾಲೋದ್ಧುರಂ ಸಿಂಧುರಂ ॥ ೧೨೭

ಯಿಂದ ಅವುಗಳನ್ನು ಸುಡುವೆನು. ಹಾಗಲ್ಲದೆ ಆತ್ಮಬಲ ಸಫಲವಾಗುವುದೆ ?" ವ॥ ಹೀಗೆ ಸಂಸಾರದಲ್ಲಿಯೂ ಶರೀರಭೋಗದಲ್ಲಿಯೂ ವೈರಾಗ್ಯ ತಾಳಿ, ಆತ್ಮಾಲಂಕಾರವನ್ನು ವಿಷಾಲಂಕಾರವೆಂದು, ಮಂತ್ರಿಯನ್ನು ಮಾಟ ಮಾಡುವ ಮಂತ್ರಿಯೆಂದು, ಕೋಶವನ್ನು ಮದ್ಯಕೋಶವೆಂದು, ದೇಶವನ್ನು ಅಹಿತಕಾರಿಯಾದ ಉಪದೇಶವೆಂದು, ಸಹಜ ಮಿತ್ರನನ್ನು ಬೆಂಕಿಯೆಂದೂ, ದುರ್ಗವನ್ನು ಪಾಪದ ಕೋಟೆಯೆಂದು–ಹೀಗೆ ರಾಜ್ಯದ ಸಪ್ತಾಂಗಗಳನ್ನು ತನಗೆ ಮಾರಕವೆಂದು ಭಾವಿಸಿ, ತಿರಸ್ಕರಿಸಿ–೧೨೬. ಬಲಿಷ್ಠನಾದ ಶತ್ರುವನ್ನು ಚಕ್ರಾಯುಧದಿಂದ ಗೆದ್ದ ಕಾಳಗದ ಕಣದಲ್ಲಿಯೆ, ಪಾಪ ಶತ್ರುವನ್ನು ಧರ್ಮಚಕ್ರದಿಂದ ಗೆಲ್ಲಲೆಂದು ಅರಸನು ಉಪಕ್ರಮಿಸಿದನು. ವ॥ ಆ ಉಪಕ್ರಮದ ಮೇರೆಗೆ ತನ್ನ ಮಗನಾದ ಸುವರ್ಣನಾಭನನ್ನು, ಪೃಥ್ವೀಪಾಲನ ಮಗನಾದ ಧರ್ಮಪಾಲನನ್ನು, ಕುಲಧರ್ಮಾನುಸಾರವಾಗಿ ಅವರವರ ರಾಜಪದವಿಗೆ ನಿಯಮಿಸಿ, ಪಟ್ಟಗಟ್ಟುವ ಕಾರ್ಯವನ್ನು ಮಂತ್ರಿಗಳಿಗೆ ಒಪ್ಪಿಸಿದನು. ೧೨೭. ತನಗೆ ಪ್ರಿಯವಾಗಿದ್ದ ಪತ್ನಿ–ಪುತ್ರ–ಸ್ನೇಹಿತರೆಂಬುವರ ಸಂಬಂಧವೆಂಬ ಬಂಧನಗಳನ್ನು ಹರಿದು ಹಾಕಿ, ಭೂಮಂಡಲದ ರಾಜ್ಯಸುಖ ಸೇವನೆಯೆಂಬ ಕಂಬವನ್ನು ಮುರಿದೊಗೆದು, ವೈರಾಗ್ಯವೃತ್ತಿಯೆಂಬ ಮದಲೀಲೆಯನ್ನು ಹೊಂದಿ, ಭೂಪಾಲನೆಂಬ ಶ್ರೇಷ್ಠವಾದ ಆನೆ ತಪೋವನಕ್ಕೆ ಹೊರಟಿತು.

ಸಿರಿವೆಣ್ಣಂ ದೂವೆದೊಟ್ಟಿಂಗೆಣೆಯೆನೆ ಬಗೆದಂ ಮತ್ತಮಾ ವಿಶ್ವವಿಶ್ವಂ ॥
ಭರೆಯಂ ಮೃತ್ಪಿಂಡಮಾತ್ರಾಕೃತಿಯೆನೆ ಬಗೆದಂ ಜೈನದೀಕ್ಷಾವ್ಯಪೇಕ್ಷಾ ।
ತುರನಾತ್ಮೀಯಾಂಗಮಂ ಕಲ್ಮರನೆನೆ ಬಗೆದಂ ಲಬ್ಧಲಬ್ಧಿಪ್ರವೇಶಂ ।
ಧರಣೀಶಂ ವರ್ಜಿತಾಶಂ ಪರಮಸುಖವಶಂ ಕಾವ್ಯನೌಕರ್ಣಧಾರಂ ॥ ೧೨೮

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿಪದಪದ್ಮನಿಧಾನದೀಪವರ್ತಿ
ಶ್ರೀಮದಗ್ಗಳದೇವ

ವಿರಚಿತಮಪ್ಪ

## ಚಂದ್ರಪ್ರಭಪುರಾಣದೊಳ್

### ವಿಜಯಜನಿತವೈರಾಗ್ಯವರ್ಣನಂ

### ದಶಮಾಶ್ವಾಸಂ

೧೨೮. ಜಿನದೀಕ್ಷಾತುರನಾದ ಆ ಅರಸನು ಮೋಹವನ್ನೆಲ್ಲ ತೊರೆದು, ಪರಮಸುಖಾಪೇಕ್ಷಿಯಾಗಿ ವೈಭವಲಕ್ಷ್ಮಿಯನ್ನು ಕೀಳು ತೊತ್ತಿಗೆ ಸಮಾನವೆಂದು ಬಗೆದನು; ಸಮಸ್ತ ಭೂಮಂಡಲವನ್ನು ಒಂದು ಮಣ್ಣ ಹೆಂಟೆಗೆ ಸರಿಯೆಂದು ಭಾವಿಸಿದನು; ತನ್ನ ದೇಹವನ್ನು ಕಲ್ಲಂತೆ ಮರದಂತೆ ಎಣಿಸಿದನು; ಅವನಿಗೆ ಲಬ್ಧಿಯೊದಗಿ ಬಂದಿತ್ತು.

### ದಶಮಾಶ್ವಾಸ ಮುಗಿದುದು

# ಏಕಾದಶಾಶ್ವಾಸಂ

ಶ್ರೀಧರಮುನಿಸನ್ನಿಧಿಗೆ ವಿ ।
ಶೋಧಿಯುತಂ ಪದ್ಮನಾಭವಿಭು ಪೋಗಿ ತಪ ॥
ಶ್ರೀಧರನಾದಂ ಧೈರ್ಯಾಧ ।
ರಾಧರಪತಿ ಜೈನಜನಮನೋಹರಚರಿತಂ ॥ ೧

ಧೃತಪಂಚರತ್ನಮಂ ರಾ ।
ಗಿತೆಯೊಳ್ ಭೂಷಣಮನಾಂಪ ತೆಱದಿಂದೆ ವಿರಾ ॥
ಗಿತೆಯೊಳ್ ಪಂಚಮಹಾವ್ರತ ।
ಯುತಮಂ ನಿರುಪಮಮನಾಂತನಾ ವಿಭು ತಪಮಂ ॥ ೨

ಅಂತು ವಿಶ್ರುತಶ್ರವಣಶ್ರೀಸಮಾಶ್ರಯಣನಾಗಿ ಸಮನಂತರಂ,

ಪೀನತರಾಂಗತರಂಗವಿ ।
ತಾನಮನಖಿಳಾಂಗಬಾಹ್ಯಖಿಳವಿಭ್ರಮಮಂ ॥
ಜ್ಞಾನಾಭ್ಯಾಸಭುಜಂಗಳಿ ।
ನೇಱೀಸಿದನೋ ಶ್ರುತಾಬ್ಧಿಯಂ ತನ್ಮುನಿಪಂ ॥ ೩

ಅಯ್ದುಂ ಸಮಿತಿಗಳೊಳ್ ಕಡೆ ।
ಯೆಯ್ದುವಿನಂ ತತ್ತದುದ್ಯಮಂ ಬಗೆಯೊಳ್ ತ ॥
ಳ್ಪೊಯ್ದಪ್ರಮತ್ತತೆಯಿನೇ ।
ನುಯ್ದನೊ ಸುಚರಿತದೊಳೆನಿಸಿದಂ ಮುನಿಮುಖ್ಯಂ ॥ ೪

## ಏಕಾದಶಾಶ್ವಾಸಂ

೧. ಸ್ಥೈರ್ಯದಲ್ಲಿ ಮಹಾಪರ್ವತಕ್ಕೆ ಸಮಾನನಾದ ಪದ್ಮನಾಭರಾಜನು ಪರಿಶುದ್ಧ ಮನಸ್ಕನಾಗಿ ಹೋಗಿ ಶ್ರೀಧರಮುನಿಗಳ ಸನ್ನಿಧಿಯಲ್ಲಿ ತಪೋದೀಕ್ಷೆಯನ್ನು ವಹಿಸಿದನು. ೨. ಭೋಗವೃತ್ತಿಯಲ್ಲಿದ್ದಾಗ ಪಂಚರತ್ನಗಳನ್ನು ಅಳವಡಿಸಿಕೊಂಡು ಅಲಂಕಾರ ಮಾಡಿಕೊಂಡಂತೆ, ವೈರಾಗ್ಯಪರನಾದಾಗ ಪಂಚಮಹಾವ್ರತಗಳನ್ನು ಆ ಅಸಾಮಾನ್ಯ ರಾಜನು ಸ್ವೀಕರಿಸಿ ತಪಸ್ಸಿಗೆ ತೊಡಗಿದನು. ವ॥ ಹೀಗೆ ಶ್ರೇಷ್ಠವಾದ ಶ್ರವಣಧರ್ಮವನ್ನು ಆಶ್ರಯಿಸಿ, ಆ ಬಳಿಕ– ೩.ವಿಸ್ತಾರವಾದ ಅಂಗಗಳೆಂಬ ತೆರೆಗಳುಳ್ಳ ಶ್ರುತಸಮುದ್ರವನ್ನು ಆ ಮುನೀಂದ್ರನು ಜ್ಞಾನ ಮತ್ತು ಅಭ್ಯಾಸವೆಂಬ ಭುಜಗಳ ಬಲದಿಂದ ಸಮಗ್ರವಾಗಿ ಈಸಿ ಪಾರಂಗತನಾದನು; ೪. ಐದು ಸಮಿತಿಗಳನ್ನು ಒಂದೂ ತಪ್ಪಾಗ

ಅಪಗತಬಹ್ವಾರಂಭ ।
ಪ್ರಪಂಚನಾಗಿರ್ದುಮುಪಚಿತೋರುವೃಷಂ ಗು ॥
ಪ್ತ್ಯುಪಯುಕ್ತನಾಗಿಯುಂ ಪ್ರಕ ।
ಟಪವಿತ್ರಚರಿತ್ರನಾದನಾ ಮುನಿ ಚಿತ್ರಂ ॥ ೫

ಮತ್ತಮುೞಿದ ಮೂಲಗುಣಂಗಳಿರ್ಪತ್ತೆಂಟಱಿಕೊಳಂ ನೆಱಿದು

ವ್ರತಿಪತಿ ವಿಶುದ್ಧಚರಿತಂ ।
ವಿತತಾಷ್ಟಾದಶಸಹಸ್ರಶೀಲಸಮೇತಂ ॥
ನುತಚತುರಶೀತಿಲಕ್ಷ ।
ಪ್ರತೀತಗುಣಮಣಿವಿಭೂಷಣಂ ತಾನಾದಂ ॥ ೬

ವ್ರತಿನಾಥಂ ಕ್ಷಮೆ ಮಾರ್ದವಂ ಋಜುತೆ ಸತ್ಯಂ ಶೌಚಮಾ ಸಂಯಮಂ ।
ಸುತಪಂ ತ್ಯಾಗಮಕಿಂಚನತ್ವಮುಪಜಿಹ್ಮಂ ಬ್ರಹ್ಮಚರ್ಯಂ ದಲೆಂ ॥
ಬತುಳಂಗಳ್ ಕುಶಲಂಗಳಿಂತು ದಶಧರ್ಮಂಗಳ್ ನಿಜಾಚಾರದೊಳ್ ।
ಸತತಂ ಸಂದಿರೆ ನಾಡೆ ರೂಢಿವಡೆದಂ ಯೋಗೀಂದ್ರ ಸಂದೋಹದೊಳ್ ॥ ೭

ದಂತೆ, ಉಚಿತವಾದ ರೀತಿಯಲ್ಲಿ ಆಚರಿಸಿ ಸಚ್ಚರಿತ್ರನೆನಿಸಿದನು. ೫. ವಿಸ್ತಾರವಾದ "ಆರಂಭ"ದ (ಬೇಸಾಯದ) ವ್ಯವಹಾರವನ್ನು ಬಿಟ್ಟುಕೊಟ್ಟಿದ್ದರೂ, ಆ ಮುನಿಯು ಉತ್ತಮವಾದ "ವೃಷ"(ಎತ್ತು)ಗಳನ್ನು ಇಟ್ಟುಕೊಂಡಿದ್ದನು; ಮತ್ತು "ಗುಪ್ತಿ" (ಗುಟ್ಟಾಗಿರುವ ನಡತೆ)ಯುಳ್ಳವನಾಗಿದ್ದರೂ ಅವನ ಆಚರಣೆ ಹೊರಗೆ ಪವಿತ್ರವಾಗಿಯೆ ಇತ್ತು. ಇದು ವಿಚಿತ್ರ. [ಇದು ವಿರೋಧಾಭಾಸವೆಂಬ ಅಲಂಕಾರವಾದುದರಿಂದ, ಮೊದಲು ವಿರೋಧವಾದ ಅರ್ಥವೇ ತೋರುತ್ತದೆ. ಅದರಲ್ಲಿರುವ ಪದಗಳಿಗೆ ಇರುವ ಇನ್ನೊಂದು ಅರ್ಥವನ್ನು ಅನ್ವಯಿಸಿದಾಗ ಆ ವಿರೋಧವು ಪರಿಹಾರವಾಗುತ್ತದೆ. ಈ ಪದ್ಯದಲ್ಲಿ ಮೇಲೆ ಹೇಳಿದ ವಿರೋಧ ಪರಿಹಾರಕ್ಕೆ ಈ ಮುಂದಿನಂತೆ ಅರ್ಥ ಮಾಡಬೇಕು]. ಆ ಮುನಿಯು "ಅಪಗತ ಬಹ್ವಾರಂಭ ಪ್ರಪಂಚ" (ಹಿಂಸಾಕರ್ಮದಿಂದ ದೂರನಾದವನು) ಆಗಿದ್ದು "ಉಪಚಿತೋರುವೃಷ" (ಅಧಿಕವಾದ ಸದ್ಗುಣವುಳ್ಳವ)ನು ಆಗಿದ್ದನು; "ಗುಪ್ತ್ಯುಪಯುಕ್ತ" (ವಾಗ್ಗುಪ್ತಿ, ಮನೋಗುಪ್ತಿ ಮತ್ತು ಕಾಯಗುಪ್ತಿಯೆಂಬ ಮೂರು ಗುಪ್ತಿಗಳನ್ನುಳ್ಳವ)ನಾಗಿದ್ದು, "ಪ್ರಕಟ ಪವಿತ್ರ ಚರಿತ್ರ" ಆತನ ಚಾರಿತ್ರ ಎಲ್ಲರಿಗೂ ಕಾಣುವಂತೆ ಪವಿತ್ರವಾಗಿತ್ತು. ವ॥ ಮತ್ತು ಉಳಿದ ಇಪ್ಪತ್ತೆಂಟು ಮೂಲ ಗುಣಗಳಿಂದಲೂ ಸಮೃದ್ಧನಾಗಿ– ೬. ಹದಿನೆಂಟು ಸಾವಿರ ಶೀಲಗಳೊಡನೆ, ಎಂಬತ್ತು ನಾಲ್ಕು ಲಕ್ಷಗುಣಗಳೆಂಬ ರತ್ನಗಳಿಂದಲೂ ಆ ಮುನೀಂದ್ರನು ಭೂಷಿತನಾದನು. ೭. ಕ್ಷಮೆ, ಮಾರ್ದವ, ಋಜುತೆ, ಸತ್ಯ, ಶೌಚ, ಸಂಯಮ, ತಪ, ತ್ಯಾಗ, ಅಕಿಂಚನತ್ವ ಮತ್ತು ಉಪಜಿಹ್ಮ– ಎಂಬ ಶ್ರೇಷ್ಠವಾದ ಹತ್ತು ಧರ್ಮಗಳನ್ನು ತನ್ನ ಆಚರಣೆಯಲ್ಲಿ ಅಳವಡಿಸಿಕೊಂಡು ಆ ಮುನೀಂದ್ರನು ಯೋಗೀಶ್ವರಸಮೂಹದಲ್ಲಿ ಶ್ರೇಷ್ಠನೆನಿಸಿದನು.

ಅಂತು ಬಾಹ್ಯಾಭ್ಯಂತರಭೇದಭಿನ್ನಮಪ್ಪ ಪನ್ನೆರಡು ತಪಂಗಳೊಳಾಚರಣಪರಿಣತೆಯನೆತ್ತಿಕೊಂಡು

ಆರಯೆ ಸಾಕಾರನಿರಾ ।
ಕಾರಮೆನಿಪ್ಪೆರಡು ಭೇದದನಶನಮಂ ಸಾ ॥
ಕಾರನಿರಾಕಾರಸ್ವೀ ।
ಕಾರಾತ್ಮಂ ಮೊದಲ ತಪಮನಾಂತಂ ಮುನಿಪಂ ॥ ೮

ಒಂದೊಂದು ತುತ್ತನುಣಿಸಿನೊ ।
ಳೊಂದವುಟಿಪ್ಪಿನೆಗಮಿಟಿಪಿ ಮತ್ತೇಱಿಪುದೆಂ ॥
ಬಂದದೆರಡನೆಯ ತಪಮೇಂ ।
ಸಂದುದೊ ಮುನಿಪತಿಗೆ ವರ್ಯಮವಮೋದರ್ಯಂ ॥ ೯

ಶಾಂತಾತ್ಮಂಗೆಸೆದುದು ತಪ ।
ಮಿಂತಪ್ಪವರಿಂತು ನಿಱಿಸಿದಲ್ಲದೆ ನಿಲವಿ ॥
ಲ್ಲಂತೆಮಗೆಂಬೀ ಪೂಣ್ಕೆಯ ।
ನಾಂತುದು ಮೂಱನೆಯ ವೃತ್ತಿಪರಿಸಂಖ್ಯಾನಂ ॥ ೧೦

ಕರಮೆ ಮುನಿ ದುಗ್ಧದಧ್ಯಾ ।
ದಿರಸಂಗಳನೆಯ್ದೆ ತೊಱೆದು ವೃಷ್ಯಂಗಳನ ॥
ಚ್ಚರಿ ಚರಿತಮೆನಿಸಿ ನಾಲ್ಕನೆ ।
ಯ ರಸಪರಿತ್ಯಾಗಮೆಂಬ ತಪಮಂ ತಳೆದಂ ॥ ೧೧

ವ ॥ ಬಾಹ್ಯ ಮತ್ತು ಅಭ್ಯಂತರವೆಂದು ವರ್ಗೀಕೃತವಾದ ಹನ್ನೆರಡು ತಪಗಳನ್ನು ಆಚರಿಸುವುದಕ್ಕೆ ಎತ್ತಿಕೊಂಡನು. ೮. ಆತ್ಮನು ಸಾಕಾರನೂ ಅಹುದು, ನಿರಾಕಾರನೂ ಅಹುದು ಎಂದು ತಿಳಿದುಕೊಂಡ ಆ ಮುನಿಪನು ಸಾಕಾರ ಮತ್ತು ನಿರಾಕಾರ ಎಂದು ಎರಡು ಬಗೆಯಾಗಿರುವ ಉಪವಾಸವ್ರತವನ್ನು ಆಚರಿಸಿದನು. ಇದು ಮೊದಲನೆಯ ತಪಸ್ಸು. ೯. ಊಟದಲ್ಲಿ ಒಂದೊಂದು ತುತ್ತನ್ನು ಕಡಮೆ ಮಾಡುತ್ತ ಕೊನೆಗೆ ಒಂದೇ ಅಗಳಾಗುವವರೆಗೆ ಆಹಾರಪ್ರಮಾಣವನ್ನು ಇಳಿಸಿ ಮತ್ತೆ ಅದೇ ಕ್ರಮದಲ್ಲಿ ಏರಿಸುತ್ತ ಹೋಗುವುದು ಅವಮೋದರ್ಯವೆಂಬ ಎರಡನೆಯ ತಪಸ್ಸು. ಅದನ್ನು ಆತನು ಚೆನ್ನಾಗಿ ಆಚರಿಸಿದನು. ೧೦. ಇಂತಹರು ಇಂತು (ಆಹಾರಕ್ಕಾಗಿ) ನಿಲ್ಲಿಸಿ ಕೊಂಡರೆ ಮಾತ್ರ ನಿಲ್ಲುವುದಲ್ಲದೆ, ಹಾಗೆಯೆ ಎಲ್ಲಿಯೂ ಆಹಾರಕ್ಕೆ ನಿಲ್ಲುವಂತಿಲ್ಲವೆಂಬ ಪ್ರತಿಜ್ಞೆ ಮಾಡಿ ಹಾಗೆ ನಡೆದುಕೊಳ್ಳುವ ಮೂರನೆಯ ತಪವಾದ ವೃತ್ತಿಪರಿಸಂಖ್ಯಾನವನ್ನು ಆತನು ಆಚರಿಸಿದನು. ೧೧. ಹಾಲು ಮೊಸರು ಮೊದಲಾದ ರಸ ಪದಾರ್ಥಗಳನ್ನು ಸಂಪೂರ್ಣವಾಗಿ ತೊರೆದು ಬಿಡುವುದು ರಸ ಪರಿತ್ಯಾಗವೆಂಬ ನಾಲ್ಕನೆಯ ತಪಸ್ಸು. ಸೋಜಿಗ

ವಿಗತನಪುಂಸಕಯೋಪಿ ।
ನ್ಮೃಗಪಶುವೆನಿಪೆಡೆಯೊಳಲ್ಲದಿರಲಾಗೆಂಬು ॥
ಜ್ಜಗದಯ್ದನೆಯ ತಪಂ ಸಾ ।
ಧುಗುಣಾಗ್ರಣಿಗೆಸೆದುದಾ ವಿವಿಕ್ತಾವಾಸಂ ॥ ೧೨

ಅಂತನಂತರಂ ಕಾಯಕ್ಲೇಶಮೆಂಬಾಱನೆಯ ಬಾಹ್ಯತಪೋನುಷ್ಠಾನದೊಳ್ ನಿಷ್ಠಿತನಾಗಿ ಕಾಲ ತ್ರಯದೊಳಂ ಯಥಾಕ್ರಮದಿಂ

ಬಿಸಿಲೆಸೆವ ಜೊನ್ನಮರ್ಕನೆ ।
ಸಸಿ ದಿವಸಮೆ ರಾತ್ರಿಯಾದುದೆನೆ ಕಲ್ನೆಲೆಯೊಳ್ ॥
ಮಿಸುಕದೆ ಶಾಂತರಸಂ ಮಾ ।
ನಸದೊಳ್ ತಣ್ಮಲೆಯೆ ನೆಲಸಿದಂ ಯೋಗೀಂದ್ರಂ ॥ ೧೩

ಧಾರಾಭಿಷೇಕಮಿದುವೆ ತ ।
ಪೋರಾಜ್ಯಕ್ಕೆನಿಸೆ ಸುರಿವ ಮೞೆ ಘನರುತಿ ತೂ ॥
ರ್ಯಾರವಮಾಗೆ ಮುನೀಂದ್ರಂ ।
ಬೇರೂಱಿದ ಬೀೞಲಂತೆ ಮರಮೊದಲಿರ್ದಂ ॥ ೧೪

ಅಮಿತಹಿಮಕಣಗಣಂ ದೇ ।
ಹಮನಾದಂ ಪುದಿಯೆ ಧೀರನಂಗಜಸಮರೋ ॥
ದ್ಯಮದಿಂ ತೊಟ್ಟಂ ಪವಿಕವ ।
ಚಮನಾವಗಮೆನಿಸಿ ಬೆಳ್ಪವಾಸದೊಳಿರ್ದಂ । ೧೫

ಬಡುವಂತೆ ಆ ತಪಸ್ಸನ್ನು ಆತನು ನಿರ್ವಹಿಸಿದನು. ೧೨. ನಪುಂಸಕರು, ಸ್ತ್ರೀಯರು, ಮೃಗಗಳು ಮತ್ತು ಪಶುಗಳು– ಇವಿಲ್ಲದ ಸ್ಥಳಗಳನ್ನು ಬಿಟ್ಟು ಬೇರೆಲ್ಲಿಯೂ ಇರಕೂಡದೆಂಬುದು ವಿವಿಕ್ತಾವಾಸವೆಂಬ ಐದನೆಯ ತಪಸ್ಸು. ವ॥ ಅನಂತರ ಕಾಯಕ್ಲೇಶವೆಂಬ ಆರನೆಯ ಬಾಹ್ಯತಪದಲ್ಲಿ ನಿರತನಾಗಿ (ಬೇಸಗೆ, ಮಳೆಗಾಲ, ಮತ್ತು ಚಳಿಗಾಲಗಳೆಂಬ) ಮೂರು ಕಾಲಗಳಲ್ಲಿ ಕ್ರಮವಾಗಿ– ೧೩. ಬಿಸಿಲೆ ಬೆಳ್ದಿಂಗಳಾಗಿ, ಸೂರ್ಯನೆ ಚಂದ್ರನಾಗಿ, ಹಗಲೆ ಇರುಳಾಯಿತೊ ಏನೊ ಎಂಬಂತೆ ಸಂಪೂರ್ಣ ಶಾಂತಮನಸ್ಕನಾದ ಆ ಯೋಗೀಂದ್ರನು (ಬೇಸಗೆಯಲ್ಲಿ) ಕಲ್ಲಿನ ಮೇಲೆ ನಿಶ್ಚಲನಾಗಿ ನಿಂತಿದ್ದನು. ೧೪. ಸುರಿಯುವ ಮಳೆ ತಪೋರಾಜ್ಯದ ಅಭಿಷೇಕದ ಧಾರೆಯೆನಿಸಿ, ಮೋಡಗಳ ಗುಡುಗಿನ ಧ್ವನಿಯೆ ಮಂಗಳವಾದ್ಯ ಧ್ವನಿಯಾಗಲು (ಮಳೆಗಾಲದಲ್ಲಿ) ಮುನೀಂದ್ರನು ಬೇರುಬಿಟ್ಟ ಬೀಳಲಂತೆ ಮರದ ಕೆಳಗಿದ್ದನು. ೧೫. ಅಸಂಖ್ಯವಾದ ಹಿಮಕಿರಣಗಳು ಮೈಯನ್ನೆಲ್ಲ ಮುಸುಕಿಕೊಂಡು ಬೆಳ್ಳಗಾಗಿರಲು, ಈ ಧೀರನು ಮನ್ಮಥನೊಡನೆ ಯುದ್ಧ ಮಾಡುವುದಕ್ಕಾಗಿ ವಜ್ರದ ಕವಚವನ್ನು ತೊಟ್ಟುಕೊಂಡಿರುವನೊ ಏನೊ ಎಂಬಂತೆ ತೋರುತ್ತ ನೀರಿನ

ಮತ್ತಂ ಪ್ರಾಯಶ್ಚಿತ್ತವಿನಯವಯ್ಯಾವೃತ್ಯಸ್ವಾಧ್ಯಾಯಧ್ಯಾನವ್ಯುತ್ಸರ್ಗಮೆಂಬಾಱುಮಾಭ್ಯಂತರತಪದೊಳಂ ನೆಱಿಸಿದು

ಆ ದ್ವಾದಶತಪಮಂ ತಳೆ ।
ದಾದ್ವಾವಿಂಶತಿಪರೀಷಹಂಗಳುಮಂ ಗೆ ॥
ಲ್ದದ್ವೈತಂ ಮುನಿಮುಖ್ಯಂ ।
ಸ್ಯಾದ್ವಾದಮತಾದ್ವಿತೀಯನೆನೆ ಪೆಸರ್ವೆತ್ತಂ ॥ ೧೬

ಗಿಡಿಗಿಡಿಜಂತ್ರಮಾಯ್ತೊಡಲೊಡಲ್ವಿಡಿದಿರ್ದಖಿಳೇಂದ್ರಿಯಂಗಳುಂ ।
ಮಿಡುಕದೆ ಪೋದುವಂತವಱ ಪೋಗಿನೊಳಾಯ್ತು ಮನಕ್ಕೆ ಸೌಸ್ಥ್ಯಮಾ ॥
ಗಡಣಿಪ ಸೌಸ್ಥ್ಯದಿಂದೆ ನೆಲಸಿತ್ತು ಶುಭಾನ್ವಿತಮಪ್ಪ ಬೋಧಮಂ ।
ತೊಡರಿಪ ಬೋಧದೊಂದೆಸಕದಿಂ ಪಱೆಪಟ್ಟುವು ಪಾಪಪಾಂಶುಗಳ್ ॥ ೧೭

ಅನಂತರಮೇಕವಿಹಾರಿಯಾಗಿ ಮತ್ತೆ ಮೂಳೋತ್ತರಗುಣಂಗಳೊಳುತ್ತರೋತ್ತರಂ ನೆಗೞೆ

ಆ ಮುನಿಪನೆಂಬ ರೋಹಣ ।
ಭೂಮೀಧ್ರದೊಳೆಯ್ದೆ ಸಪ್ತವಿಧಸಾಮರ್ಥ್ಯೋ ॥
ದ್ದಾಮಪ್ರಸಿದ್ಧ ಋದ್ಧಿ ।
ಸ್ತೋಮಂ ಪುಟ್ಟಿದುದನರ್ಘ್ಯಮಣಿನಿಕರದವೋಲ್ ॥ ೧೮

ಬಿಟ್ಟು ಕಳೆದೆಳೆಯನಿನ್ನಾಂ ।
ಮುಟ್ಟುವುದನುಚಿತಮಿದೆಂಬ ತೆಱದಿಂದೆ ಮುಗಿ ॥
ಲ್ವಟ್ಟೆಯೊಳೆ ಚೈತ್ಯಯಾತ್ರೆಗೆ ।
ಪುಟ್ಟಿದ ಚಾರಣಗುಣಪ್ರಭಾವದೆ ನಡೆದಂ ॥ ೧೯

ಪ್ರವಾಹದಲ್ಲಿ ನಿಂತಿದ್ದನು. ವ॥ ಬಳಿಕ ಪ್ರಾಯಶ್ಚಿತ್ತ, ವಿನಯ, ವಯ್ಯಾವೃತ್ಯ, ಸ್ವಾಧ್ಯಾಯ, ಧ್ಯಾನ, ಮತ್ತು ವ್ಯುತ್ಸರ್ಗವೆಂಬ ಆರು ಅಭ್ಯಂತರ ತಪಗಳನ್ನೂ ನೆರವೇರಿಸಿದನು. ೧೬. ಪ್ರಸಿದ್ಧವಾದ ಹನ್ನೆರಡು ತಪಗಳನ್ನು ಆಚರಿಸಿ, ಇಪ್ಪತ್ತೆರಡು ಪರೀಷಹಗಳನ್ನು ಗೆದ್ದು, ಅದ್ವೈತನಾದ ಆ ಯೋಗೀಂದ್ರನು ಸ್ಯಾದ್ವಾದ ಮತದಲ್ಲಿ ಸರ್ವಶ್ರೇಷ್ಠನೆಂದು ಹೆಸರಾದನು. ೧೭. ದೇಹವು ಒಳಭಾಗವೆಲ್ಲ ಕಳಚಿದ ಯಂತ್ರದಂತೆ ಬರಿ ಎಲವು ತೊಗಲುಗಳ ಗೂಡಾಯಿತು; ದೇಹಾವಲಂಬಿಗಳಾದ ಇಂದ್ರಿಯಾಪೇಕ್ಷೆಗಳು ಮಿಸುಕದೆ ಹೊರಟು ಹೋದುವು; ಅವು ಹೋದುದರಿಂದ ಮನಕ್ಕೆ ನೆಮ್ಮದಿಯಾಯಿತು; ಆ ನೆಮ್ಮದಿಯಿಂದ ಶುಭವನ್ನೊಳಗೊಂಡ ಜ್ಞಾನೋದಯವಾಯಿತು; ಆ ಜ್ಞಾನ ಪ್ರಭಾವದಿಂದ ಪಾಪಶೇಷಗಳು ನಾಶವಾದುವು. ವ॥ ಬಳಿಕ ಏಕವಿಹಾರಿಯಾಗಿ ಮತ್ತೆ ಮೂಲೋತ್ತರಗುಣಗಳಲ್ಲಿ ಅಧಿಕಾಧಿಕವಾಗಿ ಅಭಿವೃದ್ಧಿ ಪಡೆಯಲಾಗಿ– ೧೮. ಆ ಮುನೀಶ್ವರನೆಂಬ ರೋಹಣಗಿರಿಯಲ್ಲಿ ಏಳು ಬಗೆಯಾದ ಪ್ರಸಿದ್ಧ ಸಾಮರ್ಥ್ಯವುಳ್ಳ

ಅದಲ್ಲದೆಯುಂ

ಒಱಲೆ ತಗುಳ್ದು ಪುತ್ತಿಡುವುದೆಯ್ದೆ ಮೃಗಾವಳಿ ಕೋಡ ತೀಂತೆಗೀ ।
ಡಿಱಿವುದು ಪಕ್ಕಿ ಗೂಡಿಡುವುದಾವರಿಸಿರ್ದ ಲತೋತ್ಕರಂ ಪಗಂ ॥
ಡಿಱಿವುದು ನಿಂದು ಪಾವನತಪೋವನದೊಳ್ ಪ್ರತಿಮಾನಿಯೋಗದೊಳ್ ।
ನೆಱೆದಮಳಾಂತರಂಗನೆನಿಸಿರ್ದ ಮುನೀಶನ ನಿಶ್ಚಳಾಂಗದೊಳ್ ॥ ೨೦

ಸುತ್ತುವರಿವಹಿಯನಳಿವುದು ।
ಸುತ್ತೀಡಿಱಿವೆರಲೆಗೋಡಿನಿಂ ಬಿಡುವುದು ಮೆ ॥
ಯ್ವತ್ತಿದ ಲತಾಳಿ ಮುನಿಪನ ।
ಚಿತ್ತದೊಳಿಲ್ಲದ ತೊಡರ್ಪು ಮೆಯ್ಗಾದಪುದೇ ॥ ೨೧

ಅನಂತರಂ ಕೇವಳಜ್ಞಾನೋಪಲಕ್ಷಿತಜೀವದ್ರವ್ಯಸಹಕಾರಿಕಾರಣಬನ್ಧಪ್ರಾರಂಭಮುಂ ಪಾಕಶಾಸನಾಸನಕಂಪಸಂಪಾದಕಮುಂ ತ್ರಿಭುವನಕ್ಷೋಭಕರಣಸಮರ್ಥಮುಂ ತೀರ್ಥಕರನಾಮಕರ್ಮಕರಣಕಾರಣಮುಮಪ್ಪ

ಪದಿನಾಱುಂ ಭಾವನೆಯಂ ।
ಸದಮಳಭಾವಂ ಸಮಂತು ಭಾವಿಸಲಾದಂ ॥
ಪದೆದಂ ಪುಣ್ಯಮಗಣ್ಯಮ ।
ದಿದಿರ್ವರಲಿರ್ದುದು ಮನಕ್ಕೆ ಮಾಡದೆ ಪದೆಪಂ ॥ ೨೨

ಋದ್ಧಿಗಳೆಂಬ ಅಮೂಲ್ಯ ರತ್ನಗಳು ಹುಟ್ಟಿದವು. ೧೯. ನಾನು ಬೇಡವೆಂದು ತೊರೆದ ಭೂಮಿಯನ್ನು ಮತ್ತೆ ಮುಟ್ಟುವುದು ಯೋಗ್ಯವಲ್ಲವೆಂದುಕೊಂಡನೊ ಏನೊ ಎಂಬಂತೆ ಆತನು ಚಾರಣಗುಣಪ್ರಭಾವದಿಂದ (ಆಕಾಶಮಾರ್ಗವಾಗಿಯೆ) ಜಿನಗೃಹಯಾತ್ರೆಗೆ ನಡೆದನು. ಅದಲ್ಲದೆ- ೨೦. ಪವಿತ್ರವಾದ ತಪೋವನದಲ್ಲಿ ಆ ಮುನೀಶನು ಪ್ರತಿಮಾಯೋಗದಲ್ಲಿ ನಿಶ್ಚಲನಾಗಿ ನಿಂತು ಶುದ್ಧಾಂತರಂಗನಾಗಿರುವಾಗ, ಅವನ ಮೈಯಲ್ಲೆಲ್ಲ ಗೆದ್ದಲು ಕಟ್ಟಿ ಹುತ್ತೇಳುವುದು; ಜಿಂಕೆಗಳು ಬಂದು ತಮ್ಮ ಕೋಡುಗಳ ತೀಟೆ ಕಳೆಯಲು ಬಂದು ತಿವಿದಾಡುವುವು; ಹಕ್ಕಿಗಳು ಗೂಡಿಡುವುವು; ಬಳ್ಳಿಗಳು ದಟ್ಟವಾಗಿ ಹಬ್ಬಿ ಸುತ್ತಿಕೊಳ್ಳುವುವು; ೨೧. ಆ ಮುನಿಪನ ಮೈಮೇಲೆ ಬೆಳೆದ ಬಳ್ಳಿಗಳು ಸುತ್ತುವರಿವ ಹಾವುಗಳಿಂದ ತೊಡಕಿಕೊಳ್ಳುವುವು; ಜಿಂಕೆಗಳ ಕೋಡಿರಿತದಿಂದ ಮತ್ತೆ ಬಿಡಿಸಿಕೊಂಡು ಹರವಾಗುವುವು. ಮುನೀಂದ್ರನಿಗೆ ಮನಸ್ಸಿನಲ್ಲಿ ಇಲ್ಲದ ತೊಡಕು ಮೈಯಲ್ಲಾಗುವುದೆ? ವ॥ ಬಳಿಕ ಕೇವಲಜ್ಞಾನ ವಿಶಿಷ್ಟವಾದ ಜೀವದ್ರವ್ಯ ಸಹಕಾರಿ ಕಾರಣಬಂಧವನ್ನುಂಟು ಮಾಡುವ ಇಂದ್ರನಿಗೆ ಆಸನಕಂಪವೊದಗಿಸುವ, ಮೂರು ಲೋಕಗಳನ್ನು ಕ್ಷೋಭೆಗೊಳಿಸುವ ಸಾಮರ್ಥ್ಯವುಳ್ಳ ಹಾಗೂ ತೀರ್ಥಂಕರರ ನಾಮಕರ್ಮಕ್ಕೆ ಕಾರಣವೆನಿಸಿದ, ೨೨. ಹದಿನಾರು ಭಾವನೆಗಳನ್ನು ಪರಿಶುದ್ಧವಾದ ಮನದಿಂದ ಆತನು ಭಾವಿಸಲಾಗಿ ಅಗಣ್ಯವಾದ ಪುಣ್ಯವು ಅವನಿಗೆ ಒದಗಿ, ಮನಕ್ಕೆ ಸಂತೋಷವನ್ನುಂಟುಮಾಡಿತು.

ಅದೆಂತೆಂದೊಡೆ-ಶಂಕಾದಿಮಳವಿಹೀನಮಪ್ಪ ಸಮ್ಯಗ್ದರ್ಶನಸಂಶುದ್ಧಿಯುಂ, ಗುರುಸದ್ಧರ್ಮವೃದ್ಧಸಾಧುಶ್ರುತಪ್ರೀತಿಸ್ವಭಾಮಪ್ಪ ವಿನಯಮುಂ, ಅಹಿಂಸಾದಿಬ್ರತಂಗಳೊಳಂ ತದಂಗಶೀಲಂಗಳೊಳಂ ಕ್ರೋಧಸಂಜ್ವಲನಾದ್ಯತಿಚಾರವಿರಹಿತಮಪ್ಪ ಶೀಲಬ್ರತಾನತಿಚಾರಮುಂ, ನಯಪ್ರಮಾಣನಿಕ್ಷೇಪಲಕ್ಷಿತಶಾಸ್ತ್ರಾಧ್ಯಯನಲಕ್ಷಣಮಪ್ಪ ಜ್ಞಾನೋಪಯೋಗಮುಂ, ಘೋರಸಂಸಾರದುಃಖಭೀರುತ್ವಪ್ರಕೃತಿಯಪ್ಪ ಸಂವೇಗಮುಂ, ಅಭಯದಾನಾದಿಗಳೊಳ್ ಶಕ್ತ್ಯನುರೂಪತ್ಯಾಗಮುಮಗೂಢಸಾಮರ್ಥ್ಯಶರೀರಕ್ಲೇಶಲಕ್ಷಣಮುಮಪ್ಪ ಶಕ್ತ್ಯನುರೂಪತಪಮುಂ, ಸಮುಪಾತ್ತಸತ್ತಪೋವಿಘ್ನಸಂರೋಧಿಯಪ್ಪ ಸಮಾಧಿಯುಂ, ಭವ್ಯಜೀವದುಃಖಸಂಯೋಗ ಸಂಬೋಧನಾವ್ಯಾಪೃತಿಯುಪ್ಪ ವಯ್ಯಾಪೃತ್ಯಮುಂ, ಅರ್ಹದ್ಭಕ್ತ್ಯಾಚಾರ್ಯ ಭಕ್ತಿಬಹುಶ್ರುತಭಕ್ತಿಶ್ರುತಭಕ್ತಿಯೆಂಬ ಚತುರ್ಭಕ್ತಿಯುಂ, ಷಡ್ವಿಧಾವಶ್ಯಕಕ್ರಿಯಾಪರಿಪಾಳಮಪ್ಪಾವಶ್ಯಮುಂ, ತಪೋಧನಗೃಹಸ್ಥರತ್ನತ್ರಯಂಗಳಂ ಪ್ರಕಾಶಂಮಾಟ್ಪಿ ರತ್ನತ್ರಯಂಗಳುಂ, ಸದ್ಧರ್ಮಪ್ರಸಿದ್ಧ ಪ್ರಭಾವಕಮಪ್ಪ ಮಾರ್ಗಪ್ರಭಾವನೆಯುಂ, ಸದ್ದರ್ಮಸ್ನೇಹಲಕ್ಷಣೋಪೇತಮುಮಪ್ಪ ದರ್ಶನವತ್ಸಳತ್ವಮುಮೆಂಬೀಷೋಡಶಭಾವನೆಗಳಂ ಸಮುತ್ತುಂಗತೀರ್ಥಕೃತ್ಸುಕೃತಪ್ರಾಸಾದರೋಹಣಸೋಪಾನಸಮಾನಂಗಳನುಕ್ರಮದಿಂ ಭಾವಿಸುತ್ತುಮಿರ್ದು

ಉಗ್ರತಪಸ್ಸಂಶೋಷಿತ ।
ವಿಗ್ರಹನುಜ್ಝಿತಮದಗ್ರಹಂ ನಿಜಸತ್ವೈ ॥

ವ॥ ಅದು ಹೇಗೆಂದರೆ- ಸಂಶಯುವೆ ಮೊದಲಾದ ದೋಷಗಳಿಲ್ಲದ ಸಮ್ಯಗ್ದರ್ಶನ ಶುದ್ಧಿ ; ಗುರುಗಳಲ್ಲಿಯೂ, ಸದ್ಧರ್ಮದಲ್ಲಿ ವೃದ್ಧ ಸಾಧುಗಳಲ್ಲಿ ಹಾಗು ಶ್ರುತದಲ್ಲಿ ಪ್ರೀತಿಯಿರುವಂತೆ ಮಾಡುವ ವಿನಯ; ಹಿಂಸೆಯೆ ಮೊದಲಾದ ವ್ರತಗಳಲ್ಲಿ, ಅವುಗಳ ಅಂಗವಾದ ಶೀಲಗಳಲ್ಲಿ ಕ್ರೋಧ-ಸಂಜ್ವಲನ ಮೊದಲಾದ ಅತಿಚಾರಗಳಿಲ್ಲದ ಶೀಲ ವ್ರತಾರ; ನಯ, ಪ್ರಮಾಣ, ನಿಕ್ಷೇಪಗಳಿಂದ ಕೂಡಿದ ಶಾಸ್ತ್ರಾಧ್ಯಯನ ಲಕ್ಷಣವಾದ ಜ್ಞಾನೋಪಯೋಗ; ಘೋರವಾದ ಸಂಸಾರದುಃಖಕ್ಕೆ ಅಂಜುವುದೆ ಸ್ವಭಾವವಾದ ವೈರಾಗ್ಯ; ಅಭಯುವೆ ಮೊದಲಾದ ದಾನಗಳಲ್ಲಿ ಶಕ್ತ್ಯಾನುಸಾರವಾದ ತ್ಯಾಗ; ಗೂಢವಲ್ಲದ ಶರೀರ ಸಾಮರ್ಥ್ಯಕ್ಕನುಸಾರವಾಗಿ ಕಾಯುಕ್ಲೇಶವನ್ನೊಳಗೊಂಡ ಶಕ್ತ್ಯನುರೂಪ ತಪಸ್ಸು; ತಪೋವಿಘ್ನ ನಿರೋಧಕವಾದ ಸಮಾಧಿ; ಭವ್ಯಜೀವಗಳ ದುಃಖಯೋಗ ಸಂಬೋಧನೆಯಿಂದ ಕೂಡಿದ ವೈಯ್ಯಾಪೃತ್ಯ; ಅರ್ಹಂತಭಕ್ತಿ, ಆಚಾರ್ಯಭಕ್ತಿ, ಬಹುಶ್ರುತಭಕ್ತಿ ಮತ್ತು ಶ್ರುತಭಕ್ತಿಯೆಂಬ ನಾಲ್ಕು ಬಗೆಯ ಭಕ್ತಿ; ಷಡಾವಶ್ಯಕಕ್ರಿಯಾಪಾಲನೆಯುಳ್ಳ ಆವಶ್ಯ; ತಪಸ್ವಿಗಳನ್ನು, ಗೃಹಸ್ಥರನ್ನೂ ರತ್ನಪ್ರಾಯವಾಗಿ ಬೆಳಗುವ ರತ್ನತ್ರಯುಗಳು; ಸದ್ಧರ್ಮ ಪ್ರಭಾವವನ್ನುಂಟುಮಾಡುವ ಮಾರ್ಗಪ್ರಭಾವನೆ ಸದ್ಧರ್ಮಸ್ನೇಹ ಲಕ್ಷಣದಿಂದೊಡಗೂಡಿದ ದರ್ಶನವತ್ಸಲತೆ- ಹೀಗೆ ಈ ಹದಿನಾರು ಭಾವನೆಗಳೆಂಬುವನ್ನು ತೀರ್ಥಂಕರ ಪುಣ್ಯಪ್ರಾಸಾದಕ್ಕೇರುವ ಸೋಪಾನಗಳಿಗೆ ಸಮಾನವೆಂದು ಭಾವಿಸುತ್ತ ಇದ್ದನು. ೨೩. ಘೋರವಾದ ತಪಸ್ಸಿನಿಂದ ದೇಹವನ್ನು ಕೊರಗಿಸಿ,

ಕಾಗ್ರಮನಂ ಮಣಿಕೂಟನ ।
ಗಾಗ್ರಮನವ್ಯಗ್ರಜೀವಿತಾಂತಂ ಸಾರ್ದಂ ॥ ೨೩

ಅಂತು ಸಾರ್ದು ತದತಿವಿಸ್ತೀರ್ಣಪ್ರಾಂಶುಕಪ್ರಸ್ತರೈಕದೇಶದೊಳ್ ಚತುರ್ವಿಧಾರಾಧನಾಪೂರ್ವಕಂ ವಿಹಿತಪ್ರಾಯೋಪಗಮನವಿಧಾನನಾಗಿ

ಯತಿಪಂ ಪರ್ಯಾಯದಿಂದಧ್ರುವಮಶರಣಮೇಕತ್ವವನ್ಯತ್ವಮಾಸಂ ।
ಸೃತಿಲೋಕಂ ಮತ್ತಮಾಅಂದದಿನಶುಚಿತೆ ಸಂದಾಸ್ರವಂ ಸಂವರಾಖ್ಯಾ ॥
ನ್ವಿತಮಂತಾನಿರ್ಜರಾಂಕಂ ಪ್ರವಿಮಳತರಧರ್ಮಂ ಲಸದ್ಬೋಧೆಯೆಂಬೀ ।
ನುತಿವೆತ್ತೀರಾಱುಮಂ ಭಾವಿಸಿದನೆಸೆವನುಪ್ರೇಕ್ಷೆಯಂ ಶಿಕ್ಷಿತಾಕ್ಷಂ ॥ ೨೪

ಅಂತು ಭಾವಿಸಿ,

ಸರ್ವಾರ್ಥಸಿದ್ಧಿಗಿದು ದಲ ।
ಗುರ್ವಿನ ನಿಶ್ರೇಣಿಯೆಂಬ ತೆಱದೇಱಿದನಂ ॥
ದುರ್ವುಗಿಡೆ ಮೋಹನೀಯಂ ।
ನಿರ್ವಂದದೆ ಬಟಿಯಮುಪಶಮಶ್ರೇಣಿಯುಮಂ ॥ ೨೫

ಮತ್ತಂ,

ತಾನೆಯ್ದಿ ಮೊದಲ ಶುಕ್ಲ ।
ಧ್ಯಾನಮನೊಳಕೆಯ್ದು ಬಟಿಯಮುಪಶಾಂತಗುಣ ॥
ಸ್ಥಾನದೊಳೆ ನಿಂದು ಸುಕೃತನಿ ।
ಧಾನಮನಾಯೋಗಿನಾಯಕಂ ಸಾಧಿಸಿದಂ ॥ ೨೬

ಮದರಹಿತನಾಗಿ, ಆತ್ಮಸತ್ತ್ವದಲ್ಲಿಯೆ ಮನವಿಟ್ಟು ಮಣಿಕೂಟ ಪರ್ವತದ ಶಿಖರವನ್ನು ಏರಿದನು. ವ॥ ಹಾಗೆ ಏರಿಹೋಗಿ ಅದರ ವಿಸ್ತೀರ್ಣವಾದ ಪ್ರದೇಶದಲ್ಲಿ ಒಂದೆಡೆಗೆ ನಾಲ್ಕು ಬಗೆಯ ಆರಾಧನಾವಿಧಿ ಪೂರ್ವಕವಾಗಿ ಪ್ರಾಯೋಪಗಮನ ವಿಧಿಯನ್ನು ಕೈಕೊಂಡು– ೨೪. ಆಮೇಲೆ ಕ್ರಮವಾಗಿ ಅಧ್ರುವ, ಅಶರಣ, ಏಕತ್ವ, ಅನ್ಯತ್ವ, ಸಂಸಾರ, ಲೋಕ, ಅಶುಚಿತ್ವ, ಅಸ್ರವ, ಸಂವರ, ನಿರ್ಜರೆ, ಶುದ್ಧಧರ್ಮ, ಮತ್ತು ಬೋಧೆ ಎಂಬ ಪ್ರಸಿದ್ಧವಾದ ಹನ್ನೆರಡು ಅನುಪ್ರೇಕ್ಷೆಗಳನ್ನು ಮುನಿಯು ಭಾವಿಸಿದನು. ಹಾಗೆ ಭಾವಿಸಿ– ೨೫. ಮೋಹನೀಯವನ್ನು ನಾಶಪಡಿಸಿ, ಸರ್ವಾರ್ಥಸಿದ್ಧಿಗೆ ಇದು ಶ್ರೇಷ್ಠವಾದ ನಿಚ್ಚಣಿಕೆಯೆಂಬಂತೆ ಉಪಶಮ ಶ್ರೇಣಿಯನ್ನು ನಿರಾಯಾಸವಾಗಿ ಏರಿದನು. ಮತ್ತು– ೨೬. ಮೊದಲನೆಯ ಶುಕ್ಲಧ್ಯಾನವನ್ನೊಳಗೊಂಡು ಬಳಿಕ ಉಪಶಾಂತ ಗುಣ ಸ್ಥಾನದಲ್ಲಿ ನಿಂತು ಆ ಯೋಗೀಂದ್ರನು ಪುಣ್ಯಕರವಾಗಿ ದೇಹತ್ಯಾಗವನ್ನು ಮಾಡಿದನು.

ಅಂತು ಪದ್ಮನಾಭಯತಿ ಅವತೀರ್ಣಶರೀರಭಾರನಾಗಿ

ಅಱುವತ್ತುಮೂಱುಪಟಳಂ ।
ನೆಱೆಕೆದೆಡೆಯಿಂದತ್ತಲೋಕಚೂಳಿಕೆಯಿಂದಂ ॥
ಪೆಱದೇಂ ಯೋಜನಮೀರಾ ।
ಱಱೆನತ್ತಿರ್ಪುದು ನಿರಾಕುಳಂ ವಿಗತಮಳಂ ॥ ೨೭

ಪೆಸರಿಂದಂತದು ಸರ್ವಾ ।
ರ್ಥಸಿದ್ಧಿ ಪರಿಣಾಹದಿಂದೆ ಜಂಬೂದ್ವೀಪ ॥
ಕ್ಕೆ ಸಮಂ ಸುಖದಧಿಕಂ ಭಾ ।
ವಿಸಿ ತಳೆದುದು ಮತ್ತನುತ್ತರಾಭ್ಯಂತರಮಂ ॥ ೨೮

ಅದು ಮುಕ್ತಿಪುರಕೆ ಗೋಪುರ ।
ಮದು ನಾಕಾನೋಕಹಕ್ಕೆ ಫಳಮಂಜರಿ ಮ ॥
ತ್ತದು ಲೋಕಾಕೃತಿಲಕ್ಷ್ಮಿಗೆ ।
ವದನಮದಹಮಿಂದ್ರರತ್ನನಿಕರಕರಂಡಂ ॥ ೨೯

ಮತ್ತಮದಱ ನಾಲ್ಕುಂ ದೆಸೆಯೊಳಂ ಪೂರ್ವಾದಿಪರ್ಯಾಯದಿಂದಂ

ಅವಿರತಮೆನೆ ವಿಜಯಂ ಮ ।
ತ್ತೆ ವೈಜಯಂತಂ ಜಯಂತಮಪರಾಜಿತಮೆಂ ॥
ಬಿವು ನಾಲ್ಕು ವಿಮಾನಂಗಳ್ ।
ಪ್ರವಿರಾಜಿಪುವಿಂದ್ರನೀಳಧರಣಿತಳಂಗಳ್ ॥ ೩೦

ವ॥ ಹಾಗೆ ಪದ್ಮನಾಭ ಯತಿಯು ದೇಹಭಾರವನ್ನು ಇಳಿಸಿಕೊಂಡನು– ೨೭. ಅರುವತ್ತು ಮೂರು ಪಟಳಗಳನ್ನೊಡಗೊಂಡು ಲೋಕಚೂಳಿಕೆಯಿಂದ ಹನ್ನೆರಡು ಯೋಜನೆಗಳ ಆಚೆಗೆ ನಿರ್ದೋಷವಾದ, ನಿರ್ಬಾಧವಾದ ಒಂದು ಎಡೆಯಿರುವುದು. ೨೮. ಅದರ ಹೆಸರು ಸರ್ವಾರ್ಥಸಿದ್ಧಿ; ವಿಸ್ತಾರದಲ್ಲಿ ಜಂಬೂದ್ವೀಪಕ್ಕೆ ಸಮನಾದುದು. ಅತ್ಯಂತ ಸುಖಮಯವಾದುದು. ಅದು ಐದು ಅನುತ್ತರಗಳಲ್ಲಿ ಮಧ್ಯವರ್ತಿಯಾಗಿದೆ. ೨೯. ಅದು ಮುಕ್ತಿನಗರಕ್ಕೆ ಗೋಪುರ; ಸ್ವರ್ಗವೃಕ್ಷದ ಫಲಮಂಜರಿ; ಲೋಕಾಕಾರ ಲಕ್ಷ್ಮಿಗೆ ಮುಖ; ಅಹಮಿಂದ್ರರೆಂಬ ರತ್ನಗಳ ಕರಂಡ. ವ॥ ಅದರ ನಾಲ್ಕೂ ದಿಕ್ಕುಗಳಲ್ಲಿ ಪೂರ್ವದಿಂದ ಕ್ರಮವಾಗಿ– ೩೦. ವಿಜಯ, ವೈಜಯಂತ, ಜಯಂತ ಮತ್ತು ಅಪರಾಜಿತ

ಅವು ಮಣಿತೋರಣಘೃಣಿಪ ॥
ಲ್ಲವಿತಂಗಳವಿಂದ್ರರತ್ನಕೂಟವಿಟಂಕೋ ॥
ದ್ಭವರುಚಿರೇಂದ್ರಧನುಸ್ಸಂಗತ ।
ವವಿರಳಕುಸುಮೋಪಹಾರತಾರಕಿತಂಗಳ್ ॥ ೩೧

ನಸುಗಿಜಿದಯ್ದುಮನುತ್ತರೆ ।
ಯ ಸುಖಂ ಮೋಕ್ಷದ ಸುಖಕ್ಕೆ ಪರಿಕಿಪೊಡಮರೇಂ ॥
ದ್ರ ಸುಖಾದಿಗಳಿಂ ಲೋಕದೊ ।
ಳಸದಳಮಧಿಕಂ ಗಡಿನ್ನದೇವಣ್ಣಿಪುದೋ ॥ ೩೨

ಮತ್ತಮದಱೊಳ್

ಮಹಿಮೆ ಕಿಜಿದಕ್ಕೆ ಪಿರಿದ ।
ಕ್ಕಹಮಿಂದ್ರರ್ ಸಲೆ ಜನೇಂದ್ರಕಲ್ಯಾಣಮಹಾ ।
ಮಹಯಾತ್ರೆಗೆ ಪೋಗರ್ ವಿನ ।
ತಹಟನ್ಮಣಿಮಕುಟರಪ್ಪರಿರ್ದಿರ್ದೆಡೆಯೊಳ್ ॥ ೩೩

ಎನಿಪನುತ್ತರೆಗಳೊಳ್ ವೈಜಯಂತವಿಮಾನದುಪಪಾತನಿಕೇತನದಮಳ್ವಾಸಿನೆಡೆಯಿನಿಂಗಡಲ ತೆರೆವೊರೆಯಿನೊಗೆವೆಳದಿಂಗಳೆಂತೆ ತಳತಳಿಸಿ ಪುಟ್ಟಿ ಸಮಚತುರಪ್ರಸ್ಥಾನನುಂ, ಪರಿಪೂರ್ಣಯೌವನ ವಿಳಾಸನುಂ, ಶುಕ್ಲಲೇಶ್ಯಾಪರಿಣಾಮನುಂ, ಅಣಿಮಾದ್ಯಷ್ಟಗುಣಮಣಿನಿಧಾನನುಂ, ಲೋಕನಾಡಿಕಾಭ್ಯಂ

ವೆಂಬ ನಾಲ್ಕು ವಿಮಾನಗಳು ಇಂಧ್ರನೀಲದ ಭೂಮಿಗಳಿಂದ ಶೋಭಿಸುವುವು. ೩೧. ಅವು ರತ್ನತೋರಣಗಳ ಪ್ರಭೆಯಿಂದ ಚಿಗುರೊಡೆದಂತೆ ತೋರುವುವು; ಇಂದ್ರರತ್ನಶಿಖರಗಳಿಂದ ಹೊಮ್ಮುವ ವರ್ಣಕಾಂತಿಯು ಇಂದ್ರ ಧನುಗಳನ್ನುಂಟು ಮಾಡುವುದು; ನಿಬಿಡವಾದ ಹೂಬಲಿಗಳಿಂದ ನಕ್ಷತ್ರಮಯವಾದಂತೆ ಶೋಭಿಸು ವುವು. ೩೨. ವಿಚಾರಿಸಿ ನೋಡಿದರೆ ಐದೂ ಅನುತ್ತರೆಗಳ ಸುಖ ಮೋಕ್ಷಸುಖಕ್ಕೆ ಕಿಂಚಿನ್ಮಾತ್ರ ಕಡಮೆಯುದು; ದೇವೇಂದ್ರರ ಸುಖಾದಿಗಳಿಗಿಂತ ಅತ್ಯಂತ ಅಧಿಕ ವಾದುದು. ಎಂದ ಮೇಲೆ ಅದನ್ನು ಏನೆಂದು ಬಣ್ಣಿಸುವುದು? ಮತ್ತು ಅದರಲ್ಲಿ– ೩೩. ಇಲ್ಲಿಯ ಅಹಮಿಂದ್ರರ ಮಹಿಮೆ ಕಿರಿದಾಗಿರಲಿ, ಹಿರಿದಾಗಿರಲಿ– ಏನೇ ಇದ್ದರೂ ಜಿನೇಂದ್ರನ ಕಲ್ಯಾಣ ಮಹೋತ್ಸವಗಳಿಗೆ ಅವರು ಹೋಗುವುದಿಲ್ಲ; ಇದ್ದಲ್ಲಿಯೆ ತಲೆಬಾಗಿ ಗೌರವವನ್ನು ಅರ್ಪಿಸುತ್ತಾರೆ. ವ॥ ಹೀಗಿರುವ ಅನುತ್ತರೆಗಳಲ್ಲಿಯ ವೈಜಯಂತವೆಂಬ ವಿಮಾನದ ಉಪಪಾತಗೃಹದ ಜೊತೆ ಹಾಸಿಗೆಯ ಮೇಲೆ– ಕ್ಷೀರ ಸಮುದ್ರದ ತೆರೆಗಳ ಪಕ್ಕದಲ್ಲಿ ಮೂಡುವ ಬಾಲ ಚಂದ್ರನಂತೆ ಪ್ರಕಾಶಮಯನಾಗಿ, ಪದ್ಮನಾಭ ಮುನೀಂದ್ರನು ಹುಟ್ಟಿದನು; ಹುಟ್ಟಿನಿಂದಲೆ ಆತನು ಸಮಚತುರ ಪ್ರಸ್ಥಾನನೂ, ಸಂಪೂರ್ಣ ಯೌವನ ಶೋಭೆಯುಳ್ಳವನೂ,

ತರಗತಾವಧಿಜ್ಞಾನಭಾನೂದಯಾಚಳನುಮಾತ್ಮಾವಧಿಜ್ಞಾನವರ್ತನಾಕ್ಷೇತ್ರಪೂರಣಸಮರ್ಥಮೂಳಶರೀರ ವಿಕ್ರಿಯಾಸಮಗ್ರನುಮಾಗಿ

ಕಡೆದು ಕಳಂಕಮಿಲ್ಲದ ಸುಧಾಕರಮಂಡಳದಿಂದೆ ಮಾಡಿದಂ ।
ತೊಡಲತಿನಿರ್ಮಳಂ ಪವಣೊಳೊರ್ಮೊಟಿನೊರ್ಮೆಯುಮಂತೆಸಾಜದೊ ॥
ಳ್ತೊಡವಿನ ಮಾಸದಂಬರದ ಕಂದದ ಮಾಲೆಯ ಲೀಲೆ ಚೆಲ್ವನಿ ।
ರ್ಮಡಿಸೆ ಬೆಡಂಗನಾಳ್ದುದಪರೋ ಮನಭಾಮೆಯ ಧಾತುವಾತನಾ ॥ ೩೪

ಮೂವತ್ತು ಮೂಱು ಶರನಿಧಿ ।
ಜೀವನ ಪರಿಸಂಖ್ಯೆ ತತ್ಪ್ರಮಾಣ ಸಹಸ್ರಾ ॥
ಬ್ದಾವಧಿ ಸುಧಾಶನಸ್ಮರ ।
ಣಾವಸರಮನಿತ್ತೆ ಪಕ್ಷಮಾಗುಸಿರ್ವ ಪದಂ ॥ ೩೫

ಮಱುಮೆಯ್ಯೊಳತೀಂದ್ರಿಯಸುಖ ।
ದೆಱೆವಟ್ಟಾದಪ್ಪನೆಂಬುದರ್ಕಿದುವೆ ವಲಂ ॥
ಕುಱುಪೆಂಬ ತೆಱದಿನೆಸೆದುದು ।
ನೆಱೆದಹಮಿಂದ್ರಂಗೆ ನಿಷ್ಪ್ರವೀಭಾಗಸುಖಂ ॥ ೩೬

ರೂಪಾದಿಪಂಚವಿಷಯ ।
ಪ್ರಾಪಣದಿಂದಲ್ಲದಾಗದಖಿಳೇಂದ್ರಯಸೌ ॥
ಖ್ಯೋಪಚಯಮೆನೆ ಮನುಷ್ಯರೊ ।
ಳಾ ಪಂಚೇಂದ್ರಿಯಸುಖಂ ಪರಾಧೀನಮೆ ದಲ್ ॥ ೩೭

ಶುಕ್ಲಲೇಶ್ಯೆಯ ಪರಿಣಾಮ ಹೊಂದಿದವನೂ, ಅಣಿಮಾದಿ ಅಷ್ಟಸಿದ್ಧಿಗಳಿಂದ ಯುಕ್ತನಾದವನೂ, ಅವಧಿಜ್ಞಾನಿಯೂ, ಆತ್ಮಾವಧಿಜ್ಞಾನಕ್ಕೆ ಸಮರ್ಥವಾದ ಮೂಲಶರೀರವಿಕ್ರಿಯಾಸಂಪನ್ನನೂ ಆಗಿದ್ದನು. ೩೪. ಕಳಂಕವಿಲ್ಲದ ಚಂದ್ರಮಂಡಳವನ್ನೆ ಕಡೆದು ಮಾಡಿದಂತಹ ಪರಿಶುದ್ಧವಾದ ದೇಹ; ಅಳತೆ ಒಂದು ಮೊಳ; ಒಮ್ಮೆಯೂ ಕಾಂತಿಗುಂದದ ಆಭರಣ, ಮಾಸದ ವಸ್ತ್ರ, ಬಾಡದ ಮಾಲೆ- ಇವುಗಳ ಚೆಲುವಿನಿಂದ ಆತನ ಆಕೃತಿಯು ಇಮ್ಮಡಿಯಾದ ಬೆಡಗನ್ನು ಪಡೆಯಿತು. ೩೫. ಆತನ ಆಯುಷ್ಯ ಪ್ರಮಾಣ ಮೂವತ್ತುಮೂರು ಸಾಗರೋಪಮ; ಮೂವತ್ತುಮೂರು ಸಾವಿರ ವರ್ಷಕ್ಕೊಮ್ಮೆ ಅಮೃತಾನ್ನದ ಸ್ಮರಣೆ, ಹಾಗೂ ಮೂವತ್ತು ಮೂರು ಸಾವಿರ ಪಕ್ಷಕ್ಕೆ ಒಮ್ಮೆ ನಿಶ್ವಾಸ ಆತನಿಗೆ. ೩೬. ಮುಂದಿನ ಜನ್ಮದಲ್ಲಿ ಅತೀಂದ್ರಿಯ ಸುಖಕ್ಕೆ ಆಶ್ರಯವಾಗುವನೆಂಬುದರ ಪೂರ್ವ ಸೂಚನೆಯೊ ಏನೊ ಎಂಬಂತೆ ಆ ಅಹಮಿಂದ್ರನಿಗೆ ಸ್ತ್ರೀ ಸ್ಪರ್ಶವಿಲ್ಲದೆಯೆ ಮನ್ಮಥ ಸುಖ ಒದಗುವುದು. ೩೭. ರೂಪವೆ ಮೊದಲಾದ ಪಂಚವಿಷಯ ಪ್ರಾಪ್ತಿಯಿಲ್ಲದೆ ಎಲ್ಲ ಇಂದ್ರಿಯಗಳಿಗೆ ಸುಖ ಲಭಿಸುವಂತಿಲ್ಲ ಎಂದ ಮೇಲೆ ಮನುಷ್ಯರಿಗೆ

ಕುದಿದು ತನುಕ್ಲೇಶದಿನ ।
ಲ್ಲದೆ ಮನುಜರ್ಗಾಗದತನುಸೌಖ್ಯಂ ಮತ್ತಂ ॥
ತುದಿಯೊಳಗದಱಿಂ ರಸಸೌ ।
ಜದಿನಾಗದುದೆಲ್ಲಮಸುಖಮಲ್ಲದೆ ಪೆಱದೇಂ ॥ ३८

ಪೊಱಮಡದೆ ಗಜೇಂದ್ರಂ ನೀ ।
ರ್ಗೞಿಗೊಂಡಿರ್ಪಂತೆ ನಿಷ್ಪ್ರವೀಚಾರತೆಯಿಂ ॥
ನೆಱೆದ ಸುಖಾಂಬೋಧಿಯೊಳವ ।
ಚಱನುಟೆದವಗಾಹಮಿರ್ದನಿಂತಹಮಿಂದ್ರಂ ॥ ३೯

ಅಂತನುತ್ತರಮುಮುತ್ತರೋತ್ತರಮುಮಾಗನುತ್ತರೆಯೊಳಾತ್ಮಕೃತಸುಕೃತಕಲ್ಪಪಾದಪಫಲೋಪಮಾನಮಂ ನಿಷ್ಪ್ರವೀಚಾರಸುಖಮಂ ಪದ್ಮನಾಭಚರಾಹಮಿಂದ್ರನನುಭವಿಸುತ್ತುಮಿರ್ಪಿನಮಿತ್ತ ಜಂಬೂದ್ವೀಪದ ಭರತಕ್ಷೇತ್ರದೊಳ್

ಅವನೀವನಿತೆಗೆ ಮೊಗಮೆಂ ।
ಬವೊಲುದ್ಯದನೂನರಾಗಲೀಲಾಧರಮಾ ॥
ತ್ತವಿಲೋಚನವಿಳಸನಮೊ ।
ಪ್ಪುವುದಾದಂ ಪೂರ್ವವಿಷಯಮೆಂಬುದು ವಿಷಯಂ ॥ ४०

ಅದಱೊಳುದಾತ್ತರತ್ನತತಿ ಪುಟ್ಟಿದ ಬೆಟ್ಟು ಮದೇಭಮಾಳೆ ಪು ।
ಟ್ಟಿದ ಪೞು ಮುತ್ತು ಪುಟ್ಟಿದ ತರಂಗಿಣಿ ಚಂದನಭೂಜರಾಜಿ ಪು ॥

ಇಂದ್ರಿಯಸುಖವೆಂಬುದು ಪರಾಧೀನವೆ ಸರಿ. ३८. ದೇಹಶ್ರಮವಿಲ್ಲದೆ ಮನುಷ್ಯರಿಗೆ ಸಂಭೋಗಸುಖ ಸಾಧ್ಯವಿಲ್ಲ. ಮತ್ತು ಹಾಗೆ ಶ್ರಮದಿಂದ ಸುಖ ಪಡೆಯ ಹೊರಟರೂ ಕೊನೆಗೆ ಲಭಿಸುವುದು ಅಸುಖವಲ್ಲದೆ ಬೇರೇನೂ ಇಲ್ಲ. ३೯. ನಾಯಕಗಜವು ಹೊರಬೀಳದೆ ನೀರ ಮಡುವಿನಲ್ಲಿಯೆ (ಸುಖದಿಂದ) ಇರುವಂತೆ, ನಿಷ್ಪವೀಚಾರತೆಯಿಂದ ಒದಗಿದ ಸುಖಸಮುದ್ರದಲ್ಲಿ ಆ ಅಹಮಿಂದ್ರನು ಬೇಸರವಿಲ್ಲದೆ ಮುಳುಗಿದ್ದನು. ವ॥ ಹೀಗೆ ಶ್ರೇಷ್ಠವೂ, ಉತ್ತರೋತ್ತರವೂ ಆದ ನಿಷ್ಪವೀಚಾರ ಸುಖವನ್ನು, ಅನುತ್ತರೆಯಲ್ಲಿ ತನ್ನ ಪುಣ್ಯವೃಕ್ಷದ ಫಲದಂತೆ ಸೇವಿಸುತ್ತ ಹಿಂದಿನ ಭವದಲ್ಲಿ ಪದ್ಮನಾಭನಾಗಿದ್ದ ಅಹಮಿಂದ್ರನು ಇರುತ್ತಿದ್ದನು. ಇತ್ತ ಜಂಬೂದ್ವೀಪದ ಭರತಕ್ಷೇತ್ರದಲ್ಲಿ– ४०. ಭೂರಮಣಿಗೆ ಮುಖವೆಂಬಂತೆ ಅತ್ಯಂತ ಸುಖಮಯವೂ, ನಯನ ಮನೋಹರವೂ ಆದ ಪೂರ್ವವಿಷಯವೆಂಬ ರಾಜ್ಯವಿರುವುದು. ४೧. ಅದರಲ್ಲಿ ಉತ್ತಮವಾದ ರತ್ನಗಳು ಹುಟ್ಟಿದ ಬೆಟ್ಟವಾಗಲಿ, ಮದ್ದಾನೆಗಳಿಗೆ ಜನ್ಮವೀಯುದ ಕಾಡಾಗಲಿ, ಮುತ್ತು ಹುಟ್ಟಿದ ಹೊಳೆಗಳಾಗಲಿ, ಚಂದನದ ಮರಗಳು ಹುಟ್ಟಿದ ವನವಾಗಲಿ, ಕಮಲಗಳ ಸಮೂಹ

ಟ್ಟದ ಬನಮುತ್ಪಳಪ್ರತತಿ ಪುಟ್ಟದ ದೀರ್ಘಿಕೆ ಪದ್ಮಪಾಳಿ ಪು ।
ಟ್ಟದ ಬಯಲೆಯ್ದೆ ನುಣ್ಬಸಲೆ ಪುಟ್ಟದ ತಣ್ಪುಟಿಲಿಲ್ಲದೆಲ್ಲಿಯುಂ ॥ ೪೧

ಮತ್ತಂ

ಕಳಮಯವಾದಿಧಾನ್ಯಕುಳಮಂ ಹಳಿಕಾವಳಿಗಾವ ಕಾಲಮುಂ ।
ಬೆಳೆವುದು ಪಾಂಥಸಂತತಿಗೆ ಸಂತಸಮಂ ಪುಳಿನಪ್ರತಾನದಿಂ ॥
ಬಳೆವುದಧೀಶ್ವರಂಗೆ ಜರಗೆಂಬ ನೆವಂಬಿಡಿದೆಯ್ದೆ ಪೊನ್ನುಮಂ ।
ಬಳೆವುದು ತನ್ಮಹೀತಳಮಪಾರಸುಖಾವಹಭೋಗಭೂತಳಂ ॥ ೪೨

ಅದಲ್ಲದೆಯುಂ

ಬಿಸಘಾಸಾಸಕ್ತಹಂಸೀಕುಳವಳಯಿತತೀರಂ ಸರಂ ಬೀಜರಾಜೀ ।
ರಸಪಾನಾಧೀನಕೀರಾವಳಿಮಿಳತಫಲಂ ದಾಡಿಮಂ ಕೋರಕಾಗ್ರ ॥
ಗ್ರಸನೋತ್ಕಂಠಾನ್ಯಪುಷ್ಟೋತ್ಕರವೃತವಿಟಪಂ ಚೂತಮಾಮೋದಸೇವಾ ।
ವ್ಯಸಾನಾಳ್ಯೋಘಾತ್ತಪುಷ್ಪಂಲತೆಜನಪದದುದ್ಯಾನದೊಳ್ ಕುಂದವೆಂದುಂ ॥ ೪೩

ಮತ್ತಮಲ್ಲಿ

ಪೆರ್ವಣ್ಣೊತ್ತಿಂದೆ ಪುತ್ತಿಂಗಿಳಿಗಿದ ನೆಲದಿಂದುಣ್ಮೆ ತಣ್ಗಂಪಿನುರ್ವಿಂ ।
ನೇರ್ವಟ್ಟೊಳ್ವಕ್ಕೆ ಪುತ್ತೆರ್ದೊಗೆದು ಮುಸುಱೆ ಮೆಯ್ನೆಂಟು ಕಾಯ್ಕಾಯ್ತುದೆಂದೆಂ ॥

ವರಳದ ಸರೋವರವಾಗಲಿ, ನೆಲದಾವರೆಗಳು ಮೂಡದ ಬಯಲಾಗಲಿ, ನಯವಾದ ಹುಲ್ಲು ಮೈದಾನವಿಲ್ಲದ ತಂಪಾದ ತೀರ ಪ್ರದೇಶವಾಗಲಿ ಎಲ್ಲಿಯೂ ಇಲ್ಲ; ಮತ್ತು– ೪೨. ಆ ಭೂಮಿಯು ಬೇಸಾಯಗಾರರಿಗೆ ನೆಲ್ಲು ಗೋಧಿ ಮೊದಲಾದ ಧಾನ್ಯಗಳನ್ನು ಬೆಳೆದು ಕೊಡುವುದು; ಪ್ರವಾಸಿ ಜನಕ್ಕೆ ಎಲ್ಲಾ ಕಾಲಕ್ಕೂ ತಂಪಾದ ತೋಪುಗಳಿಂದ ಸಂತೋಷವನ್ನು ಈಯುವುದು; ನಾಡಿನ ಅಧಿಪತಿಗೆ ಜರಗೆಂಬ ನೆವದಿಂದ ಬಂಗಾರವನ್ನು ಬೆಳೆದು ಈಯುವುದು ಹೀಗೆ ಆ ಭೂಮಿ ಅಪರಿಮಿತವಾದ ಸುಖಭೋಗಗಳಿಂದ ಭೋಗಭೂಮಿಯೆ ಆಗಿತ್ತು. ಅದಲ್ಲದೆ– ೪೩. ತಾವರೆಯ ನಾಳಿಗಳನ್ನು ಸೇವಿಸುವುದರಲ್ಲಿ ಆಸಕ್ತವಾಗಿ ದಂಡೆಗುಂಟ ಕುಳಿತ ಹಂಸಪಕ್ಷಿಗಳಿಂದ ಶೋಭಿಸುವ ಕೊಳಗಳು : ಬೀಜಗಳನ್ನೂ ರಸವನ್ನೂ ಸವಿಯುತ್ತ ಹಣ್ಣುಗಳೊಡನೆ ಬೆರೆತ ಗಿಳಿಗಳಿಂದ ಕಂಗೊಳಿಸುವ ದಾಳಿಂಬದ ಮರಗಳು; ಕುಡಿಗೊನರಿನ ಉತ್ಕಂಠೆಯಿಂದ ಮರದುದಿಯಲ್ಲಿ ಕುಳಿತ ಕೋಗಿಲೆಗಳಿಂದ ಒಪ್ಪುವ ಮಾವು ; ಪರಿಮಳದ ಆಸೆಯಿಂದ ಮುಕ್ಕುರಿಕ್ಕುವ ದುಂಬಿಗಳಿಂದ ತುಂಬಿದ ಹೂಬಳ್ಳಿಗಳು – ರಾಜನ ಉದ್ಯಾನದಲ್ಲಿ ಇವು ಎಂದೆಂದಿಗೂ ಕುಂದವು. ಮತ್ತು ಅಲ್ಲಿ– ೪೪. ತೋರವಾದ ಹಣ್ಣಿನ ಭಾರದಿಂದ ಹುತ್ತಿಗೆ ಬಾಗಿದ ಬಕ್ಕೆ ಹಲಸಿನ ಮರದಲ್ಲಿ ನೆಲದಿಂದೆದ್ದ ತಂಪಾದ ಕಂಪಿನ ಅತಿಶಯದಿಂದ ಕೂಡಿಕೊಂಡು ಹದವಾದ ಹಣ್ಣುಗಳು, ಹುತ್ತಿನಿಂದ ಮೇಲೆದ್ದು (ಇರುವೆಗಳು) ಮುತ್ತಿಕೊಂಡುದರಿಂದ ಕಾಯಿ

ದೊರ್ವನ್ನಂ ಪಾಂಥರೆತ್ತಂ ಬಳಸಿದ ರಸವನ್ಮಾತುಳಂಗಂ ಮೊದಲ್ ।
ನೀರ್ವೊಚ್ಚಂ ಜೌಗುವೀಟುತ್ತಿರೆ ಸುರಿವೆಳೆದೆಂಗಲ್ಲಿ ಚೆಲ್ವಾದುವಾದಂ ॥ (?) ೪೪

ವಿಧುಮೃದುಕಳೆಗಳ ಹರವರಿ ।
ಸುಧಾರಸಪ್ರಸವಭೂಮಿ ಕುಸುಮಾಸ್ತ್ರದ ಸ ॥
ನ್ನಿಧಿಯೆನೆ ಸೊಗಯಿಸುವುದು ಸು ।
ತ್ತಿ ಧವಳಲಲಿತೇಕ್ಷವಾಟಮದಱೂರೂರಂ ॥ ೪೫

ಅಲ್ಲಿ

ಗಿಳಿಗಳ ಪಿಂಡು ತುಂಬಿಗಳ ಗೊಂದಣಮಂಚೆಗಳೊಡ್ಡರಲ್ದರ ।
ಲ್ಗಳ ರಜದುರ್ವು ಬಂದೆಳಸಿ ಸಂದಣಿಸುತ್ತಿರೆ ಸುತ್ತಿ ಮುತ್ತಿ ಸಂ ॥
ಗಳಿಸಿ ಪಸುರ್ತ ಕರ್ಗಿದ ಬೆಳರ್ತ ಕವಿಲ್ತ ಸುಗಂಧಶಾಳಿಸಂ ।
ಕುಳಮಲದೋರ್ಂಟಮಬ್ಜವನಮೂದುವ ತಣ್ಣೆಲರಾದಮೊಪ್ಪುಗುಂ ॥ ೪೬

ಅಂತು ಸಕಳಸಂಪದಕ್ಕಾಸ್ಪದಮಾದಾ ಜನಪದದೊಳ್

ಉಡಿದಿಡೆ ಪಥಿಕರ್ ಕರ್ಬಿನ ।
ಬಡಿಗೊಂಡೊದವಿರ್ದ ಬಟ್ಟೆಯಿಂ ಮಾವಿನ ಪ ॥
ಣ್ಣಿಡಿದಡರೆ ಕೊಂಡ ಗೊಂಚಲ್ ।
ಮಡಲಿಱಿದುದು ಕೆಟಿಗೆ ಬೆಳೆದ ಕಳಮೆಯ ಕೆಯ್ಯಂ ॥ ೪೭

ಮಾಗಿದೆಯೆಂದು ಹಾದಿಕಾರರು ಹಾತೊರೆಯುವಂತೆ ಮಾಡುವ ರಸಭರಿತ ಮಾದಳ ಹಣ್ಣುಗಳು, ಮರದ ಬುಡಕ್ಕೆ ಜವುಗು ಬೀಳುವಂತೆ ನೀರು ಸುರಿಯುವ ಎಳೆದೆಂಗುಗಳು ಅಲ್ಲಿ ತುಂಬ ಚೆಲುವಾಗಿರುವುವು. ೪೫. ಆ ರಾಜ್ಯದ ಊರೂರುಗಳಲ್ಲಿ ಚಂದ್ರನ ಮೃದುವಾದ ಕಳೆಗಳಿಗೆ ಆಶ್ರಯವೊ, ಅಮೃತರಸದ ಜನ್ಮಭೂಮಿಯೊ, ಪುಷ್ಪಬಾಣಗಳ ಸನ್ನಿಧಿಯೊ ಏನೊ ಎಂಬಂತೆ ಬಿಳಿಯ ಕಬ್ಬುಗಳ ತೋಟಗಳು ಕಂಗೊಳಿಸುವುವು. ಅಲ್ಲಿ– ೪೬. ಗಿಳಿಗಳ ಹಿಂಡು, ದುಂಬಿಗಳ ಸಮೂಹ, ಹಂಸಗಳ ಸಮುದಾಯ, ಅರಳಿದ ಹೂಗಳ ಪರಾಗದ ಬಟ್ಟಲು ಬಂದು ಬಂದು ದಟ್ಟವಾಗಿ ನೆರೆಯುತ್ತಿರಲಾಗಿ, ಸುತ್ತಿ ಮುತ್ತಿ ಸಂದಣಿಯಾಗಿ ಹಸಿರೇರಿದ, ಕಪ್ಪಾದ, ಬೆಳ್ಳಗಾದ, ಕಂದುಬಣ್ಣದ ಸುಗಂಧಿ ನೆಲ್ಲುಗಳ ಹಲವಾರು ಗದ್ದೆಗಳು, ಹೂದೋಟಗಳು, ತಾವರೆಗೊಳಗಳು, ಬೀಸುವ ತಂಗಾಳಿ–ಅತಿಶಯವಾಗಿ ಒಪ್ಪುವುವು. ವ॥ ಹೀಗೆ ಸಮಸ್ತ ಸಂಪತ್ತಿಗೆ ಆಕರವಾದ ಆ ಜನಪದದಲ್ಲಿ– ೪೭. ಹಾದಿಕಾರರು ಕಬ್ಬಿನ ಗಳುಗಳನ್ನು ಮುರಿದು ಇಡಲಾಗಿ, ಮಾರ್ಗದಲ್ಲಿ ಮಾವಿನ ಹಣ್ಣುಗಳ ಕಿಕ್ಕಿರಿದ ಗೊಂಚಲುಗಳಿಂದ ಸೋರಿದ ರಸ ಹರಿದು ಬಂದು

ರಾಜಕರಪಾತಭೀತಿ ಸ ।
ರೋಜದೊಳತಿವರ್ಣವೃತ್ತಿ ಲಿಪಿಯೊಳ್ ಖಲಸಂ ॥
ಯೋಜನೆ ಕೆಯ್ಯೊಳ್ ಸಮನಿಕು ।
ಮಾ ಜನಪದಜನದೊಳೆಂತುಮೇಂ ಸಮನಿಕುಮೇ ॥ ೪೮

ಮೃದುಕರಮೊಂದು ಚಂಡಕರಮೊಂದನವಗ್ರಹಮೊಂದವಗ್ರಹಾ ।
ಸ್ಪದಮೆ ದಲೊಂದು ನಿಶ್ಚಲಿತಸಮ್ಮದಸಂಯುತಮೊಂದು ನಿತ್ಯದು ॥
ರ್ಮದಸಮುಪೇತಮೊಂದು ಪರಿಭಾವಿಸೆ ತಾನೆನೆ ಪೋಲಿಪಂದು ಪೇಟ್ ।
ಸದೃಶಮೆ ಪೂರ್ವದೇಶಮುಮನಂಗಮತಂಗಜಪೂರ್ವದೇಶಮುಂ ॥ ೪೯

ಅಂತತ್ಯಂತಶೋಭಿವೆತ್ತು ವಿವಿಧಪುರನಿಕರತಾರಕಪ್ರಕರಪರಿಕಲಿತಮಾದ ಪೂರ್ವಮಂಡಲ ಮೆಂಬ ಪೂರ್ವಗಗನಮಂಡಳಕ್ಕೆ ಮಂಡನಮಾಗಿ,

ಪ್ರಚುರಸುಧಾನಿಳಯಂ ಸಮು ।
ಪಚಿತಮನೋಹಾರಿಗೋಕುಳಂ ವಿಮಳಕಳಾ ॥

ಕೆಳಗೆ ಬೆಳೆದ ನೆಲ್ಲುಗದ್ದೆಯಲ್ಲಿ ವಿಸ್ತಾರವಾಗಿ ಹರಡಿಕೊಂಡಿತು. ೪೮. "ರಾಜಕರಪಾತಭೀತಿ" (೧. ಚಂದ್ರನ ಕಿರಣಗಳು ಮೇಲೆ ಬೀಳುವ ಭಯ. ೨. ಅರಸನು ಕರಭಾರವನ್ನು ಹೇರುವ ಅಂಜಿಕೆ) ಕೆಂದಾವರೆಗಳಲ್ಲಿ, "ಅತಿವರ್ಣವೃತ್ತಿ" (೧. ಅನೇಕ ಅಕ್ಷರಗಳು ಕೂಡಿ ಬರುವಿಕೆ. ೨. ಜಾತಿಗೆಟ್ಟ ನಡೆವಳಿಕೆ) ಲಿಪಿಯಲ್ಲಿ, "ಖಲಸಂಯೋಜನೆ" (೧. ಕಣದಲ್ಲಿ ಧಾನ್ಯಗಳನ್ನು ಒಕ್ಕುವ ಕಾರ್ಯ. ೨. ದುಷ್ಟರ ಕೂಟ) ಹೊಲಗದ್ದೆಗಳಲ್ಲಿ ಉಂಟಲ್ಲದೆ ಆ ರಾಜ್ಯದಲ್ಲಿ ಮತ್ತೆಲ್ಲಾದರೂ ಉಂಟಾದೀತೆ? [ಕಂಸಗಳಲ್ಲಿ ಕೊಟ್ಟಿರುವ ಮೊದಲ ಅರ್ಥದಲ್ಲಿ ಉಂಟು, ಎರಡನೆಯ ಅರ್ಥದಲ್ಲಿ ಅವು ಇಲ್ಲ.] ೪೯. ಪೂರ್ವ ದೇಶಕ್ಕೂ ಮನ್ಮಥಗಜದ "ಪೂರ್ವದೇಶ" (ಶರೀರದ ಮುಂಭಾಗ) ಕ್ಕೂ ಹೋಲಿಕೆ ಮಾಡುವುದು ಸರಿಯಲ್ಲ. ಏಕೆಂದರೆ ಮೊದಲನೆಯದು "ಮೃದುಕರ" (ಕಂದಾಯದ ಭಾರ ಅಲ್ಪವಾಗಿರುವುದು) ವಾದರೆ ಎರಡನೆಯದು "ಚಂಡಕರ" (ಬಲವಾದ ಸೊಂಡಿಲುಳ್ಳದು); ಒಂದು "ಅನವಗ್ರಹ" (ಅನಾವೃಷ್ಟಿಯಿಲ್ಲದುದು– ಚೆನ್ನಾಗಿ ಸಕಾಲಿಕ ಮಳೆಯುಳ್ಳದು), ಇನ್ನೊಂದು "ಅವಗ್ರಹಾಸ್ಪದ" (ಬಂಧನಕ್ಕೆ ಒಳಗಾಗುವಂತಹುದು); ಒಂದು "ನಿಶ್ಚಲಿತ ಸಮ್ಮದ ಸಂಯುತ" (ಸತತವಾದ ಸಂತೋಷವುಳ್ಳದು), ಇನ್ನೊಂದು "ನಿತ್ಯದುರ್ಮದ ಸಮುಪೇತ" (ಯಾವಾಗಲೂ ದುಷ್ಟ ಮದೋದ್ರೇಕದಿಂದ ಕೂಡಿರುವುದು). ವ॥ ಹೀಗೆ ಅತಿಶಯವಾದ ಶೋಭೆಯನ್ನು ಹೊಂದಿ, ಬಗೆಬಗೆಯ ಪುರಗಳೆಂಬ ನಕ್ಷತ್ರ ಸಮೂಹದಿಂದ ಕೂಡಿದ ಪೂರ್ವಮಂಡಲವೆಂಬ ಪೂರ್ವಾಕಾಶಮಂಡಲಕ್ಕೆ ಭೂಷಣವಾಗಿ– ೫೦. "ಪ್ರಚುರ ಸುಧಾನಿಳಯ" (೧. ಅತಿಶಯವಾದ ಅಮೃತಕ್ಕೆ ನೆಲೆಮನೆ. ೨. ಹಲವಾರು ಸೌಧಗಳುಳ್ಳದು) ವಾಗಿ, "ಸಮುಪಚಿತ ಮನೋಹಾರಿ ಗೋಕುಳ" (೧. ಮನೋಹರವಾದ ಕಿರಣ ಸಮೂಹವುಳ್ಳದು. ೨. ಉತ್ತಮವಾದ

ಪ್ರಚಯನಿಧಾನಂ ತಾನೆನಿ ।
ಸಿ ಚಂದ್ರಬಿಂಬಂಬೊಲೊಪ್ಪುಗುಂ ಚಂದ್ರಪುರಂ ॥ ೫೦

ಅದನೆ ಪರಿವೇಷಮೆಂಬಂ ।
ದದಿನೆತ್ತಂ ಬಳಸಿ ವಿವಿಧವರ್ಣವಿಶೇಷ ॥
ಚ್ಛದಕುಸುಮಫಳಕುಳಂ ತೋ ।
ರ್ಪುದು ಶಬಳಮರೀಚಿಹೃದ್ಯಮುದ್ಯಾನವನಂ ॥ ೫೧

ಇಂದು ದಿಟಂ ವಟಚ್ಛಲದಿನಾತ್ಮಕಳಾಮೃತಸೇಕದಿಂದಮೊಂ ।
ದೊಂದನೆ ಮಂಡಳೈಕತಳದೊಳ್ ಸಸಿ ಪೆರ್ಚಿಸಿ ತಂದು ತಿಂಬಿದಂ ॥
ನಂದನದೊಳ್ ಕುಜಂಗಳನದಲ್ಲದೊಡೀ ನಯಮೀ ಪೊದಟ್ಕೆಯೀ ।
ಯಂದದ ಶೋಭೆಯೀರಸಸಮೃದ್ಧಿಯದೇಂ ಪೆಱವರ್ಕೆ ತೋರ್ಕುಮೇ ॥ ೫೨

ಎನಿಸಿ ನೆಗಟ್ತೆಗಂ ಪೊಗಟ್ತೆಗಂ ನೆಲೆಯಾದುದು. ಅಲ್ಲಿ

ಸ್ತ್ರೀಪುಂಸೋಚಿತವೃತ್ತಿಯಿಂದಿರದೊಡಮ್ಮೊಳ್ ದರ್ಪಕಂ ತೋರ್ಪನಿಂ ।
ಚಾಪಾಟೋಪಮನೆಂದೆ ತಳ್ತಗಲವೆಂದುಂ ರಾಗದಿಂ ನಾಗವ ॥
ಲ್ಲೀಪೂಗದ್ವಿತಯಂ ಲತಾಕುರವಕದ್ವಂದ್ವಂ ಸಮುತ್ಫುಲ್ಲಮ ।
ಲ್ಲೀಪುನ್ನಾಗಯುಗಂ ವಿಲೋಲಲವಲೀಲೀಲಾಲವಂಗದ್ವಯಂ ॥ ೫೩

ಆಕಳ ಹಿಂಡಿನಿಂದ ಮನೋಹರವಾದುದು), ಹಾಗೂ "ವಿಮಳಕಳಾಪ್ರಚಯನಿಧಾನ" (೧. ಪರಿಶುದ್ಧವಾದ ಹದಿನಾರು ಕಳೆಗಳಿಗೆ ಆಶ್ರಯವಾದುದು. ೨. ನಿರ್ದುಷ್ಟವಾದ ಅನೇಕ ಲಲಿತ ಕಲೆಗಳಿಗೆ ನೆಲೆಯಾದುದು) ಎನಿಸಿ ಚಂದ್ರಪುರವು ಚಂದ್ರಬಿಂಬಕ್ಕೆ ಸಮನಾಗಿ ಒಪ್ಪಿತು. ೫೧. ಅದನ್ನೆ ಪರಿವೇಷದಂತೆ ಸುತ್ತಲೂ ಬಳಸಿಕೊಂಡು ಬಗೆಬಗೆಯ ಬಣ್ಣಗಳ ಎಲೆ, ಹೂ, ಹಣ್ಣುಗಳ ಸಮೂಹದಿಂದ ಮಿಶ್ರಕಾಂತಿಯು ಚೆಲುವನ್ನು ಹೊಂದಿ ಮನೋಹರವಾದ ಉದ್ಯಾನವು ಶೋಭಿಸುವುದು. ೫೨. ಚಂದ್ರನು (ತನ್ನ ಒಡಲಲ್ಲಿರುವ) ಆಲದ ಮರದ ಮೇಲಿನ ಒಲವಿನಿಂದ ತನ್ನ ಮಂಡಲದಲ್ಲಿ ಅಮೃತವನ್ನೆರೆದು ಸಸಿಗಳನ್ನು ಬೆಳೆಯಿಸಿ ತಂದು ಈ ಉದ್ಯಾನದಲ್ಲಿ ತುಂಬಿರಬೇಕು. ಹಾಗಲ್ಲವಾದರೆ ಈ ನಯ, ಈ ಅಭಿವೃದ್ಧಿ, ಈ ಶೋಭೆ ಹಾಗೂ ಈ ರಸಸಮೃದ್ಧಿ ಬೇರೆಯ ಮರಗಳಿಗೆ ಏಕಿಲ್ಲ? ವ॥ ಎಂಬಂತೆ ಆ ಉದ್ಯಾನವು ಹೊಗಳಿಕೆಗೂ ಪ್ರಸಿದ್ಧಿಗೂ ನೆಲೆಯಾಯಿತು. ಅಲ್ಲಿ – ೫೩. "ಗಂಡಹೆಂಡಿರಂತೆ ನಾವು ಒಬ್ಬರೊಡನೊಬ್ಬರು ಹೊಂದಿಕೊಂಡಿರದಿದ್ದರೆ ತನ್ನ ಬಿಲ್ಲನ್ನೆತ್ತಿಕೊಂಡು ಬಂದು ಅಬ್ಬರಿಸುವನು" ಎಂದುಕೊಂಡು ಅನುರಕ್ತಿಯಿಂದ ಎಲೆಬಳ್ಳಿ ಅಡಕೆ ಮರಗಳ ಜೊತೆಯೂ, ಮಾಧವೀಲತೆಮದರಂಗಿಗಳ ಜೋಡಿಯೂ, ಮಲ್ಲಿಗೆ–ಸುರಹೊನ್ನೆಗಳ ಸಂಗಮವೂ, ಚಂಚಲವಾದ ಲವಲೀಲತೆ ಲವಂಗ ದ್ವಿತಯವೂ

ಅದಲ್ಲದೆಯುಂ

ಪದವೆತ್ತಿಂಬಣ್ಣ ಬಿಣ್ಗೊಂಚಲನಲಸದೆ ಪೊತ್ತಿರ್ದ ಪೊಂಬಾಳೆ ಕೀೞ್ಕೋ
ೞ್ಕೊದಲಿಂ ತೂಱಿಲ್ವರಂ ಪಣ್ಗೊಳೆ ಪೊದಿಸಿದವೋಲುಬ್ಬರಂ ಪಣ್ತ ಕಿತ್ತಿ
ೞ್ ದಳಂಬೆತ್ತೊತ್ತೆ ಬಿಟ್ಟುಬ್ಬರಿಸಿ ಬಿರಿದು ಕಣ್ಬಚ್ಚವಾದಚ್ಚವಣ್ಬೇ । ಱೆದ
ದಾಳಿಂಬಂ ತದುದ್ಯಾನದೊಳೊದವಿಸುಗುಂ ಬಾಯ್ಗೆ ತೇರಯ್ಕೆಯುರ್ವಂ ॥ ೫೪

ಪರಿಪಕ್ವ ಸರಸಫಳಮಂ ।
ಜರಿಗಳ್ ನಿಜಭಾರದಿಂದಧೋಯಾನತೆಯಂ ॥
ದೊರೆಕೊಳಿಸೆಯುಮುದ್ಯಾನಕೆ ।
ದೊರೆವೆತ್ತುದು ನಗರನಂದನಕ್ಕಿದು ಚತ್ರಂ ॥ ೫೫

ಕಳಶುಕನಾದದಿಂ ಪದೆಪನಾಡಿ ಕರಂ ಸುಮನೋನುವೃತ್ತಿಯಂ ।
ಬಳೆಯಿಸಿ ಸಾಲ್ವಿನಂ ಸಲೆ ಸುವರ್ಣಸಮೇತಲಸಚ್ಛದೋತ್ಕರಂ ॥
ಗಳನಿರದಿತ್ತು ಮತ್ತೆ ಬಿಡೆ ಕಾಲ್ವಿಡಿದಾಸಕಳರ್ತುಕದ್ರುಮಂ ॥
ಗಳ ನೆವದಿರ್ಪನೆಯ್ದೆ ವನಲಕ್ಷ್ಮಿಯೊಳಿಂತು ವಸಂತವಲ್ಲಭಂ ॥ ೫೬

ಎಂದೆಂದೂ ಅಗಲದಂತೆ ಇದ್ದುವು. ಅದಲ್ಲದೆ-೫೪. ಹದವಾದ ಸಿಹಿ ಹಣ್ಣುಗಳ ಗೊಂಚಲನ್ನು ಆಲಸ್ಯವಿಲ್ಲದೆ ಹೊತ್ತು ನಿಂತ ಹೊಂಬಾಳೆ, ಕೆಳಗಿನ ಕೊಂಬೆಯಿಂದ ತುತ್ತ ತುದಿಯುವರೆಗೆ ಹಣ್ಣಗಳನ್ನೆ ಹೊದಿಸಿದಂತೆ ಅತಿಶಯುವಾಗಿ ಹಣ್ಣುಬಿಟ್ಟ ಕಿತ್ತಿಳೆ, ದಳವೇರಿ ಒತ್ತೊತ್ತೆಯಾಗಿ ಬೆಳೆದು ಬೀಜ ಹಿಡಿಸಲಾರದೆ ಬಿರಿದು ಕಣ್ಣಿಗೆ ಹಬ್ಬವೆನಿಸುವ ಪಕ್ವಫಲಗಳನ್ನು ಹೇರಿಕೊಂಡ ದಾಳಿಂಬ, ಆ ಉದ್ಯಾನದಲ್ಲಿ ನಾಲಗೆ ನೀರೂರುವಂತೆ ಮಾಡುವುವು. ೫೫. ತುಂಬ ಮಾಗಿ ರಸದುಂಬಿದ ಹಣ್ಣುಗೊಂಚಲುಗಳ ಭಾರದಿಂದ ಆ ಉಪವನಕ್ಕೆ (ಅದರ ಮರಗಳಿಗೆ) "ಅಧೋಯಾನತೆ" (ಕೆಳಕ್ಕೆ ಬಾಗುವ ಅವಸ್ಥೆ) ಉಂಟಾಗಿದ್ದರೂ, ಅದು "ಉದ್ಯಾನ"(೧. ಮೇಲಕ್ಕೆ ಏರುವಂತಹುದು. ೨. ಉಪವನ) ಎನಿಸಿತು. ಇದು ಸೋಜಿಗ. ೫೬. "ಕಳಶುಕನಾದ" (೧. ಗಿಳಿಗಳ ಮಧುರವಾದ ಧ್ವನಿ. ೨. ಗಿಳಿಯ ಧ್ವನಿಯಂತೆ ಇಂಪಾದ ಧ್ವನಿ) ದಿಂದ ಲಲ್ಲೆ ಮಾತಾಡಿ, "ಸುಮನೋನುವೃತ್ತಿ" (೧. ಹೂಗಳು ಸತತವಾಗಿರುವಿಕೆ. ೨. ಮನಕ್ಕೊಪ್ಪುವಂತೆ ಅನುಸರಿಸಿ ನಡೆದುಕೊಳ್ಳುವಿಕೆ) ಯನ್ನು ಬೆಳೆಯಿಸಿ, "ಸುವರ್ಣಸಮೇತ ಲಸಚ್ಛದೋತ್ಕರ" (೧. ಉತ್ತಮವಾದ ಬಣ್ಣಗಳುಳ್ಳ ಎಲೆಗಳ ಸಮೂಹ. ೨. ಬಂಗಾರದೊಡನೆ ಚೆಲುವಾದ ವಸ್ತ್ರ ಸಮುದಾಯ) ಗಳನ್ನು ಸಾಕೆಂಬಷ್ಟು ಕೊಟ್ಟು, "ಕಾಲ್ವಿಡಿದು" (೧. ಕಾಲುವೆಗಳನ್ನು ಹೊಂದಿಕೊಂಡು. ೨. ವಿನಯದಿಂದ ಕಾಲುಗಳನ್ನು ಹಿಡಿದುಕೊಂಡು), ಸಕಲ ಋತುಗಳಲ್ಲಿಯೂ ಫಲಪುಷ್ಪಭರಿತವಾಗುವ ವೃಕ್ಷಗಳ ರೂಪದಲ್ಲಿ ವಸಂತನೆಂಬ ಪ್ರಿಯನು

ರತಿಯಿಲ್ಲದೆ ಪುಗಲಣ್ಮಂ।
ರತಿಪತಿಯುಂ ಬನಮನೆಂದು ಖೇಚರಸುರದಂ॥
ಪತಿಗಳೆ ಬಂದದಱಿಕೊಪ್ಪುವ।
ಲತೆವನೆಯೊಳ್ ಕೃತಕಶೈಳದೊಳ್ ಕ್ರೀಡಿಸುಗುಂ॥ ೫೭

ಬಿಸರಸಪಾನದಿಂದಮೆರ್ದೆಯಾಱೆ ಮದಾಲಸಯಾನಲೀಲೆಯಂ।
ಪೊಸೆಯಿಸುವಂಚೆ ಪದ್ಮಮಧುಸೇವನೆಯಿಂ ನಸುಸೊರ್ಕಿ ಗೇಯಮಂ॥
ಪಸರಿಪ ತುಂಬಿ ತಾವರೆಯ ತಣ್ಣೆಲೋವರಿಯಲ್ಲಿ ತಳ್ತು ಮೇ।
ಳಿಸುವ ರಥಾಂಗಮಿಲ್ಲದೆಡೆಯಿಲ್ಲ ದಲಲ್ಲಿಯ ಪುಗೊಳಂಗಳೊಳ್॥ ೫೮

ಧನಕೋಶಂ ನವಹೇಮತಾಮರಸಕೋಶಂ ದೇಶಮಾಸೈಕತಾ।
ವನಿದೇಶಂ ಸಹಕಾರಿ ಸಾರಸಹಕಾರಂ ಮಂತ್ರ ಮಂದಾನಿಳಂ॥
ಘನದುರ್ಗಂ ಕೃತಕಾದ್ರಿ ಸೇನೆ ಪಿಕಸಂತಾನಾದಿ ತಾನಾಗೆ ತ।
ದ್ವನದೊಳ್ ದರ್ಪಕಚಕ್ರವರ್ತಿ ಮೆಱೆವಂ ಸಪ್ತಾಂಗಸಾಮ್ರಾಜ್ಯಮಂ॥ ೫೯

ಎಳನೀರಿಂ ಕದಳಾಳಿ ಚೂತಫಳಸಾರಾಸಾರದಿಂ ದಾಡಿಮೀ।
ಕುಳಮುದ್ಯದ್ಧವಳೇಕ್ಷುಜಾಳರಸದಿಂ ನಾರಂಗಸಂಘಾತಮು॥
ಚ್ಚಳಿತೇಂದೂಪಳವಾರಿಯಿಂ ಕಳಮಕೇದಾರಂ ನಿರಾಯಾಸದಿಂ।
ಬೆಳೆದೊಪ್ಪಂಬಡೆದಿರ್ಪುವಾ ಪುರವನಪ್ರಾಂತಪ್ರದೇಶಂಗಳೊಳ್॥ ೬೦

ವನಲಕ್ಷ್ಮಿಯೊಡನೆ ಇರುವನು. ೫೭. ಈ ಉದ್ಯಾನದಲ್ಲಿ ರತಿಯಿಲ್ಲದೆ ಮನ್ಮಥನು ಕೂಡ (ಏಕಾಂಗಿಯಾಗಿ) ಪ್ರವೇಶ ಮಾಡಲಾರನು ಎಂದುಕೊಂಡು, ಖೇಚರರು ಹಾಗು ದೇವತೆಗಳು ದಂಪತಿಗಳಾಗಿಯೆ ಬಂದು ಆ ಉದ್ಯಾನದ ಬಳ್ಳಿ ಮಂಟಪಗಳಲ್ಲಿಯೂ, ಕ್ರೀಡಾಪರ್ವತಗಳಲ್ಲಿಯೂ ವಿನೋದಪಡುವರು. ೫೮. ಕಮಲನಾಳದ ರಸವನ್ನು ಕುಡಿದು ಸಂತೃಪ್ತವಾಗಿ ಮಂದಗಮನದ ಬೆಡಗನ್ನು ಬೀರುವ ಹಂಸಪಕ್ಷಿಗಳು, ತಾವರೆಯ ಮಕರಂದ ಪಾನದಿಂದ ನಸುವೆ ಮತ್ತೇರಿ ಹಾಡುತ್ತಿರುವ ದುಂಬಿಗಳು, ಕಮಲದ ತಂಪಾದ ನೆಳಲಲ್ಲಿ ರಭಸದಿಂದ ನೆರೆಯುವ ಚಕ್ರವಾಕದಂಪತಿಗಳು–ಅಲ್ಲಿಯ ಹೂಗೊಳಗಳಲ್ಲಿ ಇವು ಇಲ್ಲದ ಎಡೆಯೆ ಇಲ್ಲ. ೫೯. ಹೊಸಹೊಂದಾವರೆಯ ಬೀಜಕೋಶವೆ ಧನಕೋಶ; ಮರಳು ಪ್ರದೇಶವೆ ದೇಶ; ಇವಮ್ಮಾವಿನ ಮರವೆ ಮಿತ್ರ; ಸುಳಿಗಾಳಿಯೆ ಮಂತ್ರಿ; ಕ್ರೀಡಾಶೈಲವೆ ದುರ್ಗ! ಕೋಗಿಲೆ ಮೊದಲಾದುವುಗಳ ಹಿಂಡೆ ಸೈನ್ಯ; ಹೀಗೆ ಆ ಉದ್ಯಾನದಲ್ಲಿ ಮನ್ಮಥ ಚಕ್ರವರ್ತಿಯು ಸಪ್ತಾಂಗ ಸಾಮ್ರಾಜ್ಯವನ್ನು ವೈಭವದಿಂದ ಆಳುವನು. ೬೦. ಎಳನೀರಿಂದ ಬಾಳೆಯ ಬನವೂ, ಮಾವಿನ ಹಣ್ಣುಗಳು ಸುರಿವ ಮಳೆಯಿಂದ ದಾಳಿಂಬಗಳೂ, ಬಿಳಿಕಬ್ಬಿನ ರಸದಿಂದ ನಾರಂಗದ ತೋಪೂ, ಚಂದ್ರಕಾಂತ ಶಿಲೆಗಳ ನೀರಿನಿಂದ ನೆಲ್ಲಿನ ಗದ್ದೆಗಳೂ ಆ ನಗರದಂಚಿನ ಪ್ರದೇಶಗಳಲ್ಲಿ

ಅದೆ ವಿಸರತ್ಸಭಾಕಳಕಳಂ ಪ್ರತಿಹಾರಕತರ್ಜನೋಕ್ತಿ ತಾ ।
ನದೆ ಕಳಗೀತನಾದಮದೆ ಮನ್ಮಥನಾಥನ ಬೀಡುದಾಣಮಿಂ ॥
ತಿದು ದಿಟಮೆಂದು ತದ್ವನಮನಧ್ವಗರಾಲಿಸಿ ಪೊರ್ದಲಣ್ಮರು ।
ಣ್ಮಿದ ಮದಕೀರಕೋಕಿಳಮಧುವ್ರತಮಂಜುಳಶಿಂಜಿತಂಗಳಂ ॥ ೬೧

ಅಂತುಮಲ್ಲದೆಯುಂ

ತೀವಿದ ಕೊಳದೊಳ್ ಲತೆವನೆ ।
ಯೋವರಿಯೊಳ್ ತಳ್ತ ತಳಿರ ಕಾವಣದೊಳ್ ಬಂ ॥
ದಾ ವಿರಹಿಗೆ ಭಾವಭವಂ ।
ತಾವಡಿವೇಟ್ಟಂತೆ ಸುಟಿಪುದುಪವನಪವನಂ ॥ ೬೨

ಅಂತು ಜನಮನೋನಯನವಿಶ್ರಮಣಭೂಮಿಯಾದುದ್ಯಾನಮಾಳಾವಳಯದಿಂದಮೊಳಗೆ,

ಬಳಸಿರೆ ಜಳಖಾತಿಕೆಗೆ ತಳ ।
ತಳಿಸುವ ಪೊಸವಳಿಕಿನೆಸವ ಕೋಂಟೆ ಕರಂ ಕ ॥
ಣ್ಗೊಳಿಪುದು ನೋಟಕರಂ ತಿಳಿ ।
ಗೊಳದೊಳಗುಳ್ಳಲರ್ದ ಧವಳಕಮಾಳಾಕೃತಿಯಿಂ ॥ ೬೩

॥ ಶಿಖರಿಣಿ ॥

ಪರೀತೋದ್ಯಾನೋದ್ಯದ್ದ್ರುಮಕೃತಕರತ್ನಾದ್ರಿನಿಚಯ ।
ಸ್ವರೂಪಂಗಳ್ ತನ್ನೊಳ್ ಪೊಳೆಯೆ ವಿಮಳಸ್ಫಾಟಿಕಮಯಂ ॥

ನಿರಾಯಾಸವಾಗಿ ಬೆಳೆದು ಶೋಭಿಸುವುವು. ೬೧. "ಅಕೊ! ಹಬ್ಬುತ್ತಿರುವ ಸಭೆಯ ಕಳಕಳ! ಪ್ರತೀಹಾರರ ಜಂಕಿಸುವ ನುಡಿ! ತಾನತಾನವಾಗಿ ಬರುವ ಮಧುರ ಗೀತನಾದ! ಇದು ನಿಶ್ಚಿತವಾಗಿಯೂ ಮನ್ಮಥರಾಜನ ಪಾಳ್ಯ!" ಎಂದುಕೊಂಡು ಸೊಕ್ಕಿದ ಗಿಳಿ, ಕೋಗಿಲೆ, ದುಂಬಿಗಳ ಮಧುರನಾದವನ್ನು ಕೇಳಿದ ಹಾದಿಕಾರರು ಆ ಉದ್ಯಾನವನ್ನು ಹೊಗುವುದಕ್ಕೆ ಹಿಂಜರಿಯುವರು. ವ॥ ಅಷ್ಟೆ ಅಲ್ಲದೆ– ೬೨. ತುಂಬಿದ ಸರೋವರಕ್ಕಾಗಲಿ, ಲತಾಗೃಹದ ಮರೆಗಾಗಲಿ, ತಳಿರ ಮಂಟಪಕ್ಕಾಗಲಿ ವಿರಹಿ ಬಂದೊಡನೆ "ಇಲ್ಲಿಂದ ಹೊರಟು ಹೋಗು" ಎಂದು ಹೇಳುವಂತೆ ಉದ್ಯಾನದ ಗಾಳಿ ಸುಳಿಯುವುದು. ವ॥ ಹೀಗೆ ಜನರ ಕಣ್ಣುಗಳಿಗೂ ಮನಕ್ಕೂ ವಿಶ್ರಾಮ ಭೂಮಿಯಾದ ಆ ಉದ್ಯಾನ ಮಾಲೆಯನ್ನು ದಾಟಿ ಒಳಗೆ–೬೩. ಸುತ್ತಲಿನ ನೀರುತುಂಬಿದ ಅಗಳ್ತೆಯ ನಡುವೆ ಚಕಚರಿಸುವ ಸ್ಫಟಿಕದ ಕೋಟೆಯು ನೋಟಕರ ಕಣ್ಣಿಗೆ ತಿಳಿನೀರಿನ ಕೊಳದಲ್ಲಿ ಅರಳಿದ ಬಿಳಿದಾವರೆಯಂತೆ ಶೋಭಿಸುವುದು ೬೪. ಆ ಕೋಟೆಯು ಗೋಡೆಯು ಶುದ್ಧ ಸ್ಫಟಿಕ ನಿರ್ಮಿತವಾದುದರಿಂದ, ಸುತ್ತಲೂ ಇರುವ (ವರ್ಣರಂಜಿತ) ಉದ್ಯಾನ ವೃಕ್ಷಗಳೂ, ರತ್ನಮಯವಾದ ಕ್ರೀಡಾಶೈಲಗಳೂ ಅದರಲ್ಲಿ ಪ್ರತಿಬಿಂಬಿತವಾಗುವುವು; ಅದುದರಿಂದ

ಪುರಸ್ತ್ರೀನೈಪಥ್ಯಸ್ಥಳಪರಿವೃತಂ ಚಿತ್ರರುಚಿರಂ ।
ತಿರೋಧಾನೋತ್ತಾನಾಂಬರಮದೆನೆ ತದ್ವಪ್ರಮೆಸೆಗುಂ ॥ ೬೪

ಮತ್ತಂ

ಅಂತಃಕೃತದೃಢಗುಣಮಾ ।
ಕ್ರಾಂತಪಯೋಧರಮುದಗ್ರಕಾಂತಿ ಪುರಶ್ರೀ ॥
ಕಾಂತೆಯುಪಕಂಠದೊಳ್ ಹಾ ।
ರಂ ತಾನೆನೆ ಸೊಗಯಿಕುಂ ಕರಂ ಪ್ರಾಕಾರಂ ॥ ೬೫

ಆಕಾಶಸ್ಫಟಿಕಮಯ ।
ಪ್ರಾಕಾರಾಗ್ರದ ಸುವರ್ಣರಚಿತಾಟ್ಟಾಳಾ ॥
ನೀಕಂ ಬಯಲೊಳ್ ನೆಲಸಿದ ।
ನೇಕವಿಯಚ್ಚರವಿಮಾನಮೆಂಬಂತಿರ್ಕುಂ ॥ ೬೬

ಅಂತುಮಲ್ಲದೆಯುಂ

ವಿಮಳತರಗಗನಮಂಡಳ ।
ದ ಮಧ್ಯದೊಳ್ ನೆಗೆದ ಶಬಳಮೇಘೋತ್ಕರದೊ ॥
ಪ್ಪಮನಪ್ಪುಕೆಯ್ದುದಾ ಸ್ಫಟಿ ।
ಕಮಯಪ್ರಕಾರದೊಳಗೆ ಮಣಿಗೃಹನಿವಹಂ ॥ ೬೭

ಆ ಪಟ್ಟಣದ ಸ್ತ್ರೀಯರ ನೇಪಥ್ಯಸ್ಥಳದ ಸುತ್ತಲೂ ಮರೆಮಾಡುವುದಕ್ಕೆ ಎತ್ತಿ ಕಟ್ಟಿದ ಚಿತ್ರಮಯವಾದ ಬಟ್ಟೆಯ ತೆರೆಯೊ ಏನೋ ಎಂಬಂತೆ ಅದು ಕಂಗೊಳಿಸುವುದು. ಮತ್ತು–೬೫. "ಅಂತಃಕೃತದೃಢಗುಣ"ವೂ (೧. ಒಳಗೆ ಗಟ್ಟಿತನವನ್ನು ಹೊಂದಿರುವುದು. ೨. ಗಟ್ಟಿಯಾದ ದಾರವನ್ನು ತನ್ನೊಳಗೆ ಪವಣಿಸಿಕೊಂಡಿರುವುದು), "ಆಕ್ರಾಂತಪಯೋಧರ"ವೂ (೧. ಮೋಡಗಳನ್ನು ಆಕ್ರಮಿಸುವಂತೆ ಎತ್ತರವಾಗಿರುವುದು. ೨. ಮೊಲೆಗಳನ್ನು ಆವರಿಸಿರುವುದು). "ಉದಗ್ರಕಾಂತಿ" ಯೂ (೧. ಶಿಖರದಲ್ಲಿ ಕಾಂತಿಯುಳ್ಳುದು. ೨. ಅತಿಶಯವಾದ ಕಾಂತಿಯುಳ್ಳುದು) ಆದ ಆ ಪ್ರಾಕಾರಭಿತ್ತಿಯು ಆ ಪುರವೆಂಬ ಲಕ್ಷ್ಮಿಗೆ ಕೊರಳ ಹಾರದಂತೆ ಶೋಭಿಸುವುದು. ೬೬. ಆಕಾಶದಂತೆ ನಿರ್ಮಲವಾದ ಸ್ಫಟಿಕದ ಆ ಪ್ರಾಕಾರ ಶಿಖರದಲ್ಲಿರುವ ಚಿನ್ನದ ಉಪ್ಪರಿಗೆಗಳು ಬಯಲಲ್ಲಿ ನೆಲಸಿದ ಖೇಚರ ವಿಮಾನಗಳೊ ಏನೋ ಎಂಬಂತೆ ಇರುವುವು. ಅದಲ್ಲದೆ–೬೭. ಸ್ವಚ್ಛವಾದ ಆಕಾಶಮಂಡಲದಲ್ಲಿ ಮೂಡಿಬಂದ ಮಿಶ್ರವರ್ಣದ ಮೋಡಗಳ ಸಮೂಹವೊ ಏನೊ ಎಂಬಂತೆ ಆ ಸ್ಫಟಿಕಮಯವಾದ ಪ್ರಾಕಾರದೊಳಗೆ ರತ್ನಗೃಹ ಸಮುದಾಯವು

ಗಣಿಕಾವಾಟಿಯನೆಸೆವಾ ।
ಪಣಕೋಟಿಯನಟ್ಟೆಯಿಂದೆ ಪುರದೊಳ್ ಕಡೆಮು ॥
ಟ್ಟೆಣಿಸುವೊಡಂ ನೋಡುವೊಡಂ ।
ಫಣಿಪತಿಯುಂ ದಿವಿಜಪತಿಯುಮಾಗಲೆವೇಟ್ಕುಂ ॥ ೭೮

ಅಗಲದಿರೆ ವಿಬುಧರುಂ ಭೋ
ಗಿಗಳುಂ ಮನುಜಾಗ್ರಗಣ್ಯರುಂ ತನ್ನೊಳ್ ತ ॥
ನ್ನಗರಂ ಸೊಗಯಿಸಿದುದು ಮೂ ।
ಜಗಮುಂ ಬಂದಿರ್ದುದಿಲ್ಲಿ ನೆರೆದೆಂಬಿನೆಗಂ ॥ ೭೯

ಮತ್ತಮದು ಸಂಯುತಹಸ್ತದಂತೆ ವಿಸ್ತೃತಸ್ವಸ್ತಿಕೋಪೇತಮುಂ, ಶುದ್ಧಪ್ರಸಿದ್ಧ ಪ್ರಬಂಧದಂತೆ ವರ್ಧಮಾನಮಾನಿತಮುಂ, ಪ್ರಮದವನದಂತಾತ್ತನಂದ್ಯಾವರ್ತಮುಂ, ಅನಶನತಪದಂತೆ ಸರ್ವತೋಭದ್ರಭಾಸುರಮುಮೆನಿಪುದು, ಅಂತುಮಲ್ಲದೆಯುಂ,

ಸುರತಪ್ರೌಢಂ ವರಸ್ತ್ರೀತತಿ ಬಹುಪಯಸಂ ಧೇನುಸಂತಾನಮಾಶಾಂ ।
ತರನಾನಾವಸ್ತುಪೂರ್ಣಂ ವಿಪಣಿವಿತತಿ ಕೇಳೀವನಪ್ರಾವೃತಂ ಮಂ ॥
ದಿರಸಂದೋಹಂ ದಲೆಂದಂದಕೃತಸುಕೃತನಪ್ಪಂಗೆ ಕೈಸಾರ್ಗುಮೇ ತ ।
ತ್ಪುರಸಂವಾಸಂ ಸಮಾಸಾಧಿತಸಕಳವಿಳಾಸಂ ಸುಚೇತೋವಿಕಾಸಂ ॥ ೭೦.

ಕಂಗೊಳಿಸುವುದು. ೭೮. (ಆ ನಗರದಲ್ಲಿಯ) ವೇಶ್ಯಾಗೃಹಗಳನ್ನೂ, ಅಂಗಡಿ ಸಾಲುಗಳನ್ನೂ ಕೊನೆಮುಟ್ಟ ಎಣಿಸಲು ಆದಿಶೇಷನೇ ಬರಬೇಕು, ಮತ್ತು ನೋಡಲು ದೇವೇಂದ್ರನೆ ಆಗಬೇಕು. ೭೯. "ವಿಬುಧ" ರೂ (೧. ಜ್ಞಾನಿಗಳು. ೨. ದೇವತೆಗಳು), "ಭೋಗಿ"ಗಳೂ (೧. ಸುಖಭೋಗವುಳ್ಳವರು. ೨. ಸರ್ಪಗಳು), ಮತ್ತು ಮನುಷ್ಯ ಶ್ರೇಷ್ಠರೂ ತನ್ನಲ್ಲಿ ನೆಲಸಿರುವುದರಿಂದ ಆ ನಗರವು ಮೂರೂ ಲೋಕಗಳು ತನ್ನಲ್ಲಿ ಬಂದು ನೆಲೆಗೊಂಡಂತೆ ಕಂಗೊಳಿಸುವುದು. ವ॥ ಮತ್ತು ಆ ನಗರವು ಸಂಯುತಹಸ್ತದಂತೆ "ವಿಸ್ತೃತಸ್ವಸ್ತಿಕೋಪೇತ"ವೂ (೧. ವಿಸ್ತೃತವಾದ ಸ್ವಸ್ತಿಕಮುದ್ರೆಯುಳ್ಳುದು. ೨. ಸ್ವಸ್ತಿಕಾಕಾರದ ಭವನಗಳುಳ್ಳುದು), ಪ್ರಸಿದ್ಧವಾದ ಶುದ್ಧ ಪ್ರಬಂಧದಂತೆ "ವರ್ಧಮಾನಮಾನಿತ"ವೂ (೧. ವರ್ಧಮಾನವೆಂಬ ಒಗಟುಳ್ಳುದೂ. ೨. ದಕ್ಷಿಣಕ್ಕೆ ಬಾಗಿಲಿಲ್ಲದ ವರ್ಧಮಾನವೆಂಬಾಕೃತಿಯ ಅರಮನೆಯುಳ್ಳುದು), ಪ್ರಮದವನದಂತೆ, "ಆತ್ತನಂದ್ಯಾವರ್ತ"ವೂ (೧. ನಂದಿಬಟ್ಟಲು ಹೂಗಳುಳ್ಳುದು. ೨. ಪಶ್ಚಿಮಕ್ಕೆ ಬಾಗಿಲಿಲ್ಲದ ನಂದ್ಯಾವರ್ತವೆಂಬ ಅರಮನೆಯುನ್ನೊಳಗೊಂಡುದು), ಅನಶನ ತಪಸ್ಸಿನಂತೆ "ಸರ್ವತೋಭದ್ರಭಾಸುರ"ವೂ (೧. ಸರ್ವತೋಭದ್ರವೆಂಬ ೭೫ ಉಪವಾಸಗಳ ವ್ರತದಿಂದ ಶೋಭಿಸುವುದು. ೨. ನಾಲ್ಕು ದಿಕ್ಕಿಗೆ ಬಾಗಿಲುಗಳುಳ್ಳ ಮಹಲುಗಳಿಂದ ಸುಂದರವಾದುದು) ಆಗಿರುವುದು. ಅದಲ್ಲದೆ– ೭೦. ಸುರತಕಲಾನಿಪುಣೆಯರಾದ ಉತ್ತಮ ಸ್ತ್ರೀಸಮೂಹ, ಹೇರಳವಾಗಿ ಹಾಲು ಕರೆವ ಆಕಳ ಹಿಂಡು, ದಿಗಂತದವರೆಗಿನ ನಾನಾ ವಸ್ತುಗಳಿಂದ ಸಮೃದ್ಧವಾದ ಅಂಗಡಿ ಸಾಲುಗಳು, ಕ್ರೀಡಾವನ ಸಹಿತವಾದ ಗೃಹ

ಮತ್ತಂ

ನಗರವಿಳಾಸಿನೀಜನದ ರೂಪವಿಳಾಸಮನಿಂತುಟೆಂದು ನಾ ।
ಲಗೆಗೆ ತರಲ್ಕೆ ಬಲ್ಲ ಚದುರೆಲ್ಲಿಯದಲ್ಲಿಯ ಮಾಲೆಗಾರ್ತಿಯರ್ ॥
ಮಿಗುವರಹೀಂದ್ರಲೋಕದೆಳವೆಂಡಿರನಲ್ಲಿಯ ಘಟ್ಟಿವಳ್ತಿಯರ್ ।
ಮಿಗುವರಮರ್ತ್ಯಲೋಕದಬಳಾಳಿಯನೆನ್ನರುಮೊಲ್ವ ಚೆಲ್ವಿನಿಂ ॥ ೭೧

ಬಳಸಿ ತೊಳಪ್ಪ ಕೋಂಟೆಯೆ ಕರಂ ಗಜದಂತಮಹೀಧ್ರದಂತೆ ಕಂ ।
ಗೊಳಿಸೆ ಗೃಹೋಪಕಂಠವನಭೂಜಮೆ ಕಲ್ಪಮಹೀಜದೊಪ್ಪಮಂ ॥
ತಳೆಯೆ ಧನಾಢ್ಯದಂಪತಿಯೆ ತದ್ಭವದಂಪತಿಯಂದಮಂ ಪುದುಂ ।
ಗೊಳಿಸೆ ಪುರಂ ವಿರಾಜಿಪುದು ದೇವಕುರುಪ್ರತಿಮಾನಮೆಂಬಿನಂ ॥ ೭೨

ಜಿನಬಿಂಬಸ್ನಪನಾರ್ಚನೋತ್ಸವಸಮುದ್ಭೂತಾನಕಧ್ವಾನದಿಂ ।
ಮುನಿಬೃಂದಾಧ್ಯಯನೋಚಿತಪ್ರವಚನೋಪನ್ಯಾಸನಿರ್ಘೋಷದಿಂ ॥
ವಿನಮದ್ಭವ್ಯಜನಾಪ್ತರೂಪಗುಣವಸ್ತುಸ್ತೋತ್ರಯುಕ್ತೋಕ್ತಿಯಿಂ ।
ದನಿಶಂ ಪೊಂಪುಟಿವೋಪುದಾ ಪುರದ ಚಂಚಚ್ಚೈತ್ಯಗೇಹೋತ್ಕರಂ ॥ ೭೩

ಅದಲ್ಲದೆಯುಂ

ಆಯಸಂಯುಕ್ತಮಿದೆಂದು ತನ್ನ ಸುಖಮಂ ಕೈಕೊಳ್ಳದೇಟ್ಟಿಂದಪಂ ।
ಪ್ರಿಯದಿಂದಷ್ಟಮತೀರ್ಥನಾಥನಿರದಿಂದೆನ್ನಲ್ಲಿಗೇಮಾತೊ ನಿ ॥

ಸಮುದಾಯುಗಳು,– ಇವುಗಳನ್ನೊಡಗೊಂಡು ಸಮಸ್ತಪ್ರಕಾರದ ವಿಲಾಸದಿಂದ ಮನಸ್ಸನ್ನು ಅರಳಿಸುವ ಇಂತಹ ನಗರದಲ್ಲಿ ವಾಸಮಾಡುವ ಭಾಗ್ಯ ಪುಣ್ಯಹೀನನಿಗೆ ದೊರಕುವುದುಂಟೆ ? ಮತ್ತು–೭೧. ಆ ನಗರ ವಿಲಾಸಿನಿಯರ ರೂಪವಿಲಾಸಗಳನ್ನು ಹೀಗೆ ಹೀಗೆಂದು ಬಣ್ಣಿಸಬಲ್ಲ ಚಾತುರ್ಯ ನಾಲಗೆಗೆ ಎಲ್ಲಿಂದ ಬಂದೀತು ? ಅಲ್ಲಿಯ ಮಾಲೆಗಾರ್ತಿಯರು ನಾಗಲೋಕದ ಯುವತಿಯರಿಗಿಂತ ಮಿಗಿಲಾದವರು; ಅಲ್ಲಿ ಗಂಧವರೆಂಯುವ ಹೆಂಗಸು ಕೂಡ ದೇವಲೋಕದ ಸ್ತ್ರೀಯುರನ್ನು ತಮ್ಮ ಚೆಲುವಿನಿಂದ ಮೀರುವರು. ೭೨. ಸುತ್ತುವರಿದು ಮಿರುಗುವ ಕೋಟೆಯ ಗೋಡೆಯೆ ಗಜದಂತ ಗಿರಿಯಂತೆ ಕಂಗೊಳಿಸುವುದು; ಮನೆಬಳಿಯ ಉಪವನವೃಕ್ಷಗಳು ಕಲ್ಪವೃಕ್ಷಗಳಂತೆ ಒಪ್ಪುವುವು; ಶ್ರೀಮಂತ ದಂಪತಿಗಳು ಭೋಗಭೂಮಿಯ ದಂಪತಿಗಳಿಗೆ ಸಮಾನರೆನಿಸುವರು; ಹೀಗೆ ಆ ನಗರವು ದೇವಕುರುವೆಂಬ ಭೋಗಭೂಮಿಯಂತೆ ಶೋಭಿಸುವುದು. ೭೩. ಜಿನವಿಗ್ರಹದ ಅಭಿಷೇಕೋತ್ಸವ ದಲ್ಲಿ ಹೊಮ್ಮುವ ಭೇರಿಗಳ ನಿನಾದದಿಂದಲೂ, ಮುನಿಸಮುದಾಯಗಳು ನಡೆಸುವ ಅಧ್ಯಯನ ಯೋಗ್ಯ ಪ್ರವಚನ ಹಾಗು ಉಪನ್ಯಾಸಗಳ ನಿರ್ಘೋಷದಿಂದಲೂ, ಅರ್ಚನೆ ಮಾಡುತ್ತ ಭಕ್ತಜನರು ಹಾಡುವ ರೂಪಸ್ತವ, ಗುಣಸ್ತವ, ವಸ್ತುಸ್ತವ ಗಳೆಂಬ ಮೂರು ಬಗೆಯ ಸ್ತೋತ್ರಧ್ವನಿಯಿಂದಲೂ ಆ ನಗರದ ಬಸದಿಗಳು ವಿಜೃಂಭಿಸುವುವು. ಅದಲ್ಲದೆ–೭೪. "ಇದು ಶ್ರೇಯಸ್ಕರವಾದ ಸ್ಥಾನವೆಂದು ಮೋಕ್ಷಾರ್ಥಿಯಾದ ಎಂಟನೆಯ ತೀರ್ಥಂಕರನು ತನ್ನ (ದೇವಲೋಕದ)

ರ್ವ್ವಯಸೌಖ್ಯೋನ್ಮುಖನೆಂದು ತನ್ನಗರಿ ತಾಂ ಮೆಯ್ವೆರ್ಚಿ ಸರ್ವಾರ್ಥ
ಸಿದ್ಧಿಯುಮಂ ಮೂದಲಿಪಂತುಟಾಯ್ತನುದಿನಂ ಸಂಗೀತಕಧ್ವಾನದಿಂ ॥ ೭೪

ಅಂತಪರ್ಯಂತಸಂಪದಪ್ರಹಸಿತಪುರುಹೂತಪುರಮಪ್ಪ ಚಂದ್ರಪುರದ ಮಧ್ಯದೊಳ್ ತತ್ಪುರಶ್ರೀಯ ನಾಭೀವಳಯದಂತೆ ವಿಳಸಿತಮಾದ ರಾಜನಿಳಯದೊಳಗೆ

ಇದು ದಲಪೂರ್ವಪೂರ್ವಕುಧರಂ ದಿವದಿಂ ಜಿನಚಂದ್ರನಿಲ್ಲಿ ಬಂ ।
ದುದಯಿಕುಮೆಂದು ಮುನ್ನಮೆ ಬಿಡೌಜನೆ ನಿರ್ಮಿಸುವೋಜೆಗೋಜನಾ ॥
ದುದನಜೆಪುತ್ತುಮಿರ್ಪುದನಿಶಂ ಕರುಮಾಡಮಮಾನುಷಕ್ರಿಯಾ ।
ಸ್ಪದನವರತ್ನಕೂಟವಿಘಟದ್ರಸಚಿತ್ರವಿಚಿತ್ರಲೇಖೆಯಿಂ ॥ ೭೫

ಅದಂ ಬಳಿಸಿ

ತೀರ್ಥಕರಜನ್ಮಕಲ್ಯಾ ।
ಣಾರ್ಥಂ ಬಂದಿಂತೆ ನೆಲಸಿದಪುವಿಲ್ಲಿ ಮರು ॥
ತ್ಸಾರ್ಥವಿಮಾನೋತ್ಕರಮೆಂ ।
ಬರ್ಥಮನನುಕರಿಪುವರಸಿಯರ ಮಾಡಂಗಳ್ ॥ ೭೬

ಲಲಿತಹರಿನೀಲಹರ್ಮ್ಯಾ ।
ವಲಿಶಿಖರೋಚ್ಚಳಿತರುಚಿಗಳಿರುಳೊದವಿ ನಭ ॥
ಸ್ಥಲದೊಳೊಡರ್ಚುವುದಿಂದುವ ।
ಮೊಲಕ್ಕೆ ಕಟ್ಟಿಲೆಯಿದೆನಿಪ ಮೊಲಗಟ್ಟಿಲೆಯಂ ॥ ೭೭

ಸುಖವನ್ನು ಗಣನೆಗೆ ತಾರದೆ ನನ್ನಲ್ಲಿಗೆ ಬರಲಿರುವನು. ಎಂದಮೇಲೆ ಇನ್ನೇನು ಹೇಳುವುದು ?" ಎಂದ ಆ ನಗರವು ಮೈಂಯುಬ್ಬಿ ಸರ್ವಾರ್ಥಸಿದ್ಧಿಯೆಂಬ ಅನುತ್ತರೆಯನ್ನು ಕೂಡ ಮೂದಲಿಸುವುದೊ ಏನೊ ಎಂಬಂತೆ ಪ್ರತಿದಿನ ಸಂಗೀತನಿನಾದವು ಹೊಮ್ಮುತ್ತಿರುವುದು. ವ॥ ಹೀಗೆ ತನ್ನ ಸೀಮಾತೀತವಾದ ವೈಭವದಿಂದ ಇಂದ್ರನ ರಾಜಧಾನಿಯನ್ನು ಅಪಹಾಸ್ಯ ಮಾಡುವ ಚಂದ್ರಪುರದ ಮಧ್ಯದಲ್ಲಿ ಆ ಪುರಲಕ್ಷ್ಮಿಯ ಹೊಕ್ಕುಳಂತೆ ಅರಮನೆಯಿರುವುದು. ಅದರೊಳಗೆ–೭೫. "ಇದು ಅಪೂರ್ವವಾದ ಉದಯಾಚಲ; ಜಿನನೆಂಬ ಚಂದ್ರನು ದೇವಲೋಕದಿಂದ ಬಂದು ಇಲ್ಲಿ ಉದಯವಾಗುವನು" ಎಂದು ಮುಂಚಿತವಾಗಿ ಅದನ್ನು ಸಜ್ಜುಗೊಳಿಸಲು ಇಂದ್ರನೆ ಆ ಕೆಲಸದ ಹೊಣೆಹೊತ್ತಿರುವುದನ್ನು ತಿಳಿಸುವುದೊ ಏನೊ ಎಂಬಂತೆ ಮನುಷ್ಯರಿಗೆ ಅಸಾಧ್ಯವೆನಿಸಿದ ಕುಶಲತೆಯಿಂದ ನಿರ್ಮಿಸಿದ ನವರತ್ನಮಯ ಶಿಖರಗಳಿಂದಲೂ ರಸಚಿತ್ರಗಳಿಂದಲೂ, ಆಶ್ಚರ್ಯಕರವಾಗಿ ತೋರುವ (ಅರಸನ) ಮಹಲು ಕಂಗೊಳಿಸುವುದು. ಅದನ್ನು ಸುತ್ತುವರಿದು–೭೬. ತೀರ್ಥಂಕರನ ಜನ್ಮಕಲ್ಯಾಣೋತ್ಸವಕ್ಕಾಗಿ ಬಂದು ದೇವವಿಮಾನಗಳು ಹೀಗೆಯೆ ಇಲ್ಲಿ ನೆಲಸುವುವೆಂದು ತೋರುವಂತೆ ಅರಸಿಯರ ಉಪ್ಪರಿಗೆಗಳು ಒಪ್ಪುವುವು. ೭೭. ಅಲ್ಲಿಯ ಉನ್ನತವಾದ ಭವನಗಳ ಇಂದ್ರನೀಲ ನಿರ್ಮಿತವಾದ ಕಲಶಗಳು ನೀಲಪ್ರಭೆಯನ್ನು ಆಕಾಶದಲ್ಲಿ ಹರಡಿ, ಚಂದ್ರಬಿಂಬದೊಳಗಿನ

ಮತ್ತಮಲ್ಲಿ

ಮರಕತವೇಶ್ಮರಶ್ಮಿಯರುಣಾಶ್ಮಗೃಹದ್ಯುತಿಯಿಂದ್ರನೀಳಮಂ।
ದಿರರುಚಿ ಹೇಮದಾಮಘ್ರಣಿ ಮೌಕ್ತಿಕಮಂಡಪಕಾನ್ತಿಯೆತ್ತಲುಂ॥
ಪರಿಕಲಿಪನ್ನೆಗಂ ದೆಸೆಯುಮಂಬರಮುಂ ನವಚಿತ್ರಚಿತ್ರಿತಾಂ।
ಬರಪಿಹಿತಂಗಳಾದ ತೆಱದಿಂ ಸೆಱೆಯಿಟ್ಟುವು ನೋಟ್ಟ ದಿಟ್ಟಿಯಂ॥ ೭೮

ಮತ್ತಮಾ ರಾಜಭವನಂ ಪದ್ಮರಾಗಮಾಣಿಕ್ಯಕಳಶಪಙ್ಕ್ತಿಗಳಿಂ ರಾಜಹಂಸವನದಂತೆಯುಂ, ನವರತ್ನರಚಿತತೋರಣಂಗಳಿಂ ಸಶಕ್ರಚಾಪಶತದಂತೆಯುಂ, ಚಂಚಳಧವಳಕೇತನಪ್ರತಾನದಿಂ ಸಸುರಾಪಗಾ ಫೇನಸಂತಾನದಂತೆಯುಂ, ಸಂತತೋಚ್ಚಳಿತಕಾಳಾಗರುಧೂಪಧೂಮದಿಂ ಸಜಳಕಾದಂಬಿನೀಕದಂಬ ದಂತೆಯುಂ, ಸಮುತ್ತಂಭಿತಶಾತಕುಂಭಮಯೂರವಾಸಯಷ್ಟಿಗಳಿಂ ಸತಟಿಲ್ಲತಾವಿತಾನದಂತೆಯುಂ, ನಿರಂತರಚಂದ್ರಕಾಂತವಳಭೀವಳಯದಿಂ ಸಶಾರದಾಭ್ರಸಮುದಯದಂತೆಯುಂ, ಪ್ರಾಸಾದಾಂತರೋಡ್ಡೀನ ಪಾರಾವತಪಙ್ಕ್ತಿಯಿಂ ಸನೀಳೇಂದೀವರವಂದನಮಾಲಾವಳಿಯಂತೆಯುಂ, ಅನಿಯಂತ್ರಯಂತ್ರ ಧಾರಾಗೃಹಂಗಳಿಂ ಸವರ್ಷಾಸಮಯದಂತೆಯುಂ, ಲಂಬಮಾನಮುಕ್ತಾದಾಮನಿಕರದಿಂ ಸತಾರಕಪ್ರಕರ ದಂತೆಯುಂ, ಅನವರತಸಂಗೀತನಿನದ ಪರವಶಾಸ್ಪಂದಯಾಮಸಿಂಧುರಂಗಳಿಂ ಸನೀಳಾಚಳಕುಳ ದಂತೆಯುಂ, ಪ್ರಮದವನಬಾಳಕದಳೀದಳಪ್ರಭಾಪ್ರಸರದಿಂ ಸಶಾದ್ವಲವಿಸರದಂತೆಯುಮೆಸೆವುದು ಅಂತು ಮಲ್ಲದೆಯುಂ

ಮೊಲಕ್ಕೆ ಕತ್ತಲೆಯೆಂಬ ಭ್ರಾಂತಿಯನ್ನುಂಟು ಮಾಡುವುವು. ಮತ್ತು ಅಲ್ಲಿ–೭೮. ಹಸಿರು ರತ್ನದ ನಿವಾಸಗಳು, ಮಾಣಿಕ್ಯದ ಮನೆಗಳು, ಇಂದ್ರನೀಲದ ಮಹಲುಗಳು, ಚಿನ್ನದ ಗೃಹಗಳು, ಮುತ್ತಿನ ಮಂಡಪಗಳು, ತಂತಮ್ಮ ಪ್ರಭೆಯನ್ನು ವಿಶಾಲವಾಗಿ ಬೀರುತ್ತಿದ್ದುವು. ಅದರಿಂದ ದಿಕ್ಕುಗಳೂ ಆಕಾಶವೂ ನವೀನವಾದ ಚಿತ್ರಗಳಿಂದೊಡ ಗೂಡಿದ ವಸ್ತ್ರವನ್ನು ಹೊದೆದುಕೊಂಡಂತೆ ರಮ್ಯವಾಗಿ ನೋಟಕರ ಕಣ್ಣುಗಳನ್ನು ಸೆರೆಹಿಡಿಯುತ್ತಿದ್ದುವು. ವ॥ ಆ ಅರಮನೆಯ ಪದ್ಮರಾಗಮಾಣಿಕ್ಯದ ಕಳಸಗಳಿಂದ ರಾಜಹಂಸಗಳ ವನದಂತೆಯೂ, ನವರತ್ನಮಯವಾದ ತೋರಣಗಳಿಂದ ನೂರಾರು ಇಂದ್ರಧನುಗಳನ್ನು ಅಳವಡಿಸಿಕೊಂಡಂತೆಯೂ, ಪಟಪಟಿಸುವ ಬಿಳಿಯ ಧ್ವಜಗಳಿಂದ ನೊರೆವಿಂಡಿನೊಡನೆ ಕೂಡಿದ ದೇವಗಂಗೆಯಂತೆಯೂ, ಸತತವಾಗಿ ಮೇಲೇರುವ ಕಾಳಾಗುರುಧೂಪದ ಹೊಗೆಯಿಂದ ನೀರು ಮೋಡಗಳ ಸಮೂಹದಂತೆಯೂ, ನವಿಲು ಗಳಿಗಾಗಿ ನಿರ್ಮಿಸಿದ ಚಿನ್ನದ ಶಲಾಕಾಸನಗಳಿಂದ ಬಳ್ಳಿಮಿಂಚಿನ ಗಗನದಂತೆಯೂ, ಚಂದ್ರಕಾಂತಶಿಲೆಯ ಸೂರುಗಳಿಂದ ಶರತ್ಕಾಲದ ಮೇಘಮಂಡಲದಂತೆಯೂ, ಅರಮನೆಯ ಆವರಣದಲ್ಲಿ ಹಾರ್‍ಆಡುವ ಪಾರಿವಾಳಗಳ ಸಾಲುಗಳ ಕನ್ನೈದಿಲೆಗಳ ಹಲವಾರು ತೋರಣ ಬಿಗಿದಂತೆಯೂ, ನಿರಂತರವಾಗಿ ನೀರು ಚಿಮ್ಮುವ ಧಾರಾಗೃಹ ಗಳಿಂದ ಮಳೆಗಾಲದಂತೆಯೂ, ಇಳಿಬಿಟ್ಟ ಅನೇಕ ಮುತ್ತಿನ ಮಾಲೆಗಳಿಂದ ನಕ್ಷತ್ರ ಸಮೂಹವನ್ನೊಳಗೊಂಡಂತೆಯೂ, ನಿರಂತರವಾದ ಸಂಗೀತ ನಿನಾದಕ್ಕೆ ಮೈಮರೆತು

ಸೂಕ್ಷ್ಮತರಚಿತ್ರನಿಧಿ ಮೇ ।
ರುಕ್ಷ್ಮಾಧರತುಂಗಹರ್ಮ್ಯಮೆನಿಪರಮನೆಯಂ ॥
ಲಕ್ಷ್ಮೀನಿಳಯಮನೀಕ್ಷಿಸಿ ।
ಪಕ್ಷ್ಮಸ್ಪಂದನಮನಾರೊ ಮಱಿಯದರದಱೊಳ್ ॥ ೭೯

ಆ ರಾಜಕುಳದೊಳಖಿಳಜಿ ।
ನಾರಾಧ್ಯಂ ಸುಖದಿನಿರ್ಪನುನ್ಮಥಿತಸಮ ॥
ಸ್ತಾರಿ ಮಹಾಸೇನಂ ವೃಜಿ ।
ನಾರಿ ಮಹಾಸೇನನೆಂಬನವನೀನಾಥಂ ॥ ೮೦

ಸರಳಕರಪಾತಮಂ ಬಿ ।
ತ್ತರಿಸಿಯುಮಾಟವಿಕಜನಿತಬಾಧೆಗಳಂ ಸಂ ॥
ಹರಿಸಿಯುಮನುವಶೆಯಂ ಮಾ ।
ಡಿರಿಸಿದನಾ ರಾಜಕುಂಜರಂ ಕುಂಭಿನಿಯಂ ॥ ೮೧

ಮತಿಯೊಳಕೆಯ್ದುದು ನಾಲ್ಕುಂ ।
ಕ್ಷಿತಿಪತಿವಿದ್ಯೆಗಳನಿಂದುನಿರ್ಮಳಕೀರ್ತಿ ॥
ದ್ಯುತಿಯೊಳಕೆಯ್ದುದು ನಾಲ್ಕುಂ ।
ವಿತತದಿಶಾಸೀಮೆಗಳನಿಳಾವಲ್ಲಭನಾ ॥ ೮೨

ನಿಂತ ಜಾವದಾನೆಗಳಿಂದ, ನೀಲಪರ್ವತಗಳನ್ನು ಒಡಗೊಂಡಂತೆಯೂ, ಪ್ರಮದವನದಲ್ಲಿಯ ಎಳವಾಳೆಯ ಸುಳಿಯೆಲೆಯ ಕಾಂತಿಪ್ರಸಾರದಿಂದ ಹಸಿರುಹುಲ್ಲಿನ ಮೈದಾನದಂತೆಯೂ ಶೋಭಿಸುವುದು. ಅಷ್ಟೆ ಅಲ್ಲದೆ_ ೭೯. ಮೇರುಪರ್ವತದಂತೆ ಎತ್ತರವಾಗಿಯೂ, ಕುಸುರಿಗೆಲಸದ ಚಿತ್ರಸಮೂಹ ದಿಂದಲೂ ಲಕ್ಷ್ಮಿಯ ನೆಲೆವೀಡೆನಿಸಿದ ಆ ಸುಂದರವಾದ ಅರಮನೆಯನ್ನು ನೋಡುವಾಗ ರೆಪ್ಪೆ ಹೊಯ್ಯುವುದನ್ನೆ ಮರೆಯದವರು ಯಾರು ? ೮೦. ಸಕಲ ಶತ್ರುಸೈನ್ಯಗಳನ್ನು ಸೋಲಿಸಿದವನೂ, ಪಾಪವೈರಿಯೂ, ಸರ್ವಜನಪೂಜ್ಯನೂ ಆದ ಮಹಾಸೇನನೆಂಬ ಅರಸನು ಆ ರಾಜಭವನದಲ್ಲಿ ಸುಖದಿಂದಿರುವನು. ೮೧. "ಸರಳಕರಪಾತಮಂ ಬಿತ್ತರಿಸಿ" (೧. ಮೃದುವಾಗಿ ಸೊಂಡಿಲಿಂದ ನೇವರಿಸಿ ೨. ಭಾರವಾಗದಂತೆ ಕರಗಳನ್ನು ವಿಧಿಸಿ), "ಆಟವಿಕಜನಿತ ಬಾಧೆ" (೧. ಕಾಡಿನಲ್ಲಿ ಒದಗುವ. ೨. ಕಾಡಿನ ಜನರಿಂದ ಒದಗುವ) ಬಾಧೆಗಳನ್ನು ನಿವಾರಿಸಿ, ನಾಯಕಗಜದಂತೆ ಆ ರಾಜಶಿರೋಮಣಿಯು "ಕುಂಭಿನಿ"ಯನ್ನು (೧. ಹೆಣ್ಣಾನೆ ಯನ್ನು. ೨. ಭೂಮಿಯನ್ನು ಎಂದರೆ ಪ್ರಜೆಗಳನ್ನು) ಒಲಿಸಿಕೊಂಡು ಅಧೀನಪಡಿಸಿ ಕೊಂಡನು. ೮೨. ಆ ಭೂಪತಿಯ ಬುದ್ಧಿಶಕ್ತಿಯು ನಾಲ್ಕು ರಾಜವಿದ್ಯೆಗಳನ್ನು ಸಾಧಿಸಿಕೊಂಡಿತು; ಚಂದ್ರನಂತೆ ನಿರ್ಮಲವಾದ ಆತನ ಖ್ಯಾತಿ ನಾಲ್ಕು

ಒಂದಸಿಯ ಧಾರೆಯೊಳ್ ಸಮ ।
ಸಂದೀಷಜ್ಜಳದಿನಳವಿಗಳಿದರಿಭೂಭೃ ॥
ತ್ಸಂದೋಹದ ಕಾಯ್ಪಂ ಸಲೆ ।
ಮಾಂದಿಸುವಂ ನೃಪನ ಚರಿತಮೇನಚ್ಚರಿಯೋ ॥ ೮೩

ಕರಕಮಳಂ ಮುಖಕಮಳಂ ।
ಚರಣಕಮಳಮಮಳನಯನಕಮಳಂ ತನ್ನೊಳ್ ॥
ಕರಮೊಪ್ಪೆ ನೃಪಂ ಕಮಳಾ ।
ಕರದಂದದಿನೆಯ್ದೆ ಕಮಳೆಗಾಲಯಾಮಾದಂ ॥ ೮೪

ಸುರಭಿಯ ತಾಯ್ಮನೆಯಾ ಸಿ ।
ದ್ಧರಸದ ಬಗರಗೆ ಸುರಾವನೀಜದ ಬೀಜಂ ॥
ಪರುಸದ ಕಣಿ ಚಿಂತಾಮಣಿ ।
ಯ ರೋಹಣಂ ರಾಜವರ್ಯನೆಸೆವೌ ದಾರ್ಯಂ ॥ ೮೫

ಈಂದನಿಯಿಂದೆ ದೇವಗಣಿಕಾತತಿಯಾತನ ಗೀತಮಂ ನಿಜಾ ।
ನಂದದೆ ಪಾಡೆ ಕೇಳಲೆರಡುಂ ಕಿವಿಯೆಯ್ದದೆ ತನ್ನ ದೃಕ್ಸಹ ॥
ಸ್ರಂ ದಿಟದಿಂದೆ ಕರ್ಣಚಯಮಾಗದೆ ನಿಷ್ಫಲಮಾದುದೆಂದು ಸಂ ।
ಕ್ರಂದನನೆಯ್ದೆ ಕಣ್ಗೆ ಕಿಸುಗಣ್ಣುವನಾತ್ಮಸಭಾಂತರಾಳದೊಳ್ ॥ ೮೬

ದಿಗಂತಗಳನ್ನೂ ಒಳಪಡಿಸಿಕೊಂಡಿತು. ೮೩. ಒಂದಷ್ಟು ಖಡ್ಗದ ಧಾರೆಯಲ್ಲಿರುವ ಒಂದಿಷ್ಟೆ ಜಲದಿಂದ (ಪ್ರಭೆಯಿಂದ) ಅಪರಿಮಿತವಾದ ಶತ್ರುರಾಜರ ಪ್ರತಾಪವನ್ನು ಆ ರಾಜನು ನಂದಿಸಿಬಿಡುವನು. ಆತನ ನಡವಳಿಕೆಯು ಎಷ್ಟು ಆಶ್ಚರ್ಯಕರ ವಾದುದು ! ೮೪. ಕೈಗಳು ಕಮಲ, ಮುಖಗಳು ಕಮಲ, ಪಾದಗಳೂ ಕಮಲ, ಕಣ್ಣುಗಳೂ ಕಮಲ– ಹೀಗೆ ಎಲ್ಲವೂ ಕಮಲಗಳಾಗಿ ಒಪ್ಪುತ್ತಿರಲು ಆ ಅರಸನು ಕಮಲ ಸರೋವರದಂತೆ ಲಕ್ಷ್ಮಿಗೆ ಆಶ್ರಯವಾದನು. ೮೫. ಆ ರಾಜಶ್ರೇಷ್ಠನ ಔದಾರ್ಯವು ಕಾಮಧೇನುವಿನ ಜನ್ಮಭೂಮಿ, ಸಿದ್ಧರಸದ ಸರಸ್ಸು, ಕಲ್ಪದ್ರುಮದ ಬೀಜ, ಸ್ಪರ್ಶಮಣಿಯ ಕಣಿ ಹಾಗು ಚಿಂತಾಮಣಿಯ ಪರ್ವತ ಎನಿಸಿತು. ೮೬. ಅಪ್ಸರೆಯರು ಮಧುರ ಧ್ವನಿಯಿಂದ ಆ ಅರಸನನ್ನು ಹೊಗಳಿ ಹಾಡುತ್ತಿರ ಲಾಗಿ, ಕೇಳುವುದಕ್ಕೆ ಎರಡು ಕಿವಿ ಸಾಲದೆನಿಸಿ, ಸಭೆಯಲ್ಲಿ ಕುಳಿತ ಇಂದ್ರನು "ನನಗೆ ಸಾವಿರ ಕಿವಿಗಳಿರಬೇಕಾಗಿತ್ತು. ಅದಕ್ಕೆ ಬದಲಾಗಿ ಸಾವಿರ ಕಣ್ಣು ಪಡೆದುದು ವ್ಯರ್ಥವಾಯಿತು" ಎಂದು ತನ್ನ ಕಣ್ಣುಗಳ ಮೇಲೆ ಕೋಪ

ಅದಲ್ಲದೆಯುಂ

ಇರದೆ ನಿಜಪಕ್ಷಪಾತದೆ ।
ನೆರೆದಂತಾ ರಾಜಹಂಸನೊಳ್ ಸುಚರಿತನೊಳ್ ॥
ಚಿರಮಿರ್ಪಳ್ ರಾಜ್ಯಶ್ರೀ ।
ಕರದೆಸೆವುದ್ದಂಡಪುಂಡರೀಕದ ನೆಟಿಲೊಳ್ ॥ ೮೭

ಸ್ಥಿರೆಯಾದಳ್ ಧರೆಯೀಗಳೆಂಬ ಘನದೋರ್ವಿಕ್ರಾಂತಮಿಕ್ಷ್ವಾಕುಬಂ ।
ಧುರವಂಶಂ ದೊರೆವೆತ್ತುದೆಂಬ ವಿಮಳಾಚಾರಪ್ರಭಾವಂ ಜಗ ॥
ದ್ಗುರುಗಂ ತಾಂ ಗುರುವೆಂಬನೂನತರಪುಣ್ಯಂ ಸಾರ್ವ ಸೈಪಿಂಗೆ ಭೂ ।
ಪರೊಳಾರ್ ನೋಂತರೊ ಮುನ್ನೆ ಭಾವಿಸೆ ಮಹಾಸೇನಾಧಿಪಂ ನೋಂತುದಂ ॥ ೮೮

ಅಂತೆನಿಸಿ ನೆಗಳ್ದ ಜಗತೀ ।
ಕಾಂತನ ಮಾದೇವಿ ಲಕ್ಷ್ಮಣಾದೇವಿ ಸಮ ॥
ಸ್ತಾಂತಃಪುರಪರಮೇಶ್ವರಿ ।
ಮಂತಣದೆಡೆವೀಡು ಚದುರ ಘಟ್ಟಿಜವೆನಿಪಳ್ ॥ ೮೯

ಕನಕಾಂಭೋಜರಜಂ ವಸಂತಪವನಂ ಚಾಂದ್ರೀಕಳಾಮಾಳೆ ಮೋ ।
ಹನಯಂತ್ರಸ್ಥನಭಂ ಸುಧಾರಸಮಿವುರ್ವೀವಾಯುತೇಜೋಂಬರಾಂ ॥

ಗೊಳ್ಳುವನು. ಅದಲ್ಲದೆ–೮೭. ಈ ರಾಜನು "ರಾಜಹಂಸ" (೧. ಶ್ರೇಷ್ಠವಾದ ಒಂದು ಹಂಸವರ್ಗಕ್ಕೆ ಸೇರಿದ ಜಲಪಕ್ಷಿ. ೨. ರಾಜರಲ್ಲಿ ಶ್ರೇಷ್ಠನಾದವನು) ಹಾಗು "ಸುಚರಿತ" (೧. ಚೆಲುವಾದ ನಡಗೆಯುಳ್ಳದು. ೨. ಪುಣ್ಯವಂತನು); ಈತನಿಗೆ ಇರುವುದು "ಉದ್ದಂಡ ಪುಂಡರೀಕ" (೧. ಉದ್ದವಾದ ನಾಳವುಳ್ಳ ಕಮಲ. ೨. ಎತ್ತರವಾದ ದಂಡವುಳ್ಳ ಬೆಳ್ಗೊಡೆ) ಎಂದು ರಾಜ್ಯವೆಂಬ ಲಕ್ಷ್ಮಿ ಪಕ್ಷಪಾತದಿಂದ ಅದರ ನೆಳಲಲ್ಲಿ ಸ್ಥಿರವಾಗಿ ಇರುವಳು. [ಕಮಲದಲ್ಲಿ ಹುಟ್ಟಿದವಳಾದ ಲಕ್ಷ್ಮಿಗೆ, ರಾಜಹಂಸ; ಬಿಸನಾಳ ಹಾಗು ಕಮಲಗಳಲ್ಲಿ ಪಕ್ಷಪಾತವಿರುವುದು ಸ್ವಾಭಾವಿಕ, ಪುಣ್ಯವಂತರ ಬಳಿಗೇ ಸಾರುವುದು ಅವಳ ಸ್ವಭಾವ.] ೮೮. ಈಗ ಭೂಮಿ ಸ್ಥಿರೆಯಾದಳೆಂಬ, ಪ್ರಚಂಡವಾದ ಬಾಹುಬಲದಿಂದ ಪ್ರಖ್ಯಾತವಾದ ಇಕ್ಷ್ವಾಕುವಂಶಕ್ಕೆ ಇಂದು ಶೋಭೆ ಉಂಟಾಯಿತೆಂಬ, ಪರಿಶುದ್ಧವಾದ ಚಾರಿತ್ರವುಳ್ಳ ಜಗದ್ಗುರುವಿಗೆ ತಾನು ತಂದೆಯಾಗುವ ಅತಿಶಯ ಭಾಗ್ಯ ಬಂದೊದಗಿತೆಂಬ– ಇಂತಹ ಪುಣ್ಯವನ್ನು ಮಹಾಸೇನ ರಾಜನು ಗಳಿಸಿಕೊಂಡಂತೆ ಈ ಮುನ್ನ ಇನ್ನಾರು ಗಳಿಸಿಕೊಂಡರು? ೮೯. ಹೀಗೆ ಪ್ರಸಿದ್ಧನಾಗಿ ಮಹಿಮೆಯನ್ನೊಳಗೊಂಡ ಜಗತ್ ಪ್ರಭುವಿನ ಪಟ್ಟದ ರಾಣಿ ಲಕ್ಷ್ಮಣಾದೇವಿ; ಆಕೆ ಸಮಸ್ತ ರಾಣಿವಾಸದ ಮಹೇಶ್ವರಿ, ಮಂತ್ರಾಲೋಚನೆಯ ನೆಲೆವೀಡು, ಹಾಗು ಚಾತುರ್ಯದ ಘಟ್ಟಿ ಎನಿಸುವಳು. ೯೦. ಹೊಂದಾವರೆಯ ಪರಾಗ, ವಸಂತದ ಗಾಳಿ, ಚಂದ್ರನ ಕಲಾ ಸಮೂಹ, ಮೋಹನಯಂತ್ರಸ್ಥವಾದ ಆಕಾಶ, ಅಮೃತರಸ– ಇವುಗಳೇ ಪೃಥಿವ್ಯಪ್ತೇಜ ಮೊದಲಾದ ಪಂಚಭೂತ

ಬುನಿಕಾಯಪ್ರತಿರೂಪಭೂತನಿಚಯಂ ತಾಮಾಗೆ ಕಾಮಾಂಬುಜಾ ।
ಸನನಾ ಕಾಂತೆಯ ಕಾಯದೊಳ್ ನೆರೆಪಿದಂ ರೂಪಕ್ರಿಯಾಪ್ರೌಢಿಯಂ ॥ ೬೦

ಮತ್ತಂ

ಸ್ಮರಮದಶಕ್ತಿ ಚಿತ್ತಭವಮೋಹನವಿದ್ಯೆ ರತೀಶಕೀರ್ತಿ ಸುಂ ।
ದರಹೃದಯಪ್ರಭೂತಕುಲದೇವತೆ ಮನ್ಮಥರಾಜ್ಯಲಕ್ಷ್ಮಿ ಶಂ ॥
ಬರಹರಶೌರ್ಯಸಿದ್ಧಿಯೆನಿಪೊಂದು ವಿಳಾಸದಿನಾಕೆ ತಾನಧಃ ।
ಕರಿಸುವಳಿದ್ಧಸಿದ್ಧಖಚರಾಮರನಾಗವಧೂಕದಂಬಮಂ ॥ ೬೧

ಸ್ಮಿತಮಧುರಂ ಮುಖಂ ವಿಮುಖವೃತ್ತಿಯನಾರ್ಗೆ ಕಟಲ್ಚದುತ್ಕುಚ ।
ದ್ವಿತಯಭರಾವಳಂಬಿಯೆರ್ದೆಯಾರೆರ್ದೆಗೀಯದು ಚೋದ್ಯಮಂ ಸಿತಾ ॥
ಯತನಯನಂಗಳಾರ ನಯನಂಗಳನಾಟಿಸವುನ್ಮರಾಳಸಂ ।
ಗತಿ ಗತಿಭಂಗಮಂ ಪಡೆಯದಾರ್ಗೆ ತದಂಗಜರಾಜ್ಯಲಕ್ಷ್ಮಿಯಾ ॥ ೬೨

ಪಡೆದು ಸರೋಜಜಂ ಸುದತಿಯಾನನಮಂ ಸಮೆಯಲ್ಕೆ ಚಂದ್ರಬಿಂ ।
ಬದ ನಡುವಿರ್ದ ಕೋಮಳಕಳಾವಳಿಯಂ ನೆಱೆ ತೋಡಿ ಕೊಂಡೊಡಂ ॥
ತದು ಬಯಲಾಗೆ ತದ್ಗಗನಕಾರ್ಷ್ಣ್ಯಮಸಾಲಮಿದೆಂದು ಪುತ್ತಿದೆಂ ।
ದಿದು ಮೃಗಮೆಂದು ಕಲ್ಪಿಸುತುಮಿರ್ಪುದು ಸಂಶಯಭಾಜನಂ ಜನಂ ॥ ೬೩

ಗಳ ಪ್ರತಿರೂಪವಾಗಲಾಗಿ ಕಾಮನೆಂಬ ಬ್ರಹ್ಮನು ಅವುಗಳನ್ನು ಅಳವಡಿಸಿ, ತನ್ನ ರೂಪ ನಿರ್ಮಾಣಕೌಶಲದಿಂದ ಆ ಕಾಂತೆಯ ದೇಹದಲ್ಲಿ ಹೊಂದಿಸಿದನು. ಮತ್ತು– ೬೧. ಕಾಮನ ಮದಶಕ್ತಿ, ಮನ್ಮಥನ ಮೋಹನ ವಿದ್ಯೆ, ರತಿರಮಣನ ಕೀರ್ತಿ, ಅನಂಗನ ಕುಲದೇವತೆ, ಮದನನ ರಾಜ್ಯಲಕ್ಷ್ಮಿ, ಮನ್ಮಥನ ಶೌರ್ಯಸಿದ್ಧಿ– ಎನಿಸುವ ಒಂದು ವಿಲಾಸದಿಂದ ಆಕೆ ಪರಮ ಶೋಭಾನ್ವಿತಿಯರಾದ ಸಿದ್ಧ–ಖೇಚರ–ದೇವ–ನಾಗ ವಧುಗಳನ್ನು ಕೀಳುಗೊಳಿಸುವಳು. ೬೨. ನಗೆಗೂಡಿ ಚೆಲುವಾದ ಆ ಮನ್ಮಥ ರಾಜಲಕ್ಷ್ಮಿಯ ಮುಖವು ಯಾರ ವೈರಾಗ್ಯವನ್ನು ಕಳಚದು? ಉನ್ನತವಾದ ಮೊಲೆಗಳ ಭಾರವನ್ನು ಧರಿಸಿದ ಆ ಎದೆ ಯಾರ ಎದೆಗೆ ವಿಸ್ಮಯವನ್ನುಂಟು ಮಾಡದು? ನೀಳವಾದ ಬೆಳ್ಪಿನ ಆ ಕಣ್ಣುಗಳು ಯಾರ ಕಣ್ಣುಗಳನ್ನು ತಣಿಸವು? ಮದಹಂಸದಂತೆ ಚಲಿಸುವ ಆಕೆಯ ನಡೆಗೆ ಯಾರನ್ನು ತಡೆದು ನಿಲ್ಲಿಸದು? ೬೩. ಬ್ರಹ್ಮನು ಆ ಕಾಂತೆಯ ಮುಖವನ್ನು ರಚಿಸುವುದಕ್ಕಾಗಿ ಚಂದ್ರಬಿಂಬದ ನಡುವಿದ್ದ ಕೋಮಲವಾದ ಕಲೆಗಳನ್ನು ಚೆನ್ನಾಗಿ ತೋಡಿ ತೆಗೆದು ಕೊಂಡನು: ಹಾಗೆ ಅದು ತೆರವಾಗಿ ಕಪ್ಪಿಟ್ಟ ಭಾಗವನ್ನು ಆಲವೆಂದೂ, ಹುತ್ತೆಂದೂ,

ವದನಂ ಶಶಾಂಕಶಂಕೆಯ ।
ನೊದವಿಸುತಿರೆ ಸತತಮಾ ಲತಾಂಗಿಯ ಮೆಯ್ಯೊಳ್ ॥
ಸದರಸ್ಮಿತಫೇನಂ ಪೆ ।
ರ್ಚಿದತ್ತಗಣ್ಯಂ ಪಯೋಧಿಯೆನೆ ಲಾವಣ್ಯಂ ॥ ೯೪

ಅದಲ್ಲದೆಯುಂ

ಪೊಳೆವ ದಶನಾಳಿ ಮುಕ್ತಾ ।
ವಳಿ ಮಧ್ಯದ ತರಳಮಣಿಯಿದೆಂದೆನೆ ತತ್ಕೋ ॥
ಮಳೆಯಧರಮಣಿಯನವಯವ ।
ಕುಳಚೂಡಾಮಣಿಯನತನುಚಿಂತಾಮಣಿಯಂ ॥ ೯೫

ಮೊರೆಯದಳಿ ಮುಗಿಯದಬ್ಜಂ ।
ಕೊರಗದ ನನೆಯಂಬು ನೀರೊಳಟ್ಟಿದ ಮೀನಂ ॥
ಚಿರಮೆನೆ ಮಿಸುಗದ ಮಿಂಚಂ ।
ಬರಚರಮಲ್ಲದ ಚಕೋರಮಲರ್ಗಣ್ ಸತಿಯಾ ॥ ೯೬

ಮೂಱುದುವು ಕರ್ವಿನ ಬಿಲ್ ।
ನೀಱಿಯೆರಟ್ಟುವುರ್ವು ಬೆರಸು ತಾಮೆನಗಿನ್ನೀ ॥
ಮೂಱುಂ ಜಗಮುಂ ಗೆಲಲೇ ।
ನಾಱುವೆ ಪೇಟಿಂದು ಕಂತು ಮುಯ್ವಾಂತಿರ್ಪಂ ॥ ೯೭

ಜಿಂಕೆಯೆಂದೂ, ಸಂಶಯದಿಂದ ಜನ ಏನೇನೊ ಕಲ್ಪಿಸುತ್ತಿರುವರು. ೯೪. ಮುಖವು ಚಂದ್ರನೆಂಬ ಸಂಶಯವನ್ನುಂಟು ಮಾಡುತ್ತಿರಲಾಗಿ, ಆ ಬಳ್ಳಿಮೈಯ ಕಾಂತೆಯ ದೇಹದಲ್ಲಿ ಲಾವಣ್ಯವು ಸಮುದ್ರದಂತೆ ಉಕ್ಕಿ, ನಸುನಗೆಯ ರೂಪದಲ್ಲಿ ನೊರೆಯನ್ನು ತೇಲಿಸುವುದು. ಅದಲ್ಲದೆ– ೯೫. ಆಕೆಯ ಮಿಂಚುವ ಹಲ್ಲುಗಳ ಸಾಲು ಮುತ್ತಿನ ಹಾರವೆನಿಸುವುದು; ಅವಯವಗಳಲ್ಲೆಲ್ಲ ಶಿರೋಮಣಿಯಾಗಿ ಮನ್ಮಥನ ಚಿಂತಾಮಣಿಯೆನಿಸಿದ ಅವಳ ಅಧರ ರತ್ನವು ಆ ಹಾರದ ಮಧ್ಯದ ನಾಯಕ ರತ್ನವಾಗಿರುವುದು. ೯೬. ಆ ಸತಿಯ ಅರಳಿದ ಕಣ್ಣುಗಳೆಂದರೆ ಧ್ವನಿ ಮಾಡದ ದುಂಬಿಗಳು, ಮುಚ್ಚಿಕೊಳ್ಳದ ತಾವರೆ; ಬಾಡದ ಪುಷ್ಪಬಾಣ; ನೀರಲ್ಲಿ ಮುಳುಗದ ಮೀನು; ಅಸ್ಥಿರವೆನಿಸದ ಮಿಂಚು; ಆಕಾಶದಲ್ಲಿ ಹಾರಾಡದ ಚಕೋರಗಳು. ೯೭. "ಈ ಸುಂದರಿಯ ಎರಡು ಹುಬ್ಬುಗಳೂ ಜೊತೆಯಾಗಿ ನನಗೀಗ ಮೂರು ಕಬ್ಬಿನ ಬಿಲ್ಲುಗಳಾದವು. ಇನ್ನು ಇವು ಮೂರು ಲೋಕ

ನುಂಗಿ ಮಗುಳ್ದುಗುಳ್ದಪುದು ನೆಱಿ ।
ದಿಂಗಳನಾ ರಾಹುವೆಂಬ ತೆಱದಿಂ ಕುರುಳೊಳ್ ॥
ಸಂಗಳಿಸಿ ಕಣ್ಗೆ ನಾಡೆ ಬೆ ।
ಡಂಗಂ ಬೀಱೆದುದು ಮಿಸುಪ ನೊಸಲಂಗನೆಯಾ ॥ ೯೮

ಅಳವಡೆ ಪರಭಾಗಂಬಡೆ ।
ದೆಳೆಯಳ ಪರಭಾಗದಲ್ಲಿ ಸೋರ್ಮುಡಿ ಸೊಬಗಂ ॥
ತಳೆದೆಸೆದುದು ಕನಕಶಿಳಾ ॥
ತಳಾಗ್ರದೊಳ್ ಮುರಿದು ಪರಿದ ಜಗುನೆಯ ಪೊನಲಂ ॥ ೯೯

ತನುಲತೆಗೆ ಶಾಖೆ ಕರತಳ ।
ವನಜಕ್ಕೆ ಮೃಣಾಳನಾಳಮಕ್ಷಿಭ್ರಮರ ॥
ಕ್ಕೆ ನವೀನಶಿರೀಷಸ್ರಜ ।
ಮೆನೆ ವನಿತೆಯ ದೋರ್ಯುಗಕ್ಕೆ ಪರ್ಯಾಯಂಗಳ್ ॥ ೧೦೦

ತರದಿಂದೆ ಮೂಱು ಸೂೞ್ವರ ।
ಮರಲಂಬಂ ತದಧಿಪತಿಯ ಕಣ್ಗಂ ಮನಕಂ ॥
ಗೆರೆಯಾಣೆಯಿಟ್ಟ ರೇಖೆಗ ।
ಳಿರವಂ ವಳಿರೇಖೆ ತಳೆದುವಳಿಕುಂತಳೆಯಾ ॥ ೧೦೧

ಅಂಗಭವಂ ರೂಢಿಯ ರೂ ।
ಪಿಂಗಂ ಸೊಬಗಿಂಗಮಿಟ್ಟನಮಳ್ಗಳಸಮನು ॥
ತ್ತುಂಗಮನೆನಿಪುದು ಲಲಿತಲ ।
ತಾಂಗಿಯ ನೀರಂಧ್ರಬಂಧುರಸ್ತನಯುಗಳಂ ॥ ೧೦೨

ಗಳನ್ನು ಗೆಲ್ಲಲಾರವೆ ?" ಎಂದು ಮನ್ಮಥನು ಮೈಯುಬ್ಬಿರುವನು. ೯೮. ನುಂಗಿದ ಚಂದ್ರನನ್ನು ರಾಹು ಮರಳಿ ಉಗುಳುತ್ತಿರುವುದೊ ಏನೊ ಎಂಬಂತೆ ಮುಂಗುರುಳೊಡನೆ ಹೊಂದಿಕೊಂಡು ಮಿರುಗುವ ಆ ಚೆಲುವೆಯ ಹಣೆ ಅತಿಶಯವಾದ ಬೆಡಗನ್ನು ಬೀರುವುದು. ೯೯. ಅತಿಶಯ ಶೋಭೆಯನ್ನು ಪಡೆದ ಆ ಯುವತಿಯ ಬೆನ್ನಲ್ಲಿ ಚೆಲುವಾದ ಸೋರ್ಮುಡಿಯು– ಮೇರುಪರ್ವತದ ಮೇಲೆ ಅಂಕು ಡೊಂಕಾಗಿ ಹರಿಯುವ ಯಮುನಾನದಿಯಂತೆ ಒಪ್ಪುವುದು. ೧೦೦. ದೇಹವೆಂಬ ಬಳ್ಳಿಯ ಕೊಂಬೆಗಳು, ಅಂಗೈಯೆಂಬ ತಾವರೆಗಳಿಗೆ ಇರುವ ನಾಳಗಳು, ಕಣ್ಣೆಂಬ ದುಂಬಿಗಳನ್ನು ಆಕರ್ಷಿಸುವ ಹೊಸಬಗೆಯ ಶಿರೀಷ ಕುಸುಮದ ಮಾಲೆಗಳು– ಎಂದು ಆ ವನಿತೆಯ ತೋಳುಗಳನ್ನು ಬೇರೆಬೇರೆಯಾಗಿ ಹೆಸರಿಸುವುದುಂಟು. ೧೦೧. ಆಕೆಯ ಪತಿಯ ಕಣ್ಣಿಗೂ ಮನಕ್ಕೂ ಮನ್ಮಥನು ಮೂರುಸಲ ಇಟ್ಟ ಗೆರೆಯಾಣೆಯ ರೇಖೆಗಳೊ ಏನೊ ಎಂಬಂತೆ ಆ ದುಂಬಿಗುರುಳಿನ ಕಾಂತೆಯ ತ್ರಿವಳಿಗಳು ಇರುವುವು. ೧೦೨. ಆಕೆಯ ಉತ್ಕೃಷ್ಟವಾದ ರೂಪಕ್ಕೂ ವಿಳಾಸಕ್ಕೂ ಮನ್ಮಥನು ಇಟ್ಟ ಉನ್ನತವಾದ ಕಳಸಗಳೋ ಏನೊ ಎಂಬಂತೆ ಆ

ಕೋಮಳೆಯ ಕನಕಕಾಂಚೀ ।
ದಾಮದ ಕೆಂಬರಲ ನುಣ್ಗದಿರ್ ತಿಂಬಿರೆ ನಾ ॥
ಭೀಮಂಡಳಮಿಟಿಸಿದುದಭಿ ।
ರಾಮತೆಯಿಂದುಳ್ಳರಲ್ದ ಬಂದುಗೆಯರಲಂ ॥ ೧೦೩

ಒದೆದಸುಕೆಗಮಿನಿಯಂಗಂ ।
ಮೃದುಪಲ್ಲವಮಂ ಸರಾಗಭಾವಮನೀವೀ ॥
ಸುದತಿಯ ಚಳನತಳಕ್ಕತಿ ।
ಮೃದುತ್ವರಕ್ತತ್ವಮುಚಿತಮೆನೆ ಸೊಗಯಿಸುಗುಂ ॥ ೧೦೪

ಭ್ರೂಚಾಪಕೇಶಪಾಶವಿ ।
ಲೋಚನಶರದಶನಕುಳಿಶಕುಚಚಕ್ರವಿಳಾ ॥
ಸೋಚಿತೆ ಮಾದೇವಿ ಮನೋ ।
ಭೂಚಕ್ರಿಯ ಜಯನಶಾಲೆಯಂದದಿನಿರ್ಪಳ್ ॥ ೧೦೫

ಅದಲ್ಲದೆಯುಂ,

ಕಂಪನೆ ಪೂಗಳೊಳ್ ತೆಗೆದಗುರ್ವಿಸೆ ಸೂಡುವಲಕ್ತಕಂಗಳೊಳ್ ।
ಕೆಂಪನೆ ಕೊಂಡು ಕೇಸಡಿಯನೂಡುವ ರತ್ನವಿಭೂಷಣಂಗಳೊಳ್ ॥
ಸೊಂಪನೆ ತಾನಗಲ್ಚಿ ತೊಡವಾಗಿರೆ ಮಾಡುವಲಂಪು ಚಿತ್ತದೊಳ್ ।
ಪೊಂಪುಟಿಯೆಂದೊಡೇವೊಗಟ್ವೆಸಾ ಲಲಿತಾಂಗಿಯ ಸೌಕುಮಾರ್ಯಮಂ ॥ ೧೦೬

ಚೆಲುವೆಯ ನಿಬಿಡವೂ ಸುಂದರವೂ ಆದ ಮೊಲೆಗಳಿರುವುವು. ೧೦೩. ಆ ಕೋಮಲೆಯ ಚಿನ್ನದ ಉಡೆನೂಲ ಮಾಣಿಕ್ಯದಿಂದ ಹೊಮ್ಮುವ ನಯವಾದ ಕಾಂತಿ ತುಂಬಿರಲಾಗಿ ಆಕೆಯ ಹೊಕ್ಕಳ ಸುಳಿಯು ತುಂಬ ಅರಳಿದ ಬಂಧೂಕ ಪುಷ್ಪದ ಶೋಭೆಯನ್ನು ಕೂಡ ಧಿಕ್ಕರಿಸುವುದು. ೧೦೪. ಒದೆಯಿಂದ ಅಶೋಕವೃಕ್ಷಕ್ಕೆ ಸುಕುಮಾರ ಪಲ್ಲವಗಳನ್ನೂ, ತನ್ನ ರಮಣನಿಗೆ ಅನುರಾಗ ಭಾವವನ್ನೂ ಒದಗಿಸುವ ಈ ಸತಿಯ ಪಾದಗಳಿಗೆ ಅತಿಶಯವಾದ ಮಾರ್ದವವೂ ಅತಿಯಾದ 'ರಕ್ತತ್ವ" (೧. ಕೆಂಪುಬಣ್ಣ, ೨. ಅನುರಾಗ)ವೂ ಉಚಿತವೆ ಎಂಬಂತೆ ಒಪ್ಪುವುವು. ೧೦೫. ಹುಬ್ಬುಗಳೆ ಬಿಲ್ಲು, ಕೇಶವೆ ಪಾಶ, ಕಣ್ಣುಗಳೆ ಬಾಣ, ಹಲ್ಲುಗಳೆ ವಜ್ರಾಯುಧ, ಮೊಲೆಗಳ ಚಕ್ರ– ಹೀಗೆ ಇವುಗಳ ಅತಿಶಯವನ್ನು ಒಡಗೊಂಡ ಆ ಮಹಾರಾಣಿಯು ಮದನನೆಂಬ ಚಕ್ರವರ್ತಿಯ ಶಸ್ತ್ರಾಗಾರದಂತೆ ಇರುವಳು. ಅದಲ್ಲದೆ– ೧೦೬ ಹೂಗಳು ಬೇಡ, ಅವುಗಳ ಪರಿಮಳವನ್ನಷ್ಟೆ ತೆಗೆದು ಮುಡಿಸಿದರೆ ಸಾಕು; ಅಲತಿಗೆಯ ರಸವೇಕೆ? ಅದರ ಕೆಂಪುವರ್ಣವನ್ನು ಮಾತ್ರ ಚೆನ್ನಡಿಗಳಿಗೆ ಲೇಪಿಸಬೇಕು; ರತ್ನಾಭರಣಗಳು ಭಾರವಲ್ಲವೆ? ಅವುಗಳ ಅಂದವನ್ನಷ್ಟೆ ಬೇರ್ಪಡಿಸಿಕೊಂಡು ಅಲಂಕಾರಕ್ಕೆ ಬಳಸಿದರೆ ಆಗದೆ ? ಎಂದು ಮನಸ್ಸಿಗೆ ತೀವ್ರವಾದ ಹಂಬಲವುಂಟಾಗುವುದು. ಎಂದ ಮೇಲೆ ಆ ಸುಂದರಾಂಗಿಯ ಕೋಮಲತೆಯನ್ನು ಇನ್ನೇ

ಲೋಕಾಲೋಕನಪುಣ್ಯಪುಂಜಮಿದು ವೇಧೋರೂಪನಿರ್ಮಾಣವಿ।
ದ್ಯಾಕೀರ್ತಿ ಪ್ರಭವನ್ನಿಧಾನಮಿದು ಕಾಮೋದ್ದಾಮಸಾಮ್ರಾಜ್ಯಲ॥
ಕ್ಷ್ಮೀಕಾಂತಾನವನಾಟ್ಯರಂಗಮಿದು ಸತ್ಸೌಭಾಗ್ಯಮಾಣಿಕ್ಯಮಾ।
ಳಾಕೋಶಂ ದಲಿದೆಂಬ ಪೆಂಪುವಡೆದತ್ತಾಕಾರಮಾ ಕಾಂತೆಯಾ॥ ೧೦೭

ವಚನದೊಳಿಲ್ಲ ಪೆರ್ಮೊಲೆಯೊಳಲ್ಲದೆ ಕರ್ಕಶವೃತ್ತಿ ವಕ್ರಿಮಂ।
ಸುಚರಿತದೊಳ್ ವಿಚಾರಿಸುವೊಡಿಲ್ಲಳಕಾಳಿಯೊಳಲ್ಲದೆಲ್ಲಿಯುಂ॥
ವಿಚಳತೆಯಿಲ್ಲ ಚಿತ್ತದೊಳಪಾಂಗದೊಳಲ್ಲದೆ ಸಾರಸದ್ಗುಣೋ।
ಪಚಯದೊಳಿಲ್ಲ ಮಾಂದ್ಯಮದು ಯಾನದೊಳಲ್ಲದೆ ತಲ್ಲತಾಂಗಿಯಾ॥ ೧೦೮

ಅಱಿವಿಂಗೆ ಜವ್ವನಂ ಕ।
ಣ್ದೆಱೆದುದು ಜವ್ವನಕೆ ಪೊಚ್ಚಪೊಸಸಿರಿಯೆಸಕಂ॥
ನೆಱೆದುದು ಸಿರಿಗಂ ಪಿರಿದುಂ।
ಮಱುಕಂ ದೊರೆಕೊಂಡುದಾಕೆಯಂ ಪೊರ್ದಲೊಡಂ॥ ೧೦೯

ಮತ್ತಮಾ ಜಗತ್ತ್ರಯಪವಿತ್ರ ಸವಿತೃಕಾಂತೆಯಂತೆ ಕಮಳೋತ್ಸವಕಾರಿಣಿಯುಂ, ವಸಂತಲಕ್ಷ್ಮಿಯಂತೆ ವಿಶಿಷ್ಟಪಾರ್ಥಿವಕುಳೋದ್ಭವೆಯುಂ, ಸಿದ್ಧಮಾತೃಕೆಯಂತೆ ಸಂತತೋಪಚಿತಕಳಾಕಳಾಪೆಯುಂ, ನಕ್ಷತ್ರಪಙ್ಕ್ತಿಯಂತೆ ವಿವಿಧಪ್ರದೇಶೋದ್ಭವವ್ಯಂಜನೋಪರಂಜಿತೆಯುಂ, ಸಮುದ್ರಲಹರಿಯಂತೆ

ನೆಂದು ಹೊಗಳಲಿ? ೧೦೭. ಸಕಲ ಲೋಕದ ಜನರ ಕಣ್ಣ ಪುಣ್ಯದ ಪುಂಜ ಇದು; ರೂಪ ನಿರ್ಮಾಣ ವಿದ್ಯೆಯಲ್ಲಿ ಬ್ರಹ್ಮನು ಸಾಧಿಸಿದ ಕೀರ್ತಿಗೆ ಜನ್ಮ ಭೂಮಿಯಿದು; ಕಾಮನ ಸಾಮ್ರಾಜ್ಯಲಕ್ಷ್ಮಿಯ ನವೀನ ನಾಟ್ಯರಂಗವಿದು; ಸೌಭಾಗ್ಯ ರತ್ನಮಾಲೆಗಳ ಭಾಂಡಾರವಿದು– ಎಂದು ಹೆಸರಿಸುವಂತೆ ಅತಿಶಯತೆಯನ್ನು ಪಡೆದಿತ್ತು ಆ ಲಲನೆಯ ರೂಪು. ೧೦೮. ಆ ಸುಕುಮಾರಿಗೆ ಕಠೋರತೆಯೆಂಬುದು ನೆಲೆಮೊಲೆಗಳಲ್ಲಿ ಅಲ್ಲದೆ ಮಾತಿನಲ್ಲಿ ಇಲ್ಲ; ಕೊಂಕೆಂಬುದು ಕೂದಲಲ್ಲಿ ಅಲ್ಲದೆ ನಡತೆಯಲ್ಲಿ ಇಲ್ಲ; ಚಂಚಲತೆಯೆಂಬುದು ಕಡೆಗಣ್ಣೋಟದಲ್ಲಲ್ಲದೆ ಚಿತ್ತದಲ್ಲಿಲ್ಲ; ಮಂದತೆಯೆಂಬುದು ನಡಗೆಯಲ್ಲಿ ಅಲ್ಲದೆ ಉತ್ತಮವಾದ ಸದ್ಗುಣಗಳಲ್ಲಿಲ್ಲ. ೧೦೯. ಆಕೆಯನ್ನು ಆಶ್ರಯಿಸಿದೊಡನೆ ಅರಿವಿಗೆ ಯೌವನವೊದಗಿತು; ಯೌವನಕ್ಕೆ ಹೊಚ್ಚ ಹೊಸ ಸಿರಿತನ ಅಳವಟ್ಟಿತು; ಸಿರಿತನಕ್ಕೆ ದಯೆ ಜೊತೆಯಾಯಿತು. ವ॥ ಆ ತ್ರಿಲೋಕಮಾತೆಯು ಸೂರ್ಯಪತ್ನಿಯಂತೆ 'ಕಮಳೋತ್ಸವಕಾರಿಣಿ'. (೧. ತಾವರೆಗಳಿಗೆ ಅಭಿವೃದ್ಧಿಯುಂಟು ಮಾಡುವವಳು. ೨. ಲಕ್ಷ್ಮಿಯಂತೆ ಸಂತೋಷವನ್ನುಂಟು ಮಾಡುವವಳು) ; ವಸಂತಲಕ್ಷ್ಮಿಯಂತೆ "ವಿಶಿಷ್ಟ ಪಾರ್ಥಿವ ಕುಳೋದ್ಭವೆ" (೧. ಉತ್ತಮವಾದ ಸಸ್ಯಕುಲದಲ್ಲಿ ಉದ್ಭವಿಸುವವಳು. ೨. ಶ್ರೇಷ್ಠವಾದ ರಾಜವಂಶದಲ್ಲಿ ಹುಟ್ಟಿದವಳು); ಸಿದ್ಧಮಾತೃಕೆಯಂತೆ ಯಾವಾಗಲೂ ಕಲಾಸಂಪನ್ನೆ; ನಕ್ಷತ್ರ ಸಮೂಹದಂತೆ 'ವಿವಿಧ ಪ್ರದೇಶೋದ್ಭವವ್ಯಂಜನೋಪರಂಜಿತೆ' (೧. ಬೇರೆ ಬೇರೆ ಸ್ಥಾನಗಳಲ್ಲಿ ಹುಟ್ಟಿ, ವಿಶಿಷ್ಟಾಕಾರದಿಂದ ಶೋಭಿಸುವುದು. ೨. ಅನೇಕ ಪ್ರದೇಶಗಳಲ್ಲಿ

ಅಗಣ್ಯಲಾವಣ್ಯಲಲಿತೆಯುಂ, ಪ್ರತಿಪಚ್ಚಂದ್ರಲೇಖೆಯಂತೆ ಸನ್ಮಾರ್ಗಪ್ರವರ್ತನೆಯುಂ, ದಿಗ್ಗಜಕಪೋಳ ಪಾಳಿಯಂತನೂನದಾನಾಧೀನೆಯುಂ, ಚಾಪಲತೆಯಂತೆ ದೃಢಗುಣಸಂಧಾನೆಯುಂ, ಮಹೇಂದ್ರಲೀಲೆ ಯಂತೆ ಸುಧರ್ಮಾನುವರ್ತಿನಿಯುಮೆನಿಪಳ್, ಅಂತುಮಲ್ಲದೆಯುಂ,

ಅಕಳಂಕಾಖಿಳಶೀಳಪಾಳಿಕೆ ಜಗದ್ದುಗ್ಭೃಂಗಮಂದಾರಮಾ ।
ಳಿಕೆ ಶೃಂಗಾರಸರೋಮರಾಳಿಕೆ ಕಳಾವಿದ್ಯಾನಟೀನೃತ್ಯಶಾ ॥
ಳಿಕೆ ಚಿತ್ತೋದ್ಭವವಶ್ಯಮೂಳಿಕೆ ಜಿನೇಶೇಂದೂದಯಾದ್ರೀಂದ್ರಚೂ ।
ಳಿಕೆಯೆಂಬೆಂ ಪೊಗಟಲ್ಕೆ ಮತ್ತಱಿಯೆನಾನಾ ಲಕ್ಷ್ಮಣಾದೇವಿಯಂ ॥ ೧೧೦

ಆ ಕಾಂತೆ ಮಹಾಸೇನಮ ।
ಹೀಕಾಂತನೊಳೊಂದಿ ಕಲ್ಪತರುವಂ ತಳ್ತಿ ॥
ರ್ಪಾ ಕಲ್ಪಲತೆಯ ತೆಱದಿನ ।
ನಾಕುಳಸುಖಸಂಕಥಾವಿನೋದದಿನಿರ್ಪಳ್ ॥ ೧೧೧

ಚುಂಬನದಿಂಪು ಸುಯ್ಯ ನಱುಗಂಪು ಮರುಳ್ಚುವ ಸೋಂಕು ಮಾತಿನೊಳ್ ।
ತಿಂಬಿದ ಕೊಂಕು ವಿಭ್ರಮದಗುರ್ವು ನಿಜೇಂದ್ರಿಯವರ್ಗದುರ್ವು ತಾ ॥
ನೆಂಬಿನಮಾಕೆಯೊಳ್ ನೆರೆದು ಸೌಖ್ಯಪರಂಪರೆಗಾತ್ಮಚಿತ್ತಮಾ ।
ಳಂಬನಮಾಗೆ ನಾಡೆ ತಣಿವೆಯ್ದುವನಾ ವಸುಧಾಧಿನಾಯಕಂ ॥ ೧೧೨

ಹುಟ್ಟಿದ ಲೇಪನ ದ್ರವ್ಯಗಳಿಂದ ಭೂಷಿತಳಾದವಳು); ಸಮುದ್ರದ ಅಲೆಯಂತೆ "ಅಗಣ್ಯ ಲಾವಣ್ಯಲಲಿತೆ" (೧. ಅತಿಶಯವಾದ ಉಪ್ಪಿನ ಗುಣದಿಂದ ಕೂಡಿದುದು. ೨. ಅತ್ಯಧಿಕವಾದ ಸೌಂದರ್ಯದಿಂದ ಶೋಭಿಸುವವಳು); ಪಾಡ್ಯದ ಚಂದ್ರಕಳೆಯಂತೆ "ಸನ್ಮಾರ್ಗ ಪ್ರವರ್ತನೆ" (೧. ಆಕಾಶಮಾರ್ಗವಾಗಿ ಚಲಿಸುವುದು. ೨. ಸದಾಚಾರ ಗಳನ್ನು ಪಾಲಿಸುವವಳು); ದಿಗ್ಗಜಗಳ ಗಂಡಸ್ಥಳಗಳಂತೆ "ಅನೂನದಾನಾಧೀನೆ" (೧. ಅತಿಶಯವಾದ ಮದೋದಕ ಸ್ರಾವಕ್ಕೆ ಒಳಗಾದುದು. ೨. ಅತ್ಯಧಿಕವಾಗಿ ದಾನಮಾಡುವುದರಲ್ಲಿ ಪರವಶಳಾದವಳು); ದೇವೇಂದ್ರನ ಲೀಲೆಯಂತೆ "ಸುಧರ್ಮಾ ನುವರ್ತಿನಿ" (೧. ದೇವಸಭೆಗೆ ಅನುಸಾರವಾಗಿರುವುದು. ೨. ಸದ್ಧರ್ಮವನ್ನು ಅನುಸರಿಸುವವಳು). ಅದಲ್ಲದೆ- ೧೧೦. ನಿಷ್ಕಲಂಕವಾದ ಸಕಲಶೀಲಗಳನ್ನು ಪಾಲಿಸುವವಳು, ಜನರ ಕಣ್ಣುಗಳೆಂಬ ದುಂಬಿಗಳಿಗೆ ಮಂದಾರಮಾಲೆಯಾದವಳು, ಶೃಂಗಾರಸರೋವರದ ಹಂಸಿ, ಕಲಾಧಿದೇವತೆಯ ನಾಟ್ಯಶಾಲೆ, ಮನ್ಮಥನ ವಶ್ಯಮೂಲಿಕೆ, ಜಿನೇಶಚಂದ್ರನು ಉದಯಿಸುವ ಪರ್ವತಶಿಖರ- ಎಂದು ಹೇಳಬಲ್ಲೆನಲ್ಲದೆ, ಆ ಲಕ್ಷ್ಮಣಾದೇವಿಯನ್ನು ಹೊಗಳಲು ಬೇರೆ ರೀತಿಯನ್ನು ನಾನರಿಯೆನು. ೧೧೧. ಕಲ್ಪವೃಕ್ಷವನ್ನು ಅಪ್ಪಿಕೊಂಡ ಕಲ್ಪಲತೆಯಂತೆ, ಮಹಾಸೇನ ಮಹಾರಾಜನೊಡನೆ ಆ ಕಾಂತೆಯು ಹೊಂದಿಕೊಂಡು ಅಬಾಧಿತವಾಗಿ ಸುಖ ಸಲ್ಲಾಪ ವಿನೋದದಿಂದ ಇರುವಳು. ೧೧೨. ಚುಂಬನದ ಸವಿ, ಉಸಿರಿನ ಸುಗಂಧ, ಮರುಳುಗೊಳಿಸುವ ಸ್ಪರ್ಶಾನುಭವ, ಮಾತಿನಲ್ಲಿ ತುಂಬಿದ ಚದುರು, ಒಯ್ಯಾರದ

ನಳಿನಾಕರಮುಂ ರಮೆಯುಂ ।
ಜಳನಿಧಿಯುಂ ನಿರ್ಮಳೋರ್ಮಿಯುಂ ಚಂದ್ರಮನುಂ ॥
ಕಳೆಯುಮೆಸೆವಂತೆ ಸಮಸಂ ।
ದಿಳೇಶನುಂ ಕಾಂತೆಯುಂ ಕರಂ ಸೊಗಯಿಸುವರ್ ॥ ೧೧೩

ಪಾಪರಹಿತಂಗಳುರುಸುಖ ।
ರೂಪಂಗಳೆನಿಪ್ಪನೇಕವಿಧಕೇಳಿಗಳಿಂ ॥
ದಾ ಪುಣ್ಯದಂಪತಿಗೆ ನಿಮಿ ।
ಷೋಪಮಮೆನೆ ಪೋಯ್ತನೇಕವತ್ಸರನಿಕರಂ ॥ ೧೧೪

ಅನ್ನೆಗಮಿತ್ತಂ

ದೇವರ ದೇವನುರ್ವರೆಗನುತ್ತರೆಯಿಂದಿಟಿದಾಮಹಾದಿಸೇ ।
ನಾವನಿಪಾಳನಗ್ರಮಹಿಷೀಪದಸಂಸ್ಥಿತೆಯಪ್ಪ ಲಕ್ಷ್ಮಣಾ ॥
ದೇವಿಯ ಗರ್ಭದೊಳ್ ನೆಲಸುತಿರ್ದಪನೆಂದು ಪುರಂದರಂ ಸ್ವಕೀ ।
ಯಾವಧಿಬೋಧದಿಂ ತಿಳಿದು ತನ್ನೊಳೆ ಸಂತಸದಂತನೆಯ್ದಿದಂ॥ ೧೧೫

ಅಂತು ತಿಳಿದಱುದಿಂಗಳುಂಟೆನೆ ಮುನ್ನಮೆ,

॥ ಮಾಲಿನಿ ॥

ಸುರಪತಿ ಜಿನಗರ್ಭಾದಾನಕಲ್ಯಾಣಲೀಲಾ ।
ಪರಿಕರಮನೊಡರ್ಚಲ್ವೇಟ್ವುದುಂ ಭಕ್ತಿಭಾವಂ ॥
ಬೆರಸು ತಲೆಯೊಳಾಂತಂ ಪಾಲೆ ಮದ್ದಾದುದೆಂಬಂ ।
ತಿರೆ ನಲಿದು ತದೀಯಾದೇಶಮಂ ಕಿನ್ನರೇಶಂ ॥ ೧೧೬

ಅತಿಶಯು– ಇವೆಲ್ಲವೂ ತನ್ನ ಪಂಚೇಂದ್ರಿಯುಗಳಿಗೆ ಉತ್ಸವವನ್ನೀಯುತ್ತಿರಲಾಗಿ ಆಕೆಯೊಡನೆ ಕೂಡಿ ಸೌಖ್ಯಪರಂಪರೆಯನ್ನನ್ನುಭವಿಸುತ್ತ ಆ ರಾಜನು ತಣಿಯುವನು. ೧೧೩. ಸರೋವರದೊಡನೆ ಲಕ್ಷ್ಮಿ, ಸಮುದ್ರದೊಂದಿಗೆ ಅಲೆ, ಚಂದ್ರನೊಂದಿಗೆ ಕಲೆ, ಹೊಂದಿಕೊಂಡು ಶೋಭಿಸುವಂತೆ ಆ ರಾಜನೂ ರಾಣಿಯೂ ಅತಿಶಯವಾಗಿ ಒಪ್ಪಿದರು. ೧೧೪. ಪಾಪರಹಿತವೂ ಸುಖಾಸ್ಪದವೂ ಆದ ನಾನಾ ವಿಧದ ವಿನೋದ ಕ್ರೀಡೆಗಳಲ್ಲಿ ನಿರತರಾದ ಆ ಪುಣ್ಯ ದಂಪತಿಗಳಿಗೆ ಅನೇಕ ವರ್ಷಗಳು ಒಂದು ನಿಮಿಷದಂತೆ ಕಳೆದುವು. ಅಷ್ಟರಲ್ಲಿ ಇತ್ತ– ೧೧೫. ದೇವಾಧಿದೇವನಾದ ಜಿನೇಶನು ಅನುತ್ತರೆಯಿಂದ ಇಳಿದು ಬಂದು ಮಹಾಸೇನ ರಾಜನ ಅಗ್ರಮಹಿಷಿ ಲಕ್ಷ್ಮಣಾದೇವಿಯ ಗರ್ಭದಲ್ಲಿ ನೆಲಸುವನೆಂದು, ಅವಧಿಜ್ಞಾನದಿಂದ ತಿಳಿದು ಇಂದ್ರನು ಪರಮ ಸಂತೋಷವನ್ನು ಹೊಂದಿದನು. ವ॥ ಹಾಗೆ ತಿಳಿದು ಅದಕ್ಕೆ ಇನ್ನೂ ಆರು ತಿಂಗಳು ಅವಕಾಶವಿರುವಾಗಲೆ– ೧೧೬. ಗರ್ಭಾವತರಣೋತ್ಸವಕ್ಕೆ ಪರಿಕರಗಳನ್ನು ಅಣಿಗೊಳಿಸಲೆಂದು ದೇವೇಂದ್ರನು ಅಪ್ಪಣೆ ಕೊಡಲಾಗಿ, ಹಾಲೇ ಔಷಧವಾಯಿತೆಂಬಂತೆ ಹಿಗ್ಗಿ ಕುಬೇರನು ಆ ಅಪ್ಪಣೆಯನ್ನು ಶಿರಸಾವಹಿಸಿದನು.

ಅನಂತರಂ ಚಂದ್ರಪುರಿಗೆ ಪಂದು ರಾಜಮಂದಿರದೊಳ್,

ಪಿರಿದುಂ ಪಂಚಾಶ್ಚರ್ಯಂ ।
ಬೆರಸು ಸಹಾರ್ಧತ್ರಿಕೋಟಿರತ್ನದ ಮಟಿಯಂ ॥
ಸುರಿಯಲ್‌ತೊಡಗಿದನನುದಿನ ।
ಮುರುಮುದದಿಂ ಮೂಱುಪೊೞ್ತುಱೊಳಮೈಳಬಿಳಂ ॥ ೧೧೭

ಒಗೆವುದು ಗಗನದೊಳಿನಲ ।
ಲ್ಲುಗುವುದೆ ನಿಮಿರ್ದೆಳೆಗೆ ಶಕ್ರಚಾಪೋತ್ಕರಮಾ ॥
ವಗಮೆನೆ ಕುಬೇರಮೇಘದಿ ।
ನುಗುತಂದುದು ಪಂಚರತ್ನಧಾರಾಸಾರಂ ॥ ೧೧೮

ರನ್ನದ ಮಟಿಯಿಂದಿಳೆಯ ವಿ ।
ಪನ್ನತೆ ಗರ್ಭಾವತಾರದಿಂದಱುದಿಂಗಳ್ ॥
ಮುನ್ನಮೆನೆ ಪೋಯ್ತು ಜಿನರಾ ।
ಜಂ ನೆರಪಿದ ಪುಣ್ಯದಳವದಿನ್ನೇವಿರಿದೋ ॥ ೧೧೯

ಧರೆಗಂದಿಂ ಕೊಟ್ಟ ವಸುಂ ।
ಧರೆ ಮತ್ತಂ ರತ್ನಗರ್ಭೆಯೆಂಬೀ ಪೆಸರ್ಗಳ್ ॥
ದೊರೆವೆತ್ತುವೆಂದೊಡೇನ ।
ಚ್ಚರಿಯಾದುದೊ ಧನದಜನಿತಮಣಿಗಣವರ್ಷಂ ॥ ೧೨೦

ವ॥ ಬಳಿಕ ಚಂದ್ರಪುರಿಗೆ ಬಂದು ಅರಮನೆಯೊಳಗೆ– ೧೧೭. ಪಂಚಾಶ್ಚರ್ಯ ಗಳೊಡನೆ ಕೂಡಿಕೊಂಡು ಕುಬೇರನು ಪ್ರತಿನಿತ್ಯ ಮೂರೂ ಹೊತ್ತಿನಲ್ಲಿಯೂ ಮೂರುವರೆಕೋಟಿ ರತ್ನಗಳ ಮಳೆಯನ್ನು ಸುರಿಯುತೊಡಗಿದನು. ೧೧೮. ಕಾಮನ ಬಿಲ್ಲುಗಳು ಆಕಾಶದಲ್ಲಿ ಏಳುವುವು. ನೆಲದ ಮೇಲೆ ಹೇಗೆ ಬಂದುವೆಂದರೆ ಅವು ಅಲ್ಲಿಂದ ವಿಸ್ತರಿಸಿಕೊಂಡು ಭೂಮಿಯನ್ನು ಮುಟ್ಟುತ್ತಿರುವುವೆಂಬಂತೆ ಕುಬೇರನೆಂಬ ಮೇಘದಿಂದ ಪಂಚ ರತ್ನಗಳ ಧಾರಾವೃಷ್ಟಿ ಸುರಿಯಿತು. ೧೧೯. ರತ್ನಗಳ ಮಳೆಯಿಂದಾಗಿ, ಜಿನೇಶ್ವರನ ಗರ್ಭಾವತಾರವಾಗುವುದಕ್ಕೆ ಆರು ತಿಂಗಳು ಮುಂಚಿತವಾಗಿಯೆ ಭೂಮಿಯ ಬಡತನ ಹಿಂಗಿ ಹೋಯಿತು. ಜಿನೇಶನು ಗಳಿಸಿದ ಪುಣ್ಯದ ರಾಶಿ ಎಷ್ಟೊಂದು ಘನವಾದುದು! ೧೨೦. ಭೂಮಿಗೆ "ವಸುಂಧರೆ"ಯೆಂದು, "ರತ್ನಗರ್ಭೆ"ಯೆಂದೂ ಎಂದೊ ಕೊಟ್ಟ ಹೆಸರು ಇಂದು ಸಾರ್ಥಕವಾದುವು. ಎಂದ ಮೇಲೆ ಕುಬೇರನು ಸುರಿಸಿದ ರತ್ನದ

ಓರಂತೆ ಸುರಿದೊಡಂ ಮನ ।
ವಾರದು ರತ್ನತತಿ ತೀರದೆಂದೊಡೆ ತವಿಲಂ ॥
ಸಾರದು ತಾನೆನಿಸಿದ ಭಂ ।
ಡಾರಕ್ಕಂ ಭಕ್ತಿಗಂ ಕುಬೇರನೆ ನೋಂತಂ ॥ ೧೨೧

ಮತ್ತಮಾ ಮನುಷ್ಯಧರ್ಮನ ಬಟಿಯನೆ ಸೌಧರ್ಮೇಂದ್ರಂ ಧರ್ಮಾನುರಾಗದಿನರ್ಹದಂಬಿಕೆಯನನುದಿನಂ ಕೈಗೈಸಿಮೆಂದು ಹಿಮವದಾದಿವರ್ಷಧರ ಮಹೀಧರಾಧಿತ್ಯಕಾಳಂಕಾರಂಗಳಪ್ಪ ಪದ್ಮಾದಿಸರಂಗಳೊಳಿರ್ಪರಂ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬಱುವರಂ ದೇವಿಯರುಮಂ, ಮತ್ತಂ ಜಿನೇಂದ್ರಜನ್ಮಕಲ್ಯಾಣದೊಳ್ ಭೃಂಗಾರುಧಾರಿಣಿಯರಾಗಿಮೆಂದು ಮಣಿಮಯಾಕೃತ್ರಿಮಚೈತ್ಯಗೃಹರುಚಿರಮೆನಿಪ ರುಚಕಾಚಳದ ಮೂಡಣ ದೆಸೆಯ ಕೂಟಂಗಳೊಳಿರ್ಪ ವೈಡೂರ್ಯದ ವಿಜಯೆಯುಂ ಕಾಂಚನದ ವೈಜಯಂತಿಯುಂ ಕನಕದ ಜಯಂತಿಯುಮರಿಷ್ಟದಪರಾಜಿತೆಯುಂ ದಿಕ್ಸ್ವಸ್ತಿಕದ ನಂದೆಯುಂ ನಂದನದ ನಂದೋತ್ತರೆಯುಮಂಜನಮೂಳಕದ ನಂದಿವರ್ಧೆಯುಮೆಂಬ ದಿಗ್ದೇವಿಯರೆಣ್ಬರುಮಂ, ಮತ್ತಂ ಮಹಾಸೇನಮಹೀವರನರಸಿಗಾದರ್ಶನಮಂ ಪಿಡಿಯಿಮೆಂದು ತನ್ಮಹೀಧರದ ತೆಂಕಣ ದೆಸೆಯ ಕೂಟಂಗಳಪ್ಪ ಮೇಘದ ಸುಪ್ರತಿಷ್ಠೆಯುಂ ಸುಪ್ರಬುದ್ಧದ ಸುಪ್ರಣಿಧಿಯುಂ ಐಂದ್ರದ ಸುಪ್ರಬುದ್ಧೆಯುಂ ವಿಮಳದ ಯಶೋಧರೆಯುಂ ರುಚಕದ ಲಕ್ಷ್ಮೀಮತಿಯುಂ ರುಚಕೋತ್ತರದ ಕೀರ್ತಿಮತಿಯುಂ ಚಂದ್ರದ ವಸುಂಧರೆಯುಂ ಸುಪ್ರತಿಷ್ಠದ ಚಿತ್ರೆಯುಮೆಂಬೀದೆಸೆವೆಣ್ಗಳೆಣ್ಬರುಮಂ, ಮತ್ತಂ ಲಕ್ಷ್ಮಣಮಹಾದೇವಿಗೆ ಗಾಯಕಿಯರಾಗಿಮೆಂದು ತತ್ಪರ್ವತದ ಪಡುವಣದೆಸೆಯ ಕೂಟಂಗಳಪ್ಪ ಲೋಹಿತಾಕ್ಷದಿಳಾದೇವಿಯುಂ ಜಗತ್ಕುಸುಮದ ಸುರಾದೇವಿಯುಂ ಪದ್ಮದ

ಮಳೆ ಎಷ್ಟು ಆಶ್ಚರ್ಯಕರವಾದುದು ! ೧೨೧. ಒಂದೇ ಸಮನೇ ಸುರಿಯುತ್ತಿದ್ದರೂ ಮನಸ್ಸು ದಣಿಯದು, ರತ್ನ ಸಂಚಯವೂ ತೀರದು. ಹೀಗೆ ಎಂದೂ ಮುಗಿಯದ ಭಾಂಡಾರವನ್ನು ಭಕ್ತಿಯನ್ನೂ ಕುಬೇರನಂತೆ ಇನ್ನಾರು ಗಳಿಸಿದರು? ವ॥ ಕುಬೇರನ ಹಿಂದಿನಿಂದಲೆ ಸೌಧರ್ಮೇಂದ್ರನು ಧರ್ಮದ ಮೇಲಿನ ಪ್ರೀತಿಯಿಂದ, ಜಿನ ಮಾತೆಯನ್ನು ಪ್ರತಿನಿತ್ಯ ಅಲಂಕರಿಸಲು– ಹಿಮವದಾದಿ ವರ್ಷಧರ ಪರ್ವತದ ತಪ್ಪಲು ಭೂಮಿಗೆ ಭೂಷಣವಾಗಿರುವ ಪದ್ಮಾದಿಸರೋವರಗಳಲ್ಲಿ ವಾಸಮಾಡುವ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಎಂಬ ಆರುಜನ ದೇವಿಯರನ್ನು; ಜಿನನ ಜನ್ಮಕಲ್ಯಾಣದಲ್ಲಿ ಕಲಶಧಾರಿಣಿಯರಾಗಿರೆಂದು,– ರತ್ನಮಯವಾದ ಅಕೃತಿಮ ಜಿನಾಲಯಗಳಿಂದ ಸುಂದರವಾದ ರುಚಕಪರ್ವತದ ಪೂರ್ವದಿಕ್ಕಿನ ಶಿಖರಗಳಲ್ಲಿರುವ ವೈಡೂರ್ಯದ ವಿಜಯೆ, ಕಾಂಚನದ ವೈಜಯಂತಿ, ಕನಕದ ಜಯಂತಿ, ಅರಿಷ್ಟದ ಅಪರಾಜಿತೆ, ದಿಕ್‌ಸ್ವಸ್ತಿಕದ ನಂದೆ, ನಂದನದ ನಂದೋತ್ತರೆ, ಅಂಜನಮೂಲಕದ ನಂದಿವರ್ಧೆ ಎಂಬ ಎಂಟು ಜನ ದಿಗ್ದೇವಿಯರನ್ನು; ಮಹಾಸೇನನ ಅರಸಿಗೆ ಕನ್ನಡಿ ಹಿಡಿಯಲು– ಆ ಪರ್ವತದ ದಕ್ಷಿಣದಿಕ್ಕಿನ ಶಿಖರಗಳಾದ ಮೇಘದ ಸುಪ್ರತಿಷ್ಠೆ, ಸುಪ್ರಬುದ್ಧದ ಸುಪ್ರಣಿಧಿ, ಐಂದ್ರದ ವಸುಂಧರೆ, ವಿಮಳದ ಯಶೋಧರೆ, ರುಚಕದ ಲಕ್ಷ್ಮೀಮತಿ, ರುಚಕೋತ್ತರದ

ಪೃಥ್ವಿಯುಂ ನಳಿನದ ಪದ್ಮಾವತಿಯುಂ ಕುಮುದದ ಕಾಂಚನೆಯುಂ ಸೌಮನಸದ ನವಮಿಕೆಯುಂ ಯಶೋಭದ್ರದ ಸೀತೆಯುಂ ಸರ್ವತೋಭದ್ರಭದ್ರೆಯುಮೆಂಬ ಹರಿತ್ಕುಮಾರಿಕೆಯರೆಣ್ಬರುಮಂ, ಮತ್ತಮಾ ವಿನಯಕಾಮಧೇನುಗೆ ಚಾಮರಮನಿಕ್ಕಿಮೆಂದು ತದವನೀಧರದ ಬಡಗಣ ದೆಸೆಯ ಕೂಟಂ ಗಳಪ್ಪ ಸ್ಫಟಿಕದಂಬುದೆಯುಂ ಅರ್ಕದ ಮಿತ್ರಕೇಶಿಯುಂ ಅಂಜನದ ಪುಂಡರೀಕಿಣಿಯುಂ ಕಾಂಚನದ ವಾರುಣಿಯುಂ ರಜತದಾಸ್ಯೆಯುಂ ಕುಂಡದ ಧಾತ್ರಿಯುಂ ರುಚಿರದ ಹ್ರೀಯುಂ ಸುದರ್ಶನದಾ ಕೃತಿಯುಮೆಂಬ ಕಕುತ್ಕಾಂತೆಯರೆಣ್ಬರುಮಂ, ಮತ್ತಂ ಜಗತ್ತ್ರಿತಯದೀಪಿಕೆಗೆ ನೀರಾಜನದೀಪಧಾರಿಣಿ ಯರಾಗಿಮೆಂದು ತದ್ಗಿರೀಂದ್ರದ ಐಂದ್ರೀದೆಸೆಯ ವಿಶೇಷಕೂಟಂಗಳಪ್ಪ ವಿಮಳದ ಚಿತ್ರೆಯುಂ ನಿತ್ಯಾಲೋಕದ ಕನಕಚಿತ್ರೆಯುಂ ಸ್ವಯಂಪ್ರಭದ ತ್ರಿಸರೆಯುಂ ನಿತ್ಯೋದ್ಯೋತಕದ ಸುತ್ರಾಮಣಿಯುಮೆಂಬ ವಿದ್ಯುತ್ಕುಮಾರಿಯರ್ ನಾಲ್ವರುಮಂ, ಮತ್ತಮುತ್ತಮಶೀಲವತಿಗೆ ಮಹತ್ತರೆಯರಾಗಿಮೆಂದು ತನ್ನ ಗವಿದಿಕ್ಕೂಟಂಗಳಪ್ಪ ವೈಡೂರ್ಯದ ರುಚಕೆಯುಂ ರುಚಕದ ರುಚಕಕಾಂತಿಯುಂ ಮಣಿಪ್ರಭದ ರುಚಕಪ್ರಭೆಯುಂ ರುಚಕೋತ್ತರದ ಚಕ್ರಪ್ರಭೆಯುಮೆಂಬ ವಿದಿಕ್ಕನ್ಯೆಯರ್ ನಾಲ್ವರುಮಂ, ಮತ್ತ ಮಖಿಳವಿದ್ಯಾಪ್ರಗಲ್ಭೆಗೆ ಗರ್ಭಶೋಧನಾದಿರಮಣೀರಹಸ್ಯವ್ಯಾಪಾರದೊಳ್ ನೆಗಟಿಮೆಂದು ತಚ್ಛೈ ಳೋಚ್ಚ್ರಯಕೃತಕಕೂಟಂಗಳಪ್ಪ ರತ್ನಕೂಟದ ವಿಜಯೆಯುಂ ರತ್ನಪ್ರಭದ ವೈಜಯಂತಿಯುಂ

ಕೀರ್ತಿಮತಿ, ಚಂದ್ರ ವಸುಂಧರೆ, ಸುಪ್ರತಿಷ್ಠದ ಚಿತ್ರೆ ಎಂಬ ಈ ದಿಗ್ವನಿತೆಯರೆಂಟು ಜನರನ್ನು; ಲಕ್ಷ್ಮಣಾಮಹಾದೇವಿಗೆ ಗಾಯಕಿಯರಾಗಲು– ಆ ಪರ್ವತದ ಪಶ್ಚಿಮ ದಿಕ್ಕಿನ ಶಿಖರಗಳಾದ ಲೋಹಿತಾಕ್ಷದ ಇಳಾದೇವಿ, ಜಗತ್ಕುಸುಮದ ಸುರಾದೇವಿ, ಪದ್ಮದ ಪೃಥ್ವಿ, ನಳಿನದ ಪದ್ಮಾವತಿ, ಕುಮುದದ ಕಾಂಚನೆ, ಸೌಮನಸದ ನವಮಿಕೆ, ಯಶೋಭದ್ರದ ಸೀತೆ, ಸರ್ವತೋಭದ್ರದ ಭದ್ರೆ ಎಂಬ ದಿಕ್ಕುಮಾರಿಯರೆಂಟು ಜನವನ್ನು; ವಿನಯ ಕೂಟಗಳಾದ ಸ್ಫಟಿಕದ ಅಂಬುದೆ, ಕಾಮಧೇನುವಾದ ಆ ರಾಣಿಗೆ ಚಾಮರವಿಕ್ಕಲೆಂದು– ಆ ಬೆಟ್ಟದ ಉತ್ತರದಿಕ್ಕಿನ ಅರ್ಕದ ಮಿತ್ರಕೇಶಿ, ಅಂಜನದ ಪುಂಡರೀಕಿಣಿ, ಕಾಂಚನದ ವಾರುಣಿ, ರಜತದ ಆಸ್ಯೆ, ಕುಂಡದ ಧಾತ್ರಿ, ರುಚಿರದ ಹ್ರೀ, ಸುದರ್ಶನದ ಆಕೃತಿ ಎಂಬ ಎಂಟು ದಿಕ್ಕಾಂತೆಯರನ್ನು; ಮತ್ತು ಆ ತ್ರಿಲೋಕ ಜ್ಯೋತಿಗೆ ನೀರಾಜನ ದೀಪ ಹಿಡಿಯಲೆಂದು– ಆ ಹೆಬ್ಬೆಟ್ಟದ ಪೂರ್ವದಿಕ್ಕಿನ ವಿಶೇಷಶಿಖರಗಳಾದ ವಿಮಳದ ಚಿತ್ರೆ, ನಿತ್ಯಾಲೋಕದ ಕನಕಚಿತ್ರೆ, ಸ್ವಯಂಪ್ರಭದ ತ್ರಿಸರೆ, ನಿತ್ಯೋದ್ಯೋತಕದ ಸುತ್ರಾಮಣಿ ಎಂಬ ನಾಲ್ವರು ವಿದ್ಯುತ್ಕುಮಾರಿಯರನ್ನು; ಆ ಉತ್ತಮ ಶೀಲವತಿಗೆ ಹೆಗ್ಗಡಿತಿಯರಾಗಿರೆಂದು– ಆ ಬೆಟ್ಟದ ವಿದಿಕ್ಕಿನ ಶಿಖರಗಳಾದ ವೈಡೂರ್ಯದ ರುಚಕೆ, ರುಚಕದ ರುಚಕಕಾಂತಿ, ಮಣಿಪ್ರಭದ ರುಚಕಪ್ರಭೆ, ರುಚಕೋತ್ತರದ ಚಕ್ರಪ್ರಭೆ, ಎಂಬ ನಾಲ್ವರು ವಿದಿಕ್ಕನ್ಯೆಯ ರನ್ನು; ಸಮಸ್ತವಿದ್ಯಾವಿಶಾರದೆಯಾದ ಆ ಅರಸಿಗೆ ಗರ್ಭಶೋಧನ ಮೊದಲಾದ ಸ್ತ್ರೀಯರ ರಹಸ್ಯ ಸೇವಾಕ್ರಿಯೆಗಳಿಗೆಂದು– ಆ ಗಿರಿಯ ರತ್ನಕೂಟದ ವಿಜಯೆ, ರತ್ನ

ಸರ್ವರತ್ನದ ಜಯಂತಿಯುಂ ರತ್ನೋಚ್ಚಯದಪರಾಜಿತೆಯುಮೆಂಬೀ ವಿದ್ಯುದ್ದ್ಯುತಿಯರ್ ನಾಲ್ವರುಮಂ, ಮತ್ತಮನೇಕಾಂತವಿದ್ಯಾವಿನೋದಿಗನೇಕವಿನೋದಂಗಳಂ ಸಲಿಸಿಮೆಂದು ವಕ್ಷಾರೇಷ್ವಾಕಾರ ಕುಂಡಳಾದ್ಯನ್ಯನಗನಿವಾಸಿನಿಯರಪ್ಪ ಮಾಳಿಕೆ ಮಾಳಿನಿ ಕನಕದೇವಿ ಕನಕವೃದ್ಧಿ ಪುಷ್ಪಮಾಳೆ ಮಾಳಾವತಿ ಸುರಾದೇವಿ ತ್ರಿಸರೆ ಮೊದಲಾಗೆ ಪಲರುಮಮರಕಾಂತೆಯರಂ ಕಳಿಪುವುದುಮಾಕೆಯರ್ ನೂತನ ರತ್ನವೃಷ್ಟಿಯೊಡನೆ ಕಾಂತಾರತ್ನವೃಷ್ಟಿಯುಮಾದಂದದಿಂ ಸಂದಣಿಸಿ ಗಗನಮಾರ್ಗದಿನವನಿಗವತರಿಸಿ,

ಪದನಖಕಾಂತಿಯಿಂ ತಳಿದ ಪೂವಲಿಯಂ ನಯನಾಂಶುವಿಂದೆ ಕ ।
ಟ್ಟಿದ ಪೊಸಮುತ್ತಿನಚ್ಚಮಣಿತೋರಣಮಂ ಕಚಶೋಭೆಯಿಂದೆ ದೀ ॥
ಹದ ನವಿಲಂ ಕಳಕ್ವಣಿತದಿಂ ಗೃಹಕೋಕಿಳನಾದಮಂ ಮರು ।
ತ್ಸುದತಿಯರೆಯ್ದೆ ನೂರ್ಮಡಿಸುತುಂ ಪುಗುತಂದರಿಳೇಶಗೇಹಮಂ ॥ ೧೨೨

ಅಂತು ಪೊಕ್ಕು ಮಣಿಮಯವಿಳಾಸಭವನಕ್ಕೆ ವಂದು

ಹಿಮಕರಸಂಗದೆ ಮುಗಿವುದು ।
ಕಮಳಕ್ಕುಚಿತಮೆನೆ ಮುಗಿದ ಕೈ ನೊಸಲೊಳ್ ಚೆ ॥
ಲ್ವಮರ್ದಿರೆ ತಮತಮಗೆಱಗಿದ ।
ರಮರಿಯರೆಲ್ಲಂ ಜಿನಾಂಬಿಕಾಪದಯುಗದೊಳ್ ॥ ೧೨೩

ಪ್ರಭದ ವೈಜಯಂತಿ, ಸರ್ವರತ್ನದ ಜಯಂತಿ, ರತ್ನೋಚ್ಚಯದ ಅಪರಾಜಿತೆ, ಎಂಬ ನಾಲ್ವರು ವಿದ್ಯುತ್ಕಾಂತೆಯರನ್ನು; ಅನೇಕಾ ವಿದ್ಯಾವಿನೋದಿನಿಯಾದ ಆ ಮಹಿಳೆಗೆ ಅನೇಕ ವಿನೋದಗಳನ್ನು ಒದಗಿಸಿರೆಂದು– ವಕ್ಷಾರ, ಇಷ್ವಾಕರ, ಕುಂಡಳ ಮೊದಲಾದ ಗಿರಿಗಳಲ್ಲಿ ವಾಸಮಾಡುವ ಮಾಳಿಕೆ, ಮಾಳಿನಿ, ಕನಕದೇವಿ, ಕನಕವೃದ್ಧಿ, ಪುಷ್ಪಮಾಳೆ, ಮಾಳಾವತಿ, ಸುರಾದೇವಿ, ತ್ರಿಸರೆ ಮೊದಲಾದ ಹಲವರು ದೇವಕಾಂತೆಯರನ್ನು ಕಳುಹಿದನು. ನವೀನವಾದ ರತ್ನದ ಮಳೆಯೊಡನೆ ಕಾಂತಾರತ್ನಗಳ ಮಳೆಯೂ ಸುರಿಯಿತೆಂಬಂತೆ ಆ ಸ್ತ್ರೀಯರೆಲ್ಲರೂ ಸಂದಣಿಸಿ ಆಕಾಶಮಾರ್ಗದಿಂದ ಭೂಮಿಗೆ ಇಳಿದು ಬಂದರು. ೧೨೨. ತಮ್ಮ ಕಾಲುಗುರುಗಳ ಪ್ರಭೆಯಿಂದ ಪುಷ್ಪೋಪಹಾರವನ್ನೂ, ಕಣ್ಬೆಳಗಿನಿಂದ ಹೊಸ ಮುತ್ತಿನ ಹಾಗು ರತ್ನದ ತೋರಣಗಳನ್ನೂ, ಮುಡಿಯ ಶೋಭೆಯಿಂದ ಸಾಕಿದ ನವಿಲುಗಳನ್ನೂ, ಕಲನಾದದಿಂದ ಮನೆಯ ಕೋಗಿಲೆಗಳ ಧ್ವನಿಯನ್ನೂ ನೂರ್ಮಡಿಗೊಳಿಸುತ್ತ ದೇವಾಂಗನೆಯರು ಅರಮನೆಯನ್ನು ಪ್ರವೇಶ ಮಾಡಿದರು. ವ॥ ಹಾಗೆ ಪ್ರವೇಶಿಸಿ ರತ್ನಮಯವಾದ ಲೀಲಾಗೃಹಕ್ಕೆ ಬಂದು– ೧೨೩. ಚಂದ್ರನ ಸಹವಾಸದಲ್ಲಿ ಮುಗಿದುಕೊಳ್ಳುವುದು ಕೆಂದಾವರೆಗೆ ಉಚಿತವೆ ಎಂಬಂತೆ ಮುಗಿದ ಕೈಗಳನ್ನು ಹಣೆಗೆ ಅಂದವಾಗಿ ಜೋಡಿಸಿಕೊಂಡು, ದೇವರಮಣಿಯರೆಲ್ಲರೂ ಜಿನಮಾತೆಯ

ಅಂತು ನಿಜಮುಖಪ್ರತಿಬಿಂಬಕದಂಬದಿಂ ಮರಕತಪ್ರಘಣದೊಳ್ ಪದ್ಮಪುಷ್ಪೋಪಹಾರಮಂ ವಿರಚಿಸಿ ಬಟಿಯಂ ತಂತಮ್ಮ ನಿಯೋಗದಿಸುವೆಸಕ್ಕೆ ಪೊಕ್ಕೋಲಗಿಸುವಲ್ಲಿ,

ಸಿರಿಯ ಕರತಳದ ಸಿತಸರ ।
ಸಿರುಹದ ಮೈಯ್ಸಿರಿಯಿದರ್ಕಿದೇಕಚ್ಛತ್ರಂ ॥
ಪಿರಿದುಮೆನಿಸಿದುದು ಸುರಸುಂ ।
ದರಿದೇವಿಗೆ ಪಿಡಿದ ಮುತ್ತಿನೇಕಚ್ಛತ್ರಂ ॥ ೧೨೪

ಬೀಸುವ ಚಾಮರದೆಲರಿಂ ।
ಸೂಸುವ ಕುರುಳೋಳಿ ತೆರೆಯ ನೊರೆಗಂಬುಜದಿಂ ॥
ದೋಸರಿಪ ತುಂಬಿವಿಂಡಿನ ।
ದೇಸೆಯನೊಳಕೆಯ್ದುದಾಸ್ಯದೊಳ್ ನೃಪಸತಿಯಾ ॥ ೧೨೫

ಸೊಗಯಿಪ ಪೂರ್ವದಿಗಂಗನೆ ।
ಗಗನಶ್ರೀಗಿಂದುಕಳೆಯನೀವಂದದೆ ದೇ ॥
ವಿಗೆ ಪೊಳೆವ ಬಿಳಿಯೆಲೆಯ ವೀ ।
ಳಿಗೆಯಂ ಸುರಕನ್ನೆ ನೀಡಿದಳ್ ಪೆಱಳೊರ್ವಳ್ ೧೨೬

ರಮಣಿಯ ಮುಖಕ್ಕೆ ವೇಳೆತ ।
ನಮನಾಂತ ಸರೋಜದಂತೆ ತತ್ತಾಂಬೂಳ ॥
ಕ್ಕಮರವಧುವಾಂಪ ಕಾಂಚನ ।
ಕಮಳಾಕೃತಿಯೆನಿಪ ಡವಕೆ ಪಡೆದುದು ಚೆಲ್ವಂ ॥ ೧೨೭

ಪಾದಗಳಿಗೆ ಬಾಗಿ ನಮಸ್ಕರಿಸಿದರು. ವ॥ ಮತ್ತು ತಮ್ಮ ಮುಖಗಳ ಪ್ರತಿಬಿಂಬಗಳನ್ನು ಪಚ್ಚೆಯ ನೆಲಗಟ್ಟಿನಲ್ಲಿ ಮೂಡಿಸುವ ಮೂಲಕ ಪುಷ್ಪೋಪಹಾರವನ್ನು ರಚಿಸಿ, ಬಳಿಕ ತಮತಮಗೆ ವಿಧಿಸಿದ ಸೇವಾಕಾರ್ಯಗಳಿಗೆ ತೊಡಗಿದರು. ೧೨೪. ಸುರಸುಂದರಿಯೊಬ್ಬಳು ರಾಣಿಗೆ ಹಿಡಿದ ಮುತ್ತಿನ ಸತ್ತಿಗೆಯು, "ಲಕ್ಷ್ಮೀದೇವಿಯ ಕೈಯಲ್ಲಿರುವ ತಾವರೆಯ ಶೋಭೆಯಿದಕ್ಕಿದೆ. ಇದು ಸಾರ್ವಭೌಮ ಛತ್ರ" ಎಂದೆನಿಸಿತು. ೧೨೫. ಬೀಸುವ ಚಾಮರದ ಗಾಳಿಯಿಂದ ಮುಂಗುರುಳು ಒರೆದಾಡಲಾಗಿ, ತೆರೆಯ ನೊರೆಗೆ ಅಳುಕಿ ತಾವರೆಯಿಂದ ಹಿಮ್ಮೆಟ್ಟುವ ದುಂಬಿಗಳ ವಿಲಾಸವನ್ನು ಅರಸಿಯ ಮುಖವು ಹೊಂದಿತು. ೧೨೬. ಗಗನಲಕ್ಷ್ಮಿಗೆ ಪೂರ್ವದಿಗಂಗನೆಯು ಚಂದ್ರಕಳೆಯನ್ನು ಕೊಡುವಂತೆ, ರಾಣಿಗೆ ದೇವ ಕನ್ಯೆಯೊಬ್ಬಳು ಬಿಳಿಯೆಲೆಯ (ತಾಂಬೂಲ) ವೀಡೆಯನ್ನು ಇತ್ತಳು. ೧೨೭. ಅಮರ ವಧುವೊಬ್ಬಳ ತಾಂಬೂಲಕ್ಕಾಗಿ ಹೊಂದಾವರೆಯಾಕಾರದ ಕಾಳಾಂಜಿಯು ಆ ರಮಣಿಯ ಮುಖಕ್ಕೆ "ವೇಳೆತನ"ವನ್ನು (ಪ್ರತಿಜ್ಞಾಬದ್ಧ ದಾಸ್ಯ

ಒರ್ವಳೆ ಜಿನಜನನಿಯ ನಿಡು ।
ಪುರ್ವಂ ಸಮಜಿಲ್ಕೆ ನೀಡಿದಳ್ ಕುಡಿವೆರಲಂ ॥
ಗೀರ್ವಾಣಕಾಂತೆ ಕಾಮನ ।
ಕರ್ವಿನ ಬಿಲ್ಗರಲ ಸರಲನೋಲಗಿಸುವವೊಲ್ ॥ ೧೨೮

ಕಾಡಿಗೆಯನೆಚ್ಚು ಮೆಲ್ಲನೆ ।
ಗಾಡಿಗೆ ಸುರವನಿತೆ ತೆಗೆದ ಸೋಗೆ ಬೆಡಂಗಂ ॥
ಮಾಡಿದುದಾ ಕಾಂತೆಯ ಚೆ ।
ಲ್ವೋಡದೆಸೆವ ನೇತ್ರಪುತ್ರಿಕೆಯ ಸೋರ್ಮುಡಿವೊಲ್ ॥ ೧೨೯

ಸ್ಮರಮಂಗಳದರ್ಪಣದೊಳ್ ।
ವಿರಚಿಪವೊಲ್ ಸ್ವಸ್ತಿಕಾಂಕಮಂ ಚಂದನದಿಂ ॥
ಬರೆದಳ್ ಕಪೋಲದೊಳ್ ಬಿ ।
ತ್ತರದಿಂದಂ ಪತ್ರಭಂಗಮಂ ಮತ್ತೊರ್ವಳ್ ॥ ೧೩೦

ಸಸಿಯೀಕೆಯ ವದನಕ್ಕಿಂ ।
ತು ಸಮಂ ಪೇಟಿಂದು ತಂದು ಪಡಿದೋಱುವವೊಲ್ ॥
ಪೊಸಮುತ್ತಿನ ಪುಂಜದೆ ರಂ ।
ಜಿಸುವೋಲೆಯನಮರಿ ಪಾಲೆಯೊಳ್ ನಿಯಮಿಸಿದಳ್ ॥ ೧೩೧

ಸರಸಬಿಸವಲ್ಲಿಯಂ ಸ್ಮರ ।
ಕರಿಕುಂಭದೊಳೊಟ್ಟುತಿರ್ಪ ಕರಿಣಿಯ ತೆಱನಂ ॥
ಸುರತರುಣಿ ಪೋಲ್ತಳರಸಿಯ ।
ಗುರುಕುಚದೊಳ್ ಹಾರಲತೆಯನಳವಡಿಸುತ್ತುಂ ॥ ೧೩೨

ವೃತ್ತಿಯನ್ನು) ತಾಳಿದ ಕಮಲವೊ ಏನೊ ಎಂಬಂತೆ ಶೋಭಿಸಿತು. ೧೨೮. ಕಾಮನ ಬಿಲ್ಲಿಗೆ ಬಾಣವನ್ನು ತೊಡಿಸುವಳೊ ಏನೊ ಎಂಬಂತೆ ಒಬ್ಬಳು ಜಿನಮಾತೆಯ ನೀಳ ಹುಬ್ಬನ್ನು ತಿದ್ದುವುದಕ್ಕೆ ತನ್ನ ಬೆರಳ ತುದಿಯನ್ನು ಚಾಚಿದಳು. ೧೨೯. ರಾಣಿಗೆ ಕಾಡಿಗೆಯನ್ನು ಲೇಪಿಸಿ, ದೇವಕನ್ಯೆಯೊಬ್ಬಳು ಮೃದುವಾಗಿ ತೆಗೆದ ಸೋಗೆಯ ಚಿಹ್ನೆಯು ಕಣ್ಣುಗೊಂಬೆಯು ಸೋರ್ಮುಡಿಯಂತೆ ಬೆಡಗಾಯಿತು. ೧೩೦. ಮನ್ಮಥನ ಮಂಗಳವಾದ ಕನ್ನಡಿಯ ಮೇಲೆ ಸ್ವಸ್ತಿಕವನ್ನು ಬರೆಯುವಳೊ ಏನೊ ಎಂಬಂತೆ ಮತ್ತೊಬ್ಬಳು ಆಕೆಯ ಕೆನ್ನೆಗಳ ಮೇಲೆ ಚಂದನದಿಂದ ಮಕರಿಕಾಪತ್ರವನ್ನು ಅಂದವಾಗಿ ರೇಖಿಸಿದಳು. ೧೩೧. ಚಂದ್ರನು ಈಕೆಯ ಮುಖಕ್ಕೆ ಹೇಗೆ ಸಮನಾದನು ಎಂದು ತೂಗಿ ತೋರುವಂತೆ ಹೊಸ ಮುತ್ತಿನ ಗೊಂಚಲಿಂದ ಶೋಭಿಸುವ ಓಲೆಗಳನ್ನು ಸುರಾಂಗನೆಯೊಬ್ಬಳು ಆಕೆಯ ಕಿವಿಯ ಹಾಲೆಗೆ ಅಳವಡಿಸಿದಳು. ೧೩೨. ರಸದುಂಬಿದ ತಾವರೆ ಬಳ್ಳಿಯನ್ನು ಮನ್ಮಥಗಜದ ಕುಂಭದ ಮೇಲೆ ಒಟ್ಟುತ್ತಿರುವ ಹೆಣ್ಣಾನೆಯೊ ಏನೊ ಎಂಬಂತೆ, ಸುರಯುವತಿಯೊಬ್ಬಳು ಅರಸಿಯ ನೆಲೆವೊಲೆಗಳ ಮೇಲೆ ಮುತ್ತಿನ ಹಾರ

ರಮಣಿಯ ಮುಖಕ್ಕೆ ಮಣಿಮುಕು ।
ರಮನೊಪ್ಪಿರೆ ತೋರ್ಪ ದಿವಿಜವಧು ಸಮ್ಮುಖಮಂ ॥
ಹಿಮಕಿರಣಂಗಂ ರವಿಗಂ ।
ಸಮನಿಪ ಪುಣ್ಣವೆಯ ಸಂಜೆವೆಣ್ಣಂ ಪೋಲ್ತಳ್ ॥ ೧೩೩

ಅಳಿಮಾಲೆ ನೆಲಸಿದೆಳಲತೆ ।
ಬಳಸಿದ ವನಲಕ್ಷ್ಮಿಯಂದದಿಂ ಕೂರ್ವಾಳಂ ॥
ತಳೆದಂಗರಕ್ಕೆಗಮರೀ ।
ಕುಳಮಿರೆ ಕೆಲಗೆಲದೊಳೆಸೆದಳಂಬಿಕೆ ಜಿನನಾ ॥ ೧೩೪

ಅಡಿಯೂಡುವ ಮುಡಿವಿಕ್ಕುವ ।
ಪಡಿಯಱವೆಸಗೆಯ್ವ ಪಡಿಗಮಂ ಸಾರ್ಚುವ ಮ ॥
ತ್ತಡಿಗುಟ್ಟುವ ಪಾವುಗೆಯಂ ।
ಪಿಡಿದರ್ಪಿಪ ಬೆಸನೆ ದಿವಿಜಕಾಂತೆಯರ್ಗೆ ಬೆಸಂ ॥ ೧೩೫

ವನ್ನು ಅಳವಡಿಸಿದಳು. ೧೩೩. ಚಂದ್ರನನ್ನೂ ಸೂರ್ಯನನ್ನೂ ಎದುರುಬದುರಾಗಿ ನಿಲ್ಲಿಸಿಕೊಂಡ ಸಂಧ್ಯಾರಮಣಿಯೊ ಏನೊ ಎಂಬಂತೆ ದೇವಸುಂದರಿಯೊಬ್ಬಳು ಅರಸಿಯ ಮುಖಕ್ಕೆ ಮಾಣಿಕದ ಕನ್ನಡಿಯನ್ನು ಹಿಡಿದು ತೋರಿದಳು. ೧೩೪. ದುಂಬಿಗಳ ಹಾಡುಗಳನ್ನೊಡಗೊಂಡ ಎಳೆಯ ಬಳ್ಳಿಗಳ ಸುತ್ತಿನಲ್ಲಿ ಒಪ್ಪುವ ವನಲಕ್ಷ್ಮಿಯೊ ಏನೊ ಎಂಬಂತೆ, ಹರಿತವಾದ ಖಡ್ಗಗಳನ್ನು ಹಿಡಿದು ಅಂಗರಕ್ಷೆಗೆ ನಿಂತ ದೇವಕನ್ಯೆಯರ ಮಧ್ಯದಲ್ಲಿ ಜಿನಾಂಬಿಕೆ ಶೋಭಿಸಿದಳು. ೧೩೫. ಅಂಗಾಲಿಗೆ ಅಲತೆಗೆಯನ್ನು ಬಳಿಯುವ ಮುಡಿಯನ್ನು ಬಾಚುವ, ದ್ವಾರಪಾಲ ಕಾರ್ಯವನ್ನು ಮಾಡುವ, ಕಾಳಾಂಜಿ ಹಿಡಿಯುವ, ನೆಲವನ್ನು ಉಗ್ಗಡಿಸುವ, ಪಾದುಕೆಗಳನ್ನು ತಂದು ಒಪ್ಪಿಸುವ ಕೆಲಸವೇ

---

ಅನಂತಸಿರಿನಿಧಿವಾಸದೊ ।
ಳನಂತಚೋದಾದಿರಾಜನೊಪ್ಪುವ ಗುಣದ ॥
ಲ್ಲನಂಗಜಯಕಳಸವೆನ ।
ಲ್ವನಮಾತೆಯ ಗಂಧವಿಬುಧಭೂಷಣವೆಸಗುಂ (?) ॥ ೧೩೧

(ನಾಸಿಕಾಭರಣಶ್ಲೇಷಾರ್ಥಂ)

ಎಂದು ೧೩೩ನೆಯ ಪದ್ಯವಾಗಿ ಒಂದು ಪ್ರತಿಯಲ್ಲಿದೆ. ಇದು ಗ್ರಂಥಕರ್ತನ ಪದ್ಯದಂತೆ ತೋರಿಬರುವುದಿಲ್ಲ.

ನಡೆಯಿಪರನುಲೇಪನಮಂ ।
ಮಡಿಯಂ ಮಾಲೆಯನಮರ್ತ್ಯಲೋಕದವಂ ತಂ ॥
ದೆಡೆವಿಡದೆ ಘಟ್ಟಿವಳ್ತಿಯ ।
ಮಡಿವಳ್ತಿಯ ಮಾಲೆಗಾರ್ತಿಯಂದದಿನರೆಬರ್ ॥ ೧೩೬

ಮತ್ತಂ

ದೇಸೆಯನಾಂತರೆಯ್ದೆ ಭುವನತ್ರಿತಯಾಂಬಿಕೆಗಂಗರಾಗಮಂ ।
ಪೂಸುವ ಮಜ್ಜನಂಬುಗಿಸುವಾರತಿಯೆತ್ತುವ ಪೀಲಿಗುಂಚಮಂ ॥
ಬೀಸುವ ಬೋನಮಂ ಸಮೆವ ಶಂಕಮನೊತ್ತುವ ಹಂಸತಳ್ಪಮಂ ।
ಪಾಸುವ ಬಾಸಿಗಂಗುಡುವ ಗದ್ದುಗೆಯಿಕ್ಕುವ ದೇವಕಾಂತೆಯರ್ ೧೩೭

ಮತ್ತಂ ಸಂಗೀತಕಪ್ರಸಂಗಮಂ ಪದವಡಿಸುವೆಡೆಯೊಳ್

ಸಾರಣೆಯ ಸಕಳನಿಃಕಳ ।
ಚಾರಣೆಯ ಬೆಡಂಗು ಸರದ ರಾಗದ ಸವಿಯಂ ॥
ಪೂರಿಸೆ ಕಿವಿಯೊಳ್ ದಿವಿಜ ।
ಸ್ತ್ರೀ ರಮಣಿಯ ಮುಂದೆ ವೀಣೆಯಂ ಬಾಜಿಸಿದಳ್ ॥ ೧೩೮

ಮತ್ತಂ ಶಾರೀರವೀಣೆಯೊಳ್ ಪಾಡುವಲ್ಲಿ

ಸ್ವರದೊಳ್ ಪದದೊಳ್ ತಾಳದೊ ।
ಳಿರದವಧಾನದೊಳಳಂಕೆಗೊಂಡಿರೆ ರಾಗೋ ॥

ಕೆಲಸವಾಯಿತು ದೇವ ಕಾಂತೆಯರಿಗೆ. ೧೩೬. ಘಟ್ಟಿವಳಿತಿಯರೂ, ಮಡಿವಳಿತಿಯರೂ, ಮಾಲೆಗಾರ್ತಿಯರೂ ದೇವಲೋಕದಿಂದ ತಂದ ಲೇಪದ್ರವ್ಯಗಳನ್ನು ಬಳಿಯುವರು, ವಸ್ತ್ರಗಳನ್ನು ಉಡಿಸುವರು ಮತ್ತು ಮಾಲೆಗಳನ್ನು ಮುಡಿಸುವರು. ಮತ್ತು– ೧೩೭. ಆ ತ್ರಿಭುವನ ಮಾತೆಗೆ ಅಂಗರಾಗವನ್ನು ಲೇಪಿಸುವ, ಸ್ನಾನ ಮಾಡಿಸುವ, ಆರತಿ ಬೆಳಗುವ, ಪೀಲಿಯ ಚಾಮರ ಬೀಸುವ, ಆಹಾರವನ್ನಣಿಗೊಳಿಸುವ, ಶಂಖವನ್ನೂದುವ, ಹಂಸತಲ್ಪದ ಹಾಸುಗೆಯನ್ನು ಹಾಸುವ, ಮುಡಿಯಲು ಮಾಲೆ ನೀಡುವ, ಕುಳ್ಳಿರಲು ಪೀಠವಿಡುವ ದೇವಾಂಗನೆಯರು ತುಂಬ ಅಂದವಾಗಿ ಸೇವೆ ಮಾಡಿದರು. ವ॥ ಸಂಗೀತ ಸೇವೆಯನ್ನು ಅರ್ಪಿಸುವಾಗ– ೧೩೮. ಸಾರಣೆ, ಸಕಳ ನಿಃಕಳಗಳ ಬೆಡಗು, ಸ್ವರದ ರಾಗದ ಸವಿ, ಕಿವಿಗಳನ್ನು ತುಂಬುವಂತೆ ದೇವಕನ್ಯೆಯೊಬ್ಬಳು ಅರಸಿಯ ಮುಂದೆ ವೀಣೆಯನ್ನು ನುಡಿಸಿದಳು. ವ॥ ಮತ್ತು ವೀಣೆಗೆ ಸಮನಾದ ಕಂಠದಿಂದ ಹಾಡುತ್ತಿರುವಾಗ– ೧೩೯. ಸ್ವರ, ಪದ, ತಾಳ, ಅವಧಾನಗಳಲ್ಲಿ ಮೇಳಗೊಂಡು ಲಯಬದ್ಧವಾದ ರಾಗ

ಚ್ಚರಣಲಯಗೀತಮಾಯ್ತು ।
ಚ್ಚರಿ ತದ್ಗಂಧರ್ವವಿದ್ಯೆ ಸುರಸುಂದರಿಯಾ ॥ ೧೩೯

ಮತ್ತಮೊರ್ವಳ್

ಅಮರ್ದಿನ ಕೊಳಲಳಿನಿಯದೆನೆ ।
ಸಮಂತು ಸಪ್ತಸ್ವರಂಗಳುಂ ರಂಜಿಪಂ ರಾ ॥
ಗಮನುಗುಟಿ ಕೊಳಲ ನುಡಿಸಿದ ।
ಳಮರಾಂಗನೆ ಬಿಲ್ಲನತನು ಗೊಲೆಗೊತ್ತುವಿನಂ ॥ ೧೪೦

ಕುಡುವಿನ ಸಂಚದ ಕೂಟಂ ।
ತೊಡರದೆ ಪಾಟಪ್ರವಾಹದೊಳ್ ಸಾಡೆ ನಯಂ ॥
ಬಡೆದಿರೆ ಬಾಜಿಸಿದಳ್ ಮುಱೆ।
ದೆಡೆದೊಡೆಯೊಳ್ ತಳೆದು ಡಕ್ಕೆಯಂ ಪೆಱತೊರ್ವಳ್ ॥ ೧೪೧

ಎಡಗೆಯ್ ಬಲಗೆಯ್ ತೋರಂ ।
ಕಡುಸಣ್ಣಂ ಕದಳಿ ಕನ್ನವಟ್ಟಂ ತಾನೆಂ ॥
ಬೆಡೆಯೊಳ್ ಪ್ರಹರಣಮಿಂಪಂ ।
ಪಡೆದಿರೆ ಸುರವಧು ಮೃದಂಗಮಂ ಬಾಜಿಸಿದಳ್ ॥ ೧೪೨

ತಾಳದ ಗೀತದ ವಾದ್ಯದ ।
ಮೇಳನದಿಂದಭಿನಯಂಗಳಭಿನವಭಾವ ॥
ಕ್ಕಾಳಂಬಮಾಗೆ ರಸದೊಳ ।
ಗೋಲಾಡುವ ತೆಱದಿನಾಡಿದಳ್ ಮತ್ತೊರ್ವಳ್ ॥ ೧೪೩

ದಿಂದ ಕೂಡಿದ ಗೀತವು ಆ ದೇವಸುಂದರಿಯ ಗಂಧರ್ವವಿದ್ಯೆಯನ್ನು ಆಶ್ಚರ್ಯಕರವಾಗಿ ತೋರಿತು. ಮತ್ತೊಬ್ಬಳು– ೧೪೦. ಅಮೃತವನ್ನೆ ಎರೆವಂತೆ ಸಪ್ತಸ್ವರಗಳಿಂದ ಮಧುರವಾದ ರಾಗವನ್ನು ಹೊಮ್ಮಿಸುತ್ತ ಅಮರವಧುವೊಬ್ಬಳು ಕೊಳಲು ನುಡಿಸುತ್ತಿರಲು ಮನ್ಮಥನು ತನ್ನ ಬಿಲ್ಲನ್ನು ಹೆದೆಯೇರಿಸಿದನು. ೧೪೧. ಕುಡುವಿನ ಸಂಚದ ಮೇಳ ತಪ್ಪದಂತೆ "ಪಾಟ"ಗಳನ್ನು ತುಂಬ ನಯವಾಗಿ ಅಳವಡಿಸುತ್ತ ಎಡದೊಡೆಯ ಮೇಲಿಟ್ಟುಕೊಂಡ ಢಕ್ಕೆಯನ್ನು ಒಬ್ಬಳು ಚೆಲುವಾಗಿ ಬಾರಿಸಿದಳು. ೧೪೨. ಎಡಗೈ, ಬಲಗೈ, ತೋರ, ಸಣ್ಣ, ಕದಳಿ, ಕನ್ನವಟ್ಟ, ಮೊದಲಾದವುಗಳಲ್ಲಿ ಮಧುರವಾಗಿ ಪ್ರಹಾರ ಮಾಡುತ್ತ ಸುರವಧು ವೊಬ್ಬಳು ಮೃದಂಗವನ್ನು ನುಡಿಸಿದಳು. ೧೪೩. ತಾಳ, ಗೀತ, ಹಾಗು ವಾದ್ಯ– ಈ ಮೂರರ ಮೇಳದಿಂದ ಹೊಸ ಹೊಸ ಭಾವಗಳನ್ನು ಅಭಿನಯಿಸುತ್ತ

ಅದಲ್ಲದೆಯುಂ
ಸರಸಕವಿಕಾವ್ಯಮಧುಮ।
ತ್ತೆ ರಾಗದೊಳ್ ಪೊರೆದು ಪೊಂಗೆ ತನಿಗಂಪೊಗೆದಂ॥
ತಿರೆ ನುಣ್ದನಿಯಿಂದೋದುವ।
ಸುರವಾಚಿಕೆ ಸತಿಗೆ ಪುಳಕಮಂ ಪುಟ್ಟಿಸಿದಳ್॥ ೧೪೪

ಅದಲ್ಲದೆಯುಂ ಅಚ್ಚರಸಿಯರೊಳಗಣ ಮೃಣಾಳಿಕೆಯೆಂಬಳ್ ನಿಜಪದತಳದ ನುಣ್ಪೆಳಗಿನೊಡನೆ ಕುಂಕುಮರಸದ ಚಳಯಮಂ ಪಸರಿಸಿಯುಂ, ಲವಲಿಕೆಯೆಂಬಳಂಘ್ರಿನಖರುಚಿ ತಡಂಗಲಸೆ ಪೂವಲಿ ಗೆದಜೆಯುಂ, ಉತ್ಪಳಿಕೆಯೆಂಬಳವತಂಸೋತ್ಪಳಂಗಳ್ ಕದಪಿನೊಳ್ ತೆಱಂಬೊಳೆಯೆ ರಂಗವಲಿಯ ನಳವಡಿಸಿಯುಂ, ಮಂದಾರಿಕೆಯೆಂಬಳಿಂದ್ರವನದರಲ್ಗಳಂ ತೊಡರ್ಚುವಲ್ಲಿ ಕಂಕಣದ ಮೆಲ್ಲುಲಿಯಿ ನೆಳಸುವಳಿಗಳಿನಿಯ ದನಿಯಂ ತನಿಗೊರ್ವಿಸಿಯುಂ, ಲವಂಗಿಕೆಯೆಂಬಳ್ ಲವಂಗಪಲ್ಲವದ ತೋರಣ ಗಣಮಂ ತೊಡರ್ಚುವೆಡೆಯೊಳ್ ತೆಱೆದ ತೋಳ ಮೊದಲ ನಱುಗಂಪಿನಿಂದದರ್ಕೆ ಪೊಸಗಂಪಿನಣ್ಪ ನಿಕ್ಕಿಯುಂ, ಅಮೃತಮತಿಯೆಂಬಳ್ ಅಮೃತಾಹಾರದ ಬೋನಮಂ ಬಿಸುಪಿಂಗೆ ಪೊಸದಳಿರನಿಕ್ಕಿ ನೆಗಪಿದಂತೆ ಕೆಂದಳದ ಕೆಂಪು ಬಳಸೆ ವಿಳಾಸದಿಂದನ್ನವಾಸಕ್ಕೆ ನಡೆಸಿಯುಂ, ಚಂದ್ರಿಕೆಯೆಂಬಳ್ ಚಂದ್ರಕಾಂತಕಲಶಂ

ರಸದಲ್ಲಿ ಓಲಾಡುವಂತೆ ಮತ್ತೊಬ್ಬಳು ನರ್ತಿಸಿದಳು. ಅದಲ್ಲದೆ- ೧೪೪. ರಸಮಯವಾದ ಕಾವ್ಯಾಸ್ವಾದದಿಂದ ಮತ್ತಳಾದ ದೇವವಾಚಿಕೆಯೊಬ್ಬಳು ರಾಗದಲ್ಲಿ ಅದ್ದಿ ತನಿಯಾದ ಪರಿಮಳವನ್ನು ಅಳವಡಿಸಿದಂತಿರುವ ಮಧುರಸ್ವರದಿಂದ ಓದಿ ಅರಸಿಗೆ ರೋಮಾಂಚವನ್ನು ಮೂಡಿಸಿದಳು. ವ॥ ಅದಲ್ಲದೆ ಅಪ್ಸರೆಯರೊಳಗಿನ ಮೃಣಾಳಿಕೆಯೆಂಬವಳು ತನ್ನ ಅಂಗಾಲ ನುಣ್ಪೆಳಗಿನೊಡನೆ ಕುಂಕುಮದ್ರವದ ತಳಿಯನ್ನು ರಚಿಸಿದಳು; ಲವಲಿಕೆಯೆಂಬವಳು ತನ್ನ ಕಾಲುಂಗುರ ಪ್ರಭೆಯೊಡನೆ ಪುಷ್ಪೋಪಹಾರವನ್ನು ನಿರ್ಮಿಸಿದಳು; ಉತ್ಪಳಿಕೆಯೆಂಬವಳು ತನ್ನ ಕರ್ಣಭೂಷಣ ವಾದ ಉತ್ಪಲಗಳು ಕೆನ್ನೆಗಳಲ್ಲಿ ಕಾಂತಿಗೊಡುತ್ತಿರಲಾಗಿ ರಂಗವಲ್ಲಿಯನ್ನು ಬರೆದಳು; ಮಂದಾರಿಕೆಯೆಂಬವಳು ನಂದನವನದ ಹೂಗಳನ್ನು ಹೆಣೆಯುತ್ತ ಪರಿಮಳಕ್ಕೆ ಮರುಳಾಗಿ ಬಂದ ಹೆಣ್ದುಂಬಿಗಳ ಗುಂಜಾರವದ ಸೊಗಸನ್ನು ತನ್ನ ಕೈಬಳೆಗಳ ಮಧುರ ಕಿಂಕಿಣಿಯಿಂದ ಹೆಚ್ಚಿಸಿದಳು; ಲವಂಗಿಕೆಯೆಂಬವಳು ಲವಂಗದ ತಳಿರುಗಳಿಂದ ತೋರಣವನ್ನು ಕಟ್ಟುತ್ತ ಅನಾವೃತವಾದ ತನ್ನ ಕಂಕುಳ ಸುಗಂಧದಿಂದ ಅದಕ್ಕೆ ಹೊಸ ಪರಿಮಳವನ್ನು ಅಂಟಿಸಿದಳು; ಅಮೃತಮತಿಯೆಂಬವಳು ಅಮೃತಾಹಾ ರದ ಅಡುಗೆಯನ್ನು, ಬಿಸಿಯಾಗಿದೆಯೆಂದು ಹೊಸ ಚಿಗುರೆಲೆಗಳಿಂದ ಹಿಡಿದೆತ್ತಿದಳೊ ಏನೊ ಎಂಬಂತೆ ಅಂಗೈಯ ಕೆಂಬೆಳಕು ಪಸರಿಸುತ್ತಿರಲಾಗಿ ಅದನ್ನು ಭೋಜನಶಾಲೆಗೆ ಕೊಂಡು ಹೋದಳು; ಚಂದ್ರಿಕೆಯೆಂಬವಳು ಚಂದ್ರಕಾಂತದ ಕಲಶಗಳನ್ನು ತನ್ನ ಮುಖ ಚಂದ್ರದ ಪ್ರಭೆಯಿಂದ ಒಸರಿಸಿ ಅವು ತುಂಬುವಂತೆ ಮಾಡಿ ಇರಿಸಿದಳು; ಚಿತ್ರಲೇಖೆ

ಗಳನಾತ್ಮೀಯಮುಖಚಂದ್ರಸ್ಮೇರಚಂದ್ರಿಕೆಯಿನೊಸರ್ಚಿ ಪೆರ್ಚಿ ಕರಹಾರದೊಳರೆಯಾಗದಿರಿಸಿಯುಂ, ಚಿತ್ರಲೇಖೆಯೆಂಬಳ್ ವಿಚಿತ್ರಶಾಲೆಯೊಳ್ ವಿವಿಧವಿದ್ಧಂಗಳಂ ಬರೆದು ಬೞಿಯಂ ಪ್ರದೇಶಶುದ್ಧಿಯಿಂ ಪೆಱಮೆಟ್ಟಿ ನೋಡುವಲ್ಲಿ ಪಸರಿಸುವ ಕಣ್ಬೆಳಗಿನಿಂದರ್ಥೋದಕದೊಳಂಕೆಗೆಯ್ದಂತೆಮಾಡಿಯುಂ; ಪ್ರಭಾವತಿಯೆಂಬಳ್ ಮದನಮಂದಿರದೋವರಿಯೊಳಂಗಪ್ರಭೆಯಿಂ ತೆರಳ್ದ ಕೞ್ತಲೆಯಂ ಮತ್ತೆ ಮಣಿದೀಪಂಗಳಿಂ ನಿರವಶೇಷಂಮಾಡಿಯುಂ, ಮಾಳತಿಕೆಯೆಂಬಳ್ ಅರಸಿಯ ಬೆನ್ನ ಚೆಲ್ವಿಂಗೆ ಸೋಲ್ತು ತನ್ನ ಬೆನ್ನಂ ಬೆನ್ನಿತ್ತುದೆನಿಸಿ ಬೆಂಗೊಟ್ಟು ಮಲಂಗಿಸಿಯುಂ, ನಿಪುಣಿಕೆಯೆಂಬಳ್ ಅರ್ಹದರ್ಚನೋಪಕರಣಂಗಳನಳವಡಿಸುವಲ್ಲಿ ಪುಣ್ಯದೇವತೆಯ ಸನ್ನಿದವಾದಳೆನಿಸಿಯುಂ, ಪದ್ಮಿಕೆಯೆಂಬಳುಪವನದ ಪದ್ಮಾಕರದಂಚೆವಿಂಡಂ ನಡೆಯಿಪೆಡೆಯೊಳವರ್ಕಲಸಗತಿವಿಳಾಸಮನುಪದೇಶಿಸಿಯುಂ, ಮಯೂರಿಕೆಯೆಂಬಳ್ ಗೃಹಮಯೂರಂಗಳಂ ಕೇಶಭಾರಕ್ಕೋರನ್ನಮೆಂಬ ಭಾರದಿಂ ಕಾರಾಗೃಹಮಂ ಪುಗಿಸುವಂತೆ ಧಾರಾಗೃಹಮಂ ಪುಗಿಸಿಯುಮಿಂತು

ಮಱಸನಮಂ ಬಿಟ್ಟೊಳಗಣ ।
ಪೊಱಗಣ ಕೆಲಸಂಗಳೆಲ್ಲಮಂ ದೇವಿಯ ಕ ॥
ಣ್ಣಱಿದುಂ ಮನಮಱಿದುಂ ಬಿಡ ।
ದಱುದಿಂಗಳ್ ದೇವಕಾಂತೆಯರ್ ನಡೆಯಿಸಿದರ್ ॥ ೧೪೫

ಯೆಂಬವಳು ಚಿತ್ರಶಾಲೆಯಲ್ಲಿ ನಾನಾವಿಧದ ಚಿತ್ರಗಳನ್ನು ಬರೆದು ಬಳಿಕ ಹಿಂದೆ ಸರಿದು ನಿಂತು ಪರೀಕ್ಷಿಸಿ ನೋಡುವಾಗ ತನ್ನ ಕಣ್ಬೆಳಗಿನಿಂದ ಅವುಗಳೆಲ್ಲ ನೀರು ಬಣ್ಣದಲ್ಲಿ ಬರೆದುವೊ ಏನೊ ಎಂಬಂತೆ ಮಾಡಿದಳು; ಪ್ರಭಾವತಿಯೆಂಬವಳು ಶಯ್ಯಾಗೃಹದಲ್ಲಿ ದೇಹಕಾಂತಿಯಿಂದ ಹಿಮ್ಮೆಟ್ಟಿದ ಕತ್ತಲೆಯನ್ನು ಮತ್ತೆ ರತ್ನದೀಪಗಳ ಪ್ರಕಾಶದಿಂದ ನಿರ್ಮೂಲಗೊಳಿಸಿದಳು; ಮಾಳತಿಕೆಯೆಂಬವಳು ಅರಸಿಯ ಬೆನ್ನ ಚೆಲುವಿಗೆ ಮನ ಸೋತು, ತನ್ನ ಬೆನ್ನು ಸೋತು, "ಬೆನ್ನು ತೋರಿಸಿತೆಂ"ಬಂತೆ, ಅವಳಿಗೆ ಆತುಕೊಳ್ಳಲು ತನ್ನ ಬೆನ್ನಿತ್ತಳು; ನಿಪುಣಿಕೆಯೆಂಬವಳು ಜಿನಾರ್ಚನೆಯ ಉಪಕರಣಗಳನ್ನು ಅಣಿಗೊಳಿಸುತ್ತಿರುವಾಗ ಪುಣ್ಯದೇವತೆಯೆ ಪ್ರತ್ಯಕ್ಷವಾದಳೆಂಬಂತೆ ತೋರಿದಳು; ಪದ್ಮಿಕೆಯೆಂಬವಳು ಉಪವನದ ಹಂಸಸಮೂಹವನ್ನು ನಡೆಸಿಕೊಂಡು ಹೋಗುವಾಗ ಅವುಗಳಿಗೆ ಮಂದಗಮನದ ಪಾಠ ಹೇಳಿಕೊಡುತ್ತಿದ್ದಳು; ಮಯೂರಿಕೆಯೆಂಬವಳು ಅರಮನೆಯಲ್ಲಿ ಸಾಕಿದ ನವಿಲುಗಳನ್ನು "ಇವು ನಮ್ಮ ಮುಡಿಗೆ ಸದೃಶವಾಗಿವೆ"ಯೆಂಬ ಮತ್ಸರದಿಂದ ಸೆರೆಮನೆಗೆ ಅಟ್ಟುತ್ತಿರುವಳೊ ಏನೊ ಎಂಬಂತೆ ಧಾರಾಗೃಹದೊಳಗೆ ಹೊಗಿಸಿದಳು. ಹೀಗೆ– ೧೪೫. ಒಳಗಿನ ಹೊರಗಿನ ಎಲ್ಲ ಕೆಲಸಗಳನ್ನೂ, ಅರಸಿಯ ಇಂಗಿತವರಿತು, ಆಕೆಯ ಮನ ಮೆಚ್ಚುವಂತೆ ಸತತವಾಗಿ ಆರುತಿಂಗಳವರೆಗೆ ದೇವತೆಗಳು ನೆರವೇರಿಸಿದರು. ಅಷ್ಟೆ

ಅಂತುಮಲ್ಲದೆಯುಂ

ವಿನುತಜಿನಾರ್ಭಕಾವತರಣಕ್ಕುಪಯೋಗ್ಯಮಿದಾದುದಾದಮೆಂ ।
ಬಿನಮಮರೀಚಯಂ ಪರಮಪಾವನವಸ್ತುಗಳಿಂದೆ ಗರ್ಭಶೋ ॥
ಧನಮನೊಡರ್ಚಿ ನಿರ್ಮಳತೆವೆತ್ತುದು ದೇವಿಯುದಾತ್ತಮೂರ್ತಿ ಚಂ ।
ದನಸಲಿಲಂಗಳಿಂ ತೊಳೆದ ಮುತ್ತಿನ ಪುತ್ತಳಿಯಿಂತಿದೆಂಬಿನಂ ॥ ೧೪೬

ಅತಿಶುದ್ಧಮಾಯ್ತು ಸತಿಯಾ ।
ಕೃತಿ ದಿವ್ಯದ್ರವ್ಯಗರ್ಭಶೋಧನದಿಂದು ॥
ಜ್ಝಿತಲಕ್ಷ್ಮಮೆನಿಸಿ ಲೋಕ ।
ಸ್ತುತಮಾದಮೃತಾಂಶುಲೇಖೆ ತಾನೆಂಬಿನೆಗಂ ॥ ೧೪೭

ಮತ್ತಂ

ಪಿರಿದುಂ ದೋಷಾನುಷಂಗಂ ಕಿಡೆ ತಮದಿನಗಲ್ತಂದ ಚಂದ್ರಾಂಶುವಂ ಮಾಂ ।
ಕರಿಸುತ್ತುಂ ನಾಡೆ ತನ್ನುಜ್ಜಳಿಕೆಯಿನುಚಿತೋನ್ಮೇಷಮಂ ಬಂಧು ಪದ್ಮೋ ॥
ತ್ಕರದೊಳ್ ಮಾಡುತ್ತೆ ರಾಗಾಭ್ಯುದಯಮನೊಳಕೆಯ್ದೆಯ್ದೆ ಸಾಫಲ್ಯಮಂ ಕ ।
ಣ್ಗೆರದಿತ್ತಳ್ ಕಾಂತೆ ಕಾಲ್ಯಪ್ರಭವದಿನಕನತ್ಕಾಂತಿಯೆಂಬಂದದಿಂದಂ ॥ ೧೪೮

ಉಡುವುದು ದೇವಲೋಕದೊಳಮಿಂತಿದೆ ಸಾರಮೆನಿಪ್ಪ ಸೀರೆ ಮೇಣ್ ।
ತುಡುವುದು ದಿವ್ಯಮಪ್ಪ ಹರಿಚಂದನದೊಂದನುಲೇಪಮಾಗಳುಂ ॥
ಮುಡಿವುದು ಪಾರಿಜಾತದಲರ್ವಾಸಿಗಮೆಂಬ ವಿಳಾಸದೇಟಿಗ್ಗಿಯಂ ।
ಪಡೆವರೆ ತೀರ್ಥಕೃಜ್ಜನನಿಯಂದದೆ ಮತ್ತಿನ ಮರ್ತ್ಯಕಾಂತೆಯರ್ ॥ ೧೪೯

ಅಂತು ಸಂತತೋಲ್ಲಸಿತದೇವಕಾಂತಾಸಂತಾನಸಂಪಾದಿತೋತ್ಸವಪರಂಪರೆಗಳಿಂ ಪರಮನ ಚರಮಗರ್ಭಾವತರಣಮನಱಿದು,

ಅಲ್ಲದೆ– ೧೪೬. ಪರಮ ಜಿನಾರ್ಭಕನ ಅವತಾರಕ್ಕೆ ಇದು ಯೋಗ್ಯವಾಯಿತೆಂಬವರೆಗೆ ದೇವವಧೂಸಮೂಹವು ಪರಮ ಪವಿತ್ರವಾದ ದ್ರವ್ಯಗಳಿಂದ ಗರ್ಭವನ್ನು ಶುದ್ಧಗೊಳಿಸಲಾಗಿ, ಅರಸಿಯ ಶ್ರೇಷ್ಠವಾದ ರೂಪವು ಗಂಧದ ನೀರಲ್ಲಿ ತೊಳೆದ ಮುತ್ತಿನ ಪುತ್ಥಳಿಯಂತೆ ನಿರ್ಮಲವಾಯಿತು. ೧೪೭. ದೇವಲೋಕದ ದ್ರವ್ಯಗಳಿಂದ ಗರ್ಭಶೋಧನೆ ಮಾಡಲಾಗಿ ಆ ಸತಿಯ ದೇಹವು ಕಲಂಕರಹಿತವಾದ ಚಂದ್ರಲೇಖೆಯೊ ಏನೊ ಎಂಬಂತೆ ಅತ್ಯಂತ ಶುದ್ಧವಾಯಿತು. ೧೪೮. "ದೋಷಾನುಷಂಗಂ ಕಿಡೆ" (೧. ಕತ್ತಲೆಯ ಸಹವಾಸ ತೊಲಗಲಾಗಿ ೨. ದೇಹದೊಳಗಿನ ದೋಷಗಳು ನಿವಾರಣೆಯಾಗಲಾಗಿ), ಕತ್ತಲೆಯನ್ನು ದೂಡಿ ಬಂದ ಚಂದ್ರಕಿರಣಗಳನ್ನು ತನ್ನ ಉಜ್ವಲತೆಯಿಂದ ಮಸುಳಿಸಿ, "ಬಂಧು ಪದ್ಮೋತ್ಕರ"ಕ್ಕೆ (೧. ತನಗೆ ಪ್ರಿಯವಾದ ತಾವರೆಗಳಿಗೆ ೨. ಚನ್ನ ಬಂಧುಗಳೆಂಬ ತಾವರೆಗಳಿಗೆ) ಹಿಗ್ಗನ್ನುಂಟುಮಾಡಿ, "ರಾಗಾಭ್ಯುದಯ" (೧. ಕೆಂಬಣ್ಣದ ಸಂಧ್ಯಾ ಪ್ರಭೆಯ ಅತಿಶಯ ೨. ಸಂತೋಷದ ಅಧಿಕ್ಯ) ವನ್ನು ಒಳಗೊಂಡು, ಆ ಕಾಂತೆಯು

ವರರತ್ನೋತ್ಪತ್ತಿ ಪೊರ್ದುತ್ತಿರೆ ಸಮನಿಸಿದತ್ತರ್ಣವಕ್ಕೆಯ್ದೆ ರತ್ನಾ।
ಕರಮೆಂಬೀ ಮೈಮೆಯೆಂಬಂತಿರೆ ಜಿನಪತಿ ಲೋಕೋತ್ತಮಂ ಪುತ್ರನಾಗು॥
ತ್ತಿರೆ ಸಾರ್ತರ್ಕುಂ ತ್ರಿಲೋಕೀಜನಕೆ ಜನಕನಲ್ತೇಮಹಾಸೇನನೆಂಬೊ।
ಳ್ಪಿರದೆನ್ನಂ ಕೆನ್ನಮೆಂದೇಂ ನಲಿದನೊ ಮನದೊಳ್ ಭಾರತೀಭಾಳನೇತ್ರಂ॥ ೧೫೦

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿಪದಪದ್ಮನಿಧಾನದೀಪವರ್ತಿ

**ಶ್ರೀಮದಗ್ಗಳದೇವ**

ವಿರಚಿತಮಪ್ಪ

**ಚಂದ್ರಪ್ರಭಪುರಾಣದೊಳ್**

ಗರ್ಭಾವತರಣಕಲ್ಯಾಣವರ್ಣನಂ

ಏಕಾದಶಾಶ್ವಾಸಂ

ಪ್ರಭಾತದ ಉಜ್ವಲಕಾಂತಿಯಂತೆ (ನೋಡುವವರ) ಕಣ್ಣಿಗೆ ಸಫಲತೆಯನ್ನು ಉಂಟು ಮಾಡಿದಳು. ೧೪೯. ಉಡುವುದು ದೇವಲೋಕದಲ್ಲಿ ಶ್ರೇಷ್ಠತಮವೆನಿಸಿದ ಸೀರೆ, ತೊಡುವುದು ಉತ್ಕೃಷ್ಟವೆನಿಸುವ ದಿವ್ಯಾಭರಣ, ಲೇಪಿಸುವುದು ಹರಿಚಂದನ, ಮುಡಿದುಕೊಳ್ಳುವುದು ದೇವಪಾರಿಜಾತದ ಬಾಸಿಗ– ಇಂತಹ ಶೋಭೆಯ ವೈಭವವನ್ನು ತೀರ್ಥಂಕರ ಮಾತೆಯಂತೆ ಬೇರೆ ಯಾವ ಮರ್ತ್ಯಸ್ತ್ರೀ ಪಡೆಯಬಲ್ಲಳು ? ವ॥ ಹೀಗೆ ಸದಾ ಉಲ್ಲಾಸಮಯರಾದ ದೇವಾಂಗನೆಯರಿಂದ ಉತ್ಸವ ಪರಂಪರೆ ನಡೆದಿರಲಾಗಿ ಪರಮೇಶ್ವರನ ಚರಮ ಗರ್ಭಾವತರಣವನ್ನು ಅರಿತು– ೧೫೦. ಉತ್ತಮವಾದ ರತ್ನಗಳು ಹುಟ್ಟುತ್ತಿರಲಾಗಿ ಸಮುದ್ರಕ್ಕೆ ರತ್ನಾಕರವೆಂಬ ಮಹಿಮೆಯುಂಟಾಯಿತು, ಹಾಗೆಯೆ ಲೋಕೋತ್ತಮನಾದ ತೀರ್ಥಂಕರನು ಈತನಿಗೆ ಮಗನಾಗಿ ಹುಟ್ಟಲಿರುವನೆಂದ ಮೇಲೆ ಮಹಾಸೇನನು ಆ ಲೋಕತ್ರಯದ ಜನಕ್ಕೆ ಜನಕನಲ್ಲವೆ ? ಇದೇನು ಸಾಮಾನ್ಯವಾದ ಭಾಗ್ಯವೆ ?

ಏಕಾದಶಾಶ್ವಾಸಂ ಮುಗಿದುದು

# ದ್ವಾದಶಾಶ್ವಾಸಂ

ಶ್ರೀಮಜ್ಜಿನಚಂದ್ರಂ ಮ ।
ದ್ಧಾಮಾಗರ್ಭಕ್ಕೆ ವಂದಪಂ ದಿವದಿಂದೆಂ ॥
ಬೀ ಮುದದೊದವಂ ತಳೆದಂ ।
ಭೂಮೀಶಂ ಜೈನಜನಮನೋಹರಚರಿತಂ ॥ ೧

ಅಂತು ಮಹಾಸೇನಮಂಡಳೇಶ್ವರನುತ್ಸವೋತ್ಸವಮನಪ್ಪುಕೆಯ್ದಿರ್ಪಿನಮೊಂದುದಿವಸಂ

ನವಚೂತಲತೆಗೆ ಸುಫಲೋ ।
ದ್ಭವಕಾರಣಮಪ್ಪ ಋತುವಸಂತಂ ಸಾರ್ವಂ ॥
ತೆವೊಲರಸಿಗೆ ಸಮನಿಸಿದುದು ।
ದಿವಿಜಪ್ರಮದಾಪ್ರಮೋದಮಯಋತುಸಮಯಂ ॥ ೨

ಅನಂತರಂ ಚತುರ್ಥದಿನದೊಳ್ ಅನುದಿನಸವನಸಮಯಸಂಸಕ್ತದಿವ್ಯಾನುಲೇಪಸುರಭಿಪರಿಮಳೋದ್ಗಾರಿದ್ವಾರದೇಶಮುಮೇಕೈಕಸವ್ಯಾಪಸವ್ಯ ಪಾಣಿಪಲ್ಲವಗೃಹೀತವದನಮಳಯಜಜಳಗರ್ಘರೀಸಮಾನಯನಸಂಭ್ರಮಸುರಪುರಂಧ್ರಿಕಾದ್ವಂದ್ವಬಂಧುರಮುಮೂಷ್ಮಾಯಮಾಣನಿರ್ಮಳಾರ್ಣಃಪೂರ್ಣತಪನೀಯಮಯಕಟಾಹನಿಹಿತಮುಂ ಉತ್ಕಟಾಮೋದಲಂಪಟಾಳಿಪಟಳಾಂಧಕಾರಿತಮುಖಕುಹರಗಂಧೋದಕ

## ದ್ವಾದಶಾಶ್ವಾಸಂ

೧. "ಪೂಜ್ಯನಾದ ಜಿನೇಂದ್ರನು ದೇವಲೋಕದಿಂದ ತನ್ನ ಹೆಂಡತಿಯ ಗರ್ಭಕ್ಕೆ ಅವತರಿಸುವನು" ಎಂದು ಜಿನಜನಮನೋಹರನಾದ ಅರಸನು ಸಂತೋಷಪಟ್ಟನು. ವ॥ ಹೀಗೆ ಮಹಾಸೇನ ಮಹಾರಾಜನು ಪುತ್ರೋತ್ಸವದ ಸಂತೋಷವನ್ನು ತಾಳುತ್ತಿರಲಾಗಿ ಒಂದು ದಿನ- ೨. ಹೊಸ ಮಾವಿನ ಮರಕ್ಕೆ ಫಲ ಜನ್ಮಕ್ಕೆ ಕಾರಣವಾದ ವಸಂತಋತು ಪ್ರಾಪ್ತವಾಗುವಂತೆ, ಅರಸಿಗೆ ದೇವಾಂಗನೋಲ್ಲಾಸಮಯವಾದ ಋತುಸಮಯ ಒದಗಿತು. ವ॥ ಬಳಿಕ ನಾಲ್ಕನೆಯ ದಿನ ಸ್ನಾನಗೃಹವನ್ನು ಪ್ರವೇಶಿಸಿದಳು; ಆ ಸ್ನಾನಗೃಹದಲ್ಲಿ- ಪ್ರತಿದಿನ ಸ್ನಾನ ಸಮಯದಲ್ಲಿ ತಂದಿಡುತ್ತಿದ್ದ ದಿವ್ಯವಾದ ಅನುಲೇಪನ ದ್ರವ್ಯಗಳ ಸುಗಂಧದಿಂದ ದ್ವಾರ ಪ್ರದೇಶವು ಗಮಗಮಿಸುತ್ತಿತ್ತು; ಸುರಲೋಕದ ಇಬ್ಬರು ವನಿತೆಯರು ಒಬ್ಬಳು ಎಡಗೈ, ಇನ್ನೊಬ್ಬಳು ಬಲಗೈ ಹಿಡಿದು ಕಸ್ತೂರೀ ಜಲದಿಂದ ತುಂಬಿದ ಕುಂಭವನ್ನು ಎತ್ತಿಕೊಂಡು ಸಡಗರದಿಂದ ಬರುತ್ತಿದ್ದರು; ಬಿಸಿನೀರಿನಿಂದ ತುಂಬಿದ ಚಿನ್ನದ ಕಡಾಯಿ ಅಣಿ

ಘಟಪ್ರಕರಸಂಕಟಮುಮತಿಮನೋಹರಾಂಗರಾಗಕಾಶ್ಮೀರಯಕ್ಷಕರ್ದಮೋದ್ವರ್ತನಾಮತ್ರಚಿತ್ರೈಕ ದೇಶಮುಮನೇಕವರ್ಣಪೂರಪರಿಕಲಿತನೀರಾಜನದೀಪಲಾಲಿತಸ್ಥಾಳಾವಳೀವಿಳಸಿತಮುಂ ವಿಶಾಳವಾಳಜ ಪ್ರಣಾಳಕೀಳಿತಚತುಃಕೋಣಮರಕತ ಭಿತ್ತಿವಿಸ್ತೃತಸ್ನಾನಪ್ರದೇಶಪೇಶಲಮುಮಪ್ಪ ಮಜ್ಜನಮಂದಿರಮಂ ಸುರಪರಿಚಾರಿಕಾಸಮೇತಮೊಳಗಂ ಪೊಕ್ಕು ಸುಗಂಧತೈಲಾಭ್ಯಂಗಾತಿಮಸೃಣಿತಾಂಗಲಾವಣ್ಯ ಲಕ್ಷ್ಮೀಲಕ್ಷ್ಮಣಾಮಹಾದೇವಿ ಮಣಿಮಯಮಜ್ಜನಪೀಠಿಕಾಗ್ರಮನಳಂಕರಿಸಿದಾಗಳ್

ಬಿಗಿದುಡೆನೂಲಿನೊಳ್ನಿಱಿಯನೊಯ್ಯನವುಂಕಿ ಕುರುಳ್ಗಳಂ ಕೊಡಂ ।
ಕೆಗೆ ತೆಗೆದೇಱಿ ನೂಂಕಿ ಮಣಿಕಂಕಣಮಂ ನವರತ್ನಹಾರಮಂ ॥
ನೆಗಪಿ ಪೆಗಲ್ಗೆ ತಂದು ಪೆಱದೊಂದುವಿಳಾಸಮನಾಂತು ಮಜ್ಜನಂ ।
ಬುಗಿಸಿದರಂದಮರ್ತ್ಯೆಯರೆ ಮಜ್ಜನವಳ್ತಿಯರಾಗಿ ರಾಗದಿಂ ॥ ೩

ಪೆಱದೇನೊ ಪಲವು ರೂಪಿಂ ।
ನೆಱೆದತ್ತೆಯೆ ರತಿಯೆ ಕಾಮಕಲ್ಪಲತೆಗೆ ನೀ ॥
ರೆಱೆವಂದದೆ ಸುರವನಿತೆಯ ।
ರೆಱೆದರ್ ಕೋಮಳೆಯ ಮಜ್ಜನಕ್ಕುಜ್ಜುಗದಿಂ ॥ ೪

ಯವಾಗಿತ್ತು; ಅತಿಶಯವಾದ ಪರಿಮಳಕ್ಕೆ ಸೋತು ಎರಗುವ ದುಂಬಿಗಳಿಂದ ಕತ್ತಲಿಸಿದಂತೆ ಕಪ್ಪಾಗಿಯೂ, ಅವುಗಳ ಗುಂಜಾರವದಿಂದ ನಿನಾದಮಯವಾಗಿಯೂ ಇರುವ ಗಂಧದ ನೀರಿನ ಕೊಡಗಳು ಕಿಕ್ಕಿರಿದಿದ್ದುವು; ಅತ್ಯಂತ ಮನೋಹರವಾದ ಅಂಗರಾಗ, ಕುಂಕುಮಕೇಸರಿ, ಯಕ್ಷಕರ್ದಮ ಮೊದಲಾದ ಉದ್ವರ್ತನ ದ್ರವ್ಯಗಳನ್ನು ತುಂಬಿದ ಪಾತ್ರೆಗಳು ಬಣ್ಣಬಣ್ಣವಾಗಿ ಒಂದು ಪ್ರದೇಶದಲ್ಲಿ ಒಪ್ಪುತ್ತಿದ್ದುವು; ಅನೇಕ ಬಗೆಯ ವರ್ಣಚಿತ್ರಸಮೇತವಾದ ನೀರಾಜನ ದೀಪಗಳು ಒಪ್ಪುತ್ತಿದ್ದುವು; ಅಗಲವಾದ ಹರಿನಾಳಿಗೆಗಳನ್ನುಳವಡಿಸಿದ ಚಚ್ಚೌಕವಾದ ಪಚ್ಚೆಯ ಗೋಡೆಗಳ ನಡುವೆ ವಿಸ್ತೀರ್ಣವಾದ ಸ್ನಾನ ಪ್ರದೇಶವಿತ್ತು. ಹೀಗಿರುವಾಗ ಸ್ನಾನಮಂದಿರಕ್ಕೆ ದೇವ ಪರಿಚಾರಿಕೆಯರೊಡನೆ ಬಂದು ಒಳಹೊಕ್ಕು ಸುಗಂಧ ತೈಲದಿಂದ ಅಭ್ಯಂಜನಗೊಂಡು ಅತ್ಯಂತ ಸುಂದರವಾಗಿ ತೋರುವ ಲಕ್ಷ್ಮಣಾ ಮಹಾದೇವಿಯು ರತ್ನಮಯವಾದ ಮಜ್ಜನಪೀಠವನ್ನು ಅಲಂಕರಿಸಿದಳು. ಆಗ–೩. ಬಿಗಿಯಾದ ಕಟಿಸೂತ್ರದಲ್ಲಿ ನಿರಿಯನ್ನು ಅದುಮಿ ಸಿಕ್ಕಿಸಿ, ಕೂದಲನ್ನು ಕಿವಿಗೇರುವಂತೆ ಹಿಂದೆ ನೂಕಿಕೊಂಡು, ರತ್ನಕಂಕಣ ಗಳನ್ನು ಮೇಲೇರಿಸಿ, ನವರತ್ನ ಹಾರವನ್ನು ಹೆಗಲಿಸಿ ಸರಿಸಿ, ಹೊಸದೊಂದು ಬೆಡಗಿನಿಂದ ಸುರಸುಂದರಿಯರೆ ಮಜ್ಜನ ಪರಿಚಾರಿಕೆಯರಾಗಿ ಉತ್ಸಾಹದಿಂದ ಅರಸಿಗೆ ಸ್ನಾನ ಮಾಡಿಸಿದರು. ೪. ಹೆಚ್ಚಿಗೆ ಹೇಳುವುದೇನು? ಹಲವಾರು ರೂಪಗಳನ್ನು ತಾಳಿ ರತಿದೇವಿಯೆ ಕಾಮನ ಕಲ್ಪಲತೆಗೆ ನೀರು ಎರೆಯುವರೊ ಏನೊ ಎಂಬಂತೆ ದೇವಕಾಂತೆಯರು ಆ ಕೋಮಲಾಂಗಿಯನ್ನು ಎರೆದರು.

ಕರಿಗಳ್ ಮಿಸಿಸುವ ತೆಱದಿಂ ।
ಸಿರಿಯಂ ಸ್ಮರಕರಿಗಳೆನಿಸಿದಮರಿಯರಾ ಸುಂ ॥
ದರಿಯಂ ಮಿಸಿಸಿದರುಜ್ಜ್ವಳ ।
ತರಕಾಂಚನಕಳಶಕಳಿತಕರಪಲ್ಲವೆಯರ್ ॥ ೫

ಅಲರ್ಗೊಂಚಲ್ಗಳಿನುಣ್ಮುತಿರ್ಪ ಮಕರಂದಾಸಾರಮಂ ಸಾರಪು ।
ಷ್ಪಲತಾಮಾಳೆ ವಸಂತಲಕ್ಷ್ಮಿಗಭಿಷೇಕಂಗೆಯ್ವವೋಲ್ ಸ್ಫಾಟಿಕೋ ॥
ಜ್ಜ್ವಳಕುಂಭೋದ್ಗತಗಂಧತೋಯದಿನಮರ್ತ್ಯಸ್ತ್ರೀಚಯಂ ಸ್ನಾನಮಂ ।
ಗಳಮಂ ದೇವಿಗೆ ಕೂಡೆ ಮಾಡಿದುದುದಂಚದ್ಬಾಹುಶಾಖಾನ್ವಿತಂ ॥ ೬

ಆಗಳ್ ತತ್ಕಾಲಯೋಗ್ಯಾಂಬರಪರಿಧಾನೆಯಾಗಿ

ಮುರಿದೆಡಗೆಯ್ಯೊಳಾರ್ದ್ರಕಚಭಾರಮನೆತ್ತುತುಮಂಶುಕಾಂತದಿಂ ।
ಗುರುಕುಚಭಾರಮಂ ಮುಸುಕುತುಂ ಬಲಗೆಯ್ಯೊಳನಂಗಟಂಕೃತಿ ॥
ಸ್ವರಮೆನೆ ಪೊಣ್ಮೆ ಪಾವುಗೆಯ ಗೆಜ್ಜೆಯ ಮೆಲ್ಲುಲಿ ಬಂದಳಂದಳಂ ।
ಕರಣಗೃಹಕ್ಕೆ ಸುತ್ತಿ ದಿವಿಜಾಂಗನೆಯರ್ ಬರೆ ದೇವಿ ಲೀಲೆಯಿಂ ॥ ೭

ಆಗಳಮರಮಹತ್ತರಿಕೆಯರ್ಕಲ್ಪಪಾದಪಪ್ರತಿಪಾದಿತಾನರ್ಘ್ಯಮೌಕ್ತಿಕಾಭರಣ ಧವಳದುಕೂಲವಸನಸುರಭಿಕುಸುಮಚಂದನಾನುಲೇಪನಂಗಳಂ ತಂದವಟಯಿಸುವುದುಮವಂ ನಿಜಾಂಗಸಂಗದಿಂದ ಳಂಕರಿಸಿದಾಗಳ್

೫. ಲಕ್ಷ್ಮೀದೇವಿಗೆ ಆನೆಗಳು ಸ್ನಾನಮಾಡಿಸುವಂತೆ ಮನ್ಮಥನ ಆನೆಗಳೆನಿಸಿದ ದೇವಾಂಗನೆಯರು ಉಜ್ವಲವಾದ ಚಿನ್ನದ ಕಲಶಗಳಿಂದ ಎತ್ತಿ ಸುರಿಸುರಿದು ಆ ಸುಂದರಿಗೆ ಸ್ನಾನ ಮಾಡಿಸಿದರು. ೬. ಹೂಗೊಂಚಲುಗಳಿಂದ ಹೊಮ್ಮುತ್ತಿರುವ ಮಕರಂದದ ಮಳೆಯಿಂದ ಹೂಬಳ್ಳಿಗಳು ಸಾಲುಸಾಲಾಗಿ ವಸಂತಲಕ್ಷ್ಮಿಗೆ ಅಭಿಷೇಕ ಮಾಡುವಂತೆ, ಥಳಥಳಿಸುವ ಸ್ಫಟಿಕ ಕುಂಭಗಳಿಂದ ಗಂಧದ ನೀರನ್ನು ಸುರಿಯುತ್ತ ದೇವಿಗೆ ಅಮರಾಂಗನೆಯರು ಮಂಗಳಸ್ನಾನ ಮಾಡಿಸಿದರು. ವ॥ ಆ ಬಳಿಕ ಆ ಕಾಲಕ್ಕೆ ಉಚಿತವಾದ ವಸ್ತ್ರವನ್ನು ಧರಿಸಿ– ೭. ಎಡಗೈಯಿಂದ ನೆನೆದ ಕೂದಲನ್ನು ಎತ್ತಿಕೊಳ್ಳುತ್ತ, ಬಲಗೈಯಿಂದ ತೋರಮೊಲೆಗಳನ್ನು ಸೆರಗಿನಿಂದ ಮುಚ್ಚುತ್ತ, ಮನ್ಮಥನ ಧನುಷ್ಟಂಕಾರದಂತೆ ಪಾದುಕೆಗಳ ಗೆಜ್ಜೆಗಳಿಂದ ಮೃದುವಾದ ನಾದವನ್ನುಂಟು ಮಾಡುತ್ತ, ಸುರಕಾಂತೆಯರ ಬಳಸಿನೊಡನೆ ಅರಸಿ ಅಲಂಕಾರ ಗೃಹಕ್ಕೆ ಬಂದಳು. ವ॥ ಆಗ ದೇವಲೋಕದ ಹೆಗ್ಗಡಿತಿಯರು ಕಲ್ಪವೃಕ್ಷಗಳು ನೀಡಿದ ಅಮೌಲ್ಯವಾದ ಮುತ್ತಿನಾಭರಣಗಳನ್ನೂ, ಬಿಳಿಯ ರೇಷ್ಮೆಸೀರೆಯನ್ನೂ, ಸುಗಂಧ ಪುಷ್ಪಗಳನ್ನೂ, ಶ್ರೀಗಂಧದ ಲೇಪನವನ್ನೂ ತಂದು ನೀಡಲಾಗಿ, ತನ್ನ ದೇಹದಲ್ಲಿ ಅಳವಡಿಸಿಕೊಂಡು, ಅರಸಿಯು ಅವುಗಳಿಗೆಲ್ಲ ಶೋಭೆಯನ್ನುಂಟು

ಅಲರ್ವನ್ನಂ ಸುರಹೃತ್ಕುಮುದ್ವತಿ ಸುರಸ್ತ್ರೀದೃಕ್ಚಕೋರೀಚಯಂ ।
ನಲಿವನ್ನಂ ನಿಜಕೋಮಳಾಂಗಲಲಿತಾಲಾವಣ್ಯವಾರಾಶಿಯ ॥
ಗ್ಗಲಿಪನ್ನಂ ಸಮಯೋಚಿತೋಪಚಿತಸೌಂದರ್ಯಂ ಬೆಡಂಗಾದುದಾ ।
ಲಲನಾರತ್ನದ ಕೊಂಡ ಬೆಳ್ಪಸದನಂ ಬೆಳ್ದಿಂಗಳೆಂಬಂದದಿಂ ॥ ೮

ಬರೆದರೊ ಚಂದನರಸದಿಂ ।
ಕರುವಿಟ್ಟರೊ ಕಣ್ಗೆಳಸೆ ಕಪ್ಪುರದಿಂ ಕಂ ॥
ಡರಿಸಿದರೊ ಪಳುಕಿನಿಂದೆನೆ ।
ಪರಿಜೆಸೆದುದು ಸುದತಿ ತಳೆದ ಬೆಳ್ಪಸದನದೊಳ್ ॥ ೯

ಪದನಖದುನ್ಮಯೂಖಾಂಶುತತಿ ತಿಂಬಿ ಮಡಲ್ತುದು ನಾಡೆಯುಂ ದುಕೂ ।
ಲದ ನಿಜೆ ತಳ್ತು ಪೊಣ್ಮೆ ಸುಲಿಪಲ್ಗಳ ತಣ್ಗದಿರಾವಗಂ ಕವ ॥
ಲ್ತುದು ಪೊಸಮುತ್ತಿನೇಕಸರಮುಣ್ಮುವಪಾಂಗದ ಕಾಂತಿ ಪರ್ವೆ ಕೊ ।
ರ್ವಿದುದವತಂಸಮಾದ ನವಕಲ್ಪಲತಾಸ್ತಬಕಂ ಲತಾಂಗಿಯಾ ॥ ೧೦

ಅಂತು ಕೈಗೆಯ್ದು

ಸೊಗಯಿಸುವಮರ್ದಿನ ಕಡಲಿಂ ।
ದೊಗೆದ ಲಸಲ್ಲಕ್ಷ್ಮಿ ಪದ್ಮಸದ್ಮಮನೊಲವಿಂ ॥
ಪುಗುತಂದಪಳೆನಿಪೆಸಕಂ ।
ಮಿಗೆ ಮೆಲ್ಲನೆ ಸಜ್ಜೆವನೆಗೆ ಬಿಜಯಂಗೆಯ್ದಳ್ ॥ ೧೧

ಮಾಡಿದಳು. ೮. ದೇವತೆಗಳ ಹೃದಯ ಕೈರವಗಳನ್ನು ಅರಳಿಸುತ್ತ, ದೇವಾಂಗನೆಯರ ನೇತ್ರ ಚಕೋರಿಗಳನ್ನು ಹಿಗ್ಗಿಸುತ್ತ, ತನ್ನ ಸುಕುಮಾರ ಶರೀರದ ಸೌಂದರ್ಯ ಸಮುದ್ರವನ್ನು ಉಕ್ಕೇರಿಸುತ್ತ, ಬೆಳ್ದಿಂಗಳೆ ಬಂದಿತೊ ಏನೊ ಎಂಬಂತೆ ಆ ರಮಣೀ ಮಣಿಯು ಮಾಡಿಕೊಂಡ ಧವಲವರ್ಣದ ಅಲಂಕರಣ ಒಪ್ಪಿತು. ೯. ಚಂದನರಸದಿಂದ ಬರೆದರೊ, ಸುಂದರವಾಗಿ ಕಪ್ಪುರದಿಂದ ಎರಕಹೊಯ್ದರೊ, ಅಥವಾ ಸ್ಫಟಿಕದಲ್ಲಿಯೆ ಕಂಡರಿಸಿದರೊ ಏನೊ ಎಂಬಂತೆ ಧವಲಪ್ರಸಾಧನ ಮಾಡಿಕೊಂಡ ಆ ಸತಿಯ ರೂಪು ಒಪ್ಪಿತು. ೧೦. ಕಾಲುಗುರುಗಳ ಕಾಂತಿ ಹೊಮ್ಮಿ ಹರಡಿತು; ದುಕೂಲದ ನಿರಿ ಶೋಭೆಯನ್ನು ಬೀರಿತು; ಹಸನಾದ ಹಲ್ಲುಗಳ ಪ್ರಭೆ ಇಮ್ಮಡಿಗೊಂಡಿತು; ಹೊಸಮುತ್ತಿನ ಏಕಾವಳಿಯೂ, ಕಡೆಗಣ್ಣಿನ ಕಾಂತಿಯೂ ಹಬ್ಬಿ ಹರವಾಗಿ ಬರಲಾಗಿ ಕರ್ಣಾಲಂಕರವಾದ ಕಲ್ಪಲತೆಯ ಹೂ ಗೊಂಚಲು ಇನ್ನಷ್ಟು ಬೆಡಗನ್ನು ಪಡೆಯಿತು. ಹೀಗೆ ಅಲಂಕರಿಸಿಕೊಂಡು– ೧೧. ಶೋಭಾವಹವಾದ ಅಮೃತಸಮುದ್ರದಲ್ಲಿ ಜನ್ಮತಾಳಿದ ಲಕ್ಷ್ಮೀದೇವಿಯು ಕಮಲದ ನಿವಾಸವನ್ನು ಬಂದು ಪ್ರವೇಶಿಸುತ್ತಿರುವಳೊ ಏನೊ ಎಂಬಂತೆ ಅರಸಿಯು

ಅಂತು ಬಂದು, ಕನಕಪರ್ಯಂಕಕಳಿತಧವಳತಳ್ಪತಳಮುಂ, ತಳ್ಪತಳಮೆಂಬ ಶಿಶಿರಕರಬಿಂಬಮಂ ಬಳಸಿದ ತಾರಗೆಗಳೆನಿಸಿದುಪಹಾರಕುಸುಮಂಗಳುಂ, ಉಪಹಾರಕುಸುಮಂಗಳಂ ಮುಸುಱೆ ಮೊರೆವ ಮಱಿದುಂಬಿಗಳುಂ, ಮಱಿದುಂಬಿಗಳ ಗಾವರಕ್ಕೆ ಜತಿಯನುಗ್ಗಡಿಸುವಂತೆ ಕಳಲುಳಿಯಿನುಲಿವ ಪಾರಿವಂಗಳುಂ, ಪಾರಿವಂಗಳುಗ್ಗಡಣೆಗಾಡುವಂತೆ ಸುಟಿದು ಮೆಟ್ಟುವ ಕಳಹಂಸೆಗಳುಂ ಕಳಹಂಸೆಗಳ ಲಸಗಮನಮಂ ನೋಡಲೆಂದು ಗೃಹದೇವತೆಯೆ ಕಣ್ದೆಱೆದಳೆನಿಸಿ ರಂಜಿಪ ಶುಕ್ತಿಗಳೊಳೆಸೆವ ಪದಂಗೆಯ್ದ ಕತ್ತುರಿಯುಂ, ಕತ್ತುರಿಯ ಕರ್ಪನೊತ್ತುಗೊಂಡುಟೆದ ಕಟ್ತಲೆಯನಲೆಯಲೆಂದು ಬಂದ ಚಂದ್ರಸೂರ್ಯಕಳೆಗಳಂತೆ ಬಟ್ಟಲೊಳಿರ್ದ ಕಟ್ಟಿದೆಲೆಯ ವೀಳೆಯಂಗಳುಂ, ವೀಳೆಯಂಗಳ ಬೆಳ್ಪಿನೊಳ್ ಸೆಣಸಿ ಮೂದಲೆಗೆ ವಂದಂತೆ ಕೆಲದೊಳಿರ್ದ ಕಪ್ಪುರವಳಿಕುಗಳುಂ, ಕಪ್ಪುರವಳಿಕುಗಳ ಕಂಪಿನೊಳ್ ಕೆಳೆಗೊಂಡು ಕುಸುಮಸರನೆ ಬೀಸಿದ ಕಣ್ಮಾಯದ ಕುಂಚದಂತೆ ಪಸರಿಸುವಗರುವಿನ ಪೊಗೆಯುಂ ಅಗರುವಿನ ಪೊಗೆಯ ಪುದುವಿನೊಳ್ ಮುಗಿಲ ಮಱೆಯ ಕಿಱುಮಿಂಚಿನಂತೆಸೆವ ಲಂಬೂಷಮುಕ್ತಾವಳಿಗಳುಂ, ಮುಕ್ತಾವಳಿಗಳೆಂಬ ಬೆಳ್ಸರಿಯಂ ಸುರಿವ ಶರದದ ಮುಗಿಲ ತೆಗಳಿಗೆಯಿದೆನಿಪ ಮೇಲ್ಕಟ್ಟಿನ ಬೆಳ್ಳುಂಬಟ್ಟೆಯುಂ, ಬೆಳ್ಳುಂಬಟ್ಟೆಯೆಂಬರಲಂಬನ ಜಸದೊಡನೆ ಪಸರಿಸುವ ತೇಜಮೆನಿಸಿ ಬೆಳಪ ದೀಪಕಳಿಕೆಗಳುಂ, ದೀಪಕಳಿಕೆಗಳ್ ಮಾರ್ಪೊಳೆಯೆ ಸಂಪಗೆಯ ಮುಗುಳ ಕೇರ್ಗಟ್ಟಿನಂತಿರ್ದ ಮಣಿಭಿತ್ತಿ

ಮೆಲ್ನಡೆಯಿಂದ ಶಯ್ಯಾಗೃಹಕ್ಕೆ ನಡೆದು ಬಂದಳು. ವ॥ ಆ ಶಯನಗೃಹದಲ್ಲಿ ಚಿನ್ನದ ಮಂಚ; ಅದರ ಮೇಲೆ ಅಳವಡಿಸಿದ ಬೆಳ್ಳನೆಯ ಹಾಸುಗೆ; ಹಾಸುಗೆಯೆಂಬ ಚಂದ್ರಬಿಂಬವನ್ನು ಬಳಸಿಕೊಂಡ ನಕ್ಷತ್ರಗಳೆಂಬಂತೆ ಹರಡಿದ ಹೂಬಲಿಗಳು; ಹೂಬಲಿಯ ಹೂಗಳನ್ನು ಮುತ್ತಿ ಗುಯಿಗುಟ್ಟುತ್ತಿರುವ ದುಂಬಿಮರಿಗಳು; ಮರಿದುಂಬಿಗಳ ಗುಂಜಾರವಕ್ಕೆ ಯತಿಯನ್ನು ಮೇಳವಿಸುವಂತೆ ಕಲಾನಾದದಿಂದ ಉಲಿಯುವ ಪಾರಿವಾಳಗಳ ಮರಿಗೆ ಅನುಸಾರವಾಗಿ ಹೆಜ್ಜೆಯಿಕ್ಕುವ ಹಂಸಗಳು; ಹಂಸಗಳ ಮಂದಗಮನವನ್ನು ನೋಡಲೆಂದು ಗೃಹದೇವತೆ ಕಣ್ದೆರೆದಳೊ ಏನೊ ಎಂಬಂತೆ ಅಂದವಾದ ಸಿಪ್ಪುಗಳಲ್ಲಿ ಹದಗೊಳಿಸಿದ ಕಸ್ತೂರಿ; ಕಸ್ತೂರಿಯ ಮರೆಯಲ್ಲಿ ಅಡಗಿಕೊಂಡು ಉಳಿದ ಕತ್ತಲೆಯನ್ನು ಓಡಿಸಲೆಂದು ಬಂದ ಚಂದ್ರಸೂರ್ಯ ಬಿಂಬಗಳೊ ಏನೊ ಎಂಬಂತೆ ಬಟ್ಟಲುಗಳಲ್ಲಿ ಕಟ್ಟಿರಿಸಿದ ಎಲೆಯ ವೀಳ್ಯಗಳು; ವೀಳ್ಯಗಳ ಬೆಳುಪಿನೊಡನೆ ಸ್ಪರ್ಧಿಸಿ ಹಂಗಿಗೊಳಗಾದಂತೆ ಪಕ್ಕಕ್ಕೆ ಸರಿಸಿಟ್ಟ ಕಪ್ಪುರದ ಹಳಕುಗಳು; ಕಪ್ಪುರ – ಹಳುಕುಗಳ ಪರಿಮಳದೊಡನೆ ಬೆರತುಕೊಂಡು ಕಾಮದೇವನೆ ಬೀಸಿದ ಕಣ್ಕಟ್ಟಿನ ಕುಂಚವೊ ಏನೊ ಎಂಬಂತೆ ಪಸರಿಸುವ ಅಗುರಿನ ಹೊಗೆ; ಅಗುರಿನ ಹೊಗೆಯ ರಾಶಿಯ ನಡುವೆ, ಮೋಡದೊಳಗಿನ ಕಿರುಮಿಂಚಿನಂತೆ ಕಂಗೊಳಿಸುವ ಮುತ್ತಿನ ಎಳೆಗಳು; ಮುತ್ತಿನೆಳೆಗಳೆಂಬ ಮಳೆಯನ್ನು ಸುರಿಸುವ ಮೋಡಗಳ ಪಟಲವೊ ಏನೊ ಎಂಬಂತಿರುವ ಮೇಲ್ಕಟ್ಟಿನ ಧವಳ ವಸ್ತ್ರ; ಧವಳ ವಸ್ತ್ರವೆಂಬ ಮನ್ಮಥಯಶಸ್ಸಿನೊಡನೆ ಹರಡುತ್ತಿರುವ ತೇಜವೆನಿಸಿ ಬೆಳಗುತ್ತಿರುವ ದೀಪಜ್ಯೋತಿಗಳು; ದೀಪದ ಕುಡಿಗಳ ಪ್ರತಿಬಿಂಬವನ್ನೊಳಗೊಂಡು ಸಂಪಗೆ ಮೊಗ್ಗುಗಳ ಗೋಡೆಯೆಂಬಂತಿದ್ದ

ಗಳುಮಳವಲ್ಲದೆಸೆವ ವಾಸಭವನಮಂ ಪೊಕ್ಕು ಹಂಸಾಂಸೋಹ್ಯಮಾನಧವಳಶಯ್ಯೆಯೊಳ್ ಸುರತರಂಗಿಣಿಯ ದರಿಯೊಳೈರಾವತದೊಡನೆ ಸೆಜ್ಜರಂಬುಗುವಭ್ರಮೂವಿಭ್ರಮಮನಳವಡಿಸಿ ನಿಜಮನೋವಲ್ಲಭನೊಡನೆ ಪವಡಿಸಿರ್ದು

ಕೃಶಮಧ್ಯೆ ನಿಜಮತಿಗೆ ಷೋ ।
ಡಶಭೂಷಣಮಾದುವೆನಿಸಿ ಸೊಗಯಿಸುವಾಷೋ ॥
ಡಶಮಮಂ ಸ್ವಪ್ನಮನಂತಾ ।
ನಿಶಾಂತದೊಳ್ ಬರೆ ನಿಶಾಂತಯಾಮಮಂ ಕಂಡಳ್ ॥ ೧೨

ಅಗಳ್

ಅವಿರಳಪುಣ್ಯಪಾಠಕಪಟುಧ್ವನಿಯಿಂ ಸುರಗಾಯಿನೀಜನಾ ।
ರವದಿನಗಾರಕೀರಕಳಹಂಸನಿನಾದದಿನಬ್ಜನೇತ್ರೆಯು ॥
ಪ್ಪವಡಿಸಿದಳ್ ನಿಜೇಶನೊಡನೊಯ್ಯನರಲ್ವಲರ್ಗಣ್ಗಳಿಂದೆ ಪೊ ।
ಣ್ಮುವ ಬೆಳಗುಣ್ಮೆ ಸೆಜ್ಜೆವನೆಯಂ ನೆಱೆ ತೀವೆ ಗವಾಕ್ಷಜಾಳದಿಂ ॥ ೧೩

ಅನಂತರಂ ಕತಿಪಯಮುಹೂರ್ತಪರಿಕಲ್ಪಿತಸ್ನಾನದೇವತಾರ್ಚನಾದಿ ಕಲ್ಪರಚನಾವಿಧಾನೆಯುಂ ಕತಿಪಯೋಚಿತಾಸನೋಪವಿಷ್ಟ ವಿಶಿಷ್ಟಾರ್ಯಿಕಾನಿಕಾಯಸಹಸಂಭಾಷ್ಯಮಾಣಸನ್ಮಾನಸಂಭೃತಸ್ವರೂಪೆಯುಂ ಕತಿಪಯ ಪುರೋಹಿತಸಮೂಹವಿಜ್ಞಾಪಿತಾನೇಕಧರ್ಮಕಾರ್ಯವಚನವಸಂತವಿಳಸಿತೈಕಕರ್ಣೆಯುಂ ಕತಿಪಯಗಂಧರ್ವಗಾಯಿಕಾಗೀಯಮಾನಜಿನಾಂಕಮಾಲಿಕಾನುಬದ್ಧಗಾನಾನುರಕ್ತಾಂತ

ರತ್ನ ಭಿತ್ತಿಗಳು– ಹೀಗೆ ಮಿತಿಮೀರಿದ ಶೋಭೆಯಿಂದೊಡಗೂಡಿದ ಶಯನ ಶಾಲೆಯನ್ನು ಪ್ರವೇಶಿಸಿ, ದೇವಗಂಗೆಯ ದರಿಯಲ್ಲಿ ಐರಾವತದೊಡನೆ ಶಯನ ಸುಖಕ್ಕೆ ಹೋಗುವ ಅಭ್ರಮೂಗಜದಂತೆ, ಹಂಸತಲ್ಪದ ಬೆಳ್ಳನೆಯ ಹಾಸಗೆಯ ಮೇಲೆ ತನ್ನ ಮನಃಪ್ರಿಯನೊಂದಿಗೆ ಮಲಗಿಕೊಂಡಳು. ೧೨. ಹಾಗೆ ಮಲಗಿರುವಾಗ ಬೆಳಗಿನ ಜಾವದಲ್ಲಿ ಆ ತೆಳ್ನಡುವಿನ ಚೆಲುವೆಯು ತನ್ನ ಮತಿಗೆ ಹದಿನಾರು ಭೂಷಣಗಳಾದುವೆಂಬಂತೆ ಪ್ರಸಿದ್ಧವಾದ ಹದಿನಾರು ವಸ್ತುಗಳನ್ನು ಕನಸಿನಲ್ಲಿ ಕಂಡಳು. ಆಗ– ೧೩. ಪುಣ್ಯಪಾಠಕರ ನಿರಂತರ ಕುಶಲ ಧ್ವನಿಯಿಂದಲೂ, ದೇವಗಾಯಕಿಯರ ಗಾಯನದಿಂದಲೂ, ಅರಮನೆಯ ಗಿಳಿಗಳ ಹಾಗು ಹಂಸಗಳ ಕಲಕಲ ನಿನಾದದಿಂದಲೂ ಆ ಕಮಲನೇತ್ರೆಗೆ ಎಚ್ಚರವಾಯಿತು; ಅವಳ ಅರಳಿದ ಕಣ್ಣುಗಳಿಂದ ಹೊಮ್ಮುವ ಬೆಳಕು ಗವಾಕ್ಷಗಳ ಬೆಳಕಿನಂತೆ ಶಯ್ಯಾಗೃಹವನ್ನೆಲ್ಲ ತುಂಬಿತು. ವ॥ ಬಳಿಕ ಆಕೆ ಸ್ನಾನ ದೇವಪೂಜಾದಿ ಕಾರ್ಯಗಳಲ್ಲಿ ಕೆಲಹೊತ್ತು ಕಳೆದು, ಉಚಿತಾಸನದಲ್ಲಿ ಕುಳಿತ ಕೆಲ ಆರ್ಯಿಕೆಯರೊಡನೆ ಮಾತಾಡಿ ಸನ್ಮಾನಪೂರ್ಣೆಯಾಗಿ, ಪುರೋಹಿತ ವರ್ಗವು ಬಿನ್ನವಿಸಿದ ಅನೇಕ ಧರ್ಮಕಾರ್ಯಗಳನ್ನು ಕಿವಿಗೊಟ್ಟು ಕೇಳಿ, ಗಂಧರ್ವಗಾಯಿಕೆಯರು ಮಾಡುತ್ತಿರುವ ಜಿನಸ್ತೋತ್ರದ ಗಾಯನ

ರಂಗೆಯುಂ ಕತಿಪಯಾಸವ್ಯಪತಾಕಾಹಸ್ತಪಲ್ಲವ ನಿವಾರಿತೋತ್ತಾರರಣಿತಪಾರಿಹಾರ್ಯಪ್ರಕೋಷ್ಠ ಯಕ್ಷಕುಮಾರಿಕಾಚಮರರುಹವಿಕ್ಷೇಪಣೆಯುಂ ಕತಿಪಯಸ್ಫಟಿಕಭಿತ್ತಿಭಾಗಭಾಸುರಪ್ರತಿಕೃತಿ ಕದಂಬಸಂಪಾದಿತಾತ್ಮೀಯಲೀಲಾಕೇಕರಾಕಾರವಿಭ್ರಮಭ್ರಮೆಯಮಾಗಿ ದೇವಪೂಜಾಮಂದಿರದ ಮುಂದಣ ಮೊಗಸಾಲೆಯೊಳಿರ್ಪನ್ನೆಗಂ

ಬಂದಂ ನೃಪತಿಳಕಂ ನಿಜ ।
ಸುಂದರಿಯೊಳ್ಗನಸಿನೊಸಗೆಯಂ ಪಚ್ಚಿಕೊಳಲ್ ॥
ಬಂದಪನೆನೆ ಲೀಲಾಗಮ ।
ನಾಂದೋಳಿತಪಾರಿಜಾತಕರ್ಣಾವತಂಸಂ ॥ ೧೪

ಅಂತು ಬಂದಾಸನಾರ್ಧದೊಳ್ ಕುಳ್ಳಿರ್ದ ಹೃದ್ವಲ್ಲಭಂಗಾತ್ಮಾಂತರಂಗಭರಿತಾನನ್ದಾಮೃತ ಪ್ರಸರದಾರ್ದ್ರಾಕ್ಷರಂಗಳಿಂದಿಂತೆಂದಳ್ :-

ದಿವಿಜೇಭಂ ವೃಷಭಂ ಮೃಗಾರಿ ಸಿರಿ ಚಂಚತ್ಸ್ರಗ್ದ್ವಯಂ ಚಂದ್ರಮಂ ।
ರವಿ ಮೀನದ್ವಿತಯಂ ಕನತ್ಕಳಶಯುಗ್ಮಂ ಪದ್ಮಸದ್ಮಂ ಮಹಾ ॥
ರ್ಣವಮುದ್ಯದ್ಧರಿಪೀಠಮಿಂದ್ರಸದನಂ ನಾಗಾಸ್ಪದಂ ರತ್ನರಾ ।
ಶಿ ವಿಧೂಮಾಗ್ನಿಯೆನಿಪ್ಪವಂ ತರದೆ ಕಂಡೆಂ ಸ್ವಪ್ನಮೀರೆಂಟುಮಂ ॥ ೧೫

ಎನಲೊಡಮೆಸೆದುವು ತನುಲ ।
ಕ್ಷ್ಮಿ ನಲಿದು ಗುಡಿಗಟ್ಟಿದಂದದಿಂ ಪೂಸಿದ ಚಂ ॥
ದನದ ಪುಳಿಂಚುಗಳಂ ಪೊ ।
ತ್ತು ನೆಗೆದ ಪುಳಕಾಂಕುರಂಗಳರಸನ ಮೆಯ್ಯೊಳ್ ॥ ೧೬

ವನ್ನು ಆಲಿಸಿ ಆಹ್ಲಾದಚಿತ್ತಳಾಗಿ, ಗಟ್ಟಿಯಾಗಿ ಶಬ್ದ ಮಾಡಬಾರದೆಂದು ಬಲಗೈಯಿಂದ ಕಡಗಗಳನ್ನು ಮುಂಗೈಗೆ ಹತ್ತೆಯಾಗೆ ಹಿಡಿದುಕೊಂಡು ಚಾಮರ ಬೀಸುವ ಯಕ್ಷಕುಮಾರಿಯರ ಸೇವೆಯನ್ನು ಸ್ವೀಕರಿಸಿ, ಸ್ಫಟಿಕ ಭಿತ್ತಿಗಳಲ್ಲಿ ಸುಂದರವಾಗಿ ಪಡಿಮೂಡಿದ ತನ್ನ ಕುಡಿಗಣ್ಣ ಲೀಲೆಯನ್ನು ಸೋಜಿಗದಿಂದ ನೋಡುತ್ತ ದೇವಪೂಜಾಮಂದಿರದ ಮುಂದಿನ ಮೊಗಸಾಲೆಯಲ್ಲಿ ಕುಳಿತಿರುವಾಗ– ೧೪. ತನ್ನ ಇನಿಯಳ ಸವಿಗನಸಿನ ಸುಖವನ್ನು ಕಿವಿಯಾರೆ ಕೇಳಿಕೊಳ್ಳಲು ಬರುತ್ತಿರುವನೊ ಏನೊ ಎಂಬಂತೆ ನಡಗೆಯ ಒನಪಿನಿಂದ ಕರ್ಣಭೂಷಣವಾದ ಪಾರಿಜಾತದ ಗುಚ್ಛ ತೂಗಾಡುತ್ತಿರಲಾಗಿ ಅರಸನು ಅಲ್ಲಿಗೆ ಬಂದನು. ವ|| ಹಾಗೆ ಬಂದು ಅವಳೊಡನೆ ಅರ್ಧಾಸನದಲ್ಲಿ ಕುಳ್ಳಿರಲಾಗಿ, ಅರಸಿಯು ಅಂತರಂಗದಲ್ಲಿ ತುಂಬಿದ ಆನಂದಾಮೃತದಿಂದ ಸವಿಯಾಗಿ ಹೊರಡುವ ಶಬ್ದಗಳಿಂದ ಹೀಗೆ ನುಡಿದಳು. ೧೫. "ಐರಾವತ, ವೃಷಭ, ಸಿಂಹ, ಒಂದು ಜೊತೆ ಹೂಮಾಲೆ, 'ಚಂದ್ರ, ಸೂರ್ಯ, ಒಂದು ಜೊತೆ ಮೀನು, ಚಿನ್ನದ ಕಲಶಗಳೆರಡು, ತಾವರೆಗೊಳ, ಸಮುದ್ರ, ಸಿಂಹಾಸನ, ಇಂದ್ರ ವಿಮಾನ, ಹಾವಿನ ಹುತ್ತ, ರತ್ನರಾಶಿ, ಹೊಗೆಯಿಲ್ಲದ ಬೆಂಕಿ– ಈ ಹದಿನಾರನ್ನೂ ಕನಸಿನಲ್ಲಿ ಕಂಡೆನು." ೧೬. ಈ ಮಾತುಗಳನ್ನು ಕೇಳಿದೊಡನೆ ದೇಹಲಕ್ಷ್ಮಿ ಉತ್ಸವದಿಂದ ಗುಡಿಯೆತ್ತಿಸಿದಂತೆ ಪೂಸಿಕೊಂಡ ಚಂದನದ ಹಕ್ಕಳೆಗಳನ್ನು ಎತ್ತಿಕೊಂಡು ರೋಮಾಂಚ

ಅನ್ತು ಸಂಸತದಂತನೆಯ್ದಿ ತತ್ಫಳಪ್ರಕಟನದ ನೆವದೆ ನಲವನಿರ್ಮಡಿಸುವಂತಿಂತೆಂದಂ: –

ದಾನಗಜದಿಂದೆ ದಾನಿಯ ।
ನೂನವೃಷಂ ವೃಷಭನಿಂ ಮೃಗಾರಿಯಿನಘಸಂ ॥
ತಾನಾರಿ ಸಿರಿಯಿನುಭಯ ।
ಶ್ರೀನಾಥಂ ಭುವನಶೇಖರಂ ಶೇಖರದಿಂ ॥ ೧೭

ಅಮೃತಾಂಶುವಿನಮೃತಪದೇ ।
ಚ್ಛು ಮಿತ್ರನಿಂ ತ್ರಿಭುವನೈಕಮಿತ್ರಂ ರುಚಿರಾ ॥
ನಿಮಿಷದಿನನಿಮಿಷವಂದ್ಯಂ ।
ವಿಮಳಾಂಭಃಪೂರ್ಣಕುಂಭದಿಂ ಗುಣಪೂರ್ಣಂ ॥ ೧೮

ಸರಸಿರುಹಾಕರದಿಂ ಸ ।
ಚ್ಚರಿತಾಕರನಬ್ಧಿಯಿಂ ದಯಾಂಬುಧಿ ಹರಿವಿ ॥
ಷ್ಟರದಿಂ ಹರಿವಿಷ್ಟರಪತಿ ।
ಸುರರಾಜವಿಮಾನದಿಂದಮಪ್ರತಿಮಾನಂ ॥ ೧೯

ಭೋಗಿನಿವಾಸದಿನತಿಶಯ ।
ಭೋಗನಿವಾಸಂ ವಿಶಿಷ್ಟರತ್ನೋತ್ಕರಸಂ ॥
ಯೋಗದಿನತರ್ಕ್ಯಲಕ್ಷಣ ।
ಯೋಗನುಷರ್ಬುಧನಿನಧಿಕಬೋಧನಿಧಾನಂ ॥ ೨೦

ಗಳು ಅರಸನ ಮೈತುಂಬ ಎದ್ದವು. ವ॥ ಹೀಗೆ ಅತ್ಯಂತ ಸಂತೋಷವನ್ನು ತಾಳಿ ಸ್ವಪ್ನ ಫಲ ವಿವರಣೆಯ ನೆವದಿಂದ ಸಂತೋಷವನ್ನು ಇಮ್ಮಡಿಗೊಳಿಸುವಂತೆ ಹೀಗೆಂದನು– ೧೭. (ನಿನಗೆ ಶ್ರೇಷ್ಠನಾದ ಮಗ ಹುಟ್ಟುವನೆಂಬುದಕ್ಕೆ ಇವು ಸಂಕೇತಗಳು. ಅವುಗಳಲ್ಲಿ) ಮದದಾನೆಯಿಂದ ಆತನು ದಾನಶೀಲನು; ವೃಷಭದಿಂದ ಅತ್ಯಂತ ಬಲಶಾಲಿ; ಸಿಂಹದಿಂದ ಪಾಪನಾಶಕ; ಲಕ್ಷ್ಮಿಯಿಂದ ಇಹಪರಗಳೆರಡು ಸಂಪತ್ತುಗಳಿಗೂ ಒಡೆಯ; ಹೂಮಾಲೆಯಿಂದ ಲೋಕ ಶಿರೋಮಣಿ; ೧೮. ಚಂದ್ರನಿಂದ ಮೋಕ್ಷಪದವಿಯನ್ನು ಬಯಸುವವನು; ಸೂರ್ಯನಿಂದ ಲೋಕತ್ರಯ ಗಳಿಗೆ ಮಿತ್ರ; ಮೀನುಗಳಿಂದ ದೇವತಾಪೂಜ್ಯ; ಪೂರ್ಣ ಕಲಶದಿಂದ ಗುಣಭರಿತ; ೧೯. ತಾವರೆಗೊಳದಿಂದ ಸಚ್ಚರಿತ್ರ; ಸಮುದ್ರದಿಂದ ಕರುಣಾಸಾಗರ; ಸಿಂಹಾಸನದಿಂದ ರಾಜೇಶ್ವರ; ಇಂದ್ರ ವಿಮಾನದಿಂದ ಅಪ್ರತಿಮ; ೨೦. ಹುತ್ತಿನಿಂದ ಭೋಗಗಳಿಗೆ ಆಶ್ರಯವಾದವನು; ರತ್ನರಾಶಿಯಿಂದ ಅತರ್ಕ್ಯವಾದ ಲಕ್ಷಣಸಂಪನ್ನ; ಅಗ್ನಿಯಿಂದ

ನಂದನನಕ್ಕುಂ ನಮಗಿ ।
ನ್ನೆಂದಧಿಪನಮೋಘವಚನದಿಂ ವನಿತೆ ಮಹಾ ॥
ನಂದಮನಾಂತಂಬುದರವ ।
ದಿಂದಾನಂದಿಪ ಮಯೂರವನಿತೆವೊಲಾದಳ್ ॥ ೨೧

ಅನ್ನೆಗಮಿತ್ತಂ ಮುಂ ಪೇಳ್ದ ಪದ್ಮನಾಭಚರನಹಮಿಂದ್ರಂ ತ್ರಯತ್ರಿಂಶದಾಯುರಬ್ಧಿಗಳನುತ್ತರಿಸಿ ಪಂಚಾಣೂತ್ತರೆಗಳೊಳಗಣ ವೈಜಯಂತವಿಮಾನದಿಂ ಜ್ಞಾನತ್ರಯಮಯಂ ಬನ್ದು ಚೈತ್ರ ಬಹುಳಪಂಚಮೀಶ್ರವಣನಕ್ಷತ್ರಶುಭಯೋಗದೊಳ್ ಚಂದ್ರಮಂಡಳಾಕಾರದಿಂ ಲಕ್ಷ್ಮಣಾಮಹಾದೇವಿಯ ಮುಖಮುಕುರಮಂ ಪೊಕ್ಕು ವಿಮಳಗರ್ಭಕುಮುದಿನಿಯೊಳಮರಪತಿಕೃತಪ್ರಥಮಕಲ್ಯಾಣ ಪೂಜಾಪುರಃಸರಮವತರಿಸಿದಾಗಳ್

ನೆಲಸಿರೆ ಮೇದುರೋದರದೊಳಂದು ಜಿನಾರ್ಭಕನಂತರಂಗದೊಳ್ ।
ನೆಲಸಿದುದೆಯ್ದೆ ಸಂತಸದ ಸಂತತಿ ಪಿಂಗದೆ ಕೋಮಳಾಂಗದೊಳ್ ॥
ನೆಲಸಿದುದತ್ಯಪೂರ್ವಮೆನೆ ಕಾನ್ತಿಯ ತಿಂತಿಣಿ ಮತ್ತಪಾಂಗದೊಳ್ ।
ನೆಲಸಿದುದೆಂದುಮಿಲ್ಲದ ವಿಳಾಸದಳುರ್ಕೆ ಮರಾಳಯಾನೆಯಾ ॥ ೨೨

ತರುಣಿಯ ಬಸಿಱಿಳೊಳ್ ತ್ರಿಜಗ ।
ದ್ಗುರುವಿರ್ದುಂ ಭಾರಪೀಡೆಯಂ ಮಾಡನೆ ಭಾ ॥
ಸುರಮುಕುರದೊಳಿರ್ದುಂ ಭೂ ।
ಧರದ ನೆಟಿಲ್ ಭರಮನೇನದರ್ಕೊಡರಿಕುಮೇ ॥ ೨೩

ಅಧಿಕ ಜ್ಞಾನಕ್ಕೆ ನೆಲೆಯಾದವನು. ೨೧. ಹೀಗೆ ಇರುವವನು ಇನ್ನು ನಮಗೆ ಮಗನಾಗುವನು" ಎಂದು ಅರಸನು ಹೇಳಿದ ನಿಶ್ಚಿತವಾದ ನುಡಿಯಿಂದ ಆ ಕಾಂತೆಯು ಮೇಘಧ್ವನಿಯನ್ನು ಕೇಳಿದ ಮಯೂರಿಯಂತೆ ಮಹಾನಂದವನ್ನು ಹೊಂದಿದಳು. ವ॥ ಅಷ್ಟರಲ್ಲಿ ಇತ್ತ ಈ ಮುಂಚೆ ಹೇಳಿದ (ಪದ್ಮನಾಭನಾಗಿದ್ದು ಆಮೇಲೆ) ಅಹಮಿಂದ್ರನಾದವನು ತನ್ನ ಮೂವತ್ತುಮೂರು ಸಾಗರೋಪಮ ಆಯುಷ್ಯವನ್ನು ಕಳೆದು ಪಂಚಾಣೂತ್ತರಗಳೊಳಗಿನ ವೈಜಯಂತ ವಿಮಾನ ದಿಂದ ಇಳಿದು ಬಂದು ಚೈತ್ರಬಹುಳ ಪಂಚಮಿಯಂದು ಶ್ರವಣನಕ್ಷತ್ರದ ಶುಭಯೋಗದಲ್ಲಿ ಚಂದ್ರಬಿಂಬಾಕಾರದಿಂದ ಲಕ್ಷ್ಮಣಾದೇವಿಯ ಮುಖದರ್ಪಣ ವನ್ನು ಹೊಕ್ಕು, ದೇವೇಂದ್ರನಿಂದ ಪ್ರಥಮ ಕಲ್ಯಾಣಪೂಜಾ ಪುರಃಸರವಾಗಿ ಆಕೆಯ ಪರಿಶುದ್ಧ ಗರ್ಭದಲ್ಲಿ ಅವತರಿಸಿದನು. ಆಗ– ೨೨. ಆ ಹಂಸಗಮನೆಯ ಕೋಮಲ ಗರ್ಭದಲ್ಲಿ ಜಿನಾರ್ಭಕನು ನೆಲಸಲಾಗಿ ಆಕೆಯ ಅಂತರಂಗದಲ್ಲಿ ಅಧಿಕ ವಾದ ಸಂತೋಷ ನೆಲೆಸಿತು; ಸುಕುಮಾರವಾದ ದೇಹದಲ್ಲಿ ಅಪೂರ್ವವಾದ ಕಾಂತಿ ನೆಲೆಗೊಂಡಿತು; ಕುಡಿನೋಟದಲ್ಲಿ ಹಿಂದೆಂದೂ ಇಲ್ಲದಿದ್ದ ವಿಲಾಸದ ಅತಿಶಯ ನೆಲೆಸಿತು. ೨೩. ಆ ಯುವತಿಯ ಬಸಿರಲ್ಲಿ ತ್ರಿಲೋಕ ಗುರು ವಿದ್ದರೂ ಅವಳಿಗೆ ಭಾರವಾಗಿ ಪೀಡೆ ಕೊಡಲಿಲ್ಲ. ಬೆಟ್ಟದ ಪ್ರತಿಬಿಂಬ ಕನ್ನಡಿ

ಗುರುಜಘನಭರದ ಗುರುಕುಚ ।
ಭರವೆರಡಱ ನಡುವೆ ಸತಿಯ ಲಘುಮಧ್ಯಂ ಬಂ ॥
ಧುರಮಾಯ್ತು ದುರಿತತರುಗಳ ।
ನುರಿಪುವ ಶಿಖಿಶಿಖೆಯ ತೆಱನನಿಂತಱಿಪುವವೋಲ್ ॥ ೨೪

ರಾಜ್ಞೀಗರ್ಭದೊಳಿರ್ದುಂ ।
ತ್ರಿಜ್ಞಾನಸಮೇತನೆಂದು ಪೇೞ್ವಿಡೆಗಿವೆ ದಲ ॥
ಭಿಜ್ಞಾರೇಖೆಗಳೆನಿಸಿ ಮ ।
ನೋಜ್ಞತೆಯಂ ತ್ರಿವಳಿರೇಖೆ ತಳೆದೆಸೆದಿರ್ಕುಂ ॥ ೨೫

ಈಹಾರಹಿತಂ ವ್ಯಪಗತ ।
ಮೋಹಂ ನಿಜಗರ್ಭದಲ್ಲಿ ನೆಲಸಿರೆ ಬಟಿಕಂ ॥
ದೋಹಳಮುಮಲಸಭಾವಕು ।
ತೂಹಳಮುಂ ಜಿನನ ಜನನಿಯಂ ಪೊರ್ದುಗುಮೇ ॥ ೨೬

ಸತಿಯರ್ಗೆ ತೋರ್ಪ ಗರ್ಭೋ ।
ಚಿತಚಿಹ್ನಂ ತಳೆದುವಾಕೆಯೊಳ್ ಪೆಱದೊಂದಾ ॥
ಕೃತಿಯನದಂತುಟೆ ತೋಱುಗು ।
ಮತಿಶಯಮದು ಸುಗುಣರತ್ನನಿಧಿಯಿರ್ದೆಡೆಯೊಳ್ ॥ ೨೭

ಮತ್ತಂ

ತೊಳಗುವ ರತ್ನವಂ ತಳೆದ ವಾರಿಧಿವೇಳೆ ನಮೇರುಭೂಜಮಂ ।
ತಳೆದ ಸುಮೇರುಮೇಖಳೆ ಸುಧಾರಸಮಂ ತಳೆದೋಷಧೀಶನಿ ॥

ಯಲ್ಲಿದ್ದರೂ ಅದಕ್ಕೆ ಭಾರವನ್ನುಂಟು ಮಾಡುವುದೆ ? ೨೪. ಪಾಪವೃಕ್ಷಗಳನ್ನು ಉರಿಸುವ ಬೆಂಕಿಯು ಕುಡಿ ಹೀಗೆಯೆ ಎಂದು ತೋರುವಂತೆ, ತೋರವಾದ ಜಘನ ಹಾಗು ಪೀವರವಾದ ಕುಚಗಳೆರಡರ ನಡುವೆ ಇರುವ ತೆಳ್ನಡು ಸುಂದರವಾಯಿತು. ೨೫. ರಾಣಿಯ ಬಸಿರಿನಲ್ಲಿದ್ದರೂ ತಾನು ತ್ರಿಕಾಲಜ್ಞಾನಿಯೆಂದು ತಿಳಿಸುವ ಗುರುತುಗಳೊ ಏನೊ ಎಂಬಂತೆ ಆಕೆಯ ಒಡಲ ಮೇಲಿನ ತ್ರಿವಳಿ ರೇಖೆಗಳು ಒಪ್ಪಿದುವು. ೨೬. ಅಪೇಕ್ಷಾವಿರಹಿತನೂ, ನಿರ್ಮೋಹನೂ (ಆದ ಮಹಾತ್ಮನು) ಗರ್ಭದಲ್ಲಿ ನೆಲಸಿರುವಾಗ ಜಿನನ ತಾಯಿಯಾಗಲಿರುವವಳಿಗೆ ಬಯಕೆಗಳಾಗಲಿ, ಆಲಸ್ಯವಾಗಲಿ ಉಂಟಾಗುವುದು ಸಾಧ್ಯವೆ? ೨೭. ಸ್ತ್ರೀಯರಿಗೆ ಬಸಿರಿನ ಅವಧಿಯಲ್ಲಿ ತೋರುವ ಚಿಹ್ನಗಳು ಆಕೆಯಲ್ಲಿ ಬೇರೊಂದು ರೀತಿಯಾಗಿಯೆ ತೋರಿದುವು. ಅದು ಹಾಗಿರುವುದೆ ಸರಿ. ಸದ್ಗುಣಗಳ ನಿಧಿಯಿದ್ದ ಎಡೆಯಲ್ಲಿ ಅಂತಹ ಅತಿಶಯವಿದ್ದೇ ಇರುವುದು. ಮತ್ತು– ೨೮. ಥಳಥಳಿಸುವ ರತ್ನ ಗಳನ್ನು ಹೊಂದಿದ ಸಮುದ್ರವೊ, ನಮೇರು ವೃಕ್ಷವನ್ನೊಳಗೊಂಡ ಮೇರುವಿನ

ರ್ಮಳಕಳೆ ಶಾತಕುಂಭನಿಧಿಯಂ ತಳೆದಿರ್ದೆಳೆಯೆಂಬ ಲೀಲೆಯಿಂ।
ತಳೆದಳಿಳಾಧಿರಾಣ್ಮಹಿಳೆಯಂದು ಜಿನಾರ್ಭಕನಂ ಸ್ವಗರ್ಭದೊಳ್ ॥ ೨೮

ಅದಲ್ಲದೆಯುಂ

ಸುರಕಾಂತಾಪರಿಚರ್ಯೆಯುಂ ಸುರಕುಜಾತಪ್ರೇಷಿತಾಲೇಪನಾಂ।
ಬರಭೂಷಾಕುಸುಮೋತ್ಕರಾನುಭವಮುಂ ಚಿತ್ತೋತ್ಸವೋನ್ಮೇಷಮುಂ॥
ಪುರುಷಂ ತನ್ನೊಳೊಡರ್ಚುತಿರ್ಪ ವಿಳಸದ್ರೂಪಪ್ರವೀಚಾರಮುಂ।
ಸುರಲೋಕಸ್ಥಿತಿ ಬೇಱದೊಂದೆನಿಸಿದತ್ತಾ ಕಾಂತೆಗಾ ಗರ್ಭದೊಳ್ ॥ ೨೯

ನವಪುಷ್ಪಾಭರಣಂ ಪ್ರಿಯಾಭರಣಮಂಗಾಲೇಪನಂ ಚಂದನ॥
ದ್ರವಮಾವಾಸಸಮುದಗ್ರಯಂತ್ರಜಳಧಾರಾಮಂಡಪಂ ವಸ್ತ್ರಮೊ॥
ಪ್ಪುವ ಚೀನಂ ಪೆಱತೊಂದು ಸಮ್ಮನಿಸಿದತ್ತಾ ಕಾಂತೆಗೆಂಬನ್ನಮೆ।
ಯ್ದೆ ವಸಂತೋತ್ಸವದೊಳ್ ಸಮಾನಮೆನಿಸಲ್ ಸಾಲ್ದತ್ತು ಗರ್ಭೋತ್ಸವಂ॥ ೩೦

ಅಂತು ಗರ್ಭಾರ್ಭಕನ ಲೇಶ್ಯಾನುರೂಪಂಗಳಪ್ಪ ವಿಶುದ್ಧಭೋಗಪರಂಪರೆಗಳಿಂ ಕಾಲಂ ಸಲೆ ಪರಿಪೂರ್ಣಪ್ರಸವಸಮಯದೊಳ್

ದೊರೆವೆತ್ತಾ ಪುಷ್ಯಮಾಸಂ ವಿಳಸಿತಸಿತಪಕ್ಷಂ ತದೇಕಾದಶೀವಾ।
ಸರಮಂತಾ ರೋಹಿಣೀತಾರಕೆಯತಿಶುಭದಂ ಶುಕ್ಲಯೋಗಂ ಸಮಂತೊಂ॥
ದಿರೆ ಲೋಕಕ್ಕಗ್ಗಳಂ ಸಂತಸಮೊಗೆವಿನೆಗಂ ಪುಟ್ಟಿದಂ ಸರ್ವಸೌಖ್ಯಾ।
ಕರರೂಪಂ ಲಕ್ಷ್ಮಣಾದೇವಿಗೆ ತನಯನನೇಕಾಂತವಿದ್ಯಾವಿನೋದಂ॥ ೩೧

ತಪ್ಪಲೊ, ಅಮೃತರಸವನ್ನೊಡಗೊಂಡ ಚಂದ್ರನ ನಿರ್ಮಲವಾದ ಕಳೆಯೊ, ಚಿನ್ನದ ನಿಧಿಯನ್ನು ಹುದುಗಿಸಿಕೊಂಡ ಭೂಮಿಯೊ ಎಂಬಂತೆ ಆ ಮಹಾರಾಣಿಯು ತನ್ನ ಗರ್ಭದಲ್ಲಿ ಜಿನಾರ್ಭಕನನ್ನು ತಾಳಿದಳು. ಅದಲ್ಲದೆ– ೨೯. ದೇವಕಾಂತೆಯರ ಸೇವೆ, ಕಲ್ಪವೃಕ್ಷಗಳು ನೀಡಿದ ಲೇಪನ ವಸ್ತ್ರಾಭರಣ, ಪುಷ್ಪರಾಶಿಗಳ ಅಲಂಕಾರ, ಮನಸ್ಸಿನಲ್ಲಿ ಉತ್ಸವದ ಹೆಚ್ಚಳ, ಕೇವಲ ನೋಟದಿಂದಲೆ ಶರೀರ ಸುಖವನ್ನೊದಗಿಸುವ ಪತಿ,– ಇವುಗಳಿಂದ ಆ ಗರ್ಭಿಣಿಗೆ ಇದೊಂದು ನವೀನ ರೀತಿಯ ಸ್ವರ್ಗವಾಸವೆ ಎನಿಸಿತು. ೩೦. ಹೊಸಹೂಗಳ ತೊಡವುಗಳೆ ಪ್ರಿಯವಾದ ಆಭರಣಗಳಾದುವು; ಚಂದನ ರಸವೆ ಆಲೇಪನ ದ್ರವ್ಯವಾಯಿತು; ಉತ್ತಮವಾದ ಮಂತ್ರಜಲಧಾರೆಯ ಮಂಟಪವೆ ವಾಸಸ್ಥಾನವಾಯಿತು; ಉಡುತೊಡುವ ವಸ್ತ್ರ ರೇಷ್ಮೆಯದಾಯಿತು– ಹೀಗೆ ಹೊಸದೊಂದು ವಸಂತೋತ್ಸವವೆ ಬಂದೊದಗಿದಂತೆ ಆಕೆಗೆ ಗರ್ಭೋತ್ಸವ ಒಪ್ಪಿತು. ವ॥ ಬಸಿರಲ್ಲಿರುವ ಶಿಶುವಿನ ಲೇಶ್ಯಾನುರೂಪವಾದ ಪರಿಶುದ್ಧವಾದ ಅನೇಕ ಭೋಗಗಳನ್ನು ಅನುಭವಿಸುತ್ತ ಬಸಿರಿನ ಅವಧಿ ತುಂಬಲಾಗಿ, ಹೆರಿಗೆಯ ಸಮಯದಲ್ಲಿ– ೩೧. ಶ್ರೇಷ್ಠವಾದ ಪುಷ್ಯ ಮಾಸದ ಶುದ್ಧ ಏಕಾದಶಿಯಂದು ರೋಹಿಣೀ ನಕ್ಷತ್ರದ ಶುಭವಾದ ಶುಕ್ಲಯೋಗ ಹೊಂದಿರಲಾಗಿ ಲೋಕಕ್ಕೆಲ್ಲ ಪರಮಸಂತೋಷವಾಗುವಂತೆ ಲಕ್ಷ್ಮಣಾದೇವಿಗೆ ಸರ್ವ

ಅಂತರ್ವರ್ತ್ನೀತ್ವದೊಳಮ ।
ನಂತರಮಾ ಪ್ರಸವಸಮಯದೊಳಮಿನಿತಾಯಾ ॥
ಸಂ ತೋಱದೆ ಪಡೆದಳ್ ಮಗ ।
ನಂ ತಾಯಕ್ಲೇಶಸಾಧ್ಯನಿಧಿಯೆಂಬಿನೆಗಂ ॥ ೩೨

ಪಡೆದಳ್ ಪುಣ್ಯದ ಬಿತ್ತಂ ।
ಪಡೆವಂತಮರೇಂದ್ರಭಕ್ತಿಲತಿಕೆಗಡರ್ಪಂ ॥
ಪಡೆವಂತೆ ಜಗಕ್ಕಂ ಕ ।
ಣ್ಬಡೆವಂತಂಬಿಕೆ ವಿಶುದ್ಧಬೋಧಾಂಬಕನಂ ॥ ೩೩

ಆಗಳುದಯಿಸಿದಾ ಮಹಾತ್ಮನಪಗತರಜನೆಂಬುದಂ ಪೇೞ್ವಂತಿಳಾವಳಯಮಪಗತರಜಮಾದುದು ಅಕಲುಷಭಾವನೆಂಬುದಂ ಪೇೞ್ವಂತೆ ಸಲಿಲಾಶಯಮಕಲುಷಭಾವಮಾದುದು; ಅವಾಮವೃತ್ತಿವರ್ತನನೆಂಬುದಂ ಪೇೞ್ವಂತೆ ಅಧ್ವರಾನಲನವಾಮವೃತ್ತಿವರ್ತನಮಾದುದು; ಅಚಂಡಕೋಪಯುಕ್ತನೆಂಬುದಂ ಪೇೞ್ವಂತೆ ಮಾರುತನಚಂಡಕೋಪಯುಕ್ತಮಾದುದು; ಅತ್ಯಂತಪ್ರಸನ್ನನೆಂಬುದಂ ಪೇೞ್ವಂತೆ ಗಗನತಳಮತ್ಯಂತಪ್ರಸನ್ನಮಾದುದು.

ಅದಲ್ಲದೆಯುಂ

ಕಾಲಹರನುದಯಮಿದಱಳ್ ।
ಕಾಲಂಬಾರುತ್ತಿರಲ್ಕದೇಕೆಂಬವೊಲಾ ॥

ಸೌಖ್ಯರೂಪನಾದ ಏಕಾಂತವಿದ್ಯಾವಿನೋದಿ ಪುತ್ರನು ಹುಟ್ಟಿದನು. ೩೨. ಅನಾಯಾಸವಾಗಿ ನಿಧಿಯನ್ನು ಪಡೆಯುವಂತೆ, ಬಸಿರ ಕಾಲದಲ್ಲಾಗಲಿ, ಹೆರಿಗೆಯ ಸಮಯದಲ್ಲಾಗಲಿ ಎಷ್ಟೇಷ್ಟೂ ಆಯಾಸವಾಗದೆ ಆಕೆ ಮಗನನ್ನು ಪಡೆದಳು. ೩೩. ದೇವೇಂದ್ರನ ಭಕ್ತಿಯೆಂಬ ಬಳ್ಳಿಗೆ ಆಸರೆಯನ್ನು ಒದಗಿಸುವಂತೆ, ಜಗತ್ತಿಗೆ ಕಣ್ಣು ಮೂಡುವಂತೆ, ಆ ತಾಯಿ ಪುಣ್ಯಬೀಜವಾದ ಶುದ್ಧಜ್ಞಾನಿ ಪುತ್ರನನ್ನು ಪಡೆದಳು. ವ|| ಆ ಸಮಯದಲ್ಲಿ ಆ ನವಜಾತ ಮಹಾತ್ಮನು ರಜೋರಹಿತನೆಂದು ತಿಳಿಸುವಂತೆ ಭೂಮಂಡಲವೆಲ್ಲ ಅಪಗತ ರಜ (ಧೂಳಿರಹಿತ) ವಾಯಿತು; ನಿಷ್ಕಲ್ಮಷಭಾವನೆಂದು ತಿಳಿಸುವಂತೆ ಜಲಾಶಯಗಳು ತಿಳಿಯಾದುವು; "ಅವಾಮ" (ನೇರವಾದ) ಮಾರ್ಗದಲ್ಲಿ ನಡೆಯುವವನೆಂದು ಸೂಚಿಸುವಂತೆ ಹೋಮಾಗ್ನಿ "ಅವಾಮವೃತ್ತಿವರ್ತನ" ಬಲಗಡೆಗೆ ತನ್ನ ಕುಡಿಯನ್ನು ಹೊರಳಿಸಿತು; ಉಗ್ರಕೋಪಲವಿಲ್ಲದವನೆಂದು ಹೇಳುವಂತೆ ಗಾಳಿ ಉಗ್ರತೆಯನ್ನುಳಿದು ಮೆಲ್ಲಗೆ ತೀಡಿತು; ಅತ್ಯಂತ "ಪ್ರಸನ್ನ" (ಅನುಗ್ರಹಪೂರ್ಣ) ನೆಂದು ಹೇಳುವಂತೆ ಆಕಾಶವು ಅತ್ಯಂತ "ಪ್ರಸನ್ನ" (ಸ್ವಚ್ಛ) ವಾಯಿತು. ಅದಲ್ಲದೆ– ೩೪. "ಕಾಲಹರನು (೧. ಮರಣವನ್ನು ಗೆದ್ದವನು, ೨. ಕಾಲಾತೀತನಾದವನು) ಉದಯವಾಗಿರುವ ಸಮಯ

ಕಾಲದೊಳ್ ತರುಗಳೆಲ್ಲಂ ।
ಲೀಲೆಯನಾಂತುವು ತಳಿರ್ತು ಪೂತುಂ ಕಾಯ್ತುಂ ॥ ೩೪

ಇದು ಚಿತ್ರಮಲ್ತಣಂ ಪು ।
ಷ್ಪದಂತನೆಂದೆನಿಸಿ ಪುಟ್ಟಿದೀ ಜಿನಪತಿಯ ॥
ಭ್ಯುದಯದೊಳೆಂಬನ್ನೆಗಮೊ ।
ರ್ಮೊದಲಲರ್ದುವು ವಿಮಳಕಮಳಕುಮುದವನಂಗಳ್ ॥ ೩೫

ಮತ್ತಮಾ ಕುವಳಯಬಾಂಧವನ ನವೋದಯದೊಳೊದವಿದ ಸಂಜೆಗೆಂಪಿನಂತೆ ಪಿಂಜರಿತಪಿಷ್ಟಾತಕಂ ದೆಸೆದೆಸೆಗೆ ಪಸರಿಸೆಯುಂ ಗಗನಗಂಗಾತರಂಗಿಣಿಯ ತೆಱೆದುಱುಗಲಂತೆ ತರತರದೆ ಕಟ್ಟಿದ ಮುತ್ತಿನ ತೋರಣಂಗಳ್ ತಳತಳಿಸೆಯುಂ ದ್ವಿತೀಯಕಲ್ಯಾಣಮಾಂಗಲ್ಯಮಂ ಮಾಡಲೆಂದು ಪುರಂದರನಂ ಕರೆವ ಪುರಲಕ್ಷ್ಮಿಯ ಕರಪಲ್ಲವಂಗಳಂತೆ ಕೆಂಗುಡಿಗಳಡಿಗಡಿಗೆ ಮಿಳಿರ್ದು ಮಿಳ್ಳಿಸೆಯುಂ, ಸಕಳಭುವನಸಂಭೇದಿಯಾದ ಸಂಮದದೊಳಾಶಾಗಜಂಗಳ್ ಮೊಳಗಿದಂತೆ ಪೊಯ್ವ ಬದ್ದವಣದ ಸದ್ದದೆಣ್ದೆಸೆಯೊಳಂ ಮಾರ್ದನಿಯಿಡೆಯುಂ, ಪುರದೊಳಗೆ ಪೂರಂಬರಿವ ರಾಗರಸದ ಪೊನಲ ಪುದುವಿದೆನಿಸಿ ಬೀದಿಬೀದಿಗಳೊಳೆಲ್ಲಂ ತಳಿವ ಕುಂಕುಮರಸದ ಚಳೆಯದಿಂ ಕೆಂಕಮಾಗೆಯುಂ, ಅವನೀವನಿತೆಯಾನಂದಬಾಷ್ಪಬಿಂದುಸಂದೋಹದಂತೆ ಬಟ್ಟೆಗಣ್ಗಳೊಳ್ ಕಡೆಯಿಕ್ಕಿದ ಬಿಡುಮುತ್ತುಗಳ್ ಬೆಡಂಗುವಡೆಯೆಯುಂ, ಒರ್ಮೊದಲೊಳೆ

ಇದು. ಎಂದ ಮೇಲೆ ನಾವು (ಇಂತಿಂತಹ ಋತುವೇ ಬೇಕೆಂದು) ಕಾಲದ ಹಾದಿ ಕಾಯುವುದು ಏಕೆ ?" ಎಂದುಕೊಂಡವೊ ಏನೊ ಎಂಬಂತೆ ಎಲ್ಲಾ ಮರಗಳು ಚಿಗುರಿಟ್ಟು, ಹೂಬಿಟ್ಟು, ಕಾತು ಬೆಡಗಾದುವು. ೩೫. "ಪುಷ್ಪವಂತ" (೧. ಚಂದ್ರ ೨. ಸೂರ್ಯ) ನೆಂದೆನಿಸಿ ಹುಟ್ಟಿದ ಈ ಜಿನೇಶ್ವರನ ಜನ್ಮಕಾಲದಲ್ಲಿ ಇದೇನು ಸೋಜಿಗವೇ ಅಲ್ಲವೆಂಬಂತೆ ನಿರ್ಮಲವಾದ ಕೊಳಗಳಲ್ಲಿಯ ತಾವರೆಗಳೂ, ಕನ್ನೈದಿಲೆಗಳೂ ಜೊತೆಜೊತೆಯಾಗಿ ಕೂಡಲೆ ಅರಳಿದುವು. ವ॥ ಆ "ಕುವಲಯಬಾಂಧವ" (೧. ಕೈರವಗಳ ಮಿತ್ರನಾದ ಚಂದ್ರ. ೨. ಭೂಮಂಡಲದ ಮಿತ್ರ) ನ ಉದಯಕಾಲದಲ್ಲಿ ಉಂಟಾದ ಸಂಧ್ಯಾಕಾಲದ ಕೆಂಪುವರ್ಣದ ಕಾಂತಿಯಂತೆ ಕೆಂಪು ಬುಕ್ಕಿಟ್ಟಿನ ಹುಡಿ ದಿಕ್ಕು ದಿಕ್ಕಿಗೆ ಪಸರಿಸಿತು; ದೇವಗಂಗೆಯ ಅಲೆಗಳ ಸಾಲಿನಂತೆ ಮುತ್ತಿನ ತೋರಣಗಳು ತಳತಳಿಸಿದುವು; ಜನ್ಮಾಭಿಷೇಕ ಕಲ್ಯಾಣೋತ್ಸವವನ್ನು ಮಾಡಲೆಂದು ದೇವೇಂದ್ರನನ್ನು ಕೈಮಾಡಿ ಕರೆಯುವ ನಗರಲಕ್ಷ್ಮಿಯ ಚಿಗುರುಗೈಗಳೊ ಏನೊ ಎಂಬಂತೆ ಕೆಂಬಣ್ಣದ ಧ್ವಜಗಳು ಅಡಿಗಡಿಗೆ ಪಟಪಟಿಸಿದುವು; ಸಮಸ್ತಲೋಕವನ್ನು ತುಂಬಿದ ಸಂತೋಷದಲ್ಲಿ ದಿಗ್ಗಜಗಳು ಉಬ್ಬಿ ಧ್ವನಿಮಾಡಿದಂತೆ ಗಟ್ಟಿಯಾಗಿ ಬಾರಿಸುವ ಮಂಗಳವಾದ್ಯಗಳ ನಿನಾದವು ಎಂಟೂ ದಿಕ್ಕುಗಳಲ್ಲಿ ಪ್ರತಿಧ್ವನಿಸಿದುವು; ನಗರದೊಳಗೆಲ್ಲ ಮಹಾಪೂರವಾಗಿ ಹರಿಯುವ ಸಂತೋಷರಸದ ಸಂಚಯವಿದು ಎನಿಸಿ ಬೀದಿಬೀದಿಗಳಲ್ಲೆಲ್ಲ ತಳಿದ

ಮೆಯ್ದೋಱಿದಾಱುಂ ಋತುವಿನೆಸಕದಿಂ ನಲಿವ ದೀವದ ಚಾದಗೆಯ ಗಿಳಿಯ ಪುರುಳಿಯ ಕೋಗಿಲೆಯ ನವಿಲ ಕೊಂಚೆಯಂಚೆಯ ಕಾಕಳಿಯೊಡನೆ ಕಯ್ವೊಯ್ವಂತೆ ಮಂಗಳಗೀತಿಕಾರವಂಗಳಂಬರಂಬರಂ ಪರಿಯೆಯುಂ, ಅಳವಿಗಟಿದುತ್ಸವದೆ ಗೊಂದಣಂಗುಣಿವ ಗಣಿಕೆಯರ ಪದಪ್ರಚಾರಕ್ಕೆ ಬೆರ್ಚಿ ಪೂವಲಿಗಳಂ ಬಿಟ್ಟು ಪಾಪಹರನ ಪುಟ್ಟಿದಿಳೆಯಂ ಕಳಂಕಮೆ ಬಿಟ್ಟು ಪೋಪಂತೆ ನೆಗೆವ ತುಂಬಿಯ ಬಂಬಲ್ಗಳುಳುಂಬ ಮಾಗೆಯುಂ, ತನ್ಮಹೋತ್ಸವಮಭೂತಪೂರ್ವಮುಮದೃಷ್ಟಪೂರ್ವಮುಮಶ್ರುತಪೂರ್ವಮುಮೆನಿಸೆ;

> ತೋಱಿದುದೆಮ್ಮ ತೊಟ್ಟುವೆಸಕಿಂದು ಕೃತಾರ್ಥತೆಯಿಂದು ಸೀಮೆಯಂ।
> ಮೀಱಿದುದಿಂದ್ರರಾಗರಸವಾರಿಧಿ ಧರ್ಮನಮೇರುವಿಂದು ಬೇ ॥
> ರೂಱಿದುದೀ ಧರಾತಳದೊಳಿಂದವನೀಶನ ದೇವಿಯೊಳ್ಪು ನೀ।
> ರೇಱಿದುದೆಂದದೇಂ ನಲಿದು ನರ್ತಿಸುತಿರ್ದರೊ ದೇವಕಾಂತೆಯರ್ ॥ ೩೬

ಆಗಳ್

> ಎಱಗದೆ ತಾಮೆ ದೇವಮಕುಟಂ ನತಮಾದುವು ವಾದನಂಗಳಂ।
> ಪೆಱದೆ ಸುರಾನಕಂ ಮೊಳಗುತಿರ್ದುವು ಕಲ್ಪಲತಾವನಂಗಳಿಂ ॥
> ತಿಱಿಯದೆ ಪೂಗಳೆಯ್ದೆ ಸುರಿತಂದುವು ಸಗ್ಗದೊಳೆಂದೊಡಿಂತುಟೆಂ।
> ದಱಿವವನಾವನಾನತಚರಾಚರನಭ್ಯುದಯಪ್ರಭಾವಮಂ ॥ ೩೭

ಕುಂಕುಮದ್ರವದ ಚಳೆಯದಿಂದ ಕೆಂಪಡರಿತು; ಭೂದೇವತೆಯ ಆನಂದಾಶ್ರು ಬಿಂದುಗಳೊ ಏನೊ ಎಂಬಂತೆ ಮಾರ್ಗದ ಪಕ್ಕದಲ್ಲಿ ರಂಗವಲ್ಲಿಯಿಕ್ಕಿದ ಬಿಡುಮುತ್ತುಗಳು ಬೆಡಗು ಬೀರಿದುವು; ಒಮ್ಮೆಲೆ ಮೈದೋರಿದ ಆರೂ ಋತುಗಳ ಪ್ರಭಾವದಿಂದ ಉಲ್ಲಾಸಗೊಂಡ ದೀಹದ ಚಾತಕ, ಗಿಳಿ, ಸಾರಿಕೆ, ಕೋಗಿಲೆ, ನವಿಲು, ಕ್ರೌಂಚ, ಹಂಸ–ಇವೆಲ್ಲವುಗಳ ಮಧುರ ಕಲರವದೊಡನೆ ಪ್ರತಿಸ್ಪರ್ಧಿಸುವಂತೆ ಮಂಗಳಗೀತೆಗಳ ನಿನಾದವು ಆಕಾಶದವರೆಗೆ ಹಬ್ಬಿತು; ಮಿತಿಮೀರಿದ ಉತ್ಸಾಹ ದಿಂದ ಮಂಡಳನೃತ್ಯವಾಡುವ ನರ್ತಕಿಯರ ಪಾದಚಲನೆಗೆ ಬೆದರಿ ಪುಷ್ಪೋಪಹಾರಗಳನ್ನು ಬಿಟ್ಟು, ಪಾಪನಿವಾರಕನು ಹುಟ್ಟಿದ ಭೂಮಿಯಿಂದ ಕಳಂಕವೆ ಬಿಟ್ಟು ಹೋಗುವಂತೆ ಹಾರಿ ಹೋಗುವ ದುಂಬಿವಿಂಡುಗಳು ಅತ್ಯಧಿಕವಾದುವು; ಹೀಗೆ ಆ ಉತ್ಸವವು ಹಿಂದೆ ಎಂದೂ ಘಟಿಸದೆ ಎಂದೂ ಕಾಣದ, ಹಾಗೂ ಎಂದೂ ಕೇಳದ ಉತ್ಸವವೆನಿಸಿತು. ೩೬. "ನಮ್ಮ ಸೇವಾಕಾರ್ಯಕ್ಕೆ ಇದು ಸಫಲತೆಯುಂಟಾಯಿತು; ಇಂದ್ರನ ಸಂತೋಷಸಮುದ್ರ ಇಂದು ಮೇರೆ ಮೀರಿತು; ಧರ್ಮವೆಂಬ ನವಮೇರುವೃಕ್ಷ ಇಂದು ಈ ಭೂಮಿಯಲ್ಲಿ ಬೇರೂರಿತು; ಈ ಅರಸಿಯ ಸೌಭಾಗ್ಯ ಇಂದು ಅತಿಶಯವಾಯಿತು" ಎಂದು ದೇವಾಂಗನೆಯರು ಅದೆಷ್ಟು ಹಿಗ್ಗಿನಿಂದ ಕುಣಿಯುತ್ತಿದ್ದರು! ಆಗ–೩೭. ಸ್ವರ್ಗದಲ್ಲಿ ದೇವತೆಗಳ ಕಿರೀಟಗಳು ಅಪ್ರಯತ್ನವಾಗಿ ಎರಗಿದುವು; ದೇವವಾದ್ಯಗಳು ತಂತಾವೆ ನುಡಿಯತೊಡಗಿದುವು; ಕಲ್ಪಲತೆಗಳ ಹೂಗಳು ತಾವಾಗಿಯೆ ಬಂದು ಸುರಿದುವು; ಎಂದಮೇಲೆ ಆ ಚರಾಚರಪೂಜ್ಯನ ಅಭ್ಯುದಯ ಮಹಿಮೆಯನ್ನು ಅರಿಯುವವರ

ಧರಣೇಂದ್ರಾವಾಸದೊಳ್ ಶಂಖನಿನದಮಖಿಳವ್ಯಂತರಾವಾಸದೊಳ್ ಬಂ।
ಧುರಭೇರೀನಿಸ್ವನಂ ಜ್ಯೋತಿರಮರನಿಕರಾವಾಸದೊಳ್ ಸಿಂಹನಾದಂ ॥
ಸುರರಾಜಾವಾಸದೊಳ್ ಭೋಂಕೆನೆ ಪಟುತರಘಂಟಾರವಂ ಪೊಣ್ಮೆ ತೀರ್ಥೇ।
ಶ್ವರಜನ್ಮೋತ್ಸಾಹಮಂ ಸೂಚಿಸಿದುದಕೃತಸಂಜಾತಮಾಶ್ಚರ್ಯಭೂತಂ ॥೩೮

ಆಜನ್ಮೋತ್ಸವಮಂ ಗಡ ।
ಮೂಜಗಮುಮಿನಿತ್ತು ಬೇಗದಿಂ ನೆರೆದುದನೇಂ ॥
ಬೋಜೆಯೊಳೆ ಕೇಳ್ದುದೆನೆ ಜಿನ ।
ರಾಜನ ಸಾಮರ್ಥ್ಯಮೇನತಿವ್ಯಾಪಕಮೋ ॥ ೩೯

ಜನಿಯಿಸಿದನಲ್ತೆ ಸಿಂಹಾ ।
ಸನಪತಿಯಿಟಿದೆಱಗಿಮೆಂದು ಸುರರ್ಗೆಂಬವೊಲಾ ॥
ಸನಕಂಪಮಾದುದೊಡನ ।
ಪ್ಪಿನಮೋಲಗಿಪಮರಿಯರ ಶಿರಃಕಂಪನಮುಂ ॥ ೪೦

ವಿಷ್ಟರಕಂಪದಿನವಧಿಸ ।
ದೃಷ್ಟಿಸಮಾಲೋಕನಪ್ರಯೋಗದಿನಱಿದಂ ॥
ಸ್ಪಷ್ಟತರಂ ತಾನೆಂಬಿನ ।
ಮಷ್ಟಮತೀರ್ಥೇಶನುದಯಮಂ ದಿವಿಜೇಶಂ ॥ ೪೧

ಅಱಿದಾಸನದಿಂದಿೞಿದಿರ ।
ದೆಱಗಿದನಾತ್ಮೋತ್ತಮಾಂಗದೊಳ್ ಕರಮುಕುಳಂ ॥
ಪೆಱತೊಂದು ರತ್ನಮಕುಟದ ।
ತೆಱನಂ ರುಚಿರಾಂಗುಳೀಯಕಂ ತಳೆವಿನೆಗಂ ॥ ೪೨

ಯಾರು? ೩೮. ಧರಣೇಂದ್ರ ನಿವಾಸದಲ್ಲಿ ಶಂಖನಿನಾದ, ಸರ್ವ ವ್ಯಂತರಾವಾಸದಲ್ಲಿ ಸೊಗಸಾದ ಭೇರೀಧ್ವನಿ, ಜ್ಯೋತಿರಮರನಿಲಯದಲ್ಲಿ ಸಿಂಹನಾದ, ದೇವೇಂದ್ರನ ನಿವಾಸದಲ್ಲಿ ಘಂಟಾನಾದ –ಹೀಗೆ ಎಲ್ಲ ಧ್ವನಿಗಳು ತಮ್ಮಿಂದ ತಾವೆ ಆಶ್ಚರ್ಯ ಕರವಾಗಿ ಹೊಮ್ಮಿ ತೀರ್ಥಂಕರನ ಜನ್ಮೋತ್ಸವವನ್ನು ಸೂಚಿಸಿದುವು. ಆ ಜನ್ಮೋತ್ಸವವನ್ನು ಅಷ್ಟೇ ಬೇಗನೆ ಮೂರುಲೋಕಗಳು ಕೇಳಿದುವೆಂದ ಮೇಲೆ ಜಿನೇಂದ್ರನ ಸಾಮರ್ಥ್ಯ ಎಂತಹ ಅಧಿಕ ವ್ಯಾಪ್ತಿಯುಳ್ಳುದು! ೪೦. "ನಿಮ್ಮ ಸಿಂಹಾಸನಗಳಿಗೆಲ್ಲ ಒಡೆಯನಾದ ತೀರ್ಥೇಶನು ಹುಟ್ಟಿದನಲ್ಲವೆ? ನೀವು ಕೂಡಲೆ ನಮಸ್ಕರಿಸಿ" ಎಂದು ದೇವತೆಗೆ ಹೇಳುವುದೊ ಏನೊ ಎಂಬಂತೆ ಅವರಿಗೆ ಆಸನಕಂಪವಾಯಿತು; ಸೇವೆಯ ದೇವಾಂಗನೆಯರಿಗೆ ಶಿರಃಕಂಪವೂ ಆಯಿತು. ೪೧. ತನಗುಂಟಾದ ಆಸನಕಂಪವನ್ನು ಕಂಡು, ಎಂಟನೆಯ ತೀರ್ಥಂಕರನ ಜನ್ಮವಾಯಿತೆಂದು ದೇವೇಂದ್ರನು ತನ್ನ ಅವಧಿಜ್ಞಾನದಿಂದ ಅರಿತು

ಅನಂತರಂ ಭಗವದ್ದ್ವಿತೀಯಕಲ್ಯಾಣೋತ್ಸವೋತ್ಸುಕನಾಗಿರ್ಪಿನಂ

ಭುಜಗೇಂದ್ರರ್ ಭವನಪ್ರತಾನದಿನನೂನವ್ಯಂತರರ್ ತದ್ವನ ।
ವ್ರಜದಿಂ ಜ್ಯೋತಿರಮರ್ತ್ಯರಾಗಳೆ ನಿಜಜ್ಯೋತಿರ್ವಿಮಾನೌಘದಿಂ ॥
ದಜರರ್ ಕಲ್ಪಸಮೂಹದಿಂ ತಳರ್ದು ಬಂದೆತ್ತೆತ್ತಮಾಕಾಶದೊಳ್ ।
ಧ್ವಜಭೇರೀಯುತರಿರ್ದರೆಯ್ದೆ ಬರವಾರುತ್ತುಂ ಶಚೀನಾಥನಂ ॥ ೪೩

ಆಗಳಖಿಳಮಂಗಳಸನಾಥಸಾಮಾನಿಕತ್ರಯತ್ರಿಂಶತ್ಪಾರಿಷದಾತ್ಮರಕ್ಷಕಲೋಕಪಾಳಕಾಭಿಯೋಗ್ಯ ಕಿಲ್ಬಿಷಿಕಪರಿಜನಪರೀತನುಂ, ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಭೇದಸಪ್ತಾನೀಕಸಮೇತನುಮಾಗಿ

ಧರ್ಮೋದ್ಯೋಗಾನುರಾಗೋಲ್ಲಸಿತಹೃದಯನುದ್ಯದ್ವಿಭೂಷಾವಳೀರೋ ।
ಚಿರ್ಮಾಳಾಚಿತ್ರಿತಾಭ್ರಂ ಪಟುಪಟಹರವಾಘೂರ್ಣಿತಾಶಂ ವಿಯದ್ಗಂ ॥
ಗೋರ್ಮಿಪ್ರಖ್ಯಾತಪತ್ರಧ್ವಜಚಮರಜಬೃಂದಂ ಶಚೀಸಂಯುತಂ ಸೌ ।
ಧರ್ಮೇಂದ್ರಂ ಬಂದನೈರಾವತವಿಪುಳತರಸ್ಕಂಧಪೀಠೀನಿಷಣ್ಣಂ ॥ ೪೪

ಅಂತು ಚತುರ್ನಿಕಾಯಪ್ರಾಯ ರೋದಸೀಮಂಡಳನಾಗಿ ನಡೆಯೆ

ಕೊಂಡನು. ೪೨. ಹಾಗೆ ಅರಿತೊಡನೆ ಸಿಂಹಾಸನದಿಂದಿಳಿದು ನಮಸ್ಕರಿಸಿದನು. ಹಣೆಗಿಟ್ಟುಕೊಂಡ ಆತನ ಕೈಮುಗಿತವು ಇನ್ನೊಂದು ರತ್ನಕಿರೀಟವೊ ಏನೊ ಎಂಬಂತೆ ಶೋಭಿಸಿತು. ವ॥ ಆನಂತರ ಭಗವಂತನ ದ್ವಿತೀಯ ಕಲ್ಯಾಣೋತ್ಸವಕ್ಕೆ ಇಂದ್ರನು ಉತ್ಸುಕನಾಗಲು–೪೩. ಭವನಾಮರ ನಿವಾಸಗಳಿಂದ ನಾಗೇಂದ್ರರು, ವನಸಮೂಹಗಳಿಂದ ವ್ಯಂತರಾಮರರು, ಜ್ಯೋತಿರ್ವಿಮಾನಗಳಿಂದ ಜ್ಯೋತಿರಮರರು, ಕಲ್ಪಗಳಿಂದ ಅಜರರು ಹೊರಟು ಬಂದು ಧ್ವಜಗಳಿಂದಲೂ, ಭೇರಿಗಳಿಂದಲೂ ಕೂಡಿ ಸಿದ್ಧರಾಗಿ, ದೇವೇಂದ್ರನ ಹಾದಿ ಕಾಯುತ್ತ ನಿಂತರು. ವ॥ ಆಗ ಮಂಗಳಪರಿಕರಗಳನ್ನೆಲ್ಲ ಅಳವಡಿಸಿಕೊಂಡು, ಸಾಮಾನಿಕರು, ಮೂವತ್ತುಮೂರು ಪಾರಿಷದರು, ಅಂಗರಕ್ಷಕರು, ಲೋಕಪಾಲರು, ಅಭಿಯೋಗ್ಯರಾದ ಕಿಲ್ಬಿಷಿಕರು ಇವರೆಲ್ಲರ ಪರಿವಾರದೊಂದಿಗೆ ಆನೆ, ಕುದುರೆ, ರಥ, ಕಾಲಾಳು, ವೃಷಭ, ಗಂಧರ್ವ, ನರ್ತಕಿ ಎಂಬ ಏಳು ಬಗೆಯ ಸೈನ್ಯ ಸಹಿತನಾಗಿ–೪೪. ತನ್ನ ಅತಿಶಯವಾದ ಆಭರಣಗಳ ಕಿರಣಮಾಲೆಗಳಿಂದ ಆಕಾಶವನ್ನು ವರ್ಣಮಯವಾಗಿ ಮಾಡುತ್ತ, ಪಟಹ ನಿನಾದದಿಂದ ದಿಕ್ಕುಗಳನ್ನೆಲ್ಲ ತುಂಬುತ್ತ, ಆಕಾಶಗಂಗೆಯ ತೆರೆಗಳಂತೆ ಶೋಭಿಸುವ ಧ್ವಜಚಾಮರಗಳ ಸಮೂಹ ಶೋಭೆಯಿಂದೊಡಗೂಡಿ, ಶಚೀದೇವಿ ಸಹಿತನಾಗಿ ಧರ್ಮಕಾರ್ಯದ ಉತ್ಸಾಹದಿಂದ ಅರಳಿದ ಚಿತ್ತವುಳ್ಳ ದೇವೇಂದ್ರನು ಐರಾವತದ ವಿಸ್ತಾರವಾದ ಹೆಗಲ ಮೇಲಿನ ಪೀಠವನ್ನೇರಿಕೊಂಡು ಬಂದನು. ವ॥ ಹೀಗೆ ನಾಲ್ಕು ಬಗೆಯ ದೇವತಾಸಮೂಹದಿಂದ ಆಕಾಶವನ್ನು ತುಂಬಿಕೊಂಡು ನಡೆದಾಗ–

ಘನರತ್ನಾಳಂಕೃತಿಪ್ರಗ್ರಹವಿಸರಲಸತ್ಪಲ್ಲವಂ ಪೀವರೋರೋ ।
ಜನಿಕಾಯಾತುಚ್ಛಗುಚ್ಛಾವಳಿ ವಿಚಳದಪಾಂಗಪ್ರಭಾಭಾರಪುಷ್ಪಾ ॥
ಭಿನುತಂ ಚೂರ್ಣಾಳಕಾಳಿಪ್ರಮದಮಧುಕರೌಘಾಕರಂ ಕಲ್ಪವಲ್ಲೀ।
ವನಮೆಂಬೊಂದಂದದಿಂ ಬಂದುದು ದಿವಿಜವಧೂಬೃಂದಮಾನಂದದಿಂದಂ॥ ೪೫

ಅಹಮಹಮಿಕೆಯಿಂದಂತಾ ॥
ಮಹೋತ್ಸವಕ್ಕೊರ್ವರಿರದೆ ಕಲ್ಪಜರೆಲ್ಲಂ ॥
ಗೃಹಸಮಿತಿಯ ಮೇಲ್ನೋಟ ।
ಕ್ಕಹಮಿಂದ್ರರೆ ನಿಂದರೆನಿಸಿ ಬಂದರ್ ಮುದದಿಂ ॥ ೪೬

ಆಗಳ್

ಅನುರಾಗಭರಮನಾ ದೇ ।
ವನಿಕಾಯಂ ತಲೆಯೊಳೆಯ್ದೆ ತಳೆದೇಟ್ಟಿಂದ ॥
ತ್ತೆನಿಸಿದುವು ಮಣಿಮಯೋತ್ತಂ ।
ಸನಿರಂತರನಿರ್ಯದರುಣರುಚಿಮಂಜರಿಗಳ್ ॥ ೪೭

ಕಟ್ಟಿದ ಸೂಯಾಣದ ಮೇ ।
ಲ್ಗಟ್ಟೋ ನವಪದದ ಮಣಿವಿತಾನಮೊ ಪೆಱದ ॥
ಲ್ಲಿಟ್ಟವರೋಪಮೊ ದಿಟಕೆನೆ ।
ದಿಟ್ಟಿಗೆ ಚೆಲ್ವಾಯ್ತು ನಭದೊಳಮರಾಗಮನಂ ॥ ೪೮

೪೫. ಮೇಲಾದ ರತ್ನಾಭರಣಗಳ ಕಿರಣಗಳೆ ಚಿಗುರೆಲೆಗಳು, ತೋರವಾದ ಮೊಲೆಗಳೆ ಘನವಾದ ಗುಚ್ಛಗಳು, ಚಂಚಲವಾದ ಕಡೆಗಣ್ಣುಗಳ ಪ್ರಭೆಯೆ ಹೂಗಳು, ಮುಂಗುರುಳುಗಳೆ ಉನ್ಮತ್ತ ಭೃಂಗಸಮೂಹ ಎನಿಸಲಾಗಿ, ಕಲ್ಪವಲ್ಲಿಗಳ ಬನವೆ ನಡೆದು ಬಂದಿತೆಂಬಂತೆ ದೇವಕನ್ಯೆಯರ ಸಮುದಾಯವು ಆನಂದದಿಂದ ಬಂದಿತು. ೪೬. ಗೃಹಗಳ ಮೇಲ್ನೋಟಕ್ಕೆ ಅಹಮಿಂದ್ರರೆ ನಿಂತರೇನೊ ಎಂಬಂತೆ ನಾಮುಂದೆ ನೀ ಮುಂದೆ ಎಂದು ಕಲ್ಪಲೋಕದವರೆಲ್ಲಾ ಆ ಮಹೋತ್ಸವಕ್ಕೆ ಸಂತೋಷದಿಂದ ಬಂದರು, ಆಗ–೪೭. ಆ ದೇವತೆಗಳೆಲ್ಲರೂ ಅನುರಾಗವನ್ನು ತಲೆಯ ಮೇಲೆ ಧರಿಸಿಕೊಂಡು ಬಂದರೊ ಏನೊ ಎಂಬಂತೆ ಅವರ ರತ್ನಮಯವಾದ ಶಿರೋಭೂಷಣಗಳಿಂದ ನಿರಂತರವಾಗಿ ಹೊಮ್ಮುವ ಕೆಂಗಿರಣದ ಗೊಂಚಲು ಗಳು ತೋರಿದುವು. ೪೮. ಕಟ್ಟಿದ ಕಸೂತಿಯ ಮೇಲುಕಟ್ಟೊ, ಅಥವಾ ಹೊಸಬಗೆಯ ರತ್ನವಿತಾನವೊ ಎಂಬಂತೆ ಆಕಾಶದಲ್ಲಿ ಬರುತ್ತಿರುವ ದೇವತೆಗಳ

ಆ ವ್ಯೋಮಂ ವಿಚಳದ್ವಿಮಾನಮಯಮಾಶಾಮಂಡಳಂ ಜೀವ ನಂ।
ದವ್ಯಾಹಾರಮಯಂ ದಿನಂ ಮಣಿವಿಭೂಷಾರುಗ್ಮಯಂ ಮಾರುತಂ॥
ದಿವ್ಯಾಮೋದಮಯಂ ಧರಾವಿಳಯಮುದ್ಯದ್ದರ್ಶವಿತ್ತೇಶವ।
ರ್ಷವ್ಯಾಭಾಸುರರತ್ನರಾಶಿಮಯಮೇಂ ಚೆಲ್ವಾಯ್ತೊ ದೇವಾಗಮಂ॥ ೪೯

ಅಂತು ಮಂಗಳೋಪಕರಣವ್ಯತಿಕರಿತಕರಚತುರ್ವಿಧಾಮರಪ್ರಕರಪುರಸ್ಸರಮಹಾವಿಭೂತಿಯಿಂ ಚಂದ್ರಪುರಕ್ಕೆ ವಂದು ತದ್ವಿಶಾಳಶಾಲಾಗ್ರದೇಶದೊಳ್ ನಿಲ್ವುದುಂ ನಗರನಾರೀಜನಂಗಳುತ್ತುಂಗಪ್ರಾಸೌದ ಸೌಧಶಿಖರಂಗಳನೇಜಿ

ಇದು ದಲ್ ಮುಕ್ತನಿಮೇಷನೇತ್ರಮನಿಮೇಷಪ್ರೇಯಸೀಸ್ತೋಮಮಿಂ।
ತಿದು ದಲ್ ಸ್ಫಾರಫಣಾತ್ತಮೌಳಿಫಣಭೃದ್ಧಾಮಾಸಮೂಹಂ ಬಟಿ॥
ಕಿದು ದಲ್ ಜ್ಯೋತಿರುದಾತ್ತ ಮೂರ್ತಿರುಚಿರಂ ಜ್ಯೋತಿಷ್ಕಕಾಂತಾಳಿ ಮ।
ತ್ತಿದು ದಲ್ ವನ್ಯಲತಾಂತಭೂಷಣಗಣಂ ವಾರಾಂಗನಾಸಂಕುಳಂ॥ ೫೦

ಎಂದು ನೋೞ್ಪನ್ನೆಗಂ ಸೌಧರ್ಮೇಂದ್ರಂ ಪ್ರಥಮದ್ವಿತೀಯಕಲ್ಪಾಧಿಪರ್ವೆರಸು ಗಗನಮಾರ್ಗದಿಂ ಬಂದವತರಿಸುವಾಗಳ್

ಪುಗೆ ಪಶ್ಚಾರ್ಧಂ ಪುರೋಭಾಗಮನೊಗೆದಿನಿತಂ ಬಿರ್ಚೆ ಪೂರ್ವಾಂಘ್ರಿ ಹಸ್ತಂ।
ತೆಗೆದಂಸಂಸ್ಥಾನದೊಳ್ ಮಂಡಳಿಸಿರೆ ಬಿಗಿಪಂ ತಾಳ್ದೆ ಕರ್ಣಂ ಮನಂ ದಿ॥

ಸಮೂಹವು ಕಂಗೊಳಿಸಿತು. ೪೯. ಆಕಾಶವೆಲ್ಲ ಚಲಿಸುತ್ತಿರುವ ವಿಮಾನಗಳಿಂದ ತುಂಬಿತು; ದಿಙ್ಮಂಡಲವೆಲ್ಲ "ಜೀವ" "ನಂದ" ಎಂಬ ನುಡಿಗಳಿಂದ ತುಂಬಿತು; ಗಗನವೆಲ್ಲ (?) ರತ್ನಾಭರಣಗಳ ಕಾಂತಿಯಿಂದ ತುಂಬಿತು; ಗಾಳಿಯೆಲ್ಲ ದಿವ್ಯವಾದ ಪರಿಮಳದಿಂದ ತುಂಬಿತು; ಭೂವಲಯವೆಲ್ಲ ಕುಬೇರನು ಮಳೆಗರೆಯುವ ಉಜ್ವಲ ರತ್ನರಾಶಿಗಳಿಂದ ತುಂಬಿತು. ಹೀಗೆ ದೇವತೆಗಳ ಆಗಮನ ಎಷ್ಟು ಚೆಲುವಾಯಿತು! ವ॥ ಹೀಗೆ ಮಂಗಳೋಪಕರಣಗಳನ್ನು ಕೈಯಲ್ಲಿ ಹಿಡಿದುಕೊಂಡ ಚತುರ್ವಿಧದ ದೇವತಾ ಸಮೂಹದೊಡನೆ ಮಹಾವೈಭವದಿಂದ ಚಂದ್ರಪುರಕ್ಕೆ ಬಂದು, ಅರಮನೆಯ ವಿಸ್ತಾರವಾದ ಶಾಲೆಯ ಮೇಲ್ಭಾಗದ ಅಂತರಿಕ್ಷದಲ್ಲಿ ನಿಲ್ಲಲಾಗಿ, ನಗರದ ನಾರಿಯರು ಎತ್ತರವಾದ ಭವನಗಳ ತುದಿಗೇರಿ ನಿಂತು–೫೦. "ಇದು ರೆಪ್ಪೆ ಹೊಯ್ಯದ ದೇವರಮಣಿಯರ ಸಮೂಹ! ಹೊಳೆಯುವ ಹೆಡೆಗಳನ್ನು ಹೊಂದಿದ ಈ ಭಾಮೆಯರು ನಾಗಾಂಗನೆಯರು ಜ್ಯೋತಿಗಳಂತೆ ಉಜ್ವಲರಾದ ಈ ಕಾಂತಿಮತಿಯರು ಜ್ಯೋತಿಷ್ಕದೇವಿಯರು! ಮತ್ತೆ ವನಲತಾ ಪುಷ್ಪಗಳಿಂದ ಅಲಂಕೃತರಾದವರು ವಾರಾಂಗನೆಯರು!" ವ॥ ಎಂದು ನುಡಿಯುತ್ತ ನೋಡುತ್ತಿರಲು ಸೌಧರ್ಮೇಂದ್ರನು ಮೊದಲನೆಯ ಹಾಗು ಎರಡನೆಯ ಕಲ್ಪೇಂದ್ರರ ನ್ನೊಡಗೊಂಡು ಆಕಾಶಮಾರ್ಗವಾಗಿ ಬಂದು ಇಳಿಯುವಾಗ– ೫೧. ಹಿಂಭಾಗವು ಸಂಕುಚಿತವಾಗಿ ಮುಂಭಾಗದೊಳಗೆ ಸೇರಿದಂತಾಗಲು, ಮುಂಗಾಲು ಚಾಚಿಕೊಂಡು, ಸೊಂಡಿಲನ್ನು ಎತ್ತಿ ಹೆಗಲ ಬಳಿ ಸುತ್ತಿರಿಸಿಕೊಂಡು, ಕಿವಿಗಳನ್ನು

ಟ್ಟಿಗಳೊಳ್ ತಳ್ತೊಪ್ಪಿಯೆ ಭಾಳಸ್ಥಳವಿನಿಹಿತಸಂಧಾರ್ಯಮಾಣಾಂಕುಶಾಗ್ರಂ ।
ಬಗೆಗತ್ಯಾಶ್ಚರ್ಯಮಾಯ್ತಾಗಸದಿನಿಚಿಯುತುಂ ಭೂಮಿಗಿಂದ್ರದ್ವಿಪೇಂದ್ರಂ ॥ ೫೧

ಅಂತು ರಾಜಭವನಪ್ರಾಂಗಣದೊಳವತರಿಪುದುಂ, ಶಚೀಮಹಾದೇವಿ ನಿಜ ಪತಿವಚನದಿಂ ಶಾಂತ ಪದಸಂಹಿತೆಯಂತೆ ತಿರೋಹಿತಾಕಾರೆಯಾಗಿ ಲಕ್ಷ್ಮಣಾಮಹಾದೇವಿಯ ಸೂತಿಕಾನಿವಾಸಮಂ ಪೊಕ್ಕು

ಉದಯಾದ್ರಿ ಚೂಳಿಕಾಪಾ ।
ರ್ಶ್ವದ ಬಾಳಸುಧಾಂಶುವೆನಿಸಿ ನಿಜಜನನಿಯ ಪ ॥
ಕ್ಕದೊಳಿರ್ದ ಬಾಲನಂ ಕಾ ।
ಣ್ಬುದುಮಲರ್ದುವು ಶಚಿಯ ನಯನಹೃತ್ಕುಮುದಂಗಳ್ ॥ ೫೨

ಹರಿಸತಿ ಜಿನತನುವಂ ಜಾ ।
ತರೂಪವಿಳಸಿತನಿಧಾನಮಂ ಕಂಡೊಸೆದಳ್ ॥
ಹರಿಸದೊಳೊಂದುವವೊಲ್ ಜಾ ।
ತರೂಪವಿಳಸಿತನಿಧಾನಮಂ ಕಂಡಧನಂ ॥ ೫೩

ಅನಂತರಂ

ಅಱಸಿ ತೊಟಲ್ತಂದಾ ನಿಧಿ ।
ಗೆಱಗುವವೊಲ್ ದೀಪವರ್ತಿ ಪಾಳೋಮಿಯುಮ ॥
ಟ್ಕಱಕೊಳಂದು ಮೂಮೆ ಬಲವಂ ।
ದೆಱಗಿದಳಾಬೋಧನಿಧಿಯ ಪದಸನ್ನಿಧಿಯೊಳ್ ॥ ೫೪

ನಿಗುರಿಸಿ, ಕುಂಭಸ್ಥಳದಲ್ಲಿಟ್ಟ ಅಂಕುಶದ ಧಾರೆ ಕಣ್ಣಲ್ಲಿ ಹೊಳೆಯುತ್ತಿರಲಾಗಿ, ಭೂಮಿಗೆ ಇಳಿದು ಬರುತ್ತಿರುವ ಐರಾವತವು ಆಶ್ಚರ್ಯಕರವಾಗಿ ತೋರಿತು. ವ॥ ಹಾಗೆ ಬಂದು ಅರಮನೆಯ ಅಂಗಳದಲ್ಲಿ ಇಳಿಯಲಾಗಿ, ಪತಿಯ ಅಪ್ಪಣೆಯ ಮೇರೆಗೆ ಶಚೀದೇವಿಯು ಶಾಂತಪದ ಸಂಹಿತೆಯಂತೆ ಅದೃಶ್ಯರೂಪವನ್ನು ತಾಳಿ ಲಕ್ಷ್ಮಣಾ ಮಹಾದೇವಿಯ ಹೆರಿಗೆ ಮನೆಯನ್ನು ಹೊಕ್ಕಳು. ೫೨. ಉದಯಪರ್ವತದ ಶಿಖರದೆಡೆಯಲ್ಲಿರುವ ಬಾಲಚಂದ್ರನಂತೆ ತನ್ನ ತಾಯ ಮಗ್ಗುಲಲ್ಲಿದ್ದ ಶಿಶುವನ್ನು ಕಂಡು ನೈದಿಲೆಯಂತೆ ಶಚೀದೇವಿಯ ಹೃದಯ ವರಳಿತು; ಕಣ್ಣುಗಳೂ ಅರಳಿದುವು. ೫೩. ಬಡವನು ಚಿನ್ನದ ನಿಧಿಯನ್ನು ಕಂಡು ಹಿಗ್ಗುವಂತೆ ಚಿನ್ನದಂತೆ ಹೊಳೆಯುವ ಜಿನಶಿಶುವನ್ನು ಕಂಡು ಇಂದ್ರಾಣಿಯು ಸಂತೋಷಪಟ್ಟಳು. ೫೪. ಹುಡುಕುತ್ತ ಹೊರಟ ನಿಧಿಯೆಡೆಯನ್ನು ಕಂಡೊಡನೆ ದೀಪದ ಕುಡಿ ಅದರೆಡೆಗೆ ಬಾಗುವಂತೆ ಇಂದ್ರಾಣಿದೇವಿಯು ಭಕ್ತಿಯಿಂದ ಆ

ಆಗಳ್

ಮಾಯಾಶಿಶಿವುಮನೊರ್ಮೆಯೆ ।
ಮಾಯಾನಿದ್ರೆಯುಮನಿತ್ತಳಂಬಿಕೆಗೆ ಜಗ ॥
ಜ್ಯಾಯಸನುಯ್ವ ನಿಜಾಭಿ ।
ಪ್ರಾಯದೆ ಶಚಿ ಶುಚಿಗಳಾರೊ ಕಾರ್ಯೋತ್ಕಂಠರ್ ॥ ೫೫

ಶಿಶುಗೆ ನಯನಾಂಶುದುಗ್ಧ ।
ಪ್ರಸರದೆ ಜನ್ಮಾಭಿಷೇಕಮಂ ಮುನ್ನೊಂದಂ ॥
ಪೊಸೆಯಿಸಿ ಸರೋಜದಿಂದ ।
ರ್ಚಿಸುವಂತಿಂದ್ರಾಣಿ ನೆಗಪಿದಳ್ ಕೆಂದಳದಿಂ ॥ ೫೬

ಅಂತನರ್ಘ್ಯರತ್ನಮಂ ತಡಿಗೆ ತರ್ಪ ರತ್ನಾಕರೋರ್ಮಿಯಂತೆ ತರ್ಪಲ್ಲಿ,

ಜಂಗಮಲತೆಗಳವೊಲ್ ದಿವಿ ।
ಜಾಂಗನೆಯರ್ ಮುಂದೆ ನಡೆದರೆಸೆವಲರ್ಗುಡಿಗಳ್ ॥
ಭೃಂಗಾರಂಗಳ್ ಭೃಂಗರ ।
ವಂಗಳ್ ಗೀತಾರವಂಗಳೆಂಬಿನಮಾಗಳ್ ॥ ೫೭

ಅನಂತರಂ ನಿಜಪತಿಪ್ರಸಾರಿತದಿಕ್ಕರಿಕರಾನುಕಾರಿಕರಯುಗಳಕ್ಕೆ ನೀಡಲೊಡಂ

ಇಂತೆ ನೆಗಪುವುದು ನೀನೆ ।
ನ್ನಂ ತಡೆಯದೆ ತೀರ್ಥನಾಥ ನಿಶ್ರೇಯಸಪ ॥
ರ್ಯಂತಮೆನುತ್ತಂ ಮೃದುತಳ ।
ದಿಂ ತಳೆದಮರಪತಿ ನೆಗಪಿದಂ ಸಂತಸದಿಂ ॥ ೫೮

ಜ್ಞಾನನಿಧಿಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಕಾಲ್ಗೆರಗಿದಳು. ಆಗ ೫೫. ಜಗದ್ಗುರುವನ್ನು ಎತ್ತಿಕೊಂಡು ಹೋಗಲೆಂದು ತಾಯಿಗೆ ಮಾಯೆಯಿಂದ ನಿದ್ದೆ ಬರಿಸಿ, ಮಾಯೆಯ ಕೂಸೊಂದನ್ನು ಅವಳ ಪಕ್ಕದಲ್ಲಿರಿಸಿದಳು. ಕಾರ್ಯೋತ್ಕಂಠರಲ್ಲಿ ಶುಚಿಗಳಾದವರು ಯಾರು? ೫೬. ಶಿಶುವಿಗೆ (ಮುಂಚಿತವಾಗಿ ತಾನೆ) ಹಾಲಿನ ಅಭಿಷೇಕವನ್ನು ಮಾಡುವಂತೆ ಕಣ್ತುಂಬ ಅವನನ್ನು ನೋಡಿ, ತಾವರೆಗಳಿಂದ ಅರ್ಚಿಸುವಂತೆ ತನ್ನ ಕೆಂಗಾಂತಿಯ ಕೈಗಳಿಂದ ಎತ್ತಿಕೊಂಡಳು. ವ॥ ಅಮೂಲ್ಯವಾದ ರತ್ನವನ್ನು ತೀರಕ್ಕೆ ಎತ್ತಿಕೊಂಡು ಬರುವ (ರತ್ನಗರ್ಭ) ಸಮುದ್ರದ ಅಲೆಯಂತೆ ಕೂಸನ್ನು ಎತ್ತಿಕೊಂಡು ಬರುತ್ತಿರುವಾಗ ೫೭. ಕಂಗೊಳಿಸುವ ಅಭಿಷೇಕ ಕಲಶಗಳು ಹೂಗೊಂಚಲಂತಿರಲು, ಗೀತಧ್ವನಿ ದುಂಬಿಗಳ ಗುಂಜಾರವದಂತಿರಲು ದೇವಾಂಗನೆಯರು ಜಂಗಮಲತೆಗಳಂತೆ ಮುಂದೆ ನಡೆದರು. ವ॥ ಬಳಿಕ ತನ್ನ ಪತಿ ಚಾಚಿದ ದಿಗ್ಗಜದ ಸೊಂಡಿಲಂತಿರುವ ತೋಳುಗಳಿಗೆ ಆ ಕೂಸನ್ನು ಆಕೆ ನೀಡಿದಳು. ೫೮. "ತೀರ್ಥೇಶ್ವರನೆ, ನೀನೂ ನನ್ನನ್ನು ಹೀಗೆಯೆ ಮೋಕ್ಷ ಪದಕ್ಕೆ ಎತ್ತಿಕೊಳ್ಳಬೇಕು" ಎನ್ನುತ್ತ ದೇವೇಂದ್ರನು ಸಂತೋಷಭರಿತನಾಗಿ ಮೃದುವಾದ

ಸೌಧರ್ಮೇಂದ್ರಂ ಮುಕ್ತಿ ।
ಶ್ರೀಧವನಂ ಬಾಹುಶಾಖೆಯೊಳ್ ತಳೆದೇನು ॥
ದ್ದೋಧಿಸಿದನೊ ಫಳಕಳಿತ ।
ಶ್ರೀಧರ್ಮನಮೇರುಭೂರುಹಾಡಂಬರಮಂ ॥ ೫೯

ಪರಮನ ಪದಸರಸಿಜಮಂ ।
ಶಿರದೊಳ್ ರತ್ನಾವತಂಸಮಂ ನೊಸಲೊಳ್ ಭಾ ॥
ಸುರಪಟ್ಟಮನುರದೊಳ್ ಬಂ ।
ಧುರಪದಕಮನಾಂಪ ತೆಱದಿನಾಂತಂ ಶಕ್ರಂ ॥ ೬೦

ನೋಡಿದ ಕಣ್ಮಲರೊಳ್ ತು ।
ಳ್ಕಾಡಿದುದಾನಂದಬಾಷ್ಪಮಕರಂದಚಯಂ ॥
ಕೂಡೆ ಪುಳಕಾಂಕುರಾವಳಿ ।
ಮೂಡಿದುದಂದೆತ್ತಿಕೊಂಡ ದೋರ್ವಲ್ಲರಿಯೊಳ್ ॥ ೬೧

ಅಂತನೇಕಜನ್ಮದುರ್ಲಭಮಪ್ಪ ದೇವರ ವಲ್ಲಭನ ಪರಮೌದಾರಿಕಶರೀರದರ್ಶನಸ್ಪರ್ಶನಂಗಳಿನಾದ ಹರ್ಷೋತ್ಕರ್ಷಮನನುಭವಿಸಿಯುಂ ಅಭಿನಯಿಸಿಯುಂ ಬಟೆಯಮತ್ಯಂತಮೃದುಳಕಲ್ಪದ್ರುಮದುಕೂಲವಸನಪ್ರಚ್ಛನ್ನಮುಂ ಸಾಂದ್ರಹರಿಚಂದನದ್ರವಾಭ್ಯಕ್ಷಿತಮುಮಪ್ಪ ದಕ್ಷಿಣಾಂಕದೊಳ್ ಕುಳ್ಳಿರಿಸಲೊಡಂ

ಕೈಗಳಿಂದ ಜಿನಶಿಶುವನ್ನು ಎತ್ತಿಕೊಂಡನು. ೫೯. ಮುಕ್ತಿವಲ್ಲಭನಾದ ಆ ಜಿನೇಂದ್ರನನ್ನು ತನ್ನ ತೋಳುಗಳಲ್ಲಿ ಎತ್ತಿಕೊಂಡ ಸೌಧರ್ಮೇಂದ್ರನು, ಫಲಭರಿತವಾದ ಧರ್ಮವೆಂಬ ನಮೇರು ವೃಕ್ಷದಂತೆ ವಿಜೃಂಭಿಸಿದನು. ೬೦. ತಲೆಯಲ್ಲಿ ರತ್ನಾಭರಣವನ್ನು, ಹಣೆಯಲ್ಲಿ ಸುಂದರವಾದ ಪಟ್ಟವನ್ನು, ಎದೆಯ ಮೇಲೆ ಸುಂದರವಾದ ಪದಕವನ್ನು ಧರಿಸುವಂತೆ ಇಂದ್ರನು ಭಗವಂತನ ಪಾದಕಮಲಗಳನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡನು. ೬೧. ಎತ್ತಿಕೊಂಡ ತೋಳುಗಳೆಂಬ ಬಳ್ಳಿಗಳಲ್ಲಿ ರೋಮಾಂಚವೆಂಬ ಚಿಗುರು ಮೂಡಿತು; ಹೂಗಳಂತೆ ಅರಳಿದ ಕಣ್ಣುಗಳಲ್ಲಿ ಮಕರಂದ ರಸದಂತೆ ಆನಂದಾಶ್ರು ತುಳುಕಾಡಿತು. ವ॥ ಹಲವಾರು ಜನ್ಮ ಕಳೆದರೂ ಇನ್ನೂ ದುರ್ಲಭವೆ ಎನಿಸಿದ, ಪರಮೇಶ್ವರನ ಔದಾರಿಕದೇಹದ ದರ್ಶನ ಹಾಗು ಸ್ಪರ್ಶನಗಳಿಂದ ಪರಮ ಹರ್ಷಿತನಾಗಿ, ಇಂದ್ರನು ಅತ್ಯಂತ ಮೃದುವಾದ ಕಲ್ಪದ್ರುಮವಸ್ತ್ರವನ್ನ ಹಾಸಿ, ದಟ್ಟವಾಗಿ ಹರಿಚಂದನವನ್ನು ಚಿಮುಕಿಸಿದ ತನ್ನ ಬಲ ತೊಡೆಯ ಮೇಲೆ ಆ ಶಿಶುವನ್ನು ಕುಳ್ಳಿರಿಸಿದನು.

ಅನುರಾಗಂ ನಿಜಮಾಗಿ ತೋರ್ಪ ಶಚಿ ಸಂಧ್ಯಾಲಕ್ಷ್ಮಿಯಂ ಪೋಲೆ ಪೂ
ರ್ವನಗಾಕಾರದಿನಭ್ರಮೂಪತಿ ಬೆಡಂಗಂ ಬೀಱೆ ದೇವೇಂದ್ರನ ॥
ಗ್ರನಿಷಣ್ಣಂ ಸಮನಾಗೆ ರತ್ನಶಿಖರಕ್ಕಂತಾತನುತ್ಸಂಗದೊಳ್ ।
ಜಿನನೊಪ್ಪಂಬಡೆದಂ ಸಮಭ್ಯುದಿತಚಾಂದ್ರಂ ಬಿಂಬಮೆಂಬನ್ನೆಗಂ ॥ ೬೨

ಆ ಸಮಯದೊಳಿರ್ಕೆಲದ ಪಕ್ಕದಾನೆಗಳೊಳಿರ್ದು

ಮನದೊಲವಿಂದೀಶಾನೇಂ ।
ದ್ರನೆತ್ತಿದಂ ಮುತ್ತಿನೆಸೆವ ಕೊಡೆಯಂ ಚೆಲ್ವ ॥
ಪ್ಪಿನಮೆನೆ ಚಾಮರಮಿಕ್ಕಿದ ।
ರನಘಂಗೆ ಸನತ್ಕುಮಾರ ಮಾಹೇಂದ್ರರ್ಕಳ್ ॥ ೬೩

ತದನಂತರಂ ನಭೋವಿಭಾಗಮನಳಂಕರಿಸಲೊಡಂ

ತನತನಗನಿತುಂ ಜಯ ಜೀ ।
ವ ನಂದ ವರ್ಧಸ್ವಮುಖರಮಾಯ್ತು ಚತುರ್ದೇ ॥
ವನಿಕಾಯಂ ಘೂರ್ಣಿಸಿದಂ ।
ತೆ ನಭೋಂಭೋನಿಧಿ ಜಿನೇಂದುದರ್ಶನದಿಂದಂ ॥ ೬೪

ಪ್ರಕಟತರಂ ಜಿನತನುಚಂ ।
ದ್ರಿಕೆ ಪರ್ವೆ ನಭಸ್ಸರಸ್ಸರೋರುಹನಿಕರಂ ॥
ಮುಕುಳಿತಮಾದವೊಲಾಯ್ತೆ ।
ತ್ತಿ ಕೆಯ್ಗಳಂ ಮುಗಿದ ದೇವದೇವೀನಿಕರಂ ॥ ೬೫

೬೨. ಅನುರಾಗವನ್ನು ಪ್ರಕಟವಾಗಿ ತೋರುತ್ತಿರುವ ಶಚೀದೇವಿ ಸಂಧ್ಯಾಲಕ್ಷ್ಮಿಯನ್ನು ಹೋಲಲಾಗಿ, ಉದಯಪರ್ವತದಂತೆ ಐರಾವತವು ಬೆಡಗನ್ನು ಬೀರಲಾಗಿ, ಮೇಲೆ ಕುಳಿತು ದೇವೇಂದ್ರನು ರತ್ನಶಿಖರಕ್ಕೆ ಸಮನಾಗಲಾಗಿ, ಆತನ ತೊಡೆಯ ಮೇಲೆ ಕುಳಿತ ಜಿನನು ಅದೇ ಉದಯವಾದ ಚಂದ್ರನೆಂಬಂತೆ ಶೋಭಿಸಿದನು. ವ॥ ಆ ಸಮಯದಲ್ಲಿ ಎಡಕ್ಕೂ ಬಲಕ್ಕೂ ಇರುವ ಆನೆಗಳ ಮೇಲೆ ಕುಳಿತು ೬೩. ಈಶಾನೇಂದ್ರನು ಅಂದವಾದ ಮುತ್ತಿನ ಕೊಡೆಯನ್ನು ಜಿನಾರ್ಭಕನ ಮೇಲೆ ಎತ್ತಿ ಹಿಡಿದನು; ಸನತ್ಕುಮಾರ ಮಹೇಂದ್ರರು ವಿಜೃಂಭಣೆಯಿಂದ ಚಾಮರ ಬೀಸಿದರು. ವ॥ ಆ ಬಳಿಕ ಆಕಾಶಮಂಡಲವನ್ನು ಅಲಂಕರಿಸುವಂತೆ ಮೇಲೇರಲಾಗಿ–೬೪. "ಜಯ", "ಜೀವ", "ನಂದ", "ವರ್ಧಸ್ವ" ಎಂದು ಚತುರ್ನಿಕಾಯ ದೇವತೆಗಳಲ್ಲಿ ಪ್ರತಿಯೊಬ್ಬರೂ ನುಡಿಯುತ್ತಿರಲಾಗಿ, ಜಿನನೆಂಬ ಚಂದ್ರನ ದರ್ಶನದಿಂದ ಆಕಾಶವೆಂಬ ಸಮುದ್ರವು ಉಕ್ಕೇರಿ ಮೊರೆಯುವಂತೆ ತೋರಿತು. ೬೫. ಉಜ್ವಲವಾದ ಜಿನದೇಹದ ಕಾಂತಿಯೆಂಬ ಬೆಳ್ದಿಂಗಳು ಹಬ್ಬಲಾಗಿ, ಆಕಾಶವೆಂಬ ಕಮಲಸರೋವರದಲ್ಲಿ ತಾವರೆಗಳು ಅರಳಿದುವೊ ಏನೊ ಎಂಬಂತೆ

ಪರಮನ ಶಶಾಂಕಸಂಕಾ ।
ಶರುಚಿಪ್ರಚಯಂ ಪೊದಟ್ದು ನಾಲ್ದೆಸೆಯುಮನಾ ॥
ವರಿಸೆ ಸುರಸೇನೆ ಬಿಸಪಂ ।
ಜರದೊಳಗಿರ್ದಂತಿರಿರ್ದುದಂತಾಕ್ಷಣದೊಳ್ ॥ ೬೬

ಆಗಳ್

ಮುದದಿಂ ಕೆಯ್ಗಗ್ಗಳಂ ಮುನ್ನಮೆ ಜಿನಪತಿ ಮೇಗಿರ್ದನೀಗಳ್ ಮನಸ್ಸ ।
ಮ್ಮದದಿಂ ಮತ್ತಗ್ಗಳಕ್ಕಗ್ಗಳಮಿದು ವಿಸಟಂಬರ್ಕುಮಸ್ಮದ್ಗಜಂ ನಿ ॥
ಲ್ಲದೆ ಪೋಗಿಂ ಮಂದರಕ್ಕಂತದನಡರ್ದು ಬಟಿಕ್ಕಂತಿದು ನೋಡಿಮೆಂಬಂ
ದದಿನೊಪ್ಪಂಬೆತ್ತುದಿಂದ್ರಂ ಸುರತತಿ ನಡೆಗೆಂದಂದು ಕಯ್ವೀಸಿದಂದಂ ॥ ೬೭

ಶಾರದನೀರದಾಕೃತಿಯ ಮೆಯ್ ಮಧುಪಿಂಗಳಮಪ್ಪ ದಿಟ್ಟಿ ಶೇ ।
ಷೋರಗನಿರ್ವಿಶೇಷಮೆನಿಸಿರ್ದ ಕರಂ ದರಹಾಸಪುಷ್ಕರಾ ॥
ಕಾರದ ಪುಷ್ಕರಂ ಮಿಳಿರ್ವ ಪಲ್ಲವದಂದದ ಕರ್ಣಪಲ್ಲವಂ ।
ವಾರಿದಘೋಷದಂತೆಸೆವ ಬೃಂಹಿತಮೊಪ್ಪಿದುದಾ ಗಜೇಂದ್ರದಾ ॥ ೬೮

ಅದಲ್ಲದೆಯುಮಾ ಪ್ರಸ್ತಾವದೊಳ್

ಸುರರಾಜಾನೇಕಪಕ್ಕಾನನಮೊಗೆದುವು ಮೂವತ್ತೆರಟ್ವಕ್ತ್ರಮೊಂದ ।
ರ್ಕೆ ರದಂ ತಾನೆಂಟುವೋರೊಂದಱಕೊಳಲರ್ಗೊಳನೊಂದಬ್ಜವೊಂದರ್ಕೆ ಮೂವ ॥

ದೇವದೇವಿಯರ ಮುಗಿದ ಕೈಗಳು ಒಪ್ಪಿದುವು. ೬೬. ಪರಮೇಶ್ವರನ ಚಂದ್ರಸದೃಶವಾದ ಕಾಂತಿ ಅತಿಶಯವಾಗಿ ನಾಲ್ಕು ದಿಕ್ಕುಗಳನ್ನು ಆವರಿಸಲಾಗಿ ಆ ದೇವಸಮೂಹವು ತಾವರೆನಾಳಗಳ ಪಂಜರದಲ್ಲಿ ಇದ್ದಂತೆ ತೋರಿತು ಆಗ– ೬೭. "ಅಲಭ್ಯನಾದ ಜಿನೇಶ್ವರನು ಸಾಕ್ಷಾತ್ತಾಗಿ ತನ್ನನ್ನು ಏರಿ ಕುಳಿತಿರುವನೆಂಬ ಉತ್ಕಟವಾದ ಹರ್ಷದಿಂದ ಅತಿಶಯಕ್ಕೆ ಅತಿಶಯವೆಂಬಂತೆ ನನ್ನ ಆನೆ ಉನ್ಮತ್ತವಾಗಿ ಚಲಿಸುವುದು, ಆದುದರಿಂದ ನೀವು ಮುಂದೆ ಹೋಗಿ, ಮಂದರ ಪರ್ವತವನ್ನು ಏರಿನಿಂತು ಇದನ್ನು ನೋಡಿ" ಎಂದು ಹೇಳುತ್ತಿರುವನೊ ಏನೋ ಎಂಬಂತೆ ಇಂದ್ರನು ದೇವಸಮೂಹಕ್ಕೆ ಮುನ್ನಡೆಯಲು ಕೈ ಬೀಸಿದನು. ೬೮. ಶರತ್ಕಾಲದ ಮೋಡದಂತಹ ಮೈ, ಮದದಿಂದ ಪಿಂಗಳವಾದ ಕಣ್ಣು ಆದಿಶೇಷನಿಗೆ ಸಮವೆನಿಸುವ ಸೊಂಡಿಲು, ಅರ–ಅರಳಿದ ತಾವರೆಯಂತಹ ತುದಿ, ತೊನೆದಾಡುವ ಚಿಗುರೆಲೆಯಂತಹ ಕಿವಿ, ಸಮುದ್ರ ಘೋಷದಂತಹ ಧ್ವನಿ–ಇವುಗಳಿಂದ ಆ ಗಜೇಂದ್ರವೊಪ್ಪಿತು. ಅದಲ್ಲದೆ ಆ ಸಂದರ್ಭದಲ್ಲಿ–೬೯. ಇಂದ್ರನ ಆನೆಗೆ ಮೂವತ್ತೆರಡು ಮುಖಗಳು ಮೂಡಿದುವು; ಒಂದೊಂದು ಮುಖಕ್ಕೆ ಎಂಟೆಂಟು ಕೋರೆಗಳು; ಪ್ರತಿಯೊಂದು ಕೋರೆಗೂ ಒಂದು ತಾವರೆಕೊಳ; ಒಂದೊಂದು ಕೊಳಕ್ಕೂ ಮೂವ

ತ್ತೆರಡೊಂದಬ್ಜಕ್ಕೆ ಮೂವತ್ತೆರಡೆಸಳೆಸಳೊಂದೊಂದಱೊಳ್ ಬಿತ್ತರಂ ಬೆ ।
ತ್ತಿರೆ ಮೂತ್ತಿರ್ವರೇಂ ನರ್ತಿಸಿದರೊ ದಿವಿಜಸ್ತ್ರೀಯರಾನಂದದಿಂದಂ । ೬೯

ಭ್ರಮರಿಗಳೆಱಗದೆ ತರದಿಂ
ಭ್ರಮಿಯಿಪಪೊಲ್ ಕಮಳದೆಸಳ್ಗಳಂ ಮುಟ್ಟವಣಿಂ ॥
ಕ್ರಮತಳಮೆನೆ ತೊಟ್ಟಿರ್ ಎ ।
ಭ್ರಮದಿಂ ನರ್ತನದೊಳಮರಿಯರ್ ಭ್ರಮರಿಗಳಂ ॥ ೭೦

ಪದತಳಮುಂ ದಳಮುಂ ನೋ ।
ಯದೆ ಕಂದದೆ ನಲಿದು ನರ್ತಿಸುತ್ತಿರ್ಪ ಮರು ॥
ತ್ಸುದತಿಯರ್ಗಿಂದ್ರನ ಹೃತ್ಪ ॥
ದ್ಮದೊಳಾಡುವ ಭಕ್ತಿಲಕ್ಷ್ಮಿ ಲಾಸಿಕೆಯಕ್ಕುಂ ॥ ೭೧

ಅಂತು ಭಗವದ್ಭಕ್ತಿಭಾರದಿಂ ಪೆರ್ಚಿದ ತನ್ನ ಬಗೆಯನೆ ಮೊಗದೊಳಭಿನಯಿಸುವಂತು ವಿಕ್ರಿಯೋಪಕ್ರಮಿತವೈಕುರ್ವಣಾದಿನಗುರ್ಬುವೆತ್ತೈರಾವತಂ ಮೊದಲಾದನೇಕದೇವವಾಹನಂಗಳ್ಗೆ ಸುಖಪ್ರಚಾರಯೋಗ್ಯಮಪ್ಪಂತು ಚಂದ್ರಪುರದುಪರಿಮದೇಶದಿಂ ಮಂದರಕಂದರಂಬರಂ ಸೌಧರ್ಮೇಂದ್ರನಿಂದ್ರನೀಳಮಯವೀಧಿಯಂ ನಿರ್ಮಿಸಿದಾಗಳ್

ಪಟಹದ ರುತಿ ಮೊಟಗನಲ ।
ರ್ಮಟಕಿಯಾಲಿಯ ಸರಿಯನಿಟೆಸೆ ಹರಿನೀಳತಳಂ ॥
ಕೆಟಗಣ ಮನುಜರ ದಿಟ್ಟಿಗೆ ।
ಗಟಿಯಿಸಿದುದು ನೀಳಜಳದಮಾಳಾಭ್ರಮಮಂ ॥ ೭೨

ತ್ತೆರಡು ತಾವರೆಗಳು; ಒಂದೊಂದು ತಾವರೆಗೆ ಮೂವತ್ತೆರಡು ಎಸಳು; ಒಂದೊಂದು ಎಸಳಿನಲ್ಲಿ ಮೂವತ್ತೆರಡು ಜನ ದೇವನರ್ತಕಿಯರು ವಿಸ್ತಾರವಾಗಿ ಆನಂದದಿಂದ ನರ್ತಿಸಿದರು. ೭೦. ಹೂವಿಗೆ ಎರಗದೆ ಅದರ ಸುತ್ತಲೂ ತಿರುಗುತ್ತಿರುವ ಹೆಣ್ದುಂಬಿಗಳಂತೆ ಆ ದೇವನರ್ತಕಿಯರು ಕಮಲದೆಸಳನ್ನು ಕಾಲಿಂದ ಮುಟ್ಟದೆಯೆ ಭ್ರಮರೀನರ್ತನವನ್ನಾಡುತ್ತಿದ್ದರು. ೭೧. ತಾವರೆಯೆಸಳು ಕಂದದಂತೆ, ಕುಣಿಯುವ ಕಾಲು ನೋಯದಂತೆ ನಯವಾಗಿ ನರ್ತಿಸುತ್ತಿರುವ ದೇವಾಂಗನೆಯರಿಗೆ ಇಂದ್ರನ ಹೃದಯ ಕಮಲದಲ್ಲಾಡುವ ಭಕ್ತಿಲಕ್ಷ್ಮಿಯೆ ನರ್ತನಗುರುವಾಗಿರಬೇಕು. ವ॥ ಹಾಗೆ ಭಗವಂತನ ಮೇಲಿನ ತನ್ನ ಭಕ್ತಿಯ ಅತಿಶಯವನ್ನೆ ತನ್ನ ಮುಖದಲ್ಲಿ ಅಭಿನಯಿಸಿ ತೋರುವಂತೆ ವಿಕ್ರಿಯಾ ವೈಭವದಿಂದ ವಿಜೃಂಭಿಸುವ ಐರಾವತವೆ ಮೊದಲಾದ ದೇವವಾಹನಗಳಿಗೆ ಸುಲಭವಾಗಿ ಸಾಗಿಹೋಗಲು ಅನುಕೂಲವಾಗುವಂತೆ ಚಂದ್ರಪುರದ ಮೇಲಿನ ಆಕಾಶಭಾಗದಿಂದ ಮಂದರಪರ್ವತದ ಕಂದರದವರೆಗೆ ಸೌಧರ್ಮೇಂದ್ರನು ಇಂದ್ರನೀಲದ ಮಾರ್ಗವನ್ನು ನಿರ್ಮಿಸಿದನು. ಆಗ–೭೨. ಪಟಹಗಳ ಧ್ವನಿ ಮೋಡದ ಗುಡುಗನ್ನೂ, ಹೂಗಳ ಮಳೆ ಆಲಿಕಲ್ಲ ಮಳೆಯನ್ನೂ ಮೀರಲಾಗಿ ಕೆಳಗೆ ನಿಂತು ನೋಡುವ ಮನುಷ್ಯರ ಕಣ್ಣುಗಳಿಗೆ

ಅಂತು ನಡೆವೆಡೆಯೊಳ್ ಜಿನಶಿಶುವ ಶೈಶವಾತಿದುರ್ಲಭಮಪ್ಪ ಬಹಿರಂಗಾಂತರಂಗಸೌಷ್ಠವಮಂ ನೋಡಿ,

ಸ್ತನಪಾನಕಾಂಕ್ಷೆ ಗತತೃ ।
ಷ್ಣನೊಳಂಬಾಸ್ಮೃತಿ ವಿಮುಕ್ತಮೋಹನೊಳೆಂತುಂ ॥
ಜನಿಯಿಸುಗುಮೆ ತಾನೆಂದಭ ।
ವನ ಸಾಮರ್ಥ್ಯಮನಮರ್ತ್ಯರೊಳ್ ಹರಿ ನುಡಿದಂ ॥ ೭೩

ಅಂದು ಜಿನೇಂದುವ ಸನ್ನಿಧಿ ।
ಯಿಂದೋಸರಿಪಿಂದ್ರಹೃದಯಮೋಹತಿಮಿರಮೆಂ ॥
ಬಂದದಿನೊಗೆದತ್ತಿಂದ್ರ ।
ಚ್ಛಂದದಿನೆಸೆವಿಂದ್ರನೀಳಮಣಿರುಗ್ಜಾಳಂ ॥ ೭೪

ಜಡಧಿವೊಲಿರೆ ಸುರಸೈನ್ಯಂ ।
ಪಡಗುವೊಲಿರೆ ದಿವಿಜವಾರಣಂ ಜಿನಶಿಶು ಕೈ ॥
ಪಿಡಿವೊಲಿರೆ ಪುಣ್ಯಪಣ್ಯದ ।
ಪಡಗಿನ ಸಾಂಯಾತ್ರಿಕಂಬೊಲಿರ್ದಂ ಶಕ್ರಂ ॥ ೭೫

ಗಣನಾತೀತಮಮರ್ತ್ಯಕೋಟಿ ಬಲದೊಳ್ ಜ್ಯೋತಿಷ್ಕದೇವಾಳಿ ಪಿಂ ।
ತಣ ಮೆಯ್ಯೊಳ್ ಫಣಭೃತ್ಪದಾತಿಯೆಡದೊಳ್ ತದ್ವ್ಯಂತರಶ್ರೇಣಿ ಮುಂ ॥

ನೀಲಾಕಾಶವು ಮಳೆಗಾಲದ ಕಾರ್ಮೋಡಗಳಿಂದ ಮುಸುಕಿದೆಯೊ ಏನೊ ಎಂಬ ಭ್ರಮೆಯನ್ನು ಮೂಡಿಸಿತು ವ॥ ಹಾಗೆ ನಡೆಯುತ್ತಿರಲಾಗಿ ಶೈಶವದಲ್ಲಿ ಅತ್ಯಂತ ದುರ್ಲಭವಾದ ಅಂತರಂಗ-ಬಹಿರಂಗ ಸೌಷ್ಠವವನ್ನು ಪಡೆದ ಜಿನಶಿಶುವನ್ನು ನೋಡಿ-೭೩. "ತೃಷ್ಣೆಯನ್ನೆ ತೊಲಗಿದವನಿಗೆ ಮೊಲೆಹಾಲಿನ ಬಯಕೆಯುಂಟೆ? ಮೋಹಾತೀತನಾದ ಈ ಜಿನಶಿಶುವಿಗೆ ತಾಯಿಯ ಹಂಬಲುಂಟಾಗಲು ಸಾಧ್ಯವೆ?" ಎಂದು ಇಂದ್ರನು ದೇವತೆಗಳಿಗೆ ಭಗವಂತನ ಸಾಮರ್ಥ್ಯವನ್ನು ಹೊಗಳಿದನು. ೭೪. ಜಿನನೆಂಬ ಚಂದ್ರನ ಸನ್ನಿಧಿಯಿಂದಾಗಿ ಇಂದ್ರನ ಹೃದಯದಿಂದ ಹೊರಟು ಹೋಗುತ್ತಿರುವ ಕತ್ತಲೆಯೊ ಏನೊ ಎಂಬಂತೆ, ಆತನ ಇಂದ್ರಚ್ಛಂದ (ಸಾವಿರದೆಂಟು ಎಳೆಗಳ ಹಾರ) ದಲ್ಲಿ ಶೋಭಿಸುವ ಇಂದ್ರನೀಲರತ್ನದ ಕಿರಣಮಾಲೆ ಹೊಮ್ಮಿತು. ೭೫. ದೇವಸಮೂಹ ಸಮುದ್ರದಂತೆ, ಐರಾವತವು ಹಡಗಿನಂತೆ, ಜಿನಶಿಶು ಕೈಪಿಡಿಯಂತೆ, ಇರಲಾಗಿ ಪುಣ್ಯದ ಸರಕನ್ನು ಹೇರಿದ ಹಡಗಿನ ನಾವಿಕನಂತೆ ಇಂದ್ರನು ತೋರಿದನು. ೭೬. ಬಲಭಾಗದಲ್ಲಿ ಅಸಂಖ್ಯವಾದ ದೇವತೆಗಳ ಸಮೂಹ, ಹಿಂಭಾಗದಲ್ಲಿ ಜ್ಯೋತಿಷ್ಕ ದೇವತೆಗಳ ಸಮುದಾಯ, ಎಡಭಾಗದಲ್ಲಿ ನಾಗಾಮರರ ದಟ್ಟಣೆ, ಮುಂಭಾಗದಲ್ಲಿ ವ್ಯಂತರದೇವತೆಗಳ ಸಾಲು ಬರುತ್ತಿರ

ತಣ ಮೆಯ್ಯಳ್ ಬರೆ ಬರ್ಪವರ್ ಪೊಗಟಿ ಗಂಧರ್ವಾಮರರ್ ಪಾಡೆ ಪೆ।
ಕ್ಕಣಮಂ ದೇವಿಯರಾಡೆ ನಾಡೆ ಗಮನಂ ಕಣ್ಗೇಂ ಬೆಡಂಗಾದುದೋ ॥ ೭೬

ನಡೆದೊಡೆ ಭರದಿಂ ಧರೆ ಪೊಡೆ।
ಗೆಡೆದಪುದೆಂದಜೆದು ವಿಬುಧಪತಿಯಾಗಸದೊಳ್ ॥
ನಡೆಯಿಸಿದಪನೆನೆ ದೇವರ।
ಪಡೆ ಪಡೆದುದು ನರರ ಕಣ್ಗೆ ಕೌತುಕದೊದವಂ ॥ ೭೭

ಪಿರಿದುಂ ಮಾಡಿತ್ತಮರ್ತ್ಯಪ್ರಕರದ ನಯನಕ್ಕಂ ಮನಕ್ಕಂ ಸುರಸ್ತ್ರೀ।
ಯರಪಾಂಗಾಕ್ಷಿಪ್ರಭಾಸಂಚಯದಿನುದಿತದೇಹಾಂಶುಸಂದೋಹದಿಂ ಮೇ ॥
ದುರಧಮ್ಮಿಲ್ಲದ್ಯುತಿಸ್ತೋಮದಿನಧರಮಯೂಖಾಳಿಯಿಂದೆತ್ತಲುಂ ಪಾಂ।
ಡುರಿತಂ ಪೈಶಂಗಿತಂ ಕರ್ಬುರಿತಮರುಣಿತಂ ವ್ಯೋಮರಂಗಂ ಬೆಡಂಗಂ॥ ೭೮

ಚರದನಿಮಿಷೋತ್ಕರಂ ಪು।
ಷ್ಕರಪೂರ್ಣಂ ತೀರ್ಥವಿಭುವಿಳಾಸೋಪೇತಂ ॥
ಹರಿಹರ್ಷಾಸ್ಪದಮಂತಾ।
ಸುರವಾಹಿನಿ ಪೋಲ್ತುದೆಯ್ದೆ ಸುರವಾಹಿನಿಯಂ ॥ ೭೯

ಲಾಗಿ, ಹಾಡುತ್ತಿರುವ ಗಂಧರ್ವರಿಂದಲೂ, ಕುಣಿಯುತ್ತಿರುವ ದೇವಿಯರಿಂದಲೂ ಕೂಡಿಕೊಂಡು ಚಲಿಸುತ್ತಿರುವ ಆ ಸಮುದಾಯ ಕಣ್ಣಿಗೆ ಎಂತಹ ಬೆಡಗನ್ನು ಬೀರಿತು! ೭೭. ಈ ಅಪಾರವಾದ ಸಮೂಹವೆಲ್ಲ ಭರದಿಂದ ನಡೆದರೆ ಭೂಮಿ ಬಿದ್ದುಹೋದೀತೆಂಬ ಶಂಕೆಯಿಂದ ದೇವೇಂದ್ರನು ಅದನ್ನು ಆಕಾಶಮಾರ್ಗವಾಗಿ ನಡೆಸಿಕೊಂಡು ಹೋಗುತ್ತಿರುವನೊ ಏನೊ ಎಂದು ಮನುಷ್ಯರು ಅದನ್ನು ನೋಡಿ ಕೌತುಕಪಟ್ಟರು. ೭೮. ದೇವಸುಂದರಿಯರ ಕಡೆಗಣ್ಣುಗಳ ಪ್ರಭಾತಿಶಯದಿಂದಲೂ, ಅತಿಶಯವಾದ ದೇಹಕಾಂತಿಯಿಂದಲೂ, ಸುಂದರವಾದ ಮುಡಿಯ ಹೊಳಪಿನಿಂದಲೂ, ತುಟಿಗಳ ಪ್ರಭಾವಳಿಯಿಂದಲೂ ಆಕಾಶಮಂಡಲವು ಎತ್ತೆತ್ತಲೂ ಬಿಳಿ, ನಸುಗೆಂಪು, ಕಪ್ಪು ಹಾಗು ಕೆಂಪು ಬಣ್ಣಗಳಿಂದ ಬಳಿದಂತೆ ಬೆಡಗಾಯಿತು. ೭೯. "ಚರದನಿಮಿಷೋತ್ಕರವೂ" (೧. ನಡೆಯುತ್ತಿರುವ ದೇವತೆಗಳ ಸಮೂಹವುಳ್ಳುದು. ೨. ಓಡಾಡುವ ಮೀನುಗಳನ್ನು ಒಳಗೊಂಡುದು), "ಪುಷ್ಕರಪೂರ್ಣ"ವೂ (೧. ಆಕಾಶವನ್ನು ತುಂಬಿದುದು. ೨. ತಾವರೆಗಳಿಂದ ತುಂಬಿದುದು), "ತೀರ್ಥವಿಭುವಿಳಾಸೋಪೇತ"ವೂ (ತೀರ್ಥಂಕರನ ಶೋಭೆಯಿಂದ ಕೂಡಿದುದು. ೨. ಶ್ರೇಷ್ಠವಾದ ತೀರ್ಥಗಳಿಂದ ಶೋಭಿಸುವುದು), "ಹರಿಹರ್ಷಾಸ್ಪದ"ವೂ (೧. ಇಂದ್ರನಿಗೆ ಸಂತೋಷವನ್ನುಂಟುಮಾಡುವುದು. ೨. ಕಪ್ಪೆ (ಮೊದಲಾದ ಜಲಚರ) ಗಳಿಗೆ ಸಂತೋಷಕರವಾದುದು) ಆದ ಆ ದೇವಸಮೂಹವು ದೇವಗಂಗಾನದಿಗೆ

ಅಂತತಿಕ್ರಾಂತಜ್ಯೋತಿರ್ಲೋಕಮೆನಿಸಿ ನಡೆವಾಗಳ್

ಕನಕಾದ್ರೀಂದ್ರನೃಪಾಲಯಂ ಕುಳನಗವ್ರಾತಾಶ್ರಯಶ್ರೇಣಿ ವಿ ।
ಶ್ವನದೀಸಂಕುಳವೀಧಿ ವಜ್ರಮಯವೇದೀತುಂಗಶಾಳಂ ಮಹಾಂ ॥
ಬುನಿಧಿಪ್ರಾವೃತಖಾತಿಕಾಪರಿಧಿ ಜಂಬೂದ್ವೀಪಮಂದೊಂದೆ ಪ ।
ತ್ತನದಂತಿರ್ದುದು ಕಣ್ಗೆ ನಾಕಜನಿಕಾಯಕ್ಕಾ ನಭೋಯಾನದೊಳ್ ॥ ೮೦

ಪರಮಜಿನಪತಿಯುಮಂತಾ ।
ಸುರಪತಿಯುಂ ಮಂದರಂಬರಂ ನಡೆವೆಡೆಯೊಳ್ ॥
ದೊರೆವೆತ್ತುದು ಸತ್ಪಥಮುಂ ।
ಸುರಸರಣಿಯುಮೆಂಬ ನಾಮಮಂದಂಬರದೊಳ್ ॥ ೮೧

ಸೊಗಯಿಪ ಪಾಳಿಕೇತನಕುಳಂಗಳ ರತ್ನವಿಮಾನಯಾನಪ ।
ಙ್ಕ್ತಿಗಳ ಸಿತಾತಪತ್ರನಿಕರಂಗಳ ವಾಹನದೇವವಿಕ್ರಿಯಾ ॥
ಪ್ರಗುಣಿತಚಿತ್ರವಾಹನಚಯಂಗಳ ತಿಂತಿಣಿಯಿಂ ದಿಗಂತಮುಂ ।
ಗಗನಮುಮಾದುದಿಟ್ಟಡೆಯಿದೆಂತುಟೊ ಪೆರ್ಮೆ ಚತುರ್ನಿಕಾಯದಾ ॥ ೮೨

ಖಗಜಾತೀಯಚತುರ್ನಿಕಾಯಮಿದು ಬೇಱಿಕೊಂದಕ್ಕುಮೆಂಬೊಂದು ಸಂ।
ದೇಗಮಂ ತಂದುದು ದೇವವಾರವನಿತಾಸಂದೋಹಧಮ್ಮಿಲ್ಲಬ ॥

ಸದೃಶವಾಯಿತು. ವ॥ ಹೀಗೆ ಜ್ಯೋತಿರ್ಲೋಕವನ್ನು ಮೀರಿದಂತೆ ನಡೆಯುವಾಗ– ೮೦. ಮೇರು ಪರ್ವತವು ಅರಮನೆ; ಕುಲಪರ್ವತಗಳು ಸುತ್ತಲಿನ ಮನೆಗಳು; ಸಮಸ್ತ ನದಿಗಳೆ ಬೀದಿಗಳು; ವಜ್ರಮಯವಾದ ವೇದಿಯೆ ಉನ್ನತವಾದ ಶಾಲೆ, ಸುತ್ತುಗಟ್ಟಿದ ಮಹಾಸಾಗರವೆ ಅಗಳ್ತೆ– ಹೀಗೆ ಜಂಬೂದ್ವೀಪವು ಒಂದು ಪಟ್ಟಣವೊ ಏನೊ ಎಂಬಂತೆ (ಮೇಲಿನಿಂದ ನೋಡುವ) ದೇವತೆಗಳಿಗೆ ಕಂಗೊಳಿಸಿತು. ೮೧. ಪೂಜ್ಯನಾದ ಜಿನೇಶನೂ, ದೇವೇಂದ್ರನೂ ಮಂದರಪರ್ವತದವರೆಗೆ ಆಕಾಶಮಾರ್ಗವಾಗಿ ಹೋಗುತ್ತಿದ್ದುದರಿಂದ ಆಕಾಶಕ್ಕೆ "ಸತ್ಪಥ" (೧. ನಕ್ಷತ್ರಮಾರ್ಗ. ೨. ಧರ್ಮೋಚಿತವಾದ ಮಾರ್ಗ) ಹಾಗು "ಸುರಸರಣಿ" (ದೇವತೆಗಳು ನಡೆದಾಡುವ ಮಾರ್ಗ) ಎಂಬ ಹೆಸರುಗಳು ಅನ್ವರ್ಥಕವಾದುವು. ೮೨. ಶೋಭಿಸುವ ಪಾಳಿಧ್ವಜದ ಸಾಲುಗಳಿಂದ, ರತ್ನಮಯ ವಿಮಾನಗಳ ಮಾಲೆಗಳಿಂದ, ಬೆಳ್ಗೊಡೆಗಳ ಸಮೂಹದಿಂದ, ವಾಹನದೇವರು ವಿಕ್ರಿಯಾಶಕ್ತಿಯಿಂದ ನಿರ್ಮಿಸಿದ ವಿಚಿತ್ರವಾಹನ ಸಮುದಾಯದಿಂದ ಸಂದಣಿಸಿ, ದಿಗಂತಗಳೂ, ಆಕಾಶವೂ ಇದನ್ನು ಹಿಡಿಸಲಾರ ವೆಂಬಂತೆ ಇಡುಕುರಾಯಿತು. ಅಬ್ಬ ! ಆ ಚತುರ್ನಿಕಾಯದ ಆಧಿಕ್ಯವೆಂತಹದು ! ೮೩. ದೇವಲೋಕದ ವಾರಸ್ತ್ರೀಯರ ಸುಂದರವಾದ ಮುಡಿಗಳೆಂಬ ನವಿಲು ಗಳಿಂದ, ಮುಂಗುರುಳೆಂಬ ದುಂಬಿಗಳಿಂದ, ಚಂಚಲನೇತ್ರವೆಂಬ ಚಕೋರಗಳಿಂದ,

ರ್ಹಿಗಣಂ ಕುಂತಳಷಟ್ಪದಾವಳಿ ಚಳಚ್ಚಕ್ಷುಶ್ಚಕೋರಾಳಿ ಚಾ ।
ರುಗುರೂರೋರುಹ ಚಕ್ರವಾಕಚಯಮತ್ತೆತ್ತಂ ನಭಶ್ಚಕ್ರದೊಳ್ ॥ ೮೩

ಉದಯಿಸಿತೊ ಭಕ್ತಿ ತಮಗೆನೆ ।
ಮೃದುಪವನಾಪಾತದಿಂದೆ ಗಾಂಧಾರಗ್ರಾ ॥
ಮದ ಮೂರ್ಛನೆಗಳನುಚ್ಚರಿ ।
ಸಿದುವಮರರ ಹೆಗಲ ಬೀಣೆಗಳ್ ಮಿಡಿಯದೆಯುಂ ॥ ೮೪

ಸಕಳಾಮರಗಾಯಕವಾ ।
ದಕನರ್ತಕರೞ್ತೆಯಿಂ ಪ್ರವರ್ತಿಸಿ ಸಂಗೀ
ತಕಮಂ ತೂರ್ಯತ್ರಿತಯಾ ।
ತ್ಮಕಮಿನಿಸಿದುದಾಗಳೆಯ್ದೆ ಗಗನಾಭೋಗಂ ॥ ೮೫

ಅಗಳ್ವಿಚಿತ್ರವೇತ್ರದಂಡಮಂಡಿತಪಾಣಿಗಳ್ ನಿಳಿಂಪಪ್ರತೀಹಾರರಭವನನುಪಮಾಕಾರಸೌಂದರ್ಯಮಂ ನೋಡಲೆಂದು ಪತ್ತೆಸಾರ್ಚುವಚ್ಚರಸಿಯರ ವಿಮಾನಂಗಳನಮರ್ಚದಂತು ಬಿರ್ಚಿ ನಡೆಯಿಸಿಯುಂ, ಇರ್ಕೆಲದ ಚಾಮರೇಂದ್ರರಂ ಚಮರರುಹಂಗಳಂ ಸೂಟಱಿದಿಕ್ಕುವಂತು ನಿಯಮಿಸಿಯುಂ, ಅಲ್ಲಲ್ಲಿಗೆ ತುಱುಂಬಿದ ದಿವಿಜವಂದಿಗಳ ಪೊಗಳ್ತೆ ಕಳಕಳಮನಡಂಗೆವೊಯ್ದು ಸಂಗೀತಕ್ಕವಸರಮನನುಸರಿಸಿಯುಂ, ಐರಾವತದ ಕಾಲಾಟಕ್ಕೆಡೆಯಪ್ಪಂತು ಕೊಲ್ಲಣಿಗೆಯೊಳ್ಬರ್ಪನೇಕವ್ಯಂತರಾಮರವಾಹನಂಗಳಂ ತೆರಳೆ ತೂಳ್ದಿ ತೆಱಪಂ ಮಾಡಿಯುಂ, ಕೊಡೆಯ ತಟಿಸಿಯ ಸೀಗುರಿಯ ಚೌಕಸತ್ತಿಗೆಯ ಮುತ್ತಿನ ಝಲ್ಲರಿಯ

ಸುಂದರವಾದ ತೋರವೊಲೆಗಳೆಂಬ ಚಕ್ರವಾಕಗಳಿಂದ ಎತ್ತೆತ್ತಲೂ ಇಟ್ಟಣಿಸಿದ ಆಕಾಶಮಂಡಲವನ್ನು ನೋಡಿದಾಗ ಇದು ಪಕ್ಷಿಜಾತಿಗೆ ಸೇರಿದ ಇನ್ನೊಂದು ಚತುರ್ನಿಕಾಯುವೊ ಏನೊ ಎಂಬ ಸಂದೇಹವುಂಟಾಯಿತು. ೮೪. ತಮ್ಮಲ್ಲಿ ಭಕ್ತಿ ಉದಯಿಸಿತೊ ಏನೊ ಎಂಬಂತೆ ದೇವತೆಗಳ ಹೆಗಲ ಮೇಲಿನ ವೀಣೆಗಳು, ಯಾರೂ ನುಡಿಸದೆ ಇದ್ದರೂ, ಮೆಲುಗಾಳಿಯ ಸ್ಪರ್ಶದಿಂದ ಗಾಂಧಾರಗ್ರಾಮದ ಸ್ವರಾಲಾಪಮಾಡಿದುವು. ೮೫. ದೇವಲೋಕದ ಗಾಯಕರೂ, ವಾದಕರೂ, ನರ್ತಕರೂ ಸಂತೋಷದಿಂದ ಸಂಗೀತ ಮಾಡಲಾಗಿ ಆಕಾಶವು ಗಾಯನ–ವಾದನ ನರ್ತನ ಈ ಮೂರಕ್ಕೂ ನೆಲೆಯೆನಿಸಿತು. ವ॥ ಆಗ ಕೈಗಳಲ್ಲಿ ವಿಚಿತ್ರವಾದ ಬೆತ್ತದ ದಡಿಗಳನ್ನು ಹಿಡಿದುಕೊಂಡಿದ್ದ ದೇವ ಪ್ರತೀಹಾರರು ವ್ಯವಸ್ಥೆಯ ಏರ್ಪಾಟಿನಲ್ಲಿ ತೊಡಗಿದರು; ಜಿನೇಶನ ಅಪ್ರತಿಮವಾದ ರೂಪವನ್ನು ನೋಡಲೆಂದು ಹತ್ತಿರಕ್ಕೆ ಬರುತ್ತಿರುವ ಅಪ್ಸರೆಯರ ವಿಮಾನಗಳನ್ನು ಸಂದಣಿಸದಂತೆ ಬಿಡಿಬಿಡಿಸಿ ನಡೆಯಿಸಿದರು; ಇಕ್ಕೆಲದ ಚಾಮರೇಂದ್ರರಿಗೆ ಸರದಿಯ ಮೇರೆಗೆ ತಿಳಿದುಕೊಂಡು ಬೀಸುವಂತೆ ನಿಯಮಿಸಿದರು; ಅಲ್ಲಲ್ಲಿಗೆ ಗುಂಪಾಗಿ ನಿಂತು ಹೊಗಳುವ ದೇವಸ್ತುತಿಪಾಠಕರ ಕಳಕಳವನ್ನು ನಿಲ್ಲಿಸಿ, ಸಂಗೀತಕ್ಕೆ ಅವಕಾಶ ಮಾಡಿಕೊಟ್ಟರು; ಹಿಂಡುಗಟ್ಟಿ ಬರುತ್ತಿದ್ದ ಅನೇಕ ವ್ಯಂತರಾಮರ ವಾಹನಗಳನ್ನು ಪಕ್ಕಕ್ಕೆ ಸರಿಸಿ ಐರಾವತವು ಹಾಯ್ದು

ಮೊತ್ತಮಂ ತುಱುಗಲಾಗಿ ಪಿಡಿಯಿಸಿಯುಂ, ಮುಂದೆ ಪರಿವೊಜ್ಜರಂಗಳನೋಳಿಗೊಳಿಸಿಯುಂ, ಪಾಳಿಕೇತನಂಗಳಂ ಪಂತಿಗೊಳಿಸಿಯುಂ, ಭೇರೀರಥಂಗಳಂ ಸಾರಿಗೊಳಿಸಿಯುಂ, ಅಡಿಗಡಿಗೆ ನೆಲನನುಗ್ಘ ಡಿಸಿಯುಂ, ಇಂತತಿಚಿತ್ರಮಾಗೆ ಯಾತ್ರೆಯಂ ನಡೆಯಿಪಲ್ಲಿ

ಬಂಬಲ್ವರಿಯುತ್ತುಂ ನೆಗೆ ।
ದಂಬುದಮಂ ತೇನಮಿಱೆಯುತುಂ ಘೂತ್ಕೃತಿಯಿಂ ॥
ದಂಬರಮಂ ತೀವುತ್ತುಮ ।
ದೇಂ ಬಿನದಮನಮರಪತಿಗೆ ತೋಱಿದುದೊ ಗಜಂ ॥ ೮೬

ಐರಾವತಕ್ಕೆ ಕಂಬಂ ।
ಮೇರುವೆ ಪೆಱವಾನೆಗೊಳ್ಳವೆಂಬಂದದೆ ನೀ ॥
ರ್ದಾರಿಯೊಳೆ ನೂಂಕಿ ಪೋದಂ ।
ಭೋರೆನೆ ತದ್ಗಿರಿತಟಕ್ಕೆ ಸೌಧರ್ಮೇಂದ್ರಂ ॥ ೮೭

ಆಗಳ್

ಗಗನಮನೆಯ್ದೆ ತಿಂಬಿದ ಪತಾಕೆಗಳಿಟ್ಟೆಡೆಯೊಳ್ ತೊಡಂಕಿ ನಿಂ ।
ದೊಗೆವ ಜಿನಾಂಗಸೌರಭದೊಳಾದಮೆ ಸಂಗತಿವೆತ್ತು ತಳ್ತ ಸ ॥
ತ್ತಿಗೆಗಳ ತಣ್ಣೆಲಲ್ಲಿಡಿದು ಕೂಡೆ ತೊೞಲ್ದು ಚತುರ್ನಿಕಾಯದೊಳ್ ।
ತ್ರಿಗುಣಿಸಿದತ್ತು ತನ್ನಯ ಗುಣತ್ರಯಮಂ ಕನಕಾಚಳಾನಿಳಂ ॥ ೮೮

ಹೋಗುವುದಕ್ಕೆ ಹಾದಿ ಮಾಡಿದರು; ಕೊಡೆ, ತಳೆ, ಸೀಗುರಿ, ಚೌಕಸತ್ತಿಗೆ, ಮುತ್ತಿನ ಝುಲ್ಲರಿ ಮೊದಲಾದ ಛತ್ರಸಮೂಹವನ್ನು ದಟ್ಟಣಿಸಿ ಹಿಡಿಸಿದರು; ಮುಂದೆ ಸಾಗುವ 'ಒಜ್ಜರ'ವೆಂಬ ರಾಜಚಿಹ್ನೆಗಳನ್ನು ಸಾಲುಗೊಳಿಸಿದರು; ಪಾಳಿಧ್ವಜಗಳನ್ನು ಸರಿಗೊಳಿಸಿದರು; ಭೇರೀ ರಥಗಳನ್ನು ಓರಣಗೊಳಿಸಿದರು; ಅಡಿಗಡಿಗೆ "ಇತ್ತ ಬನ್ನಿ ಇತ್ತ ಬನ್ನಿ" ಎಂದು ಉಗ್ಗಡಿಸಿದರು—ಹೀಗೆ ಆಶ್ಚರ್ಯಕರವಾಗಿ ಯಾತ್ರೆಯನ್ನು ನಡೆಯಿಸುತ್ತಿರುವಾಗ—೮೬. ರಭಸದಿಂದ ಓಡುತ್ತ, ಮೇಲಕ್ಕೆ ನೆಗೆದು ಮೋಡಗಳನ್ನು ಮೇಲಿಂದ ಮೇಲೆ ತಿವಿಯುತ್ತ ಘೂತ್ಕಾರದಿಂದ ಆಕಾಶವನ್ನು ತುಂಬುತ್ತ ಐರಾವತವು ಇಂದ್ರನಿಗೆ ಅದೆಷ್ಟು ವಿನೋದವನ್ನುಂಟುಮಾಡಿತು! ೮೭. ಐರಾವತಕ್ಕೆ ಮೇರು ಪರ್ವತವೆ ಕಂಬ; ಉಳಿದವು ವ್ಯರ್ಥ ಎಂಬಂತೆ ಭರದಿಂದ ನೂಕಿ ವೇಗವಾಗಿ ಆ ಗಿರಿಪ್ರದೇಶಕ್ಕೆ ಸೌಧರ್ಮೇಂದ್ರನು ಹೋದನು. ಆಗ ೮೮. ಆಕಾಶವನ್ನು ಸಂಪೂರ್ಣ ವಾಗಿ ಆವರಿಸಿದ ಪತಾಕೆಗಳ ಇಡುಕುರಿನಲ್ಲಿ ತೊಡಕಿಕೊಂಡು ನಿಂತು, ಜಿನದೇಹದಿಂದ ಹೊಮ್ಮುತ್ತಿರುವ ಪರಿಮಳಕ್ಕೆ ಸ್ನೇಹಿತನಾಗಿ, ಇಟ್ಟಣಿಸಿದ ಸತ್ತಿಗೆಗಳ ತಂಪಾದ ನೆಳಲಲ್ಲಿ ಸಂಚರಿಸಿ, ಚತುರ್ನಿಕಾಯದ ಮಧ್ಯದಲ್ಲಿ ಸುಳಿದ ಮೇರುವಿನ ಗಾಳಿ ತನ್ನ (ಮೆಲ್ನಡೆ, ಪರಿಮಳ ಹಾಗು ತಂಪು ಎಂಬ) ಮೂರು ಗುಣಗಳನ್ನು ಮೂವಡಿಗೊಳಿಸಿತು.

ಪೂಗುಡಿಯಿಂದೆ ಕೂಡೆ ಗುಡಿಗಟ್ಟಿದವೊಲ್ ಕಳಕಂಠನಾದದಿಂ ।
ಸ್ವಾಗತಮಂ ಸ್ವಮಂತು ನುಡಿವಂತೆವೊಲಲ್ಲುಗುತಿರ್ಪ್ಪರಲ್ಗಳಿಂ ॥
ರಾಗದಿನರ್ಘ್ಯಮೀವವೊಲದೇನೆಸೆದತ್ತೊ ಜಿನೇಂದು ಬಂದನೆಂ ।
ದಾ ಗಿರಿ ನಾಟಕಂನಲಿದವೊಲ್ ಮರುದಾಕುಳಶಾಖಿಶಾಖೆಯಿಂ ॥ ೮೯

ಪರಿವೃತಲವಣಾಬ್ಧಿಸರೋ ।
ವರಮಧ್ಯಸ್ಥಿತಮೆನಿಪ್ಪ ಜಂಬೂದ್ವೀಪಾಂ ॥
ಬುರುಹಕ್ಕೆ ತಾನೆ ಕರ್ಣಿಕೆ ।
ಯಿರವಂ ತಳೆದೇಂ ಸುಮೇರು ಸಿರಿಗೆಡೆಯಾಯ್ತೋ ॥ ೯೦

ಅವಯವದಿನಾಂತುದೀ ಮೇ ।
ರುವೆ ಪೆರ್ಮೆಯನಾ ಸಹಸ್ರಯೋಜನಮೆನಿಸಿ ॥
ರ್ದವಗಾಹದಿಂದಮಾರಯೆ ।
ನವನವತಿಸಹಸ್ರಯೋಜನೋನ್ನತಿಯಿಂದಂ ॥ ೯೧

ಇದು ಸರ್ವರತ್ನಜಾಂಬೂ ।
ನದಮಯಮಿದು ಮೇಖಳಾಚತುಷ್ಟಯಯುತಮಿಂ ॥
ತಿದು ವನಚತುಷ್ಕರಾಜಿತ ।
ಮಿದಕೃತ್ರಿಮಚೈತ್ಯಗೇಹನಿವಹಪವಿತ್ರಂ ॥ ೯೨

೮೯. ಸಂತೋಷದಿಂದ ಗುಡಿಯೇರಿಸಿದಂತೆ ಇರುವ ಹೂಗುಡಿಗಳಿಂದಲೂ, ಸ್ವಾಗತವನ್ನು ನುಡಿಯುವಂತಿರುವ ಕೋಗಿಲೆಗಳ ಮಧುರ ನಿನಾದದಿಂದಲೂ, ಅರ್ಘ್ಯ ಕೊಡುವಂತೆ ಸುರಿಯುತ್ತಿರುವ ಹೂಗಳಿಂದಲೂ–ಜಿನೇಂದ್ರನು ತನ್ನಲ್ಲಿಗೆ ಬಂದನೆಂಬ ಸಂತೋಷದಿಂದ ಹಿಗ್ಗಿ ಕುಣಿದಾಡುತ್ತಿರುವುದೊ ಏನೊ ಎಂಬಂತೆ ಗಾಳಿಯಿಂದ ಅಲ್ಲಾಡುವ ಮರಗೊಂಬೆಗಳಿಂದಲೂ ಆ ಪರ್ವತವು ಶೋಭಿಸಿತು. ೯೦. ಸುತ್ತುಗಟ್ಟಿದ ಲವಣಸಮುದ್ರದ ಮಧ್ಯೆ ಇರುವ ಜಂಬೂದ್ವೀಪವು ಸರೋವರದ ನಡುವಿನ ತಾವರೆಯಂತೆ ಇರಲಾಗಿ, ಆ ತಾವರೆಗೆ ಕರ್ಣಿಕೆಯೆಂಬಂತೆ ಸುಮೇರು ಪರ್ವತವು ಬೆಡಗಾದ ನೆಲೆಯಾಯಿತು. ೯೧. ಸಾವಿರ ಯೋಜನದ ತಳವನ್ನೂ ತೊಂಬತ್ತೊಂಬತ್ತು ಸಾವಿರ ಯೋಜನದ ಎತ್ತರವನ್ನೂ ಹೊಂದಿದ ಮಹಿಮೆ ಈ ಮೇರುಪರ್ವತಕ್ಕೆ ಸಹಜವೆ. ೯೨. ಇದು ಸರ್ವರತ್ನಗಳಿಂದಲೂ ಚಿನ್ನದಿಂದಲೂ ತುಂಬಿದುದು; ನಾಲ್ಕು ಮೇಖಲೆಗಳಿಂದ ಕೂಡಿದುದು; ನಾಲ್ಕು ವನಗಳುಳ್ಳುದು; ಅಕೃತ್ರಿಮವಾದ ಚೈತ್ಯಗೃಹಗಳಿಂದ ಪಾವನ

ಈ ನಗದ ಸಾನು ನಾಲ್ಕುಂ ।
ತಾನೆಸೆಗುಂ ಭದ್ರಶಾಳದಿಂ ನಂದನದಿಂ ॥
ಪೀನಂ ಸೌಮನಸದಿನು ।
ದ್ದಾನಿಯ ಪಾಂಡುಕದಿನನಿಶಮನುಗತಿಯಿಂದಂ ॥ ೯೩

ಎನೆ ಪೆಸರ್ವಡೆದೀ ನಾಲ್ಕುಂ ।
ಬನಂಗಳೊಂದೊಂದಱಲ್ಲಿ ನಾಲ್ಕೆಸೆದಿರ್ಕುಂ ॥
ವಿನುತತರಂಗಳಕೃತ್ರಿಮ ।
ಜಿನಭವನಂಗಳ್ ಸಮಸ್ತರತ್ನಮಯಂಗಳ್ ॥ ೯೪

ಉದಯಿಸವಿಲ್ಲಿಯಲ್ಲದೆ ನಮೇರುಮಹಾಮಹಿಜಂಗಳಿಲ್ಲಿಯ ।
ಲ್ಲದೆ ಬಲವಾರರಿಂದ್ವಿ ನರಕೃತ್ರಿಮಚೈತ್ಯಗೃಹಂಗಳಿಲ್ಲಿಯ ॥
ಲ್ಲದೆ ಸಲೆ ಚೆಲ್ವವೆತ್ತಿರವು ತೀರ್ಥಕರಾಭಿಷವಕ್ಕಮಿಲ್ಲಿಯ ।
ಲ್ಲದೆ ಪರಿಶೋಭೆ ಪೆರ್ಚದೆನೆ ಮೆಯ್ಮೆಗೆ ಬಾಟಿಸ್ಮೊದಲಾಯ್ತು ಮಂದರಂ॥ ೯೫

ಸುರನಿಕರವಿವಿಧವಿಹಗೋ ।
ತ್ಕರಪರಿವೃತಮಪ್ಪ ನಾಕಸಾರ್ವತುರ್ಕಭೂ ॥
ಮಿರುಹಕ್ಕೆ ತೋರ್ಪುದೀ ಗಿರಿ ।
ವರಮವಿರತಮುರುತರಪ್ರಕಾಂಡಾಕೃತಿಯಿಂ ॥ ೯೬

ಗಡಣದಿನಿಲ್ಲಿಯ ಸಗ್ಗದ ।
ಪಡೆಮಾತಂ ಮಱೆದು ನಾಲ್ಕುಮೇಖಳೆಗಳೊಳಂ ॥
ಬಿಡದೆ ಸುರಸಮಿತಿ ನೆಲಸಿರೆ ।
ಪಡೆದುದು ಸುರಗಿರಿಯೆನಿಪ್ಪ ಪೆಸರನಗೇಂದ್ರಂ ॥ ೯೭

ವಾದುದು. ೯೩. ಭದ್ರಶಾಲ, ನಂದನ, ಸೌಮನಸ ಮತ್ತು ಪಾಂಡುಕವೆಂಬ ನಾಲ್ಕು ವನಗಳಿಂದ ಈ ಬೆಟ್ಟದ ನಾಲ್ಕು ಸಾನುಗಳೂ ಶೋಭಿಸುವುವು. ೯೪. ಪ್ರಖ್ಯಾತವಾದ ಈ ನಾಲ್ಕು ವನಗಳಿಗೆ, ಪ್ರತಿಯೊಂದರಲ್ಲಿಯೂ ಅತ್ಯಂತ ಪೂಜ್ಯವೂ, ಅಕೃತ್ರಿಮವೂ ಆದ ನಾಲ್ಕು ರತ್ನಮಯ ಜಿನಾಲಯಗಳುಂಟು. ೯೫. ನಮೇರು ಮಹಾವೃಕ್ಷಗಳು ಇಲ್ಲಿಯೆ ಅಲ್ಲದೆ ಬೇರೆಲ್ಲಿಯೂ ಹುಟ್ಟವು; ಸೂರ್ಯಚಂದ್ರರು ಇಲ್ಲಲ್ಲದೆ ಇನ್ನೆಲ್ಲೂ ಪ್ರದಕ್ಷಿಣೆ ಹಾಕರು; ಅಕೃತ್ರಿಮ ಚೈತ್ಯಗೃಹಗಳು ಇಲ್ಲಲ್ಲದೆ ಇನ್ನಾವ ಎಡೆಯಲ್ಲಿಯೂ ಶೋಭಿಸವು; ತೀರ್ಥಕರನ ಅಭಿಷೇಕಕ್ಕೆ ಈ ಸ್ಥಳವಲ್ಲದೆ ಬೇರಾವ ಸ್ಥಳದಲ್ಲಿಯೂ ಇಷ್ಟೊಂದು ಅತಿಶಯವಾದ ಶೋಭೆಯಾಗದು. ಹೀಗೆ ಮಂದರಪರ್ವತವು ಮಹಿಮೆಗೆ ನೆಲೆಯಾಯಿತು. ೯೬. ದೇವತಾ ಸಮೂಹಗಳಿಂದಲೂ, ನಾನಾ ವಿಧದ ಪಕ್ಷಿಗಳಿಂದಲೂ, ಪರಿವೃತವಾದ ಸ್ವರ್ಗೀಯ ಸಾರ್ವತುರ್ಕ ವೃಕ್ಷಕ್ಕೆ ಮಿಗಿಲಾಗಿ, ಈ ಗಿರಿ ತನ್ನ ಪ್ರಕಾಂಡವಾದ ಆಕಾರದಿಂದ ತೋರುವುದು. ೯೭. ಸ್ವರ್ಗದ ಗೊಡವೆಯನ್ನೆ ಮರೆತು ದೇವ ಸಮೂಹವು ಇದರ ನಾಲ್ಕು ಸಾನುಗಳಲ್ಲಿ ನೆಲಸುವುದರಿಂದ ದೇವಪರ್ವತವೆಂಬ ಹೆಸರನ್ನು

ಜಿನಸವನಾಮೃತಜಳಸೇ ।
ಚನದಿಂ ಬಳೆದಾ ಮಹಾಮಹೇಂದ್ರದ ನಾಲ್ಕುಂ ॥
ಬನದ ಲತಾಗೃಹಸಂತತಿ ।
ಮನಿಮಿಷರ್ಗಾದುದು ಮನೋಹರಂ ದುರಿತಹರಂ ॥ ೯೮

ಒಡವೆಳೆದು ಸುರರೊಳಿದರಿಖಿಳ್ ।
ನುಡಿವುದು ಶುಕಸಮಿತಿ ದೇವಭಾಷೆಯನೆ ತೊದ ॥
ಳ್ಗಿಡೆಗುಡದೆ ಪಾಡುವುದು ಸಲೆ ।
ಷಡಯನತತಿ ದೇವಗಾನಮನೆ ಸುಣ್ದನಿಯಿಂ ॥ ೯೯

ಮತ್ತೀವೇಟ್ಟಿಪುದೀ ಮಹಿ ।
ಭೃತ್ತಟಮಂ ಪೊರ್ದಿ ವರ್ತಿಪನಿತಜಿನಾ ದೇ ॥
ವೋತ್ತರಕುರುಗಳ್ಗಾದ ।
ತ್ತುತ್ತಮಭೋಗಾವನಿತ್ವಮೆಂಬ ಮಹತ್ವಂ ॥ ೧೦೦

ಬಂಧುರತರಜಿನಸವನಸು ।
ಗಂಧೋದಕದಿಂದೆ ನಾಂದು ತದ್ಗುಣದೊಳ್ ಸಂ ॥
ಬಂಧಿಸಿ ಪೆಸರ್ವಡೆದುವು ಸೌ ।
ಗಂಧಿಕಮೆಂದದರಿ ತಾಣಿಲೊಳ್ ಕಿಸುಗಲ್ಗಳ್ ॥ ೧೦೧

ಒಗೆದ ಮರಕ್ಕೆ ಬಳ್ಳಿಗೆ ಗುಹಾನಿಳಯಕ್ಕೆ ಪುಳಿಂದಮಾಳೆಗ ।
ದ್ರಿಗಳೆಡೆಯಪ್ಪುವಲ್ಲದೆ ನೆಗಟ್ತಿಯ ಕಲ್ಪಕುಜಕ್ಕೆ ಚೆಲ್ವುವೆ ॥

ಈ ಗಿರಿ ಪಡೆಯಿತು. ೯೮. ಜಿನಾಭಿಷೇಕದ ಅಮೃತಜಲ ಸೇಚನದಿಂದಲೆ ಬೆಳೆದ ಮಹಾಮಹೇಂದ್ರದ ಆ ನಾಲ್ಕು ವನಗಳಲ್ಲಿಯ ಬಳ್ಳಿಮಂಟಪಗಳು ದೇವತೆಗಳಿಗೆ ಮನೋಹರವೂ ಪಾಪನಾಶಕವೂ ಆದುವು. ೯೯. ದೇವತೆಗಳೊಡನೆ ಇದರಲ್ಲಿ ಬೆಳೆದುದರಿಂದ ಇಲ್ಲಿಯ ಗಿಳಿಗಳು ತೊದಲದೆ ದೇವಭಾಷೆಯನ್ನಾಡುವುವು: ದುಂಬಿಗಳು ಮಧುರ ಸ್ವರದಿಂದ ದೇವಗಾಯನವನ್ನೆ ಹಾಡುವುವು. ೧೦೦. ಈ ಗಿರಿಯ ತಟಕ್ಕೆ ಹತ್ತಿಕೊಂಡು ನಿಲ್ಲುವ ಒಂದು ಪುಣ್ಯದಿಂದಲೆ ದೇವೋತ್ತರ ಕುರು ಭೂಮಿಗಳಿಗೆ ಭೋಗಭೂಮಿಗಳೆನಿಸುವ ಮಹತ್ವವುಂಟಾಯಿತೆಂದ ಮೇಲೆ ಇದರ ಮಹಿಮೆಯನ್ನು ಎಷ್ಟೆಂದು ಹೊಗಳುವುದು! ೧೦೧. ಮನೋಹರವಾದ ಜಿನಾಭಿಷೇಕದ ಗಂಧೋದಕದಲ್ಲಿ ನೆನೆದು ಅದರ ಗುಣವನ್ನು ಪಡೆದುಕೊಂಡುದರಿಂದ ಈ ಬೆಟ್ಟದಲ್ಲಿಯ ಮಾಣಿಕಗಳು ಸೌಗಂಧಿಕವೆಂದು ಹೆಸರು ಪಡೆದುವು. ೧೦೨. ಸಾಮಾನ್ಯವಾದ ಮರಗಳಿಗೆ, ಬಳ್ಳಿಗಳಿಗೆ, ಗವಿಗಳಿಗೆ, ಶಬರರ ಹಿಂಡುಗಳಿಗೆ ಬೆಟ್ಟಗಳು ಆಶ್ರಯವಾಗುವುವು, ಆದರೆ ಶ್ರೇಷ್ಠವಾದ

ತ್ಗಗಲದ ಕಲ್ಪವಲ್ಲರಿಯಕೃತ್ರಿಮಚೈತ್ಯಗೃಹಕ್ಕೆ ದೇವಕೋ ।
ಟಿಗೆ ನೆಲೆ ಸಂದ ಮಂದರಮಹೀಧರದಂದದಿನಾಗಲಾರ್ಪುವೇ ॥ ೧೦೨

ಎಂದು ಸುರಗಿರೀಂದ್ರದ ಸಿರಿಯನಮರಸಂದೋಹಕ್ಕೆ ಪುರಂದರಂ ಪೊಗಳುತ್ತುಮದಂ ಬಲವಂದು ಚತುರ್ನಿಕಾಯಮಮಂ ಶಿಖರಿಶಿಖರಕ್ಕೆ ನಡೆವುದೆನಲೊಡಂ

ಮೇರುನಗಾಧೀಶಂ ರೂ ।
ವಾರದ ಹಾರಮನೆ ತೊಟ್ಟನೆಂಬಿನಮೆಸೆದ ॥
ತ್ತಾರ ಮನಕ್ಕಂ ಸುರಜನ।
ಧಾರಿ ನಿರಂತರವಿಸಾರಿ ಬಿಡದಡರ್ವೆಡೆಯೊಳ್ ॥ ೧೦೩

ಇರದೆ ಸುರಸತಿಯ ರಭಸ ।
ಕ್ಕರಲ್ಗಳಂ ಬಿಟ್ಟು ನೆಗೆದುವಳಿಗಳ್ ಸುರಸುಂ ॥
ದರಿಯರ ನಯನಾದಿಗಳಾ ।
ದರದಿಂದೆಱಗಿದುವು ತತ್ಪ್ರಸೂನಾಳಿಗಳೊಳ್ ॥ ೧೦೪

ಆರೆವು ನಾಂ ಜಿನಪದಪ ।
ದ್ಮಾರಾಧನೆಗೆಂದು ಪಾರಿಜಾತದ ನವಮಂ ॥
ದಾರದ ಹರಿಚಂದನದ ನ ।
ಮೇರುವ ಸಂತಾನದರಲನಮರಿಯರಾಯ್ದರ್ ॥ ೧೦೫

ಕಲ್ಪವೃಕ್ಷಗಳಿಗೆ, ಅವುಗಳನ್ನು ಅಗಲದ ಸುಂದರ ಕಲ್ಪವಲ್ಲಿಗಳಿಗೆ, ಅಕೃತ್ರಿಮ ಚೈತ್ಯಾಲಯಗಳಿಗೆ ಹಾಗು ದೇವತೆಗಳ ಸಮುದಾಯಕ್ಕೆ ನೆಲೆಯಾಗುವ ಈ ಮಂದರ ಗಿರಿಯ ಸೌಭಾಗ್ಯ ಅವುಗಳಿಗೆ ಎಂದಾದರೂ ಬಂದೀತೆ ? ವ|| ಹೀಗೆಂದು ಮೇರು ಪರ್ವತದ ಮಹಾತ್ಮೆಯನ್ನು ದೇವಗಣಕ್ಕೆ ಇಂದ್ರನು ಹೊಗಳಿ ಹೇಳುತ್ತ ಅದನ್ನು ಪ್ರದಕ್ಷಿಣೆ ಮಾಡಿ ಚತುರ್ನಿಕಾಯ ದೇವತೆಗಳನ್ನು ಅದರ ಶಿಖರಕ್ಕೆ ನಡೆಯಿಸಿದನು. ೧೦೩. ದೇವತೆಗಳ ನಿರಂತರವಾದ ಸಮೂಹವು ಸಾಲಾಗಿ ಬೆಟ್ಟವನ್ನೇರುತ್ತಿರುವಾಗ ಇದೇನು ಮೇರುನಗೇಂದ್ರನು ತೊಟ್ಟ ಹಾರವೊ ಏನೊ ಎಂಬಂತೆ ತೋರಿತು. ೧೦೪. ದೇವಾಂಗನೆಯರ ರಭಸಕ್ಕೆ ದುಂಬಿಗಳು ಹೂಬಿಟ್ಟು ಮೇಲಕ್ಕೆ ನೆಗೆದುವು; ಆ ಸುಂದರಿಯರ ಕಣ್ಣುಗಳು ಆ ಹೂಗಳ ಮೇಲೆ ಸಂತೋಷದಿಂದ ಎರಗಿದುವು. ೧೦೫. ಜಿನಪಾದಕಮಲಗಳ ಪೂಜೆಗೆ ನಾವೆಷ್ಟು ಹೂವಾಯ್ದರೂ ತಣಿಯೆವು ಎಂದು ಆ ಸುರವನಿತೆಯರು ಪಾರಿಜಾತದ, ಮಂದಾರದ, ಹರಿಚಂದನದ, ನಮೇರುವಿನ ಹೂಗಳನ್ನು ಆಯ್ದರು.

ಆಗಳ್

ಘನತರಭದ್ರಶಾಳದಿನಿನಿತ್ತೆಡೆಮಾಡದೆ ನಂದನಕ್ಕೆ ನಂ।
ದನದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು ಮತ್ತೆ ಸೌ॥
ಮನಸದಿನೆಯ್ದೆ ಪಾಂಡುಕವನಕ್ಕಡರ್ದತ್ತು ಸುರೇಂದ್ರವಾರಣಂ।
ಕನಕನಗೇಂದ್ರಮಂ ಪವನನುನ್ನಶರದ್ಘನಕೂಟಮೆಂಬಿನಂ॥ ೧೦೬

ಅಂತು ಬಂದು ತದ್ವನದ ಪೂರ್ವೋತ್ತರವೀಧೀದಿಗ್ಭಾಗದೊಳ್

ಉನ್ನತಿಯಿಂ ಯೋಜನಮೆಂ।
ಟುನ್ನೀಳದಿನಾಳ್ದು ನೂಱಿನಗಲದಿನಯ್ವು॥
ತ್ತನ್ನಿರ್ಮಳಹಿಮಕರದಳ।
ಸನ್ನಿಭಮೆನೆ ಪಾಂಡುಕಂ ಶಿಲಾತಳಮೆಸಗುಂ॥ ೧೦೭

ಪುದಿಯೆ ನವರತ್ನಜಾಂಬೂ।
ನದರುಚಿ ಕಡೆಗಡೆಯೊಳೆಸೆದುದಾ ಶಿಲೆ ದೇವಾಂ॥
ಗದ ಗವುಸಣಿಗೆಯನರೆದೆಗೆ।
ದದೊಂದು ಶಶಿಕಾಂತಕಾಂತಮುಕುರಾಕೃತಿಯಂ॥ ೧೦೮

ಆಗಳಾ ಶಿಳಾತಳಮೆ ಜಗತಿಮಂಡಳಮಾಗೆ ವಿಕ್ರಿಯೆಯಿನಾಖಂಡಳಂ ನಿರ್ಮಿಸಲ್ವೇೞ್ವುದುಂ

ಶಕ್ಯಂ ತಾನಲ್ತಿಣಂ ಬಣ್ಣಿಪ ಫಣಿಪತಿವಾಕ್ಯಕ್ಕಮೆಂಬಂತು ಶೋಭಾ।
ಧಿಕ್ಯಂಬೆತ್ತತ್ತು ಮುಕ್ತಾಮಣಿಗಣರಚಿತಂ ಛಾದ್ಯಹೃದ್ಯಂ ಕನನ್ಮಾ॥
ಣಿಕ್ಯಸ್ತಂಭಾವಳಂಬಂ ಹರಿದುಪಳತುಳಾಜಾಳಲೀಳಾಕುಳಂ ತ್ರೈ।
ಲೋಕ್ಯಾಧೀಶಾಭಿಷೇಕೋಚಿತಮಮರಕೃತಂ ಕಾಯಮಾನಂ ನವೀನಂ॥ ೧೦೯

ಆಗ–೧೦೬. ವಿಸ್ತಾರವಾದ ಭದ್ರಶಾಳವನದಿಂದ, ತಡಮಾಡದೆ ನಂದನವನಕ್ಕೆ, ನಂದನದಿಂದ ಸೌಮನಸವನಕ್ಕೆ, ಸೌಮನಸದಿಂದ ಪಾಂಡುಕವನಕ್ಕೆ ಐರಾವತವು ವಾಯುವೇಗದಿಂದ ಹಾಯ್ದು ಸಾಗುತ್ತ ಮಂದರಗಿರಿಯನ್ನೇರಿತು. ವ॥ ಹಾಗೆ ಬಂದು ಪಾಂಡುಕವನದ ಈಶಾನ್ಯ ದಿಗ್ಭಾಗದಲ್ಲಿ–೧೦೭. ಎಂಟು ಯೋಜನ ಎತ್ತರವಾಗಿಯೂ, ನೂರು ಯೋಜನ ಉದ್ದವಾಗಿಯೂ, ಐವತ್ತು ಯೋಜನ ಅಗಲವಾಗಿಯೂ ಇರುವ ಪಾಂಡುಕಶಿಲೆಯು ಚಂದ್ರನಂತೆ ಶೋಭಿಸಿತು. ೧೦೮. ನವರತ್ನಗಳ ಹಾಗು ಚಿನ್ನದ ಕಾಂತಿ ತನ್ನ ಸುತ್ತಲೂ ಹೊಳೆಯುತ್ತಿರಲಾಗಿ ಆ ಶಿಲೆಯು ದೇವಾಂಗದ ಗವುಸಣಿಗೆಯಿಂದ ಅರ್ಧವೆ ಹೊರದೆಗೆದ ಚಂದ್ರಕಾಂತದ ಕನ್ನಡಿಯಂತೆ ಕಂಗೊಳಿಸಿತು. ವ॥ ಆ ಶಿಲಾತಲವೆ ಮಂಗಳ ಜಗಲಿಯಾಗುವಂತೆ ಇಂದ್ರನು ವಿಕ್ರಿಯಾಬಲದಿಂದ ನಿರ್ಮಿಸಲು ಅಪ್ಪಣೆಯೀಯಲಾಗಿ–೧೦೯. ಮುತ್ತು ಮಣಿಗಳಿಂದ ರಚಿತವಾದ ಮನೋಹರ ವಿತಾನದಿಂದಲೂ, ಹೊಳೆಯುವ ಮಾಣಿಕದ ಕಂಬಗಳಿಂದಲೂ, ಹಸಿರುರತ್ನಗಳ ಕಿಟಿಕೆಗಳ ವಿಲಾಸದಿಂದಲೂ, ಇದನ್ನು ಬಣ್ಣಿಸುವುದಕ್ಕೆ ಆದಿಶೇಷನೂ ಸಮರ್ಥನಾಗಲಾರನೆಂಬಂತೆ ತ್ರಿಲೋಕಪತಿಯ ಅಭಿಷೇಕಕ್ಕೆ ಯೋಗ್ಯವಾದ ಅತ್ಯಂತ ಶೋಭಾನ್ವಿತ ಮಂಟಪವನ್ನು ದೇವತೆಗಳು ನಿರ್ಮಿಸಿ

ಸಂಗತಕೋಣಚತುಃಕಳ ।
ಶಂಗಳ ದೇದೀಪ್ಯಮಾನದೀಪಂಗಳ ಜಾ ॥
ಳಂಗಳ ಧೂಪಘಟಂಗಳ ।
ಭೃಂಗಾರಂಗಳ ವಿಳಾಸಮಸದಳಮದಱೊಳ್ ॥ ೧೧೦

ಆತಪವಾರಣಚಮರೀ ।
ಜಾತಕಳಶಸುಪ್ರತಿಷ್ಠಿತಾರ್ಶಪತಾ ॥
ಕಾತಾಳವೃಂತಭೃಂಗಾ ।
ರಾತಿಸ್ವಷ್ಟಾಷ್ಟಮಂಗಳಂ ಸೊಗಯಿಸುಗುಂ ॥ ೧೧೧

ನಗಪತಿಗಿದೆ ಪೆಱಿನೊಸಲೆನೆ ।
ಸೊಗಯಿಪ ಪಾಂಡುಕವಿಶಾಳಶಿಳೆಯೊಳದೇಂ ದಿ ॥
ಟ್ಟಗೆ ವಂದುದೊ ಮಾಣಿಕ್ಯದ ।
ಮೃಗಾರಿಪೀಠಂ ಲಲಾಮಮೆನೆ ಕುಂಕುಮದಾ ॥ ೧೧೨

ಆದಱೆರ್ಕೆಲದೊಳಮತಿಸ ।
ಮ್ಮದದಿಂ ಜನ್ಮಾಭಿಷವಣಮಂಗಳವಿಧಿಯೊಳ್ ॥
ತ್ರಿದಶಾಧಿಪರೇಱಲ್ಕಿ ।
ಕ್ಕಿದ ಭದ್ರಾಸನಮವೆರಡುಮೇನೊಪ್ಪಿದುವೋ ॥ ೧೧೩

ಆ ಸಿಂಹವಿಷ್ಟರದೊಳ್ ತ್ರಿವಿಷ್ಟಪಾಧೀಶನಂ ಪೂರ್ವಾಭಿಮುಖನಿವಿಷ್ಟಂಮಾಡೆ

ಅರುಣಮಣಿಪೀಠರುಚಿಯುಂ ।
ಪರಮನ ಧವಳಾಂಗರುಚಿಯುಮಾವರಿಸೆ ದಿವಾ ॥
ಕರಚಂದ್ರನೊಡನೆ ಬೆಳಪಂ ।
ಬರಮಂ ನೆನೆಯಿಸಿತು ಸವನಮಂಡಪಮಾಗಳ್ ॥ ೧೧೪

ದರು. ೧೧೦. ನಾಲ್ಕೂ ಮೂಲೆಗಳಲ್ಲಿರಿಸಿದ ಕಲಶಗಳ, ಉಜ್ವಲವಾದ ದೀಪಗಳ, ಧೂಪದ ಕೊಡಗಳ, ಗಿಂಡಿಗಳು ಅದರಲ್ಲಿ ಒಪ್ಪಿದುವು. ೧೧೧. ಸತ್ತಿಗೆ, ಚಾಮರ, ಕಲಶ, ಕನ್ನಡಿ, ಪತಾಕೆ, ಬೀಸಣಿಗೆ, ಗಿಂಡಿ(ಮತ್ತು ರತ್ನ) ಎಂಬ ಎಂಟು ಬಗೆಯ ಮಂಗಳಗಳು ಶೋಭಿಸಿದುವು. ೧೧೨. ಪರ್ವತ ರಾಜನಾದ ಮೇರುವಿಗೆ ಚೆಲುವಾದ ಚಂದ್ರನಂತಹ ಹಣೆಯೆಂಬಂತೆ ಕಂಗೊಳಿಸುವ ವಿಶಾಲವಾದ ಪಾಂಡುಕ ಶಿಲೆಯ ಮೇಲೆ ಕುಂಕುಮದ ಬೊಟ್ಟಿನಂತೆ ಮಾಣಿಕದ ಸಿಂಹಾಸನ ಕಂಗೊಳಿಸಿತು. ೧೧೩. ಅದರ ಎರಡೂ ಬದಿಗಳಲ್ಲಿ ಜನ್ಮಾಭಿಷೇಕ ಮಂಗಳಕಾರ್ಯದಲ್ಲಿ ಇಂದ್ರರು ಕುಳ್ಳಿರಲೆಂದು ಇರಿಸಿದ ಎರಡು ಸಿಂಹಾಸನಗಳು ಎಂತಹ ಶೋಭೆಯನ್ನು ಪಡೆದಿದ್ದುವು ! ವ॥ (ನಡುವಿನ) ಆ ಸಿಂಹಾಸನದ ಮೇಲೆ ಜಿನೇಶ್ವರನನ್ನು ಪೂರ್ವಕ್ಕೆ ಎದುರಾಗಿ ಕುಳ್ಳಿರಿಸಲಾಗಿ–೧೧೪. ಮಾಣಿಕ್ಯ ಸಿಂಹಾಸನದ ಪ್ರಭೆಯೂ, ಭಗವಂತನ ದೇಹದ ಧವಳಕಾಂತಿಯೂ ಆವರಿಸಲಾಗಿ, ಆ ಅಭಿಷೇಕ ಮಂಡಪವು ಸೂರ್ಯಚಂದ್ರರಿಬ್ಬರಿಂದಲೂ ಏಕಕಾಲಕ್ಕೆ ಬೆಳಗುವ ಆಕಾಶವನ್ನು ಸ್ಮರಣೆಗೆ

ಸುರಪತಿ ದಹನಂ ಧರ್ಮಂ।
ನಿರುತಿ ವರುಣನನಿಳನೈಳಬಿಳನೀಶಮಹೀ॥
ಶ್ವರನಿಂದುವೆಂಬ ದಿಕ್ಪಾ।
ಳರುಮಂ ದಶದಿಶೆಯೊಳಿರಿಸಿ ಪರಿಕರಸಹಿತಂ॥ ೧೧೫

ಮತ್ತಮೊಳಗಣ ನಾಲ್ಕುಂ ದೆಸೆಯೊಳ್ ಚಾರಣಾಚ್ಯುತೇಂದ್ರಪ್ರಮುಖರಪ್ಪ ಕಲ್ಪಾಮರರುಮಂ, ಚಮರವೈರೋಚನಪ್ರಮುಖರಪ್ಪ ಭವನಾಮರರುಮಂ, ಚಂದ್ರಾದಿತ್ಯಪ್ರಮುಖರಪ್ಪ ಜ್ಯೋತಿಷ್ಕಾಮರರುಮಂ, ಸತ್ಪುರುಷಮಹಾಪುರುಷಪ್ರಮುಖರಪ್ಪ ವ್ಯಂತರಾಮರರುಮಂ ನಿರವಿಸಿ ಸೌಧರ್ಮೇಂದ್ರನೀಶಾನೇಂದ್ರನುಂ ತಾನುಮುತ್ತರದಕ್ಷಿಣಾಭಿಮುಖರಾಗಿ ಜನ್ಮಾಭಿಷೇಕೋನ್ಮುಖರುಪಪೀಠಂಗಳನಳಂಕರಿಸಿ,

ಸುರಕಾಂತಾಗೀತನಾದಂ ಸುರಕರತಳಸಂತಾಡಿತಾತೋದ್ಯನಾದಂ।
ಸುರವಂದಿಸ್ತೋತ್ರನಾದಂ ಸುರಜನಜಯಜೀವಪ್ರಣಾದಂ ಸುರೋರ್ವೀ॥
ಧರಕುಂಜಪ್ರತ್ಯುದಂಚದ್ಬಹಳತರನಿನಾದಂ ದಿಶಾಕಾಶಚಕ್ರೋ।
ದರಮಂ ತೀವುತ್ತುಮಿರ್ಪನ್ನೆಗಮಮರಪಯೋವರ್ಷಣೋದ್ಯುಕ್ತರಾದರ್॥ ೧೧೬

ಇದು ದಲಭಿಷವಣವೃಷ್ಟಿ।
ಪ್ರದನೀಳಪಯೋದಮಾಳೆ ತಾನೆಂಬಿನೆಗಂ॥
ಪುದಿದುದು ಕಾಳಾಗರುಧೂ।
ಪದ ಕರ್ವೊಗೆಯುರ್ವಿ ಪರ್ವಿ ರೋದೋಂತರಮಂ॥ ೧೧೭

ತಂದಿತು. ೧೧೫. ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶ, ಮಹೇಶ ಮತ್ತು ಇಂದು ಎಂಬ ದಿಕ್ಪಾಲಕರನ್ನು ಅವರವರ ಪರಿಕರ ಸಹಿತವಾಗಿ–ವ॥ ಮತ್ತು ಒಳಗಿನ ನಾಲ್ಕೂ ದಿಕ್ಕುಗಳಲ್ಲಿ ಚಾರಣ–ಅಚ್ಯುತೇಂದ್ರ ಮೊದಲಾದ ಕಲ್ಪಾಮರರನ್ನೂ, ಚಮರ ವೈರೋಚನ ಮೊದಲಾದ ಭವನಾಮರರನ್ನೂ, ಚಂದ್ರ ಸೂರ್ಯ ಮೊದಲಾದ ಜ್ಯೋತಿಷ್ಯಾಮರರನ್ನೂ ಸತ್ಪುರುಷ ಮಹಾಪುರುಷ ಮೊದಲಾದ ವ್ಯಂತರಾಮರರನ್ನೂ ನಿಯಮಿಸಿ, ಸೌಧರ್ಮೇಂದ್ರನು ಉತ್ತರಮುಖವಾಗಿ ಹಾಗು ಈಶಾನೇಂದ್ರನು ದಕ್ಷಿಣಮುಖವಾಗಿ ಇರುವ ಪೀಠಗಳಲ್ಲಿ ಕುಳಿತು, ಜನ್ಮಾಭಿಷೇಕ ಕಲ್ಯಾಣಕ್ಕೆ ತೊಡಗಿದರು. ೧೧೬. ದೇವಕಾಂತೆಯರ ಗೀತನಾದ, ದೇವವಾದಕರು ನುಡಿಸುವ ವಾದ್ಯನಾದ, ದೇವವಂದಿಗಳ ಸ್ತೋತ್ರನಾದ, ದೇವಜನಗಳ ಜಯ ಜಯಕಾರ ನಾದ, ದೇವ ವೃಕ್ಷಕುಂಜಗಳಿಂದ ಹೊಮ್ಮುವ ಘನವಾದ ನಿನಾದ–ಇವೆಲ್ಲವೂ ದಿಕ್ಕುಗಳನ್ನು ಹಾಗು ಆಕಾಶವನ್ನು ತುಂಬುತ್ತಿರಲಾಗಿ ದೇವ ಜಲಾಭಿಷೇಕವನ್ನು ಅವರು ಆರಂಭಿಸಿದರು. ೧೧೭. ಇದು ಅಭಿಷೇಕದ ಮಳೆಗರೆಯುವ ಮೋಡಗಳ ಹಿಂಡೊ ಏನೊ ಎಂಬಂತೆ ಕಾಳಾಗರುವಿನ ಕರಿಯ ಹೊಗೆ ದಟ್ಟವಾಗಿ ಹಬ್ಬಿ ಆಕಾಶವನ್ನು

ಸಿತಕುಸುಮಾಕ್ಷತಚಂದನ ।
ಯುತಜಳಬಿಂದುಗಳಿನಿಂದ್ರರಘ್ರ್ಯೋದ್ಧರಣಂ ॥
ಪ್ರತಿವಾದಿಸಿದುದು ತಾರೋ ।
ದ್ಗತಿಯಂ ನಭದಲ್ಲಿ ಸವನನಾಂದೀವಿಧಿಯೊಳ್ ॥ ೧೧೮

ಅನಂತರಂ ಪಾರಿಜಾತಪಲ್ಲವೋಲ್ಲಸಿತಮುಖಂಗಳುಂ ಮಂದಾರಮಾಳಾಳಂಕೃತಕಂಠಂಗಳುಂ ಹರಿಚಂದನಚರ್ಚಾರ್ಚಿತಮಧ್ಯಂಗಳುಮಪ್ಪ ಕಲ್ಯಾಣಕಳಶಂಗಳಂ ಕಳಶೋದ್ಧಾರಮಂತ್ರಪೂರ್ವಕಮೆತ್ತಿಕೊಂಡು

ದಳಿತಾಂಭೋಜರಜಃಪಿಶಂಗಿತಲಸದ್ಗಂಧಾದಿತೀರ್ಥೋದಕಂ ।
ಗಳಿನಂಹೋಮಳಭೇದಕಂಗಳಿನುರುಶ್ರೇಯಃ ಫಳೋತ್ಪಾದಕಂ ॥
ಗಳಿನಟ್ಟರ್ತು ಜಿನಾರ್ಭಕಂಗೆ ದಿವಿಜೇಶರ್ ಮಾಡಿದರ್ ಮುಖ್ಯಮಂ ।
ಗಳಮಂ ಸ್ನಾನವಿಧಾನಮಂ ಸಮುದಿತಾನೇಕಾನಕಧ್ವಾನಮಂ ॥ ೧೧೯

ಸುರವೃಂದಾರಕರೆಯ್ದೆ ಮುಂದುವರಿದೊಂದಾನಂದದಿಂ ತಂದು ತಂ ।
ದಲರಂ ಗಂಧಮನಕ್ಷತಪ್ರಕರಮಂ ದರ್ಭಾಳಿಯಂ ದೂರ್ವೆಯಂ ॥
ಚರುವಂ ನೀಡೆ ಶಚೀಯುತಾಮರಿಯರರ್ಚಾದ್ರವ್ಯಸಂಶುದ್ಧಿಯಂ ।
ತ್ವರಿತಂಮಾಡೆ ಸಮಗ್ರಮಾಯ್ತು ಭಗವಜ್ಜನ್ಮಾಭಿಷೇಕೋದ್ಯಮಂ ॥ ೧೨೦

ಅಮಳಜ್ಞಾನಂಗಿದು ಪಂ ।
ಚಮಗತಿರಾಜ್ಯಾಭಿಷೇಕಮಿಂತಿಲ್ಲಿಗೆ ಪಂ ॥

ಆವರಿಸಿತು. ೧೧೮. ಅಭಿಷೇಕದ ನಾಂದೀವಿಧಿಯಲ್ಲಿ ಬಿಳಿಹೂವು, ಅಕ್ಷತೆ, ಚಂದನಗಳನ್ನೊಡಗೊಂಡ ಅರ್ಘ್ಯೋದಕದ ಬಿಂದುಗಳು ಆಕಾಶದಲ್ಲಿ ಮೂಡುವ ನಕ್ಷತ್ರಗಳಿಗೆ ಸರಿಸಮವಾದುವು. ವ॥ ಬಳಿಕ, ಪಾರಿಜಾತದ ಚಿಗುರೆಲೆಗಳಿಂದ ಮುಚ್ಚಿದ, ಮಂದಾರಮಾಲೆಯಿಂದ ಅಲಂಕೃತವಾದ, ಹರಿಚಂದನದ ಲೇಪವನ್ನು ಹೊಂದಿದ ಕಲ್ಯಾಣಕಲಶಗಳನ್ನು ಕಲಶೋದ್ಧರಣಮಂತ್ರಪೂರ್ವಕವಾಗಿ ಎತ್ತಿಕೊಂಡು– ೧೧೯. ಅರಳಿದ ತಾವರೆಗಳ ಪರಾಗದಿಂದ ನಸುಗೆಂಪಾಗಿ ಉತ್ತಮವಾದ ಪರಿಮಳವನ್ನೊಂದಿ ದುರಿತನಾಶಕವಾಗಿಯೂ, ಶ್ರೇಯಸ್ಕರವಾಗಿಯೂ ಇರುವ ತೀರ್ಥೋದಕಗಳಿಂದ ಅನೇಕ ವಾದ್ಯಧ್ವನಿಗಳ ನಿನಾದದೊಂದಿಗೆ ಇಂದ್ರರಿಬ್ಬರೂ ಜಿನಾರ್ಭಕನಿಗೆ ಮಂಗಳಸ್ನಾನವನ್ನು ಮಾಡಿಸಿದರು. ೧೨೦. ಸುರಪ್ರಮುಖರು ಅತ್ಯಧಿಕವಾದ ಆನಂದದಿಂದ ಹೂವು, ಗಂಧ, ಅಕ್ಷತೆ, ದರ್ಭೆ, ದೂರ್ವೆ, ಚರು ಮೊದಲಾದುವುಗಳನ್ನು ತಂದು ತಂದು ಕೊಡುತ್ತಿರಲಾಗಿ, ಶಚೀದೇವಿಯೆ ಮೊದಲಾಗಿ ದೇವಕಾಂತೆಯರು ಪೂಜಾದ್ರವ್ಯಗಳನ್ನು ತ್ವರಿತವಾಗಿ ಶುದ್ಧಗೊಳಿಸಲಾಗಿ ಭಗವಂತನ ಜನ್ಮಾಭಿಷೇಕವು ಸಮಗ್ರವಾಯಿತು. ೧೨೧. "ಪರಿಶುದ್ಧ ಜ್ಞಾನವಂತನಾದ ಜಿನೇಶ್ವರನಿಗೆ ಇದು ಪಂಚಮಗತಿಯ (ಮೋಕ್ಷಪದವಿಯ) ರಾಜ್ಯಾಭಿ

ಚಮಜಳಧಿಜಳಮೆ ಯೋಗ್ಯಂ।
ಸುಮಜ್ಜನಕ್ಕೆಂದು ಬೆಸಸಿದಂ ಸೌಧರ್ಮಂ॥ ೧೨೧

ಆಗಳ್

ನಗಪತಿ ತಾನೆ ಜೈನಸವನೋತ್ಸವದೊಳ್ ಪರಿದಟ್ಟಿಯಿಂದೆ ನೀ।
ರ್ಮೊಗೆಯಲೊಡರ್ಚಿ ಪಂಚಮಪಯೋಧಿಗೆ ನೀಡಿದನಕ್ಕುಮೆಯ್ದೆ ದೋ॥
ರ್ಯುಗಳಮನಿರ್ಕೆಲಕ್ಕಮೆನೆ ಕಲ್ಪಜರೋಳಿಗಳಗ್ರಸಾನುವಿಂ।
ದೊಗೆದು ಕಡಲ್ವರಂ ನಿಮಿರ್ದದೇನಮರ್ದಿರ್ದುವೊ ಕಣ್ಗೆ ನಾಡೆಯುಂ॥ ೧೨೨

ಅನಂತರಂ

ಸರದದ ತಂದಲ ಸಂಜೆಯ।
ನೆರೆದ ಮುಗಿಲ್ ಪೀರೆದಪುವು ನೀರ್ಗಳನೆಂಬಂ॥
ತಿರೆ ಪಳಿಕಿನ ನೀಲದ ಕೆಂ।
ಬರಲ ಕೊಡಂ ತರದೆ ಮೊಗೆದುವಂದಿಂಗಡಲೊಳ್॥ ೧೨೩

ದಿಟದಿಂ ಪಯೋಧಿಯಂ ತಳ।
ತಟಮಂ ಸಾರ್ವಿನೆಗಮಮರಕುಳಕರಕಳಿತಂ॥
ಘಟಜಾತಂ ಪೀರ್ದೊಡದಂ।
ಘಟಜಾತಂ ಪೀರ್ದನೆಂದು ನುಡಿವರ್ ಗಾಂಪರ್॥ ೧೨೪

ಒಡಲೆಂಟು ಯೋಜನಂ ಮೊಗೆ।
ದೆಡೆ ಯೋಜನಮೊಂದು ನೋಟಿಕ್ಕೊಡೆನಿಸಿದ ಪೆಂಪಂ॥

ಷೇಕ; ಇದಕ್ಕೆ ಪಂಚಮ ಸಮುದ್ರ (ಕ್ಷೀರ ಸಮುದ್ರ) ದ ನೀರೇ ಯೋಗ್ಯ" ಎಂದು ಸೌಧರ್ಮೇಂದ್ರನು ನಿಯಮಿಸಿದನು. ಆಗ-೧೨೨. ಜಿನಾಭಿಷೇಕೋತ್ಸವಕ್ಕಾಗಿ ಪರಮಭಕ್ತಿಯಿಂದ ಮೇರುನಗೇಂದ್ರನೆ ಪಂಚಮ ಸಮುದ್ರಕ್ಕೆ ತನ್ನ ತೋಳು ನೀಡಿದನೊ ಏನೊ ಎಂಬಂತೆ ಕಲ್ಪಾಮರರ ಎರಡು ಸಾಲುಗಳು ಪರ್ವತಶಿಖರದಿಂದ ಆ ಸಮುದ್ರದವರೆಗೆ ಚಾಚಿಕೊಂಡು ನಯನಮನೋಹರವಾದುವು. ಆ ಬಳಿಕ- ೧೨೩. ಶರತ್ಕಾಲದ, ಮಳೆಗಾಲದ, ಹಾಗು ಸಂಜೆಯ ಮೋಡಗಳು ನೆರೆದು ನೀರನ್ನು ಹೀರಿಕೊಳ್ಳುತ್ತಿವೆಯೊ ಏನೊ ಎಂಬಂತೆ ಸ್ಫಟಿಕದ, ನೀಲರತ್ನದ ಹಾಗು ಮಾಣಿಕದ ಕೊಡಗಳು ಕ್ಷೀರಸಮುದ್ರವನ್ನು ಮೊಗೆದುವು. ೧೨೪. ಸಮುದ್ರವು ತಳಗಾಣುವವರೆಗೆ ಅದನ್ನು ಸಮಗ್ರವಾಗಿ ಹೀರಿಕೊಂಡುದು ದೇವತೆಗಳ ಕೈಯಲ್ಲಿದ್ದ "ಘಟಜಾತ" (ಕೊಡಗಳ ಸಮೂಹ)ವೆ ಎಂಬುದು ನಿಜ ಸಂಗತಿ, ಅದನ್ನು ಘಟಜಾತ(ಅಗಸ್ತ್ಯ)ನು ಕುಡಿದನೆಂದು ಹೇಳುವವರು ತಿಳಿಗೇಡಿಗಳು. ೧೨೫. ಕಡಲಿಂದ ಬೆಟ್ಟಕ್ಕೆ ಕೊಡಗಳನ್ನು ಸಾಗಿಸುವ ಸಾಲು ಎಂಟು ಯೋಜನ; ಕೊಡಗಳನ್ನು ತುಂಬಲು(ತೀರದಲ್ಲಿ) ನಿಂತ ಸಾಲು ಒಂದು ಯೋಜನ;

ಗಡಣಿಸಿ ಘಟಂಗಳಮರ್ದಿನ ।
ಮಡುಗಳೆ ನಡೆವಂತೆ ತಿಂಬಿ ನಡೆದುವು ಪಲವುಂ ॥ ೧೨೫

ಬೃಂದಾರಕರೋರೊರ್ವ ।
ರ್ಗೊಂದು ಕನತ್ಕಳಶನಿಕರಮಂ ಕೆಯ್ಗೆಯ್ಯೊಳ್ ॥
ತಂದೀವ ಕೊಳ್ವ ಸಂಭ್ರಮ ।
ದಂದಂ ಪೋಲ್ತತ್ತು ಕಂದುಕಕ್ರೀಡಿತಮಂ ॥ ೧೨೬

ಅನಿಮಿಷಕೋಟಿ ರತ್ನಪುಟಪೇಟಕದಿಂದಮೃತಾಬ್ಧಿದುಗ್ಧಮಂ ।
ಜನಿತಮರುನ್ಮನೋಜವದೆ ತಂದೆಡೆಮಾಡದೆ ನೀಡೆ ತಾಳ್ದಿ ಪಾ ॥
ವನತರನೀರಪೂರಿತಫಲಾವಿಳಕೋಮಳನಾಳಿಕೇರಕಾ ।
ನನದವೊಲಾಯ್ತು ಪೂರ್ಣಕಳಶಾಕುಳಬಾಹುಸಮೂಹಮಿಂದ್ರರಾ॥ ೧೨೭

ಅಂತು ವಿಕ್ರಿಯಾಶಕ್ತಿಯಿಂ ಶಕ್ರರಮರಸಮಿತಿ ನೀಡಿದನೇಕಘಟಂಗಳನನೇಕಭುಜಂಗಳಿಂ ತಾಳ್ದಿ ಧಾರಾಭಿಷೇಕಮಂ ಜಯಜಯನಿನಾದಪೂರ್ವಕಂ ಮಾಡುವಾಗಳ್

ಪರಮಜಿನನೆಂಬ ಗುಣಗಣ ।
ಸುರತ್ನನಿಧಿಗಿಂದ್ರರೆಂಬ ತರುಗಳ್ ಬೀಟ ॥
ಲ್ವರಿದಂತಿರ್ದುವು ತತ್ತ ।
ತ್ಕರಶಾಖಾಕಳಿತಕಳಶಧಾರಾಕ್ಷೀರಂ ॥ ೧೨೮

ಜಿನತನುಗೆ ಕಾಂತಿಯಿಂ ಸೋ ।
ಲ್ತು ನಾಣ್ಚಿ ನೀರಾಗಿ ಕರಗಿ ಪರಿಯುತ್ತಿರ್ದ ॥
ಪ್ಪನೊ ಚಂದ್ರನೆನಿಸಿದುದು ಪಳಿ ।
ಕಿನ ಕೊಡದಿಂ ಸುರಿದ ದುಗ್ಧಧಾರಾಪೂರಂ ॥ ೧೨೯

ಹೀಗೆ ಅತ್ಯಧಿಕವಾಗಿ ನೆರೆದ ಕೊಡಗಳು ಅಮೃತದ ಮಡುಗಳೆ ನಡೆದಂತೆ ತುಂಬಿ ತುಂಬಿ ನಡೆದುವು. ೧೨೬. ದೇವತೆಗಳು ಒಂದೊಂದೆ ಕೊಡವನ್ನು ಕೈಯಿಂದ ಕೈಗೆ ಕೊಡುವ ಹಾಗು ತೆಗೆದುಕೊಳ್ಳುವ ಸಂಭ್ರಮದ ರೀತಿ ಚಂಡಿನಾಟವನ್ನು ಹೋಲುತ್ತಿತ್ತು. ೧೨೭. ಸಾಲುಗಟ್ಟಿಕೊಂಡು ನಿಂತು ತುಂಬಿ ತುಂಬಿ ವಾಯುವೇಗ ಮನೋವೇಗಗಳಿಂದ ತಂದುಕೊಡುವ ರತ್ನಘಟಿತವಾದ ಕೊಡಗಳನ್ನು ತೆಗೆದುಕೊಳ್ಳುತ್ತಿರುವ ಇಂದ್ರರ (ಅನೇಕ) ತೋಳುಗಳು ತಿಳಿಯಾದ ಎಳನೀರಿನಿಂದ ತುಂಬಿದ ತೆಂಗಿನ ತೋಪಿನಂತೆ ಕಂಡುವು. ವ॥ ವಿಕ್ರಿಯಾಬಲದಿಂದ ಇಂದ್ರರು ಅನೇಕ ಭುಜಗಳನ್ನು ಹೊಂದಿ, ದೇವತೆಗಳು ನೀಡಿದ ಅನೇಕಾನೇಕ ಕೊಡ ಗಳನ್ನು ಎತ್ತೆತ್ತಿಕೊಂಡು ಜಯಜಯಕಾರಪೂರ್ವಕವಾಗಿ ಧಾರಾಭಿಷೇಕ ಮಾಡುವಾಗ–೧೨೮. ಪರಮಜಿನನೆಂಬ ಗುಣರತ್ನದ ನಿಧಿಗೆ ಇಂದ್ರರೆಂಬ ವೃಕ್ಷಗಳು ಬಿಳಲು ಬಿಟ್ಟವೊ ಏನೊ ಎಂಬಂತೆ, ಅವರ ಕೈಗಳಿಂದ ಸುರಿಯುವ ಕಲಶಧಾರೆಯು ಕ್ಷೀರ ಸೋರುತ್ತಿತ್ತು. ೧೨೯. ಜಿನೇಶ್ವರನ ದೇಹಕಾಂತಿಗೆ ಸೋತು ನಾಚಿ ನೀರಾಗಿ ಕರಗಿ ಹರಿಯುತ್ತಿರುವ ಚಂದ್ರನೊ ಏನೊ ಎಂಬಂತೆ

ಕ್ಷೀರನಿರಂತರಧಾರಾ ।
ಪೂರದ ಪುದುವಿಂ ಜಿನಾನನಂ ಶೋಭಾಸಂ ॥
ಸ್ಮಾರಕಮಾದುದು ಶಾರದ ।
ನೀರದಪರಿಪಿಹಿತತುಹಿನಕರಮಂಡಳದಾ ॥ ೧೩೦

ಜಿನಶಿಶುವ ಕೋಮಳಾಮಳ ।
ತನು ಸವನಪಯಃಪ್ರವಾಹದೊಳ್ ಸೊಗಯಿಸಿದ ॥
ತ್ತನಿಮಿಷರ ಕಣ್ಗೆ ಗಂಗೆಯ ।
ಪೊನಲೊಳ್ ನಳನಳಿಸಿ ಮಿಸುಪ ಬಿಸಸವಲ್ಲರಿವೊಲ್ ॥ ೧೩೧

ಬಳಸಿರೆ ಜಿನತನುವಂ ದು ।
ಗ್ಧಲಹರಿ ತದ್ದುಗ್ಧಲಹರಿಯಂ ಸುರಯೋಷಿ ॥
ತ್ಕುಳಮುಗ್ಧಾಪಾಂಗಪ್ರಭೆ ।
ಬಳಸಿರೆ ಮನಮೆಳಸಿ ಬಳಸಿದತ್ತಭಿಷವದೊಳ್ ॥ ೧೩೨

ಕಡಲೊಳ್ ಪಾಲಂ ಮೊಗೆವಂ ।
ದೊಡವಂದುವು ತಾಗಿ ರತ್ನಪೀಠಮನೀಗಳ್ ॥
ಸಿಡಿದಪುವೋ ಮುತ್ತುಗಳನೆ ।
ಬೆಡಂಗನೊಳಕೆಯ್ದುವೊಗೆವ ದುಗ್ಧಲವಂಗಳ್ ॥ ೧೩೩

ಅಂತು ಸಂಧ್ಯಾಂಭೋಧಸನ್ನಿಭಂಗಳಪ್ಪ ಶಾತಕುಂಭಕುಂಭಂಗಳಿಂ ಜಂಭಾರಿ ಶಂಭುಗಭಿಷವಮಂ ತುಮುಳಕೇಳಿಯಿನೊಡರ್ಚಿದಾಗಳ್

ಸ್ಫಟಿಕದ ಕಲಶದಿಂದ ಸುರಿಯುವ ಕ್ಷೀರಧಾರೆ ತೋರಿತು. ೧೩೦. ಶರತ್ಕಾಲದ ಮೋಡಗಳು ಮುಸುಕಿದ ಚಂದ್ರಮಂಡಲವೊ ಏನೊ ಎಂಬಂತೆ, ನಿರಂತರವಾದ ಕ್ಷೀರಧಾರೆಯು ಪೂರಕ್ಕೆ ಒಳಗಾದ ಜಿನನ ಮುಖವು ಶೋಭಿಸಿತು. ೧೩೧. ಗಂಗಾನದಿಯು ನಡುವೆ ನಳನಳಿಸಿ ತೊಳಗುವ ತಾವರೆಯು ಬಳ್ಳಿಯೊ ಏನೊ ಎಂಬಂತೆ, ಅಭಿಷೇಕದ ಜಲಪ್ರವಾಹದಲ್ಲಿ ಜಿನಶಿಶುವಿನ ಸುಕುಮಾರವಾದ ಹಾಗು ಪರಿಶುದ್ಧವಾದ ದೇಹ ಕಂಗೊಳಿಸಿತು. ೧೩೨. ಜಿನದೇಹವನ್ನು ಕ್ಷೀರಜಲ ಬಳಸಿತ್ತು; ಆ ಕ್ಷೀರಪ್ರವಾಹವನ್ನು ದೇವಕಾಂತೆಯುರ ಮುಗ್ಧವಾದ ಕಟಾಕ್ಷಪ್ರಭೆ ಬಳಸಿತ್ತು; ಅಭಿಷೇಕದ ಈ ಸೊಗಸಿಗೆ ಮನಸ್ಸು ಅದನ್ನು ಬಳಸಿತ್ತು. ೧೩೩. ಕ್ಷೀರಸಾಗರದಲ್ಲಿ ಹಾಲನ್ನು ಮೊಗೆಮೊಗೆದು ತುಂಬುವಾಗ ಕೊಡಗಳಿಗೆ ಹತ್ತಿಕೊಂಡು ಬಂದ ಮುತ್ತುಗಳು ಈಗ ರತ್ನಪೀಠವನ್ನು ತಾಕಿ ಸಿಡಿಯುತ್ತಿರುವುವೊ ಏನೊ ಎಂಬಂತೆ ಚಿಮ್ಮುತ್ತಿರುವ ಕ್ಷೀರಬಿಂದುಗಳು ಬೆಡಗಾದುವು. ವ॥ ಹೀಗೆ ಸಂಜೆ ಮೋಡಗಳಿಗೆ ಸದೃಶವಾದ ಚಿನ್ನದ ಕೊಡಗಳಿಂದ ಇಂದ್ರನು ಭಗವಂತನಿಗೆ ಸಡಗರದಿಂದ ಅಭಿಷೇಕ

ಗಿರಿಯಲ್ಲಿ ಘನಘಟಾವಳಿ ।
ಸುರಿದುವು ಪಯಮಂ ದಿಟಕ್ಕೆ ತಾನೆನಿಸಿ ಮರು ॥
ದ್ಗಿರಿಯಲ್ಲಿ ಘನಘಟಾವಳಿ ।
ಸುರಿದುದು ಪಯಮಂ ಮೃದಂಗನಿನದಸ್ತನಿತಂ ॥ ೧೩೪

ನೀಡಿಸಿ ಕೊಳ್ವ ಕೆಯ್ಗಳುಮನಿತ್ತೆ ಸುರಾಳಿಗೆ ಕುಂಭಕೋಟಿಯಂ ।
ನೀಡುತುಮಿರ್ಪ ಕೆಯ್ಗಳುಮನಿತ್ತೆ ಜಿನಂಗಭಿಷೇಕಶೋಭೆಯಂ ॥
ಮಾಡುವ ತನ್ನ ಕೆಯ್ಗಳುಮನಿತ್ತೆ ನಮಸ್ಕೃತಿಗಗ್ರಭಾಗದೊಳ್ ।
ಕೂಡುತುಮಿರ್ಪ ಕೆಯ್ಗಳುಮನಿತ್ತೆ ವಿಚಿತ್ರಮೊ ಶಕ್ತಿ ಶಕ್ರನಾ ॥ ೧೩೫

ಸಕಳಾಮರರ್ ಪಯೋವಾ ।
ಹಕರಮರಿಯರಲ್ಲಿ ಪರಿವೆಸಂಗೆಯ್ವರ್ ಸ್ನಾ ॥
ಪಕನಿಂದ್ರಂ ಸುರಗಿರಿ ಪೀ ।
ಠಿಕೆ ನೀರ್ದೋಣಿ ದುಗ್ಧವಾರ್ಧಿ ಜಿನಮಜ್ಜನದೊಳ್ ॥ ೧೩೬

ಅಂತೈರಾವತಕರಸ್ಥೂಳಕ್ಷೀರಧಾರಾಸಹಸ್ರಂಗಳಿಂ ಜಿನಶಿಶುವಿನ ಶಿರದೊಳ್ ಸುರಿವ ಶತಮಖನುತ್ಸವೋನ್ಮುಖತೆಗಂ ಬಾಳಕನ ವಿಚಳಿತವೃತ್ತಿಗಂ ಅನಿಮಿಷನಿಕಾಯಂ ವಿಸ್ಮಯಸ್ತಿಮಿತನಯನಮಾಗಿ ನೋಡುತ್ತುಮಿನಿತಿರ್ಪನ್ನೆಗಂ

ಮಾಡಿದಾಗ–೧೩೪. ಬೆಟ್ಟದ ಮೇಲೆ ಘಟಗಳ(ಮೋಡಗಳ) ಹಿಂಡುಗಳು ಮಳೆಗರೆದುವೊ ಏನೊ ಎಂಬಂತೆ ಮೇರುವಿನ ಮೇಲೆ "ಘಟ"(ಕಲಶ)ಗಳ ಸಮೂಹಗಳು ಮೃದಂಗ ಧ್ವನಿಯೆಂಬ ಗುಡುಗಿನೊಡನೆ ಕ್ಷೀರೋದಕವನ್ನು ಸುರಿದುವು. ೧೩೫. ತುಂಬಿದ ಕ್ಷೀರಜಲಕುಂಭಗಳನ್ನು ಎತ್ತಿಕೊಳ್ಳುವ ಕೈಗಳು ಅಷ್ಟೊಂದು; ತೆರವಾದ ಕೊಡಗಳನ್ನೂ ಮರಳಿ ದೇವತೆಗಳಿಗೆ ಕೊಡುವ ಕೈಗಳು ಅಷ್ಟೊಂದು; ಜಿನನಿಗೆ ಅಭಿಷೇಕಶೋಭೆಯನ್ನು ಒದಗಿಸುವ ಕೈಗಳು ಅಷ್ಟೊಂದು; ನಮಸ್ಕಾರಕ್ಕಾಗಿ ತಲೆಯ ಮೇಲೆ ಜೋಡಿಸುವ ಕೈಗಳು ಅಷ್ಟೊಂದು–ಇಂದ್ರನ (ವಿಕ್ರಿಯಾ) ಶಕ್ತಿ ಅಷ್ಟೊಂದು. ೧೩೬. ಜಿನಸ್ನಾನಕ್ಕೆ ನೀರು ತಂದೀಯುವವರು ಸರ್ವ ದೇವತೆಗಳು; ಪರಿಚರ್ಯೆ ಮಾಡುವವರು ದೇವಕಾಂತೆಯರು; ಸ್ನಾನಮಾಡಿಸುವವನು ಇಂದ್ರ; ಸ್ನಾನಪೀಠವಾದುದು ಮೇರುಗಿರಿ; ನೀರಿನ ದೋಣಿಯೋ ಕ್ಷೀರಸಮುದ್ರವೇ. ವ॥ ಐರಾವತದ ಸೊಂಡಿಲಷ್ಟು ಗಾತ್ರವಾದ ಸಾವಿರಾರು ಕ್ಷೀರಧಾರೆಗಳಿಂದ ಜಿನಶಿಶುವಿನ ತಲೆಯ ಮೇಲೆ ಸುರಿಯುವ ಇಂದ್ರನ ಉತ್ಸವಾತಿಶಯಕ್ಕೂ, (ಆ ಧಾರೆಗೆ ಮಿಸುಕದೆ ಕುಳಿತ) ಆ ಶಿಶುವಿನ ದೃಢತೆಗೂ

ಮಿಳಿರ್ವ ಪತಾಕೆಗಳೆತ್ತಿದ ।
ಶಿಳಮೆನೆ ಜಿನಶಿಶುವ ರೇಚಕಾನಿಳಹತಿಯಿಂ ॥
ತಳರ್ದು ನಭೋಬ್ಧಿಯ ನೌಸಂ ।
ಕುಳದಂತೋಡಿದುದು ಸುರವಿಮಾನವಿತಾನಂ ॥ ೧೩೭

ಜಿನಜನ್ಮೋತ್ಸವದೊಳ್ ವೇ ।
ದಿನಿಗಿರಿಸಿದ ಕಾಂಚನಧ್ವಜಸ್ತಂಭಮಿದೆಂ ॥
ಬಿನೆಗಂ ಸೊಗಯಿಸಿದುದು ಮೇ ।
ರುನಗಂ ಪ್ರೋಚ್ಚಳಿತದುಗ್ಧಪೂರದುಕೂಲಂ ॥ ೧೩೮

ಉದಯಂ ಹಿಮಶೈಳದೊಳ ।
ಲ್ಲದೆ ಪಿರಿದುಂ ಹೇಮಶೈಳದೊಳ್ ಸಮನಿಕುಮೀ ॥
ತ್ರಿದಶನದಿಗೆಂಬಿನಂ ಪೊ ।
ಣ್ಮಿದುದಭಿನವಸವನದುಗ್ಧನಿರ್ಝರಪೂರಂ ॥ ೧೩೯

ಪಸರಿಸಿ ಪೊನ್ನ ಪಾಸಱೆಗಳೊಳ್ ಮಣಿಶೃಂಗಶತಾಂತರಾಳದೊಳ್ ।
ನುಸುಳ್ದು ತುಱುಂಬಿ ಮೇಖಳೆಗಳೊಳ್ ಸರಸೀಕುಳದೊಳ್ ಸಮಂತು ಮೇ॥
ಳಿಸಿ ಘನಗಹ್ವರೋದರದೊಳಾದಮೆ ತಿಂಬಿ ಸುಮೇರುಶೈಳದೆ ।
ಣ್ದೆಸೆಯೊಳಮುಬ್ಬರಂಬರಿದು ಪಾಲ ಪೊನಲ್ ಪಡೆದತ್ತು ಲೀಲೆಯಂ॥ ೧೪೦

ಶೈಲಪತಿಯೆನ್ನ ತಲೆಯೊಳ್ ।
ಪಾಲಂ ಕಱೆದಂ ಸುರೇಂದ್ರನಿನಿತು ಮಹತ್ವ ॥
ಕ್ಕಾಳಂಬಂಮಾಡಿದನೆಂ ।
ಬಾಳಾಪಮಿದೆನಿಸಿತಾ ಪಯಃಪ್ಲವರಾಗಂ ॥ ೧೪೧

ದೇವತೆಗಳೆಲ್ಲ ನಿಬ್ಬೆರೆಗುಗೊಂಡು ನೋಡುತ್ತಿರಲಾಗಿ–೧೩೭. ಜಿನಶಿಶು ಹೊರಡಿಸಿದ ನಿಶ್ವಾಸದ ಗಾಳಿಗೆ ದೇವತೆಗಳ ವಿಮಾನ ಸಮೂಹವೆಲ್ಲ ಆಕಾಶಸಮುದ್ರದಲ್ಲಿಯ ನೌಕೆಗಳೆಂಬಂತೆ ಭರದಿಂದ ಓಡಿಹೋದುವು. ೧೩೮. ಜಿನಾಭಿಷೇಕಮಹೋತ್ಸವದಲ್ಲಿ ಜಗುಲಿಗಿರಿಸಿದ ಚಿನ್ನದ ಧ್ವಜಸ್ತಂಭವೊ ಏನೊ ಎಂಬಂತೆ ಹಾಲಿನ ಪೂರವೆಂಬ ದುಕೂಲದಿಂದ ಆವೃತವಾದ ಮೇರುಪರ್ವತ ಕಂಗೊಳಿಸಿತು. ೧೩೯. ದೇವಗಂಗೆ ಹುಟ್ಟುವುದು ಹಿಮಪರ್ವತದಲ್ಲಿ ಅಲ್ಲ; ನಿಶ್ಚಿತವಾಗಿ ಮೇರುಗಿರಿಯಲ್ಲಿಯೆ ಉದಯಿಸುವುದು ಎಂಬಂತೆ ಈ ನೂತನವಾದ ಅಭಿಷೇಕದ ಕ್ಷೀರಪ್ರವಾಹವು ಹೊಮ್ಮಿತು. ೧೪೦. ಚಿನ್ನದ ಬಂಡೆಗಲ್ಲುಗಳ ಮೇಲೆ ಹಬ್ಬಿ ಹಾಯ್ದು, ನೂರಾರು ರತ್ನಶಿಖರಗಳಲ್ಲಿ ನುಸುಳಿ, ತಪ್ಪಲುಭೂಮಿಗಳನ್ನೆಲ್ಲ ತುಂಬಿ, ಸರೋವರಗಳಲ್ಲಿ ಕೂಡಿಕೊಂಡು, ಆಳವಾದ ಗವಿಗಳನ್ನೆಲ್ಲ ಮುಳುಗಿಸಿ, ಮೇರುಗಿರಿಯ ಎಂಟು ದಿಕ್ಕುಗಳಲ್ಲಿಯೂ ಅಬ್ಬರಿಸಿ ಹರಿದು, ಹಾಲ ಹೊಳೆ ವಿಲಾಸವನ್ನು ಪಡೆಯಿತು. ೧೪೧. "ಗಿರೀಂದ್ರನಾದ ಮೇರು ನನ್ನ ತಲೆಯಲ್ಲಿ ಹಾಲು ಕರೆದನು; ದೇವೇಂದ್ರನು ಇಷ್ಟೊಂದು ಮಹಿಮೆಗೆ ಕಾರಣನಾದನು" ಎಂದು ನುಡಿಯುತ್ತಿ

ಮೊದಲಂ ಬಳಸಿರೆ ಗುಂಟಿಸಿ ।
ದುದಕದವೊಲಭಿಷವಾಂಬು ಮೇರುನಗಂ ಸ್ಕಂ ॥
ಧದವೊಲಿರೆ ತೀರ್ಥಕರನ ।
ಗ್ರದೊಳಿಂದ್ರನ ಪುಣ್ಯಕುಜದ ಫಲದವೊಲಿರ್ದಂ ॥ ೧೪೨

ಕ್ಷೀರಸಮುದ್ರಮತ್ತ ಬಱಿಯಿತ್ತಮರರ್ ಮೊಗೆವೊಂದುಬೇಗದಿಂ ।
ಮೇರುನಗೇಂದ್ರಮಿತ್ತ ಮುೞುಗಿತ್ತು ಪರೀತಪಯಃಪ್ರವಾಹದಿಂ ॥
ತಾರಕಿತಂಬೊಲತ್ತ ನಭಮಾಯ್ತು ವಿಕೀರ್ಣಲವಪ್ರಪಂಚಸಂ ।
ಭಾರದಿನೆಂದೊಡೇವೊಗೞ್ವುದಿಂದ್ರನ ಮಾಱ್ಪ ಮಹಾಭಿಷೇಕಮಂ ॥ ೧೪೩

ಪರಿವ ತದಂಭಃಪೂರಾಂ ।
ತರದೊಳ್ ನಸು ತೇಂಕೆ ತಾರಕಾಖ್ಯೆಯುಮಾದಂ ॥
ತರಣಿಸಮಾಖ್ಯೆಯುಮಾಗಳ್ ।
ದೊರೆವೆತ್ತುವು ನಾಡೆ ತಾರೆಗಂ ಸೂರ್ಯಂಗಂ ॥ ೧೪೪

ಎಱಗಿದ ತುಂಬಿಗೆ ಬಿಂಬದ ।
ಕಱೆ ಪಾಸಟಿಯಾಗೆ ತೇಂಕಿ ಬಾಂದೊಱೆವೊನಲೊಳ್ ॥
ಮಿಱುಪ ಧವಳಸ್ಮಿತಾಬ್ಜದ ।
ತೆಱನಂ ಮಱಿಯಿಸಿದನಬ್ಜನುತಾಪ್ಲವದೊಳ್ ॥ ೧೪೫

ಅಂತತಿಕ್ರಾಂತಜ್ಯೋತಿಃಕಳಾಪಮುಂ ಪ್ರಾಪ್ತಪ್ರಥಮದ್ವೀಪಮುಮಾಗಿ

ರುವುದೊ ಏನೊ ಎಂಬಂತೆ ಆ ಕ್ಷೀರಜಲಪ್ರವಾಹದ ಮೊರೆತ ಕೇಳುತ್ತಿತ್ತು. ೧೪೨. ತಳದಲ್ಲಿ ಆವರಿಸಿಕೊಂಡ ಅಭಿಷೇಕ ಜಲ ಪಾತಿಯನ್ನು ತುಂಬಿದ ನೀರಂತೆ, ಮೇರುಪರ್ವತವು ಮರದ ಕಾಂಡದಂತೆ ಇರಲಾಗಿ, ಅದರ ಶಿಖರದಲ್ಲಿರುವ ತೀರ್ಥಕರನು ಪುಣ್ಯವೃಕ್ಷದ ಫಲದಂತೆ ಕಂಗೊಳಿಸಿದನು. ೧೪೩. ದೇವತೆಗಳು ಮೊಗೆಯುವ ಒಂದು ರಭಸದಿಂದ ಕ್ಷೀರಸಮುದ್ರ ಬರಿದಾಯಿತು; ಸುತ್ತುವರಿದು ಸುರಿವ ನೀರಿನಿಂದ ಮೇರುಪರ್ವತ ಮುಳುಗಿ ಹೋಯಿತು; ಸಿಡಿದೇಳುವ ತುಷಾರದಿಂದ ಆಕಾಶವೆಲ್ಲ ನಕ್ಷತ್ರಮಯವಾದಂತೆನಿಸಿತು ಎಂದ ಮೇಲೆ ಇಂದ್ರನು ಮಾಡುವ ಈ ಮಹಾಭಿಷೇಕದ ಸಡಗರವನ್ನು ಏನೆಂದು ಹೊಗಳುವುದು! ೧೪೪. ಹರಿದು ಬರುತ್ತಿರುವ ಆ ಜಲಪೂರದಲ್ಲಿ ನಕ್ಷತ್ರ ಮೊದಲಾದ ಆಕಾಶಗೋಲಗಳು ತೇಲುವಂತಾದುದರಿಂದ, ತಾರೆಗಳಿಗೆ "ತಾರಕ" (೧.ದಾಟಿಸುವಂತಹುದು ತೆಪ್ಪ. ೨. ನಕ್ಷತ್ರ) ಎಂದೂ ಸೂರ್ಯನಿಗೆ "ತರಣಿ" (೧. ನೌಕೆ, ೨. ಸೂರ್ಯ)ಎಂಬ ಹೆಸರೂ ಸಾರ್ಥಕವಾದುವು. ೧೪೫. ತನ್ನ ಬಿಂಬದೊಳಗಿನ ಕಳಂಕವು ಎರಗುವ ದುಂಬಿಗಳ ಹಿಂಡಿನಂತಿರಲು. ಆ ಪ್ರವಾಹದಲ್ಲಿ ತೇಲುತ್ತಿರುವ 'ಅಬ್ಜ'(ಚಂದ್ರ)ನು ಆಕಾಶಗಂಗೆಯಲ್ಲಿ ಕಂಗೊಳಿಸುವ ಬಿಳಿಯ 'ಅಬ್ಜ'(ಕಮಲ)ವನ್ನು ಮರೆಯಿಸಿದನು. ವ॥ ಹೀಗೆ ಆ ಪ್ರವಾಹವು ಜ್ಯೋತಿಷ್ಕ ಸಮೂಹವನ್ನು ಮೀರುವಂತೆ ಏರಿ,

ತದ್ದುಗ್ಧಸಂಕುಳಂ ದೆಸೆ ।
ಬಿದ್ದಂ ಪರಿದೆಯ್ದೆ ಬೆರಸಿ ನಿಲೆ ಲವಣೋದ ॥
ನ್ನದುಗ್ಧಜಳದಿಗಳ್ಗದ ।
ನುದ್ದೇಶಿಸಿ ಕವಿಗಳುಸಿರ್ವರೈಕ್ಯಮನಿನ್ನುಂ ॥ ೧೪೬

ಜಿನರಾಜಸ್ನಪನಾಂಬು ಪೊರ್ದಿ ಪರಿದಂದಿಂದಿತ್ತಲತ್ಯಂತಪಾ ।
ವನಮಾಗಿರ್ಪುವು ನಾಡೆ ರೂಡಿವಡೆದಂತೀ ದ್ವೀಪದೊಳ್ ಕೂಡೆ ಸ ॥
ಜ್ಜನತಾಸಂಶ್ರಯಮಾಗೆ ಪುಣ್ಯನದಿ ಪುಣ್ಯಕ್ಷೇತ್ರಮಾರಯ್ಯೆ ಪು ।
ಣ್ಯನಗಂ ಪುಣ್ಯಸರೋವರಪ್ರತತಿ ಪುಣ್ಯಾರಣ್ಯಮೆಂದೀಗಳುಂ ॥ ೧೪೭

ಅನಂತರಮನಂತಚತುಷ್ಟಯಾಧಿಪತ್ಯಕ್ಕಿದುವೆ ರಾಜ್ಯಾಭಿಷೇಕಮೆಂಬಂತೆ ಚತುಷ್ಕೋಣಕಳಶದಿಂ ಮಜ್ಜನಂಬುಗಿಸಿ ದರ್ಭಾನ್ನಪ್ರದೀಪಫಳಕುಳಂಗಳಿಂ ನೀರಾಜನವಿಧಾನಮನೊಡರ್ಚಿ ಸಂಗತಾನೇಕ ಮಂಗಳಗೀತಾತೋದ್ಯರವಂಗಳೆಸೆಯೆ ಕಾಶ್ಮೀರಕರ್ಪೂರಹರಿಚಂದನೋನ್ಮಿಶ್ರಿತಾರ್ಣಃಪ್ರಪೂರ್ಣ ಸೌವರ್ಣಘಟಂಗಳನೆತ್ತಿಕೊಂಡು

ಆ ದಿವಿಜಾಧಿಪರ್ ಮಿಸಿಸೆ ಗಂಧಜಲಂ ಜಿನನಂಗಸಂಗತಾ ।
ಮೋದದೊಳೊಂದಿ ಕಂಪು ತನಿಗೊರ್ವೆ ಮದಾಳಿಕುಳಕ್ಕೆ ನಿರ್ಭರಾ ॥
ಹ್ಲಾದಮನಿತ್ತು ಸಿಂಪಿಣಿಯಲಂಪನಮರ್ತ್ಯವಧೂಜನಕ್ಕೆ ಸಂ ।
ಪಾದಿಸಿ ಮತ್ತೆ ಮಾಡಿದುದು ಮಂದರಕಂ ಪರಿಖಾವಿಳಾಸಮಂ ॥ ೧೪೮

ಪ್ರಥಮದ್ವೀಪದವರೆಗೂ ಮುಟ್ಟಲಾಗಿ–೧೪೬. ಆ ಹಾಲಿನ ಪ್ರವಾಹವು ದೆಸೆದೆಸೆಯಾಗಿ ಹರಿದು ಲವಣ ಸಮುದ್ರದ ನೀರನ್ನು ಬೆರಸಿ ನಿಂತುದುದರಿಂದ ಕವಿಗಳು (ಹಾಲ್ಗಡಲು, ನೀರಕಡಲು ಎಂಬ) ಎರಡೂ ಸಮುದ್ರಗಳನ್ನು ಇನ್ನೂ ಒಂದೇ ಹೆಸರಿನಿಂದ ಕರೆಯುವರು [ಕವಿ ಸಮಯದಲ್ಲಿ ಭಿನ್ನ ಭಿನ್ನವಾದ ಎರಡು ವಸ್ತುಗಳಲ್ಲಿ ಭೇದವನೆಣಿಸದೆ ಒಂದೇ ಹೆಸರಿನಿಂದ ಕರೆಯುವುದುಂಟು. ಇದಕ್ಕೆ 'ಐಕ್ಯ' ವೆಂಬ ಹೆಸರು.] ೧೪೭. ಜಿನೇಶ್ವರಾಭಿಷೇಕದ ನೀರೇ ಹೆಚ್ಚು ಹರಿದು ಬಂದುದರಿಂದಾಗಿ ಈ ದ್ವೀಪದಲ್ಲಿಯ ನದಿ, ಕ್ಷೇತ್ರ, ಬೆಟ್ಟ, ಕಾಡುಗಳು ಪವಿತ್ರವಾಗಿ, ಇಂದಿಗೂ ಪುಣ್ಯನದಿ, ಪುಣ್ಯಕ್ಷೇತ್ರ, ಪುಣ್ಯಪರ್ವತ, ಪುಣ್ಯಸರೋವರ ಮತ್ತು ಪುಣ್ಯಾರಣ್ಯಗಳೆಂದು ಪ್ರಸಿದ್ಧವಾಗಿ ಸಜ್ಜನರಿಗೆ ಆದರಣೀಯವಾಗಿವೆ. ವ॥ ಅನಂತರ (ಅನಂತ ಜ್ಞಾನ, ಅನಂತ ದರ್ಶನ, ಅನಂತ ಸುಖ ಹಾಗು ಅನಂತವೀರ್ಯ ಎಂಬ) ನಾಲ್ಕು "ಅನಂತ" ಗಳ ಆಧಿಪತ್ಯಕ್ಕೆ ಇದೇ ರಾಜ್ಯಾಭಿಷೇಕವೆಂಬಂತೆ, ನಾಲ್ಕು ಕೋಣಗಳಲ್ಲಿರಿಸಿದ ಕಲಶಗಳಿಂದ ಸ್ನಾನ ಮಾಡಿಸಿ, ದರ್ಭೆ, ಅನ್ನ, ದೀಪ, ಮತ್ತು ಫಲಪೂರ್ವಕವಾಗಿ ನೀರಾಜನ ವಿಧಿಯನ್ನು ನೆರವೇರಿಸಿ, ಅನೇಕ ಮಂಗಳ ವಾದ್ಯ ಗೀತಗಳ ನಿನಾದಗಳು ಮನೋಹರವಾಗಿರಲಾಗಿ, ಕಾಶ್ಮೀರ, ಕರ್ಪೂರ, ಹರಿಚಂದನ ಮಿಶ್ರಜಲದಿಂದ ತುಂಬಿದ ಚಿನ್ನದ ಕೊಡಗಳನ್ನೆತ್ತಿಕೊಂಡು– ೧೪೮. ಆ ಇಂದ್ರರು ಸ್ನಾನ ಮಾಡಿಸಲಾಗಿ ಆ ಗಂಧೋದಕವು ಜಿನನ ದೇಹ ಪರಿಮಳವನ್ನು ಹೊಂದಿ ಅತಿಶಯ ಸುಗಂಧಮಯವಾಗಿ, ಮತ್ತ ದುಂಬಿ ಗಳಿಗೆ ಅತ್ಯಧಿಕ ಆಹ್ಲಾದವನ್ನಿತ್ತು, ದೇವವಧುಗಳಿಗೆ ಸಿಂಚನದ ಆನಂದ

ಸಕಳಸುರಸಮಿತಿ ತನತನ ।
ಗೆ ಕೊಂಡು ಜಿನಸವನಪರಮಪಾವನಗಂಧೋ ॥
ದಕಮಂ ತಳೆದಾದೆಂ ಸಾ ।
ರ್ಥಕತೆಯನೆಯ್ದಿಸಿದುದುತ್ತಮಾಂಗಕ್ಕಾಗಳ್ ॥ ೧೪೯

ಕುಳಿರ್ವಭಿಷೇಕಗಂಧಸಲಿಲಂಗಳನಾಗಳೆ ಮಸ್ತಕಾಗ್ರದೊಳ್ ।
ತಳೆದಲರ್ಗಣ್ಣೊಳೊತ್ತಿ ನಳಿತೋಳ್ಗಳೊಳೊಯ್ಯನೆ ಪೂಸಿ ಕೋಮಳಾಂ ॥
ಗುಳಿಗಳೊಳಟ್ಟಿಕೊಂಡೆರ್ದೆಯೊಳಂಟಿ ನಿರಾಕೃತಪಾಪತಾಪಮು ।
ತ್ಪುಳಕಕಂದಂಬಕಂ ನಲಿದುದಂದು ಕರಂ ದಿವಿಜಾಂಗನೋತ್ಕರಂ ॥ ೧೫೦

ಸವನನವಗಂಧಜಳಸಿಂ ।
ಧುವಿನೊಳ್ ನೀರಾಟದಿಂದೆ ರಮಿಯಿಸಿ ಮೆಱೆದ ॥
ತ್ತವಯವದೆ ದಿವಿಜಕೋಟಿಗೆ ।
ದಿವಿಜಗಜಂ ಗಂಧಸಿಂಧುರತ್ವಮನಾಗಳ್ ॥ ೧೫೧

ದುರಿತೋಪತಾಪಮಂ ಸಂ ।
ಹರಿಸಲುಮಖಿಲಜನಪುಣ್ಯಲತಿಕಾಂಕುರಮಂ ॥
ಪರಿವರ್ಧಿಸಲುಂ ನೆಱೆಯದೆ ।
ಪರಮಜಿನಸ್ನಾನಗಂಧಜಲಲವನಿವಹಂ ॥ ೧೫೨

ಸಮನಂತರಂ,

ವೊದಗಿಸಿ, ಮಂದರಗಿರಿಗೆ ಅಗಳ್ತೆಯ ವಿಲಾಸವನ್ನು ಉಂಟುಮಾಡಿತು. ೧೪೯. ಸಮಸ್ತ ದೇವತೆಗಳೂ ಜಿನಾಭಿಷೇಕದ ಪರಮ ಪವಿತ್ರ ಗಂಧೋದಕವನ್ನು ತಮ್ಮ ತಲೆಗಳಲ್ಲಿ ತಳಿದುಕೊಂಡು, "ಉತ್ತಮಾಂಗ" (೧. ಶ್ರೇಷ್ಠವಾದ ಅವಯವ, ೨. ತಲೆ) ಎಂಬ ಹೆಸರನ್ನು ಸಾರ್ಥಕಗೊಳಿಸಿದರು. ೧೫೦. ತಂಪಾದ ಆ ಅಭಿಷೇಕ ಗಂಧೋದಕವನ್ನು ತಲೆಗಳ ಮೇಲೆ ತಳಿದುಕೊಂಡು, ಅರಳುಗಣ್ಣುಗಳಿಗೆ ಒತ್ತಿಕೊಂಡು, ಕೋಮಲವಾದ ತೋಳುಗಳಿಗೆ ಮೆಲ್ಲನೆ ಬಳಿದುಕೊಂಡು, ಸುಕುಮಾರವಾದ ಕೈ ಬೆರಳುಗಳನ್ನು ಅದ್ದಿ ಎದೆಗೆ ಅಂಟಿಸಿಕೊಂಡು, ದೇವಾಂಗನೆಯರು ಪಾಪತಾಪಗಳನ್ನೆಲ್ಲ ನಿವಾರಿಸಿಕೊಂಡರು; ರೋಮಾಂಚನ ಗೊಂಡರು; ನಲಿದರು. ೧೫೧. ಅಭಿಷೇಕಗಂಧಜಲದ ಸಮುದ್ರದಲ್ಲಿ ನೀರಾಟ ವಾಡಿ ಐರಾವತವು ತಾನು ಗಂಧಗಜವೆಂಬುದನ್ನು ದೇವಸಮೂಹಕ್ಕೆ ಸುಲಭವಾಗಿ ತಿಳಿಸಿತು. ೧೫೨. ಪಾಪತಾಪವನ್ನು ಕೊನೆಗೊಳಿಸಲೂ ಸಮಸ್ತ ಜನರ ಪುಣ್ಯದ ಬಳ್ಳಿಯನ್ನು ಬೆಳೆಯಿಸಲೂ ಜಿನಾಭಿಷೇಕ ಜಲದ ಬಿಂದುಗಳೆ ಸಾಲವೆ ? ಆನಂತರ–

॥ ಮಾಳಿನಿ ॥

ಸುರಭಿಸಲಿಲದಿಂದಂ ಚಂದನಕ್ಷೋದದಿಂದಂ ।
ಸರಳಪದಕದಿಂದಂ ಪುಷ್ಪಮಾಳಾಳಿಯಿಂದಂ ॥
ಸರಸರುಚಕದಿಂದಂ ಪ್ರಜ್ವಲದ್ದೀಪದಿಂದಂ ।
ಸ್ಫುರದಗರುಸುಧೂಪೋದ್ದಾಮಧೂಮೌಘದಿಂದಂ ॥ ೧೫೩

ವರಫಳಕುಳದಿಂದಂ ಚಾಮರಚ್ಛತ್ರಕೇತೂ ।
ತ್ಕರಪರಿಕರದಿಂದಂ ನೂತ್ನರತ್ನಾಂಚಿತಾಳಂ ॥
ಕರಣನಿಚಯದಿಂದಂ ಸಾಂಗಸಂಗೀತದಿಂದಂ ।
ಪರಮಚರಣಪೂಜಾವ್ಯಾಪ್ತಿಯಂ ಭಕ್ತಿಯಿಂದಂ ॥ ೧೫೪

ವ॥ ಮಾಡಿ ಬಟಿಯಮರ್ಹದಭಿಮುಖಂ ಶತಮುಖನಖಿಳಸುರಸಮಿತಿವೆರಸು ಕುಟ್ಮಳಿತಕರಪುಟಘಟಿತಮಕುಟನಿಕಟನಾಗಿ

॥ ಹರಿಣೀ ॥

ಜಯ ಜಯ ಜಯಸ್ವೀಕಾರೇಚಾ ಗತಾಂತಕರಾಜದು ।
ರ್ಜಯ ಜಯ ಜಯ ಪ್ರೋದ್ಯತ್ಪಾಪಂ ಮದೀಯಮಧೀಶ ತ ॥
ರ್ಜಯ ಜಯ ಜಯವ್ಯಾಮೋಹಾದ್ದೇವ ಮಾಂ ಸಹಸಾಪಸ ।
ರ್ಜಯ ಜಯ ಜಯ ತ್ರೈಲೋಕ್ಯಾಶ್ಚರ್ಯಸದ್ವಿಭವಪ್ರಭಾ ॥ ೧೫೫

॥ ಮಾಳಿನೀ ॥

ಜನನಜಳಧಿಪಾರಂ ಗಂತುಮಿಚ್ಛೋರ್ಜನಸ್ಯ ।
ತ್ವಯಿ ಕೃತಪರಿಚರ್ಯಾ ಸ್ವಸ್ಯ ಸೌಖ್ಯಸ್ಯ ಹೇತುಃ ॥
ಪರಮಜಿನ ಯಥಾ ಸಾಂಯಾತ್ರಿಕಸ್ಯ ಪ್ರಯತ್ನಃ ।
ಪ್ರವಹಣದೃಢಕರ್ಮಣ್ಯಂಬುರಾಶಿಂ ವಿವಕ್ಷೋಃ ॥ ೧೫೬

೧೫೩. ಸುಗಂಧ ಜಲದಿಂದ, ಚಂದನರಸದಿಂದ, ಹೂಮಾಲೆಗಳಿಂದ, ಸುಂದರವಾದ ಪದಕದಿಂದ, ಚೆಲುವಾದ ಆಭರಣಗಳಿಂದ, ಉಜ್ವಲವಾದ ದೀಪಗಳಿಂದ, ಅಗುರುಧೂಪದ ಹೊಗೆಯಿಂದ–೧೫೪. ಉತ್ತಮವಾದ ಫಲಗಳಿಂದ, ಚಾಮರ–ಛತ್ರ–ಧ್ವಜಗಳೆ ಮೊದಲಾದವುಗಳಿಂದ, ನೂತನವಾದ ರತ್ನಾಭರಣಗಳಿಂದ, ಸಮಗ್ರ ಸಂಗೀತದಿಂದ ಕೂಡಿಕೊಂಡು ಪರಮೇಶ್ವರನ ಪಾದಪೂಜೆಯನ್ನು– ವ॥ ಮಾಡಿ, ಬಳಿಕ ಅರ್ಹಂತನಿಗೆ ಅಭಿಮುಖವಾಗಿ ಇಂದ್ರನು ಸರ್ವದೇವತಾ ಸಮೂಹದೊಡನೆ ಕೈಮುಗಿದು ಹಣೆಗಿಟ್ಟುಕೊಂಡು (ಹೀಗೆಂದು ಬೇಡಿಕೊಂಡನು)– ೧೫೫. "ಅಂತಕನಿಗೆ ದುರ್ಜಯನಾದ ದೇವನೆ ಜಯ ಜಯ ; ನನ್ನ ಪಾಪಗಳನ್ನೆಲ್ಲ ತೊಲಗಿಸು; ವ್ಯಾಮೋಹದಿಂದ ನನ್ನ ದೂರಗೊಳಿಸು; ತ್ರಿಲೋಕಗಳಿಗೆ ಆಶ್ಚರ್ಯವನ್ನುಂಟು ಮಾಡುವ ಪ್ರಭುವೆ ಜಯ ಜಯ. ೧೫೬. ಸಮುದ್ರದಲ್ಲಿ ಸಾಗುತ್ತಿರುವ ನಾವಿಕನು ತನ್ನ ನಾವೆಯನ್ನು ದೃಢವಾಗಿಟ್ಟುಕೊಳ್ಳಲು ಹೇಗೆ ಪ್ರಯತ್ನಿಸುವನೊ ಹಾಗೆ, ಸಂಸಾರಸಾಗರವನ್ನು ದಾಟಿ ಹೋಗ ಬಯಸುವವನು

॥ ವಸಂತತಿಳಕಂ ॥

ತ್ವಂ ಸೇವ್ಯಭವ್ಯಜನವತ್ಸಲ ಮಾಮಕೀನ ।
ಮಾಯುಸ್ತ್ವದೀಯಪದಪಲ್ಲವಸಕ್ತಭಕ್ತ್ಯಾ ॥
ಸ್ಮೃತ್ಯಾಪ್ರಸನ್ನ ಮಧುರೋಕ್ತಿನಿಯುಕ್ತನುತ್ಯಾ ।
ನತ್ಯಾ ಯಥಾ ವ್ರಜತಿ ದೇವ ತಥಾ ಕುರುಷ್ವ ॥ ೧೫೭

॥ ಸ್ಕಂದಕಂ ॥

ತ್ರಿಭುವನಚೂಡಾಮಣಯಃ ।
ಕಾಳೋರಗವಿಷಮಗರಳವಿಷಹರಮಣಯಃ ॥
ನತಜನಚಿಂತಾಮಣಯೋ ।
ಮಮ ಹೃದಿ ನಿವಸಂತು ಜೈನಪದನಖಮಣಯಃ ॥ ೧೫೮

ಎಂದಭಿವಂದಿಪುದುಮಾಗಳರ್ಹದಂಗಸಂಗತಜಳಲವಂಗಳಂ ಶಚಿ ಶುಚಿವಸ್ತ್ರಪಲ್ಲವದಿನೊತ್ತಿ ಕಳೆದು, ನಿರ್ಲೇಪಂಗೆ ಸುಗಂಧಾನುಲೇಪಮಂ ಸಮೆದು, ಇಕ್ಷ್ವಾಕುವಂಶಲಕ್ಷ್ಮೀಲಲಾಮಂಗೆ ಲಲಾಮಮನಿಟ್ಟು, ಕಾಶ್ಯಪಗೋತ್ರಪವಿತ್ರಂಗೆ ಕಟಿಸೂತ್ರಮಂ ಕಟ್ಟಿ, ನಿರಂಜನಪದೇಚ್ಛುಗಂಜನಮನೆಚ್ಚು, ಭುವನಭೂಷಣಂಗೆ ಬಾಳೋಚಿತಭೂಷಣಂಗಳಂ ತುಡಿಸಲೊಡಂ

ಮಣಿಮಯಕುಂಡಳಂ ಸಹಜವಿದ್ಧವಿರಾಜಿತಕರ್ಣದೊಳ್ ಶಿಖಾ ।
ಮಣಿ ಶಿಖೆಯೊಳ್ ಸುರತ್ನಕೃತಮಾಣವಕಂ ಗಳದೊಳ್ ಹಿರಣ್ಮಕಿಂ ॥

ನಿನ್ನ ಪರಿಚರ್ಯೆ ಮಾಡಿ ತನ್ನ ಪರಮ ಸುಖವನ್ನು ದೃಢಪಡಿಸಿಕೊಳ್ಳುತ್ತಾನೆ. ೧೫೭. ನನ್ನ ಆಯುಷ್ಯವೆಲ್ಲ ನಿನ್ನ ಪಾದಪಲ್ಲವಗಳ ಭಕ್ತಿಯಿಂದ, ಸ್ಮರಣೆಯಿಂದ, ಪ್ರಸನ್ನ ಹಾಗು ಮಧುರ ಸ್ತೋತ್ರದಿಂದ, ನಮಸ್ಕಾರದಿಂದ ಕೂಡಿಕೊಂಡೆ ಸಾಗುವಂತೆ ಅನುಗ್ರಹಿಸು. ೧೫೮. ತ್ರಿಲೋಕ ಚೂಡಾಮಣಿಗಳೂ, ಕಾಳೋರಗ ವಿಷಾಪಹಾರಿ ಮಣಿಗಳೂ, ಶರಣಾಗತರಿಗೆ ಚಿಂತಾಮಣಿಗಳೂ ಆದ ನಿನ್ನ ಕಾಲುಗುರಮಣಿಗಳು ನನ್ನ ಹೃದಯದಲ್ಲಿ ನೆಲೆಸುವಂತೆ ಅನುಗ್ರಹಿಸು." ವ॥ ಎಂದು ಸ್ತೋತ್ರ ಪೂರ್ವಕವಾಗಿ ವಂದಿಸಿದ ಬಳಿಕ ಅರ್ಹಂತನ ಮೈಮೇಲಿನ ಜಲಬಿಂದುಗಳನ್ನು ಶಚಿಯು ಶುಚಿಯಾದ ಬಟ್ಟೆಯ ಮೃದುವಾದ ಸೆರಗಿನಿಂದ ಒತ್ತಿ ಕಳೆದು, ನಿರ್ಲೇಪನಾದ ಆ ಮಹಾತ್ಮನಿಗೆ ಸುಗಂಧವನ್ನು ಲೇಪಿಸಿ, ಇಕ್ಷ್ವಾಕುವಂಶದ ಲಲಾಮ(ಭೂಷಣ) ನಿಗೆ ಲಲಾಮ(ತಿಲಕ)ವನ್ನಿಟ್ಟು, ಕಾಶ್ಯಪಗೋತ್ರವನ್ನು ಪವಿತ್ರಗೊಳಿಸಿದ ಆತನಿಗೆ ಉಡೆನೂಲನ್ನು ಅಳವಡಿಸಿ, ನಿರಂಜನ ಪದಾಪೇಕ್ಷಿ (ಮೋಕ್ಷಾಪೇಕ್ಷಿ)ಗೆ, ಅಂಜನ (ಕಾಡಿಗೆ)ವನ್ನು ಉಚ್ಚಿ. ಲೋಕಭೂಷಣನಿಗೆ ಬಾಲಯೋಗ್ಯಭೂಷಣಗಳನ್ನು ತೊಡಿಸಲಾಗಿ–೧೫೯. ಜನ್ಮತಃ ಸಿದ್ಧವಾಗಿದ್ದ ವೆಜ್ಜದಲ್ಲಿ ರತ್ನಮಯ ಕುಂಡಲಗಳು, ತಲೆಯಲ್ಲಿ ಚೂಡಾಮಣಿ, ಕೊರಳಲ್ಲಿ ಮಾಣವಕ (ಹದಿನಾರು

ಕಿಣಿ ಕಟಿಯೊಳ್ ರಣದ್ರುಚಿರಕಂಕಣಮಾ ಮಣಿಬಂಧದೊಳ್ ಸ್ಫುರತ್ ।
ಫ್ಪಣಿಗಣನೂಪುರಂ ಚರಣದೊಳ್ ದೊರೆವೆತ್ತುವು ದೇವದೇವನಾ ॥ ೧೪೯

ಆಗಳ್

ತೂಕರಿಸಿ ಪರಸಲೆಂದು ಶ ।
ಚೀಕಾಂತೆಯೊಡರ್ಚೆ ನಾಣ್ಚಿ ತಲೆವಾಗಿ ಬಟಿ ॥
ಕ್ಕಾಕೆ ಜಿನವ್ಯಪಗತಬೋ ।
ಧಾಕೃತಿಯೆಂದದನೆ ನುಡಿಗೆ ನತಿಗೇಜೆಸಿದಳ್ ॥ ೧೬೦

ಅತಿಶಯಮಂ ಜಿನಪತಿಯಾ ।
ಕೃತಿಯನಭೀಕ್ಷಿಸುವ ಪೊಗಟ್ವಪೇಕ್ಷೆಯೊಳೆ ದಿವ ॥
ಸ್ಪತಿಯುಂ ಫಣಿಪತಿಯುಂ ಪರಿ ।
ವೃತನಯನಸಹಸ್ರಮುಖಸಹಸ್ರರುಮಾದರ್ ॥ ೧೬೧

ಅಂತು ನಿಷ್ಠಾಪಿತಪರಮೇಷ್ಠಿಜನ್ಮಾಭಿಷೇಕನಾಗಿ

ಕನಕನಗಾಗ್ರದಿಂದೆ ಹಿಮವದ್ಗಿರಿಚೂಳಿಕೆಗುಯ್ವ ಲೀಲೆಯಿಂ ।
ಜಿನಪತಿಯಂ ಮರುತ್ಪತಿ ನಿಜದ್ವಿಪಮಸ್ತಕದಲ್ಲಿಗುಯ್ದು ಮೆ ॥
ಲ್ಲನೆ ನವದಿವ್ಯವಸ್ತ್ರಪಿಹಿತಾಂಕದೊಳಿಟ್ಟು ತಳರ್ಚಿದಂ ಬಟಿ ।
ಕ್ಕನಿತುಮನಭ್ರವೀಧಿಯೊಳೆ ಚಂದ್ರಪುರಕ್ಕೆ ಚತುರ್ನಿಕಾಯಮಂ ॥ ೧೬೨

ಆಗಳ್

ಸುರನಿಕರಕಳಕಳಂ ಮಸು ।
ಳ್ದಿರೆ ಗರ್ಜನೆ ಮಾಣ್ದ ಶಾರದೋತ್ತುಂಗಪಯೋ ॥

ಎಳೆಗಳ ಮುತ್ತಿನ ಸರ), ಸೊಂಟದಲ್ಲಿ ಚಿನ್ನದ ಕಿರುಗಜ್ಜೆ, ಮುಂಗೈಗಳಲ್ಲಿ ನಾದಮಯವಾದ ಚಿನ್ನದ ಕಂಕಣಗಳು, ಕಾಲಲ್ಲಿ ಥಳಥಳಿಸುವ ಅಂದುಗೆಗಳು ಅಂದವಾಗಿ ಒಪ್ಪಿದುವು. ಆಗ–೧೬೦. (ನೆತ್ತಿಯ ಮೇಲೆ) ತೂಕರಿಸಿ ಹರಸಲೆಂದು ಇಂದ್ರಾಣಿಯು ಹೊರಟು ನಾಚಿ ತಲೆ ಬಾಗಿದಳು. ಬಳಿಕ ಜಿನದರ್ಶನ ಸಂಭ್ರಮದಿಂದ ಅರಿವುಗಟ್ಟೆನೆಂದು ನುಡಿದು ನಮಸ್ಕರಿಸಿದಳು. ೧೬೧. ಜಿನೇಶ್ವರನ ರೂಪವನ್ನು ಸಮಗ್ರವಾಗಿ ನೋಡಲೆಂದೇ ಇಂದ್ರನು ಸಾವಿರ ಕಣ್ಣುಗಳನ್ನು ಪಡೆದನು; ಜಿನಸ್ತುತಿಗೆ ಸಮರ್ಥನಾಗಲೆಂದೇ ಶೇಷನು ಸಾವಿರ ಮುಖಗಳನ್ನು ಪಡೆದನು. ವ॥ ಹೀಗೆ ಅರ್ಹಂತನ ಜನ್ಮಾಭಿಷೇಕವನ್ನು ನೆರವೇರಿಸಿದ ಬಳಿಕ–೧೬೨. ಜಿನಪತಿಯನ್ನು ಮೇರುಗಿರಿಶಿಖರದಿಂದ ಹಿಮವಂತಗಿರಿಶಿಖರಕ್ಕೆ ಕರೆದೊಯ್ಯಲೆಂದು ದೇವೇಂದ್ರನು ಐರಾವತದ ಮೇಲೇರಿಸಿ, ನೂತನವಾದ ದಿವ್ಯವಸ್ತ್ರ ಹೊದಿಸಿದ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಕಾಶಮಾರ್ಗವಾಗಿ ಚತುರ್ನಿಕಾಯ ದೇವತೆಗಳನ್ನೆಲ್ಲ ಚಂದ್ರಪುರಕ್ಕೆ ಹೊರಡಿಸಿದನು. ಆಗ–೧೬೩. ದೇವತಾ ಸಮೂಹದ ಕಳಕಳವೆಲ್ಲ ತೊಲಗಿದ ಮೇಲೆ ಅಭಿಷೇಕದ ಹಾಲತೊರೆಯಲ್ಲಿ ಮಿಂದ ಮೇರುಗಿರಿಯು

ಧರಕೂಟಮೆನಿಸಿದುದು ಮಂ।
ದರಶೈಳಂ ಸವನದುಗ್ಧಲಹರೀದಿಗ್ಧಂ॥ ೧೬೩

ಓಸರಿಸೆ ಕಳಕಳಂ ಸುರ।
ರಾ ಸಮಯದೊಳೋದಿ ಪೋದ ಶಾಸ್ತ್ರಾಭ್ಯಾಸ॥
ಪ್ರಾಸಾದಮೆಂಬ ವಾಗ್ವಿ।
ನ್ಯಾಸಕ್ಕೆಡೆಯಾಗಿ ಬಿನ್ನನಿರ್ದುದಗೇಂದ್ರಂ॥ ೧೬೪

ಸುರವೃಂದಾರಕಕೌಸುಮ।
ಪರಾಗಸಂದೋಹವಾತ್ಯೆ ನೆಗಪಿತ್ತತ್ತಂ॥
ಬರದೊಳ್ ಪಿಂದನೆ ಮಂದರ।
ಗಿರಿ ಬಂದಪುದೆಂಬ ಸಂದೆಗದ ದಂದುಗಮಂ॥ ೧೬೫

ಅಂತು ಬಂದು ಬಹಿಃಪುರದೊಳವತರಿಸಿ ಬಟೆಯಮಷ್ಟಮತೀರ್ಥಕರನ ಬರವಿನೊಸಗೆಯೊಳಪ್ಪ ಶೋಭಾಪರಿಪುಷ್ಟಮಪ್ಪ ಪುರಮಂ ಪುರಂದರಂ ಪುಗುವಾಗಳಮರಸೈನ್ಯಕಳಕಳಾವಿಳಭೂರಿಭೇರೀ ಪ್ರಣಾದಸಂಪಾದಿತಪ್ರಮೋದಪರವಶಂ ನೆಱೆದು ಬಂದು ಶೃಂಗಾಟಕಸವಿಧಸೌಧಸೌಧೋತ್ಸಂಗದೊಳ್ ನಿಂದು ವಿವಿಧಾರ್ಘ್ಯಾಂಜಳಿಗಳಂ ಕೊಟ್ಟು

ತನತನಗೆಱಗಿದುದು ಪುರೀ।
ಜನಮೀಕ್ಷಿಸಿ ದೇವರಾಜನಂಕಸ್ಥಿತನಂ॥
ಜಿನರಾಜನನಲರ್ದೊಪ್ಪುವ।
ಮನಂಗಳುಂ ಮುಗಿದ ಕೈಗಳುಂ ಬೆರಸಾಗಳ್॥ ೧೬೬

ಗುಡುಗಿಲ್ಲದ ಶರನ್ಮೇಘಗಳ ಕೂಟವೆನಿಸಿತು. ೧೬೪. ದೇವತೆಗಳ ಕಲಕಲಧ್ವನಿ ದೂರವಾಗಲಾಗಿ, ಓದು ಮುಗಿಸಿ ಎಲ್ಲರೂ ಹೋದ ಬಳಿಕ ಖಾಲಿಯಾದ ಶಾಸ್ತ್ರಾಭ್ಯಾಸದ ಶಾಲೆಯಂತೆ ಭಣಗುಡುತ್ತಿತ್ತು. ೧೬೫. ದೇವಸಮೂಹದ ಪುಷ್ಪಪರಾಗಸಂಚಯದಿಂದ ಕೂಡಿದ ಸುಟ್ಟುರೆ ಗಾಳಿಯೊಂದು ಆಕಾಶದಲ್ಲಿ ಎತ್ತರದವರೆಗೆ ಎದ್ದು ಬಂದು, ಮಂದರಗಿರಿ ಇವರ ಹಿಂದೆಯೆ ನಡೆದು ಬಂದಿತೊ ಏನೊ ಎಂಬ ಸಂದೇಹವನ್ನುಂಟು ಮಾಡಿತು. ವ॥ ದೇವೇಂದ್ರನು ಪರಿವಾರದೊಂದಿಗೆ ಬಂದು ಪುರದ ಹೊರವಲಯದಲ್ಲಿ ಇಳಿದು, ಬಳಿಕ ಅಷ್ಟಮ ತೀರ್ಥಕರನ ಆಗಮನಕ್ಕಾಗಿ ಅಷ್ಟಶೋಭೆಗಳಿಂದ ಅಲಂಕರಿಸಿದ ನಗರವನ್ನು ಹೊಗುವಾಗ, ದೇವಸಮೂಹದ ಕಳಕಳ, ಘನವಾದ ಭೇರೀನಿನಾದಗಳಿಂದ ಮೋದಗೊಂಡು ಪರವಶರಾಗಿ ನೆರೆದು, ಸೌಧಗಳಲ್ಲಿ ಉಪ್ಪರಿಗೆಗಳಲ್ಲಿ ನಿಂತು ನಾನಾ ಬಗೆಯ ಅರ್ಘ್ಯಗಳನ್ನು ಕೊಟ್ಟು–೧೬೬. ದೇವೇಂದ್ರನ ತೊಡೆಯ ಮೇಲಿರುವ ಜಿನೇಶ್ವರನನ್ನು ಕಂಡು ಮನವರಳಿ, ಕೈಮುಗಿದು ಪುರಜನರು ನಮಸ್ಕರಿಸಿದರು.

ದಿವಿಜಗಜಾಗ್ರದೊಳಿರ್ದುಂ ।
ಭುವನಾಗ್ರದೊಳಿರ್ದನೆನಿಸಿದಂ ಹರಿಯಂ ತಾ ॥
ನವಳಂಬಿಸಿರ್ದುಮಖಿಳ ।
ಕ್ಕವಳಂಬನಮೆನಿಸಿದಂ ಜಿನಾರ್ಭಕನೀಗಳ್ ॥ ೧೬೭

ದೊರೆವೆತ್ತುದು ಪೃಥುಕತ್ವಂ ।
ಪರಮನೊಳಾತ್ಮೀಯಜನನಿಯುದರದೊಳಿರ್ದುಂ ॥
ಪರಿಕಿಪೊಡಾಕ್ರಾಂತಚರಾ ।
ಚರಗೋಚರಸಕಳಭುವನನಾದುದಜೆಂದಂ ॥ ೧೬೮

ಎಂದಭಿವರ್ಣಿಸುತಿರ್ಪನ್ನೆಗಂ ಪ್ರವೃದ್ಧೋತ್ಸಾಹಬುದ್ಧಿವೃದ್ಧಂ ವೃದ್ಧಶ್ರವಂ ನಿರ್ಧಾರಿತ ಮಹರ್ಧಿಕಾಮರಸಮಾಜಂ ರಾಜಮಂದಿರಮಂ ಮಂದರೋಪಮಮಂ ಪೊಕ್ಕು ಮುನ್ನಮೆ ಕಲ್ಪಜಶಿಲ್ಪಿ ಜನಪರಿಕಲ್ಪಿತಮಾಗಿರ್ದನಲ್ಪಮಣಿಮಂಟಪದೊಳಘದ್ವಿಪಗಜಾರಿಯಂ ಗಜಾರಿಪೀಠಾಧಿರೂಢಂ ಮಾಡ ಲೊಡಂ

ಸುತಮುಖನಿರೀಕ್ಷಣೋತ್ಸುಕ ।
ಮತಿಗಳ್ ಭೂಭುಜನುಮರಸಿಯುಂ ಪರಿತಂದ ॥
ಪ್ರತಿಮನನೀಕ್ಷಿಸಿ ನಯನ ।
ದ್ವಿತಯಕ್ಕೊಡರಿಸಿದರಂತವರ್ ಸಫಲತೆಯಂ ॥ ೧೬೯

ಆಗಳವರನುಚಿತವಿಷ್ಟರೋಪವಿಷ್ಟರಂ ಮಾಡಿ

೧೬೭. "ಐರಾವತದ ಮೇಲಿದ್ದರೂ ಜಿನನು ಲೋಕಾಗ್ರದಲ್ಲಿರುವನೆಂದೆನಿಸಿದನು; ಇಂದ್ರನ ಆಶ್ರಯದಲ್ಲಿ ಇದ್ದರೂ ಸರ್ವಕ್ಕೂ ತಾನೆ ಆಶ್ರಯನೆನಿಸಿದನು. ೧೬೮. ತನ್ನ ತಾಯಿಯ ಗರ್ಭದಲ್ಲಿದ್ದರೂ ಸಮಸ್ತ ಚರಾಚರ ಭುವನವನ್ನೆಲ್ಲ ಕಂಡು ತಿಳಿಯಬಲ್ಲವ ನಾದುದರಿಂದ ಪರಮೇಶ್ವರ ಶೈಶವವು ಅತಿಶಯವಾದ ಮಹಿಮೆಯುಳ್ಳದು". ವ॥ ಹೀಗೆಂದು ಅವರು ಹೊಗಳುತ್ತಿರುವಾಗ ಅತ್ಯಂತ ಉತ್ಸಾಹ ಬುದ್ಧಿಯುಳ್ಳ ದೇವ ಸಮೂಹವು ಮಂದರಗಿರಿಯಂತಿರುವ ಅರಮನೆಯನ್ನು ಪ್ರವೇಶಿಸಿ, ಈ ಮೊದಲೆ ಕಲ್ಪಲೋಕದ ಶಿಲ್ಪಿಗಳು ನಿರ್ಮಿಸಿದ್ದ ವಿಶಾಲವಾದ ರತ್ನಮಂಡಪದಲ್ಲಿ, ಪಾಪ ಗಜ ವೈರಿಯಾದ ಜಿನೇಶ್ವರನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದರು. ೧೬೯. ಮಗನ ಮುಖ ವನ್ನು ನೋಡಲು ಉತ್ಸುಕರಾಗಿ ಅರಸನೂ ಅರಸಿಯೂ ಅಲ್ಲಿಗೆ ಧಾವಿಸಿ ಬಂದು ಅಪ್ರತಿಮನನ್ನು ಕಂಡು ತಮ್ಮ ಕಣ್ಣುಗಳನ್ನು ಸಫಲಗೊಳಿಸಿಕೊಂಡರು. ವ॥ ಆಗ

ಭುವನಜ್ಯಾಯನ ತಂದೆ ತದ್ವಿಭುವ ತಾಯೆಂಬೊಂದು ಸಯ್ಪಿಂಗೆ ನೋಂ ।
ತವರಾರ್ ನಿಮ್ಮವೊಲೆಂದು ಬಣ್ಣಿಸಿ ಸಹಸ್ರಾಕ್ಷಂ ಮಹಾಸೇನಭೂ ॥
ಧವನಂ ಪೆರ್ಮೆಯ ಲಕ್ಷ್ಮಣಾರಮಣಿಯಂ ದಿವ್ಯಾಂಬರಾಲೇಪಮಾ ।
ಲ್ಯವಿಭೂಷಾದಿಗಳಿಂದೆ ಪೂಜಿಸಿದನಾವೊಂ ಪೂಜಿಸಂ ಪೂಜ್ಯರಂ ॥ ೧೭೦

ದೊರಕೊಳೆ ಪದಾರ್ಥಸಂಶಯ ।
ಮಿರದಾಗಳೆ ಬಂದು ಜಿನಪಿತೃದ್ವಂದ್ವಮನಾ ॥
ದರದಿಂ ಬಲಗೊಳಲೊಡನೋ ।
ಸರಿಕುಮದೆನೆ ಪೊಗಟಲಱಿವರಾರವರಱಿವಂ ॥ ೧೭೧

ಎಂದು ವಾಸುಗಿಯುಂ ಪೊಗಟ್ಟು ಪೂಜಿಸಿದಂ, ಆಗಳ್ ವಾಸವಂ ಜನ್ಮಾಭಿಷೇಕೋತ್ಸವಮನವರ್ಗೆ ತೀರ್ಥಕರಜನ್ಮಕ್ರಮಮಿದೆಂದಱಿಯೆ ತಿಳಿಪುವುದುಮವರತ್ಯಂತಸಂತೋಷಾಕ್ರಾಂತಸ್ವಾಂತರಾಗಿ

ಸುರರಾಜಂ ಮದಧೀಶ್ವರಂ ಶಿಶು ದಲೆಂದೇನಿರ್ದನೇ ತಾಂ ಮಹ ।
ತ್ತರನಾದಂ ಶಚಿ ದಾದಿಯಾದಳಮರರ್ ಪೇಟ್ದಿಂತುಟಂ ಮಾಟ್ಪಕಿಂ ॥
ಕರರಾದರ್ ನವದಿವ್ಯವಸ್ತುಚಯಮಸ್ಮದ್ಗೇಹದೊಳ್ ನೋಟಕ್ಕೊಡು ।
ಬ್ಬರಮಾಯ್ತಾದೊಡಮೇನೊ ಮತ್ಸುತನ ಪುಣ್ಯಕ್ಕಿಂತಿದಾಶ್ಚರ್ಯಮೇ ॥ ೧೭೨

ಅವರಿಬ್ಬರನ್ನೂ ಯೋಗ್ಯವಾದ ಪೀಠಗಳಲ್ಲಿ ಕುಳ್ಳಿರಿಸಿ– ೧೭೦. "ಲೋಕಕ್ಕೆ ಹಿರಿಯನಾದ ಪ್ರಭುವಿಗೆ ತಂದೆ ತಾಯಿಗಳಾಗುವ ಭಾಗ್ಯವನ್ನು ನಿಮ್ಮಂತೆ ಇನ್ನಾರು ಪಡೆದಾರು?" ಎಂದು ಹೊಗಳಿ ಇಂದ್ರನು ಮಹಾಸೇನರಾಜನನ್ನೂ ಮಹಿಮಾವಂತಳಾದ ಲಕ್ಷ್ಮಣಾ ದೇವಿಯನ್ನೂ ದಿವ್ಯವಾದ ವಸ್ತ್ರಲೇಪನ, ಮಾಲೆ, ಆಭರಣ ಮೊದಲಾದುವುಗಳಿಂದ ಪೂಜಿಸಿದನು. ಪೂಜ್ಯರನ್ನು ಪೂಜಿಸದವನು ಯಾರು? ೧೭೧. "ಯಾರಿಗಾದರೂ ತತ್ವಾರ್ಥ ಸಂಶಯ ಬಂದಿದ್ದರೆ, ಅವರು ಜಿನನ ತಾಯ್ತಂದೆಗಳನ್ನು ಪ್ರದಕ್ಷಿಣೆ ಮಾಡಿದರೆ ಸಾಕು–ಆ ಸಂಶಯ ನಿವಾರಣೆಯಾಗಿ ಹೋಗುವುದು, ಎಂದಮೇಲೆ ಅವರ ಜ್ಞಾನವನ್ನು ಹೊಗಳಬಲ್ಲವರಾರು?" ವ॥ ಹೀಗೆಂದು ಶೇಷನೂ ಹೊಗಳಿ ಪೂಜಿಸಿದನು. ಆಗ ಇಂದ್ರನು ಅವರಿಗೆ ಜಿನನ ಜನ್ಮಾಭಿಷೇಕ ವೃತ್ತಾಂತವನ್ನು ನಿವೇದಿಸಿ ತೀರ್ಥಕರ ಜನ್ಮಕಾಲದಲ್ಲಿ ಹೀಗೆ ನಡೆಯುವುದೆ ಕ್ರಮವೆಂದು ಅವರಿಗೆ ತಿಳಿಯಪಡಿಸಿದನು, ಅವರು ಅತ್ಯಂತ ಸಂತೋಷಪಟ್ಟು–೧೭೨. "ನನ್ನ ಒಡೆಯನು ಶಿಶುವೆಂದು ದೇವೇಂದ್ರನು ಭಾವಿಸದೆ ಮಹತ್ತರನಾದನು; ಇಂದ್ರಾಣಿ ದಾದಿಯಾದಳು; ದೇವತೆಗಳು ಹೇಳಿದ ಕೆಲಸ ಮಾಡುವ ಕಿಂಕರರಾದರು; ನೂತನವಾದ ದಿವ್ಯವಸ್ತುಗಳ ರಾಶಿ ನಮ್ಮ ಮನೆಯಲ್ಲಿ ಅದ್ಭುತವಾಯಿತು, ಆದರೇನು? ನನ್ನ ಮಗನ ಪುಣ್ಯಕ್ಕೆ ಇದೇನು ಸೋಜಿಗವೆ ?"

ಎಂದು ಜಗದ್ಗುರುಜನನೀಜನಕರ್ ತಮ್ಮೊಳತಿಸಮ್ಮದದಿಂ ನುಡಿದು ಜಾತಕರ್ಮೋತ್ಸವ ಮನೊಡರ್ಚಿದಾಗಳ್

ಆತತಕೀರ್ಣಚೂರ್ಣಪಟವಾಸದಿನಾವೃತದಿಕ್ಸಮೂಹಪಿ ।
ಷ್ಟಾತಕದಿಂ ಬಲೀಕೃತನವಾರುಣನೀರರುಹಾಳಿಯಿಂ ಸಮು ॥
ದ್ಯೋತಿತರತ್ನಭೂಷನದಿನುಜ್ವಲತೋರಣಶೋಣಪಲ್ಲವ ।
ವ್ರಾತದಿನೇಕರಾಗರಸಪೂರಿತಮಾಯ್ತೆನಿಸಿತ್ತು ತತ್ಪುರಂ ॥ ೧೭೩

ಸುರನರಗಾಯಿಕಾನಿಚಯಸಂಗತಮಂಗಳಗೀತನಾದದಿಂ ।
ಸುರನರವಾದಕಪ್ರಕರವಾದ್ಯಸಮುದ್ಗತಹೃದ್ಯಶಬ್ದದಿಂ ॥
ಸುರನರನರ್ತಕೀಲಲಿತನರ್ತನವರ್ತನದಿಂ ನೃಪೇಂದ್ರಮಂ ।
ದಿರಮದು ದಿವ್ಯಮಾನುಷವಿಳಾಸರಸಾತ್ಮಕಮಾದುದಾವಗಂ ॥ ೧೭೪

ಮನೆಯಿವು ವಿಮಾನಮಿವು ಪರಿ ।
ಜನಮಿದು ಸುರಜನಮಿದರಸನಿವನಿಂದ್ರಮಿವಂ ॥
ಜನಪಸತಿಯೀಕೆ ಶಚಿಯೀ ।
ಕೆ ನೋಟಕ್ಕೊಡೆಂದಱಿಯಲರಿದದೇಂ ಸಿರಿ ಪಿರಿದೋ ॥ ೧೭೫

ಸುರಜನಮುಂ ಪುರಜನಮುಂ ।
ಪರಿಜನಮುಂ ಪರಮಪುರುಷಜನ್ಮೋತ್ಸವನಿ ॥

ವ॥ ಹೀಗೆಂದ ಲೋಕಗುರುವಿನ ತಂದೆತಾಯಿಗಳು ಅತ್ಯಂತ ಸಂತೋಷದಿಂದ ತಮ್ಮೊಳಗೆ ನುಡಿದುಕೊಂಡು, ಜಾತಕರ್ಮಕ್ಕೆ ಉದ್ಯುಕ್ತರಾಗಲು–೧೭೩. ಎತ್ತೆತ್ತಲೂ ಪಸರಿಸಿದ ಪಟವಾಸಚೂರ್ಣದಿಂದ ದಿಕ್ಕುಗಳೆಲ್ಲ ತುಂಬಲಾಗಿ, ಪಿಷ್ಟಾತಕದಿಂದಲೂ, ಹೂಬಲಿಯಾಗಿರಿಸಿದ ನವೋದಿತ ಕೆಂದಾವರೆಗಳಿಂದಲೂ, ಉಜ್ವಲವಾದ ರತ್ನಾಭರಣಗಳಿಂದಲೂ, ಮಿರುಗುವ ತೋರಣದ ಕೆಂದಳಿರುಗಳಿಂದಲೂ ರಾಗರಸ ಪೂರ್ಣವಾಗಿರುವಂತೆ ಆ ನಗರವು ತೋರಿತು. ೧೭೪. ಮಂಗಳಗೀತಗಳಲ್ಲಿ, ವಾದ್ಯವಾದನದಲ್ಲಿ, ಲಲಿತ ನರ್ತನದಲ್ಲಿ ದೇವ ಕಲಾವಿದರೂ ಮನುಷ್ಯ ಕಲಾವಿದರೂ ಕೂಡಿಯೆ ತೊಡಗಿದ್ದುದರಿಂದ ಆ ಅರಮನೆಯು ದೇವತೆಗಳಿಗೂ ಮನುಷ್ಯರಿಗೂ ಉಭಯ ಸಾಮಾನ್ಯವಾದ ವಿಮಾನವೆಂಬಂತೆ ರಸಮಯವಾಗಿ ಶೋಭಿಸಿತು. ೧೭೫. ಇವು ಮನೆಗಳು, ಇವು ವಿಮಾನಗಳೆಂದಾಗಲಿ, ಇವರು ರಾಜಪರಿವಾರ ದವರು, ಇವರು ದೇವತೆಗಳು ಎಂದಾಗಲಿ, ಈತನು ಅರಸು, ಈತನಿಂದ್ರನೆಂದಾಗಲಿ, ಈಕೆ ಅರಸಿ, ಈಕೆ ಶಚೀದೇವಿಯೆಂದಾಗಲಿ ಅರಿತುಕೊಳ್ಳುವುದು ಕಷ್ಟವೆನಿಸಿತು, ಎಂದಮೇಲೆ ಆ ವೈಭವದ ಹಿರಿಮೆಯನ್ನು ಏನೆಂದು ಹೇಳೋಣ ? ೧೭೬. ಸುರಜನರು, ಪುರಜನರು, ಪರಿವಾರ ಜನರು–ಎಲ್ಲರೂ ಪರಮಾತ್ಮನ ಜನ್ಮೋತ್ಸವದ

ರ್ಭರತರಹರ್ಷರಸಾಮೃತ ।
ಶರಧಿಯೊಳೇಂ ಕೂಡೆ ಮೂಡಿ ಮುಟ್ಕಾಡಿದುದೋ ॥ ೧೭೬

ಅಂತು ನಾಟಕಂನಲಿವುದಂ ಕಂಡು ತಾನುಂ "ಆನಂದಸೀಮಾ ಖಲು ನೃತ್ಯಸೇವಾ" ಎಂಬ ನಾಟ್ಯವೇದಾರ್ಥಮಂ ಸಮರ್ಥಿಸುವಂತೆ ರಸಂ ಭಾವಂ ಅಭಿನಯಂ ಧರ್ಮಿ ಪ್ರವೃತ್ತಿ ಸಿದ್ಧಿ ಸ್ವರ ಮಾತೋದ್ಯಂ ಗಾನಂ ರಂಗಂ ಸಂಗ್ರಹಮೆಂಬ ಪನ್ನೊಂದು ನಾಟ್ಯಾಂಗದೊಳ್ ನೆರೆದು ನಾಟಕಾದಿ ರಸರೂಪಕಂಗಳೊಳ್ ದೇವನಾಯಕಾಯುಕ್ತಮುಂ ವೀರರಸೋಪೇತಮುಮಪ್ಪ ಸಮವಾಕಾರರೂಪ ಕಮಂ ಗರ್ಭಾವತರಣಕಲ್ಯಾಣಪ್ರಸ್ತುತಮೆ ವಸ್ತುವಾಗೆಯುಂ ಜ್ಞಾನತ್ರಯೀನೇತೃವೆ ನೇತೃವಾಗೆಯುಂ ದಾನದಯಾವೀರರಸಂಗಳೆ ರಸಂಗಳಾಗೆಯುಂ ಸ್ವರ್ಗಿಗರೆ ಚತುರ್ವರ್ಗಿಗಳಾಗೆಯುಂ ತ್ರಿದಶವಾದಕರೇ ವಾದಕರಾಗೆಯುಂ ಗಂಧರ್ವಾಮರರೇ ಗಾಯಕರಾಗೆಯುಂ ಸುತ್ರಾಮನಘಸಂತ್ರಾಸಫಲಾರ್ಥಿತ್ವದಿಂ ಸೂತ್ರಧಾರವೃತ್ತಿಯುಂ ತಳೆದು ನಟನಲಂಪಟಗೃಹೀತಸಮುಚಿತನೈಪಥ್ಯನುಮುಪ ಚರಿತನಾಂದೀಸಮಯಭಾರತಿಕಾಚಾರನುಮಾಗಿ ರಂಗಪ್ರವೇಶದೊಳ್ ದರ್ಶನಾವರಣೋಪಶಾಂತಿ ಯೆಂಬಂತೆ ಯವನಿಕಾಪಸರಣಮಾಗಲೊಡಂ

ಪದದೊಳ್ ಸಮಪಾದಂ ಹೃದ ।
ಯದೊಳಂಜಳಿ ಮುಖದೊಳಮಳಸಮದೃಷ್ಟಿ ಬೆಡಂ ॥
ಗೊದವಿರೆ ಸೂತ್ರಿಸಿ ಬರೆದಂ ।
ದದೊಳಿರ್ದಂ ಕುಳಿಶಿ ನಿಂದು ಋಜ್ವಾಗತದೊಳ್ ॥ ೧೭೭

ನಿರ್ಭರವಾದ ಆನಂದರಸ ಸಮುದ್ರದಲ್ಲಿ ಅದೇನು ಮುಳುಮುಳುಗಿ ಏಳುತ್ತಿದ್ದರು! ವ॥ ಹೀಗೆ ಎಲ್ಲರೂ ಕುಣಿದಾಡುವುದನ್ನು ಕಂಡು, "ಆನಂದದ ಪರಾಕಾಷ್ಠೆಯೆಂದರೆ ನಿಜವಾಗಿಯೂ ಕುಣಿದಾಡುವುದೆ" ಎಂಬ ನಾಟ್ಯಶಾಸ್ತ್ರದ ಮಾತನ್ನು ಸಮರ್ಥಿಸುವಂತೆ ರಸ, ಭಾವ, ಅಭಿನಯ, ಧರ್ಮ, ಪ್ರವೃತ್ತಿ, ಸಿದ್ಧಿ, ಸ್ವರ, ಆತೋದ್ಯ, ಗಾನ, ರಂಗ, ಸಂಗ್ರಹ ಎಂಬ ಹನ್ನೊಂದು ನಾಟ್ಯಾಂಗಗಳಿಂದ ಕೂಡಿ, ನಾಟಕಾದಿ ರಸರೂಪಕಗಳಲ್ಲಿ ದೇವನಾಯಕಯುಕ್ತವೂ ವೀರರಸಯುಕ್ತವೂ ಆದ ಸಮವಕಾರವೆಂಬ ರೂಪಕವನ್ನು, ಗರ್ಭಾವತರಣ ಕಲ್ಯಾಣ ಪ್ರಸಂಗವೆ ವಸ್ತುವಾಗಲಾಗಿ, ತ್ರಿಜ್ಞಾನದರ್ಶಿಯಾದ ಜಿನನೆ ನೇತಾರನಾಗಲಾಗಿ, ದಾನ ದಯಾವೀರ ರಸಗಳೆ ರಸಗಳಾಗಲಾಗಿ, ದೇವಲೋಕದವರೆ ಚತುರ್ವರ್ಗಿಗಳಾಗಲಾಗಿ, ದೇವವಾದಕರೆ, ವಾದ್ಯಕಾರರಾಗಲಾಗಿ, ಗಂಧರ್ವ ದೇವತೆಗಳೆ ಗಾಯಕರಾಗಲಾಗಿ, ಇಂದ್ರನು ಪಾಪ ನಿವಾರಣಾರ್ಥವಾಗಿ ತಾನೆ ಸೂತ್ರಧಾರಿಯಾಗಿ ನರ್ತನೋತ್ಸುಕತೆ ಯಿಂದ ಉಚಿತವಾದ ನೈಪಥ್ಯವನ್ನು ರಚಿಸಿಕೊಂಡು ನಾಂದಿಯನ್ನು ಆಚರಿಸಿ ರಂಗ ಪ್ರವೇಶ ಮಾಡುವಾಗ ದರ್ಶನಾವರಣ ಕರ್ಮ ತೊಲಗುವಂತೆ ತೆರೆ ಸರಿಯಿತು. ೧೭೭. ಸಮಪಾದನಾಗಿ, ಹೃದಯದಲ್ಲಿ ಕೈಜೋಡಿಸಿ, ಸಮದೃಷ್ಟಿಯಿಂದ ಕೂಡಿ ಋಜ್ವಾಗತ ಭಂಗಿಯಲ್ಲಿ ನಿಂತ ಇಂದ್ರನು ಪ್ರಮಾಣಬದ್ಧವಾಗಿ ಬರೆದ ಚಿತ್ರದಂತೆ

ಅಂತು ನಿಂದು ಪುಷ್ಪಾಂಜಲಿವಿಕ್ಷೇಪಮಂ ಮಾಡಿ ನಿಟಿಳನಿಹಿತಾಂಜಳಿಯಾಗಿ

ಪರಮನ ಚರಣನಖಾಮೃತ ।
ಕಿರಣನನೋಲಗಿಪ ತರಳತಾರಾಗಣಮಂ ॥
ಪರಿಹಾಸಂಗೆಯ್ದುದು ಕೇ
ಸರಿಪೀಠೋಪಾಂತದೊಳ್ ಲತಾಂತಪ್ರಸರಂ ॥ ೧೭೮

ಅನಂತರಂ ಮಂಗಳಪದಪದವಾಕ್ಯದಿಂ ಪ್ರಸ್ತಾವನೆವಡೆದು ಬಳಿಯಂ ಪ್ರರೋಚನಾರ್ಥಂ ಪೂರ್ವರಂಗಪ್ರಸಂಗಮಂ ಮಾಡಿದಾಗಳ್

ಕಿವಿಗಿಂಪಂ ಮೃದುಗೇಯಮೀಯೆ ಮೃದುಗೇಯಕ್ಕಾದಮೋರನ್ನಮೆಂ ।
ಬವೊಲಿಂಬಾಗಿರೆ ವಾದ್ಯಶಬ್ದಮತಿಸಾಮ್ಯಂ ವಾದ್ಯಶಬ್ದಕ್ಕೆ ನೋ ॥
ಡುವೊಡೆಂಬೊಪ್ಪದೊಳೊಂದೆ ನೃತ್ಯಮಳವಟ್ಟಾ ನೃತ್ಯದಿಂದುಣ್ಮೆ ಪೊ ।
ಣ್ಮೆ ವಿಶೇಷಂ ರಸವೃತ್ತಿಯೇನೆಸೆದುದೋ ತದ್ರಂಗಸಂಗೀತಕಂ ॥ ೧೭೯

ತದನಂತರಂ ವಸ್ತುವಿಷಯದೊಳ್ ಸರ್ವರಸಾಯತ್ತಮಪ್ಪ ಭಾರತೀವೃತ್ತಿಯಂ ಪೊರ್ದಿ ಲಲಿತನೃತ್ಯದೊಳ್ ನಿಬದ್ಧಾನಿಬದ್ಧಭೇದಭಿನ್ನತ್ರಿಮಾರ್ಗಗೀತಂಗಳೊಳಂ ತತ್ತಾನುಗತೌಘವಾದ್ಯಂಗಳೊಳ್ ಸಂಗತಂಬಡೆದು,

ಸಕಳಾಂಗೋಪಾಂಗದಿಂದಾಂಗಿಕಮತಿವಿಶದಂ ಗಾನಪಠ್ಯೋಕ್ತದಿಂ ವಾ ।
ಚಿಕಮತ್ಯೌಚಿತ್ಯನೈಪಥ್ಯದೆ ಸುಸದೃಶಮಾಹಾರ್ಯಕಂ ಸತ್ವಭಾವಾ ॥

ಶೋಭಿಸಿದನು. ವ॥ ಹಾಗೆ ನಿಂತು ಪುಷ್ಪಾಂಜಲಿಯನ್ನು ಕೆದರಿ, ಹಣೆಗೆ ಕೈ ಜೋಡಿಸಲಾಗಿ–೧೭೮. ಪರಮೇಶ್ವರನ ಕಾಲುಗುರೆಂಬ ಚಂದ್ರನನ್ನು ಓಲೈಸುವ ಬೆಡಗಿನ ನಕ್ಷತ್ರ ಮಂಡಲಿಯೊ ಏನೊ ಎಂಬಂತೆ ಸಿಂಹಾಸನದ ಅಡಿಯಲ್ಲಿ ಆ ಹೂಗಳು ಒಪ್ಪಿದುವು. ವ॥ ಆ ನಂತರ ಮಂಗಳವಾಕ್ಯದಿಂದ ಪ್ರಸ್ತಾವನೆಯನ್ನಾಚರಿಸಿ, ಪ್ರರೋಚನಾರ್ಥವಾಗಿ (ಮುಂದೆ ನಡೆಯಲಿರುವುದರ ವರ್ಣನಾರ್ಥವಾಗಿ) ಪೂರ್ವರಂಗ ಪ್ರಸಂಗವನ್ನು ಮಾಡಿದಾಗ–೧೭೯. ಕಿವಿಗೆ ಇಂಪಾದ ಮಧುರ ಗಾಯನ, ಮಧುರ ಗಾಯನಕ್ಕೆ ಸರಿ ಸಮನೆಂಬಂತೆ ರಮ್ಯವಾದ ವಾದ್ಯವಾದನ, ವಾದ್ಯವಾದನಕ್ಕೆ ಅನುಗತವಾಗಿ ಒಪ್ಪುವ ನರ್ತನ, ಆ ನರ್ತನದಿಂದ ಹೊಮ್ಮುವ ರಸವೃತ್ತಿ–ಇವುಗಳಿಂದ ಆ ರಾಗ ಸಂಗೀತ ಎಷ್ಟೊಂದು ಮನೋಹರವಾಯಿತು ! ವ॥ ಬಳಿಕ ವಸ್ತು ವಿಷಯದಲ್ಲಿ ಸರ್ವರಸಯುಕ್ತವಾದ ಭಾರತೀವೃತ್ತಿಯನ್ನು ಹೊಂದಿ ಲಲಿತವಾದ ನೃತ್ಯದಲ್ಲಿ ನಿಬದ್ಧ, ಅನಿಬದ್ಧವೆಂಬ ಭೇದಗಳುಳ್ಳ ತ್ರಿಮಾರ್ಗಗೀತಗಳೊಡನೆಯೂ, ಅವುಗಳಿಗೆ ಅನುಸಾರಿಯಾದ ವಾದ್ಯಗಳೊಡನೆಯೂ ಮೇಳವಾಗಿ–೧೮೦. ತನ್ನ ಸಮಸ್ತ ಅಂಗೋಪಾಂಗಗಳಿಂದ 'ಆಂಗಿಕ'ವನ್ನೂ, ಗಾನಪಠನದಿಂದ 'ವಾಚಕ'ವನ್ನೂ, ಉಚಿತವಾದ ನೈಪಥ್ಯದಿಂದ

ಧಿಕಚೇಷ್ಟಾಪುಷ್ಟಿಯಿಂ ಸಾತ್ವಿಕಮಮರ್ವಿನಮವ್ಯಾಜದಿಂ ಮೆಚ್ಚೆ ಸಾಮಾ।
ಜಿಕರಿಂದ್ರಂ ಲೀಲೆಯಿಂದಂ ಚತುರಭಿನಯಚಾತುರ್ಯದೊಳ್ ಕೂಡೆ ಸಂದಂ॥ ೧೮೦

ಭರತಾಗಮಲಕ್ಷ್ಮಿಗೆ ನಿಜ।
ಕರಣಮಳಂಕರಣಮಂಗಹಾರಂ ಹಾರಂ॥
ಪಿರಿದುಂ ತಾನೆನೆ ಮೆಱೆದಂ।
ಸುರಪರಿವೃಢನಾಂಗಿಕಾಭಿನಯಪರಿಚಯಮಂ॥ ೧೮೧

ಕುಳಿಶಿಗಭಿನಯದೊಳಾದಂ।
ಗಳಕ್ಕೆ ನತಿ ದೃಷ್ಟಿಗುತ್ಸವಂ ಹಸ್ತಕ್ಕಂ॥
ಜಳಿಯೆ ಬರುತಿರ್ದುವೇನ।
ಗ್ಗಳಮೋ ಜಿನಭಕ್ತಿಯೆಸಕಮಾತನ ಮನದೊಳ್॥ ೧೮೨

ಸಭೃತಮುದಂ ಹರಿ ಮೆಱೆದಂ।
ಸಭೆಗೆ ವಿಭಾವಾನುಭಾವಸಾತ್ವಿಕಭಾವ॥
ವ್ಯಭಿಚಾರಭಾವಮೆಂಬಿವ।
ಱಭಿನಯದಿಂ ಸ್ಥಾಯಿಭಾವದೊಳ್ ರಸಬೋದವಂ॥ ೧೮೩

ಇದು ಭಾವಮಿದು ರಸಂ ಮ।
ತ್ತಿದು ವೃತ್ತಿಯೆನಿಪ್ಪ ಸಂದ ಸಮಕಟ್ಟುಗಳೊಳ್॥
ತ್ರಿದಶಪತಿ ಭರತಶಾಸ್ತ್ರದ।
ಮೊದಲ ನಿಬಂಧನಮೆ ಮೂರ್ತಿಗೊಂಡಂತಿರ್ದಂ॥ ೧೮೪

ಚೆಲುವಾದ 'ಆಹಾರ್ಯಕ'ವನ್ನೂ, ಸತ್ವಭಾವಗಳ ಚೇಷ್ಟೆಯಿಂದ 'ಸಾತ್ವಿಕ' ವನ್ನೂ ಪ್ರೇಕ್ಷಕರು ಮೆಚ್ಚುವಂತೆ ಇಂದ್ರನು ನಾಲ್ಕೂ ಬಗೆಯ ಅಭಿನಯ ಚಾತುರ್ಯವನ್ನು ಮೆರೆದನು. ೧೮೧. ನಾಟ್ಯಲಕ್ಷ್ಮಿಗೆ ತನ್ನ ಅವಯವಗಳೆ ಅಲಂಕಾರ, ಅಭಿನಯ ಮುದ್ರೆಗಳೆ ಹಾರವೆನಿಸುವಂತೆ ದೇವೇಂದ್ರನು ಆಂಗಿಕಾಭಿನಯವನ್ನು ಅತಿಶಯವಾಗಿ ಪ್ರದರ್ಶಿಸಿದನು. ೧೮೨. ಇಂದ್ರನು ನರ್ತಿಸುತ್ತಿರುವಾಗ ಆತನ ಕೊರಳಿಗೆ ಕೆಳಬಾಗು, ದೃಷ್ಟಿಗೆ ಉತ್ಸವ ಹಾಗು ಕೈಗೆ ಅಂಜಲಿ ರಚನೆ (ಕೈಮುಗಿಯುವಿಕೆ) ಇವೇ ಅಧಿಕವಾಗಿ ಬರುತ್ತಿದ್ದುವು. ಆತನ ಮನದಲ್ಲಿ ತುಂಬಿದ ಜಿನಭಕ್ತಿಯ ನಿರ್ಭರತೆ ಅಂತಹುದು. ೧೮೩. ನಿರ್ಭರ ಹರ್ಷದಿಂದ ಇಂದ್ರನು ವಿಭಾವ, ಅನುಭಾವ, ಸಾತ್ವಿಕಭಾವ ವ್ಯಭಿಚಾರ ಭಾವಗಳ ಅಭಿನಯ ದಿಂದ ಸಭಿಕರಿಗೆ ಸ್ಥಾಯಿಭಾವದ ರಸಾಸ್ವಾದವನ್ನು ಒದಗಿಸಿದನು. ೧೮೪. ಇದು ಭಾವ, ಇದು ರಸ, ಇದು ವೃತ್ತಿ ಎಂಬುದನ್ನು ನಾಟ್ಯಶಾಸ್ತ್ರದ ಮೂಲ

ಅಭಿಷೇಕಾಮೃತದಿಂ ಹೇ ।
ಮಭೂಧ್ರಮಂ ಮುನ್ನ ಮುೞುಗಿಸಿದವೋಲಮರ ॥
ಪ್ರಭು ಮುೞುಗಿಸಿದಂ ತದ್ರಾ ।
ಜಭವನಮಂ ಮತ್ತೆ ಲಲಿತನೃತ್ಯಾಮೃತದಿಂ ॥ ೧೮೫

ಸಭೆ ವಿಬುಧಸಭೆ ಜಗತ್ಪತಿ ।
ಸಭಾಧಿಪತಿ ಶಕ್ರನಲ್ತೆ ನರ್ತಕನೆನೆ ತ ॥
ದ್ವಿಭವಮನಣ್ಣ ನಭೂತೋ ।
ನ ಭವಿಷ್ಯತಿಯೆಂದೆ ಮಾಣದಾರ್ ನೆಱೆ ಪೊಗೞ್ವರ್ ॥ ೧೮೬

ಎಂಬಿನಂ ಪಿರಿದು ಪೊೞ್ತು ನರ್ತಿಸಿಯುಂ ಮಾಣದುತ್ಸವೋನ್ಮತ್ತಂ ಮತ್ತಮಿತರಜನಕೌತುಕೋತ್ಪಾದನೋಪಾಯಮುಮುದ್ಧತಾಭಿನಯಪ್ರಾಯಮುಮುಂ ಕೇವಳಂ ತಾಳಲಯಾಶ್ರಯಮುಮಪ್ಪ ತಾಂಡವಮನಾಡಲೆಂದಾರಭಟೀವೃತ್ತಿಯಂ ಕೈಕೊಂಡು

ಮನದೊಳ್ ಪೊದಱ್ದು ಪೊಣ್ಮಿದ ।
ಜಿನನ ಮಹೋತ್ಸಾಹದೊಡನೆ ಬಳೆದುದು ದೇಹಂ ॥
ತನತನೆ ಬಾಂಬರೆಗಂ ಬಳೆ ।
ದನಿಮಿಷಪತಿ ನಟನಪಟುತೆಯಂ ಪ್ರಕಟಿಸಿದಂ ॥ ೧೮೭

ಒರ್ಮೆಯೆ ನಿಲವುಗಳನಿತುಮ ।
ನೊರ್ಮೆಯೆ ಪದಗತಿಗಳನಿತುಮಂ ವಿಕ್ರಿಯೆಯಿಂ ॥
ದೊರ್ಮೆಯೆ ದೃಷ್ಟಿಗಳನಿತುಮ ।
ನೊರ್ಮೆಯೆ ಹಸ್ತಂಗಳನಿತುಮಂ ಹರಿ ಮೆಱೆದಂ ॥ ೧೮೮

ಪ್ರಬಂಧವೆ ಮೈತಾಳಿ ಬಂದಂತೆ ಇಂದ್ರನು ಅಭಿನಯಿಸಿ ತೋರಿದನು. ೧೮೫. ಅಭಿಷೇಕಾಮೃತದಲ್ಲಿ ಮೇರುಗಿರಿಯನ್ನು ಈ ಮುಂಚೆ ಮುಳುಗಿಸಿದಂತೆ, ಇಂದ್ರನು ಅರಮನೆಯನ್ನು ನೃತ್ಯಾಮೃತದಲ್ಲಿ ಮುಳುಗಿಸಿದನು. ೧೮೬. ಸಭಿಕರು ದೇವತೆಗಳು, ಸಭಾಧಿಪತಿಯಾದವನು ಜಗದೊಡೆಯನಾದ ಜಿನೇಶ್ವರ, ನರ್ತಕನು ಇಂದ್ರ – ಎಂದ ಮೇಲೆ ಆ ನೃತ್ಯವನ್ನು "ಹಿಂದಾದುದಲ್ಲ, ಮುಂದೆ ಇಂತಹುದು ಆಗಲಾರದು" ಎಂದಲ್ಲದೆ ಇತರ ರೀತಿಯಲ್ಲಿ ಯಾರು ಸಮರ್ಪಕವಾಗಿ ಹೊಗಳಿಯಾರು? ವII ಹೀಗೆ ಬಹುಸಮಯದವರೆಗೆ ನಾಟ್ಯವಾಡಿದರೂ, ನಿಲ್ಲಿಸದೆ ಉತ್ಸವದಿಂದ ಉನ್ಮತ್ತನಾದ ಇಂದ್ರನು ಸಾಮಾನ್ಯ ಜನರಿಗೆ ಕೌತುಕವನ್ನುಂಟು ಮಾಡಲೆಂದು ಉದ್ಧತವಾದ ಅಭಿನಯದಿಂದ ಕೂಡಿದುದೂ ಕೇವಲ ತಾಳಲಯಾಶ್ರಯವೂ ಆದ ತಾಂಡವ ನೃತ್ಯವಾಡಲು ಆರಭಟೀ ವೃತ್ತಿಯನ್ನು ಎತ್ತಿಕೊಂಡು– ೧೮೭. ಮನಸ್ಸಿನಲ್ಲಿ ಅತಿಶಯವಾಗಿ ಹೊಮ್ಮಿದ ಜಿನನ ಮಹೋತ್ಸಾಹದೊಡನೆ ತನ್ನ ದೇಹವೂ ಬೆಳೆಯಿತೆಂಬಂತೆ ಆಕಾಶದವರೆಗೆ ಬೆಳೆದು ನಿಂತು ಇಂದ್ರನು ತನ್ನ ನೃತ್ಯಕೌಶಲವನ್ನು ಪ್ರಕಟಿಸಿದನು. ೧೮೮. ಒಮ್ಮೆಯೆ ಎಲ್ಲ ನಿಲುವುಗಳನ್ನು, ಒಮ್ಮೆಯೆ ಎಲ್ಲ ಪದವಿನ್ಯಾಸಗಳನ್ನು, ಒಮ್ಮೆಯೆ ಎಲ್ಲ ದೃಷ್ಟಿಗಳನ್ನು, ಒಮ್ಮೆಯೆ ಎಲ್ಲ

ಸ್ಥಳನಳಿನಾವಕೀರ್ಣಮೆನಿಸಿತ್ತು ವಸುಂಧರೆ ಪಲ್ಲವೋತ್ಕರಾ ।
ವಿಳಮೆನಿಸಿತ್ತು ಕೂಡೆ ದೆಸೆ ಕೈರವದಾಮನಿಕಾಮವಿಭ್ರಮಾ ॥
ಕುಳಮೆನಿಸಿತ್ತು ಮೇಘಪಥಮೆಂಬಿನೆಗಂ ಚರಣಪ್ರಚಾರದೋ ।
ಸ್ತಳವಳನಾವಳೋಕನವಿಳಾಸಮದೇನೆಸೆದತ್ತೊ ಶಕ್ರನಾ ॥ ೧೮೯

ಕಟಿವೂವೆಂಬನ್ನೆಗಂ ರೇಚಕಪವನಪಟುಕ್ಷೇಪದಿಂ ಋಕ್ಷಮೆಲ್ಲಂ ।
ಕಟಿಲುತ್ತಿರ್ದತ್ತು ಬಾಹಾಪರಿಘನಿಕರಸಂಭ್ರಾಂತಿಯಿಂ ದಿಗ್ಗಜೌಘಂ ॥
ಪೆಟಿಜುತ್ತಿರ್ದತ್ತು ಪಾದಾಹತಿಯಿನವನಿಯಲ್ಲಾಡೆ ವಾರ್ಧಿವ್ರಜಂ ಬೆಂ ।
ಬಟಿಯಿಂ ತುಳ್ಕಾಡುತಿರ್ದತ್ತೆನೆ ನಟಿಯಿಸಿದಂ ತಾಂಡವೋದ್ದಂಡನಿಂದ್ರಂ ॥ ೧೯೦

ಅದಲ್ಲದೆಯುಂ

ಅರಯೆ ದೇವನೋಲಗದೊಳೊಪ್ಪುವ ಮೂರ್ತಿಯದೊಂದು ತತ್ಪ್ರತೀ ।
ಹಾರಕವೃತ್ತಿಯೊಳ್ ನೆಟಿದ ಮೂರ್ತಿಯದೊಂದು ವಿಚಿತ್ರಮಾಗೆ ನಾ ॥
ನಾರಸನೃತ್ಯದೊಳ್ ನಲಿವ ಮೂರ್ತಿಯದೊಂದೆನೆ ತೋಱಿದಂ ಸಮಂ ।
ತಾರ ಮನಕ್ಕಮಚ್ಚರಿಯನಿಂದ್ರನದೊಂದು ಮಹೇಂದ್ರಜಾಲಮಂ ॥ ೧೯೧

ಒರ್ಮೆ ವಸುಂಧರಾತಳದೊಳೊರ್ಮೆ ದಿಶಾವಳಯಾಂತದೊಳ್ ಪೊದ ।
ಟಿಕ್ಕೊರ್ಮೆ ನಭೋವಿಭಾಗದೊಳನೇಕವಿಧಾಭಿನಯಂಗಳಿಂದೆ ಸೌ ॥
ಧರ್ಮನದೇನಗುರ್ವಿಸಿ ವಿಗುರ್ವಿಸಿ ತೋಱಿದನೋ ಸ್ವರೂಪಮಂ ।
ಪೆರ್ಮೆಯ ನಾಟ್ಯಧರ್ಮಿಯನಳಂಕೃತಿವೆತ್ತಿರೆ ಲೋಕಧರ್ಮಿಯಂ ॥ ೧೯೨

ಹಸ್ತಗಳನ್ನು ತನ್ನ ವಿಕ್ರಿಯಾಬಲದಿಂದ ಇಂದ್ರನು ಮೆರೆದನು. ೧೮೯. ಇಂದ್ರನ ಪಾದ ವಿನ್ಯಾಸದಿಂದ ಭೂಮಿಯೆಲ್ಲ ನೆಲದಾವರೆಗಳಿಂದ ತುಂಬಿದಂತೆನಿಸಿತು; ತೋಳುಗಳ ಚಲನೆಯಿಂದ ದಿಕ್ಕುಗಳೆಲ್ಲ ತಳಿರು ಹೊದಿಸಿದಂತೆನಿಸಿತು; ದೃಷ್ಟಿವಿಲಾಸದಿಂದ ಆಕಾಶವೆಲ್ಲ ಕನ್ನೈದಿಲೆಗಳಿಂದ ಆವೃತವಾದಂತೆ ತೋರಿತು. ಇಂದ್ರನರ್ತನದ ವಿಲಾಸ ಅಂತಹುದು. ೧೯೦. ಆತನ ನಿಶ್ವಾಸದ ಗಾಳಿಗೆ ನಕ್ಷತ್ರಗಳೆಲ್ಲ ಬಾಡಿದ ಹೂಗಳಂತೆ ಕಳಚಿಬಿದ್ದುವು; ಆತನ ಹಲವಾರು ತೋಳುಗಳ ಸಂಭ್ರಮದ ಚಲನೆಗೆ ಹೆದರಿ ದಿಗ್ಗಜಗಳು ಹಿಂಜರಿದುವು; ಹೆಜ್ಜೆಯ ರಭಸಕ್ಕೆ ಭೂಮಿ ಅಲ್ಲಾಡಿ ಕಡಲುಗಳು ತುಳುಕಾಡುತ್ತಿದ್ದುವು. ಹೀಗೆ ಇಂದ್ರನು ಅದ್ಭುತವಾಗಿ ತಾಂಡವವನ್ನು ಅಭಿನಯಿಸಿದನು. ಅದಲ್ಲದೆ– ೧೯೧. ಪರೀಕ್ಷಿಸಿ ನೋಡಿದರೆ ದೇವನ ಓಲಗದಲ್ಲಿ ಒಪ್ಪುವ ಇಂದ್ರರೂಪ ಒಂದು; ಆತನ ಪ್ರತೀಹಾರಿಯಾಗಿರುವ ರೂಪವೊಂದು; ಆಶ್ಚರ್ಯಕರವಾಗಿ ನಾನಾ ರಸಮಯ ನರ್ತನದಲ್ಲಿ ನಲಿಯುವ ರೂಪವೊಂದು :– ಹೀಗೆ ಏಕಕಾಲದಲ್ಲಿ ಅನೇಕ ರೂಪವಾಗಿ ಇಂದ್ರನು ಮಾಯಾವಿದ್ಯೆಯನ್ನು ಪ್ರಕಟಿಸಿದನು. ೧೯೨. ಒಮ್ಮೆ ಭೂತಲದಲ್ಲಿದ್ದರೆ, ಇನ್ನೊಮ್ಮೆ ದಿಗಂತದಲ್ಲಿರುವನು; ಮತ್ತೊಮ್ಮೆ ಆಕಾಶಭಾಗದಲ್ಲಿ ಹಲವಾರು ಬಗೆಯ ಅಭಿನಯಗಳಿಂದ ಸೌಧರ್ಮೇಂದ್ರನು ಅದ್ಭುತವಾಗಿ ಮಹಿಮೆವೆತ್ತ ನಾಟ್ಯಧರ್ಮವನ್ನು

ನರನಾರೀನಿಕರಕ್ಕೆ ಕೌತುಕಮನಿತ್ತತ್ತೆಯ್ದೆ ದಿಗ್ಭಿತ್ತಿಯೊಳ್ ।
ಬರೆದಂತುರ್ವರೆಯೊಳ್ ಸಮಂತು ಬಳೆದಂತಾಕಾಶದೊಳ್ ಕೂಡೆ ಬಿ ॥
ತ್ತರದಿಂ ಮಾರ್ಪೊಳೆದಂತನೇಕನಿಜನೃತ್ಯಾಕಾರಮಾನಂದಬಂ ।
ಧುರಭಾವಂ ಭರದಿಂದುಪಕ್ರಮಿಸೆ ಶಕ್ರಂ ವಿಕ್ರಿಯಾಶಕ್ತಿಯಿಂ ॥ ೧೯೩

ಅದಲ್ಲದೆಯುಂ ಬಳರಿಪುವ ಬಾಹುನಿವಹಮಂ ನವರತ್ನಕೇಯೂರಕಾಂತಿಸಂತಾನಮೆಂಬಂ ತಡರ್ದು

ಬಿಂಕಂಬೆತ್ತಿರೆ ಹಸ್ತನ ।
ಖಾಂಕುರದೊಳ್ ಬಾಹುಶಾಖೆಯೊಳ್ ದಿವಿಜನಟೀ ॥
ಸಂಕುಳಮಂದನುಗತಿಯಿಂ ।
ದಂಕುರಶಾಖಾಭಿನಯಮನೇಂ ತೋಱೆದುದೋ ॥ ೧೯೪

ಅಮರಿಯರುಮಿಂದ್ರನೊಡನೊಡ ।
ನಮರೀಜನವೇಷದಮರರುಂ ತದುಭಯದೊಳ್ ॥
ಸಮುದಯದೊಳಾಡುವೆಡೆಯೊಳ್ ।
ಸಮಸಂದುವು ಲಾಸ್ಯತಾಂಡವಚ್ಛುರಿತಂಗಳ್ ॥ ೧೯೫

ತಳೆದೆಸೆಯೆ ವಲನವರ್ತನ ।
ವಿಳಾಸಮಂ ಹರಿಯ ತೋಳ್ಗಳಂತವಱೊಳ್ ಸಂ ॥
ಚಳಿಸದೆ ನಿಂದರ್ ಚಕ್ಕಂ ।
ದೊಳಮಾಡುವರಂತಮರ್ತ್ಯನರ್ತಕಿಯರ್ಕಳ್ ॥ ೧೯೬

ತೋರಿದನು. ೧೯೩. ದಿಗ್ಭಿತ್ತಿಯಲ್ಲಿ ಬರೆದಂತೆ, ಭೂಮಿಯಲ್ಲಿ ಬೆಳೆದಂತೆ, ಆಕಾಶದಲ್ಲಿ ಸೊಗಸಾಗಿ ಪಡಿಮೂಡಿದಂತೆ ಅನೇಕ ನೃತ್ಯರೂಪಗಳನ್ನು ಆನಂದಕರವಾದ ಭಾವಗಳನ್ನು ತನ್ನ ವಿಕ್ರಿಯಾಶಕ್ತಿಯಿಂದ ಇಂದ್ರನು ತೋರಿ, ಆ ನಗರದ ನರನಾರಿಯರಿಗೆ ಕೌತುಕವನ್ನುಂಟು ಮಾಡಿದನು. ವ॥ ಅದಲ್ಲದೆ ಇಂದ್ರನ ಅನೇಕ ತೋಳುಗಳನ್ನು ನವರತ್ನದ ತೋಳ್ಬಳೆಗಳ ಕಾಂತಿಯೊ ಏನೋ ಎಂಬಂತೆ ಏರಿ– ೧೯೪. ಆತನ ಕೈಯುಗುರುಗಳ ಮೇಲೂ, ತೋಳುಗಳ ಮೇಲೂ ದೇವನರ್ತಕಿಯರ ಸಮೂಹವು ಅನುಗತವಾಗಿ ನರ್ತಿಸಿ ಅಂಕುರಾಭಿನಯವನ್ನೂ, ಶಾಖಾಭಿನಯವನ್ನೂ ಬೆಡಗಿನಿಂದ ತೋರಿತು. ೧೯೫. ದೇವಾಂಗನೆಯರೂ, ದೇವಕಾಂತಾವೇಷದ ಸುರರೂ ಇಂದ್ರನ ಎರಡೂ ಪಕ್ಕದಲ್ಲಿ ಆತನೊಡನೆ ನರ್ತಿಸುವಾಗ ಲಾಸ್ಯ ಹಾಗು ತಾಂಡವ ಎಂಬೆರಡು ನೃತ್ಯಗಳ ಬೆಡಗುಗಳೂ ಸಮನಾಗಿ ತೋರಿದುವು. ೧೯೬. ಇಂದ್ರನ ತೋಳುಗಳು ವಿಲಾಸದಿಂದ ಬೀಸಿದಾಗಲಾಗಲಿ, ತಿರುಗಿಸಿದಾಗಲಾಗಲಿ ಅವುಗಳ ಮೇಲಿನ ನರ್ತಕಿಯರು ಚಕ್ರದುಯ್ಯಾಲೆ

ಆಗಳಾಕೆಯರ ಪಂಚವಿಧಪದತಳಸಂಚಾರದಿಂ ಗಗನವಳಯಮೆಲ್ಲಂ ಕೆಂದಳಿರ ಪಂದರಿಕ್ಕಿ ದಂತೆಯುಂ, ಆಕೆಯರ ನವವಿಧಬಾಹುವಳನದಿಂದೆಳಲತೆಯ ಬಳ್ಳಿ ಚಳಿಸಿದಂತೆಯುಂ, ಆಕೆಯರ ಚತುಷ್ಷಷ್ಟಿವಿಧಹಸ್ತವಿಸ್ತಾರದಿಂ ಬಯಲ್ದಾವರೆಯ ಬನಮರಲ್ದಂತೆಯುಂ, ಆಕೆಯರ ಷಟ್‌ತ್ರಿಂಶತ್ಸುಧಾಸ್ಮೇರಾಂಬಕಕದಂಬದಿಂ ಕರ್ನೆಯ್ದಿಲೆಸಳ ಮೞೆ ಕಱೆದಂತೆಯುಂ, ಆಕೆಯರಷ್ಟವಿಧಾಳೋಕನರುಚಿಯಿಂ ಕುಡುಮಿಂಚಿನೊಳ್ ಕಟ್ಟಿ ಮೆಱೆದಂತೆಯುಂ, ಆಕೆಯರ ಸಪ್ತವಿಧಭ್ರೂವಿಭ್ರಮದಿಂ ಮದನನ ಪದೆವಿಲ್ಗಳಂ ಕೆದಱೆದಂತೆಯುಂ, ಆಕೆಯರ ಚತುರ್ದಶವಿಧಾಸ್ಯವಿಳಸಿತದಿಂ ಶಶಿಬಿಂಬಕದಂಬಕಮಂ ಪಸರಿಸಿದಂತೆಯುಂ, ಆಕೆಯರುಭಯವಿಧಗಾನದಿಂ ಜೇನ ಸೋನೆ ಸುರಿದಂತೆಯುಂ, ಅತಿ ಮನೋಹರಮಾಗೆ

ಎತ್ತೆತ್ತಂ ನರ್ತಿಸೆ ನಿಜ ।
ವೃತ್ತಕರೋತ್ಕರದೊಳಚ್ಚರಸಿಯರ್ ಕಣ್ಗಂ ॥
ಚಿತ್ತಕ್ಕಂ ಪೊಸದಾದಂ ।
ನೃತ್ತಾಂಗಂ ಕಲ್ಪಭೂಜಮೆನಿಸಿ ಬಿಡೌಜಂ ॥ ೧೯೭

ಕುಡುವರ್ ಬೇಟ್ಪರ್ಥಮಂ ಕೇಳಿಪ ನಟರ್ಗಧಿನಾಥರ್ ಮನಂಗೊಂಡು ಮುನ್ನಂ ।
ಬಡವರ್ ಶ್ರೀಮಂತರಪ್ಪನ್ನೆಗಮೆನಿಪುದದಂತಿರ್ಕೆ ದೇವೇಂದ್ರನೀಗಳ್ ॥
ಗಡ ಕೇಳಿಪ್ಪಂ ನಟಂ ಬೇಟ್ಪನುಮೆನೆ ಪದಪಿನ್ನೆಂತುಟೆಂಬಂತದಂ ತಾಂ ।
ಕುಡುವರ್ಹತ್ಸ್ವಾಮಿ ಬಲ್ಲಂ ಪಡೆವಮರವರಂ ಬಲ್ಲನಿಂ ಬಲ್ಲನಾವಂ ॥ ೧೯೮

ಮಾಡುವಂತೆ ಸ್ಥಿರವಾಗಿ ನಿಂತಿದ್ದರು. ವ॥ ಆಗ ಆ ನರ್ತಕಿಯರ ಐದು ಬಗೆಯ ಪದ ಸಂಚಾರದಿಂದ ಆಕಾಶಮಂಡಲವೆಲ್ಲ ಕೆಂದಳಿರ ಹಂದರದಂತೆಯೂ, ಒಂಬತ್ತು ಬಗೆಯ ತೋಳ ಚಲನೆಯಿಂದ ಎಳೆಯ ಬಳ್ಳಿ ಚಲಿಸಿದಂತೆಯೂ, ಅರುವತ್ತು ನಾಲ್ಕು ಹಸ್ತವಿಸ್ತಾರದಿಂದ ನೆಲದಾವರೆಗಳ ಬನ ಅರಳಿದಂತೆಯೂ, ಮೂವತ್ತಾರು ಬಗೆಯ ಅಮೃತದಂತಹ ಕಣ್ಣುಗಳಿಂದ ಕನ್ನೈದಿಲೆಯ ಎಸಳುಗಳ ಮಳೆ ಕರೆದಂತೆಯೂ, ಎಂಟು ಬಗೆಯ ದೃಷ್ಟಿಗಳಿಂದ ಕುಡುಮಿಂಚುಗಳನ್ನು ಕಟ್ಟಿದಂತೆಯೂ, ಏಳು ಬಗೆಯ ಹುಬ್ಬಿನ ವಿಭ್ರಮದಿಂದ ಮನ್ಮಥನ ಹದವಾದ ಬಿಲ್ಲುಗಳನ್ನು ಹರಡಿದಂತೆಯೂ, ಹದಿನಾಲ್ಕು ಬಗೆಯ ಮುಖವಿಲಾಸದಿಂದ ಚಂದ್ರಬಿಂಬ ಸಮೂಹವನ್ನು ವಿಸ್ತರಿಸಿದಂತೆಯೂ, ಉಭಯವಿಧವಾದ ಗಾಯನದಿಂದ ಜೇನಮಳೆ ಸುರಿದಂತೆಯೂ ಅತ್ಯಂತ ಮನೋಹರವಾಗಲಾಗಿ– ೧೯೭. ತನ್ನ ಕೈಗಳಲ್ಲಿ ಎತ್ತೆತ್ತಲೂ ಅಪ್ಸರೆಯರು ನರ್ತಿಸುತ್ತಿರಲಾಗಿ ಇಂದ್ರನು ಕಣ್ಣಿಗೂ ಮನಸ್ಸಿಗೂ ತಾನೊಂದು ಕುಣಿಯುತ್ತಿರುವ ಕಲ್ಪವೃಕ್ಷದಂತೆ ಕಂಗೊಳಿಸಿದನು. ೧೯೮. ನರ್ತನ ಮಾಡಿ ತೋರಿದ ಕಲಾವಿದರಿಗೆ ಅವರ ಬಡತನ ನೀಗಿ ಶ್ರೀಮಂತಿಕೆಯೊದಗುವಂತೆ ಅಧೀಶ್ವರರು ಬಹುಮಾನ ಕೊಡುವರು. ಅದು ಹಾಗಿರಲಿ, ಈಗ ನರ್ತಿಸುತ್ತಿರುವವನು ದೇವೇಂದ್ರನು. ಅವನು ಬೇಡುವುದೇನೆಂಬುದನ್ನು, ಕೊಡುವ ಅರ್ಹಂತದೇವನೇ ಬಲ್ಲನು, ಪಡೆಯುವ ಇಂದ್ರನೇ ಬಲ್ಲನು.

ಇಂದ್ರಂ ನಿಜದಕ್ಷಿಣದಿವಿ ।
ಜೇಂದ್ರಂ ಶಚಿ ಲೋಕಪಾಳನಿಕರಂ ಬೆರಸು ॥
ವಿರ್ಣಂದ್ರತೆಗೆವಂದು ಬಟಿಕೆ ಜಿ ।
ನೇಂದ್ರೋಪಾಸನದ ಫಲದೆ ಮುಕ್ತಿಗೆ ಸಲ್ವಂ ॥ ೧೯೯

ಎನಿಸಿದಾನಂದಸಂಗೀತಸಪರ್ಯಾಪರಿಸಮಾಪ್ತಿಪ್ರಣಾಮಾನಂತರಂ ನಾಮಕರಣೋದ್ಯುಕ್ತನಾಗಿ

ಆದಿಜಿನೇಶನಿಂ ಭರತಚಕ್ರಿಗೆ ಭಾವಜಿನಾಹ್ವಯಂ ಸಮಾ ।
ವೇದಿತಮಾದುದಂ ಜನನಿಯಾಸ್ಯಮನುಜ್ಜ್ವಳಚಂದ್ರಬಿಂಬದಂ ॥
ತಾ ದಿವದಿಂದೆ ಬಂದು ಪುಗುತಂದುದನೆಲ್ಲ ಜನಕ್ಕೆ ಮಾನಸಾ ।
ಹ್ಲಾದಮನೀವುದಂ ಬಗೆಗೆ ತಂದು ವಿಚಾರಿಸಿ ನೋಡಿ ನಾಡೆಯುಂ ॥ ೨೦೦

ಅಪ್ರತಿಮಪ್ರಭಾವಯುತಮಂ ಸಮುದೀರಣಮಾತಪಪ್ರತಾ ।
ಪಪ್ರತಿರೂಪಮಂ ಶ್ರವಣಯುಗ್ಮರಸಾಯನಮಂ ಸಮಸ್ತಸಾ ॥
ಧುಪ್ರಿಯಮಂ ಜಗತ್ಪ್ರಥಮಮಂಗಳಮಂ ಪದೆದಿಟ್ಟನಂದು ಚಂ ।
ದ್ರಪ್ರಭನಾಮಮಂ ಮಘವನಷ್ಟಮತೀರ್ಥಕರಂಗೆ ಸಾರ್ಥಮಂ ॥ ೨೦೧

ಬಗೆವೊಡದು ವಸ್ತು ಕೃತಿಲತಿ ।
ಕೆಗೆ ಫಳಮದು ವರ್ಣಕೃತ್ಯಳಂಕೃತಿಗಾದಂ ॥
ಸೊಗಯಿಪ ನಾಯಕಮಣಿ ತಾ ।
ನೆ ಗಡಂ ಚಂದ್ರಪ್ರಭಾಭಿರಾಮಮಂ ನಾಮಂ ॥ ೨೦೨

ಬೇರಾರು ತಿಳಿಯುವರು? ೧೯೯. ಇಂದ್ರನೂ, ದಕ್ಷಿಣದೇವೇಂದ್ರನೂ, ಶಚಿ ಹಾಗು ಲೋಕಪಾಲರೊಡನೆ ಭೂಲೋಕದಲ್ಲಿ ಅರಸುತನವನ್ನು ಪಡೆದು, ಬಳಿಕ ಜಿನೋಪಾಸನೆಯಿಂದ ಮುಕ್ತಿಗೆ ಸಲ್ಲುವನು. ವ॥ ಹೀಗೆ ಆನಂದನೃತ್ಯವನ್ನು ಸಂಗೀತದೊಡನೆ ಸಮಾಪ್ತಿಗೊಳಿಸಿ, ನಮಸ್ಕರಿಸಿದ ಬಳಿಕ ನಾಮಕರಣಕ್ಕೆ ತೊಡಗಿ– ೨೦೦. ಆದಿತೀರ್ಥಂಕರನು ಮುಂಬರುವ ಜಿನರ ಹೆಸರುಗಳನ್ನೆಲ್ಲ ಮೊದಲೆ ನಿರೂಪಿಸಿದುದನ್ನು ನೆನೆದು, ಈ ಜಿನನು ತಾಯಿಯ ಮುಖವನ್ನು ಚಂದ್ರಬಿಂಬದಂತೆ ದಿವದಿಂದ ಬಂದು ಪ್ರವೇಶ ಮಾಡಿದುದನ್ನೂ ಮನಸ್ಸಿಗೆ ತಂದುಕೊಂಡು, ಚೆನ್ನಾಗಿ ವಿಚಾರಿಸಿ ನೋಡಿ– ೨೦೧. ಅದ್ವಿತೀಯ ಪ್ರಭಾವಶಾಲಿಯೂ, ಬಿಸಿಲಿನಂತೆ ಪ್ರಕಾಶಮಯವೂ, ಕರ್ಣರಸಾಯನವೂ, ಸರ್ವಸಾಧು ಪ್ರಿಯವೂ ಜಗತ್ತಿಗೆ ಪ್ರಥಮಮಂಗಳವೂ ಆದ ಚಂದ್ರಪ್ರಭವೆಂಬ ಅರ್ಥವತ್ತಾದ ಹೆಸರನ್ನು ಇಂದ್ರನು ಅಷ್ಟಮ ತೀರ್ಥಂಕರನಿಗೆ ಇಟ್ಟನು. ೨೦೨. ಚಂದ್ರಪ್ರಭವೆಂಬ ಸುಂದರವಾದ

ನೆನೆದೊಡೆ ಪೇಟಿಳ್ದೊಡೆ ಕೇಳ್ದೊಡೆ ।
ಜನಿಯಿಸುವುದು ಸಕಳಕರ್ಮನಿರ್ಜರೆಯಂ ತಾ ॥
ನೆನೆ ಚಂದ್ರಪ್ರಭನಾಮಮೆ ।
ಜನಕ್ಕೆ ಸಾಕಲ್ಯಸೌಖ್ಯಸಾಧನಮಲ್ತೇ ॥ ೨೦೩

ಅಂತು ವಿಶ್ವವಿಘ್ನವಿಚ್ಛೇದಕಸಿದ್ಧಮಂತ್ರಮಂ ಪ್ರಸಿದ್ಧೋಪದೇಶಂಗೆಯ್ವಂತೆ ಪೆಸರಿಟ್ಟು

ಜಯ ಜಯ ಚಂದ್ರಪ್ರಭ ಕುವ ।
ಳಯಕ್ಕೆ ನಿನ್ನುದಯದೊಳ್ ವಿಕಾಸಶ್ರೀಯಂ ॥
ದಯೆಗೆಯ್ದಂದುಚಿತಂ ವಿ ।
ಪ್ರಿಯಮಂ ರತಿಪತಿಗೆ ಪಡೆದೆಯಿದುವೆ ವಿಚಿತ್ರಂ ॥ ೨೦೪

ಎಂದು ಪೊಡೆವಟ್ಟು

ಸದಭಿದ್ಯೋತಕನೊಳ್ ಪ್ರದೀಪಕರಣಂ ತಾನೇವುದುದ್ಬೋಧತಾ ।
ಸ್ಪದನೊಳ್ ಯಾಮಿಕವೃತ್ತಿಯೇವುದು ವಿಶುದ್ಧಾಕಾರನೊಳ್ ಸ್ನಾನಮೇ ॥
ವುದು ಲೋಕತ್ರಿತಯೈಕ ರಕ್ಷಕನೊಳಾರಕ್ಷಾಸಮಾಯೋಗಮೇ ।
ವುದು ಮೇಣಾದೊಡಮೇನೊ ಬಾಲ್ಯವಿಹಿತಂ ಲೋಕೋಪಚಾರಕ್ರಮಂ ॥ ೨೦೫

ಎಂದಮರ್ತ್ಯಂ ಧಾತ್ರೀಮಹತ್ತರಾಂಗರಕ್ಷಕಾಧ್ಯಕ್ಷವಾರ್ತಾಹರಸಹಚರಸುಕುಮಾರಾದಿಗಳನಗಲದಿರ್ಪಂತಪ್ಪಯಿಸಿ ತೀರ್ಥಕೃತ್ಪದದ್ವಂದ್ವಮುಮಂ ತತ್ಪಿತೃದ್ವಂದ್ವಮುಮಂ ಬೀಟಿಳ್ಕೊಂಡು ಬಲಗೊಂಡು ನಡೆಯೆ

ಹೆಸರು ವಸ್ತುಕೃತಿಗೆ ಫಲ, ವರ್ಣಕೃತಿಗಳಿಗೆ ಸೊಗಸಾದ ನಾಯಕಮಣಿ. ೨೦೩. ನೆನೆದರೆ, ಹೇಳಿದರೆ, ಕೇಳಿದರೆ ಸರ್ವಕರ್ಮ ನಿರ್ಜರೆಯುಂಟಾಗುವುದು, ಎಂದ ಮೇಲೆ ಚಂದ್ರಪ್ರಭವೆಂಬ ಹೆಸರು ಜನಕ್ಕೆ ಸಂಪೂರ್ಣ ಸುಖಸಾಧನವಲ್ಲವೆ? ವ॥ ಹೀಗೆ ಸರ್ವ ವಿಘ್ನನಾಶಕವಾದ ಸಿದ್ಧಮಂತ್ರವನ್ನೂ ಎಲ್ಲರಿಗೂ ಬಹಿರಂಗವಾಗಿ ಉಪದೇಶ ಮಾಡುವಂತೆ ಹೆಸರಿಟ್ಟು ೨೦೪. ಚಂದ್ರಪ್ರಭನೆ, ಜಯ ಜಯ! "ಕುವಳಯಕ್ಕೆ (೧. ಭೂಮಂಡಲಕ್ಕೆ, ೨. ಕನ್ನೈದಿಲೆಗಳಿಗೆ) (ಚಂದ್ರನಂತೆ) ನಿನ್ನ ಉದಯದಿಂದ ಅಭ್ಯುದಯವನ್ನುಂಟು ಮಾಡಿದರೂ ಮನ್ಮಥನಿಗೆ ನೀನು ಅಪ್ರಿಯನಾದೆ. ಇದು ವಿಚಿತ್ರ" ವ॥ ಹೀಗೆಂದು ನಮಸ್ಕರಿಸಿ– ೨೦೫. "ಸ್ವಯಂ ಜ್ಯೋತಿಸ್ವರೂಪನಾದವನಿಗೆ ದೀಪ ಬೆಳಗುವುದೇತಕ್ಕೆ ? ಜಾಗೃತಿಗೇ ನೆಲೆಯಾದವನಿಗೆ ಕಾವಲುಗಾರರ ಅವಶ್ಯಕತೆಯಿದೆಯೆ? ಪರಮಶುದ್ಧ ಸ್ವರೂಪನಿಗೆ ಸ್ನಾನ ಮಾಡಿಸುವುದು ಅಗತ್ಯವೆ? ತ್ರಿಲೋಕಗಳಿಗೆ ಏಕೈಕ ರಕ್ಷಕನಾದವನಿವನು; ಇವನಿಗೆ ರಕ್ಷೆಯಿಡುವುದೇನು ಪ್ರಯೋಜನ? ಅದೆಲ್ಲ ಸರಿ ಆದರೂ ಲೋಕಾಚಾರಕ್ಕೆ ಅನುಸಾರವಾಗಿ ಮಕ್ಕಳಿಗೆ ಮಾಡಬೇಕಾದುದೆಲ್ಲವನ್ನೂ ಅವನಿಗೂ ಮಾಡಬೇಕು". ವ॥ ಎಂದು ದೇವೇಂದ್ರನು ದಾದಿಯರು, ಹೆಗ್ಗಡೆಗಳು, ಅಂಗರಕ್ಷಕರು, ಓಲೆಕಾರರು, ಒಡನಾಡಿಗಳು ಮೊದಲಾದ ದೇವಕುಮಾರರನ್ನು ಜಿನನನ್ನು ಬಿಟ್ಟಗಲದಂತೆ

ಅಗಲದೆ ಜಿನನತ್ತಲೆ ದಿ ।
ಟ್ಟಿಗಳೆಳೆಸಿಯೆ ಮರುನ್ನಿವಾಸದತ್ತಲೆ ಮಾರ್ಗಂ ॥
ದೆಗೆಯೆ ಚರಣುಗಳಿಂತೆಟಿಕೆ ।
ದೆಗೆಯಾದುದು ಪೋಗು ದಿವಿಜರಾಜಂಗಾಗಳ್ ॥ ೨೦೬

ಅಂತೆಂತಾನುಮರಮನೆಯಂ ಪೊಱಮಟ್ಟು ಶಚೀದೇವಿವೆರಸು ನಿಜಗಜಾವಗಾಹಿತಗಗನಮಂಡಳನಾಖಂಡಳಂ ಚತುರ್ನಿಕಾಯಾಮರಸಮಾಜಮಂ ವಿಸರ್ಜಿಸಿ ತಾನುಂ ನಿಜಾವಾಸಮಂ ಪೊಕ್ಕು

ಸಮಸಂದತ್ತರ್ಹದಾರಾಧನೆಯೊಳೆ ಕರಣವ್ಯಾಪ್ತಿಯಿಂದೇಱತೆನ್ನು ।
ದ್ಯಮಮೊಳ್ಪಿಂದಿಂದು ಪೆತ್ತೆಂ ಸುಕೃತದೊದವನಿಂದೆಯ್ದಿದೆಂ ತನ್ಮಹಾನಂ ॥
ದಮನಿಂದಾಯ್ತೆನ್ನ ದೇವಾಧಿಪಪದವಿಗೆ ಸಾಫಲ್ಯಮೆಂದಂದು ಮುಯ್ವಂ ।
ಸುಮನಶ್ಚಕ್ರೇಶನಾಂತಂ ವರಚರಿತನನೇಕಾಂತವಿದ್ಯಾವಿನೋದಂ ॥ ೨೦೭

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಾಚಕ್ರವರ್ತಿಪದಪದ್ಮನಿಧಾನದೀಪವರ್ತಿ

**ಶ್ರೀಮದಗ್ಗಳದೇವ**

ವಿರಚಿತಮಪ್ಪ

## ಚಂದ್ರಪ್ರಭಪುರಾಣದೊಳ್

ಜಗನ್ನಾಥಜನ್ಮಾಭಿಷವಣಕಲ್ಯಾಣವರ್ಣನಂ
ದ್ವಾದಶಾಶ್ವಾಸಂ.

ನಿಯಮಿಸಿ ತೀರ್ಥಂಕರನ ಪಾದಗಳನ್ನೂ ಆತನ ತಾಯ್ತಂದೆಗಳನ್ನೂ ಬೀಳ್ಕೊಂಡು ಪ್ರದಕ್ಷಿಣೆ ಮಾಡಿ ನಡೆದನು. ೨೦೬. ದೇವನಿವಾಸದತ್ತ ನಡೆಯುತ್ತಿದ್ದರೂ, ಜಿನನನ್ನು ಅಗಲಲೊಲ್ಲದೆ ಕಣ್ಣುಗಳು ಹಿಂದಕ್ಕೆ ಎಳೆಯುತ್ತಿದ್ದುವು. ಹೀಗಾಗಿ ದೇವೇಂದ್ರನ ಕಾಲುಗಳಿಗೆ, ಇಕ್ಕೆಲದ ಎಳೆತದಲ್ಲಿ ನಡೆಯುವುದೆ ಕಷ್ಟವಾಯಿತು. ವ॥ ಅಂತೂ ಬಹು ಪ್ರಯಾಸದಿಂದ ಅರಮನೆಯಿಂದ ಹೊರಬಿದ್ದು ಶಚೀದೇವಿಯೊಡನೆ ತನ್ನ ಆನೆಯ ಮೇಲೆ ಏರಿ ನಡೆದು ಚತುರ್ನಿಕಾಯ ದೇವತೆಗಳನ್ನು ಬೀಳ್ಕೊಟ್ಟು ತನ್ನ ನಿವಾಸವನ್ನು ಸೇರಿದನು. ೨೦೭. "ಅರ್ಹಂತನ ಆರಾಧನೆಯಲ್ಲಿ ನನ್ನ ಇಂದ್ರಿಯಗಳೆಲ್ಲ ಕೃತಾರ್ಥವಾದುವು; ಇಂದು ನನ್ನ ಕಾರ್ಯ ಸಫಲವಾಯಿತು; ಇಂದು ನನ್ನ ಪುಣ್ಯದ ಫಲ ಬಂದೊದಗಿತು; ಇಂದು ಮಹಾನಂದವನ್ನು ಹೊಂದಿದೆನು; ನನ್ನ ದೇವೇಂದ್ರ ಪದವಿ ಇಂದು ಸಾರ್ಥಕವಾಯಿತು" ಎಂದು ದೇವರಾಜನು ಹೆಮ್ಮೆ ತಾಳಿದನು.

**ದ್ವಾದಶಾಶ್ವಾಸ ಮುಗಿದುದು**

# ತ್ರಯೋದಶಾಶ್ವಾಸಂ

ಶ್ರೀಮುಖದೊಳ್ ನಸುನಗೆ ಬೆ ।
ಳ್ತಾವರೆಯೊಳಲರ್ಕೆಯೆಂಬವೊಲ್ ಪಸರಿಸೆ ಲ ॥
ಕ್ಷ್ಮೀಮಯನೆಸೆದಂ ಶಿಶು ಬಿಸ ।
ಕೋಮಳತನು ಜೈನಜನಮನೋಹರಚರಿತಂ ॥ ೧

ಅಮೃತದ್ಯುತಿಮಂಡಳದೊಳ ।
ಗಮರ್ದಿನ ಪನಿ ತರದಿನೊಗದುವೆನೆ ಪನೆಗಳ್ ಚೆ ॥
ಲ್ವಮರ್ದ ಮುಖಬಿಂಬದೊಳ್ ರುಚಿ ।
ನಿಮಿರ್ವಿನೆಗಂ ಪುಟ್ಟೆ ದಿಟ್ಟಿಗಿತ್ತುವಲಂಪಂ ॥ ೨

ಎಳವಸಲೆಯ ಮೇಲೊಯ್ಯನೆ ।
ತಳರ್ದಾಡುವ ರಾಜಹಂಸಬಾಳಕನೆಂಬೊಂ ॥
ದಳತೆಗೆ ವಂದಂ ಮರಕತ ।
ತಳದೊಳ್ ತಳರಡಿಯನಿಡುವ ತನ್ನೃಪತನಯಂ ॥ ೩

ರಂಜಿಸಿದುದು ಕಾಂಚನಮಣಿ ।
ಮಂಜೀರಕವಿರುತಿ ಚರಣದೊಳ್ ಸರಸಿಜದೊಳ್ ॥
ಕಿಂಜಳ್ಕಪಿಂಗಭೃಂಗೀ ।
ಶಿಂಜಿತಮೆನೆ ಬಾಳಕಂ ತಳರ್ನಡೆವೆಡೆಯೊಳ್ ॥ ೪

ತ್ರಯೋದಶಾಶ್ವಾಸಂ

೧. ಬಿಳಿಯ ತಾವರೆಯ ವಿಕಾಸವೆಂಬಂತೆ ತನ್ನ ಸುಂದರವಾದ ಮುಖದಲ್ಲಿ ನಸುನಗೆ ಪಸರಿಸುತ್ತಿರಲಾಗಿ ತಾವರೆನಾಳದಂತೆ ಕೋಮಲವಾದ ದೇಹವುಳ್ಳ ಜಿನದೇವನು ಶೋಭಾಮಯನಾಗಿ ಕಂಗೊಳಿಸಿದನು. ೨. ಚಂದ್ರಮಂಡಳದೊಳಗೆ ಅಮೃತದ ಹನಿಗಳು ಚೆಲುವಾಗಿ ಹೊಮ್ಮಿ ಬರುವಂತೆ, ಮನೋಹರವಾದ ಮುಖಬಿಂಬದಲ್ಲಿ ಚೆಲುವನ್ನು ಚಿಗುರಿಸುತ್ತ ಪೊಳೆಹಲ್ಲುಗಳು ಮೂಡಿ ಕಣ್ಣಿಗೆ ಸೊಗಸಾದವು. ೩. ಎಳೆಹುಲ್ಲಿನ ಹಸಲೆಯ ಮೇಲೆ ಮೆಲ್ಲಮೆಲ್ಲಗೆ ನಡೆದಾಡುವ ಮರಿಹಂಸವೊ ಏನೊ ಎಂಬಂತೆ ಪಚ್ಚೆಯ ನೆಲಗಟ್ಟಿನ ಮೇಲೆ ದಟ್ಟಡಿಯಿಡುವ ರಾಜಕುಮಾರನು ಶೋಭಿಸಿದನು. ೪. ತಾವರೆಯಲ್ಲಿ ಪರಾಗದಿಂದ ನಸುಗೆಂಪಾದ ದುಂಬಿಗಳು ಗುಂಗುಂ ಗಾನ ಮಾಡುತ್ತಿವೆಯೊ ಏನೊ ಎಂಬಂತೆ ಬಾಲಕನು ದಟ್ಟಡಿಯಿಡುತ್ತಿರುವಾಗ ಆತನ ಕಾಲಲ್ಲಿಯ

ಪಿರಿದುಂ ರಜಸ್ತಮೋಗುಣ ।
ವೆರಡುಮನಿರದಿಕ್ಕಿ ಮೆಟ್ಟಿದಂ ಶಿಶುತೆಯೊಳಂ ॥
ಪರಮನೆನಿಸಿದುದು ಪುದಿದಿರೆ ।
ಚರಣದ್ಯುತಿ ನೀಲಕುಟ್ಟಿಮದೆ ದಟ್ಟಡಿಯೊಳ್ ॥ ೫

ಸುರದಾರಕತತಿ ತಾರಕ ।
ಪರಿಕರಮೆನೆ ಪಂಚರತ್ನಪಾಂಶುಪರೀತಂ ॥
ಕರಮೆಸೆದಂ ಜಿನಚಂದ್ರಂ ।
ಪರಿವೇಷದ ಚಂದ್ರನೆನೆ ಶಿಶುಕ್ರೀಡಿತದೊಳ್ ॥ ೬

ಎಲೆಯರಳೆಲೆ ಮಾಂಗಾಯ್ ಕಾಯ್ ।
ತೊಳಗುವ ಕಣ್ಮಲರಲರ್ ಮುಗುಳ್ನಗೆ ಚೆಲ್ವಂ ॥
ತಳೆದ ಮುಗುಳ್ನಗೆಯೆನೆ ಕ ।
ಣ್ಗೊಳಿಪಂ ಶಿಶು ಕಲ್ಪಕುಜದ ಸಸಿಯೆಂಬಿನೆಗಂ ॥ ೭

ಅನಿಮಿತ್ತಂ ಪನೆಗಳ್ ಪಳಚ್ಚನೆಸೆವನ್ನಂ ಮಂದಹಾಸಪ್ರಕಾ ।
ಶನಮಂ ಮುದ್ದುಮೊಗಕ್ಕೆ ತಂದು ಪರಿತಂದಪ್ಪಪ್ಪೆನುತ್ತಪ್ಪಿ ಪಿಂ ॥
ದನೆ ಪೊಕ್ಕೊಯ್ಯನಡಂಗಿ ದಾಯೆನುತೆ ಮತ್ತೆಯ್ತಂದು ಮುಂಡಾಡಿ ಭೂ ।
ಪನುಮಂ ದೇವಿಯುಮಂ ಪ್ರಮೋದರಸದೊಳ್ ತೇಂಕಾಡಿಪಂ ನಂದನಂ ॥ ೮

ಚಿನ್ನದ ಅಂದುಗೆಗಳು ನಾದಗೊಳ್ಳುತ್ತಿದ್ದುವು. ೫. ರಜೋಗುಣ ತಮೋಗುಣಗಳೆರಡನ್ನೂ ಶೈಶವದಲ್ಲಿಯೆ ಇಕ್ಕಿ ಮೆಟ್ಟಿದನೋ ಏನೋ ಎಂಬಂತೆ ದಟ್ಟಡಿಯಿಡುವ ಆ ಪರಮೇಶ್ವರನ ಪಾದಕಾಂತಿ ನೀಲದ ನೆಲೆಗಟ್ಟಿನಲ್ಲಿ ಆವರಿಸಿಕೊಂಡಿತ್ತು. ೬. ದೇವಕುಮಾರಕರು ತಾರೆಗಳ ಬಳಗದಂತಿರಲು, ಪಂಚರತ್ನಾಭರಣಗಳ ಪ್ರಭೆ ತನ್ನ ಸುತ್ತಲೂ ಹೊಮ್ಮುತ್ತಿರುವ ಆ ಜಿನಶಿಶು ಪರಿವೇಷಗೊಂಡ ಚಂದ್ರನಂತೆ ಶೋಭಿಸಿದನು. ೭. ಅರಳೆಲೆಯು ಎಲೆ, ಮಾಗಾಯಿಯೆ ಕಾಯಿ, ಕಾಂತಿಮಯವಾದ ಕಣ್ಣುಗಳೆ ಹೂಗಳು, ಮುಗುಳ್ನಗೆಯೆ ಚೆಲುವಾದ ಮುಗುಳುಗಳ ವಿಕಾಸವಾಗಲಾಗಿ ಬೆಡಗಾದ ಆ ಶಿಶು ಕಲ್ಪವೃಕ್ಷದ ಸಸಿಯೆಂಬಂತೆ ಕಂಗೊಳಿಸಿತು. ೮. ಮೊಳೆ ಹಲ್ಲುಗಳು ಪಕ್ಕನೆ ಮಿಂಚುವಂತೆ ನಿರ್ನಿಮಿತ್ತವಾದ ನಸುನಗೆಯನ್ನು ಮುಖಕ್ಕೆ ತಂದು, ಓಡುತ್ತ ಬಂದು ಅಪ್ಪಪ್ಪ ಎನ್ನುತ್ತ ಅಪ್ಪಿಕೊಂಡು, ಆ ಮಗು ಹಿಮ್ಮಗ್ಗುಲಿಗೆ ಹೋಗಿ ಅಡಗಿಕೊಂಡು 'ದಾ'ಯೆನ್ನುತ್ತ ಮತ್ತೆ ಮುಂಬಂದು ಮುಂಡಾಡಿ ಅರಸನನ್ನೂ

ನಲಿವ ನಿಜಬಂಧುಗಳ ಕರ।
ತಲದಿಂ ಕರತಳಕೆ ಬಾಳಕಂ ಬರುತಿರ್ದಂ॥
ಬೆಲೆಯಿಡಲಣಮಱೆಯದ ಮಂ।
ಡಲಿಗಳ್ ಪರಿಕಿಪ ಪರಾರ್ಧ್ಯಮಣಿಯೆಂಬಿನೆಗಂ॥ ೯

ಅದಲ್ಲದೆಯುಮಮರ್ತ್ಯಧಾತ್ರೀಸಾರ್ಥಮುಜ್ಜುಗಿಪ ಸಜ್ಜೆಯ ಮಜ್ಜನದ ಸಜ್ಜೀಕರಣದೊಳ ಮಸ್ವಪ್ನಯಾಮಿಕಾಸಮೂಹಮನುಸರಿಸುವಿರುಳ ಪಗಲ ಸುವಿಧಾನದೊಳಮಮೃತಾಶನಮಹಾನಸ ಪ್ರತತಿ ಪದವಡಿಸುವನ್ನಪಾನದ ವ್ಯವಹರಣದೊಳಮಭಿನವೇಂದುಸಂಕಾಶತೆಯಿನನುದಿನಂ ಬಳೆಯೆ ಬಳೆಯೆ

ಏನಂ ಪೇೞ್ವುದೊ ಮೇಷಮಲ್ಲಮಹಿಷಾದ್ಯಾಕಾರಮಂ ತಾಳ್ದಿ ಬಂ।
ದಾ ನಾಕಾಧಿಪಬಾಳಕರ್ ಬಿನದದಿಂ ಪೋರ್ದಾಡೆಯುಂ ಮುಂದದೆ॥
ತ್ತಾನುಂ ದೇವನ ಚಿತ್ತದೊಳ್ ನಲವು ಪುಟ್ಟತ್ತಿಲ್ಲ ನೋೞ್ಪಂದು ಹಿಂ।
ಸಾನಂದಕ್ಕೊಳಗಾಗಲೇನಱೆಗುಮೇ ಶಾಂತಾತ್ಮನೆಂತಿರ್ದೊಡಂ॥ ೧೦

ಅದಲ್ಲದೆಯುಂ

ಗುರು ಪೆಱನಾವಂ ತ್ರಿಜಗ।
ದ್ಗುರುಗೆನೆ ಸಂಸ್ಕಾರವಶದೆ ಕಮನೀಯಕಳೋ॥
ತ್ಕರಮುಮನುತ್ತಮಶಾಸ್ತ್ರೋ।
ತ್ಕರಮುಮನಭ್ಯಸಿಸದಾಗಳಱೆದನನಿಂದ್ಯಂ॥ ೧೧

ಅರಸಿಯನ್ನೂ ಆನಂದರಸದಲ್ಲಿ ತೇಲಾಡಿಸುವನು. ೯. ಪರೀಕ್ಷಕ ಮಂಡಲಿಗಳು ಕೈಯಿಂದ ಕೈಗೆ ಸಾಗಿಸುತ್ತ ನೋಡುತ್ತಿರುವ ಅಮೂಲ್ಯವಾದ ರತ್ನವೊ ಏನೊ ಎಂಬಂತೆ ಹಿಗ್ಗುತ್ತಿರುವ ತನ್ನ ಬಂಧುಗಳ ಕೈಯಲ್ಲಿ ಬಾಲಕನು ಓಡಾಡುತ್ತಿದ್ದನು. ವ॥ ಅದಲ್ಲದೆ ದೇವಲೋಕದಿಂದ ಬಂದ ದಾದಿಯರು ಏರ್ಪಡಿಸುವ ಹಾಸುಗೆಯ, ಸ್ನಾನದ ಸೇವೆಯಲ್ಲಿಯೂ, ಸದಾಕಾಲ ಬಳಸಿಕೊಂಡಿರುವ ರಕ್ಷಕರ ಸಹವಾಸದಲ್ಲಿಯೂ, ಅಮೃತಾನ್ನವನ್ನು ಸಿದ್ಧಪಡಿಸಿ ಬಡಿಸುವ ದೇವಲೋಕದ ಬಾಣಸಿಗರ ಪರಿಚರ್ಯೆಯಲ್ಲಿಯೂ ಬಿದಿಗೆಯ ಚಂದ್ರನಂತೆ ಆ ಮಗು ದಿನದಿನಕ್ಕೆ ಬೆಳೆಯುತ್ತಿರಲಾಗಿ– ೧೦. ಇವನಿಗೆ ಸಂಗಡಿಗರಾಗಿರಲು ಇಂದ್ರನಿಂದ ನಿಯುಕ್ತ ರಾದ ದೇವಕುಮಾರರು ತಗರು, ಕೋಣ, ಜಟ್ಟಿ ಮೊದಲಾದ ಆಕಾರಗಳನ್ನು ತಾಳಿ ಈತನ ವಿನೋದಾರ್ಥವಾಗಿ ಹೋರಾಡಿ ತೋರಲು, ಅದನ್ನು ಕಂಡು ಈ ಜಿನ ಬಾಲಕನ ಚಿತ್ತದಲ್ಲಿ ಸಂತೋಷವುಂಟಾಗಲಿಲ್ಲ. ಶಾಂತಾತ್ಮನಾದವನು ಎಂದಾದರೂ ಹಿಂಸೆಯನ್ನು ಕಂಡು ಆನಂದಪಡುವುದು ಸಾಧ್ಯವೆ ? ಅದಲ್ಲದೆ– ೧೧. ಮೂರು ಲೋಕಗಳಿಗೂ ಗುರುವಾದವನಿಗೆ ಇನ್ನಾವ ಗುರುವಿರಲು ಸಾಧ್ಯವೆಂಬಂತೆ, ತನ್ನ ಸಂಸ್ಕಾರ ಬಲದಿಂದ ಲಲಿತವಾದ ಕಲೆಗಳನ್ನೂ ಉತ್ತಮವಾದ

ಕ್ಷಿತಿಪತಿಸುತನೊಳ್ ಜ್ಞಾನ ।
ತ್ರಿತಯಂ ಸಹಜಂ ಮತಿ ಶ್ರುತಾವಧಿಯೆನೆ ತ ॥
ನ್ಮತಿಯಂ ಶ್ರುತಮಮಂ ಬೋಧೋ ।
ದ್ಗತಿಯಂ ಬಣ್ಣಿಸುವೆನೆಂಬ ನುಡಿ ಪುನರುಕ್ತಂ ॥ ೧೨

ಮತ್ತಂ ನಿತ್ಯನಿಸ್ವೇದವೃತ್ತಿಯುಂ, ಸಕಳಶಾರೀರಮಳವಿಹೀನತ್ವಮುಂ, ಶುದ್ಧಧವಳರುಚಿರತೆಯುಂ, ಸಮಚತುರಶ್ರಸಂಸ್ಥಾನಪ್ರಕೃತಿಯುಂ, ವಜ್ರ ವೃಷಭನಾರಾಚಖಚಿತಶರೀರಸಂಧಿಸಂಧಾನಸಂಪತ್ತಿಯುಂ, ತ್ರಿಲೋಕಲೋಚನಮನಃಪ್ರಾಹ್ಲಾದಸಂಪಾದನಸಮರ್ಥಸೌಂದರ್ಯಮುಂ, ಸಂಮಿಳಿತ ಸಕಳಸೌರಭಪ್ರಭಾವಾಭಿನವಬಂಧುರಸೌಗಂಧ್ಯಮುಂ, ಸ್ವಸ್ತಿಕಾಂಕುಶತಿಳಮಸೂರಿಕಾದ್ಯಷ್ಟೋತ್ತರ ಶತಲಕ್ಷಣನವಶತವ್ಯಂಜನೋಪರಂಜಿತಾಗಣ್ಯಸೌಲಕ್ಷಣ್ಯಮುಂ, ಮೃದುಮಧುರಗಂಭೀರೋದಾರ ಪ್ರಿಯಹಿತವಚನವೈಚಿತ್ರ್ಯಮುಂ, ಪ್ರತಿಹತಾನಂತವೀರ್ಯಗುಣಮುಮೆಂಬ ದಶವಿಧಸಹಜಾತಿಶಯ ಸಂಪನ್ನಮುಂ, ಪವನಪಿತ್ತಪೀನಸಾಸತ್ವಮಸಂಭಾವನಾಮಯವಿಜಯನೋಕರ್ಮಾಪಚಯಾದ್ಯು ಪಘಾತವ್ಯಪೇತಮುಂ, ಅಶೇಷವಿಷಪಾಷಾಣಕಾಷ್ಠಾಕಂಟಕಾಯುಧಾಗ್ನಿ ವಾತವರ್ಷಶೀತಾತಪಾದಿ ಬಾಧಾನಿರ್ಭೇದ್ಯಮುಂ, ನಿರತಿಶಯೇಂದ್ರಿಯಾತೀಂದ್ರಿಯಾರ್ಥಸಮುಪಗತಾಭ್ಯುದಯನಿಶ್ರೇಯಸ ಸುಖಸಾಧನಮುಂ, ಪಂಚಾಶದುತ್ತರಚಾಪಪರಿಮಿತೋತ್ಸೇಧಮುಂ, ನಿರಾಕೃತತುಷಾರಗೋಕ್ಷೀರಹಾರ

ಶಾಸ್ತ್ರಗಳನ್ನೂ ಆತನು ಅಭ್ಯಾಸ ಮಾಡದೆಯೆ ಅರಿತುಕೊಂಡನು. ೧೨. ಮತಿ, ಶ್ರುತ ಮತ್ತು ಅವಧಿಯೆಂಬ ಮೂರು ಬಗೆಯ ಜ್ಞಾನಗಳೂ ಈ ಕುಮಾರನಿಗೆ ಜನ್ಮಜಾತವೆಂದ ಮೇಲೆ, ಆತನ ಮತಿ (ಬುದ್ಧಿ) ಯನ್ನೂ, ಶ್ರುತ (ಪಾಂಡಿತ್ಯ)ವನ್ನೂ, ಅರಿವಿನ ಅಧಿಕ್ಯವನ್ನೂ ಬಣ್ಣಿಸುವುದು ಪುನರುಕ್ತಿಯೆ ಸರಿ. ವ॥ ಆತನಿಗೆ ನಿತ್ಯವಾಗಿ ಬೆವರಿಲ್ಲದ ದೇಹಗುಣ ; ದೇಹದಲ್ಲಿ ಯಾವುದೇ ಬಗೆಯ ಮಲ ಎಷ್ಟೂ ಇರಲಾರದು; ಅಚ್ಚ ಬಿಳಿಯ ಕಾಂತಿ; ಸಮಚತುರಶ್ರವಾದ ಮೈಕಟ್ಟು; ವಜ್ರವೃಷಭನಾರಾಚ ಖಚಿತವಾದ ಶರೀರಸಂಧಿಗಳು; ತ್ರಿಲೋಕಗಳ ಕಣ್ಣು ಸೆಳೆವಂತಹ ಸೌಂದರ್ಯ; ಸಕಲಸುಗಂಧಸಾರವನ್ನೊಳಗೊಂಡಂತಿರುವ ದೇಹ ಪರಿಮಳ; ಸ್ವಸ್ತಿಕ, ಅಂಕುಶ, ತಿಲ, ಮಸೂರಿಕೆ ಮೊದಲಾದ ನೂರ ಎಂಟು ಲಕ್ಷಣಗಳು ಹಾಗು ಒಂಬಯ್ನೂರು ವ್ಯಂಜನಗಳು; ಮೃದುವಾಗಿಯೂ ಮಧುರವಾಗಿಯೂ, ಗಂಭೀರವಾಗಿಯೂ ಇರುವ ಪ್ರಿಯವಾದ ಹಾಗು ಹಿತವಾದ ವಚನ ಚಾತುರ್ಯ ; ಹತ್ತು ಬಗೆಯ ಸಹಜ ಅತಿಶಯಗಳು ; ವಾತ-ಪಿತ್ತ-ಪೀನಸ-ಅಶಕ್ತಿ ಮೊದಲಾದವುಗಳಿಲ್ಲದ ಆರೋಗ್ಯವಂತ ಸ್ಥಿತಿ; ನೋಕರ್ಮಗಳೆ ಮೊದಲಾದ ಉಪಘಾತಗಳ ಸಂಪರ್ಕವೇ ಇಲ್ಲದಿರುವಿಕೆ; ವಿಷ, ಪಾಷಾಣ, ಕಾಷ್ಠ, ಕಂಟಕ, ಆಯುಧ, ಬೆಂಕಿ, ಗಾಳಿ, ಮಳೆ, ಚಳಿ, ಬಿಸಿಲು ಮೊದಲಾದ ಯಾವ ಬಾಧೆಗೂ ಒಳಪಡದ ಸ್ಥಿತಿ; ಅತ್ಯಂತ ಅತಿಶಯವಾದ ಇಂದ್ರಿಯಾರ್ಥ ಹಾಗು ಅತೀಂದ್ರಿಯಾರ್ಥ ಅಭ್ಯುದಯಕ್ಕೂ, ನಿಶ್ರೇಯಸಕ್ಕೂ ಸುಖಸಾಧನವಾದ ಅಂಗರಚನೆ; ಐವತ್ತು

ಕಾಂತಿಸಂತಾನಧವಳರುಚಿನಿಚಿತಮುಂ, ದಶಲಕ್ಷಪೂರ್ವಪರಿಮಿತಾಯುಷ್ಯಮುಮಪ್ಪ ಚರಮಪರಮ ದಾರಿಕ ಶರೀರಮಂ ತಳೆದು ಎರಡು ಲಕ್ಕೆಯುಮಯ್ವತ್ತು ಸಾಸಿರ ಪೂರ್ವಂ ಕುಮಾರಕಾಲಂ ನೆಱಿಿದು ದೆಂಬಂದದಿನಿರೆ

ನಗೆಗಣ್ಗಳ್ ಸೋಲಮಂ ಕೈರವದೊಳೊಡರಿಸಲ್ ಸ್ಮೇರನೀರೇಜದೊಳ್ಪಂ ।
ಮೊಗಮಿತ್ತೊಪ್ಪಲ್ ಮೊಗಂ ಪೇರುರಮುರದೆಗೊಳಲ್ ಶ್ರೀಯನಿಂದು ಪ್ರಭಾಶೋ ॥
ಭೆಗೆ ಮೆಯ್ ಮೆಯ್ಯಾರ್ಚಲ್ಕೆರಾವತಕರಪರಿಘಾಕಾರಮಂ ಕೈಕೊಳಲ್ ಮುಂ ।
ಬಗೆವನ್ನಂ ಯೌವನಶ್ರೀ ಪಡೆದುದು ಪರಮೇಶಾಂಗಮಂ ಪೊರ್ದಿ ಚೆಲ್ವಂ ॥ ೧೩

ಉದಯದಿನಂ ಸಮಗ್ರಕರವೃತ್ತಿಯನೆಯ್ದಿದ ಶಕ್ತಿಗೆ ಪಾರಿಜಾ ।
ತದ ಸಸಿ ಚಾರುವೃತ್ತತೆಯನಾಂತೆಸಕಂ ಶಿಶುಭಾವದಿಂದು ಮಾ ॥
ಣದೆ ಸಕಳತ್ವಮಂ ತಳೆದ ಚೆಲ್ವಿನಿತುಂ ತನಗಾದುದಾವಗಂ ।
ಪುದುವೆನೆ ದೇವನೇಂ ನೆಱಿದ ಜವ್ವನದೊಪ್ಪಮನಪ್ಪುಕೆಯ್ದನೋ ॥ ೧೪

ಒಡವಂದುವು ಮಱುಭವಮಂ ।
ಬಿಡದಹಮಿಂದ್ರತೆಯ ಶೈಲಿಯುಂ ಮೆಯ್ವೆಳಗುಂ ॥
ಗಡಣದಿನೆನೆ ವಿಮಳತೆಯಂ ।
ಪಡೆದುದು ತದ್ರಾಜಸುತನ ಮನಮುಂ ತನುವುಂ ॥ ೧೫

ಬಿಲ್ಲಳತೆಯ ಎತ್ತರ; ಮಂಜು–ಹಾಲು–ಮುತ್ತಿನಹಾರಗಳ ಧವಲಕಾಂತಿಯನ್ನು ಧಿಕ್ಕರಿಸುವಂತಹ ಬೆಳ್ಳಗಿನ ಪ್ರಭೆ; ಹತ್ತುಲಕ್ಷ ಪೂರ್ವ ಆಯುಷ್ಯ; ಇವುಗಳನ್ನೆಲ್ಲ ಒಳಗೊಂಡ ಶ್ರೇಷ್ಠವಾದ ಔದಾರಿಕ ಶರೀರ. ಈ ಸೌಭಾಗ್ಯವನ್ನು ಪಡೆದ ಆ ಜಿನ ಬಾಲಕನು ಎರಡುಲಕ್ಷ ಐವತ್ತು ಸಾವಿರ ಪೂರ್ವಪ್ರಮಾಣದ ಕುಮಾರ ಕಾಲವನ್ನು ಕಳೆಯಲಾಗಿ– ೧೩. ನಗೆಗಣ್ಣುಗಳು ಕನ್ನೈದಿಲೆಯನ್ನು ಸೋಲಿಸಿದುವು; ಅರಳಿದ ತಾವರೆಯ ಶೋಭೆಯನ್ನು ಮುಖ ತಾಳಿತು; ಅಗಲವಾದ ಎದೆ ಲಕ್ಷ್ಮಿಗೆ ಆಶ್ರಯವಾಯಿತು; ಚಂದ್ರಕಾಂತಿಯ ಶೋಭೆಗೆ ಮೈಕಾಂತಿ ಸೆಣಸಿತು;– ಹೀಗೆ ಬಂದ ಯೌವನದ ಸಂಪತ್ತು ಪರಮೇಶ್ವರನ ದೇಹವನ್ನೂ ಹೊಂದಿ ಚೆಲುವನ್ನು ಪಡೆಯಿತು. ೧೪. ಸಮಗ್ರಕಿರಣ ಶಕ್ತಿಯನ್ನು ವೃದ್ಧಿಪಡಿಸಿಕೊಳ್ಳುತ್ತಿರುವ ಪ್ರಭಾತ ಸೂರ್ಯನಂತೆ, ಸೌಂದರ್ಯ ವಿಕಾಸವನ್ನು ತಾಳುತ್ತಿರುವ ಪಾರಿಜಾತದ ಸಸಿಯಂತೆ, ಕಲೆಗಳನ್ನು ಹೊಂದುತ್ತಿರುವ ಬಾಲಚಂದ್ರನಂತೆ– ಈ ಮೂರರ ಚೆಲುವಿನ ಸಂಚಯ ಸಮೃದ್ಧಿಯಿಂದ ದೇವನ ಯೌವನವು ಅದೆಂತಹ ಒಪ್ಪವನ್ನು ಪಡೆದುವು! ೧೫. ಅಹಮಿಂದ್ರಭವದ ಚಾರಿತ್ರ ಹಾಗು ಶರೀರಕಾಂತಿಗಳು ಈ ಜನ್ಮಕ್ಕೂ ಅವನಿಗೆ ಅಂಟಿಕೊಂಡು ಬಂದವೊ ಏನೊ ಎಂಬಂತೆ ಆ ರಾಜಕುಮಾರನ ಮನಸ್ಸೂ, ದೇಹವೂ ನಿರ್ಮಲತೆಯನ್ನು ಪಡೆಯಿತು.

ಪೊಸಮುತ್ತಿಂ ಸಮೆದಂತೆ ನುಣ್ಬೆಳಿಕಿನಿಂ ಗೆಯ್ದಂತೆ ಕರ್ಪೂರದಿಂ ।
ದೆಸೆಯಾಚ್ಛಾದಿಸಿದಂತೆ ಕೋಮಳಮೃಣಾಳೀಕಾಂಡದಿಂ ಮಾಡಿದಂ ॥
ತೆ ಸುಧಾಂಭೋನಿಧಿಫೇನದಿಂ ನೆಱಪಿದಂತಾಶ್ಚರ್ಯಮಂ ಕಣ್ಗೆ ಪು ।
ಟ್ಟಿಸಿ ಚಂದ್ರಪ್ರಭಮೂರ್ತಿಯೇಂ ತಳೆದುದೋ ಧಾವಲ್ಯಸಾಕಲ್ಯಮಂ ॥ ೧೬

ಘನಭಂಗಂ ಗಾಂಗತೋಯಂ ಜಡವಿಕೃತಿಮಯಂ ಮೌಕ್ತಿಕಂ ದಕ್ಷಿಣಾ ವ ।
ರ್ತನಯುಕ್ತಂ ಪಾಂಚಜನ್ಯಂ ಪ್ರಕೃತಿತರಳಮೂರ್ಜಾಂಬುದಂ ಕಂಟಕವ್ರಾ ॥
ತನಿರುದ್ಧಂ ಪುಂಡರೀಕಂ ಬಗೆವೊಡೆ ದಿಟಮೆಂದೊಲ್ಲದನ್ಯೂನಶೋಭಾ ।
ಭಿನವಂ ತಾನೆಂದು ಚಂದ್ರಪ್ರಭನನೆ ಪರಿಪಾಂಡುಪ್ರಭಾಲಕ್ಷ್ಮಿ ಸಾರ್ದಳ್ ॥ ೧೭

ಒಳಗಮರ್ದುಱಿದಿರೆ ಶಶಿಮಂ ।
ಡಳಮಂ ಕಂಡರಿಸಿ ಪಡೆದ ಪೊಸಪರಿಜೆನೆ ಕ ॥
ಣ್ಗೊಳಿಸಿದುದಮಳದಯಾರಸ ।
ಕಳಿತಮನೋವೃತ್ತಿಮೂರ್ತಿ ಚಂದ್ರಪ್ರಭನಾ ॥ ೧೮

ಮತ್ತಂ

೧೬. ಹೊಸಮುತ್ತಿನಿಂದ ನಿರ್ಮಿಸಿದಂತೆ, ನುಣುಪಾದ ಬೆಳಕಿನಿಂದಲೆ ರಚಿಸಿದಂತೆ, ಕಪ್ಪುರದಿಂದ ಹೊದಿಸಿದಂತೆ, ಸುಕುಮಾರವಾದ ತಾವರೆನಾಳದಿಂದಲೆ ಮಾಡಿದಂತೆ, ಅಮೃತಸಮುದ್ರದ ನೊರೆಯನ್ನು ಲೇಪಿಸಿದಂತೆ ಅತ್ಯಂತ ಧವಳವಾದ ಕಾಂತಿಯಿಂದ ಚಂದ್ರಪ್ರಭನ ರೂಪವು ಕಣ್ಣಿಗೆ ಆಶ್ಚರ್ಯವನ್ನುಂಟುಮಾಡಿತು. ೧೭. ಗಂಗಾನದಿಯ ನೀರು "ಘನಭಂಗ" (೧. ಅತಿಶಯವಾದ ಅಸುಖವನ್ನುಂಟುಮಾಡುವುದು. ೨. ದೊಡ್ಡ ದೊಡ್ಡ ಅಲೆಗಳುಳ್ಳದು); ಮುತ್ತು "ಜಡವಿಕೃತಿಮಯ" (೧. ಮೂರ್ಖ ವಿಕಾರಗಳಿಂದ ತುಂಬಿದುದು. ೨. ನೀರಿನ ವಿಕಾರವುಳ್ಳದು) ; ಪಾಂಚಜನ್ಯ ಶಂಖವು "ದಕ್ಷಿಣಾ ವರ್ತನಯುಕ್ತ" (೧. ಯಮದಿಕ್ಕಿಗೆ ಹೊರಳುವಂತಹುದು. ೨. ಬಲಮುರಿಯುಳ್ಳದು); ಕಾರ್ತಿಕಮಾಸದ ಮೋಡವು "ಪ್ರಕೃತಿತರಳ" (೧. ಸ್ವಭಾವತಃ ಸ್ತ್ರೀಲಂಪಟ ೨. ಸ್ವಾಭಾವಿಕವಾಗಿಯೆ ಚಂಚಲ); ಬೆಳ್ದಾವರೆ "ಕಂಟಕವ್ರಾತನಿರುದ್ಧ" (೧., ಉಪದ್ರವಗಳ ಸಮೂಹದಲ್ಲಿ ಸಿಕ್ಕಿಬಿದ್ದುದು. ೨. ಮುಳ್ಳುಗಳ ಆತಂಕಕ್ಕೆ ಒಳಗಾದುದು) –ಆದುದರಿಂದ ಇವು ಯಾವುವೂ ತನಗೆ ಸೊಗಸವೆಂದು ಬಿಟ್ಟುಬಂದು ಧವಳವರ್ಣಲಕ್ಷ್ಮಿಯು ಯಾವ ಕುಂದುಕೊರತೆಗಳೂ ಇಲ್ಲದ ಚಂದ್ರಪ್ರಭನ ಹೊಸ ಶೋಭಾವಹಮೂರ್ತಿಯನ್ನು ಮೆಚ್ಚಿ ಸೇರಿದಳು. ೧೮. ಒಳಗಿನ ಅಮೃತವನ್ನು ಉಳಿಸಿಕೊಂಡಿರುವಂತೆ ಚಂದ್ರಮಂಡಳವನ್ನು ಕಂಡರಿಸಿ ಮಾಡಿದ ರೂಪವೊ ಏನೊ ಎಂಬಂತೆ ಚಂದ್ರಪ್ರಭನಲ್ಲಿ ಪರಿಶುದ್ಧವಾದ ದಯಾರಸದಿಂದ ತುಂಬಿದ ಮನೋವೃತ್ತಿ ಕಂಗೊಳಿಸಿತು. ಮತ್ತು–

ಭುವನೋದ್ಧಾರಕಮಪ್ಪ ತೋಳ್ಗಿನಿತು ನೀಳ್ಪಕ್ಷೂಣಲಕ್ಷ್ಮೀವಿಹಾ।
ರವಿಳಾಸೋಚಿತಮಪ್ಪುರಕ್ಕಿನಿತು ಪೆಂಪಾಶ್ಚರ್ಯಸೌಂದರ್ಯವ॥
ರ್ಯವಚಶ್ರೀಕುಳಸದ್ಮಮಪ್ಪ ವದನಾಂಭೋಜಕ್ಕಿನಿತೊಪ್ಪಮೊ।
ಪ್ಪುವುದೆಂಬಂತಿರೆ ರೂಪುಜೌವನದೊಳೇನೊಳ್ಪಿಂಗಡರ್ಪಾದುದೋ॥ ೧೯

ಇಲ್ಲಿಂದಿತ್ತಲ್ ಪೊರ್ದುಗೆ।
ಯೆಲ್ಲಿಯದಭವಂಗಮೆನಗಮೆಂದಾಕೃತಿಯೊ॥
ಳ್ಪೆಲ್ಲಂ ನೆಲಸಿದುದೆನೆ ತವಿ।
ಲಿಲ್ಲದ ಚೆಲ್ವಿಂಗೆ ಚರಮತನು ತೊಡವಾಯ್ತೋ॥ ೨೦

ಅದಲ್ಲದೆಯುಂ

ಪರಿಪೂರ್ಣಂ ಜೌವನಂ ಸಂಗಡಿಸಿರೆ ಪರಮೌದಾರಿಕಂ ಮೂರ್ತಿ ದಿವ್ಯಾಂ।
ಬರಭೂಷಾಲೇಪಮಾಲ್ಯೋತ್ಕರವಿರಚಿತನೈಪಥ್ಯಸಂಭೂತಶೋಭಾ॥
ಪರಿತಂ ಬೇಱೊಂದಿದಾಪೂರಿತವಿಮಳಕಳಾಚಂದ್ರಬಿಂಬಂ ಸಮುದ್ಯ।
ತ್ಕರಜಾತಶ್ರೀಯುತಂ ತಾನೆನೆ ನಯನಚಕೋರಕ್ಕೆ ಮಾಡಿತ್ತಲಂಪಂ॥ ೨೧

ಕರತಳಕಾಂತಿಪಲ್ಲವಿತಪಾಂಡುಕಪೋಳೆಯರಶ್ರುಬಿಂದುವಿ।
ಸ್ತರತರಸೂಕ್ಷ್ಮಪಕ್ಷ್ಮಪುಟಿಕಾಂಚಳೆಯರ್ ಘನಸಾರರೇಣುಪಾಂ॥

೧೯. ಲೋಕವನ್ನೆ ಉದ್ಧಾರಮಾಡುವ ತೋಳಿಗೆ ಇಷ್ಟೊಂದು ನೀಳ, ಅಕ್ಷಯವಾದ ಲಕ್ಷ್ಮಿಯ ವಿಹಾರವಿಲಾಸಕ್ಕೆ ಯೋಗ್ಯವಾದ ಈ ಎದೆಗೆ ಇಷ್ಟೊಂದು ಹರವು, ಆಶ್ಚರ್ಯಕರವೂ ಸುಂದರವೂ ಆದ ವಾಕ್ಸಂಪತ್ತಿಗೆ ನೆಲೆಯೆನಿಸಿದ ಮುಖಕಮಲಕ್ಕೆ ಇಷ್ಟೊಂದು ಶೋಭೆ ಇರತಕ್ಕುದೆ ಎಂಬಂತೆ ಯೌವನದಲ್ಲಿ ಆತನ ರೂಪು ಬೆಡಗಿಗೆ ಆಶ್ರಯವಾಯಿತು. ೨೦. "ಈ ಜನ್ಮ ಕಳೆದ ಮೇಲೆ ಈ ಪರಮೇಶನಿಗೂ ನನಗೂ ಇನ್ನೆಲ್ಲಿಯ ಸಂಪರ್ಕ ?" ಎಂದುಕೊಂಡು ದೇಹಸೌಂದರ್ಯದ ಸಾರಸರ್ವಸ್ವವೂ ಆತನಲ್ಲಿ ಬಂದು ನೆಲಸಿತೆಂಬಂತೆ ಅಕ್ಷಯವಾದ ಸೌಂದರ್ಯಕ್ಕೆ ಆತನ ಚರಮದೇಹ ತೊಡವಾಯಿತು. ಅದಲ್ಲದೆ- ೨೧. ಪರಮ ಔದಾರಿಕವಾದ ಶರೀರಕ್ಕೆ ಪರಿಪೂರ್ಣವಾದ ಯೌವನ ಅಳವಟ್ಟಿರಲಾಗಿ, ದಿವ್ಯವಾದ ವಸ್ತ್ರ, ಭೂಷಣ, ಆಲೇಪ, ಮಾಲ್ಯಾದಿಗಳಿಂದ ರಚಿಸಿದ ಪ್ರಸಾಧನ ಶೋಭೆಯೂ ಸಂಗಡಿಸಿರಲಾಗಿ, ಇದೊಂದು ಹೊಸಕಿರಣ ಸಮೂಹ ಹೊಮ್ಮುತ್ತಿರುವ ಪರಿಶುದ್ಧ ಕಲಾಪೂರ್ಣನಾದ ಬೇರೊಬ್ಬ ಚಂದ್ರನ ಬಿಂಬವೊ ಏನೊ ಎಂಬಂತೆ ಆತನ ರೂಪವು ಕಣ್ಣುಗಳೆಂಬ ಚಕೋರಗಳಿಗೆ ಹರ್ಷವನ್ನೊದಗಿಸಿತು. ೨೨. ಬಿಳಿಚಿದ ಕೆನ್ನೆಗಳ ಮೇಲೆ ತಮ್ಮ ಅಂಗೈಯ ಪಲ್ಲವ ಕಾಂತಿಯನ್ನು ಮೂಡಿಸಿಕೊಳ್ಳುತ್ತ, ತಮ್ಮ ನೀಳವಾದ ಕಣ್ಣುಗಳನ್ನು ಕಂಬನಿಗಳಿಂದ ತುಂಬಿಕೊಂಡು, ಕರ್ಪೂರಗಂಧ ರಸಗಳಿಂದ ಮೈಯನ್ನೆಲ್ಲ ಬಳಿದು

ಡುರಿತನತಾಂಸೆಯರ್ ಶ್ವಸಿತಸಂಕಟಗದ್ಗದಿಕಾಪ್ರಪಂಚವಿ ।
ಸ್ಫುರಿತಕುಚಾಗ್ರೆಯರ್ ಬಯಸ್ಸಿ ಬಾಯ್ವಿಡುವರ್ ಕುರುವಂಶಮೇರುವಂ ॥ ೨೨

ಎನಿತು ಸಿರಿಯೆನಿತು ಜವ್ವನ ।
ಮೆನಿತ್ತು ಸೌಭಾಗ್ಯಮೀಶನೊಳ್ ಸಮನಿಸಿದ ॥
ತ್ತನಿತೆ ಗುಣಮನಿತೆ ಸುಚರಿತ ।
ಮನಿತ್ತೆ ಶೌಚಂ ಪೊದುಟ್ದುದೇಂ ವಿಸ್ಮಯಮೋ ॥ ೨೩

ಅದಲ್ಲದೆಯುಂ

ಕೇವಲಬೋಧಸಂಜನನದಿಂ ಸಮನಿಪ್ಪಮನಸ್ಕವೃತ್ತಿ ಮೇಣ್ ।
ದೇವನನಿಂದೆ ಪೊರ್ದಲನುಗೆಯ್ದಪುದಕ್ಕುಮದೆಂಬ ಸಂದೆಗಂ ॥
ತೀವೆ ಸುಹೃಜ್ಜನಂಗಳ ಮನಂಗಳೊಳಾವಗಮಾಜವಂಜವ ।
ಶ್ರೀವಿಭವಂಗಳೊಳ್ ತೊಡರ್ದುವಿಲ್ಲ ಮನಂ ಪಿರಿದಾ ಮಹಾತ್ಮನಾ ॥ ೨೪

ಶಾಂತಾತ್ಮರ್ ತರಳೆಗೆ ಸಿರಿ ।
ಗೆಂತೆಱಪರೊ ವಾಣಿಯಂತೆ ಚತುರಯಶಶ್ರೀ ॥
ಯಂತಮಳಮುಕ್ತಿಯಂತೇ ।
ಕಾಂತಮನೋಹರಿಯಿವಳ್ ದಲೆಂದೊಣರ್ದಪರೇ ॥ ೨೫

ಅಂತಗಣ್ಯರೂಪಲಾವಣ್ಯತಾರುಣ್ಯಸೌಭಾಗ್ಯಭಾಗ್ಯಸಂಪತ್ಸಮೇತನಾಗಿ ಪ್ರಸುಪ್ತಮಕರಕೇತನ ವಿಜಯರತ್ನಾಕರದಂತಾಗಿಯುಮಪೇತಮಾನ್ಮಥವಿಕಾರಂ ಕುಮಾರನಿರೆ ಕಂಡು ಮಹಾಸೇನಮಂಡಳೇಶ್ವರಂ ವಿಸ್ಮಯಂಬಟ್ಟು,

ಕೊಂಡು, ನಿಟ್ಟುಸಿರಿಂದಲೂ ಸಂಕಟದಿಂದ ಹೊರಡುವ ಗದ್ಗದದಿಂದಲೂ, ನಡುಗುತ್ತಿರುವ ಮೊಲೆಗಳುಳ್ಳ ಪ್ರಮದೆಯರು ಕುರುವಂಶಾಗ್ರಗಣ್ಯನಾದ ಈ ಕುಮಾರನನ್ನು ಬಯಸಿ ಬಯಸಿ ಬಾಯಿಬಿಡುವರು. ೨೩. ಸೌಂದರ್ಯ, ಯೌವನ ಮತ್ತು ಸೌಭಾಗ್ಯ ಜಿನೇಶನಲ್ಲಿ ಎಷ್ಟೆಷ್ಟು ಅಳವಟ್ಟಿತೊ, ಅಷ್ಟಷ್ಟೆ ವಿಪುಲವಾಗಿ ಗುಣ, ಸಚ್ಚಾರಿತ್ರ ಹಾಗು ಶುಚಿತ್ವವೂ ಆತನಲ್ಲಿ ಪ್ರಕಾಶವಾದುವು. ಇದೆಂತಹ ವಿಸ್ಮಯ! ಅದಲ್ಲದೆ– ೨೪. ಕೇವಲ ಜ್ಞಾನೋದಯದಿಂದ ಉಂಟಾಗುವ ಸಂಸಾರ ನಿರಾಸಕ್ತಿ ದೇವನಲ್ಲಿ ಇಂದೇ ಅಳವಡುತ್ತಿದೆಯೊ ಏನೊ ಎಂಬ ಸಂಶಯು ತನ್ನ ಮಿತ್ರ ಜನರಲ್ಲಿ ಉಂಟಾಗುವಂತೆ, ಆ ಮಹಾತ್ಮನ ಹಿರಿಯ ಮನಸ್ಸು ಸಂಸಾರದ ವೈಭವಭೋಗಗಳಲ್ಲಿ ಎಷ್ಟೂ ತೊಡಗಲಿಲ್ಲ. ೨೫. ಶಾಂತಚಿತ್ತರು ಚಂಚಲವಾದ ಲಕ್ಷ್ಮಿಗೆ ಎಂತು ಒಲಿಯುವರು? ವಾಣಿಯಂತೆ, ಯಶೋಲಕ್ಷ್ಮಿಯಂತೆ, ನಿರ್ಮಲ ಮುಕ್ತಿಯಂತೆ ಈಕೆ ಏಕಾಂತ ಮನೋಹರಿಯೆಂದು ಭಾವಿಸುವರೆ? ವ॥ ಹೀಗೆ ಅಸೀಮವಾದ ಯೌವನ, ಸೌಂದರ್ಯ, ಸೌಭಾಗ್ಯ, ಭಾಗ್ಯ ಸಂಪತ್ತುಗಳನ್ನು ಹೊಂದಿದವನಾಗಿ ಅಕ್ಷುಬ್ಧವಾದ ಮದನಸಮುದ್ರದಂತಿದ್ದರೂ, ಮನ್ಮಥವಿಕಾರಗಳನ್ನೇ

ಸಹಜಜ್ಞಾನಮನೋಹರಂ ಚರಮದೇಹಂ ಮೋಕ್ಷಲಕ್ಷ್ಮೀಕೃತ।
ಸ್ಪೃಹನೀ ಜನ್ಮಸಮುದ್ರಮಂ ತರಿಯಿಸಲ್ಕರ್ಹತ್ತಪಃಪೋತಸಂ॥
ಗ್ರಹಮಂ ಭೋಂಕೆನೆ ಮಾಡಿದಂ ಬಟಿಕನಾಥಂ ಮತ್ಕುಲಂ ತತ್ಸಮಂ।
ಮಹಿ ತರ್ಪಂದಮದಾವುದೋ ಮದುವೆಗಂ ಪಟ್ಟಕ್ಕಮಿನ್ನೀತನಂ॥ ೨೬

ಎಂದು ಮನದೊಳೆ ಬಗೆದು ಸಕಲಸಾಮ್ರಾಜ್ಯಲಕ್ಷ್ಮೀದೇವತೋಪಮೆಯಪ್ಪ ಲಕ್ಷ್ಮಣಾಮಹಾದೇವಿಯ ಸಮೀಪಕ್ಕೆ ಬಂದು ತನ್ನ ಮನೋಗತಮನಱೆಪೆ ಬಟೆಯಮಿರ್ವರುಂ ವಿನೋದಸ್ಫಟಿಕವಳಭಿಯೊಳ್ ಸಹಜಾಭ್ಯಾಸಮಂತ್ರತಂತ್ರಸಾಧ್ಯಾನೇಕವಿಧವಿಮಳಕಳಾಕುಶಳನುಂ ಕುಮಾರಪರಿವೃಢನು ಮುತ್ತುಂಗಸಿಂಹಾಸನಾರೂಢನುಮಾಗಿರ್ದ ತೀರ್ಥಕರಕುಮಾರನಲ್ಲಿಗೆ ವಂದು ತದುಪವಿಷ್ಟವಿಷ್ಟರಾಭ್ಯರ್ಣ ಸೌವರ್ಣಪೀಠಮನಳಂಕರಿಸಿ ನಿಜಮನೋಗತೋದ್ಯೋಗಸಂಸಿದ್ಧಿಸಂಶಯಾಕುಳಿತಮಾನಸಂ ಪತ್ತೆಸಾರ್ದಮರ ಚಮರರುಹದೆರಲ ಪೊಯ್ಲಿನಿಂ ತೊನೆದು ಜೋಲ್ವ ಪಾರಿಜಾತದರಲ ಕರ್ಣಪೂರಮಂ ಮಗುಳೆ ತಗುಳ್ಚಿಯುಂ ಗೀರ್ವಾಣವೈಣಿಕರ್ ಬಾಜಿಸುವ ಗಾಂಧಾರಗ್ರಾಮಮೂರ್ಛನೋಚ್ಚಾರಕ್ಕೆ ಮೆಚ್ಚಿ ಮಾಡುವ ಶಿರಃಕಂಪನದಿನೋರೆವೋದ ಮಣಿಮಕುಟಮಂ ಸಯ್ತೆ ಸಾರ್ಚಿಯುಂ ವಕ್ಷಸ್ಥಲೋಪಲಕ್ಷಿತ ಶ್ರೀವತ್ಸಲಕ್ಷಣಮಂ ಮುಸುಂಕಿ ಪಸರಿಸಿರ್ದ ತೋರಮುತ್ತಿನೈಸರಮನೊಯ್ಯನೋಸರಿಸಿಯುಂ

ತೋರದ ತಮ್ಮ ಕುಮಾರನನ್ನು ಕಂಡು ಮಹಾಸೇನರಾಜನು ಬೆರಗಾಗಿ–
೨೬. "ಈತನು ಸಹಜಜ್ಞಾನ ಮನೋಹರನೂ ಚರಮ ದೇಹಧಾರಿಯೂ ಆಗಿದ್ದಾನೆ. ಮೋಕ್ಷಲಕ್ಷ್ಮಿಗೆ ಮನಸ್ಸು ತೆತ್ತ ಈ ಮಹಾತ್ಮನು ಸಂಸಾರಸಮುದ್ರವನ್ನು ದಾಟಲು ಅರ್ಹತ್ತಪವನ್ನು ತಟ್ಟನೆ ಆರಂಭಿಸಿ ಬಿಟ್ಟರೆ ನನ್ನ ವಂಶ ಅನಾಥವಾಗುವುದು. ಭೂಮಿಯೂ ಅನಾಥವಾಗುವುದು. ಇನ್ನು ಈತನನ್ನು ಮದುವೆಗೂ ಪಟ್ಟಕ್ಕೂ ಒಪ್ಪಿಸುವುದು ಹೇಗೆ ?" ವ॥ ಎಂದು ಮನಸ್ಸಿನೊಳಗೇ ಯೋಚಿಸಿ, ಸಕಲ ಸಾಮ್ರಾಜ್ಯಲಕ್ಷ್ಮಿಯಂತಿರುವ ಲಕ್ಷ್ಮಣಾ ದೇವಿಯ ಬಳಿಗೆ ಬಂದು ತನ್ನ ಯೋಚನೆಯನ್ನು ತಿಳಿಸಿದನು. ಬಳಿಕ ಇಬ್ಬರೂ ನಡೆದು, ಸ್ಫಟಿಕದ ಉಪ್ಪರಿಗೆಯಲ್ಲಿಯ ವಿನೋದಶಾಲೆಯಲ್ಲಿ ಸಹಜವಾಗಿ ಸಾಧಿಸಿಕೊಂಡ ಮಂತ್ರ ತಂತ್ರಗಳ ಅನೇಕ ಬಗೆಯ ಕಲೆಗಳಲ್ಲಿ ಕುಶಲನಾಗಿ ಸುತ್ತಲೂ ಕುಮಾರರನ್ನೊಡಗೊಂಡು, ಉನ್ನತವಾದ ಸಿಂಹಾಸನದ ಮೇಲೆ ಕುಳಿತಿದ್ದ ತೀರ್ಥಕರಕುಮಾರನ ಹತ್ತಿರ ಬಂದು, ಆತನ ಬಳಿಯಲ್ಲಿಯೆ ಚಿನ್ನದ ಪೀಠಗಳ ಮೇಲೆ ತಾವೂ ಕುಳಿತರು. ರಾಜನು ತನ್ನ ಮನೋರಥವು ಸಿದ್ಧಿಸುವುದೊ ಇಲ್ಲವೊ ಎಂಬ ಸಂಶಯದಿಂದ ಅಕುಲನಾಗಿದ್ದರೂ, ಮಗನ ಸಮೀಪಕ್ಕೆ ಸರಿದು ಬಂದು ದೇವಸೇವಕರ ಚಾಮರದ ಗಾಳಿಯಿಂದ, ಸರಿದಾಡಿ ಕೆಳಗೆ ಜೋಲುತ್ತಿರುವ ಪಾರಿಜಾತದ ಕರ್ಣಾಭರಣವನ್ನು ಪುನಃ ಸರಿಗೊಳಿಸಿ, ಅಮರ ವೈಣಿಕರು ಬಾರಿಸುವ ಗಾಂಧಾರಗ್ರಾಮ ಮೂರ್ಛನೆಗಳಿಗೆ ಮೆಚ್ಚಿ ತೂಗುವ ತಲೆಯಿಂದ ನಸುವೆ ಓರೆಯಾದ ಕಿರೀಟವನ್ನು ನೇರಗೊಳಿಸಿ, ಎದೆಯ ಮೇಲಿನ ಶ್ರೀವತ್ಸ ಲಕ್ಷಣವನ್ನು ಮುಸುಕಿ ಹರಡಿದ ತೋರಮುತ್ತುಗಳ ಪಂಚಸರವನ್ನು ಮೆಲ್ಲಗೆ ಸಮನಾಗಿಸಿ,

ಆರೋಗಣೆಯ ಕಡೆಯೊಳಮರವಟುಗಳವಟಯಿಸ್ಸಿದ ಕೆಯ್ಗಟ್ಟಿಯೊಳುಗುರ್ಗಳೊಳಗಾಜೆ ನಿಂದ ಹರಿಚಂದನರಜಮಂ ನಖಮುಖದಿನುದಿರ್ಚಿಯುಮಿಂತೆಂತಾನುಮನುವರ್ತನದಿನವಸರಂಬಡೆದು ಭೂಕಾಂತ ನೊಯ್ಯನಿಂತೆಂದಂ :–

ಒಗೆದುದು ಮುಕ್ತಾಫಳಮೆಂ ।
ಬ ಗಣನೆಯಿಂ ಶುಕ್ತಿಪುಟಕೆ ಪೆಸರಾದುದು ನಿ ॥
ನ್ನ ಗುರುತ್ವದಿಂದೆ ನಿಜಪಿತೃ ।
ಯುಗಮೆಂದೆಮಗಾದುದಧಿಕಗೌರವಮೀಗಳ್ ॥ ೨೭

ಮತಿಯ ಪವಣಿಂ ವಯೋವೃ ।
ದ್ಧತೆಯೆಮ್ಮೊಳ್ ಜ್ಞಾನವೃದ್ಧತೆಯೆ ನಿನ್ನೊಳೆ ಸಂ ॥
ಗತಿವೆತ್ತುದೆ ಪೇಟ್ಗುಮಾವಗ ।
ಮತರ್ಕ್ಯಗುಣ ನೀತಿವೇಟ್ವುದಿದು ಸಲ್ಗೆ ವಲಂ ॥ ೨೮

ಅದುಕಾರಣದಿಂ,

ಕ್ಷಿತಿಗಿಕ್ಷ್ವಾಕುಕುಳಂ ಪವಿತ್ರತರಮಾದತ್ತಾದಿತೀರ್ಥೇಶಸಂ ।
ತತಿಯಿಂದಿಂದುವರಂ ತನೂಭವ ಭವತ್ಸಂತಾನದಿಂದಿನ್ನುಮೂ ॥
ರ್ಜಿತಮಪ್ಪಂತಿರೆ ಧರ್ಮಸಂತತಿನಿಮಿತ್ತಂ ನೀಂ ವಿವಾಹೋತ್ಸವೋ ।
ಚಿತಮಂ ಮನ್ನಿಸುದೆಮ್ಮುತಿರ್ವರ ಮನಕ್ಕಂ ಮಾಟ್ಪುದಾನಂದಮಂ ॥ ೨೯

ಸುತ ತಲೆವೀಸದೆ ಮತ್ಸಂ ।
ತತಿಜನ್ಮಾರ್ಥಮೆ ವಧೂಪರಿಗ್ರಹಣಪ್ರ ॥
ಸ್ತುತಮನೊಡಂಬಡುವುದು ತ ।
ತ್ಪ್ರತಿಷೇಧಂ ಪ್ರಾಪ್ತಿಪೂರ್ವಕಂ ತಾನಲ್ತೇ ॥ ೩೦

ಊಟದ ನಂತರ ಅಮರಕುಮಾರರು ಒದಗಿಸಿದ ಕೈಗಟ್ಟಿಯಲ್ಲಿ ಉಗುರುಗಳೊಳಗೆ ಆರಿನಿಂತ ಹರಿಚಂದನದ ಹುಡಿಯನ್ನು ಉದಿರಿಸಿ– ಹೀಗೆ ಏನೇನೊ ಉಪಚಾರ ಮಾಡಿ ಆತನೊಡನೆ ಮಾತಾಡುವ ಅವಕಾಶವನ್ನು ಪಡೆದು ಮೆಲ್ಲಗೆ ಹೀಗೆಂದನು. ೨೭. "ಮುತ್ತು ಹುಟ್ಟಿದುದರಿಂದ ಅದರ ಚಿಪ್ಪಿಗೆ ಹೆಸರು ಬಂದಿತು; ನಿನ್ನ ಹಿರಿಮೆಯಿಂದಾಗಿ ನಿನ್ನ ತಾಯ್ತಂದೆಗಳೆಂಬ ಅಧಿಕ ಗೌರವ ನಮಗೆ ದೊರೆಯಿತು. ೨೮. ವಯಸ್ಸಿನಿಂದ ನಾವು ಹಿರಿಯರಾದರೂ, ಜ್ಞಾನದಿಂದ ನೀನೇ ಹಿರಿಯ. ಅತರ್ಕ್ಯಗುಣವುಳ್ಳ ನಿನಗೆ ನೀತಿಯನ್ನು ಹೇಳುವುದು ಕೇವಲ ಸಲುಗೆಯಿಂದ. ಆಕಾರಣದಿಂದ– ೨೯. ಈ ಭೂಮಿಯಲ್ಲಿ ಇಕ್ಷ್ವಾಕುವಂಶವು ಆದಿತೀರ್ಥಂಕರನ ಜನ್ಮದಿಂದ ಇನ್ನಷ್ಟು ಪವಿತ್ರವಾಗಿ ಇಲ್ಲಿಯವರೆಗೆ ನಡೆದುಕೊಂಡು ಬಂದಿದೆ. ಮಗನೆ, ನಿನ್ನ ಸಂತತಿಯಿಂದ ಅದು ಇನ್ನೂ ಊರ್ಜಿತವಾಗಬೇಕು. ಧರ್ಮ ಸಂತಾನಕ್ಕಾಗಿ ನೀನು ಮದುವೆಗೆ ಒಪ್ಪಿ ನಮ್ಮಿಬ್ಬರ ಮನಸ್ಸಿಗೂ ಆನಂದವನ್ನೊದಗಿಸು. ೩೦. ಮಗನೆ, ತಲೆ ಕೊಡಹದೆ, ನನ್ನ ಸಂತತಿಯ ಅಭಿವೃದ್ಧಿಗಾಗಿ

ಎನಲೊಡಂ

ಮೊಗದೊಳ್ ದೇವಂಗೆ ಮುಗು ।
ಳ್ನಗೆಯೊಗೆದು ಪಿತೃದ್ವಯಾಭಿವಾಂಛಿತಲತೆಗಂ ॥
ಬಗೆಯಿ ಮುಗುಳ್ನಗೆಯಾಯ್ತೆನೆ ।
ಸೊಗಯಿಸಿದುದು ತತ್ಫಲಪ್ರಸೂತಿನಿಮಿತ್ತಂ ॥ ೩೧

ಆಗಳ್

ವದನಮಲರ್ದುಱಿರದಿನಿತಿ ।
ರ್ಪುದುಮಪ್ರತಿಷಿದ್ಧಮನುಮತಂ ಭವತಿಯೆನಿ ॥
ಪ್ಪಿದನಱಿದರಸನುಮರಸಿಯು ।
ಮದೇಂ ಪ್ರಮೋದಪ್ರಕರ್ಷಮಂ ತಾಳ್ದಿದರೋ ॥ ೩೨

ಅಂತು ತಮ್ಮೊಳಿಚ್ಛಾವಿಘಾತಾನುಕಂಪಿಯುಮವಶಿಷ್ಟಸಂಸೃತಿಸುಖಾನುಭವಕಾಲಪ್ರಮಾಣಾನುಸ್ಮೃತಿಯುಂ ಕಾರಣಮಾಗೊಡಂಬಟ್ಟುದನಱಿದು ಮನದ ಕೊನೆಯೊಳ್ ಗುಡಿಗಟ್ಟಿ ಮಱುದಿವಸಂ ಸಮುಚಿತಾವಸರದೊಳ್ ಅಶೇಷಕುಲವೃದ್ಧರೊಳಂ ಬುದ್ಧಿವೃದ್ಧರೊಳಮಾತ್ಮೀಯಸುತಮನೋಮದಗಜಾಳಾನಸ್ತಂಭೆಯುಂ ಭವಿಷ್ಯದ್ಭಾಗ್ಯೆಯುಮಾಮುಷ್ಯಾಯಣೆಯುಮಪ್ಪ ಕನ್ನೆಯಾವಳಕ್ಕುಮೆಂದು ನುಡಿಯಲೊಡಮವರ್ ತಮತಮಗೆ

ಮದುವೆಯಾಗಲು ಒಡಂಬಡು. ಒಲ್ಲೆನೆನ್ನಬೇಡ" ಹೀಗೆನ್ನಲಾಗಿ_ ೩೧. ದೇವನ ಮುಖದಲ್ಲಿ ಮುಗುಳ್ನಗೆ ಮೂಡಿತು. ತಂದೆತಾಯಿಗಳ ಬಯಕೆಯ ಬಳ್ಳಿಗೂ ಮುಗುಳು ಅರಳಿದಂತಾಯಿತು; ಫಲೋದಯದ ಸೂಚನೆಯಾಯಿತು. ಆಗ– ೩೨. ಮುಖವು ಅರಳಿ, ಒಂದಿಷ್ಟೂ ಮಾತಾಡದೆ ಇರುವುದನ್ನು ಗಮನಿಸಿದರೆ, "ಒಲ್ಲೆನೆನ್ನದಿರುವುದು ಅಂಗೀಕಾರವೇ" ಎಂಬ ಮಾತಿನಂತೆ ಇದು ಈತನ ಒಪ್ಪಿಗೆಯೆ ಎಂದು ಅರಸನೂ ಅರಸಿಯೂ ಅತ್ಯಂತವಾಗಿ ಅರ್ಷಿಸಿದರು. ವ॥ ತಮ್ಮ ಬಯಕೆಯನ್ನು ಮುರಿಯಬಾರದೆಂಬ ಅನುಕಂಪದಿಂದಲೂ, ತನಗಿನ್ನು ಉಳಿದಿರುವ ಸಂಸಾರ ಸುಖಾನುಭವವನ್ನು ಕಾಲಪ್ರಮಾಣಕ್ಕೆ ಅನುಸಾರವಾಗಿ ಪಡೆಯಬೇಕೆಂಬ ಅರಿವಿನಿಂದಲೂ ಕುಮಾರನು ಒಡಂಬಟ್ಟುದನ್ನು ಅರಿತು ಮನಸ್ಸಿನಲ್ಲಿಯೆ ಗುಡಿಗಟ್ಟಿ ಮರುದಿವಸ ಉಚಿತವಾದ ಕಾಲದಲ್ಲಿ ಕುಲದ ಸಮಸ್ತ ಗುರುಹಿರಿಯರನ್ನೂ, ಬುದ್ಧಿಯಿಂದ ಹಿರಿಯರಾದವರನ್ನೂ ಕರೆಯಿಸಿಕೊಂಡು, "ನನ್ನ ಮಗನ ಮನವೆಂಬ ಮದಗಜವನ್ನು ಕಟ್ಟಿ ನಿಲ್ಲಿಸುವ ಕಂಬದಂತೆ, ಈತನನ್ನು ವಶಪಡಿಸಿಕೊಳ್ಳುವವಳೂ, ಭಾಗ್ಯಶಾಲಿಯೂ, ಪ್ರಸಿದ್ಧ ಕುಲೋತ್ಪನ್ನಳೂ ಎನಿಸಿದ ಕನ್ಯೆ ಯಾವಳು?" ಎಂದು ವಿಚಾರಿಸಿದನು. ಆಗ ಅವರು ಹೀಗೆಂದರು–

ನುತನಾಥವಂಶವಂಶೋ ।
ತ್ಥಿತಮುಕ್ತಾಪ್ರತಿಮೆ ವಿಜಯಕೇತುಮಹೀಭೃ ॥
ತ್ಸುತೆ ವನ್ಯಕುಮಾರಾನುಜೆ ।
ವಿತತಜಗನ್ಮಾನ್ಯೆ ರಾಜಕನ್ಯಾರತ್ನಂ ॥ ೩೩

ಅಮಳಗುಣನಿವಹನಿತ್ಯಾ ।
ಶ್ರಮತ್ವದಿಂ ಭುವನವಿದಿತನಿಜಜನ್ಮತೆಯಿಂ ॥
ಕಮಳಪ್ರಭೆಯೆನೆ ನೆಗೞ್ದಳ್ ।
ಕಮಳಪ್ರಭೆಯೆಂಬಳಮಳಕಮಳಾವಿಳೆಯರ್ (?) ॥ ೩೪

ಸ್ವಕುಳಪಯೋಧಿಚಂದ್ರಿಕೆ ಮನೋಜಜಗತ್ರಯಜೈತ್ರವೈಜಯಂ ।
ತಿಕೆ ಗುಣಮೌಕ್ತಿಕಪ್ರಸವಶುಕ್ತಿಕೆ ಮಾನನನಿಧಾನದೀಪವ ॥
ರ್ತಿಕೆ ವಿಸರದ್ವಿಳಾಸರಸಪಾತ್ರಿಕೆ ರಾಜ್ಯರಮಾಶ್ರಯಾಬ್ಜಕ ।
ರ್ಣಿಕೆ ನಯನಾಳಿಜಾಳನವಮಾಳಿಕೆಯೆಂಬುದು ಲೋಕಮಾಕೆಯಂ ॥ ೩೫

ಎಂದು ಪೊಗೞ್ವುದುಮುತ್ಸವೋತ್ಸುಕಹೃದಯನಿದುಽ ಮದುವೆಗೆ ಪದನೆಂದು ಪುರೋಹಿತಪುರಸ್ಸರಂ ಮಹತ್ತರರನಟ್ಟಿ ಕನ್ಯಾರತ್ನಮಂ ಬರಿಸಿ ಸಮನಂತರಂ ಲೇಖವಾಹಕರಂ ಶತಮಖನಲ್ಲಿಗೆ ಕಳಿಪುವುದುಂ ತದಾಕರ್ಣನೋದೀರ್ಣರಾಗಸಾಗರಪರಿಪ್ಲಾವಿತಾಂತರಂಗನಾಗಳೆ ಬಂದು ಚಂದ್ರಪುರಮು ಮನರಮನೆಯುಮಮಂ ಪೊಕ್ಕು

೩೩. "ಪ್ರಸಿದ್ಧವಾದ ನಾಥವಂಶದಲ್ಲಿ ಮುತ್ತಿನಂತೆ ಹುಟ್ಟಿರುವ, ವಿಜಯಕೇತು ಮಹಾರಾಜನ ಮಗಳು, ಧನ್ಯಕುಮಾರನ ತಂಗಿ, ಜಗನ್ಮಾನ್ಯಳು; ರಾಜಕನ್ಯೆಯರಲ್ಲಿ ರತ್ನದಂತಿರುವಳು. ೩೪. ಪರಿಶುದ್ಧವಾದ ಗುಣಗಳಿಗೆ ನಿತ್ಯನೆಲೆಯಾಗಿ, ಲೋಕ ಪ್ರಸಿದ್ಧವಾದ ವಂಶದಲ್ಲಿ ಹುಟ್ಟಿ ಕಮಲದಂತೆ ಕಾಂತಿಯುಳ್ಳ ಕಮಲಪ್ರಭೆ ಯೆಂಬ ಆ ರಾಜಕುಮಾರಿಯೆ ಯೋಗ್ಯಳು. ೩೫. ತನ್ನ ಕುಲವೆಂಬ ಸಾಗರಕ್ಕೆ ಚಂದ್ರಿಕೆ, ಮನ್ಮಥನ ಲೋಕತ್ರಯ ವಿಜಯಪತಾಕೆ, ಗುಣವೆಂಬ ಮುತ್ತುಗಳನ್ನು ಹಡೆಯುವ ಶುಕ್ತಿಕೆ, ಮಾನವೆಂಬ ನಿಧಿಯೆಡೆಗೆ ಹೊರಳುವ ದೀಪದ ಕುಡಿ, ವಿಸ್ತೃತವಿಲಾಸರಸದ ಪಾತ್ರಿಕೆ, ರಾಜ್ಯಲಕ್ಷ್ಮಿಗೆ ಆಶ್ರಯವಾದ ಕಮಲದ ಕರ್ಣಿಕೆ, (ನೋಟಕರ) ನೇತ್ರಗಳೆಂಬ ನವಭೃಂಗಗಳ ಮಾಳಿಕೆಯುಳ್ಳ ಅಪೂರ್ವ ಪುಷ್ಪ- ಎಂದು ಲೋಕವೆಲ್ಲ ಆಕೆಯನ್ನು ಹೊಗಳುವುದು." ವ॥ ಹೀಗೆ ಬಣ್ಣಿಸಲಾಗಿ ಉತ್ಸವೋತ್ಕಂಠನಾದ ಅರಸನು ಮದುವೆಗೆ ಇದೇ ಸರಿಯಾದ ಸಮಯ ವೆಂದು ಪುರೋಹಿತ ಸಹಿತವಾಗಿ ಸಹಿತವಾಗಿ ಮಹತ್ತರನನ್ನು ಕಳಿಸಿ ಕನ್ಯಾ ರತ್ನವನ್ನು ಬರಿಸಿಕೊಂಡು, ಆ ನಂತರ ಓಲೆಕಾರರನ್ನು ಇಂದ್ರನ ಬಳಿಗೆ ಕಳಿಸಿಕೊಟ್ಟನು. ಈ ಸಮಾಚಾರವನ್ನು ಕೇಳಿದೊಡನೆ ಆನಂದಸಾಗರದಲ್ಲಿ ಮನಮುಳುಗಿದ

ಕಲ್ಪಜಪತಿ ಬೆಸಸೆ ಮರು ।
ಚ್ಛಿಲ್ಪಿಗಳುದ್ವಾಹಗೇಹಮಂ ಸಮೆದರತಿ ॥
ಸ್ವಲ್ಪಸಮಯದೊಳೆ ವಿವಿಧವಿ ।
ಕಲ್ಪಕನದ್ರತ್ನಕೂಟಕುಳಸುಘಟಿತಮಂ ॥ ೩೬

ಮತ್ತಮಾ ಮಂದಿರಂ ಮಂದರದಂತಶೇಷವಸ್ತುವಿಸ್ತೃತಜಗತೀವಳಯ ಮಧ್ಯಾಸಿತಮಂ, ದಿಶಾಪರಿಧಿಯಂತೆ ಭದ್ರಲಕ್ಷಣೋಪೇತಮತ್ತವಾರಣಾಷ್ಟಿತಮುಂ, ಪಾಂಡುರಾಜಕುಲದಂತೆ ಪಂಚಜನ ಮನೋಹರ ಪ್ರಪಂಚಪಾಂಚಾಳಿಕೋದಂಚಿತಮುಂ, ಸುಕರಕವಿವಾಕ್ಯದಂತೆ ಸುವರ್ಣ ಘಟನಾಭಿತ್ತಿ ವಿಸ್ತಾರಮುಂ, ನಾಳಿಕೇರಫಲದಂತೆ ಖರ್ಪರುಚಿಲಸದ್ದಾರುಬಂಧಬಂಧುರಮುಂ, ಮರುತ್ತರಂಗಿಣೀಪ್ರವಾಹ ದಂತುತ್ತರಂಗಸಂಗತಲಕ್ಷ್ಮೀಸಮಾಲಕ್ಷಿತಮುಂ, ಮಾನಸಸರೋವರದಂತೆ ನಿರಂತರಕಾಂತಧವಳಚ್ಛದಾ ವಳೀವಳಯಿತಮುಂ, ಸಾತ್ವಿಕಭಾವಸಮುದಯದಂತೆ ವಿಚಿತ್ರಸ್ತಂಭಶೋಭಾಸಂಭೃತಮುಂ, ಚರಣಾ

ಇಂದ್ರನು ಆಗಲೆ ಬಂದು, ಚಂದ್ರಪುರವನ್ನೂ ಅರಮನೆಯನ್ನೂ ಹೊಕ್ಕನು. ೩೬. ಇಂದ್ರನ ಅಪ್ಪಣೆಯ ಮೇರೆಗೆ ದೇವಶಿಲ್ಪಿಗಳು ಅತ್ಯಂತ ಸ್ವಲ್ಪ ಕಾಲದಲ್ಲಿಯೆ ನಾನಾ ಬಗೆಯ ಥಳಥಳಿಸುವ ಶಿಖರಗಳಿಂದೊಪ್ಪುವ ವಿವಾಹಗೃಹವನ್ನು ರಚಿಸಿದರು. ವ॥ ಆ ವಿವಾಹ ಮಂದಿರವು ಮಂದರಗಿರಿಯಂತೆ ಸಮಸ್ತವಸ್ತು ವಿಸ್ತಾರದಿಂದ ತುಂಬಿದುದು; ದಿಗಂತ ಪರಿಧಿಯಂತೆ ಭದ್ರಲಕ್ಷಣಗಳುಳ್ಳ ಎಂಟು "ಮತ್ತವಾರಣ" (೧. ಅಂಗಳ ೨. ಮದಗಜ) ಗಳನ್ನುಳ್ಳುದು; ಪಾಂಡುರಾಜನ ವಂಶದಂತೆ "ಪಂಚಜನ ಮನೋಹರ ಪ್ರಪಂಚ ಪಾಂಚಾಳಿಕೋದಂಚಿತ" (೧. ಸಮಸ್ತ ಜನ ಮನೋಹರ ವಾದ ಪುತ್ತಳಿಗಳಿಂದ ಶೋಭಿಸುವುದು. ೨. ಐವರು ಚೆಲುವ ಪತಿಗಳೊಡನೆ ಬಾಳುವ ದ್ರೌಪದಿಯಿಂದ ಶೋಭಿಸುವುದು.); ಸತ್ಕವಿಯ ವಾಕ್ಯದಂತೆ "ಸುವರ್ಣ ಘಟನಾಭಿತ್ತಿ ವಿಸ್ತಾರ" (೧. ಉತ್ತಮವಾದ ವರ್ಣಚಿತ್ರಗಳ ರಚನೆಯಿಂದೊಪ್ಪುವ ಗೋಡೆಗಳು ವಿಸ್ತಾರವುಳ್ಳುದು. ೨. ಉತ್ತಮವಾದ ಅಕ್ಷರ ಘಟನೆಯಿಂದ ವಿಸ್ತಾರ ವಾಗಿರುವುದು); ದೇವಗಂಗೆಯ ಪ್ರವಾಹದಂತೆ "ಉತ್ತರಂಗ ಸಂಗತಲಕ್ಷ್ಮೀ ಸಮಾಲಕ್ಷಿತ" (೧. ಬಾಗಿಲುವಾಡದ ಮೇಲ್ಭಾಗದಲ್ಲಿ ಲಕ್ಷ್ಮಿಯ ವಿಗ್ರಹದಿಂದ ಶೋಭಿಸು ವುದು. ೨. ಉನ್ನತವಾದ ತರಂಗಗಳ ಶೋಭೆಯಿಂದ ಕೂಡಿದುದು); ಮಾನಸ ಸರೋವರದಂತೆ "ನಿರಂತರ ಕಾಂತಧವಳಚ್ಛದಾವಳೀ ವಳಯಿತ" (೧. ನಿಬಿಡವಾದ ಹಾಗು ಸುಂದರವಾದ ಬಿಳಿಯ ಮೇಲುಕಟ್ಟಿನಿಂದ ಆವೃತವಾದುದು. ೨. ದಟ್ಟವಾಗಿ ನೆರೆದ ಸುಂದರವಾದ ಬಿಳಿಯ ಹಂಸ ಸಮೂಹಗಳಿಂದ ತುಂಬಿದುದು); ಸಾತ್ವಿಕಭಾವಗಳ ಸಮುದಯದಂತೆ "ವಿಚಿತ್ರ ಸ್ತಂಭ ಶೋಭಾ ಸಂಭೃತ" (೧. ಚಿತ್ರ ವಿಚಿತ್ರವಾದ ಕಂಬಗಳ ಚೆಲುವನ್ನೊಳಗೊಂಡುದು. ೨. ವಿಚಿತ್ರವಾದ ನಿರುದ್ವೇಗ ಗಾಂಭೀರ್ಯವನ್ನೊಳಗೊಂಡುದು): ಪಾದಾಭರಣದಂತೆ ರತ್ನಮಯವಾದ "ತುಳಾಕೋಟಿಘಟಿತ" (೧. ತೊಲೆಗಳಿಂದ ಕೂಡಿದುದು. ೨. ನೂಪುರಗಳಿಂದ

ಭರಣದಂತೆ ರತ್ನಮಯತುಳಾಕೋಟಿಘಟಿತಮುಂ, ವಾರಾಶಿತೀರದಂತನಂತರತ್ನಕಾಂತಿಕಬಳಿತೋತ್ತುಂಗ ವೇದೀಸಮುತ್ಪಾದಿತಕೌತುಕಮುಂ, ವನೌಷಧಿವರ್ಗದಂತೆ ಕನಕಭೃಂಗಾರಕದಂಬವಿಭವಾಲಂಬಮುಂ, ಅರಣ್ಯಾನಿಯಂತರ್ಜುನಾಕ್ಷತರುಚಿರಪಾತ್ರವಿಳಸನೋದಾತ್ತಮುಂ, ಮದಗಜಾಸ್ಯದಂತಗ್ರಪಲ್ಲವೋದಗ್ರ ಪೂರ್ಣಕುಂಭಾಭಿರಾಮಮುಂ, ಪ್ರಸೂತಿಕಾವಾಸಗರ್ಭದಂತೆ ಸದರ್ಭಕಾವಿರ್ಭಾವಮುಂ, ಗಗನವಳಯಂ ದಂತವಳಂಬಮಾನಧಾರಾವಳೀವಿಳಾಸಮುಂ, ಮರ್ತ್ಯಪ್ರಕೃತಿಯಂತೆ ಪರಿಚಿತಪತಾಕಾಸಮುದಯ ಮುಮಾಗಿ,

ಜನನಯನಪುತ್ರಿಕಾನ ।
ರ್ತನಗೃಹಮಾನಂದಮಯಮನೋವೃತ್ತಿವಿವ ॥
ರ್ತನಗೃಹಮಭಿವರ್ಣನವಾ ।
ಗ್ವಿನೋದಗೃಹಮೆನಿಸಿದತ್ತು ಪರಿಣಯನಗೃಹಂ ॥ ೩೭

ತನ್ಮಧ್ಯದೊಳ್

ನವರತ್ನಕಾಂತಿಸಂತಾ ।
ನವಿರಾಜಿತಕನಕವೇದಿಯೊಳ್ ಪಳಿಕಿನ ಪ ॥

ಕೂಡಿದುದು); ಸಾಗರ ತೀರದಂತೆ ಅಪಾರವಾದ ರತ್ನಗಳ ಕಾಂತಿಯಿಂದ ಆವೃತವಾದ ಉನ್ನತ "ವೇದಿ" (೧. ಜಗಲಿ ೨. ದಿಣ್ಣೆ) ಗಳಿಂದ ಕೌತುಕಾಸ್ಪದವಾದುದು; ವನೌಷಧಿಗಳ ಸಮೂಹದಂತೆ "ಕನಕ ಭೃಂಗಾರ ಕದಂಬ" (೧. ಚಿನ್ನದ ಪಾತ್ರೆಗಳ ಸಮೂಹ ೨. ಪಲಾಶವೃಕ್ಷ, ಲವಂಗ ಹಾಗು ಕಡವದ ಮರ) ಗಳ ಸಮೃದ್ಧಿಯಿಂದ ಕೂಡಿದುದು ಮಹಾರಣ್ಯದಂತೆ "ಅರ್ಜುನಾಕ್ಷತರುಚಿರಪಾತ್ರವಿಳಸನೋದಾತ್ತ" (೧. ಬಿಳಿಯ ಅಕ್ಷತೆಗಳಿಂದ ಒಪ್ಪುವ ಪಾತ್ರೆಗಳ ಶೋಭೆಯುಳ್ಳುದು. ೨. ಬಿಳಿಮತ್ತಿ ತಾರೆಯ ಮರಗಳಿಗೆ ಸ್ಥಿರವಾದ ನೆಲೆಯುಳ್ಳುದು); ಮದ್ದಾನೆಯ ಮುಖದಂತೆ "ಅಗ್ರಪಲ್ಲವೋದಗ್ರ ಕುಂಭಾಭಿರಾಮ" (೧. ಚಿಗುರೆಲೆಗಳನ್ನು ಹೊದಿಸಿದ ಉತ್ತಮವಾದ ಕಲಶಗಳಿಂದ ಚೆಲುವಾದುದು ೨. ತುದಿಯಲ್ಲಿ ಹಿಡಿದ ಚಿಗುರಲೆಗಳಿಂದಲೂ, ಉನ್ನತವಾದ ಕುಂಭಸ್ಥಲದಿಂದಲೂ ಬೆಡಗಾದುದು) ಹೆರಿಗೆಯ ಮನೆಯಂತೆ ದರ್ಭೆಗಳಿಂದ ಸಜ್ಜಾದುದು; ಆಕಾಶವಲಯದಂತೆ "ಅವಲಂಬಮಾನ ಧಾರಾವಳೀ ವಿಲಾಸ" (ತೂಗುಬಿಟ್ಟ ಮುತ್ತುರತ್ನಗಳ ಸರಗಳಿಂದ ಸುಂದರವಾದುದು. ೨. ಸುರಿಯುತ್ತಿರುವ ಮಳೆಯ ಧಾರೆಯಿಂದ ಅಂದವಾದುದು); ಮನುಷ್ಯ ದೇಹದಂತೆ "ಪರಿಚಿತ ಪತಾಕಾ ಸಮುದಯ" (೧. ಧ್ವಜಸಮೂಹಗಳಿಂದ ತುಂಬಿದುದು. ೨. ವಿಶಿಷ್ಟ ಚಿಹ್ನೆಗಳಿಂದ ಕೂಡಿದುದು?)_ ೩೭. ಆ ವಿವಾಹಗೃಹವು ಜನರ ಕಣ್ಣುಗಳೆಂಬ ಪುತ್ತಳಿಗಳಿಗೆ ನರ್ತನಗೃಹವಾಯಿತು; ಆನಂದಮಯವಾದ ಮನೋವೃತ್ತಿಗೆ ನಿವಾಸಸ್ಥಾನವಾಯಿತು; ವರ್ಣನೆಯ ಮಾತುಗಳಿಗೆ ವಿಲಾಸಗೃಹವಾಯಿತು. ಅದರ ನಟ್ಟನಡುವೆ_೩೮. ನವರತ್ನಗಳ ಪ್ರಭೆಯಿಂದ ಶೋಭಿಸುವ ಚಿನ್ನದ ಜಗಲಿಯಲ್ಲಿ

ಟ್ಟವಣಿ ನೆನೆಯಿಸಿದುದಾಮೇ ।
ರುವ ಮೇಖಳೆಯಲ್ಲಿ ಪೊಳೆವ ಪಾಂಡುಕಶಿಳೆಯಂ ॥ ೩೮

ನಳನಳಿಪ ಜಾಗದೊಪ್ಪುವ ।
ತಳಿರ್ಗಳಸದ ಬೆಳಪ ರತ್ನದೀಪದ ಬಂದ ॥
ಕ್ಕಳವಟ್ಟ ವರ್ಣಪೂರದ ।
ತೊಳಗುವ ದರ್ಪಣದ ನೇರ್ಪು ನೆಲಸಿತ್ತದಱೊಳ್ ॥ ೩೯

ಗುಡಿಗಟ್ಟುವ ಕಡೆಯಿಕ್ಕುವ ।
ಸೊಡರ್ವೆಳಗುವ ತೋರಣಂದಗುಳ್ಚುವ ಚಳೆಯಂ ॥
ಗುಡುವರಿಸಿರಿಗಂಪುಗಿದುವಲ (?) ।
ರ್ದೊಡರ್ಚುವಮರಿಯರ ಕೆಯ್ತಮಚ್ಚರಿಯದಱೊಳ್ ॥ ೪೦

ಸುೞಿವ ಸುರಯುವತಿಯರ್ಕಳ ।
ನೆೞಲೊಪ್ಪಿರೆ ರತ್ನಭಿತ್ತಿಭಾಗಂಗಳ್ ನಿ ॥
ರ್ಮಳಲಾಕ್ಷಾಚಿತ್ರಂಗಳ ।
ತಳೆದಂತಿರ್ದುವು ವಿವಾಹಗೇಹಾಂತರದೊಳ್ ॥ ೪೧

ಆಗಳವರ್ಗಳ್ ಮಜ್ಜನಾನಂತರಂ ವಧೂವರರಂ ನವ್ಯದಿವ್ಯಕುಸುಮವಸನಭೂಷಣಾನುಲೇಪನಂಗಳಿನಳಂಕರಿಸಿ ತಂದು ತದ್ವೇದಿಕಾಗೃಹದೊಳ್ ಮಹಾಸೇನಮಹೀಪತಿ ಪಾಣಿಗ್ರಹಣಕಲ್ಯಾಣಮನೊಡರ್ಚಲೊಡಂ

ಸ್ಫಟಿಕದ ಪಟ್ಟಮಣಿಯು–ಮೇರುಗಿರಿಯ ಸಾನುಪ್ರದೇಶದಲ್ಲಿರುವ ಪಾಂಡುಕ ಶಿಲೆಯನ್ನು ಸ್ಮರಣೆಗೆ ತರುತ್ತಿತ್ತು. ೩೯. ನಳನಳಿಸುವ ಜಾಗರದ, ಒಪ್ಪುವ ತಳಿರು ಹೊಚ್ಚಿದ ಕಲಶದ, ಬೆಳಗುವ ರತ್ನದೀಪದ, ಬಣ್ಣದ ರಂಗವಲ್ಲಿಯ, ತಳತಳಿಸುವ ಕನ್ನಡಿಯ ಶೋಭೆ ಅದರಲ್ಲಿ ನೆಲಸಿತ್ತು. ೪೦. ಧ್ವಜಗಳನ್ನು ಕಟ್ಟುವ, ರಂಗವಲ್ಲಿ ಯಿಕ್ಕುವ, ದೀಪ ಬೆಳಗುವ, ತೋರಣವನ್ನು ಬಿಗಿಯುವ, ತಳಿ ಚಿಮುಕಿಸುವ, ಸುಗಂಧ ಪುಷ್ಪಗಳನ್ನು ಮಾಲೆಗಟ್ಟುವ ದೇವಾಂಗನೆಯರ ಚಟುವಟಿಕೆ ಆಶ್ಚರ್ಯ ಕರವಾಗಿತ್ತು. ೪೧. ಸುಳಿದಾಡುವ ದೇವ ಯುವತಿಯರ ಪ್ರತಿಬಿಂಬಗಳ ನ್ನೊಡಗೊಂಡ ಗೋಡೆಗಳನ್ನು ನೋಡಲಾಗಿ ನಿರ್ಮಲವಾದ ಅರಗಿನ ಚಿತ್ರ ಗಳನ್ನು ಅವುಗಳ ಮೇಲೆ ಅಂದವಾಗಿ ಬರೆದಿರುವರೋ ಏನೊ ಎಂದೆನಿ ಸುತ್ತಿತ್ತು. ವ॥ ಸ್ನಾನಾನಂತರ ವಧೂವರರನ್ನು ನವೀನವಾದ ದಿವ್ಯ ಪುಷ್ಪ, ವಸ್ತ್ರ, ಆಭರಣ, ಅನುಲೇಪನಗಳಿಂದ ಅಲಂಕರಿಸಿ ಕರೆತಂದು, ಆ ಜಗಲಿಯ ಮೇಲೆ

ಸ್ವಪ್ರಬಳಪುಣ್ಯದಿಂ ಚಂ ।
ದ್ರಪ್ರಭನಿನನಾಗೆ ತತ್ಕರಸ್ಪರ್ಶದೆ ಯು ॥
ಕ್ತಪ್ರೀತಿವಿಕಸನಂ ಕಮ ।
ಳಪ್ರಭೆಗಾಯ್ತಖಿಳದೃಕ್ಚಿಳೀಮುಖಸುಖದಂ ॥ ೪೨

ಅನಂತರಮೊಂದೆ ಪಸೆಯೊಳೆ ಸುವಾಸಿನೀಜನಾರೋಪಿತಾರ್ದ್ರಾಕ್ಷತಮನಾಂತು ಕುಳ್ಳಿರ್ದು

ನಿರುತಂ ಪ್ರಕೃತಿಪ್ರತ್ಯಯ ।
ಮೆರಡುಂ ಕೂಡಿಯೆ ಕೃತಾರ್ಥವೃತ್ತಿಯನಾಂಪಂ ॥
ತಿರೆ ಮದುವೆ ನೆರೆದು ವನಿತಾ ।
ವರರಿರ್ವರುಮಾಂತರಂದು ಚರಿತಾರ್ಥತೆಯಂ ॥ ೪೩

ಇಂದೆಮಗೆ ಪೊರೆವ ತಾಯುಂ ।
ತಂದೆಯುಮೊಳಗಾದರೆಂದು ನೋಡಿದುದತ್ಯಾ ॥
ನಂದದೆ ಪರಿಜನಮುಂ ಪ್ರಜೆ ।
ಯುಂ ದಂಪತಿಗಳನನೂನಮಂಗಳಯುತರಂ ॥ ೪೪

ಸುರಗೀತಂ ಮರ್ತ್ಯಗೀತಂ ಸುರಸಮುದಯವಾದ್ಯಂನೃಸಂದೋಹವಾದ್ಯಂ ॥
ಸುರಕಾಂತಾನಂದನೃತ್ಯಂ ಮನುಜಮದವತೀಹರ್ಷನೃತ್ಯಂ ಸಮಂತಾ ॥
ಗಿರೆ ಬೇಱಿಕೊಂದಿಂತಿದಕ್ಕುಂ ಕುತಪಜನನಿಧಾನಂ ದಲೆಂಬಂತಿರುರ್ವೀ ।
ಶ್ವರಗೇಹಂ ವರ್ಯತೂರ್ಯತ್ರಯವಯಮೆಸೆದತ್ತಾಗಳಾಶ್ಚರ್ಯಭೂತಂ ॥ ೪೫

ಮಹಾಸೇನರಾಜನು ಪಾಣಿಗ್ರಹಣ ಮಂಗಳವನ್ನು ಮಾಡಿಸಲಾಗಿ–೪೨. ತನ್ನ ಪುಣ್ಯಬಲದಿಂದ ಚಂದ್ರಪ್ರಭನ ಹಸ್ತ ಸ್ಪರ್ಶವಾಗಲು, ಕಮಲಪ್ರಭೆಗೆ ಸಮಸ್ತ ಜನರ ಕಣ್ಣಿಗೆ ಹಬ್ಬವಾಗುವಂತೆ ಪ್ರೀತಿವಿಕಾಸವಾಯಿತು. ವ॥ ಬಳಿಕ ಒಂದೇ ಹಸೆಯ ಮೇಲೆ ಮುತ್ತೈದೆಯರು ಸುರಿಸುವ ಆರ್ದ್ರಾಕ್ಷತೆಗಳನ್ನು ಸ್ವೀಕರಿಸುತ್ತ ಕುಳಿತು– ೪೩. ಪ್ರಕೃತಿ ಹಾಗು ಪ್ರತ್ಯಯಗಳೆರಡೂ ಕೂಡಿಕೊಂಡು ಅರ್ಥವೃತ್ತಿಯನ್ನು ಹೊಂದುವಂತೆ, ಮದುವೆಯಾಗಿ ವಧೂವರರಿಬ್ಬರೂ ಕೃತಾರ್ಥತೆಯನ್ನು ಹೊಂದಿದರು. ೪೪. ಇಂದು ನಮಗೆ ಸಲಹುವ ತಾಯಿಯೂ ತಂದೆಯೂ ದೊರಕಿದರೆಂದು ಅತ್ಯಾನಂದದಿಂದ ಪರಿಜನರೂ ಪ್ರಜೆಗಳೂ ಮಂಗಳಾಕಾರದ ಆ ದಂಪತಿಗಳನ್ನು ನೋಡಿದರು. ೪೫. ದೇವಗೀತಗಳೊಡನೆ, ಮನುಷ್ಯಗೀತ ಗಳೂ, ದೇವವಾದ್ಯ ಸಮೂಹದೊಡನೆ, ನರವಾದ್ಯ ಸಮುದಾಯವೂ ದೇವನರ್ತನದೊಡನೆ ಮಾನವ ಪ್ರಮದೆಯರ ಹರ್ಷನೃತ್ಯವೂ ಸಮಸಮನಾಗಿ ಬೆರೆತುಕೊಂಡಿರಲಾಗಿ, ಇದೇನು ಹೊಸದೊಂದು ಸಂಗೀತಕಜನರ ನಿಧಾನವೊ ಏನೊ ಎಂಬಂತೆ ಅರಮನೆಯ ಉತ್ತಮವಾದ ತೂರ್ಯತ್ರಯಗಳಿಂದ ಆಶ್ಚರ್ಯಕರ

ಕನಕಾಮತ್ರಂಗಳೊಳ್ ತೀವಿದ ಮಣಿಗಣಕರ್ಪೂರಕಸ್ತೂರಿಕೋಪಾ ।
ಯನಮಂ ದೇವೇಶದೇವೀಪ್ರತತಿಗೆ ಪದೆಪಿಂ ಲಕ್ಷ್ಮಣಾದೇವಿ ಭೂಭೃ ॥
ದ್ವನಿತಾನೀಕಕ್ಕನೂನೋತ್ಸವಮೊದವೆ ಶಚೀದೇವಿಯಿೀವಾರ್ಪಿನೊಪ್ಪಂ ।
ಮನುಜರ್ಗಂ ಸಗ್ಗಿಗರ್ಗಂ ಸಮನಿಸಿತಿದಪೂರ್ವಂ ಮನಕ್ಕೆಂಬಗುರ್ವಂ ॥ ೪೬

ವಿರಚಿಸುವಳ್ ಸಮಂತುಚಿತಮಂಗಳಮಂ ಶಚಿ ನಾಕಿನಾಯಕಂ ।
ಪರಿವೆಸಗೆಯ್ವನುಬ್ಬರದ ನಿಬ್ಬಣಿಗರ್ ಸುರರಸ್ತುಕಾರದೊಳ್ ॥
ನೆರಪಿದ ವಸ್ತು ಕಲ್ಪಕುಜಪಲ್ಲವಪುಷ್ಪಫಳಾಳಿಯೆಂದೊಡಿಂ ।
ಪರಿಣಯನಪ್ರಮೋದಮದಮಾನುಷಮಲ್ಲವೆ ದೇವದೇವನಾ ॥ ೪೭

ಆ ವಿವಾಹೋತ್ಸವಾನಂತರಂ ಮತ್ತೊಂದು ಶುಭದಿನಮೂಹೂರ್ತದೊಳ್

ಕಮಳಪ್ರಭೆಗೀಗಳೆ ಸವ ।
ತಿ ಮಾಟ್ಪೆನೆನ್ನಗ್ರತನಯನೊಳ್ ರಾಜ್ಯಶ್ರೀ ॥
ರಮಣಿಯುಮಂ ನೆರೆಪುವೆನೆಂ ।
ಬ ಮಹೋದ್ಯೋಗಮನೆ ಮನಕೆ ತಂದು ನರೇಂದ್ರಂ ॥ ೪೮

ಜನನಸ್ನಾನಕ್ಕಮಾಯ್ತುಗ್ಗಳಮೆನೆ ಪರಮೋತ್ಸಾಹದಿಂ ಪೊಂಗಿ ಗಂಗಾ ।
ದಿಸದೀತೋಯಂಗಳಿಂ ಮಂಗಳಪಟಹರವಂ ಪೊಣ್ಮೆ ದೇವಂಗೆ ತಾಂ ಮ ॥
ಜ್ಜನಮಂ ಮುಂ ಮಾಡಿ ಸಿಂಹಾಸನದೊಳಿರಿಸಿ ಸಂಯೋಜಿತಾಶೇಷಸಾಮ್ರಾ ।
ಜ್ಯನಿಯೋಗಂ ಪಟ್ಟಮಂ ಕಟ್ಟಿದನಿರದೆ ಮಹಾಸೇನನಿಂದ್ರದ್ವಿತೀಯಂ ॥ ೪೯

ವಾಗಿ ವಿಜೃಂಭಿಸಿತು. ೪೬. ಬಂಗಾರದ ಪಾತ್ರೆಗಳಲ್ಲಿ ತುಂಬಿದ ರತ್ನ-ಕರ್ಪೂರ-ಕಸ್ತೂರಿಗಳ ಬಾಗಿನವನ್ನು ಇಂದ್ರನ ದೇವಿಯರಿಗೆಲ್ಲ ಲಕ್ಷ್ಮಣಾದೇವಿಯೂ, ಅರಮನೆಯ ವನಿತೆಯರಿಗೆಲ್ಲ ಶಚೀದೇವಿಯೂ ಸಂತೋಷದಿಂದ ಕೊಡುತ್ತಿರಲಾಗಿ ಮಾನವರಿಗೂ ದೇವತೆಗಳಿಗೂ ಇದೊಂದು ಅಪೂರ್ವವಾದ ಉತ್ಸವವುಂಟಾಯಿತು. ೪೭. ಯುಕ್ತವಾದ ಮಂಗಳವನ್ನು ರಚಿಸುವವಳು ಶಚೀದೇವಿ; ಪರಿಚರ್ಯೆ ಮಾಡುವವನು ಸ್ವರ್ಗಾಧಿಪತಿ; ನಿಬ್ಬಣಿಗರಾದವರು ದೇವತೆಗಳು; ಶುಭಕಾರ್ಯಕ್ಕಾಗಿ ತಂದೊದಗಿಸಿದ ವಸ್ತುಗಳೆಂದರೆ ಕಲ್ಪವೃಕ್ಷದ ತಳಿರು ಹೂಹಣ್ಣುಗಳು; ಹೀಗಿದ್ದ ಮೇಲೆ ದೇವದೇವನ ವಿವಾಹೋತ್ಸವವು ಅಮಾನುಷವೆ ಅಲ್ಲವೆ ? ವ॥ ಮದುವೆಯ ಉತ್ಸವವಾದ ಬಳಿಕ ಮತ್ತೊಂದು ಶುಭದಿನದ ಮುಹೂರ್ತದಲ್ಲಿ-೪೮. ಕಮಲಪ್ರಭೆಗೆ ಈಗಲೆ ಸವತಿಯಾಗಿ ರಾಜ್ಯಲಕ್ಷ್ಮಿಯನ್ನು ನನ್ನ ಮಗನಿಗೆ ಒಪ್ಪಿಸುವೆನೆಂಬ ಮಹೋದ್ಯೋಗಕ್ಕೆ ಅರಸನು ಮನಸ್ಸು ಮಾಡಿದನು. ೪೯. ಅತ್ಯಂತ ಉತ್ಸಾಹದಿಂದ ಹಿಗ್ಗಿ ಗಂಗಾನದಿಯ ನೀರನ್ನು ತಂದು, ಮಂಗಳವಾದ್ಯಗಳು ಮೊರೆಯುತ್ತಿರಲಾಗಿ ಜನ್ಮಾಭಿಷೇಕಕ್ಕೂ ಇದು ಮಿಗಿಲಾಯಿತೆಂಬಂತೆ ದೇವನಿಗೆ ಸ್ನಾನಮಾಡಿಸಿ, ಸಿಂಹಾಸನದಲ್ಲಿ ಕುಳ್ಳಿರಿಸಿ, ಅಖಂಡ ಸಾಮ್ರಾಜ್ಯದ ಪಟ್ಟವನ್ನು ಆತನಿಗೆ

ಅಂತು ಜನಕನುಪರೋಧದಿಂದಾಧಿರಾಜ್ಯಸೌಖ್ಯಾಭಿಮುಖ್ಯಮಂ ತಳೆದ ನಿಜಪತಿಯ ಪದತಳಂಗಳಂ ಪ್ರಣಯಮಾನಪ್ರಸಾದನಸಮಯದೊಳ್ ಕಮಳಪ್ರಭಾಮಹಾದೇವಿಯುತ್ತಂಸಕನಕಪದ್ಮಾಸನದೊಳ್ ವಿರಚಿಸಿಯುಂ, ಆ ಮನೋಹರಿ ಮನೋಹರನಯನಪಾರಿವಂಗಳನನಂಗಕೇಳಿಯೊಳ್ ಲಾವಣ್ಯರಸಭರಿತಗಂಭೀರನಾಭೀಕೂಪದೊಳ್ ನೀಡುಮೋಲಾಡಿಸಿಯುಂ, ಆ ವಿಳಾಸವತಿ ಜಗತ್ಪತಿಯ ಭುಜಭುಜಗಂಗಳಂ ಕೋಮಳಾಂಗಮಳಯರುಹಶಾಖೆಯಂ ಸುತ್ತಿ ಪತ್ತುವಿಡದಂತಾಗೆ ನಿಯಮಿಸಿಯುಂ, ಆ ನವೀನಯೌವನಾಳಂಕಾರೆ ಸಹಜಸೌಂದರ್ಯಾಳಂಕಾರನ ವಿಶಾಳವಕ್ಷಃಪ್ರದೇಶಪದ್ಮಾವಸಥಮಂ ಸಮುತ್ತುಂಗಕುಚಯುಗರಥಾಂಗಮಿಥುನಕ್ಕೆ ಪೆರ್ಚಿದಟ್ಟಿಜೆನಿರ್ಕೆದಾಣಂಮಾಡಿಯುಂ, ಆ ಮೃದುಮಧುರಭಾಷಿಣಿ ಗುಣಭೂಷಣನ ಕರ್ಣಯುಗ್ಮಮಂ ಸೌಹಾರ್ದ್ರವಚನಾನುವಿದ್ಧ ಸಂಭಾಷಣಮಣಿಮಯಾವತಂಸಗಳಿನಳಂಕರಿಸಿಯುಂ, ಆ ಲಾವಣ್ಯರಸತರಂಗಿಣೀತರಂಗಭಂಗುರಭ್ರೂವಿಭ್ರಮೆ ವಿಗತಾಶೇಷವಸ್ತುವಿಷಯಭ್ರಮನ ನಿರ್ಮಳಮನೋಮಹಾರ್ಣವಮನಾತ್ಮೀಯಗುಣಸಮಸ್ತವಸ್ತುನಿಕರಕ್ಕೆ ಸಲೆ ನೆಲೆಮಾಡಿಯುಂ, ಸಮಸಮಾಯೋಗಸಂಭವಸುಖೋನ್ಮುಖರನೇಕದಿನಂಗಳಂ ನಿಮಿಷಮಾತ್ರಂಗಳಾಗಿ ಕಳಿಪುತ್ತುಮಿರೆಯಿರೆ,

ಹಿಮಕಿರಣಂಗಮೊಂದಿದ ಲಸತ್ಕಳೆಗಂ ಪ್ರಕಟಪ್ರಭಾವಮ ।
ಪ್ಪಮೃತಮೆ ಪುಟ್ಟುವಂದದೆ ಜಗತ್ಪತಿಗಂ ಸತಿಗಂ ಧರಾಭರ ॥

ಮಹಾಸೇನರಾಜನು ಕಟ್ಟಿದನು. ವ॥ ತಂದೆಯ ಒತ್ತಾಯಕ್ಕೆ ಮಣಿದು ಅಧಿರಾಜ್ಯಪದವಿಯ ಭೋಗವನ್ನು ಸ್ವೀಕರಿಸಿದ ತನ್ನ ಪತಿಯ ಪಾದಗಳಿಗೆ ನಮಸ್ಕರಿಸಿ ಕಮಲಪ್ರಭಾಮಹಾದೇವಿಯು, ಆ ಮನೋಹರನ ಕಣ್ಣುಗಳೆಂಬ ಪಾರಿವಾಳಗಳನ್ನು ಮದನಕ್ರೀಡೆಯಲ್ಲಿ ಲಾವಣ್ಯರಸಭರಿತವಾದ ತನ್ನ ಗಂಭೀರನಾಭಕೂಪದಲ್ಲಿ ತೇಲಾಡಿಸಿದಳು; ಆ ವಿಲಾಸವತಿಯು ಜಗತ್ಪತಿಯ ತೋಳುಗಳೆಂಬ ಸರ್ಪಗಳನ್ನು ತನ್ನ ಸುಕುಮಾರವಾದ ದೇಹವೆಂಬ ಚಂದನದ ಶಾಖೆಗಳಿಗೆ ಸುತ್ತಿಸಿ ಅಲ್ಲಿಂದ ಅಗಲದಂತೆ ನಿಯಮಿಸಿದಳು; ಆ ಹೊಸಹರೆಯದ ಬೆಡಗಿಯು ಸಹಜಸುಂದರನಾದ ಆತನ ವಿಶಾಲವಾದ ಎದೆಯ ಲಕ್ಷ್ಮೀ ನಿಧಾನವನ್ನು ತನ್ನ ಸಮುನ್ನತವಾದ ಸ್ತನಗಳೆಂಬ ಚಕ್ರವಾಕ ಮಿಥುನಗಳಿಗೆ ಅತ್ಯಂತ ಪ್ರೇಮದ ವಸತಿಸ್ಥಾನವೆಂದು ಗೊತ್ತುಮಾಡಿದಳು; ಆ ಮೃದುಮಧುರ ವಚನೆಯು ಗುಣಭೂಷಣನಾದ ಆತನ ಕಿವಿಗಳನ್ನು ತನ್ನ ಸ್ನೇಹಮಯವಾದ ಸಂಭಾಷಣ ರತ್ನಗಳಿಂದ ಅಲಂಕರಿಸಿದಳು; ಸೌಂದರ್ಯರಸನದಿಯ ತರಂಗದಂತೆ ಹುಬ್ಬಿನ ವಿಲಾಸವುಳ್ಳ ಆ ಚೆಲುವೆಯು ಸಂಪೂರ್ಣ ವಿರಕ್ತನಾದ ಆತನ ಮನೋಮಹಾಸಾಗರವನ್ನು ತನ್ನ ಗುಣಗಳೆಂಬ ಸಮಸ್ತವಸ್ತುಗಳಿಗೆ ಸ್ಥಿರವಾದ ನೆಲೆ ಮಾಡಿದಳು; ಹೀಗೆ ಸಮಭಾವದ ಸಮಸಂಗದಿಂದ ಹೊಮ್ಮುವ ಸುಖಲೀನರಾಗಿ ಅನೇಕ ದಿನಗಳನ್ನು ನಿಮಿಷಗಳಂತೆ ಕಳೆಯುತ್ತಿರಲಾಗಿ– ೫೦. ಚಂದ್ರನಿಗೂ ಆತನನ್ನು ಹೊಂದಿದ ಸುಂದರವಾದ ಕಲೆಗೂ ಪ್ರಭಾವಶಾಲಿಯಾದ ಅಮೃತವೆ ಹುಟ್ಟುವಂತೆ, ಜಗತ್ಪತಿಗೂ ಆ ಸತಿಗೂ ಭೂಭಾರವನ್ನು

ಕ್ಷಮನೆನೆ ಪುಟ್ಟಿದಂ ಕ್ರಮಸಮಾಕೃತಿರೂಪವಿಳಾಸಯೌವನೋ ।
ದ್ಗಮನಭಿಮಾನಮೇರು ವರಚಂದ್ರಸಮಾಹ್ವಯನಂದು ನಂದನಂ ॥ ೫೦

ಆ ಕುಮಾರಂಗೆ ಪರಮೇಶ್ವರಂ ಯುವೇಶ್ವರಪದವಿಯಂ ದಯೆಗೆಯ್ಯೆ

ಜನಕಂಗೆ ವೃದ್ಧರಾಜತೆ ।
ತನಗಧಿರಾಜತೆ ಸುತಂಗೆ ಯುವರಾಜತೆಯಿಂ ॥
ತನುರೂಪಮಾಗಿ ಸಮನಿಸೆ ।
ವಿನುತಜಗತ್ತ್ರಿತಯಮಾಯ್ತು ರಾಜ್ಯತ್ರಿತಯಂ ॥ ೫೧

ಪ್ರಥಿತಾಮಳಚರಿತಂ ತ ।
ತ್ಪೃಥಿವೀಪತಿಯರಸುಗೆಯ್ಯೆ ಜನಮಾದುದು ಸ ॥
ತ್ಪಥವರ್ತಿ ಯಥಾರಾಜಾ ।
ತಥಾಪ್ರಜಾ ಎಂಬ ನೀತಿಯಂ ನೆನೆಯಿಪವೋಲ್ ॥ ೫೨

ಭೂತಾನವಕರಮಾದುದ ।
ಭೂತಾನವಕರಮುಮಾದುದಿಂತಿದು ಚಿತ್ರಂ ॥
ನೀತಿಯುತಮಾದುದೆಂದುಮ ।
ನೀತಿಯುತಮುಮಾದುದಖಿಳಪೂಜ್ಯನ ರಾಜ್ಯಂ ॥ ೫೩

ಪುಳಿನದೊಳೆ ವಿಯೋಗಂ ಕರಿ ।
ಯೊಳೆ ಪಾಂಶುಳಕೇಳಿ ಭೇರಿಯೊಳೆ ದಂಡಹತಂ ॥

ವಹಿಸಲು ಸಮರ್ಥನಾದವರ ಚಂದ್ರನೆಂಬ ಹೆಸರುಳ್ಳ ಅಭಿಮಾನಶಾಲಿ ಮಗನು ಹುಟ್ಟಿ, ಕ್ರಮಕ್ರಮವಾಗಿ ರೂಪವಿಲಾಸ ಯೌವನಗಳನ್ನು ಹೊಂದಿದನು. ವ॥ ಆ ಕುಮಾರನಿಗೆ ಪರಮೇಶ್ವರನು ಯುವರಾಜ ಪದವಿಯನ್ನು ನೀಡಿದನು– ೫೧. ತಂದೆಗೆ ವೃದ್ಧರಾಜತೆ, ತನಗೆ ಅಧಿರಾಜತೆ, ಮಗನಿಗೆ ಯುವರಾಜತೆ– ಹೀಗೆ ಅನುರೂಪವಾಗಿ ಒದಗಲು, ರಾಜ್ಯತ್ರಯವು ತ್ರಿಲೋಕಪೂಜ್ಯವಾಯಿತು. ೫೨. ಅತ್ಯಂತ ಪರಿಶುದ್ಧ ಚರಿತ್ರನಾದ ಆ ಅರಸನು ರಾಜ್ಯವಾಳುತ್ತಿರಲಾಗಿ ಜನವೆಲ್ಲ ಸನ್ಮಾರ್ಗಗಾಮಿಯಾಯಿತು; ರಾಜನು ಹೇಗೊ ಪ್ರಜೆಗಳೂ ಹಾಗೆಯೆ ಎಂಬ ನೀತಿಯುಂಟು. ೫೩. ಸರ್ವಪೂಜ್ಯನಾದ ಆತನ ರಾಜ್ಯವು "ಭೂತಾನವಕರ" (ಕಶ್ಮಲರಹಿತ) ವಾಯಿತು; "ಅಭೂತಾನವಕರ"ವೂ (ಭೂಮಿಯ ಕೊರತೆಯಿಲ್ಲದುದೂ) ಆಯಿತು; ಇದು ವಿಚಿತ್ರ. ಹಾಗೆಯೆ ಅದು "ನೀತಿಯುತ" (ಸದಾಚಾರಸಂಪನ್ನ) ವಾಯಿತು; "ಅನೀತಿಯುತ"ವೂ (ಈತಿಬಾಧೆಯಿಲ್ಲದುದೂ) ಆಯಿತು. ೫೪. "ವಿಯೋಗ" (೧. ಪಕ್ಷಿಗಳ ಸಹವಾಸ, ೨. ವಿರಹ) ವೆಂಬುದು ಪುಳಿನ ಸ್ಥಾನಗಳಲ್ಲಿ ಮಾತ್ರ; "ಪಾಂಶುಕೇಳಿ" (೧. ಧೂಳಾಟ. ೨. ಜಾರ

ಸಳಿಳಾಶಯದೊಳೆ ಕುರವಾ ।
ಕುಳತೆ ದಿಟಂ ನಿಂದುವಂದು ಪೊರ್ದದೆ ಜನಮಂ ॥ ೫೪

ಚರರಿಲ್ಲದೆ ಪರನೃಪರಂ ।
ತರಂಗಗಳಂ ತಿಳಿದು ನೆಗಟ್ವಿ ಬಿನ್ನವಿಸದೊಡಂ ॥
ಪರಿಜನದ ಮನಮನಱಿದೀ ।
ವರಸುತನಂ ತದ್ವಿವೇಕನಿಧಿಯೊಳೆ ಸಹಜಂ ॥ ೫೫

ಮತ್ತಮಾ ಚಂದ್ರಪ್ರಭಾಧೀಶ್ವರನ ರಾಜ್ಯಚ್ಚಂದ್ರಪ್ರಭಾಸರಂ ಕುರುಕುಳಗಗನತಳಮಂ ಬೆಳಗಿಯುಂ, ಸದ್ಧರ್ಮವಾರ್ಧಿಯಂ ಪ್ರವರ್ಧಿಸಿಯುಂ, ದುಷ್ಕೃತಾಂಧಕಾರಸಂದೋಹಮನದಿರ್ಪಿಯುಂ, ಕುಮತಪಂಕೇಜಮಂ ಸಂಕೋಚಕ್ಕೆ ಸಲಿಸಿಯುಂ, ಭವ್ಯಕುಮುದಸಮುದಯಮನುದ್ಬೋಧಿಸಿಯುಂ, ಪರಚಕ್ರಚಕ್ರಾನೀಕಮಂ ವಿಘಟಿಸಿಯುಂ, ಸೇವಕಚಕೋರನಿಕರಮಂ ತಣಿಪಿಯುಂ, ಪ್ರಜಾನಿಕರ ಸಕಳೌಷಧಿಸಂಕುಳಮಂ ಸಫಳಂಮಾಡಿಯುಂ, ಮಿತ್ರಪಾರ್ಥಿವಾಂತರಂಗಚಂದ್ರಕಾಂತಸಂತಾನಮಂ ಸಾರ್ದ್ರತೆಗೆ ಸಲಿಸಿಯುಂ ಇಂತವಿರುದ್ಧಮುಮತಿಪ್ರವೃದ್ಧಮುಮೆನಿಸಿ ಸಲಿಸುತ್ತುಮಿರೆ,

ಪರಮೇಶಂ ಜೀವಿತೇಶಂ ತಮಗೆ ದಿಟದಿನೆಂದುರ್ವೆ ಕಾಂತಾಜನಂ ಮ ।
ತ್ತರುಹಂ ರಾಜ್ಯಾರ್ಹನೆಂದೊಲ್ದೆಱಗೆ ಧರೆ ಜಗದ್ಬಂಧು ಮದ್ಬಂಧುವೆಂದೊಂ ॥

ಕ್ರೀಡೆ) ಆನೆಗಳಲ್ಲಷ್ಟೆ; "ದಂಡಹತ" (೧. ವಾದನ ದಂಡದಿಂದ ಬಡಿಯುವಿಕೆ, ೨. ಶಿಕ್ಷೆಯ ಪೆಟ್ಟು) ಭೇರಿಯಲ್ಲಿಯೆ; "ಕುರವಾಕುಳತೆ" (೧. ಕುರವವೆಂಬ ಪಕ್ಷಿಗಳಿಂದ ತುಂಬಿರುವಿಕೆ. ೨. ಕೆಟ್ಟಮಾತುಗಳಿಂದಾಗುವ ಕಳವಳ) ಜಲಾಶಯಗಳಲ್ಲಿಯೆ ನಿಂತುವಲ್ಲದೆ ಜನರಿಗೆ ಅವೆಂದೂ ಒದಗಲಿಲ್ಲ. ೫೫. ಗುಪ್ತಚಾರರ ಸಹಾಯ ವಿಲ್ಲದೆಯೆ ಪರರಾಜರ ಅಂತರಂಗವನ್ನು ತಿಳಿದು, ಕ್ರಮ ಕೈಕೊಳ್ಳುವ ಹಾಗು ಬಿನ್ನವಿಸದಿದ್ದರೂ ತನ್ನ ಪರಿಜನದ ಮನಸ್ಸನ್ನರಿತು ಅವರ ಇಚ್ಛೆಯನ್ನು ನೆರವೇರಿಸುವ ಅರಸುತನ ಆ ವಿವೇಕನಿಧಿಗೆ ಸಹಜವೆ ಆಗಿತ್ತು. ವ॥ ಮತ್ತು ಆ ಚಂದ್ರಪ್ರಭಾಧೀಶ್ವರನ ರಾಜ್ಯಚಂದ್ರಪ್ರಭೆಯ ಪ್ರಸಾರವು ಕುರುಕುಲಾಕಾಶವನ್ನು ಬೆಳಗಿತು; ಸದ್ಧರ್ಮವೆಂಬ ಸಮುದ್ರವನ್ನು ಉಕ್ಕೇರಿಸಿತು; ದುಷ್ಕರ್ಮವೆಂಬ ಕತ್ತಲೆಯ ರಾಶಿಯನ್ನು ಹೊಡೆದಟ್ಟಿತು; ಕುಮತವೆಂಬ ಕಮಲವನ್ನು ಸಂಕೋಚಗೊಳಿಸಿತು; ಧರ್ಮಾ ನುಯಾಯಿಗಳೆಂಬ ಕುಮುದಗಳನ್ನು ಅರಳಿಸಿತು; ಪರರಾಜ್ಯಗಳೆಂಬ ಚಕ್ರವಾಕಗಳನ್ನು ಪರಸ್ಪರರಿಂದ ಅಗಲಿಸಿತು; ಸೇವಕರೆಂಬ ಚಕೋರಗಳನ್ನು ತಣಿಸಿತು; ಪ್ರಜಾ ಕೋಟಿಯೆಂಬ ಸರ್ವ ಔಷಧಿ ಸಮೂಹವನ್ನು ಸಫಲಗೊಳಿಸಿತು; ಮಿತ್ರರಾಜರ ಅಂತರಂಗವೆಂಬ ಚಂದ್ರಕಾಂತಶಿಲೆಗಳನ್ನು ಆರ್ದ್ರಗೊಳಿಸಿತು; ಹೀಗೆ ಅವಿ ರುದ್ಧವೂ ಅತ್ಯಂತ ಅಭಿವೃದ್ಧವೂ ಎನಿಸುತ್ತಿರಲಾಗಿ–೫೬. ಪರಮೇಶ್ವರನೆ ತಮಗೆ ನಿಶ್ಚಯವಾಗಿಯೂ ಪ್ರಾಣನಾಥನೆಂದು ಕಾಂತೆಯರು ಹಿಗ್ಗಲಾಗಿ, ಅರ್ಹಂತನೆ ರಾಜ್ಯಕ್ಕೆ ಯೋಗ್ಯನೆಂದು ಭೂಮಿಯ ಜನವೆಲ್ಲ ಮೆಚ್ಚಿ ಎರಗಲಾಗಿ,

ದಿರೆ ಹರ್ಷೋತ್ಕರ್ಷದೊಳ್ ಬಾಂಧವಸಮಿತಿ ಮನೋವೃತ್ತಿಗತ್ಯಂತಶೋಭಾ।
ಕರಮಾಯ್ತಾಶ್ಚರ್ಯಲೀಲಾವಿಭವಮಭವಸಂಭಾವಿತಂ ರಾಜ್ಯಕಾಲಂ ॥ ೫೬

ಅಂತಾಱುಲಕ್ಕೆಯುಮಯ್ವತ್ತು ಸಾಸಿರ ಪೂರ್ವಮುಮಿರ್ಪತ್ತುನಾಲ್ಕು ಪೂರ್ವಾಂಗಮುಂ ರಾಜ್ಯಕಾಲಂ ಸಂದುದೆಂಬಂದಿಂಗದೊಂದು ದೆವಸಮತಿ ಚಿತ್ರಕೂಟಕೋಟಾಕೋಟಿವಿಷಮಿತಪಯೋದಪಥಮಪ್ಪ ಪರಿಷನ್ಮಂಟಪದ ಮಧ್ಯದಲ್ಲಿ

ಹರಿಪೀಠಮನೀಶನಳಂ ।
ಕರಿಸಿದನುದಯಾದ್ರಿಯಂ ಸುಧಾಕರನೆಂತಂ ॥
ತಿರೆ ನಿರ್ಮಳಾಂಬರಾಳಂ ।
ಕರಣಂ ಕಾಶ್ಮೀರಸಾರಸಂಧ್ಯಾರಾಗಂ ॥ ೫೭

ತ್ರಿಭುವನಚೂಡಾಮಣಿಯ ।
ಪ್ಪಭವಂಗಾನಾದೆನಲ್ತೆ ಚೂಡಾಮಣಿಯೆಂ ॥
ಬಭಿನವರಾಗೋದಯಮೆಂ ।
ಬ ಭಂಗಿಯಿಂ ಮಕುಟಮಾಲ್ಯಮಣಿರುಚಿಯೆಸೆಗುಂ ॥ ೫೮

ಅಕಳಂಕನ ಸಹಜಚ್ಛಿ ।
ದ್ರಕರ್ಣಪಾಳಿಕೆಗಳಲ್ಲಿ ತೊಳಗುವ ಮಾಣಿ ॥
ಕ್ಯಕನತ್ಕುಂಡಳರುಚಿ ಮುಖ ।
ಸಕಳೇಂದುಗೆ ಪಡೆದುದುದಯರಾಗಶ್ರೀಯಂ ॥ ೫೯

ಜಗದ್ಬಂಧುವೆ ನಮಗೆ ಬಂಧುವಾದನೆಂದು ಬಾಂಧವರೆಲ್ಲ ಅತ್ಯಂತ ಹರ್ಷಿತರಾಗಿರಲಾಗಿ, ಅಭವನ ರಾಜ್ಯಕಾಲವು ಅತ್ಯಂತ ಶೋಭಾಕರವೂ, ಆಶ್ಚರ್ಯಕರವೂ, ಸಂತೋಷಕರವೂ, ವೈಭವಶಾಲಿಯೂ ಆಯಿತು. ವ॥ ಹೀಗೆ ಆರು ಲಕ್ಷ ಐವತ್ತು ಸಾವಿರ ಪೂರ್ವ ಹಾಗು ಇಪ್ಪತ್ತುನಾಲ್ಕು ಪೂರ್ವಾಂಗದವರೆಗೆ ರಾಜ್ಯಕಾಲ ಕಳೆದಾಗ ಒಂದು ದಿವಸ ಅತ್ಯಂತ ವಿಚಿತ್ರವಾದ ಗಗನಚುಂಬಿಯಾದ ಅನೇಕ ಶಿಖರಕಲಶಗಳುಳ್ಳ ಒಡ್ಡೋಲಗ ಮಂಟಪ ಮಧ್ಯದಲ್ಲಿ– ೫೭. ನಿರ್ಮಲವಾದ "ಅಂಬರ" (ವಸ್ತ್ರ) ಭೂಷಿತನಾಗಿ ಕಾಶ್ಮೀರವರ್ಣದಿಂದ ಸಂಧ್ಯಾಕಾಂತಿಯುನ್ನೊಳಗೊಂಡು, ಉದಯಗಿರಿಯುನ್ನು ಚಂದ್ರನೇರುವಂತೆ ಸಿಂಹಾಸನವನ್ನು ರಾಜನು ಏರಿದನು. ೫೮. ಲೋಕತ್ರಯಚೂಡಾಮಣಿಯಾದ ಜಿನನಿಗೇ ನಾನು ಚೂಡಾಮಣಿಯಾದೆನೆಂಬ ಸಂತೋಷದಿಂದ ಹೊಸಕಾಂತಿಯುನ್ನು ಹೊಂದಿತೊ ಏನೊ ಎಂಬಂತೆ ಕಿರೀಟದ ತುದಿಯಲ್ಲಿರುವ ರತ್ನಪ್ರಭೆ ಕಂಗೊಳಿಸಿತು. ೫೯. ನಿಷ್ಕಲಂಕನಾದ ಆತನ ಜನ್ಮದಿಂದಲೆ ಸಿದ್ಧವಾದ ಕರ್ಣಛಿದ್ರಗಳಲ್ಲಿ ಥಳಥಳಿಸುವ ಮಾಣಿಕ್ಯದ ಕುಂಡಲಗಳ ಪ್ರಭೆ ಮುಖವೆಂಬ ಪೂರ್ಣಚಂದ್ರನಿಗೆ ಉದಯ

ಐರಾವತಘನಕುಂಭಾ ।
ಕಾರಾಂಸಸ್ಥಳಿಗೆ ನಿಮಿರ್ದು ಪಸರಿಸೆ ಮಣಿಕೇ ॥
ಯೂರಪ್ರಭೆಯಭಿನವಸಿಂ ।
ದೂರಾರುಣಕಾಂತಿಯೆನಿಸಿ ಸೊಗಯಿಸಿತಾಗಳ್ ॥ ೬೦

ಜಗದಧಿಪತಿಯಗಲ್ದುರದೊಳ್ ।
ಸೊಗಯಿಸುವ ಸಹಸ್ರಗುಚ್ಛಮಧ್ಯದ ಹರಿನೀ ॥
ಳಗಭಸ್ತಿ ತಿಂಬೆ ನಾಭಿಗೆ ।
ಜಗುನೆಯ ಸುಟಿಯೊಪ್ಪಮಾದುದೊಚ್ಚತಮಾಗಳ್ ॥ ೬೧

ಎರಡುಂ ಕೆಲದೊಳಮಿರ್ದಮ ।
ರರಮಣಿಯರ್ ಬೀಸುವಮಳಚಮರರುಹಂಗಳ್ ॥
ಪರಿಕಲಿಸೆ ಮೇಗೆ ಪೋಲ್ತಂ ।
ಶರದದ ಮುಗಿಲೆಱಪುದಾರತಾರಾಚಳಮಂ ॥ ೬೨

ಕಮಳಪ್ರಭೆವೆರಸಾತ್ಮ ।
ಪ್ರಮದೆಯರಾಕಮಳೆವೆರಸು ಜಳದೇವಿಯರಾ ॥
ದಮೆ ಬಳಸಿದಂದದಿರೆ ಸಿತ ।
ಕಮಳಾಕರಮಂ ಗುಣಾಕರಂ ನೆನೆಯಿಸಿದಂ ॥ ೬೩

ಚರಮಾಂಗನಂಗಕಾಂತಿ ।
ಸ್ಫುರಿತಜ್ಯೋತ್ಸ್ನಾಪ್ರವಾಹದೊಳ್ ಮನದೊಲವಿಂ ॥
ಪರಿವರಿಯಾಡಿದುದಂತಃ ।
ಪುರಾಂಗನಾನಯನಚಳಚಕೋರೀನಿಚಯಂ ॥ ೬೪

ರಾಗದ ಶೋಭೆಯನ್ನು ಒದಗಿಸಿತು. ೬೦. ಐರಾವತದ ಕುಂಭಸ್ಥಳಗಳಂತಿರುವ ಹೆಗಲ ಮೇಲೆ ರತ್ನದ ತೋಳ್ಬಳೆಯ ಕಾಂತಿ ಪಸರಿಸಿ, ಹೊಸಬಗೆಯ ಕುಂಕುಮದ ಕೆಂಬೆಳಕಿನಂತೆ ಒಪ್ಪಿತು. ೬೧. ಜಗತ್ಪತಿಯ ವಿಶಾಲವಾದ ಎದೆಯ ಮೇಲೆ ಶೋಭಿಸುವ ಸಾವಿರದೆಳೆಯ ಹಾರಮಧ್ಯದ ನೀಲರತ್ನದ ಕಾಂತಿ ಆವರಿಸಿಕೊಂಡಿರಲಾಗಿ, ಆತನ ಹೊಕ್ಕುಳಿಗೆ ಯಮುನಾ ನದಿಯ ಸುಳಿಯ ಶೋಭೆಯುಂಟಾಯಿತು. ೬೨. ಇಕ್ಕೆಲದಲ್ಲಿ ನಿಂತು ದೇವರಮಣಿಯರು ಬೀಸುತ್ತಿರುವ ಜೋಡಿ ಚಾಮರಗಳು ಮೇಲೆ ಸಂಧಿಸಲಾಗಿ, ಶರತ್ಕಾಲದ ಮೇಘಗಳೆರಗುವ ತಾರಾಚಲದಂತೆ ದೇವನು ಒಪ್ಪಿದನು. ೬೩. ಕಮಲಪ್ರಭೆಯೊಡನೆ ಆತನ ಅಂತಃಪುರದ ಪ್ರಮದೆಯರು ತನ್ನ ಸುತ್ತಲೂ ಇರಲಾಗಿ ಲಕ್ಷ್ಮಿಯೊಡನೆ ಜಲದೇವಿಯರು ಬಳಸಿಕೊಂಡ ಕಮಲಸರೋವರವನ್ನು ಆ ಗುಣಾಶ್ರಯನು ನೆನಪಿಗೆ ತಂದನು. ೬೪. ಚರಮದೇಹಧಾರಿಯ ದೇಹಕಾಂತಿಯೆಂಬ ಬೆಳ್ದಿಂಗಳ ಪ್ರವಾಹದಲ್ಲಿ ಮನವೆಚ್ಚಿ ಅಂತಃಪುರಾಂಗನೆಯರ ಕಣ್ಣುಗಳೆಂಬ

ಆ ಪರಿಷಲ್ಲಕ್ಷ್ಮಿಯ ಹಾ ।
ರೋಪಮಮಾಗೆರಡು ಕೆಲದೊಳಂ ತರದಿಂದಂ ॥
ಭೂಪಾಳಕರಿರೆ ಸಕಳಗು ।
ಣೋಪೇತಂ ನಡುವೆ ತರಳಮಣಿಗೆಣೆಯಾದಂ ॥ ೬೫

ಅಂತುಭಯಪಾರ್ಶ್ವದೊಳಂ ಮಹಾಸೇನಮಹಾರಾಜನುಂ ವರಚಂದ್ರಕುಮಾರನುಂ ಮೊದಲಾಗೆ ಮೂರ್ಧಾಭಿಷಿಕ್ತಮಕುಟಬದ್ಧಮಹಾಸಾಮಂತಮಂತ್ರಿಮಹತ್ತರಾದಿಗಳ್ ಯಥೋಚಿತಾಸನಂಗಳೊಳಿರೆ

ಪರಮನ ದಯಾವಳೋಕನ ।
ವರಚಂದ್ರಿಕೆಯಲ್ಲಿ ಸಿರಿಯ ಪಿಡಿವಂದದೆ ಭೂ ॥
ಪರ ಕರಕಮಳಂ ಮುಗಿದುವು ।
ಪರಿಗತಕಂಕಣರವಾಳಿಝುಂಕರಣಂಗಳ್ ॥ ೬೬

ಮತ್ತಂ

ಕವಿತಾಕೌಶಲಮಂ ಗಮ ।
ಕಿ..........ಯಂ ವಾದಪಟುತೆಯಂ ವಾಗ್ಮಳಮಂ ॥
ಕವಿಗಳ ವಾಗ್ಮಿಗಳ ಗಮಕಿ ।
..........ಗಳ ನೆರವಿ ಮೆಱೆಯಲಿರ್ದತ್ತದಱೊಳ್ ॥ ೬೭

ತೂರ್ಯತ್ರಿತಯದ ನಿಜಚಾ ।
ತುರ್ಯಮನಂತಲ್ಲಿ ಮೆಱೆದು ಮೆಚ್ಚಿಸುವೀತಾ ॥
ತ್ಪರ್ಯದಿನಮರ್ತ್ಯಕುತಪಂ ।
ಪರ್ಯಾಯದಿನಿರ್ದುದಭವನಾಸ್ಥಾಯಿಕೆಯೊಳ್ ॥ ೬೮

ಚಕೋರೀಸಮೂಹವು, ಸುತ್ತಿಸುತ್ತಿ ಆಡಿದುವು. ೬೫. ಆ ಸಭೆಯೆಂಬ ಲಕ್ಷ್ಮಿಯ ಹಾರದಂತೆ ಇಕ್ಕೆಲದಲ್ಲಿಯೂ ಸಾಲಾಗಿ ಅರಸುಗಳು ಮಂಡಿಸಿರಲಾಗಿ, ನಾಯಕ ಮಣಿಯಂತೆ ಸಕಲಗುಣವಂತನಾದ ರಾಜನು ಮಧ್ಯದಲ್ಲಿ ಒಪ್ಪಿದನು. ವ॥ ಎರಡೂ ಪಕ್ಕಗಳಲ್ಲಿ ಮಹಾಸೇನ ಮಹಾರಾಜನೂ, ವರಚಂದ್ರಕುಮಾರನೆ ಮೊದಲಾಗಿ ಮೂರ್ದಾಭಿಷಿಕ್ತರೂ, ಮಕುಟಬದ್ಧರೂ, ಮಹಾಸಾಮಂತರೂ, ಮಂತ್ರಿಗಳೂ, ಮಹತ್ತರರೂ ಮುಂತಾದವರು ತಂತಮಗೆ ಉಚಿತವಾದ ಪೀಠಗಳಲ್ಲಿ ಕುಳಿತಿದ್ದರು. ೬೬. ಪರಮೇಶ್ವರನ ದಯಾಪೂರ್ಣವಾದ ದೃಷ್ಟಿಯ ಬೆಳುದಿಂಗಳಲ್ಲಿ ಲಕ್ಷ್ಮಿಯನ್ನು ಹಿಡಿದುಕೊಳ್ಳುವಂತೆ ರಾಜರು ತಮ್ಮ ತಾವರೆಗೈಗಳನ್ನು ಮುಗಿದರು; ಹೊರಟು ಹೋಗುವ ದುಂಬಿಗಳ ಗುಂಜಾರವದಂತೆ ಅವರ ಕಡಗಗಳು ಝುಣಝುಣಿಸಿದುವು. ಮತ್ತು– ೬೭. ಕವಿಗಳೂ, ವಾಗ್ಮಿಗಳೂ, ಗಮಕಿಗಳೂ ತಂತಮ್ಮ ವಿದ್ಯಾಕೌಶಲ್ಯ ವನ್ನು ತೋರಲೆಂದು ಅಲ್ಲಿ ನೆರೆದಿದ್ದರು. [ಪದ್ಯ ಖಿಲವಾಗಿದೆ]. ೬೮. ತೂರ್ಯತ್ರಯ ದಲ್ಲಿ ತಮ್ಮ ಕೌಶಲವನ್ನು ಪ್ರದರ್ಶಿಸಿ ಮೆಚ್ಚಿಸಬೇಕೆಂಬ ಹಂಬಲದಿಂದ ಆ

ಇರದೆ ನುಡಿಗೊರ್ಮೆ ಝುಂಕರಿ ।
ಪರಸುಗಳ ನಿಯೋಗಮಂ ನಿವೇದಿಸುವ ಮಹ ॥
ತ್ತರರ ಪೊಗಟ್ವರ್ಥಿಗಳ ಚ ।
ಪ್ಪರಿಸುವ ಪಡಿಯಱರ ನಿನದಮೊದವಿದುದಾಗಳ್ ॥ ೭೯

ಮೃಗಮದದ ಹಿಮದ ಕುಂಕುಮ ।
ದಗುರುವ ಚಂದನದ ಸಾರಸೌರಭಮಂ ಬಾ ॥
ರ್ತೆಗೆಯದೆ ದೇವನ ದಿವ್ಯಾಂ ।
ಗಗಂಧಮಂ ಬಳಸಿ ಸುೞಿದುದಳಿನಿಕುರುಂಬಂ ॥ ೭೦

ಜಗದೀಶಾಂಗಮಯೂಖಚಂದ್ರಿಕೆಯನಂದೊರ್ಮೊರ್ಮೆ ಮಿಶ್ರೀಭವ ।
ನ್ಮೃಗಭೂಚಂದನಪುಷ್ಪಸೌರಭಮನಂದೊರ್ಮೊರ್ಮೆ ಗೀರ್ವಾಣವಂ ॥
ದಿಗಣಸ್ತೋತ್ರವಿಚಿತ್ರನಿಸ್ವನಮನಂದೊರ್ಮೊರ್ಮೆ ಸಾಶ್ಚರ್ಯಮೇ ।
ನುಗುೞುತ್ತಿರ್ದುದೊ ತತ್ಸಭಾಸದನಮಾತ್ಮದ್ವಾರವಕ್ತ್ರಂಗಳಿಂ ॥ ೭೧

ಅಂತು ಸಕಳಸಾಮ್ರಾಜ್ಯಲೀಲಾವಿಭವಕ್ಕಿದುವೆ ಸೀಮೆಯೆಂಬಂತೆಸೆಡ್ಡಮಾದ ಒಡ್ಡೋಲಗದೊಳಿರ್ಪನ್ನೆಗಂ

॥ ಉತ್ಸಾಹವೃತ್ತ ॥

ಉಡುಗಿದುರದ ತೂಪ ಸಿರದ ಸೆರೆ ಪೊದಟ್ಟ ಮೆಯ್ಯ ಕೋ ।
ಲ್ವಿಡಿದ ಕೆಯ್ಯ ತಲೆಯ ನರೆಯ ಮೊಗದ ತೆರೆಯ ಭಂಗಿ ಮು ।
ಪ್ಪಡಸಿದಂದಮಂ ಜಲಕ್ಕನಱಪೆ ಬಿಡದೆ ಪುಯ್ಯಲಂ ।
ಕುಡುತುಮೊರ್ವನೋಲಗಕ್ಕೆ ಬಂದನಂದನಿಂದ್ಯನಾ ॥ ೭೨

ಒಡ್ಡೋಲಗದಲ್ಲಿ ದೇವವರ್ಗದ ಸಂಗೀತಕಲಾವಿದರ ಸಮೂಹ ನೆರೆದಿತ್ತು. ೬೯. ಮಾತಿಗೊಮ್ಮೆ ಅಬ್ಬರಿಸುವ ಅರಸುಗಳ ನಿಯೋಗವನ್ನು ತಿಳಿಸುವ ಮಹತ್ತರರ, ಹೊಗಳುವ ಯಾಚಕರ, ಎಚ್ಚರಿಸುವ ಪ್ರತೀಹಾರರ ನಿನಾದವು ಆಗ ಉಂಟಾಯಿತು. ೭೦. ಕಸ್ತೂರಿಯ, ಕರ್ಪೂರದ, ಕುಂಕುಮದ, ಅಗುರುವಿನ, ಚಂದನದ ಸಾರವತ್ತಾದ ಸುಗಂಧವನ್ನು ಕಡೆಗಣಿಸಿ ದೇವನ ದಿವ್ಯಶರೀರದ ಪರಿಮಳವನ್ನೆ ಬಳಸಿ ದುಂಬಿಗಳ ಹಿಂಡುಗಳು ಸುಳಿದುವು. ೭೧. ಜಗತ್ಪತಿಯ ದೇಹಪ್ರಭೆಯ ಬೆಳದಿಂಗಳನ್ನೊಮ್ಮೊಮ್ಮೆ, ಕಸ್ತೂರಿ, ಚಂದನ, ಪುಷ್ಪ ಮೊದಲಾದುವುಗಳ ಮಿಶ್ರಸುಗಂಧವನ್ನು ಒಮ್ಮೊಮ್ಮೆ, ದೇವವಂದಿ ಸಮೂಹದ ಸ್ತೋತ್ರನಿನಾದವನ್ನು ಒಮ್ಮೊಮ್ಮೆ, ಆ ಸಭಾಭವನವು ತನ್ನ ದ್ವಾರಗಳೆಂಬ ಬಾಯಿಗಳಿಂದ ಆಶ್ಚರ್ಯಕರವಾಗಿ ಹೊಮ್ಮಿಸುತ್ತಿತ್ತು. ವ॥ ಹೀಗೆ ಸಮಸ್ತ ಸಾಮ್ರಾಜ್ಯ ಲೀಲೆಯ ವೈಭವಕ್ಕೆ ಇದೇ ಪರಾಕಾಷ್ಠೆಯೆಂಬಂತೆ ಮನೋಹರವಾದ ಒಡ್ಡೋಲಗ ನಡೆದಿರುವಾಗ– ೭೨. ಗೂಡುಗಟ್ಟಿದ ಎದೆ, ತೂಗಾಡುವ ಶಿರಸ್ಸು, ನಿರಿಗೆಗಟ್ಟಿದ ಮೈ, ಕೋಲು ಹಿಡಿದ ಕೈ, ನರೆತುಂಬಿದ ತಲೆ, ಮಡಿಕೆಬಿದ್ದ ಮುಖ– ಇವೆಲ್ಲವುಗಳು ಮುಪ್ಪಿನ ಲಕ್ಷಣವನ್ನು ತಟ್ಟನೆ ತೋರುತ್ತಿರಲಾಗಿ ಹುಯ್ಯಲಿಡುತ್ತ ಒಬ್ಬನು ಓಲಗಕ್ಕೆ ಬಂದನು.

ಬಂದು ಪೊಡೆವಟ್ಟು ಬಟಿಕಿಂ ।
ತೆಂದಂ ನಿನಗಿಂದಿನಿರುಳೊಳಂತಕನಿಂದೆ ॥
ಯ್ತುಂದಪುದು ಬಾಧೆ ತಪ್ಪದಿ ।
ದೆಂದು ನಿಮಿತ್ತಜ್ಞನುಸಿರ್ದನಧಿಕಪ್ರಜ್ಞಂ ॥ ೭೩.

ಮತ್ತಂ

ಚಿಕ್ಕನೆ ಬಲ್ಲಿದರಂ ಮಱಿ ।
ವೊಕ್ಕೊಡದೋಸರಿಸಿ ಪೋಕುಮಲ್ಲದೆ ನೀನಿಂ ॥
ತಕ್ಕಟ ಚಿಕ್ಕಟಮಿರ್ದೊಡೆ ।
ಪಕ್ಕಕಕೊಳಗಪ್ಪೆ ಪಸಿದು ಮಸಗಿದ ಜವನಾ ॥ ೭೪

ಎಂದಿದುವುಮಂ ಪೇಟಿಟ್ಟೊಡದುಕಾರಣದಿನೇಟ್ಟಿಂದೆಂ –

॥ ಉತ್ಸಾಹವೃತ್ತ ॥

ಅಂತಕಾಂತಕಂ ದಿಟಕ್ಕೆ ದೇವ ನೀನೆ ಭಾವಿಪಂ ।
ದಂತಟಿಂದೆ ಕಾವುದೆನ್ನನಾವ ತೆಱದೊಳಂ ಭಯ ॥
ಭ್ರಾಂತನಂ ಬಟಿಕ್ಕಮೆಂತುಮಾಪದರ್ಥಯುಕ್ತರೊಳ್ ।
ಶಾಂತಿಯಂ ಸಮಂತು ಮಾಡುವುದು ಗುಣಂ ಮಹತ್ತರಂ ॥ ೭೫

ಎಂದು ನುಡಿದದೃಶ್ಯಮಪ್ಪುದುಂ ವಿಸ್ಮಯರಸೈಕಭಾಜನಂ ಸಭಾಜನಂ ದೇವಿದೇನೆಂಬುದಂ ಬೆಸಸಿಮೆನೆ ದರಸ್ಮಿತಾನನಂ ಜ್ಞಾನತ್ರಯನಿಧಾನನಿಂತೆಂದಂ:–

೭೩. ಬಂದು ನಮಸ್ಕರಿಸಿ ಬಳಿಕ ಹೀಗೆಂದನು– "ನಿನಗೆ ಇಂದು ರಾತ್ರಿ ಯಮನಿಂದ ಬಾಧೆ ಬರುವುದು; ಅದು ತಪ್ಪಲಾರದು ಎಂದು ಬಲ್ಲಿದನಾದ ಜ್ಯೋತಿಷಿಯೊಬ್ಬನು ನನಗೆ ಹೇಳಿದನು. ಮತ್ತು– ೭೪. ಕೂಡಲೆ ನೀನು ಬಲಿಷ್ಠರ ಆಶ್ರಯ ಹೊಂದಿದರೆ ಆ ಬಾಧೆ ತೊಲಗುವುದು. ಹಾಗೆ ಮಾಡದೆ ನೀನು ತೆಪ್ಪಗಿದ್ದರೆ ಯಮನ ಕೈಗೆ ಸಿಕ್ಕಿಬಿಡುವೆ. ವ॥ ಎಂದು ಕೂಡ ಆತನು ಹೇಳಿದನು. ಆದುದರಿಂದ ನಾನು ಬಂದೆನು. ೭೫. ವಿಚಾರಿಸಿ ನೋಡಿದರೆ ಯಮನಿಗೇ ಯಮನು ನೀನು. ಆದುದರಿಂದ ಭಯಭೀತನಾದ ನನ್ನನ್ನೂ ಹೇಗಾದರೂ ಮಾಡಿ ಕಾಪಾಡು. ಆಪತ್ತಿಗೊಳಗಾದವರಿಗೆ ನೆಮ್ಮದಿಯನ್ನು ನೀಡುವುದು ದೊಡ್ಡಗುಣ." ವ॥ ಹೀಗೆ ನುಡಿಯುತ್ತ ಆತನು ಅದೃಶ್ಯನಾದನು. ಸಭಾಜನವೆಲ್ಲ ಬೆರಗಾಗಿ "ದೇವ, ಇದೇನೆಂಬುದನ್ನು ದಯವಿಟ್ಟು ತಿಳಿಸಿ" ಎಂಬು ಬೇಡಿಕೊಳ್ಳಲು, ತ್ರಿಜ್ಞಾನಧಾರಿಯಾದ ದೇವನು ನಸುನಗೆಯಿಂದ

ಧರ್ಮರುಚಿಯೆಂಬನಾ ಸೌ ।
ಧರ್ಮೇಂದ್ರನ ಬೆಸದಿನೀ ಜರಾಜರ್ಜರಮಂ ॥
ನಿರ್ಮಿಸಿ ಶರೀರಮಂ ತಳೆ ।
ದೊರ್ಮೊದಲೊಳೆ ಮೃತ್ಯುಭೀತನಾದನಮರ್ತ್ಯಂ ॥ ೭೬

ಬಂದಂ ವಿಷಯವಿರಕ್ತತೆ ।
ಯಂ ದಿಟದಿಂದೆವಗೆ ಮಾಟ್ಪ ಬಗೆ ಕೆಯ್ಮಿಗೆ ತಾ ॥
ನೆಂದವಧಿಬೋಧದಿಂದಱೆ ।
ದಂದು ಸಭಾಸದರ್ಗೆ ಪೇೞ್ದು ಕಳಿಪಿದನವರಂ ॥ ೭೭

ಅಂತು ವಿಸರ್ಜಿತಸಭಾಸದನನುಂ ಪರಮವೈರಾಗ್ಯಾಸ್ಪದನುಮಾಗಿ ತನ್ನೊಳಿಂತೆಂದಂ :–

ಭೋಗಾನುಭವಕ್ಷಮತೆಯ ।
ದಾಗದು ಜರೆಯಿಂದೆ ತನಗೆ ಮಱುಕಂ ಮನದಿಂ ॥
ಪೋಗದು ನೆನೆಯದು ಜವನು ।
ದ್ವೇಗಮುಮಂ ರಾಗಿ ಜನದ ಗತಿವಿಪರೀತಂ ॥ ೭೮

ವಳಿ ತೆರೆ ಪಳಿತಂ ನೊರೆಯು ।
ಚ್ಚಳಿಪ ಘನಶ್ವಾಸಮದುವೆ ಘೋಷಂ ಜರೆ ತಾಂ ॥
ಜಳನಿಧಿಯೆನೆ ಯಮಬಡವಾ ।
ನಳಂಗೆ ಜೀವನಮೆ ಪೀರ್ವ ಜೀವನಮಲ್ತೇ ॥ ೭೯

ಹೀಗೆಂದನು– ೭೬. "ಧರ್ಮರುಚಿಯೆಂಬ ದೇವನು ಸೌಧರ್ಮೇಂದ್ರನ ಅಪ್ಪಣೆಯ ಮೇರೆಗೆ ಮುಪ್ಪಿನಿಂದ ದುರ್ಬಲವಾದ ಈ ದೇಹವನ್ನು ರಚಿಸಿ, ಅದರೊಳಗೆ ತಾನು ಸೇರಿದೊಡನೆ ಮೃತ್ಯುಭಯಕ್ಕೆ ಒಳಗಾದನು. ೭೭. ನನಗೆ ಸಂಸಾರದಲ್ಲಿ ವಿರಕ್ತಿಯನ್ನು ಹುಟ್ಟಿಸಬೇಕೆಂಬ ನಿಶ್ಚಯದಿಂದಲೆ ಆತನು ಬಂದಿದ್ದನು" ಹೀಗೆಂದು ಅವಧಿಜ್ಞಾನದಿಂದ ತಾನು ಕಂಡುಕೊಂಡ ವಿಷಯವನ್ನು ಸಭಾಜನಕ್ಕೆ ತಿಳಿಸಿ ಅವರನ್ನು ಬೀಳ್ಕೊಟ್ಟನು. ವ॥ ಹಾಗೆ ಸಭೆಯನ್ನು ವಿಸರ್ಜಿಸಿ, ಪರಮ ವೈರಾಗ್ಯವನ್ನು ತಾಳಿ ತನ್ನಲ್ಲಿಯೆ ಹೀಗೆಂದು ಕೊಂಡನು– ೭೮. ಮುಪ್ಪು ಬಂದು, ಭೋಗಾನುಭವಕ್ಕೆ ಶಕ್ತಿ ಸಾಲದು; ಆದರೆ ಮನದ ಹಂಬಲ ಹಿಂಗದು; ಮರಣದ ಉದ್ವೇಗದ ನೆನಹೂ ಇರುವುದಿಲ್ಲ. ವಿಷಯಾ ಸಕ್ತ ಜನರ ಗತಿ ಹೀಗೆ ವಿಪರೀತವಾಗಿ ಇರುತ್ತದೆ. ೭೯. ಮೈದೊಗಲಿನ ಮಡಿಕೆಗಳೆ ತೆರೆಗಳು, ನರೆಗೂದಲೆ ನೊರೆ, ಏಗಿ ಬರುವ ಉಸಿರೆ ಸಮುದ್ರಘೋಷ–ಹೀಗೆ ಮುಪ್ಪು ಸಾಗರವೆನಿಸುತ್ತದೆ; ಅದರೊಳಗಿರುವ ಯಮನು ಬಡಬಾಗ್ನಿ ; ಜೀವನವನ್ನೆ ಆತನು

ತನಗಂ ಗೌರವಕಂ ಸಂ ।
ಹನನಕ್ಕಂ ಸಾಧುವೃತ್ತಿಗಂ ವಿಗ್ರಹಕಂ ॥
ನೆನೆವೊಡನುಗ್ರಹಕಂ ಮೇ ।
ಳನಮೆತ್ತಣದೊಡಲೊಳೊಳ್ಪನಱಸುವರಜ್ಞರ್ ॥ ೮೦

ಪಂಚೇಂದ್ರಿಯ ವಶದಿಂದಂ ।
ಪಂಚಜನಂ ಜನ್ಮಜಳಧಿಯೊಳ್ ಜನನಮುಮಂ ॥
ಪಂಚತೆಯುಮನೆಯ್ದುತ್ತುಂ ।
ಪಂಚಮಗತಿಪಥಮನೆಂತುಮೆಯ್ದದೆ ಪೋಕುಂ ॥ ೮೧

ಪರಿಜನಫಳವತ್‌ಕ್ಷೇತ್ರೋ ।
ತ್ಕರಬಂಧುಸಮೂಹಭವನಮಹಿಳಾವಳಿಯೆಂ ॥
ಬುರುತರಪವರ್ಗಚಿಂತಾ ।
ಪರಿಗತನಪವರ್ಗಚಿಂತೆಯಂ ಮಾಡುಗುಮೇ ॥ ೮೨

ಆವುದಱೊಳತಿಪ್ರಿಯಮಂ ।
ಜೀವಂ ಮಾಡಿದಪುದೊಳ್ಳಿತೆಂದಱಿಯದೆ ಮ ॥
ತ್ತಾವಸ್ತುವೆ ತನ್ನಯ ದುಃ ।
ಖಾವನಿಜದ ಬೀಜಮಕ್ಕುಮಿದು ನಿರ್ವ್ಯಾಜಂ ॥ ೮೩

॥ ತ್ರಿಪದಿ ॥

ಕರ್ಮರಾಜನವಿಡಿದು ಧಾರ್ಮಿಕಂಗೊಳಗಹರು ।
ಧರ್ಮರಾಜನನಗಲ್ದು ಧರೆಯಲ್ಲಿ ಯುಕ್ತಮದ ।
ಧರ್ಮಕ್ಕೆ ಕುದಿವರಿದು ಚಿತ್ರಂ ॥ ೮೪

ಹೀರಿಕೊಳ್ಳುತ್ತಾನೆ. ೮೦. ದೇಹಕ್ಕೂ ಗೌರವಕ್ಕೂ ಎತ್ತಣ ಸಂಬಂಧ ? ಹಿಂಸೆಗೂ ಸಾಧುವೃತ್ತಿಗೂ ಎತ್ತಣ ಮೇಳ? ವಿಗ್ರಹಕ್ಕೂ ಅನುಗ್ರಹಕ್ಕೂ ಯಾವ ಹೊಂದಾಣಿಕೆ? ದೇಹದಲ್ಲಿ ಹಿತವನ್ನು ಅಪೇಕ್ಷಿಸುವವರು ತಿಳಿಗೇಡಿಗಳು. ೮೧. ಐದು ಇಂದ್ರಿಯಗಳಿಗೆ ವಶನಾದ ಮನುಷ್ಯನು ಸಂಸಾರ ಸಮುದ್ರದಲ್ಲಿ ಜನ್ಮವನ್ನೂ ಮರಣವನ್ನೂ ಮರಳಿ ಮರಳಿ ಹೊಂದುತ್ತಲೆ ಇರುವನು. ಅವನಿಗೆ ಐದನೆಯ ಗತಿಯಾದ ಮೋಕ್ಷವೆಂದಿಗೂ ದೊರಕದು. ೮೨. ಪರಿಜನ, ಫಲವತ್ತಾದ ಭೂಮಿ, ಬಂಧು ಸಮೂಹ, ಭವನ ಮತ್ತು ಮಹಿಳೆಯರು ಎಂಬ ಪ್ರಬಲವಾದ "ಪವರ್ಗ" (ಪ,ಫ,ಬ,ಭ,ಮ ಎಂಬ ಅಕ್ಷರಗಳಿಂದ ಆರಂಭವಾಗುವ ಪದಗಳ-ಅವು ನಿರ್ದೇಶಿಸುವ ವಿಷಯಗಳ) ಚಿಂತೆಯಲ್ಲಿಯೆ ಮುಳುಗಿದವನು "ಅಪವರ್ಗ" (ಮೋಕ್ಷ)ದ ಚಿಂತೆ ಮಾಡುವನೆ? ೮೩. ಯಾವುದು ಒಳ್ಳೆಯದೆಂದು ಮನಸ್ಸು ಅತಿಯಾಗಿ ಪ್ರೇಮಿಸುವುದೊ ಆ ವಸ್ತುವೆ, ಅದಕ್ಕೆ ದುಃಖ ವೃಕ್ಷದ ಬೀಜವಾಗುವುದು. ಇದು ನಿಶ್ಚಿತ. ೮೪. ಧರ್ಮರಾಜನನ್ನು ತೊರೆದು

ನರರ್ಗೆ ಭಾವಿಸೆ ಪೋತಪರಿಕರಮೆನಿತು ತಾಂ ।
ಪಿರಿದಾದುದನಿತೆ ಮುಳುಗುಗುಂ ಜನ್ಮಸಾ ।
ಗರದೊಳಗಿಂತಿದು ಚಿತ್ರಂ ॥ ೮೫

ಓವೋವೊ ಜನ್ಮಜಾಳಂ ।
ಭಾವಿಪೊಡೇನರಿದೊ ಸಿಲ್ಕಿ ಸಿಡಿಮಿಡಿಗೊಳ್ವರ್ ॥
ಧೀವರರುಮೆಂದೊಡೀ ಜಡ ।
ಜೀವಂಗಳ್ ತೊಡರ್ದು ಮಿಡುಮಿಡುತಿರ್ಪುದು ಪಿರಿದೇ ॥ ೮೬

ನೆರಪಿದ ಪುಣ್ಯದ ಪಾಪದ ।
ಪರಿಪಾಕಮೆ ತಮಗೆ ತವದ ಪಾಥೇಯಮದಾ ॥
ಗಿರೆ ತಿರಿವುವು ಜೀವಂ ಸಂ ।
ಸರಣಾಟವಿಯೊಳಗೆ ತಪ್ಪಿ ನಿರ್ವೃತಿಪಥಮಂ ॥ ೮೭

ವ್ಯಾಧಿವ್ಯಾಧಭಯಂಕರಂ ಯಮದವಜ್ವಾಳಪ್ರತಾಪಾದ್ಭುತಂ ।
ಕ್ರೋಧಾಶೀವಿಷಭೀಷಣಂ ಸ್ಮರಮೃಗಾರಿಕ್ರೂರಮನ್ಯೂನದು ॥
ಬೋಧಾಗಾಧಪುರಾಣಕೂಪವಿಷಮಂ ತಾನೆಂದೊಡೇನುಂಟೆ ನಿ ।
ರ್ಬಾಧಾವಸ್ಥಿತಿ ದೇಹಿಗಳ್ಗೆ ದಿಟದಿಂ ಸಂಸಾರಕಾಂತಾರದೊಳ್ ॥ ೮೮

ಕರ್ಮರಾಜನನ್ನಾಶ್ರಯಿಸಿ, ಜನರು ಅಧರ್ಮಕ್ಕೆ ಕುದಿಯುವರು. ಇದು ಸೋಜಿಗ. ೮೫. ಮನುಷ್ಯರಿಗೆ ಹರುಗೋಲು ಎಷ್ಟೆಷ್ಟು ದೊಡ್ಡದಾಗುವುದೊ ಅಷ್ಟಷ್ಟು ಅವರು ಸಂಸಾರಸಾಗರದಲ್ಲಿ ಮುಳುಗುವರು, ಇದು ವಿಚಿತ್ರ. ೮೬. ಅಯ್ಯೋ! ಸಂಸಾರಜಾಲವೆಂತಹ ಬಲಿಷ್ಠವಾದುದು! "ಧೀವರರು" (೧. ಜಾಲಗಾರರು. ೨. ಮಹಾ ಬುದ್ಧಿವಂತರು) ಕೂಡ ಅದರೊಳಗೆ ಸಿಕ್ಕಿ ಚಡಪಡಿಸುವರೂ ಎಂದ ಮೇಲೆ ಅಜ್ಞಾನಿ ಜೀವಗಳು ತೊಡರಿಕೊಂಡು ಮಿಡುಕುತ್ತಿರುವುದೇನು ಸೋಜಿಗವೆ? ೮೭. ಗಳಿಸಿಕೊಂಡ ಪುಣ್ಯ ಪಾಪಗಳ ಪರಿಪಾಕವೆ ತಮಗೆ ಹಾದಿಯ ಬುತ್ತಿಯಾಗಿ ಜೀವಗಳು ಸಂಸಾರಣ್ಯದಲ್ಲಿ, ಬಿಡುಗಡೆಯ ಹಾದಿಕಾಣದೆ ಸುತ್ತುತ್ತಲೆ ಇರುವುವು. ೮೮. ದೇಹಿಗಳಿಗೆ ಸಂಸಾರವೆಂಬುದೊಂದು ಉಗ್ರವಾದ ಅರಣ್ಯ; ಅದು ವ್ಯಾಧಿಗಳೆಂಬ ಬೇಟೆಗಾರರಿಂದ ಭಯಾನಕ ಯಮನೆಂಬ ದಾವಾಗ್ನಿಯ ಪ್ರಚಂಡತೆಯಿಂದ ಅದ್ಭುತ; ಕ್ರೋಧವೆಂಬ ವಿಷಸರ್ಪದಿಂದ ಭೀಕರ; ಮನ್ಮಥನೆಂಬ ಸಿಂಹದಿಂದ ಕ್ರೂರ; ಅಳವರಿಯಲಾಗದ ಅಜ್ಞಾನ ವಿಷದ ಹಾಳುಭಾವಿಯಿಂದ ವಿಷಮ. ಹೀಗಿರುವಾಗ ಅದರಲ್ಲಿ ನೆಮ್ಮದಿಯುಂಟೆ?

ಕಟಿದ ಭವನಿಗಳದೊಳ್ ತೊಡ ।
ರ್ದಟಿಮಾನಸನಿರ್ಕುಮಧಿಕನಿರ್ಕುಮೆ ಪಿರಿದುಂ ॥
ಪುಟು ನೆಯ್ದ ನೆಯ್ಗೆಯೊಳ್ ಬಲ ।
ವಟಿದು ನೊಟಿಂ ಸಿಲ್ಕುಗುಂ ಗಜಂ ಸಿಲ್ಕುಗುಮೇ ॥ ೮೯

ಪೊಂದುವ ಪುಟ್ಟುವಾರ್ತ ಪರಿಣಾಮದೆ ವರ್ತಿಸುತಿರ್ಪ ದಂದುಗಂ ।
ಮಾಂದುದಣಂ ಚತುರ್ಗತಿಗಳೊಳ್ ಸುಟಿಗಾಳಿಯ ತೂಲದಂತೆ ಜ ॥
ಕ್ಕಂದೊಳದಂತೆ ಜಾಟಣದ ಗುಂಡಿಗೆಯಂತೆ ಕುಳಾಳಚಕ್ರದಂ ।
ತಿಂದುವರಂ ತೊಟಲ್ತರುತುಮಿರ್ದುದೆ ಸಾಲದೆ ಕರ್ಮಯೋಗದಿಂ॥ ೯೦

ಎಂದು ನಿಶ್ರೇಯಸಶ್ರೀಸಮಾಶ್ಲೇಷಾಭಿಲಾಷನಾಗಿರ್ಪುದುಂ ಪ್ರಾಕ್ತನಜನ್ಮಪರಿಚಿತಾಗಮಸಾರ ಸರ್ವಸ್ವನಿರ್ವಿಕಲ್ಪರುಂ, ತೀರ್ಥಕರಪರಿನಿಷ್ಕ್ರಮಣಸಮಯಮಧುಸಮಯಪ್ರತಿಬೋಧನವಚನಚತುರ ಕಳಕಂಠಕಲ್ಪರುಂ, ಪ್ರಭೂತಶುಭಭಾವನಾನಲ್ಪಾಕಲ್ಪರುಂ, ನಿರಂತರನಿವಾಸೀಕೃತಬ್ರಹ್ಮಕಲ್ಪರುಮಪ್ಪ ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾಭ್ಯಾಬೋಧಾರಿಷ್ಟರೆಂಬ ಲೋಕಾಂತಿಕದೇವರೆಣ್ಬರುಂ ಬಂದು

ಸುರುಚಿರಮಣಿಮಯಜಿನಬಿಂ ।
ಬರಾಜಿತೋತ್ತುಂಗಮಕುಟನಿಕಟರ್ ನಲವಿಂ ॥
ಪರಮನ ಚರಣಾಂಬುಜಮಂ ।
ದರದಳಿತನಮೇರುಕುಸುಮದಿಂ ಪೂಜಿಸಿದರ್ ॥ ೯೧

೮೯. ಸಂಸಾರದ ಬಂಧನದಲ್ಲಿ ತೊಡಕಿಕೊಳ್ಳುವವರು ಹೀನ ಮನುಷ್ಯನಲ್ಲದೆ ವಿವೇಕಿಯಾದವನೆ? ಹುಳು ನೇದ ಬಲೆಯಲ್ಲಿ ನೊಣ ಸಿಕ್ಕಿ ಒದ್ದಾಡುವುದಲ್ಲದೆ ಆನೆಯೇನಾದರೂ ಸಿಕ್ಕಿಕೊಳ್ಳುವುದೆ ? ೯೦. ಮರಳಿ ಮರಳಿ ಸಾಯುವ ಹಾಗು ಹುಟ್ಟುವ ಪರಿಭ್ರಮಣೆಯಲ್ಲಿ ಸಾಕಷ್ಟು ದುಃಖವನ್ನು ಉಂಡಾಯಿತು. ಸುಳಿಗಾಳಿಗೆ ಸಿಕ್ಕಿದ ಅರಳೆಯಂತೆ, ಚಕ್ರದುಯ್ಯಾಲೆಯಂತೆ, ರಾಟೆಯ ಕುಂಭದಂತೆ, ಕುಂಬಾರನ ಚಕ್ರದಂತೆ, ಚತುರ್ಗತಿಗಳಲ್ಲಿ ಈವರೆಗೆ ಕರ್ಮವಶದಿಂದ ತೊಳಲಾಡಿದ್ದೆ ಸಾಲದೆ?" ವ॥ ಹೀಗೆಂದು ಆತನು ಮೋಕ್ಷಲಕ್ಷ್ಮಿಯ ಅಪ್ಪುಗೆಯನ್ನೆ ಬಯಸುತ್ತಾ ಇರುವಾಗ, ಪ್ರಾಕ್ತನ ಜನ್ಮದಿಂದ ಸರ್ವಾಗಮ ಸಾರವನ್ನು ತಿಳಿದು ನಿರ್ವಿಕಲ್ಪರಾದವರೂ, ತೀರ್ಥಕರನ ಪರಿನಿಷ್ಕ್ರಮಣಕಾಲದ ಶುಭ ಪ್ರಸಂಗದಲ್ಲಿ ಅವನನ್ನು ಜಾಗೃತ ಗೊಳಿಸುವ ವಚನಚಾತುರ್ಯವುಳ್ಳ ಮಧುರಕಂಠರೂ, ಅತ್ಯಂತ ಶುಭಭಾವನೆ ಗಳಿಂದ ಕೂಡಿದವರೂ, ಬ್ರಹ್ಮಕಲ್ಪದಲ್ಲಿ ನಿರಂತರವಾಗಿ ವಾಸಮಾಡುವವರೂ ಆದ ಸಾರಸ್ವತ, ಆದಿತ್ಯ, ವಹ್ನಿ, ಅರುಣ, ಗರ್ದತೋಯ, ತುಷಿತಾಭ್ಯಾ ಬೋಧ,ಅರಿಷ್ಟರೆಂಬ ಎಂಟು ಜನ ಲೋಕಾಂತಿಕ ದೇವರು ಬಂದು–೯೧. ಉಜ್ವಲ ವಾದ ರತ್ನಮಯ ಜಿನಬಿಂಬವನ್ನು ತಮ್ಮ ಉನ್ನತವಾದ ಕಿರೀಟದಲ್ಲಿಟ್ಟು ಕೊಂಡ ಆ ದೇವರು ಪರಮೇಶ್ವರನ ಪಾದಗಳನ್ನು ನಮೇರು ಪುಷ್ಪ

ಅನಂತರಂ

ಈ ಮತಿಯೀ ಸಂಸಾರ ।
ವ್ಯಾಮೋಹವಿರಕ್ತಿಯೀ ತಪಶ್ರೀರತಿ ಮ ॥
ತ್ತೀ ಮುಕ್ತಿಗಮನಶಕ್ತಿ ಮ ।
ಹಾಮಹಿಮ ಪೆಱಂಗಿವುಂಟೆ ನಿನ್ನೊಳೆ ಸಾಜಂ ॥ ೯೨

ಅಕ್ಷಯಸುಖಮನುಪಾರ್ಜಿಪು ।
ದೀ ಕ್ಷಿತಿಸುಖಮಂ ವಿಸರ್ಜಿಪುದು ನೀಮೆಂದೀ ॥
ಪಕ್ಷದೊಳೀಂ ತತ್ತನ್ನಾ ॥
ಮಾಕ್ಷರಮಱಿಪವೆ ಗುಣಾಗುಣಂಗಳನವಱಾ ॥ ೯೩

ಅದುಕಾರಣದಿಂ

ಅಷ್ಟಮತೀರ್ಥಕರತ್ವಮು ।
ನಷ್ಟಮಹಾಪ್ರಾತಿಹಾರ್ಯವಿಭವಮನೊಳಕೆ ॥
ಯ್ದಷ್ಟವಿಧಕರ್ಮಜಯದಿಂ ।
ದಷ್ಟಮಮಹಿಗೆಯ್ದಿ ತಳೆ ಗುಣಾಷ್ಟಕದೊಳ್ಪಂ ॥ ೯೪

ಮತ್ತಂ

ಇರದೆ ಸುಪಾರ್ಶ್ವತೀರ್ಥಕರರಿಂ ಬೞಿಕಿತ್ತಲಿನಿತ್ತು ಕಾಲಮಂ ।
ತರಿಸಿದ ಧರ್ಮತೀರ್ಥಪರಿವರ್ತನಮಂ ಪೊಸತಾಗಿ ಮಾಡಿ ವಾ ॥
ಕ್ಪರಿಕರದಿಂದೆ ಭವ್ಯಜನಮಂ ತಣಿವೆಯ್ದಿಸಿ ತೀರ್ಥಕೃತ್ತ್ವಮಂ ।
ಪರಮಮಹತ್ವಮಂ ನೆಱಪಲೀ ಪದನಲ್ತೆ ಪದಂ ಗುಣಾಸ್ಪದಂ ॥ ೯೫

ಗಳಿಂದ ಪೂಜಿಸಿದರು. ಬಳಿಕ–೯೨. ಈ ಮತಿ, ಈ ಸಂಸಾರವ್ಯಾಮೋಹದ ವಿರತಿ, ಈ ತಪೋಧನದ ಆಸಕ್ತಿ, ಮತ್ತು ಈ ಮೋಕ್ಷಪ್ರಾಪ್ತಿಯ ಸಾಮರ್ಥ್ಯ ಮಹಾಮಹಿಮನಾದ ನಿನಗೆ ಸಹಜವಾದಂತೆ ಬೇರೊಬ್ಬನಿಗುಂಟೆ ? ೯೩. "ಅಕ್ಷಯ" (ಎಂದೆಂದೆಂದಿಗೂ ಅಳಿಯದ ಮೋಕ್ಷ) ಸುಖವನ್ನು ಗಳಿಸು, ಈ "ಕ್ಷಿತಿ" (ನಾಶವಾಗುವ ಈ ಭೂಮಿಯ) ಸುಖವನ್ನು ತ್ಯಜಿಸು: ಆ ಎರಡೂ ಪದಗಳ ಅಕ್ಷರಗಳೇ ಅವುಗಳ ಗುಣಾವಗುಣಗಳನ್ನು ತಿಳಿಸುವುದಿಲ್ಲವೆ ? ಆದುದರಿಂದ– ೯೪. ಅಷ್ಟಮ ತೀರ್ಥಕರತ್ವವನ್ನೂ (ಅಶೋಕ, ಪುಷ್ಪವೃಷ್ಟಿ, ದಿವ್ಯಧ್ವನಿ, ೬೪. ಚಾಮರ, ರತ್ನಖಚಿತ ಸಿಂಹಾಸನ, ಪ್ರಭಾವಲಯ, ದೇವದುಂದುಭಿ, ಛತ್ರತ್ರಯ ಎಂಬ) ಅಷ್ಟ ಮಹಾಪ್ರಾತಿಹಾರ್ಯ ವೈಭವವನ್ನೂ ತಾಳಿ, ಅಷ್ಟಕರ್ಮಗಳನ್ನು ಜಯಿಸಿ, ಅಷ್ಟಸಿದ್ಧಿಗಳನ್ನು ಪಡೆದು(ಸಮ್ಯಕ್ತ್ವ, ಜ್ಞಾನ, ದರ್ಶನ, ವೀರ್ಯ, ಸೂಕ್ಷ್ಮ, ಅವಗಾಹನ, ಅಗುರುಲಘು, ಅವ್ಯಾಬಾಧ ಎಂಬ) ಅಷ್ಟ ಲಕ್ಷಣಗಳನ್ನು ಧರಿಸು ಮತ್ತು–೯೫. ಸುಪಾರ್ಶ್ವ ತೀರ್ಥಕರರ ತರುವಾಯ ಇಷ್ಟೊಂದು ಕಾಲದವರೆಗೆ ನಡೆಯದಿರುವ ಧರ್ಮತೀರ್ಥ ಪರಿವರ್ತನವನ್ನು ಪುನಃ ಆರಂಭಿಸಿ ನಿನ್ನ

ದೇವ ಭವದ್ವಿಧರಿಂ ಮು ।
ನ್ನಾವಗಮಱಿದುದನೆ ನಿಮಗೆ ಮಾತನಿದಂ ಪ್ರ ।
ಸ್ತಾವಿಸಿದೆವೀಗಳಂಬುಧಿ ।
ಗೀವಂತೆ ತದಂಬುವಿಂದಮರ್ಘ್ಯಾಂಜಳಿಯಂ ॥ ೯೬

ಮತ್ತಂ

ಸಹಜಸಮಗ್ರಬೋಧನಿಧಿಯಂ ಚರಮಾಂಗನನಾತ್ತನಿರ್ವೃತಿ ।
ಸ್ಪೃಹನನದೂರಸಂಸರಣವಾರಿಧಿತೀರನನೇಂ ಪ್ರಬೋಧಿಪಾ ॥
ಗ್ರಹಮೆಮಗುಂಟೆ ನಿನ್ನ ಪರಿನಿಷ್ಕ್ರಮಣೋದ್ಯಮಮಂ ಜಗತ್ತ್ರಯೀ ।
ಮಹಿತಮನಾಮಭೀಕ್ಷಿಸಿ ಕೃತಾರ್ಥರೆನಿಪ್ಪುದಿದೊಂದೆ ಸಾಲದೇ ॥ ೯೭

ಎಂದವರ್ ಪ್ರತಿಬೋಧಿಸಿ ನಿಜನಿವಾಸಕ್ಕೆ ಪೋಗಲೊಡಂ,

ಕರೆದಾಗಳ್ ಜನನೀಜನ
ಕರನಾಪ್ತರನಱಿಪಿ ನಿಜಮನೋರಥಮಂ ತ ॥
ತ್ಪರಿನಿಷ್ಕ್ರಮಣಮನಿತ್ತಂ ।
ವರಚಂದ್ರಸುತಂಗೆ ರಾಜ್ಯಮಂ ಸಕಳೇಜ್ಯಂ ॥ ೯೮

ಅನ್ನೆಗಮವಧಿಬೋಧದಿಂ ಪರಿನಿಷ್ಕ್ರಮಣಕಲ್ಯಾಣಮನಱಿದು

ದಿವಿಜೇಂದ್ರಂ ಪರಿವೇಷ್ಟಿತತ್ರಿದಶಬೃಂದಂ ಕಲ್ಪವಲ್ಲೀವನೋ ।
ದ್ಭವಸತ್ಪುಷ್ಪಫಳಾದಿಮಾಂಗಳಿಕವಸ್ತುನ್ಯಸ್ತಹಸ್ತಾಪ್ಸರೋ ॥

ವಾಣಿಯಿಂದ ಭಕ್ತಜನರನ್ನು ತೃಪ್ತಿಪಡಿಸಿ ಪರಮ ಮಹತ್ತ್ವವುಳ್ಳ ತೀರ್ಥಕರತ್ವವನ್ನು ಸಾರ್ಥಕಗೊಳಿಸಲು ಸರಿಯಾದ ಸಮಯ ಈಗ ಪ್ರಾಪ್ತವಾಗಿದೆ. ೯೬. ದೇವನೆ, ನಿಮ್ಮಂಥವರು ಮೊದಲೆ ಅರಿತುಕೊಂಡಿರುವ ಮಾತನ್ನು ಮತ್ತೆ ನಿಮಗೆ ನಾವು ಪ್ರಸ್ತಾವಿಸಿದೆವು: ಸಮುದ್ರದ ನೀರನ್ನು ಅರ್ಘ್ಯವಾಗಿ ಮರಳಿ ಅದಕ್ಕೇ ನೀಡುವುದಿಲ್ಲವೆ? ಮತ್ತು–೯೭. ಸ್ವಭಾವತಃ ಸಂಪೂರ್ಣ ಜ್ಞಾನನಿಧಿಯೂ ಚರಮದೇಹಧಾರಿಯೂ, ಮುಮುಕ್ಷುವೂ ಸಂಸಾರ ಸಮುದ್ರವನ್ನು ದಾಟುವವನೂ ಎನಿಸಿದ ನಿನಗೆ ಎಚ್ಚರಿಸಿ ತಿಳಿ ಹೇಳುವ ಆಗ್ರಹ ನಮಗುಂಟೆ? ಲೋಕತ್ರಯಪೂಜ್ಯವಾದ ನಿನ್ನ ಪರಿನಿಷ್ಕ್ರಮಣವನ್ನು ನೋಡಿ ಕೃತಾರ್ಥರಾಗುವ ಈ ಭಾಗ್ಯವೊಂದೇ ನಮಗೆ ಸಾಲದೆ?" ವ॥ ಹೀಗೆಂದು ಅವರು ಪ್ರತಿಬೋಧನೆ ಮಾಡಿ ತಮ್ಮ ನಿವಾಸಕ್ಕೆ ಮರಳಿದರು–೯೮. ಕೂಡಲೆ ಸರ್ವಪೂಜ್ಯನಾದ ಚಂದ್ರಪ್ರಭನು ತಾಯಿತಂದೆಗಳನ್ನೂ ಆಪ್ತರನ್ನು ಕರೆಸಿ ತನ್ನ ಪರಿನಿಷ್ಕ್ರಮಣಾಪೇಕ್ಷೆಯನ್ನು ತಿಳಿಸಿ, ವರಚಂದ್ರನೆಂಬ ತನ್ನ ಮಗನಿಗೆ ರಾಜ್ಯವನ್ನು ಒಪ್ಪಿಸಿದನು. ವ॥ ಅಷ್ಟರಲ್ಲಿ ಅವಧಿಜ್ಞಾನದಿಂದ ಪರಿನಿಷ್ಕ್ರಮಣ ಕಲ್ಯಾಣವನ್ನು ಅರಿತು–೯೯. ದೇವೇಂದ್ರನು ದೇವತೆಗಳ ಸಮೂಹದೊಡನೆ, ಕಲ್ಪವೃಕ್ಷಗಳಲ್ಲಿ ಹುಟ್ಟಿದ ಉತ್ತಮವಾದ ಫಲಪುಷ್ಪ ಮೊದಲಾದ ಮಂಗಳವಸ್ತು ಪರಿಕರಗಳನ್ನು ಎತ್ತಿಕೊಂಡು ಬರುವ ಅಪ್ಸರೆ

ನಿವಹಂ ದುಂದುಭಿಕಂಬುಕಾಹಳಮಿಳತ್ಕೋಳಾಹಳವ್ಯಾಪ್ತದಿ ।
ಗ್ವಿವರಂ ಬೇಗದೆ ಬಂದು ಚಂದ್ರಪುರಮಂ ಪೊಕ್ಕಂ ಮಹಾನಂದದಿಂ ॥ ೯೯

ಅನಂತರಂ ಪರಿತ್ಯಕ್ತರಾಜ್ಯಂಗೆ ತಪೋರಾಜ್ಯಾಭಿಷೇಕಮನನೇಕತೀರ್ಥಜಲಂಗಳಿಂ ತೀರ್ಥನಾಥಂಗೆ ಮಾಡಿ ದೇವಾಂಗವಸ್ತ್ರಹರಿಚಂದನಾನುಲೇಪನಪಾರಿಜಾತಕುಸುಮದಾಮೇಂದ್ರಚ್ಛಂದಾದಿ ಭೂಷಣಂಗಳಿನಲಂಕರಿಸಿ ಸುರಶಿಲ್ಪಿಗಳಿಂ ಮುನ್ನಮೆ ವಿಚಿತ್ರಮಾಗಿ ನಿರ್ಮಿಸಿರ್ದುದಂ ತಂದವಟಯ್ಸುವುದುಂ ಪರಮಪದವೀಪ್ರಾಸಾದಪ್ರಥಮಸೋಪಾನಮನೇಱುವಂತೆ

ಸಿವಿಗೆಯನೇಱಿ ರತ್ನಮಯಮಂ ವಿಮಳಾಹ್ವಯಮಂ ಮಹೀಶರು ।
ತ್ಸವಯುತರೊಯ್ದರೇೞಡಿಯನತ್ತಲನಿತ್ತಡಿಯಂ ವಿಯಚ್ಚರರ್ ॥
ಸವಿಭವರೊಯ್ದರತ್ತಲಖಿಳಾಮರರುಂ ಮುದದೊಯ್ದರತ್ತಮ ।
ತ್ತವಯವದೊಯ್ದರಂದಭವನಂ ತಳೆದಿಂದ್ರರದೊಂದು ಲೀಲೆಯಿಂ ॥ ೧೦೦

ಆ ಸಮಯದೊಳ್

ನೆಟ್ಟನೆ ಪೇೞ್ದು ತನ್ನಯ ಮನೋಗತಮಂ ಜನಕಂಗೆ ಪಟ್ಟಮಂ ।
ಕಟ್ಟಿ ಸುತಂಗೆ ರಾಜ್ಯಭರಮಂ ವಿನಿಯೋಜಿಸಿ ಕೊಟ್ಟು ತಾಂ ತಪಂ ॥
ಬಟ್ಟಪೆನೆಂದು ಪೋದನೆನಗಿಂ ಪೆಱರಾರ್ ಸರಣೆಂದು ನೊಂದು ಬಾ ।
ಯ್ಬಿಟ್ಟು ಪಲುಂಬಿ ಪಂಬಲಿಸಿದಳ್ ಕಮಳಪ್ರಭೆಯಾತ್ಮನಾಥನಂ ॥ ೧೦೧

ಯುರ ಸಮುದಾಯ ಸಹಿತನಾಗಿ, ದುಂದುಭಿ, ಕಾಳೆ, ಶಂಖಗಳ ಕೋಲಾಹಲ ಧ್ವನಿಯಿಂದ ದಿಕ್ಕುಗಳನ್ನೆಲ್ಲ ತುಂಬುತ್ತ ವೇಗವಾಗಿ ಬಂದು ಮಹಾನಂದದಿಂದ ಚಂದ್ರಪುರವನ್ನು ಹೊಕ್ಕನು. ವ॥ ಆ ನಂತರ ಈ ಲೋಕದ ರಾಜ್ಯವನ್ನು ತೊರೆದ ತೀರ್ಥನಾಥನಿಗೆ ತಪೋರಾಜ್ಯದ ಅಭಿಷೇಕವನ್ನು ಅನೇಕ ತೀರ್ಥಜಲಗಳಿಂದ ಮಾಡಿ, ದೇವಾಂಗ ವಸ್ತ್ರ, ಹರಿಚಂದನಾನುಲೇಪನ, ಪಾರಿಜಾತ ಪುಷ್ಪಮಾಲೆ, ಇಂದ್ರಚ್ಛಂದವೆ ಮೊದಲಾದ ಆಭರಣಗಳಿಂದ ಅಲಂಕರಿಸಿ, ದೇವಶಿಲ್ಪಿಗಳಿಂದ ಮೊದಲೆ ವಿಚಿತ್ರವಾಗಿ ನಿರ್ಮಿತವಾದ (ಸಿವಿಗೆಯನ್ನು) ತಂದು ಅಣಿಗೊಳಿಸಲಾಗಿ, ಮುಕ್ತಿಪ್ರಾಸಾದದ ಮೊದಲ ಮೆಟ್ಟಲನ್ನೇ ಏರುವಂತೆ–೧೦೦. 'ವಿಮಳ' ವೆಂಬ ರತ್ನಮಯವಾದ ಸಿವಿಗೆಯನ್ನು ದೇವನು ಏರಿದನು; ಏಳಡಿಯವರೆಗೆ ಉತ್ಸವದಿಂದ ಅದನ್ನು ಹೊತ್ತುಕೊಂಡು ಭೂಪತಿಗಳು ನಡೆದರು; ಖೇಚರರು ಅಲ್ಲಿಂದ ಮುಂದೆ ಏಳಡಿಯವರಿಗೆ ವೈಭವದಿಂದ ಅದನ್ನು ಒಯ್ದರು; ಅಲ್ಲಿಂದ ಮುಂದೆ ಇಂದ್ರರು ಅದನ್ನು ಸಂತೋಷದಿಂದ ಹೊತ್ತುಕೊಂಡು ನಡೆದರು. ಆ ಸಮಯದಲ್ಲಿ– ೧೦೧. "ತನ್ನ ಮನದ ಬಯಕೆಯನ್ನು ತಂದೆಗೆ ಹೇಳಿದನು, ಪಟ್ಟವನ್ನು ಕಟ್ಟಿ ಮಗ ನಿಗೆ ರಾಜ್ಯವನ್ನು ಒಪ್ಪಿಸಿದನು; ತಾನು ತಪಮಾಡುವೆನೆಂದು ಹೊರಟುಹೋದನು, ಇನ್ನು ನನಗೆ ಯಾರು ಗತಿ?" ಎಂದು ಕಮಲಪ್ರಭೆಯು ನೊಂದು ಬಾಯಿಬಿಟ್ಟು ಹಲುಬಿ

ಸುಮನರ್ ಗರ್ಭಾವತಾರಂ ಮೊದಲೆನೆ ಬಿಡದಾರಾಧಿಸುತ್ತಿರ್ದಪರ್ ನ ।
ಮ್ಮ ಮಗಂ ಲೋಕತ್ರಯಾಧೀಶ್ವರಪದವಿಗೆ ಸಂದಪ್ಪನೆಂದಲ್ತೆ ನಮ್ಮಿಂ ॥
ದಮಗಲ್ದಿರ್ದಪ್ಪನೆಂಬುಮ್ಮಳಮದು ನಿಮಗಿನ್ನೇಕೆ ತಚ್ಛೇಷಕಲ್ಯಾ ।
ಣಮಹೋತ್ಸಾಹಂಗಳಂ ನೋಡಿಯೆ ಪದೆವೆರ್ದೆಯಂ ಕೂಡೆ ಸಂತೈಸುತಿರ್ಪರ್॥ ೧೦೨

ಎಂದು ಮಹಾಸೇನಮಹೀಭುಜನುಂ ಲಕ್ಷ್ಮಣಾಮಹಾದೇವಿಯುಂ ತಮ್ಮೊಳ್ ನುಡಿಯುತ್ತುಮಿರ್ದರ್, ಇತ್ತಲ್

ಸುರಶೈಳಕ್ಕೊಯ್ದರಂದರ್ಭಕನನೆ ಭರದಿಂ ದೇವನಂ ದೇವರಾಜಂ ।
ಪಿರಿದುಂ ಕೆಯ್ಯಂಟಲಿನ್ನಿತ್ತಪನೆ ನಮಗೆ ನಾವೆಲ್ಲಮುಂ ನಿಚ್ಚಲುಂ ತ ॥
ಚ್ಚರಣಾಂಭೋಜಾತಸೇವಾಸುಖಮನನುಭವಿಪ್ಪೊಂದು ಸೈಪಿಂಗೆ ಪೋಪಾಂ।
ತರವಿಂದಿಂದಾದುದಕ್ಕುಂ ಧರೆಗಮನಿತೆಯಕ್ಕುಂ ಸ್ವರಾಜನ್ಯತಿತ್ವಂ ॥ ೧೦೩

ಅಂತು ಪೌರಜನಂಗಳೋರೊರ್ವರೊಳುಸಿರ್ದರ್. ಅನ್ನೆಗಂ ಶುಭಂಕರೋದ್ಯಾನಮನೆಯ್ದಿ ಸಿವಿಗೆಯಿಂದಮಿಟಿಪಿ ತನ್ಮಧ್ಯದೊಳ್ ವಿಶಾಳಶಶಿಕಾಂತಶಿಳಾತಳಮನೊಳಗುಮಾಡಿ ಮುನ್ನಮೆ ಸಮೆದಿರ್ದ

ದ್ವಾರಚತುಷ್ಕಾನ್ವಿತಮಂ ।
ಸಾರಮಣಿದ್ವಾರಬಂಧಬಂಧುರಮಂ ವಿ ॥
ಸ್ತಾರಿತನಮೇರುಪಲ್ಲವ ।
ತೋರಣಮಂ ಚಳಿತಧವಳಕೇತನಪಟಮಂ ॥ ೧೦೪

ಪತಿಗಾಗಿ ಹಂಬಲಿಸಿದಳು. ೧೦೨. "ಗರ್ಭಾವತಾರವೆ ಮೊದಲಾಗಿ ದೇವತೆಗಳು ನಿರಂತರವಾಗಿ ಆರಾಧಿಸುತ್ತ ಬಂದಿರುವುದು, ನಮ್ಮ ಮಗನು ಲೋಕತ್ರಯಾಧೀಶ್ವರ ಪದವಿಗೆ ಹೋಗುವವನೆಂದೇ ಅಲ್ಲವೆ ? ಆತನು ನಮ್ಮನ್ನು ಅಗಲಿ ಹೋದನೆಂಬ ದುಃಖ ನಮಗಿನ್ನೇಕೆ ? ಇನ್ನುಳಿದ ಆತನ ಕಲ್ಯಾಣ ಮಹೋತ್ಸವಗಳನ್ನು ನೋಡಿಯೆ ಸಂತೋಷಪಡೋಣ" ವ॥ ಹೀಗೆಂದು ಮಹಾಸೇನರಾಜನೂ ಲಕ್ಷ್ಮಣಾದೇವಿಯೂ ತಂತಮ್ಮೊಳಗೆ ನುಡಿದುಕೊಳ್ಳುತ್ತಿದ್ದರು. ಇತ್ತ-೧೦೩. "ಹುಟ್ಟಿದೊಡನೆ ನಮ್ಮ ದೇವನನ್ನು ದೇವತೆಗಳು ಮೇರುಗಿರಿಗೆ ಎತ್ತಿಕೊಂಡು ಹೋದರು, ತನ್ನ ಕೈಯಲ್ಲಿರುವ ಆತನನ್ನು ಇನ್ನು ದೇವೇಂದ್ರನು ನಮಗೆ ಬಿಟ್ಟು ಕೊಡುವನೆ ? ಆತನ ಪಾದಕಮಲಗಳನ್ನು ನಿತ್ಯವೂ ಪೂಜಿಸಿ ಸುಖಪಡುವ ಭಾಗ್ಯ ನಮಗೆ ಇಂದು ಮುಗಿದಂತಾಯಿತು. ಭೂಮಿಗೂ ಕೂಡ ಸ್ವರಾಜನ್ಯತಿತ್ವದ ಭಾಗ್ಯ ಇಷ್ಟೇ ಎಂದಾಯಿತು." ವ॥ ಹೀಗೆ ಪುರಜನರು ತಂತಮ್ಮಲ್ಲಿ ಆಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಶುಭಂಕರವೆಂಬ ಉದ್ಯಾನವನ್ನು ಸೇರಿ ಸಿವಿಗೆಯಿಂದ ಇಳಿಸಿ, ಆ ಉದ್ಯಾನದ ನಡುವೆ ವಿಶಾಲವಾದ ಚಂದ್ರಕಾಂತಶಿಲೆಯನ್ನು ಒಳಗೊಳ್ಳುವಂತೆ ಮುನ್ನವೆ ನಿರ್ಮಿಸಿದ್ದ. ೧೦೪. ನಾಲ್ಕು ಬಾಗಿಲುಗಳುಳ್ಳ, ರತ್ನಮಯವಾದ ದ್ವಾರ ಬಂಧಗಳಿಂದ ಸುಂದರವಾದ, ನಮೇರು ವೃಕ್ಷದ ಚಿಗುರೆಲೆಗಳಿಂದ ಕಟ್ಟಿದ ತೋರಣ

ಕಾಂತಚ್ಛದವೃತಮಮಂ ತ ।
ತ್ಪ್ರಾಂತರಚಿತಮಣಿವಿಳಾಸಮಮಂ ರಸಚಿತ್ರಾ ॥
ಕ್ರಾಂತಸ್ತಂಭೋತ್ಕರಮಮಂ ।
ಸಂತಾನಕಸತ್ಫಳಾಳಿಭೃತನವಪದಮಮಂ ॥ ೧೦೫

ನವರತ್ನವರ್ಣಪೂರಮ ।
ನವಿರಳಕರ್ಪೂರಚೂರ್ಣಸಂಪಾದಿತರಂ ॥
ಗವಲಿವಿರಾಜಿತಮಮಂ ನಯ ।
ನವಿನೋದಾಗರಮೆನಿಪ್ಪ ಪಟಮಂಡಪಮಮಂ ॥ ೧೦೬

ಸೌಧರ್ಮೇಂದ್ರದತ್ತಹಸ್ತಾವಳಂಬನೊಳಪೊಕ್ಕು

ಧೃತಮಕುಟಕುಂಡಳಾಂಗದ ।
ಶತಗುಚ್ಛಕಟಕನಿಕಾಯಮಮಂ ತಳೆದು ಸಿತ ॥
ದ್ಯುತಿಸೂರ್ಯಗ್ರಹನಕ್ಷ ।
ತ್ರತಾರೆಗಳ್ ಬಳಸಿದಮರಗಿರಿಯಂ ಪೋಲ್ತಂ ॥ ೧೦೭

ತತ್ಸಮಯದೊಳ್

ಸುರರ ಕಳಕಳಮನುಪಸಂ ।
ಹರಿಸುತ್ತುಂ ಮಂಗಳೋಪಕರಣಂಗಳನೋ ॥
ಸರಿಸುತ್ತುಂ ಪಡಿಯಱನುಂ ।
ಪರಿಚಾರಕನುಂ ದಲೆನಿಸಿದಂ ಸೌಧರ್ಮಂ ॥ ೧೦೮

ಹಾಗು ಬಿಳಿಯ ಧ್ವಜಗಳಿಂದ ಒಪ್ಪುವ, ೧೦೫. ಸುಂದರವಾದ ಮೇಲ್ಕಟ್ಟುಳ್ಳ, ಅದರ ಅಂಚುಗುಂಟ ಇಳಿಬಿಟ್ಟ ರತ್ನದೆಳೆಗಳ ವಿಲಾಸವುಳ್ಳ ರಸಚಿತ್ರಮಯವಾದ ಕಂಬಗಳುಳ್ಳ ಸಂತಾನಕವೆಂಬ ದೇವವೃಕ್ಷದ ಫಲಗಳಿಂದ ಸಮೃದ್ಧವಾದ, ೧೦೬. ನವರತ್ನಗಳಿಂದಲೂ ದಟ್ಟವಾಗಿ ಹರಡಿದ ಕಪ್ಪುರದ ಹುಡಿಯಿಂದಲೂ ರಚಿತವಾದ ರಂಗವಲ್ಲಿಯಿಂದ ಶೋಭಿಸುವ, ಕಣ್ಣಿಗೆ ಹಬ್ಬವೆನಿಸುವ ವಸ್ತ್ರ ಮಂಡಪವನ್ನು ವ॥ ಸೌಧರ್ಮೇಂದ್ರನ ಕೈಹಿಡಿದುಕೊಂಡು ಒಳಗೆ ಬಂದು– ೧೦೭. ಕಿರೀಟ, ಕುಂಡಲ, ಅಂಗದ, ಶತಗುಚ್ಛ, ಕಡಗ ಮೊದಲಾದ ಆಭರಣಗಳನ್ನು ಧರಿಸಿದ ದೇವನು–ಚಂದ್ರ ಸೂರ್ಯಗ್ರಹ ನಕ್ಷತ್ರ ತಾರೆಗಳು ಬಳಸಿಕೊಂಡ ಮೇರುಪರ್ವತದಂತೆ ಕಂಡನು. ಆ ಕಾಲದಲ್ಲಿ–೧೦೮. ದೇವತೆಗಳ ಕಲಕಲವನ್ನು ನಿಲ್ಲಿಸುತ್ತ, ಮಂಗಳ ಪರಿಕರವನ್ನು ಅಣಿಗೊಳಿಸುತ್ತ ಸೌಧರ್ಮೇಂದ್ರನು

ಅನಂತರಂ ಬಿತ್ತರಿಸಿದ ಮುತ್ತಿನ ಚೌಕದೊಳಗಣಾತಿಪ್ರಶಸ್ತಸಂಸ್ತರಣದೊಳ್ ಪರಿಹೃತಪರಿಧಾನನುಂ ಪರ್ಯಂಕಾಸನಾಸೀನನುಮುದೀಚೀದಿಶಾಭಿಮುಖನುಮಾಗಿ

ಶುಭಪರಿಣತೆಯಂ ತಳೆದುಟಿ ।
ದುಭಯಪರಿಗ್ರಹಮನಖಿಳಸತ್ವಂಗಳೊಳಂ ॥
ಪ್ರಭವಿಸೆ ಸಮಭಾವನೆ ತನ ।
ಗಭಿಮತದೀಕ್ಷಾಗ್ರಹಂ ತ್ರಿಸಾಕ್ಷಿಕನಾದಂ ॥ ೧೦೯

ಆಗಿ,

ಇರದೆ ನಮಸ್ಸಿದ್ಧೇಭ್ಯ ।
ಸ್ಸ್ವರಮಾಸ್ಯದಿನೊಗೆಯೆ ತನ್ನ ಕೇಶೋತ್ಕರಮಂ ॥
ಪರಮಂ ಪಂಚೇಂದ್ರಿಯಮೂ ।
ಲರಾಜಿಯೆನೆ ಪಂಚಮುಷ್ಟಿಯಿಂದದೆ ಕಿಟ್ತಂ ॥ ೧೧೦

ಸದಭಿಷ್ಟುತಂಗೆ ಸಮನಿಸಿ ।
ದುದು ವಿಶ್ರುತಪುಷ್ಯಮಾಸದೊಳ್ ನುತಸಿತಪ ॥
ಕ್ಷದೊಳೆಸೆವೇಕಾದಶಿಯೊಳ್ ।
ವಿದಿತಾನೂರಾಧೆಯೊಳ್ ತಪಶ್ಶ್ರೀಯೋಗಂ ॥ ೧೧೧

ಉದಯಿಸಿತು ಕೇವಲಜ್ಞಾ।
ನದ ಮುಂಬಿದು ನೋಟಿಕ್ಕೊಡೆಂಬಿನಂ ತಪಮಂ ಕೊ ।
ಳ್ವುದುಮೊಡನೆ ಮನಃಪರ್ಯಾಯ ।
ಮುದಾತ್ತಮನನೆನಿಪ ತನ್ಮುನೀಂದ್ರೋತ್ತಮನೊಳ್ ॥ ೧೧೨

ಆಗಳಮರಪತಿಮುಖಸಮುದ್ಭೂತಜಯಜಯಧ್ವಾನದೊಡನೆ

ಪ್ರತಿಹಾರಿಯೂ ತಾನೆ, ಪರಿಚಾರಕನೂ ತಾನೆ ಎಂದೆನಿಸಿದನು. ವ॥ ಆ ಬಳಿಕ ವಿಸ್ತಾರವಾದ ಮುತ್ತಿನ ಚೌಕದೊಳಗೆ ಅತ್ಯಂತ ಪ್ರಶಸ್ತವಾದ ಹಾಸಿನ ಮೇಲೆ ವಸ್ತ್ರಾಲಂಕಾರಗಳನ್ನೆಲ್ಲ ತೊರೆದು ಪರ್ಯಂಕಾಸನನಾಗಿ ಉತ್ತರಕ್ಕೆ ಮುಖಮಾಡಿ– ೧೦೯. ಶುಭ ಪರಿಣಾಮವನ್ನು ತಾಳಿ (ಬಾಹ್ಯ ಮತ್ತು ಅಭ್ಯಂತರವೆಂಬ) ಉಭಯಪರಿಗ್ರಹಗಳನ್ನು ತೊರೆದು, ಸರ್ವಜೀವಗಳಲ್ಲಿ ಸಮಭಾವನೆಯನ್ನು ಹೊಂದಿ, ತ್ರಿಸಾಕ್ಷಿಕನಾಗಿ ದೀಕ್ಷೆ ವಹಿಸಿಕೊಂಡನು. ಹಾಗೆ ವಹಿಸಿ– ೧೧೦. "ನಮಃಸಿದ್ಧೇಭ್ಯಃ" ಎಂದು ನುಡಿಯುತ್ತ, ಪಂಚೇಂದ್ರಿಯಗಳ ಬೇರುಗಳನ್ನೆ ಕೀಳುವಂತೆ ತನ್ನ ಕೇಶರಾಶಿಯನ್ನು ಪಂಚಮುಷ್ಟಿಯಿಂದ ಕಿತ್ತನು. ೧೧೧. ಪುಷ್ಯಮಾಸದ ಶುಕ್ಲಪಕ್ಷ ಏಕಾದಶಿಯ ದಿನ ಅನೂರಾಧಾ ನಕ್ಷತ್ರದಲ್ಲಿ ಸಂಸ್ತುತನಾದ ಆತನಿಗೆ ತಪೋಯೋಗ ಘಟಿಸಿತು. ೧೧೨. ತಪಸ್ಸಿಗೆ ತೊಡಗಿದೊಡನೆ, ಕೇವಲಜ್ಞಾನದ ಮುಂಗುರುತೆಂಬಂತೆ ಆ ಮುನೀಂದ್ರನಿಗೆ ಮನಃ ಪರ್ಯಾಯ ಜ್ಞಾನವುಂಟಾಯಿತು. ವ॥ ಆಗ ದೇವೇಂದ್ರನು ಜಯಜಯಕಾರ ಮಾಡಲಾಗಿ

ಸುರವಶ್ಯಕಂಠಿಕಾಗೀ ।
ತರವಂ ಗೀರ್ವಾಣವಾದಕಾತೋದ್ಯಭವ ॥
ಸ್ವರಮಮರನರ್ತಕೀನೂ ।
ಪುರನಿನದಂ ಪೊಣ್ಮಿದತ್ತು ದೆಸೆದೆಸೆಗಳೊಳಂ ॥ ೧೧೩

ಪರಮಂ ಪರಿಹರಿಸಿದಳಂ ।
ಕರಣಾಂಬರಕುಸುಮಮಾಳೆಗಳನಮರರ್ ಬಿ ॥
ತ್ತರದಿಂದೆ ತೊಟ್ಟುಮುಟ್ಟುಂ ।
ಕಿರೀಟದೊಳ್ ತಳೆದುಮೇಂ ಮನಂಪೆರ್ಚಿದರೋ ॥ ೧೧೪

ತತ್ಸಮಯದೊಳಮರಪತಿ ಜಗತ್ಪತಿಯ ಮಧುಕರನೀಳಕುಂತಳಪ್ರಪಂಚಮಂ ಪಂಚರತ್ನ ಪಟಳಕದೊಳೆ ತಳೆದೊಯ್ದು ಪಂಚಪಯೋರಾಶಿಯೊಳ್ ಪಂಚಮಹಾಶಬ್ದದೊಡನೆ ಪಸರಿಸಲೊಡಂ

ವರಜನನಾಭಿಷೇಕದೊಳೊಡರ್ಚಿತೆ ಮತ್ತಯಸಕ್ಕೆ ಮುಂ ಜಗ ।
ದ್ಗುರುವ ಶಿರೋಜಸಂಗತಿಯನೀ ಪರಿನಿಷ್ಕ್ರಮಣಪ್ರಮೋದದೊಳ್ ॥
ದೊರೆಕೊಳಿಸಿತ್ತೆ ಮುತ್ತುಟಿದುದರ್ಕೆ ಭವತ್ಕೃತದಿಂ ಪವಿತ್ರತಾ ।
ಪರಿಗತನಾದೆನೆಂದು ಹರಿಗೆಂಬವೊಲಾದುದು ಘೂರ್ಣಿತಾರ್ಣವಂ ॥ ೧೧೫

ಸಮನಂತರಂ ಮಗುಳ್ದು ಬಂದು,

ಬಗೆದುತ್ಸಾಹದೆ ದೇವತೂರ್ಯದ ಲಯಕ್ಕೆರ್ದಾಡಿಯುಂ ಪಾಡಿಯುಂ ।
ಪೊಗಟ್ಟುಂ ಮಾಣದೆ ಮತ್ತೆ ಮೂಮೆ ಬಲವಂದುಂ ದಿವ್ಯಸಂಸೇವ್ಯವ ॥

ಒಡನೆಯೆ–೧೧೩. ದೇವಗೀತಧ್ವನಿಯೂ, ದೇವವಾದ್ಯಗಳ ಧ್ವನಿಯೂ, ಅಮರ ನರ್ತಕಿಯರ ನೇವುರಗಳ ಧ್ವನಿಯೂ ದಿಕ್ಕುದಿಕ್ಕುಗಳಲ್ಲಿ ತುಂಬುವಂತೆ ಹೊಮ್ಮಿತು. ೧೧೪. ಪರಮೇಶ್ವರನು ತೊರೆದುಬಿಟ್ಟ ಆಭರಣ ವಸ್ತ್ರ ಪುಷ್ಪಮಾಲೆಗಳನ್ನು ದೇವತೆಗಳು ತೊಟ್ಟು, ಉಟ್ಟು, ಕಿರೀಟಗಳಲ್ಲಿ ಧರಿಸಿ ಎಷ್ಟೊಂದು ಮನಮೆಚ್ಚಿದರು! ವ॥ ಆ ಸಮಯದಲ್ಲಿ ದೇವೇಂದ್ರನು ಜಗತ್ಪತಿಯು ಕಿತ್ತೆಸೆದ ದುಂಬಿಯಂತೆ ಕಪ್ಪಾದ ಕೂದಲರಾಶಿಯನ್ನು ಪಂಚರತ್ನದ ಹಡಲಿಗೆಯಲ್ಲಿಟ್ಟುಕೊಂಡು ಐದನೆಯ ಸಮುದ್ರ (ಕ್ಷೀರ ಸಾಗರ)ದಲ್ಲಿ ಪಂಚಮಹಾಶಬ್ದದೊಡನೆ ಹರಡಿದನು–೧೧೫. "ಶ್ರೇಷ್ಠನಾದ ಜಿನನ ಅಭಿಷೇಕಕ್ಕೆ ವಿನಿಯೋಗವಾಗುವ ಭಾಗ್ಯ ಈ ಮೊದಲು ನನ್ನ ನೀರಿಗೆ ಬಂದಿತ್ತು; ಜಗದ್ಗುರುವಿನ ಕೇಶಸಹವಾಸ ಈ ಪರಿನಿಷ್ಕ್ರಮಣೋತ್ಸವದಲ್ಲಿ ನನಗೆ ಪ್ರಾಪ್ತವಾಯಿತು. ಈ ಎರಡೂ ಪ್ರಸಂಗಗಳಲ್ಲಿ ನೀನು ಮಾಡಿದ ಸಹಾಯದಿಂದ ನಾನು ಪುನೀತನಾದೆನು" ಎಂದು ಇಂದ್ರನಿಗೆ ಹೇಳುತ್ತಿರುವುದೊ ಏನೊ ಎಂಬಂತೆ ಪಂಚಮ ಸಮುದ್ರವು ಘೂರ್ಣಿಸುತ್ತಿತ್ತು, ಬಳಿಕ ಮರಳಿ ಬಂದು–೧೧೬. ದೇವೇಂದ್ರನು ಅತ್ಯಂತ ಭಕ್ತಿಭರಿತನಾಗಿ ದೇವವಾದ್ಯಗಳ ಲಯಕ್ಕೆ ಸಮನಾಗಿ ನರ್ತಿಸಿದನು; ಹಾಡಿದನು; ಮತ್ತೆ

ಸ್ತುಗಳಿಂದರ್ಚಿಸಿಯುಂ ಪದಕ್ಕೆಱಗಿಯುಂ ದೇವೇಂದ್ರನತ್ಯಂತಭ।
ಕ್ತಿಗುಣಪ್ರೇರಿತಚಿತ್ತವೃತ್ತಿ ಮೆಱೆದಂ ಯೋಗೀಂದ್ರಕಲ್ಯಾಣಮಂ ॥ ೧೧೬

ಅಲ್ಲಿಂ ಬೞಿಯಂ

ಮುನಿಪಾದದ್ವಂದ್ವಮಂ ಪೂಜಿಸಿ ನಡೆದು ನಭಶ್ಚಕ್ರದೊಳ್ ನಿಂದು ತದ್ಭಾ।
ವನರಂ ಜ್ಯೋತಿಷ್ಕರಂ ವ್ಯಂತರರನುಚಿತದಿಂ ಪೋಗವೇೞ್ದಾವಗಂ ದೇ ॥
ವನಿಕಾಯಂ ತನ್ನನೆತ್ತಂ ಬಳಸಿ ಬರೆ ನಿಜಾವಾಸಮಂ ಪೋಗಿ ಪೊಕ್ಕಂ।
ಜಿನಭಕ್ತಿಕ್ರೀಡದಾಮಂ ಚತುರಜನಮನೋವ್ಯೋಮಪೀಯೂಷದಾಮಂ ॥ ೧೧೭

॥ಗದ್ಯಂ॥

ಇದು ಪರಮಪುರುನ್ನಾಥಕುಲಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಚಕ್ರವರ್ತಿ ಪದಪದ್ಮನಿಧಾನದೀಪವರ್ತಿ

ಶ್ರೀಮದಗ್ಗಳದೇವ

ವಿರಚಿತಮಪ್ಪ

ಚಂದ್ರಪ್ರಭಪುರಾಣದೊಳ್

ಪರಿನಿಷ್ಕ್ರಮಣಕಲ್ಯಾಣಂ

ತ್ರಯೋದಶಾಶ್ವಾಸಂ

ಮೂರುಸಲ ಪ್ರದಕ್ಷಿಣೆ ಮಾಡಿದನು; ದಿವ್ಯವಾದ ವಸ್ತ್ರಗಳಿಂದ ಅರ್ಚಿಸಿ ಪಾದಗಳಿಗೆ ಎರಗಿದನು. ಹೀಗೆ ಇಂದ್ರನು ಯೋಗೀಂದ್ರಕಲ್ಯಾಣವನ್ನು ನೆರವೇರಿಸಿದನು. ಆನಂತರ–೧೧೭. ಮುನಿಪಾದಗಳನ್ನು ಪೂಜಿಸಿ ನಡೆದು ಆಕಾಶಮಂಡಲದಲ್ಲಿ ನಿಂತು, ಭವನವಾಸಿ, ಜ್ಯೋತಿಷ್ಕ, ವ್ಯಂತರ ದೇವತೆಗಳನ್ನು ಉಚಿತವಿಧಿಯಿಂದ ಕಳಿಸಿಕೊಟ್ಟು, ದೇವ ಸಮೂಹವು ತನ್ನನ್ನು ಬಳಸಿ ಬರುತ್ತಿರಲು ತನ್ನ ನಿವಾಸಕ್ಕೆ ಹೋಗಿ ಸೇರಿದನು.

ತ್ರಯೋದಶಾಶ್ವಾಸ ಮುಗಿದುದು

# ಚತುರ್ದಶಾಶ್ವಾಸಂ

ಶ್ರೀಮಚ್ಚಂದ್ರಪ್ರಭವಿಭು ।
ಭೂಮೀಶಸಹಸ್ರಸಂಯುತಂ ವಿಮಳತಪ ॥
ಶ್ರೀಮಂಡಿತನಾದಂ ನಿ ।
ಸ್ಸೀಮಗುಣಂ ಜೈನಜನಮನೋಹರಚರಿತಂ ॥ ೧

ಕೈಯಿಕ್ಕಿ ಪರಮಪದವಿಗೆ ।
ಕೈಯಿಕ್ಕಿದೆನೆಂಬ ತೆಱದಿನಿರ್ದು ಬೞಿಕ್ಕಂ ॥
ಕೈಯೆತ್ತಿದನಖಿಳಜನಂ ।
ಕೈಯಿತ್ತಿ ನಿರೀಹವೃತ್ತಿಯಂ ಪೊಗೞ್ವಿನೆಗಂ ॥ ೨

ಅಂತನುಷ್ಠಿತಷಷ್ಠೋಪವಾಸಂ ಚತುರ್ಥದಿನದೊಳ್ ಕೈಯೆತ್ತಿಕೊಂಡು ದುರ್ಧರತಪೋನಿಧಾನಸಾಧಕತಮಶರೀರರಕ್ಷಣನಿಮಿತ್ತಮುಂ ಷಟ್ಚತ್ವಾರಿಂಶದ್ದೋಷದೂರಮುಂ ನವಕೋಟಿಗುಣಪರಿಶುದ್ಧಮುಂ ದಾನಮಾರ್ಗದೀಪಪ್ರಭಾವನಾರ್ಥಮುಮಾಗಿ

ಕ್ರಮವಿಕ್ಷೇಪಮಹಾಕೃತದ್ರುತವಿಳಂಬಂ ದೋಱರ್ಯುಗಂ ದೋಳನೋ ।
ದ್ಯಮದೂರಂ ನಯನಂ ಯುಗಪ್ರಮಿತಮಾರ್ಗಾಳೋಕನಾಸಕ್ತಮೊ ॥
ಪ್ಪೆ ಮಹೀಚಕ್ರಮನಂಘ್ರಿಪಂಕಜರಜಂಗಳ್ ನೀರಜಂಮಾಡೆ ನಿ ।
ರ್ಮಮನೀರ್ಯಾಪರಿಶುದ್ಧಿವೆತ್ತು ತಳರ್ದಂ ಸಾಶ್ಚರ್ಯಚರ್ಯಾರ್ಥದಿಂ ॥ ೩

## ಚತುರ್ದಶಾಶ್ವಾಸಂ

೧. ಶ್ರೀ ಚಂದ್ರಪ್ರಭನು ಒಂದು ಸಾವಿರ ರಾಜರೊಡನೆ ದೀಕ್ಷೆಯನ್ನು ತಾಳಿ ತಪಸ್ಸಿನಲ್ಲಿ ತೊಡಗಿದನು. ೨. ಮೋಕ್ಷ ಪದವಿಗೆ ಕೈಯಿಕ್ಕಿದನೆಂಬಂತೆ ಕೈಯಿಕ್ಕಿಕೊಂಡಿದ್ದು (ಕೈಗಳನ್ನು ಕೆಳಗೆ ಇಳಿಬಿಟ್ಟುಕೊಂಡು ತಪಸ್ಸುಮಾಡಿ), ಬಳಿಕ ತನ್ನ ನಿಸ್ಪೃಹವೃತ್ತಿಯನ್ನು ಜನರೆಲ್ಲ ಕೈಯೆತ್ತಿ ಹೊಗಳುತ್ತಿರುವಂತೆ ಕೈಯೆತ್ತಿದನು. ವ॥ ಹೀಗೆ ಷಷ್ಠೋಪವಾಸ ವ್ರತದಲ್ಲಿ ತೊಡಗಿ ನಾಲ್ಕನೆಯ ದಿನ ಕೈಯೆತ್ತಿಕೊಂಡು ಮುಂದೆ ಮಾಡಲಿರುವ ದುಸ್ತರವಾದ ತಪಸ್ಸಿಗೆ ಸಾಧಕವಾದ ದೇಹವನ್ನು ರಕ್ಷಿಸಿಕೊಂಬ ಉದ್ದೇಶದಿಂದಲೂ, ೪೬ ದೋಷಗಳಿಂದ ದೂರವಾದ, ನವಕೋಟಿಗುಣ ಶುದ್ಧವಾದ ದಾನಮಾರ್ಗಕ್ಕೆ ಅನುವು ಮಾಡಿಕೊಡಬೇಕೆಂದೂ–೩. ನಿಧಾನವಾಗಿ ಹಜ್ಜೆಯಿಡುತ್ತ, ಕೈಗಳನ್ನು ಬೀಸದೆ, ಮುಂದಿನ ಎರಡು ಮೊಳದಷ್ಟು ದಾರಿಯನ್ನು ಸೂಕ್ಷ್ಮವಾಗಿ ನೋಡುತ್ತ, ತನ್ನ ಪಾದಕಮಲಗಳ ಧೂಳಿನಿಂದ ಭೂಮಿಯನ್ನೆಲ್ಲ ನಿಷ್ಕಲ್ಮಷಗೊಳಿಸುತ್ತ ಈರ್ಯಾಶುದ್ಧಿಯಿಂದ

ಅಂತು ತಳರ್ದು ನಳಿನಪುರಮಂ ಪೊಕ್ಕು ತೂರ್ಯತ್ರಯಪ್ರವರ್ತನಾನಾಥಪ್ರಸೂತಿಕಾತಿಥಿ ದೀನದಾನಶಾಳಾಕುಕರ್ಮಕಾಮುಕೋದ್ವಾಹಾದಿಗೇಹಂಗಳಂ ಪರಿಹರಿಸುತ್ತುಮುತ್ತಮಮಧ್ಯಮಜಘನ್ಯ ಯೋಗ್ಯಾವಾಸಂಗಳಂ ಲಾಭಾಲಾಭಮಾನಾವಮಾನಸಮೀಕೃತಚಿತ್ತವರ್ತನಂ ಚಂದ್ರಗತಿಯಿಂ ಸಲುತ್ತುಮಕ್ಷಮಕ್ಷಾದಿಪಂಚವಿಧಾಹಾರಪರಿಕಲ್ಪಿತವೀರಚರ್ಯಾಮಾರ್ಗದಿಂ ಬರ್ಪಾಗಳ್

ಅನಗಾರವೇಳೆಯೊಳ್ ತ ।
ಜ್ಜನಾಧಿಪತಿಯತಿಥಿಸಂವಿಭಾಗಾರ್ಪಣನಿ ॥
ತ್ಯನಿಯಾಮದಿನಿರಿಸಿದ ಮುನಿ ।
ವಿನಿವೇದಕನಮಳನೆಂಬವಂ ಪ್ರತಿಹಾರಂ ॥ ೪

ಅನತಿದೂರದೊಳೆ ಕಂಡು ಮುನ್ನಮೆ ಸತ್ಪಾತ್ರಗಮನಸಮಯಮಂ ಪಾರುತ್ತುಮಿರ್ದ ಭವ್ಯೋತ್ತಮಂಗೆ ಬಿನ್ನವಿಸಲೊಡಂ

ಅನತಿಶಯಾರ್ಚನಾಪರಿಕರಂ ಬೆರಸಂತವುರಂ ಸಮಂತು ಬೆ ।
ನ್ನನೆ ಬರೆ ಭವ್ಯಪಾರ್ಥಿವಚಯಂ ಕೆಲದೊಳ್ ಬರೆ ತನ್ನ ಕಣ್ಗಳುಂ ॥
ಮನಮುಮಲಂಪಿನಿಂ ಪರಿಯೆ ಮುಂದೆ ಮಹೀಪತಿ ಸೋಮದತ್ತನಾ ।
ಮುನಿಪತಿಗಂದು ಬಂದನಿದಿರಂ ಪರಿಶುದ್ಧಕೃತಾರ್ಥಬುದ್ಧಿಯಿಂ ॥ ೫

ಆಗಳ್

ಚರ್ಯೆಗೆ ಹೊರಟನು. ವ॥ ಹಾಗೆ ಹೊರಟು, ನಳಿನಪುರವನ್ನು ಪ್ರವೇಶಿಸಿ–ಸಂಗೀತಸ್ಥಾನ, ಅನಾಥವಸತಿ, ಹೆರಿಗೆಮನೆ, ಅತಿಥಿಗಳ ನೆಲೆ, ದೀನನಿವಾಸ, ದಾನಶಾಲೆ, ಕುಕರ್ಮಿಗಳ ಹಾಗು ಕಾಮುಕರ ಎಡೆಗಳು, ಮದುವೆಯ ಮನೆ–ಇವುಗಳನ್ನು ಬಿಟ್ಟು, ಉತ್ತಮ–ಮಧ್ಯಮ–ಜಘನ್ಯ ಯೋಗ್ಯವಾದ ಗೃಹಗಳನ್ನು, ಲಾಭ–ಅಲಾಭ, ಮಾನ–ಅವಮಾನಗಳನ್ನು ಸಮಚಿತ್ತದಿಂದ ಭಾವಿಸುತ್ತ, ಚಂದ್ರಗತಿಯಿಂದ ನಡೆದು, ಪಂಚವಿಧವಾದ ಆಹಾರಕಲ್ಪಿತ ಚರ್ಯಾಮಾರ್ಗದಿಂದ ಬರುತ್ತಿರುವಾಗ–೪. ಮುನಿಗಳು ಚರ್ಯೆಗೆ ಬರುವ ಕಾಲದಲ್ಲಿ ಆ ಊರಿನ ಅರಸು ಅತಿಥಿಗಳನ್ನು ಕರೆದು ಸತ್ಕರಿಸುವ ತನ್ನ ನಿತ್ಯ ನಿಯಮದಂತೆ ಹಾದಿ ಕಾಯುತ್ತಿರಲಾಗಿ, ಅಮಳನೆಂಬ ಪ್ರತಿಹಾರನು ಮುನಿಗಳ ಆಗಮನವನ್ನು ತಿಳಿಸುವುದಕ್ಕಾಗಿ ನಿಂತುಕೊಂಡಿದ್ದು ವ॥ ಸಮೀಪದಲ್ಲಿಯೆ (ಈ ಯೋಗೀಂದ್ರನನ್ನು) ಕಂಡು ಮುಂಚಿನಿಂದ ಸತ್ಪಾತ್ರರ ಆಗಮನ ನಿರೀಕ್ಷೆಯಲ್ಲಿದ್ದ ಭಕ್ತೋತ್ತಮನಾದ ಆ ಅರಸನಿಗೆ ಬಿನ್ನವಿಸಿದನು. ಕೂಡಲೆ–೫. ಅನೇಕಾನೇಕ ಅರ್ಚನಾಪರಿಕರ ಸಹಿತನಾಗಿ ತನ್ನ ರಾಣಿವಾಸದೊಡನೆ ಹಾಗು ಭಕ್ತರಾದ ಅರಸುಗಳೊಡನೆ ಹೊರಟು, ತನ್ನ ಕಣ್ಣುಗಳೂ ಮನಸ್ಸೂ ಮುಂದೆ ಮುಂದೆ ಉತ್ಸುಕವಾಗಿ ಹರಿಯುತ್ತಿರಲು ಸೋಮದತ್ತನೆಂಬ ಆ ರಾಜನು ಮುನೀಶ್ವರನನ್ನು ಶುದ್ಧವಾದ ಕೃತಕೃತ್ಯಬುದ್ಧಿಯಿಂದ ಇದಿರುಗೊಂಡನು.

ಇರೆ ವದನಾಬ್ಜದೊಳ್ ಸುರಭಿಶೋಭೆಯವೋಲ್ ಶ್ರುತಲಕ್ಷ್ಮಿ ಕೂಡೆ ಸ।
ಯ್ತಿರೆ ದಯೆ ನೇತ್ರಪುತ್ರಿಕೆಯವೋಲ್ ನಿಜನೇತ್ರದೊಳಾವಗಂ ತಪೋ॥
ಭರಕೃತಶಕ್ತಿ ಮೂರ್ತಿಯೊಳಳಂಕೃತಿಯಂದದಿನೆಯ್ದೆ ಚೆಲ್ವುವೆ।
ತ್ತಿರೆ ಮುನಿಯಿರ್ದನಂದೊಸೆದು ಪುಂಜಿಸಿದಂದದೆ ಕಣ್ಣ ಪುಣ್ಯಮಂ॥ ೬

ಅಂತಿರ್ದನಂ

ಇದಿರ್ಗೊಂಡು ಭಕ್ತಿಪೂರ್ವಕ।
ಮುದಾತ್ತಮತಿ ನಿಲ್ಲಿಮೆಂದು ವಂದಿಸೆ ನಿಂದಂ॥
ಸದಯಂ ಪರಸಿ ತದೀಯಾ।
ಸ್ಪದದೊಳ್ ಘನಪುಣ್ಯಪುಂಜಮೊಡನಿಲ್ವಿನೆಗಂ॥ ೭

ಎನಗೆ ಪುರಾಕೃತಂ ಸುಕೃತಮಿಂದಿದಿರ್ವಂದವೋಲಾಯ್ತು ತೀರ್ಥನಾ।
ಥನ ಪದಪಾಂಶುವಿಂ ನಗರಿಯಿಂದತಿಪಾವನಮಾಯ್ತು ಮತ್ಕುಲಂ॥
ಜನನುತಮಿಂದದಾಯ್ತ ಚರಿತಾರ್ಥನೆನೆಂದು ಮಹೋತ್ಸವಾನಕ।
ಧ್ವನಿಭರಿತಾಂಬರಂ ಪುಗಿಸಿದಂ ನಿಜಮಂದಿರಮಂ ಮುನೀಂದ್ರನಂ॥ ೮

ಅನಂತರಮತ್ಯಂತಪವಿತ್ರವೇತ್ರವಿಷ್ಟರಾಸೀನಂಮಾಡಿ

ಚಳನತಳಂಗಳಂ ತೊಳೆದು ಮುಂ ಬಟಿಕಟ್ಟೆಯೆ ತೀರ್ಥವಾರಿಯಿಂ।
ಮಳಯಜಗಂಧದಿಂ ಕಳಮತಂಡುಳದಿಂ ಸಿತಪುಷ್ಪದಿಂ ಸಮು॥
ಜ್ಜ್ವಳತರಪಾತ್ರಪೂರ್ಣಚರುವಿಂ ಮಣಿದೀಪದಿನುದ್ಧಧೂಪದಿಂ।
ಫಳಕುಳದಿಂ ಧರಾಧಿಪತಿ ಪೂಜಿಸಿದಂ ನಿರವದ್ಯವೃತ್ತನಂ॥ ೯

ಆಗ–೬. ಕಾಮಧೇನುವಿನಂತೆ ಶ್ರುತಲಕ್ಷ್ಮಿಮುಖದಲ್ಲಿಯೂ, ಕಣ್ಣುಗೊಂಬೆಯಂತೆ ದಯೆ ಕಣ್ಣುಗಳಲ್ಲಿಯೂ, ತಪಸ್ಸಿನಿಂದ ಗಳಿಸಿದ ಶಕ್ತಿ ರೂಪದಲ್ಲಿಯೂ ಅಲಂಕರಣದಂತೆ ತುಂಬ ಸೊಗಸಾಗಿ ಒಪ್ಪುವ ಮುನಿಯು ಕಣ್ಣ ಪುಣ್ಯವನ್ನೆ ಒಟ್ಟುಗೂಡಿಸಿ ಮಾಡಿಟ್ಟ ಪುಂಜದಂತೆ ತೋರಿದನು. ಹಾಗೆ ಇದ್ದವನನ್ನು–೭. ವಿವೇಕಶಾಲಿಯಾದ ಆ ದೊರೆಯು ಭಕ್ತಿಪೂರ್ವಕವಾಗಿ ಇದಿರುಗೊಂಡು "ನಿಲ್ಲಿ" ಎಂದು ನಮಸ್ಕರಿಸಲಾಗಿ, ಆತನ ಬಳಿಯಲ್ಲಿ ಘನವಾದ ಪುಣ್ಯಪುಂಜವೆ ನಿಲ್ಲುವಂತೆ ಆಶೀರ್ವದಿಸಿ ಯೋಗಿಯು ನಿಂತನು. ೮. "ಪೂರ್ವದಲ್ಲಿ ಮಾಡಿದ ಪುಣ್ಯ ನನಗೆ ಇಂದು ಇದಿರುಬಂದಂತಾಯಿತು; ತೀರ್ಥೇಶ್ವರ ಪಾದಧೂಳಿಯಿಂದ ನನ್ನ ನಗರವಿಂದು ಅತ್ಯಂತ ಪವಿತ್ರವಾಯಿತು; ನನ್ನ ವಂಶವಿಂದು ಜನಸ್ತುತವಾಯಿತು; ನಾನು ಕೃತಾರ್ಥನಾದೆನು" ಎಂದು ಮಹೋತ್ಸವದಿಂದ ಮಂಗಳವಾದ್ಯ ಧ್ವನಿಗಳು ಆಕಾಶವನ್ನಾವರಿಸುತ್ತಿರಲು ಮುನೀಂದ್ರನನ್ನೂ (ರಾಜನು) ತನ್ನ ಮನೆಯೊಳಗೆ ಕರೆದೊಯ್ದನು. ವ॥ ಬಳಿಕ ಅತ್ಯಂತ ಪಾವನವಾದ ಚಾಪೆಯ ಮೇಲೆ ಮುನಿಯನ್ನು ಕುಳ್ಳಿರಿಸಿ–೯. ಮೊದಲು ಪಾದಗಳನ್ನು ತೊಳೆದು, ಪರಮಭಕ್ತಿ ಪೂರ್ವಕವಾಗಿ ತೀರ್ಥೋದಕದಿಂದಲೂ, ಗಂಧ ಅಕ್ಷತೆ, ಬಿಳಿಯ ಹೂ, ಉಜ್ವಲವಾದ

ಅಗಳ್ ಪ್ರತಿಗ್ರಹಾದಿ ನವವಿಧಪುಣ್ಯನುಂ ಶ್ರದ್ಧಾದಿಸಪ್ತಗುಣಮಣಿವಿಭೂಷಣನುಮಾಗಿ ಸಪ್ರಕಾಶಶುಚಿಪ್ರದೇಶದೊಳ್ ನಿಜೆಸಿ ಸಿದ್ಧಭಕ್ತಿಕರಣಾನಂತರಂ

ಪರಮಮುನೀಶೋತ್ತಾನಿತ ।
ಕರಪುಟದೊಳ್ ಪರಮಭಕ್ತಿಯಿಂದಿಕ್ಕೆ ನೃಪಂ ॥
ಪರಮಾನ್ನಮಂ ತ್ರಿವಾರಂ ।
ನಿರಂತರಂ ನೆಱಪಿದಂ ಸ್ವಕಾಯಸ್ಥಿತಿಯಂ ॥ ೧೦

ಅಮಳಗುಣನಕ್ಷಯಂ ದಾ ।
ನಮಸ್ತುವೆಂದಂದು ಪರಸಿ ನೃಪನಂ ಗಮಿಸೋ ॥
ದ್ಯಮನಪ್ಪುದುಮಂತಾಗಳ್ ।
ಸಮಂತು ತದ್ರಾಜಮಂದಿರಪ್ರಾಂಗಣದೊಳ್ ॥ ೧೧

ಅಲರ್ವಟಿ ಪೊಮ್ಮಟಿ ಮಂದಾ ।
ನಿಳನನಿಮಿಷದುಂದುಭಿಸ್ವನಂ ದಿವಿಜಮುಖೋ ॥
ಚ್ಚಳಿತಾಹೋದಾನಸ್ವನ ।
ಮಿಳಾತಳಾಶ್ಚರ್ಯಮಾಯ್ತು ಪಂಚಾಶ್ಚರ್ಯಂ ॥ ೧೨

ಬಟಿಕಂ ತನ್ಮುನಿನಾಥಂ ।
ತಳರೆ ತಪೋವನಕೆ ನೃಪನುಮನುಗಮನಪರಂ ॥
ತಳರ್ದು ನಿಜವಿನಯದಿಂದೇಂ ।
ತಳೆದನೊ ಕರಿಪತಿಯ ಬಟಿಯ ಕಳಭಾಕೃತಿಯಂ ॥ ೧೩

ಪಾತ್ರೆಗಳಲ್ಲಿ ತುಂಬಿದ ಚರು, ರತ್ನದೀಪ, ಉತ್ತಮವಾದ ಧೂಪ ಮತ್ತು ಫಲಗಳಿಂದಲೂ ರಾಜನ ಪರಿಶುದ್ಧ ಚರಿತ್ರನಾದ ಮುನಿಯನ್ನು ಪೂಜಿಸಿದನು. ವ॥ ಆಗ ಪ್ರತಿಗ್ರಹವೇ ಮೊದಲಾದ ನವವಿಧ ಪುಣ್ಯದಿಂದಲೂ, ಶ್ರದ್ಧೆಯೆ ಮೊದಲಾದ ಸಪ್ತಗುಣಗಳಿಂದಲೂ ಭೂಷಿತನಾಗಿ, ಚೆನ್ನಾಗಿ ಬೆಳಕು ಬೀಳುವ, ಶುಚಿಯಾದ ಪ್ರದೇಶದಲ್ಲಿ ಮುನಿಯನ್ನು ನಿಲ್ಲಿಸಿ, ೧೦. ಶ್ರೇಷ್ಠನಾದ ಮುನಿ ನೀಡಿದ ಬೊಗಸೆಯಲ್ಲಿ ಪರಮ ಭಕ್ತಿಯಿಂದ ಪರಮಾನ್ನವನ್ನು ಮೂರು ಸಲ ಇಕ್ಕಿದನು. ಮುನಿ ಶರೀರಧಾರಣಕ್ಕೆ ಅವಶ್ಯವಾದ ಪಾರಣೆಯನ್ನು ಹೀಗೆ ಮುಗಿಸಿದನು. ೧೧. "ನಿನ್ನ ದಾನವು ಅಕ್ಷಯುವಾಗಲಿ" ಎಂದು ಅರಸನನ್ನು ಹರಸಿ ಮುನಿ ಹೊರಡುತ್ತಲೆ ಆ ಅರಮನೆಯ ಅಂಗಳದಲ್ಲಿ_೧೨. ಹೂವಿನ ಮಳೆ, ಹೊನ್ನಿನ ಮಳೆ, ಮೆಲುಗಾಳಿ, ದೇವದುಂದುಭಿಧ್ವನಿ ಹಾಗು ದೇವತೆಗಳಿಂದ "ಅಹೋದಾನಂ" ಎಂಬ ಧ್ವನಿ–ಎಂಬ ಪಂಚಾಶ್ಚರ್ಯಗಳು ಉಂಟಾದುವು. ೧೩. ಬಳಿಕ ಆ ಮುನೀಶ್ವರನು ತಪೋವನಕ್ಕೆ ಹೊರಡಲು ಅರಸನೂ ವಿನಯದಿಂದ ಅವನೊಡನೆ

ಅಂತು ಪುರಪರಿಸರಂಬರಂ ಕಳಿಪಿ ಬಟಿಯಮೆಂತಾನುಂ ಮಗುಳ್ದು ಬಂದು

ಆವಗಮಾತ್ಮಾಂಗಣದೊಳ್ ।
ತೀವಿರ್ದಾಶ್ಚರ್ಯರತ್ನಸಂಚಯಮಂ ತ ॥
ದ್ಭೂವರನಾ ನಗರದ ಭ ।
ವ್ಯಾವಳಿಯಂ ಕರೆದು ಪಚ್ಚುಗೊಟ್ಟಂ ಪದೆಪಿಂ ॥ ೧೪

ಅನ್ನೆಗಮಿತ್ತ ತನ್ಮುನೀಂದ್ರನುಂ ಪುಣ್ಯಾರಣ್ಯಮಂ ಪೊಕ್ಕು ಶುಚಿತಮಶಿಳಾತಳಾಗ್ರದೊಳ್ ಪ್ರತಿಮಾಯೋಗದಿನಿರೆ

ಸಮನಖದಿಂದೆ ನಿಂದ ಪದಯುಗ್ಮಮವುಂಕದೆ ಜಾನುಪಾರ್ಶ್ವದೊಳ್ ।
ಕ್ರಮದೆ ಮರಲ್ದ ಹಸ್ತಯುಗಳಂ ಪರಿಭಾವಿಸೆ ನಿರ್ವಿಕಾರಮ ॥
ಪ್ಪ ಮುಖಮುಮೊಪ್ಪೆ ತಳ್ತಡರ್ದು ಪೂತ ಸಿತಸ್ಥಳಪದ್ಮವಲ್ಲರೀ ।
ಭ್ರಮಮನೊಡರ್ಚಿದತ್ತು ತನು ಯೋಗನಿಯೋಗದೊಳಿರ್ದ ಯೋಗಿಯಾ ॥ ೧೫

ಅಗಳ್

ಪಾಸಱೆ ತಪ್ತಮಾತಪದಿನೆಂದು ಕುಳಿರ್ಕೊಳುತಿರ್ಪ ಪಾಂಡುಪ ।
ದ್ಮಾಸನಮಂ ಪದಕ್ಕೆ ಧವಳಾತಪವಾರಣಮಂ ಶಿರಕ್ಕರ ॥
ಣ್ಯಾಸಿತದೇವತಾಪ್ರತತಿ ತಾಂ ಸಮಕಟ್ಟಿದುದಾರ ಚಿತ್ತದೊಳ್ ।
ಭಾಸುರಭಕ್ತಿಯಂ ಪಡೆಯದಾ ನಿರಪೇಕ್ಷನ ಯೋಗಲಕ್ಷಣಂ ॥ ೧೬

ನಡೆದು ಬರುತ್ತಾ ನಾಯಕಗಜದ ಬಳಿಯ ಮರಿಯಾನೆಯಂತೆ ಕಂಗೊಳಿಸಿದನು. ವ॥ ಹಾಗೆ ಊರ ಪರಿಸರ ದಾಟುವವರೆಗೆ ಕಳಿಸಿ ಮರಳಿ ಬಂದು. ೧೪. ತನ್ನ ಅರಮನೆಯ ಅಂಗಳದಲ್ಲಿ ತುಂಬಿದ ಆಶ್ಚರ್ಯಕರವಾದ ರತ್ನರಾಶಿಯನ್ನು ಊರಿನ ಭಕ್ತಜನಕ್ಕೆಲ್ಲ ಕರೆಕರೆದು ಹಂಚಿಬಿಟ್ಟನು. ವ॥ ಇತ್ತ ಆ ಮುನೀಂದ್ರನು ಪವಿತ್ರವಾದ ತಪೋವನವನ್ನು ಹೊಕ್ಕು ಅತ್ಯಂತ ಶುಚಿಯಾದ ಬಂಡೆಯೊಂದರ ಮೇಲೆ ಪ್ರತಿಮಾಯೋಗದಿಂದ ನಿಂತನು. ೧೫. ಎರಡೂ ಪಾದಗಳನ್ನು ಸಮನಖವಾಗಿಟ್ಟು, ಮೊಳಕಾಲುಗಳ ಪಕ್ಕದಲ್ಲಿ ಕೈಗಳನ್ನು ಇಳಿಬಿಟ್ಟು ನಿರ್ವಿಕಾರ ಮುಖದಿಂದ ಯೋಗದಲ್ಲಿ ನಿಂತ ಯತೀಶ್ವರನು ಹೂಬಿಟ್ಟ ಬಿಳಿಯ ನೆಲದಾವರೆ ಬಳ್ಳಿಯಂತೆ ಕಂಗೊಳಿಸಿದನು. ಆಗ–೧೬. ಆತನು ನಿಂತುಕೊಂಡ ಬಂಡೆಗಲ್ಲು ಬಿಸಿಲಿಂದ ಕಾಯುವುದೆಂದು ತಂಪು ಸೂಸುವ ಬೆಳ್ದಾವರೆಗಳ ಪೀಠವನ್ನು ಪಾದಗಳಿಗೂ, ಬಿಳಿಯ ಕೊಡೆಯನ್ನು ತಲೆಗೂ ಮರೆಯಾಗಿ ಅರಣ್ಯದ ದೇವತೆಗಳು ಅಳವಡಿಸಿದರು. ಆ ನಿಸ್ಪೃಹ ಯೋಗಿಯ ಯೋಗಲಕ್ಷಣವು ಯಾರ ಮನಸ್ಸಿನಲ್ಲಿ

ಅದಲ್ಲದೆಯುಂ

ಪರಮೇಶಂ ಸಂಗತಾಂತರ್ಜಪನಿಯಮನವಿಸ್ಪಷ್ಟನಿಷ್ಕ್ರಾಂತಮಂತ್ರ।
ಸ್ವರದಿಂ ಸಂಜಾತಗಂಗಾಪ್ಲವರವನಿನದದ್ಗಹ್ವರಂ ಹೈಮ್ಯಧಾತ್ರೀ ॥
ಧರಮೋ ಮೇಣೇಷದಂತಸ್ತನಿತಪರಿಚತಂ ಶಾರದೋತ್ತುಂಗಧಾರಾ।
ಧರಮೋ ಮೇಣೆಂಬ ಚೆಲ್ವಂ ತಳೆದನಚಳಿತಂ ಪೂರ್ಣಚಂದ್ರಾಂಶುವರ್ಣಂ ॥ ೧೭

ಮತ್ತಂ

ಜಪಿಯಿಸುತೊಳಗೊಳಗವ್ಯ
ಕ್ತಪದಾಕ್ಷರಮಂ ಮುಮುಕ್ಷುಕುಂಜರನಿರ್ದಂ ॥
ರಿಪುಘಾತಿಸೇನೆಯಂ ಘಾ।
ತಿಪ ತಕ್ಕಿಂದಿಂತು ಮೊಳಗುತಿರ್ಪವೊಲಾಗಳ್ ॥ ೧೮

ಆ ಭ್ರೂವಿಕಾರಮಪದೃ।
ಷ್ಟಿಭ್ರಮಮವಿಕಾಸಘೋಣಮನತಿಶ್ಲಿಷ್ಟೋ ॥
ಷ್ಠಭ್ರಾಜಿತಮಾಯ್ತಾನನ।
ಶುಭ್ರಾಂಬುಜಮಾತ್ಮಭಾವನಾತತ್ಪರನಾ ॥ ೧೯

ಧ್ಯಾನಪ್ರದೀಪಶಿಖಿಯಿಂ।
ತಾನೊಗೆದುದು ಮೇಗೆ ನಿಮಿರ್ದ ಕಜ್ಜಳಲತೆಯೆಂ ॥
ಬೀ ನುಡಿಗೆಡೆಯಾದುದು ಮಂ।
ದಾನಿಳನಿಂ ಮಿಳಿರ್ವ ಕುಂತಳಂ ಮುನಿಪತಿಯಾ ॥ ೨೦

ಭಕ್ತಿಯನ್ನು ಉಂಟುಮಾಡದು ? ಅದಲ್ಲದೆ–೧೭. ಪರಮೇಶ್ವರನು ಅಂತರ್ಜಪದಲ್ಲಿ ತೊಡಗಿ, ಅವ್ಯಕ್ತವಾಗಿ ಮಂತ್ರಾಕ್ಷರಗಳನ್ನು ಉಚ್ಚರಿಸುತ್ತಿದ್ದನು. ಆಗ ಇದೇನು ತನ್ನ ಕೊಳ್ಳದಲ್ಲಿ ಗಂಗಾನದಿಯ ಪ್ರವಾಹ ಧ್ವನಿಯನ್ನೊಳಗೊಂಡ ಮೇರುಗಿರಿಯೊ, ಗುಡುಗಿನ ದನಿಯನ್ನು ಅಡಗಿಸಿಕೊಂಡ ಶರತ್ಕಾಲದ ಮೋಡವೊ ಎಂಬಂತೆ ಪೂರ್ಣಚಂದ್ರವರ್ಣನಾದ ಆ ಮುನಿ ಚೆಲುವಾಗಿ ತೋರಿದನು. ಮತ್ತು– ೧೮. ಒಳಗೊಳಗೆಯೆ ಅವ್ಯಕ್ತ ಪದಾಕ್ಷರಗಳನ್ನು ಆ ಮುಮುಕ್ಷುವು ಜಪಿಸುತ್ತಿರಲಾಗಿ ಶತ್ರುವಾದ ಘಾತಿಕರ್ಮ ಸೈನ್ಯವನ್ನು ಘಾತಿಸುವ ಉದ್ಯೋಗದಲ್ಲಿ ಗರ್ಜಿಸುತ್ತಿರುವನೊ ಏನೊ ಎಂದೆನಿಸಿತು. ೧೯. ಹುಬ್ಬಿನ ವಿಕಾರವಿಲ್ಲದ, ದೃಷ್ಟಿ ಚಾಂಚಲ್ಯವಿಲ್ಲದ, ತುಟಿಗಳನ್ನು ಬಿಗಿದುಕೊಂಡಿರದ ಮುಖಕಮಲವು, ಆತ್ಮಭಾವಲೀನನಾದ ಆ ಯೋಗಿಗೆ ಒಪ್ಪಿತು. ೨೦. ಉರಿಯುತ್ತಿರುವ ಧ್ಯಾನದೀಪದ ಕುಡಿಯಿಂದ ಎದ್ದ ಕಾಡಿಗೆಯೊ ಏನೊ ಎಂಬಂತೆ, ಗಾಳಿಗೆ

ಜಲಜವನಂಗಳೊಳ್ದೊರೆಯಿನುಣ್ಮುವ ಶೀಕರವಾರಿಯಂ ಪೊದ ।
ಬ್ದಲರ್ಗಿಡುವಿಂದಮಲ್ಲುಗುವರಲ್ಗಳನೊಯ್ಯನೆ ತಂದು ತಂದು ನಿ ॥
ಚ್ಚಲುಮಭವಾಂಘ್ರಿಪಂಕಜಮನರ್ಚಿಸುಗುಂ ಪವಮಾನನಂತೆ ದಲ್ ।
ಮಲೆಯೊಳಗಿರ್ದೊಡಂ ಪರಮಪೂಜ್ಯರೆ ಪೂಜೆಯನೆಂತುಮೆಯ್ದುಗುಂ॥ ೨೧

ಮತ್ತಂ

ಅಲುಗದೆ ತಳಿರ್ತ ಮರಗಳೊ ।
ಳೆಲೆಯಂ ಕಲಿಸದೆ ಪೂತ ಗಿಡುಗಳೊಳರಲಂ ॥
ಸಲೆ ಬಿರ್ಚದೆ ತಳ್ತ ಲತಾ ।
ವಲಿಗಳೊಳೊಳ್ಗುಡಿಯನೂದುಗುಂ ಗಂಧವಹಂ ॥ ೨೨

ವನದೇವತೆಯರ್ ನಿಚ್ಚಂ ।
ಮುನಿಪತಿಯಂ ಸ್ತುತಿಯಿಪುಕ್ತಿಗಳನಾಲಿಸಿ ಕ ॥
ಲ್ತಿನಿಸಂ ಕಳಕೀರಕುಳಂ ।
ಮನದೊಲವಿಂದೋದುತಿರ್ಪುವಾ ಮುನಿವನದೊಳ್ ॥ ೨೩

ಪುಗಲೆಂದುವು ಕೋಗಿಲೆಗಳ್ ।
ಮೃಗಪಶುಗಣಮುಂ ಮನೋಜ ಪೊಕ್ಕಿಸುವಾಮೊ ॥
ಗ್ಗುಗಳಲ್ಲಿ....ರ್ದಪ ।
ನಗಾಧಬೋಧಂ ದಲೆಂದು ಬಾಜಿಪ ತೆಱದಿಂ ॥ ೨೪

ಚಲಿಸುವ ತಲೆಗೂದಲು ಶೋಭಿಸಿದುವು. ೨೧. ತಾವರೆಗೊಳಗಳಲ್ಲಿಯ ತೆರೆಗಳಿಂದ ಹೊಮ್ಮುವ ತುಷಾರಜಲವನ್ನೂ, ಹೂಗಿಡಗಳಿಂದ ಉದಿರಿದ ಹೂಗಳನ್ನೂ ಮೆಲ್ಲಗೆ ತಂದು, ಅಭವನ ಪಾದಕಮಲಗಳಿಗೆ ಅರ್ಪಿಸಿ ವಾಯುದೇವನು ಪೂಜೆಮಾಡುತ್ತಿದ್ದನು. ಬೆಟ್ಟದ ಮೇಲಿದ್ದರೂ ಪರಮಪೂಜ್ಯರಿಗೆ ಹೇಗೋ ಪೂಜೆ ದೊರೆತೆ ದೊರೆಯುತ್ತದೆ. ಮತ್ತು ೨೨. ಚಿಗುರಿದ ಮರಗಳಲ್ಲಿ ಎಲೆಗಳನ್ನು ಅಲುಗದೆ, ಹೂತ ಗಿಡಗಳಲ್ಲಿ ಹೂಗಳನ್ನು ಕಳಚದೆ, ಬಳ್ಳಿಗಳಲ್ಲಿಯ ಹೂಗುಡಿಗಳನ್ನು ಬಿಚ್ಚದೆ ಗಾಳಿ ಮೆತ್ತಗೆ ಬೀಸುತ್ತಿತ್ತು. ೨೩. ವನದೇವತೆಯರು ನಿತ್ಯವೂ ಮುನೀಂದ್ರನನ್ನು ಸ್ತುತಿಸುವ ಮಾತುಗಳನ್ನು ಕೇಳಿ ಕೇಳಿ ಕಲಿತುಕೊಂಡು ಅಲ್ಲಿಯ ಗಿಳಿಗಳು ಮನಮೆಚ್ಚಿ ಆ ನುಡಿಗಳನ್ನು ಮರಳಿ ಹೇಳುತ್ತಿದ್ದುವು. ೨೪. "ಅಗಾಧ ಜ್ಞಾನಿಯು ತಪದಲ್ಲಿರುವನು. ಆದುದರಿಂದ ನೀವಿಲ್ಲಿ ಬರಬೇಡಿ" ಎಂದು ಮೃಗಪಶುಗಣಕ್ಕೂ ಮನ್ಮಥನಿಗೂ ಹೇಳುವಂತೆ ಕೋಗಿಲೆಗಳು

ಕೇಸರಮಮಂ ಕರ್ದುಕದೆ ಮ ।
ತ್ತಾಸವಮಮಂ ಪೀಱದೆಸಲೊಳೆಱಗದೆ ರಜಮಂ ॥
ಸೂಸದೆ ಪೊಸಪೂವಿಂ ಪೊಱ ।
ಸೂಸುವ ಸೌರಭದೆ ತಣಿವುವಾ ವನದಳಿಗಳ್ ॥ ೨೫

ಆ ಪರಮಯೋಗಿಯೆಂಬ ಮ ।
ಹಾಪರ್ವತದಿಂದಮುಣ್ಮೆ ಶಾಂತರಸನವೀ ॥
ನಾಪಗೆ ತನ್ಮಯಮೆನಿಸಿ ।
ತ್ತಾ ಪುಣ್ಯಾರಣ್ಯದೊಳ್ ಚರಾಚರಚಯಮಂ ॥ ೨೬

ಪಿಂಗದೆ ನಾಗಬಂಧದೊಳೆ ನಾಗಚಯಂ ಪೆಣೆದಿರ್ದುದೆಯ್ದೆ ಸಾ ।
ರಂಗದ ಕೋಟ್ಕೆಗಳೊಳ್ ಶಬರರಿಂ ನಲವಿಂದೆ ಕುರಂಗಸಂಕುಳಂ ॥
ಸಂಗತಿವೆತ್ತು ದೀವದ ಮೃಗಂಗಳ ಭಂಗಿಯಿನಿರ್ದುದೊಯ್ಯನ ।
ಗ್ರಾಂಗುಳಿಯಿಂದೆ ಪಿಕ್ಕಿದುದು ಸಿಂಗದ ಕೇಸರಮಂ ಮತಂಗಜಂ ॥ ೨೭

ಕರಿಣಿಗಳುಂ ಪದೆಪಿಂ ಕೇ ।
ಸರಿಣಿಗಳುಂ ಸಿಂಹಶಿಶುಗಮಿಭಕಳಭಕ್ಕಂ ॥
ತೊರೆದ ಮೊಲೆಯೂಡುತಿರ್ದುವು ।
ಪರಸ್ಪರದ್ವೇಷಭಾವಮಂ ಬಿಟ್ಟದಱಿಂ ॥ ೨೮

ಪೆಣ್ಬುಲಿಯ ಮುಂದೆ ನಲಿದುದು ।
ಕಣ್ಬರಿವೆತ್ತೆರಲೆ ಗೋಣಸು ನರ್ತಿಸುವ ನವಿ ॥
ಲ್ಗಣ್ಬೀಲಿಯೊಳಗೆ ಸುಟಿದುದು ।
ತಣ್ಬಸಲೆಯೊಳಾಡುವಂತೆ ನಾಗರ ಮಱಿಗಳ್ ॥ ೨೯

ಕೂಗುತ್ತಿದ್ದುವು. ೨೫. ಹೂವಿನ ಕೇಸರಗಳನ್ನು ಕಚ್ಚದೆ, ರಸವನ್ನು ಹೀರದೆ, ಹೂಗಳ ಮೇಲೆ ಎರಗದೆ, ಹೊಸಹೂವಿಂದ ಹೊರಹೊಮ್ಮುವ ಸುಗಂಧದಿಂದಲೆ ದುಂಬಿಗಳು ತೃಪ್ತಿಪಡುತ್ತಿದ್ದುವು. ೨೬. ಆ ಪರಮ ಮುನಿಯೆಂಬ ಮಹಾಪರ್ವತದಿಂದ ಹೊಮ್ಮಿ ಶಾಂತರಸದ ಹೊಸ ನದಿಯೊಂದು ಹರಿದು ಬಂದು ಎಲ್ಲವನ್ನೂ ತನ್ಮಯಗೊಳಿಸಿತ್ತೊ ಏನೊ ಎಂಬಂತೆ ಆ ತಪೋವನದ ಚರಾಚರವೆಲ್ಲ ಶಾಂತವಾಗಿ ಕಾಣುತ್ತಿತ್ತು. ೨೭. ಸರ್ಪಗಳು ಸಾರಂಗದ ಕೋಡುಗಳಲ್ಲಿ ನಾಗಬಂಧದಿಂದ ಹೆಣೆದುಕೊಂಡಿದ್ದುವು; ಜಿಂಕೆಗಳ ಹಿಂಡುಗಳು ದೀವದ ಜಿಂಕೆಗಳೊ ಏನೊ ಎಂಬಂತೆ ಬೇಟೆಗಾರರೊಡನೆ ಸ್ನೇಹದಿಂದ ವರ್ತಿಸುತ್ತಿದ್ದುವು; ಆನೆ ತನ್ನ ಸೊಂಡಿಲಿನ ತುದಿಯಿಂದ ಸಿಂಹದ ಕೇಸರವನ್ನು ಹಿಕ್ಕುತ್ತಿತ್ತು. ೨೮. ಪರಸ್ಪರ ದ್ವೇಷಭಾವವನ್ನು ಬಿಟ್ಟು ಆನೆಗಳು ಸಿಂಹದ ಮರಿಗಳಿಗೂ, ಸಿಂಹಗಳು ಮರಿಯಾನೆಗಳಿಗೂ ತಮ್ಮ ತೊರೆದ ಮೊಲೆಗಳನ್ನು ಉಣಿಸುತ್ತಿದ್ದವು. ೨೯. ಜಿಂಕೆಯ ಮರಿಯೊಂದು ಉಲ್ಲಾಸದಿಂದ ಹೆಣ್ಣು ಹುಲಿಯ ಮುಂದೆ ನಲಿದಾಡಿತು; ಕುಣಿಯುತ್ತಿರುವ ನವಿಲಿನ ಗರಿಗಳೊಳಗೆ ಮರಿನಾಗರ ಹಾವುಗಳು ಹುಲ್ಲಿನ

ಅಂತವಿಶ್ರಾಂತಶಾಂತರಸವಿಸರಪೀಯೂಷಸಂಚಯಪಂಚಮವಾರಾಶಿ ಏಕಮಾಸಪ್ರಕಲ್ಪಿತ ಪ್ರತಿಮಾಯೋಗಮಂ ನಿರ್ವರ್ತಿಸಲೊಡಂ

ಇನ್ನಪ್ಪಷ್ಟಗುಣಕ್ಕಿವು ।
ಮುನ್ನಮೆ ಸಂಚಕಬಿಮಾಗಿ ಬಂದುವು ತಾಮೆಂ ॥
ಬನ್ನೆಗಮೇಂ ಸಮನಿಸಿದುದೊ ।
ಸನ್ನುತಮತಿಗಷ್ಟಋದ್ಧಿಗಳ್ ಕ್ರಮದಿಂದಂ ॥ ೩೦

ಅವಾವುವೆಂದೊಡೆ-ಕೇವಲಜ್ಞಾನಾವಧಿಮನಃಪರ್ಯಯಜ್ಞಾನಂ ಬೀಜಬುದ್ಧಿಕೋಷ್ಠ ಬುದ್ಧಿಪದಾನುಸಾರಿತ್ವಂ ಸಂಭಿನ್ನಶ್ರೋತೃತ್ವಂ ದೂರಾಸ್ವಾದನದೂರಸ್ಪರ್ಶನ ದೂರದರ್ಶನ ದೂರಾಘ್ರಾಣ ದೂರಶ್ರವಣ ಸಮರ್ಥತೆಯುಂ ದಶಪೂರ್ವತ್ವಂ ಚತುರ್ದಶಪೂರ್ವತ್ವಂ ಅಷ್ಟಾಂಗನಿಮಿತ್ತವೇದಿತ್ವಂ ಪ್ರಜ್ಞಾಶ್ರವಣತ್ವಂ ಪ್ರತ್ಯೇಕಬುದ್ಧಿತ್ವಂ ಪ್ರವಾದಿತ್ವಮೆಂದಷ್ಟಾದಶಪ್ರಕಾರಮಪ್ಪ ಬುದ್ಧಿಋದ್ಧಿಯೊಳಂ ಪರ್ಯಂಕಾಸನಾದಿಯೋಗಾಸ್ತಿತಸ್ವರೂಪಚಾರಣತ್ವಮುಂ ಜಳಜಂಘಾತಂತುಪುಷ್ಪಪತ್ರ ಬೀಜಶ್ರೇಣ್ಯಗ್ನಿಶಿಖಾಗಮನಾದ್ಯನೇಕವಿಕಲ್ಪಸಂಯುತಾಕಾಶಗಾಮಿತ್ವಮೆಂದಿರ್ತೆಱನಪ್ಪ ಕ್ರಿಯಾ ಋದ್ಧಿಯೊಳಂ, ಅಣಿಮೆ ಮಹಿಮೆ ಲಘಿಮೆ ಗರಿಮೆ ಪ್ರಾಪ್ತಿಪ್ರಾಕಾಮ್ಯಮೀಶಿತ್ವಂ ವಶಿತ್ವಂ ಅಪ್ರತಿಘಾತಮಂತರ್ಧಾನಂ ಕಾಮರೂಪಿತ್ವಮುಮೆಂಬ ಬಹುಭಂಗೀಸಂಗತಮಪ್ಪ ವಿಕ್ರಿಯಾಋದ್ಧಿಯೊಳಂ, ಉಗ್ರತಪಂ ದೀಪ್ತತಪಂ ತಪ್ತತಪಂ ಮಹಾತಪಂ ಘೋರತಪಂ ಘೋರಪರಾಕ್ರಮಂ ಘೋರಗುಣಬ್ರಹ್ಮಚರ್ಯಮೆಂದು ಸಪ್ತವಿಧಮಪ್ಪ ತಪೋಋದ್ಧಿಯೊಳಂ, ಮನೋಬಳಂ ವಾಗ್ಬಳಂ

ಹಸಲೆಂತೊಳಗೆ ಹರಿದಾಡುವಷ್ಟೆ ನಿರ್ಭಯವಾಗಿ ಹರಿದಾಡಿದುವು. ವ॥ ಹೀಗೆ ಶಾಂತರಸವೆಂಬ ಅಮೃತಸಮುದ್ರದಲ್ಲಿ ತಪೋವನವನ್ನು ಮುಳುಗಿಸಿ ಒಂದು ತಿಂಗಳವಧಿಯ ಪ್ರತಿಮಾಯೋಗವನ್ನು ಪೂರ್ಣವಾಗಿ ಆಚರಿಸಿ– ೩೦. ಇನ್ನು ದೊರೆಯಲಿರುವ ಅಷ್ಟಸಿದ್ಧಿಗಳಿಗೆ ಸಂಚಕಾರವೊ ಏನೊ ಎಂಬಂತೆ ಆ ಮುನೀಶ್ವರನಿಗೆ ಅಷ್ಟಋದ್ಧಿಗಳು ಪ್ರಾಪ್ತವಾದುವು. ವ॥ ಅವು ಯಾವುವೆಂದರೆ– ಕೇವಲಜ್ಞಾನ, ಅವಧಿಜ್ಞಾನ, ಮನಃ ಪರ್ಯಯಜ್ಞಾನ, ಬೀಜಬುದ್ಧಿ, ಕೋಷ್ಠಬುದ್ಧಿ ಪದಾನುಸಾರಿತ್ವ, ಸುಭಿನ್ನಶ್ರೋತೃತ್ವ, ದೂರಾಸ್ವಾದನ, ದೂರದರ್ಶನ, ದೂರಾಘ್ರಾಣ, ದೂರಶ್ರವಣಸಾಮರ್ಥ್ಯ, ದಶಪೂರ್ವತ್ವ, ಚತುರ್ದಶಪೂರ್ವತ್ವ, ಅಷ್ಟಾಂಗನಿಮಿತ್ತ ವೇದಿತ್ವ, ಪ್ರಜ್ಞಾಶ್ರವಣತ್ವ, ಪ್ರತ್ಯೇಕ ಬುದ್ಧಿತ್ವ, ಪ್ರವಾದಿತ್ವವೆಂಬ ಹದಿನೆಂಟು ಪ್ರಕಾರವಾದ ಬುದ್ಧಿಋದ್ಧಿ; ಪರ್ಯಂಕಾಸನಾದಿಯೋಗಾಸ್ತಿತ ಸ್ವರೂಪ ಚಾರಣತ್ವ, ಜಲಜಂಘಾತಂತುಪುಷ್ಪ ಪತ್ರ ಬೀಜಶ್ರೇಣಿ ಅಗ್ನಿಶಿಖಾಗಮ ನಾದಿ ಅನೇಕ ಬಗೆಯ ಆಕಾಶಗಾಮಿತ್ವ ಎಂಬೆರಡು ಬಗೆಯ ಕ್ರಿಯಾ ಋದ್ಧಿ; ಅಣಿಮೆ, ಮಹಿಮೆ, ಲಘಿಮೆ, ಗರಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ, ಅಪ್ರತಿಘಾತ, ಅಂತರ್ಧಾನ, ಕಾಮರೂಪಿತ್ವ ಎಂಬ ಬಹು ಪ್ರಕಾರವಾದ

ಕಾಯಬಳಮೆಂದು ಮೂಱುಂ ತೆಱನಾದ ಬಳಋದ್ಧಿಯೊಳಂ, ಅಪುರ್ಷಂಕ್ಷ್ವೇಳಂ ಜಿಲ್ಲಮಲಂ ವಿಪೌಷಧಿ ಸರ್ವೌಷಧಿ ಅಶ್ಯಾವಿಷದೃಷ್ಟಿವಿಷಮೆಂದಷ್ಟವಿಧಮದೌಷಧಋದ್ಧಿಯೊಳಂ, ಆಲಸ್ಯವಿಷತ್ವಂ ದೃಷ್ಟಿವಿಷತ್ವಂ ಕ್ಷೀರಾಸ್ರವತ್ವಂ ಮಧ್ವಾಸ್ರವತ್ವಂ ಸರ್ಪಿರಾಸ್ರವತ್ವಮಮೃತಾಸ್ರವತ್ವಮೆಂದನೇಕ ಪ್ರಕಾರ ಷಟ್ಪ್ರಕಾರಮಾದ ರಸಋದ್ಧಿಯೊಳಂ, ಅಕ್ಷೀಣಮಹಾಶನಂ ಅಕ್ಷೀಣಬಾಹಾಬಳಮೆಂದಿತೆಱನಾದಕ್ಷೀಣಋದ್ಧಿಯೊಳಂ ನೆಱೆದು ಸಕಳಸತ್ವಗುಣಾಧಿಕಕ್ಲಿಶ್ಯಮಾಣಾವಿನೀತಜನಂಗಳೊಳ್ ಮೈತ್ರ ಪ್ರಮೋದಕಾರುಣ್ಯಮಧ್ಯಮಸ್ಥವಿವೃತ್ತಿಗಳನವಳಂಬಿಸುತ್ತುಂ ಗ್ರಾಮನಗರಖೇಡಖರ್ವಡಮಡಂಬ ದ್ರೋಣಾಮುಖ ಘೋಷಪತ್ತನಾಕರಂಗಳನಸಂಗದಿಂ ವಿಹಾರಿಸುತ್ತುಂ ಬರ್ಪಲ್ಲಿ

ಎಸೆವ ನಿಜಕೋಷ್ಠಋದ್ಧಿ ।
ಪ್ರಸರತೆಯಿಂದಾವನಾವ ತತ್ವದೊಳೇನಂ ॥
ಬೆಸಗೊಂಡೊಡಮಾಗಳೆ ನಿರ ।
ವಿಸುವ ಸಮರ್ಥತೆಯನಾಂತನಾ ಮುನಿಮುಖ್ಯಂ ॥ ೩೧

ಗಗನದೊಳಾ ಪರಮಾಣುವಿ ।
ನಗಲದ ವೀಧಿಯೊಳೆ ಸಯ್ತು ತೊಲಗದೆ ನಡೆವಂ ॥
ಬಗೆದೀರ್ಯಾಶುದ್ಧ್ಯರ್ಥಮ ।
ನಗರ್ಹಿತಂ ಶ್ರೇಣಿಚಾರಣತ್ವದ ಗುಣದಿಂ ॥ ೩೨

ವಿಕ್ರಿಯಾಋದ್ಧಿ ; ಉಗ್ರತಪ, ದೀಪ್ತತಪ, ತಪ್ತತಪ, ಮಹಾತಪ, ಘೋರತಪ, ಘೋರ ಪರಾಕ್ರಮ, ಘೋರಗುಣಬ್ರಹ್ಮಚರ್ಯವೆಂಬ ಏಳುಬಗೆಯ ತಪೋಋದ್ಧಿ; ಮನೋಬಲ, ವಾಗ್ಬಲ, ಕಾಯಬಲವೆಂಬ ಮೂರು ಬಗೆಯ ಬಲಋದ್ಧಿ; ಅಪುರ್ಷ, ಕ್ಷ್ವೇಳ, ಜಿಲ್ಲಮಲ, ವಿಪೌಷಧಿ, ಸರ್ವೌಷಧಿ, ಅಶ್ಯಾವಿಷದೃಷ್ಟಿವಿಷವೆಂಬ ಎಂಟು ವಿಧದ ಔಷಧ ಋದ್ಧಿ; ಆಲಸ್ಯವಿಷತ್ವ, ದೃಷ್ಟಿವಿಷತ್ವ, ಕ್ಷೀರಾಸ್ರವತ್ವ, ಮಧ್ವಾಸ್ರವತ್ವ, ಸರ್ಪಿರಾಸ್ರವತ್ವ, ಅಮೃತಾಸ್ರವತ್ವವೆಂದು ಅನೇಕ ಪ್ರಕಾರವಾದ ಷಡ್ರಸ ಋದ್ಧಿ; ಅಕ್ಷೀಣಮಹಾಶನ, ಅಕ್ಷೀಣಬಾಹಾಬಳವೆಂದು ಇಬ್ಬಗೆಯಾದ ಅಕ್ಷೀಣಋದ್ಧಿ: – ಹೀಗಿರುವ ಋದ್ಧಿಗಳನ್ನು ಸಂಪಾದಿಸಿ ಸರ್ವಜೀವಗಳಲ್ಲಿ ಅವುಗಳ ಗುಣದ ಮೇರೆಗೆ ಮೈತ್ರಿ, ಪ್ರಮೋದ, ಕರುಣೆ, ಹಾಗು ಮಧ್ಯಮಸ್ಥ ವೃತ್ತಿಗಳನ್ನು ಅವಲಂಬಿಸುತ್ತ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ ದ್ರೋಣಾಮುಖ, ಘೋಷಪಟ್ಟಣಗಳನ್ನು ನಿಸ್ಸಂಗವಾಗಿ ವಿಹಾರಿಸುತ್ತ, ಬರುವಾಗ– ೩೧. ಯಾವನು ಯಾವ ತತ್ವದಲ್ಲಿ ಏನನ್ನು ಕೇಳಿದರೂ ಆಗಲೆ ಅದನ್ನು ನಿರೂಪಿಸುವ ಸಾಮರ್ಥ್ಯವು ಕೋಷ್ಠಋದ್ಧಿ ಪ್ರಸಾರದಿಂದ ಆ ಮುನಿಗೆ ಒದಗಿತು. ೩೨. ಶ್ರೇಣಿಚಾರಣತ್ವದ ಬಲದಿಂದಾಗಿ ಆ ಮುನಿಯು ಈರ್ಯಾಶುದ್ಧಿಯನ್ನು ಬಗೆಯದೆ, ಆಕಾಶದಲ್ಲಿ ಪರಮಾಣುವಿನಗಲದ ಬೀದಿ

ಪ್ರತಿರೋಧಿಸಿ ವಜ್ರದ ಪ ।
ರ್ವತಂಗಳೆನಿತಾನುಮಿರ್ದೊಡವನವಯವದಿಂ ॥
ಸ್ವತನುವೆ ಭೇದಿಸಲಾರ್ಪ ।
ಪ್ರತಿಘಾತದಿನಾದಮೆಸೆದನಿಂದ್ರಪ್ರತಿಮಂ ॥ ೩೩

ತಪದ ಪರೀಷಹದಾಯಾ ।
ಸಪರಂಪರೆಯಿಂದಮಿನಿತು ಕಂದದೆ ತಪ್ತಂ ॥
ತಪನೀಯಮೆಂಬವೋಲ್ ನಿಜ ।
ವಪು ತೊಳತೊಳತೊಳಗೆ ತಪ್ತ ತಪದಿಂದೆಸೆದಂ ॥ ೩೪

ಪರಮಾಗಮಮೆಲ್ಲಮನು ।
ಚ್ಚರಿಸುವನಂತರ್ಮುಹೂರ್ತಕಾಲದೊಳೆಂಬ ॥
ಚ್ಚರಿವೆತ್ತ ವಾಗ್ಬಳಂ ಬಂ ।
ಧುರಮಾದುದು ದುರಿತಬಳತಮೋದಿನಕರನೊಳ್ ॥ ೩೫

ಉಲ್ಲಾಘತೆಯಿಂ ರೋಗಿಗ ।
ಳೆಲ್ಲಂ ತಳೆವಲ್ಲಿಗೌಷಧಂ ಸ್ವತನುಭೃತಂ ॥
ಜಲ್ಲಮಲಮಾದುದೆನೆ ಮುನಿ ।
ವಲ್ಲಭನಾ ಸಕಳಸತ್ವಹಿತಕರನಾದಂ ॥ ೩೬

ಅಮರ್ದಂ ಪೀರ್ದಂದದೆ ತಣಿ ।
ದು ಮನಂ ಪೆರ್ಚುವರತಿಕ್ಷುಧಾರ್ತರ್ ನಿಜವ ॥
ಕ್ತ್ರಮನೀಕ್ಷಿಸಲೊಡಮೆಂಬೊಂ ।
ದಮೃತಾಸ್ರವಗುಣಮನಮಿತಗುಣನೊಳಕೆಯ್ದಂ ॥ ೩೭

ಯಲ್ಲಿ ಕೂಡ ಸಲೀಲವಾಗಿ ನಡೆಯ ಬಲ್ಲವನಾದನು. ೩೩. ಇಂದ್ರಪ್ರತಿಮನೆನಿಸಿ ಆ ಮುನಿಯು ವಜ್ರಪರ್ವತಗಳೆಷ್ಟೇ ಇದ್ದರೂ ಅವುಗಳನ್ನು ಅನಾಯಾಸವಾಗಿ ತನ್ನ ದೇಹದಿಂದಲೆ ಭೇದಿಸಬಲ್ಲ ಸಾಮರ್ಥ್ಯವನ್ನು ಪ್ರತಿಘಾತದಿಂದ ಪಡೆದನು. ೩೪. ತಪಸ್ಸಿನಿಂದಲೂ ಪರೀಷಹಗಳಿಂದಲೂ ಎಷ್ಟೆಷ್ಟೂ ಕುಗ್ಗದಂತೆ ಕಾಸಿದ ಚಿನ್ನದಂತೆ ತನ್ನ ದೇಹ ಹೊಳೆಯುತ್ತಿರಲಾಗಿ ತಪ್ತತಪದಿಂದ ಶೋಭಿಸಿದನು. ೩೫. ದುರಿತಾರಿಯಾದ ಆ ಮುನಿಗೆ ಪರಮಾಗಮವೆಲ್ಲವನ್ನೂ ಅಂತರ್ಮುಹೂರ್ತ ಕಾಲದಲ್ಲಿಯೆ ಉಚ್ಚರಿಸುವ ವಾಗ್ಬಲ ಪ್ರಾಪ್ತವಾಯಿತು. ೩೬. ರೋಗಿಗಳೆಲ್ಲ ತಮ್ಮ ರೋಗನಿವಾರಣೆಗಾಗಿ ಲೇಪಿಸಿಕೊಳ್ಳುವ ಔಷಧವಾಗುವಂತೆ ಆ ಮುನಿಯ ಮೇಲೆ ಜಲ್ಲಮಲ ಸಂಚಯವಾಗಿ ಆತನು ಸರ್ವಜೀವಗಳಿಗೂ ಹಿತಕಾರಿಯಾದನು. ೩೭. ತೀವ್ರವಾದ ಹಸಿವೆಯಿಂದ ಬಳಲುವವರು ಕೂಡ ಈ ಮುನಿಯ ಮುಖವನ್ನು ನೋಡಿದೊಡನೆ ಅಮೃತವನ್ನು ಕುಡಿದವರಂತೆ ತಣಿದು ಮನಮೆಚ್ಚುವರು. ಈ ಸಾಮರ್ಥ್ಯ ಆತನಿಗೆ ಅಮೃತಾಸ್ರವತ್ವದಿಂದ ಒದಗಿತು.

ತಮಗಿತ್ತು ಚರ್ಯೆಗುಟಿದಶ ।
ನಮದಂ ದಿನದಿನದೊಳೆನಿಬರುಂಡೊಡಮಿರ್ದಂ ।
ದಮೆ ತವದಿನಿತೆಂಬಕ್ಷೀ ।
ಣಮಹಾಶನವೃತ್ತಿ ಕೀರ್ತಿವೆತ್ತುದು ಪಿರಿದುಂ ॥ ೩೮

ಎಂದಿವು ಮೊದಲಾಗೆ ಸಕಳಋದ್ಧ್ಯಂಗಪ್ರಭಾವಾಸ್ಪದನಶೇಷಸಾವದ್ಯಾತ್ಯಂತದೂರಮಪ್ಪ ಜಿನ ಕಲ್ಪಿತಮೆಂಬಾಚರಣಮಂ ಪೂಣ್ದನೇಕದಿನಂಗಳಂ ಯೋಗಯೋಗ್ಯಸ್ಥಳಂಗಳೊಳನುಷ್ಠಿಸಿ ತದ್ಧ್ಯಾನ ಮಾನಸನಾಗಿರ್ಪಲ್ಲಿ

ತಾರಾನಕ್ಷತ್ರಗ್ರಹ ।
ತಾರೇಶಚತುಷ್ಕರೊಗೆದು ಸೊಗಯಿಸುವ ವಿಹಾ ॥
ಯೋರಂಗಮೆನಿಸಿದಂ ಮುನಿ ।
ಸಾರಚತುರ್ಜ್ಞಾನವಿಳಸಿತಂ ನಿಶ್ಚಳಿತಂ ॥ ೩೯

ಅದೆಂತೆಂದೊಡೆ –

ಎಯ್ದಿದ ತತ್ತದ್ವಿಷಯಮು ।
ನಯ್ದುಂ ತೆಱದಿಂದ್ರಿಯಗಳಿಂ ಮನದಿಂದಾ ॥
ರಯ್ದಱಿಯುತ್ತಿರ್ಪುದು ತಾ ।
ನೆಯ್ದೆ ಮತಿಜ್ಞಾನಮೆಂಬ ಪೆಸರಿಂದೆಸೆಗುಂ ॥ ೪೦

ಈಯೊಂದೆ ಮತಿಜ್ಞಾನ ।
ಕ್ಕಾಯತಿವೆತ್ತೊಂದಿ ತೋಱುಗುಂ ತತ್ವಾಭಿ ॥
ಪ್ರಾಯದವಗ್ರಹಮೀಹೆಯ ।
ವಾಯಂ ಧಾರಣಮೆನಿಪ್ಪ ನಾಲ್ಕುಂ ಭೇದಂ ॥ ೪೧

೩೮. ಚರ್ಯೆಗೆ ಬಂದಾಗ ನೀಡಿ ಉಳಿದ ಆಹಾರವು ಎಷ್ಟು ಜನ ಉಂಡರೂ ಸವೆಯದೆ ಇನ್ನೂ ಇದ್ದಷ್ಟೆ ಇರುವಂತೆ ಮಾಡುವ ಅಕ್ಷೀಣಮಹಾಶನವೃತ್ತಿಯು ಕೀರ್ತಿ ಆತನಿಗೆ ಅಧಿಕವಾಗಿ ಲಭಿಸಿತು. ವ॥ ಈ ಮೊದಲಾದ ಸಮಸ್ತ ಋದ್ಧಿಗಳನ್ನು ಪಡೆದ ಆ ಮುನಿಯು ಶ್ರೇಷ್ಠವಾದ ಜಿನಕಲ್ಪಿತವೆಂಬ ಆಚರಣೆಯನ್ನು ಕೈಕೊಂಡು ಅನೇಕ ದಿನಗಳವರೆಗೆ ಯೋಗಾಚರಣೆಗೆ ಯೋಗ್ಯವಾದ ಎಡೆಗಳಲ್ಲಿ ಅನುಷ್ಠಾನ ಮಾಡಿ, ಧ್ಯಾನಸ್ಥಿತನಾಗಿರುವಾಗ– ೩೯. ತಾರೆಗಳೂ, ನಕ್ಷತ್ರಗಳೂ, ಚಂದ್ರನೂ ಹಾಗೂ ಸೂರ್ಯನೂ ಏಕಕಾಲಕ್ಕೆ ಮೂಡಿ ಶೋಭಿಸುವ ಆಕಾಶಮಂಡಲವೊ ಏನೊ ಎಂಬಂತೆ ನಾಲ್ಕು ಬಗೆಯ ಜ್ಞಾನಗಳನ್ನೊಡಗೊಂಡ ಆ ಮುನಿ ಶೋಭಿಸಿದನು. ಅದು ಹೇಗೆಂದರೆ– ೪೦. ಆಯಾ ವಿಷಯಗಳನ್ನು ಅಯ್ದು ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಪರೀಕ್ಷಿಸಿ ಅರಿತುಕೊಳ್ಳು ವುದು ಮತಿಜ್ಞಾನವೆಂದೆನಿಸುವುದು. ೪೧. ಈ ಮತಿಜ್ಞಾನಕ್ಕೆ ತತ್ವಾಭಿಪ್ರಾಯದ ಅವಗ್ರಹ, ಈಹೆ, ಅವಾಯ ಮತ್ತು ಧಾರಣವೆಂಬ ನಾಲ್ಕೂ ಭೇದಗಳು

ಮತ್ತಮದು ಬಹುಬಹುವಿಧಂ ಕ್ಷಿಪ್ರಮನಿಶ್ರೃತಮನುಕ್ತಂ ಧ್ರುವಮೆಂದಾಱು ; ತದಿತರಂಗಳಿಂತು ಪ್ರತ್ಯೇಕಂ ಪನ್ನೆರಡು ಭೇದಮಕ್ಕುಂ ಅಲ್ಲಿ ಯವಗ್ರಹಮರ್ಥಾವಗ್ರಹಂ ವ್ಯಂಜನಾವಗ್ರಹಮೆಂದಿರ್ತೆಱಂ, ಚಕ್ಷುರಿಂದ್ರಿಯಕ್ಕಂ ಮನಕ್ಕಮರ್ಥಾವಗ್ರಹಮಲ್ಲದೆ ವ್ಯಂಜನಾವಗ್ರಹಮಲ್ಲ. ಇಂತು ಸ್ಪರ್ಶನರಸನಘ್ರಾಣಶ್ರೋತ್ರೇಂದ್ರಿಯಂಗಳೆಂಬ ನಾಲ್ಕುಮೊಂದೊಂದರ್ಕಱುವತ್ತು ತೆಱಂ ಚಕ್ಷುರಿಂದ್ರಿಯಂ ನಾಲ್ವತ್ತೆಂಟು ತೆಱಂ, ಮನಮುಮನಿತೆ ತೆಱಂ, ಇಂತು ಮತಿಜ್ಞಾನಂ ಮುನ್ನೂಱ ಮೂವತ್ತಾಱು ಭೇದಮಕ್ಕುಂ. ಅದಲ್ಲದೆಯುಂ,

ಮತಿಪೂರ್ವಕಮತ್ತದಿನ ।<br>
ರ್ಥತತಿಯನಱಿವುದು ಸಮಂತು ತಾಂ ಪೆಸರಿಂದಂ ॥<br>
ಶ್ರುತಭೇದಂ ತದ್ಭೇದ ।<br>
ದ್ವಿತಯಂ ಲಿಂಗಜಮುಮಾವಗಂ ಶಬ್ದಜಮುಂ ॥ ೪೨

ಅಲ್ಲಿ

ಲಿಂಗಜಮನೇಕಭೇದಮ ।<br>
ನಂಗೀಕರಿಸಿರ್ಕುಮಾವಗಂ ಶಬ್ದಭವಂ ॥<br>
ಸಂಗಳಿಸಿರ್ಕುಂ ಪನ್ನೆರ ।<br>
ಡಂಗಂ ಪದಿನಾಲ್ಕು ಪೂರ್ವಮೆಂಬಿವನನಿಶಂ ॥ ೪೩

ಅಂತವಱೊಳಂಗಂಗಳಾವುವೆಂದೊಡೆ –

ಸಮಗ್ರವಾಗಿ ತೋರುವುವು. ವ॥ ಮತ್ತು ಅದು ಅನೇಕ ಪ್ರಕಾರವಾಗಿರುವುದು; ಕ್ಷಿಪ್ರಅನಿಶ್ರುತ, ಅನುಕ್ತ, ಧ್ರುವ ಮೊದಲಾದ ಆರು; ಅದಲ್ಲದೆ ಪ್ರತ್ಯೇಕವಾಗಿ ಹನ್ನೆರಡು ಬಗೆಯಾಗಿರುವುದು. ಅದರಲ್ಲಿ ಅವಗ್ರಹವೆಂಬುದು ಅರ್ಥಾವಗ್ರಾಹ ಮತ್ತು ವ್ಯಂಜನಾವಗ್ರಹವೆಂದು ಎರಡು ತರ. ನೇತ್ರೇಂದ್ರಿಯಕ್ಕೂ ಮನಸ್ಸಿಗೂ ಅರ್ಥಾವಗ್ರಹವಲ್ಲದೆ ವ್ಯಂಜನಾವವಗ್ರಹವಿಲ್ಲ. ಹೀಗೆ ಸ್ಪರ್ಶನ, ಪ್ರಶನ, ಘ್ರಾಣ, ಶ್ರೋತ್ರ ವೆಂಬ ಇಂದ್ರಿಯಗಳಿಗೆ ಒಂದೊಂದಕ್ಕೂ ಅರುವತ್ತು ತರ. ನೇತ್ರೇಂದ್ರಿಯಕ್ಕೆ ನಾಲ್ವತ್ತೆಂಟು ತರ. ಮನಸ್ಸಿಗೂ ಅಷ್ಟೇ ತರ. ಹೀಗೆ ಮತಿಜ್ಞಾನವು ಮುನ್ನೂರ ಮೂವತ್ತಾರು ತರವಾಗಿದೆ. ಅದಲ್ಲದೆ– ೪೨. ಮತಿಪೂರ್ವಕವಾಗಿ ಅರಿತು ದರ್ಥ ಆಚೆಗಿರುವ ಅರ್ಥವನ್ನು ಅರಿಯುವುದು ಶ್ರುತಜ್ಞಾನ; ಲಿಂಗಜ ಮತ್ತು ಶಬ್ದಜವೆಂದು ಅದು ಎರಡು ತರನಾಗಿರುವುದು. ಅಲ್ಲಿ– ೪೩. ಲಿಂಗಜವು ಅನೇಕ ಭೇದಗಳನ್ನೊಡಗೊಂಡಿದೆ. ಶಬ್ದಜದಲ್ಲಿ ಹದಿನಾಲ್ಕು ಪೂರ್ವ

ಪ್ರಕಟತರಾಚಾರಂ ಸೂ ।
ತ್ರಕೃತಂ ಸ್ಥಾನಂ ಬಟಿಕ್ಕೆ ಸಮವಾಯಾಧ್ಯಾ ॥
ಧಿಕೃತಂ ವ್ಯಾಖ್ಯಾಪ್ರಜ್ಞಾ ।
ಪ್ತಿಕರಂ ಜ್ಞಾತೃಕಥೆಯೆಂಬಿವೆಸೆಗುಂ ಮತ್ತಂ ॥ ೪೪

ಕ್ರಮದಿಂದುಪಾಸಕಾಧ್ಯಯ ।
ನಮುಮಲ್ಲಿಂ ಬಟಿಕಮಂತಕೃದ್ದಶಮುಂ ಮ ॥
ತ್ತಮಳಗುಣವರ್ಣನೋಪ ।
ಕ್ರಮಮೆನಿಸಿದನುತ್ತರೋಪಪಾದಿಕದಶಮುಂ ॥ ೪೫

ಪರಿವಿಡಿಯಿಂ ಪ್ರಶ್ನವ್ಯಾ ।
ಕರಣಮುಮಾರಯೆ ವಿಪಾಕಸೂತ್ರಮುಮಾಪ ॥
ನ್ನೆರಡನೆಯುದೃಷ್ಟಿವಾದಮು ।
ಮರುಶೋಭೆಯನಾಂತುವಾಪ್ತಪರಿಕಥಿತಂಗಳ್ ॥ ೪೬

ಮತ್ತಂ

ಪರಿಕರ್ಮಂ ಸೂತ್ರಂ ವಿ ।
ಸ್ತರಿತಪ್ರಥಮಾನುಯೋಗಮಾಪೂರ್ವಗತಂ ॥
ವರಚೂಳಿಕೆಯೆಂಬಿವು ಪ ।
ನ್ನೆರಡನೆಯಂಗಕ್ಕೆ ತೋರ್ಕುಮಯ್ದು ವಿಕಲ್ಪಂ ॥ ೪೭

ಆ ಭೇದಂಗಳೊಳ್ ನಾಲ್ಕನೆಯ ಪೂರ್ವಗತದೊಳ್ ಪುಟ್ಟಿ,

ತರದಿಂದುತ್ಪಾತಪೂರ್ವಂ ಬಟಿಕ ಸೊಗಯಿಪ ಗ್ರಾಮಣೀಯಂ ಬಟಿಕ್ಕಂ ।
ವರವೀರ್ಯಾನುಪ್ರವಾದಂ ಬಟಿಕೆ ನಿಯತಮಪ್ಪಸ್ತಿನಾಸ್ತಿಪ್ರವಾದಂ ॥
ಪರಮಜ್ಞಾನಪ್ರವಾದಂ ಬಟಿಕೆ ಬಟಿಕೆ ಸತ್ಯಪ್ರವಾದಂ ಬಟಿಕ್ಕಂ ।
ದೊರೆವೆತ್ತಾತ್ಮಪ್ರವಾದಂ ಬಟಿಕಮುಚಿತಕರ್ಮಪ್ರವಾದಂ ದಲಕ್ಕುಂ ॥ ೪೮

ವೆಂಬ ಹನ್ನೆರಡಂಗಗಳನ್ನು ಒಳಗೊಂಡಿದೆ. ಅವುಗಳಲ್ಲಿಂಯ ಅಂಗಗಳು ಯಾವುವೆಂದರೆ– ೪೪. ಆಚಾರ, ಸೂತ್ರಕೃತ ಸ್ಥಾನ, ಸಮವಾಯ, ಅಧ್ಯಾಧಿಕೃತ ವ್ಯಾಖ್ಯಾಪ್ರಜ್ಞಾಪ್ತಿಕರ, ಜ್ಞಾತೃ, ಕಥೆ ಎಂಬವು ಶೋಭಿಸುವುವು. ೪೫. ಕ್ರಮದಿಂದ ಉಪಾಸಕಾಧ್ಯಯನ ಬಳಿಕ ಅಕೃದ್ದಶ, ಅಮಲ ಗುಣವರ್ಣನೋಪಕ್ರಮವೆನಿಸಿದ ಉತ್ತರೋಪಪಾದಿಕ ದಶಗಳು ೪೬. ಆಮೇಲೆ ಕ್ರಮವಾಗಿ ಪ್ರಶ್ನೆ, ವ್ಯಾಕರಣ, ವಿಪಾಕಸೂತ್ರ ಮತ್ತು ಹನ್ನೆರಡನೆಯ ದೃಷ್ಟಿವಾದ ಎಂಬಿವು ಆಪ್ತಪರಿಕಥಿತವಾದುವು. ಮತ್ತು –೪೭. ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ, ಚೂಳಿಕೆ– ಎಂಬಿವು ಹನ್ನೆರಡನೆಯ ಅಂಗದ ಭೇದಗಳು, ಆ ಭೇದಗಳಲ್ಲಿ ನಾಲ್ಕನೆಯದಾದ ಪೂರ್ವ ಗತವೆಂಬುದರಲ್ಲಿ ಹುಟ್ಟಿ ೪೮. ಕ್ರಮವಾಗಿ ಉತ್ಪಾತಪೂರ್ವ, ಗ್ರಾಮಣೀಯ, ವೀರ್ಯಾ ನುಪ್ರವಾದ ಅಸ್ತಿನಾಸ್ತಿಪ್ರವಾದ, ಪರಮಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ,

ಬೞಿಕಂ ಪ್ರತ್ಯಾಖ್ಯಾನಂ ।
ಬೞಿಕ್ಕೆ ವಿದ್ಯಾನುವಾದಕಲ್ಯಾಣಂಗಳ್ ॥
ಬೞಿಕಂ ಪ್ರಾಣಾವಾಯಂ ।
ಬೞಿಕ್ಕೆ ನೆಗೞ್ದಾಕ್ರಿಯಾವಿಶಾಳಸಮಾಖ್ಯಂ ॥ ೪೯

ಬೞಿಕಂ ಕಡೆಯೊಳ್ ರೂಢಿಯ ।
ನೊಳಕೆಯ್ದಿರೆ ಲೋಕಬಿಂದುಸಾರಂ ಚೆಲ್ವಂ ॥
ತಳೆದು ಚತುರ್ದಶಪೂರ್ವಂ ।
ಗಳಿಂತು ಸೊಗಯಿಪುವು ಭವ್ಯಸಂಸೇವ್ಯಂಗಳ್ ॥ ೫೦

ಆ ಚತುರ್ದಶಪೂರ್ವಂಗಳ ವಸ್ತುಗಳ್, ಪ್ರತ್ಯೇಕಮನುಕ್ರಮದಿಂ

ಪತ್ತು ಪದಿನಾಲ್ಕು ನಿಯಮಂ ।
ಬೆತ್ತೆಂಟೋರೊಂಬತೆಯ್ದೆ ಪನ್ನೆರಡೀರಾ ॥
ಱತ್ತ ಪದಿನಾಱು ಮತ್ತಿ ।
ರ್ಪತ್ತಾಮೂವತ್ತು ಸಂದ ಪದಿನೈದಕ್ಕುಂ ॥ ೫೧

ಪತ್ತಕ್ಕುಂ ಪ್ರತ್ಯೇಕಂ ।
ಮತ್ತಂ ಪೆಱವಕ್ಕೆ ವಸ್ತುವೋರೊಂದರ್ಕಿ ॥
ರ್ಪತ್ತಕ್ಕುಂ ಪ್ರಾಭೃತಕಂ ।
ಬಿತ್ತರದಿನನೇಕಭೇದಸಂಘಾತಕೃತಂ ॥ ೫೨

ಅಂತು ವಿವಿಧವಿಕಲ್ಪಪರಿಕಲ್ಪಿತಂ ಶ್ರುತಜ್ಞಾನಮಕ್ಕುಂ, ಅದಲ್ಲದೆಯುಂ,

ಉಚಿತಕರ್ಮಪ್ರವಾದಗಳುಂಟು ೪೯. ಬಳಿಕ ಪ್ರತ್ಯಾಖ್ಯಾನ, ವಿದ್ಯಾನುವಾದ ಕಲ್ಯಾಣಗಳು, ಪ್ರಾಣಾವಾಯ, ಕ್ರಿಯಾವಿಶಾಲವೆಂಬುದು ೫೦. ಬಳಿಕ ಕೊನೆಗೆ ರೂಢಿಯನ್ನೊಳಗೊಂಡ ಲೋಕಬಿಂದುಸಾರ– ಹೀಗೆ ಚತುರ್ದಶಪೂರ್ವಗಳು ಭವ್ಯಜನಪ್ರಿಯವಾಗಿ ಶೋಭಿಸುವುವು. ವ॥ ಆ ಚತುರ್ದಶಪೂರ್ವಗಳ ವಸ್ತುಗಳು ಪ್ರತ್ಯೇಕವೂ ಅನುಕ್ರಮವಾಗಿ– ೫೧. ಹದಿನಾಲ್ಕು ನಿಯಮಗಳುಳ್ಳವು ಹತ್ತು, ಒಂಬತ್ತು ನಿಯಮಗಳವು ಎಂಟು, ಹನ್ನೆರಡವು ಹನ್ನೆರಡು, ಆ ಮೇಲೆ ಹದಿನಾರು, ಇಪ್ಪತ್ತು, ಮೂವತ್ತು ಮತ್ತು ಹದಿನೈದು ಆಗುವುವು. ೫೨. ಪ್ರತ್ಯೇಕವೂ ಹತ್ತಾಗಿರುವುವು. ಬೇರೆಯವಕ್ಕೆ ಒಂದೊಂದು ವಸ್ತುವಿಗೆ ಇಪ್ಪತ್ತು ಆಗುವುವು. ಪ್ರಾಭೃತಕವೆಂಬುದು ಅನೇಕ ಭೇದಗಳುಳ್ಳುದು. ವ॥ ಹೀಗೆ ನಾನು ಭೇದಗಳನ್ನುಳ್ಳುದು ಶ್ರುತಜ್ಞಾನ ಅದಲ್ಲದೆ–

ಪ್ರಕೃತಸ್ವದ್ರವ್ಯಕ್ಷೇ ।
ತ್ರಕಾಲಭಾವಾಶ್ರಯಂಗಳಿಂ ಪುದ್ಗಲವೃ ॥
ತ್ತಕಮಂ ಮರ್ಯಾದಾಪೂ ।
ರ್ವಕಮಱಿವುದದವಧಿಯೆಂಬ ಪೆಸರ್ವಡೆದಿರ್ಕುಂ ॥ ೫೩

ಬಗೆಯೆ ಭವಪ್ರತ್ಯಯಮುಂ ।
ಸೊಗಸೆ ಗುಣಪ್ರತ್ಯಯಂ ತದುಭಯಮೆನಿಕ್ಕುಂ ॥
ಮಗುಳೆ ಗುಣಪ್ರತ್ಯಯದೊಳ್ ।
ನೆಗಟ್ಟಿಂ ಭೇದತ್ರಯಂಗಳನುಗತಿಯಿಂದಂ ॥ ೫೪

ಆವಾವುವೆಂದೊಡೆ ಸಂ ।
ಭಾವಿತಸಾಮರ್ಥ್ಯಸಮಧಿಕಂಗಳ್ ಸಲೆ ದೇ ॥
ಶಾವಧಿ ಪರಮಾವಧಿ ಸ ।
ರ್ವಾವಧಿಗಳೆನಿಪ್ಪುವುಚಿತನಾಮಯುತಂಗಳ್ ॥ ೫೫

ಅವಱಳೊಳೆ ದೇಶಾವಧಿ ಅನುಗಾಮಿ ಅನನುಗಾಮಿ ಹೀಯಮಾನಂ ವರ್ಧಮಾನಮವಸ್ಥಿತಮ ನವಸ್ಥಿತಮೆಂದು ಷಟ್‌ಪ್ರಕಾರಮನುಳ್ಳದಕ್ಕುಂ. ಅವು ಗುಣಾಧಿಕರ್ಗೆ ಶಂಖಾದಿಚಿಹ್ನಂಗಳೊಳ್ ಪುಟ್ಟುಗುಂ, ತೀರ್ಥಕರರ್ಗೆ ಸರ್ವಾಂಗದೊಳ್ ಪುಟ್ಟುಗುಂ, ಇಂತವಧಿಬೋಧಂ ಬಹುವಿಧಮಕ್ಕುಂ. ಅದಲ್ಲದೆಯುಂ,

ಮನದಿಂದಾರಯದನ್ಯರ ।
ಮನೋಗತಾರ್ಥಂಗಳಂ ಸಮಂತಱಿವುದು ಸ ॥
ನ್ಮುನಿಗಳ್ಗಲ್ಲದೆ ಪುಟ್ಟದು ।
ವಿನುತಮನಃಪರ್ಯಯಾಭಿಧಾನಂ ಜ್ಞಾನಂ ॥ ೫೬

೫೩. ಪ್ರಕೃತ ಸ್ವದ್ರವ್ಯ ಕ್ಷೇತ್ರ ಕಾಲ ಭಾವಾಶ್ರಯಗಳಿಂದ ಪುದ್ಗಲವೃತ್ತವನ್ನು ಸೀಮಿತವಾಗಿ ಅರಿಯುವುದು ಅವಧಿಜ್ಞಾನವೆಂದು ಹೆಸರಾಗಿದೆ. ೫೪. ಇದರಲ್ಲಿ ಭವಪ್ರತ್ಯಯ ಮತ್ತು ಗುಣಪ್ರತ್ಯಯವೆಂದು ಎರಡು ಭೇದಗಳುಂಟು. ಮತ್ತೆ ಗುಣಪ್ರತ್ಯಯದಲ್ಲಿ ಮೂರು ಭೇದಗಳುಂಟು. ೫೫. ಅವು ಯಾವುವೆಂದರೆ– ದೇಶಾವಧಿ, ಪರಮಾವಧಿ ಮತ್ತು ಸರ್ವಾವಧಿ ಎಂಬ ಹೆಸರುಳ್ಳ ಇವು ಒಂದಕ್ಕಿಂತ ಒಂದು ಅಧಿಕ ಸಾಮರ್ಥ್ಯ ಪಡೆದಿವೆ. ವ॥ ಅವುಗಳಲ್ಲಿ ದೇಶಾವಧಿಯೆಂಬುದು– ಅನುಗಾಮಿ, ಅನನುಗಾಮಿ, ಹೀಯಮಾನ, ವರ್ಧಮಾನ, ಅವಸ್ಥಿತ ಮತ್ತು ಅನವಸ್ಥಿತ ಎಂದು ಆರು ಪ್ರಕಾರವಾಗಿದೆ. ಅವು ಅಧಿಕಗುಣಶಾಲಿಗಳಿಗೆ ಶಂಖಾದಿ ಚಿಹ್ನಗಳಲ್ಲಿಂದ ಹುಟ್ಟುವುವು. ತೀರ್ಥಕರರಿಗೆ ಸರ್ವಾವಯವಗಳಲ್ಲಿಯೂ ಹುಟ್ಟುವುವು. ಹೀಗೆ ಅವಧಿಜ್ಞಾನವು ಬಹುಪ್ರಕಾರವಾಗಿದೆ. ಅಲ್ಲದೆ– ೫೬. ಮನಸ್ಸಿನಿಂದ ಯೋಚಿಸದೆ ಅನ್ಯರ ಮನಸ್ಸಿನಲ್ಲಿರುವುದನ್ನೆಲ್ಲ ಚೆನ್ನಾಗಿ ತಿಳಿದುಕೊಳ್ಳುವುದು ಮನಃಪರ್ಯಯಜ್ಞಾನವೆನಿಸುವುದು. ಇದು ಶ್ರೇಷ್ಠಮುನಿಗಳಿಗಲ್ಲದೆ ಬೇರೆ

ಕ್ರಮದಿಂ ಋಜುಮತಿಯುಂ ವಿಪು ।
ಲಮತಿಯುಮೆಂದದಱ ಭೇದಮಿರ್ತೆಱನಕ್ಕುಂ ॥
ಸಮಸಂದದ್ಯರ್ಧದ್ವೀ ।
ಪಮೆನಿಸಿ ಮೊದಲೆನಿಸುಗು ನಿಜವ್ಯವಹೃತಿಯೊಳ್ ॥ ೫೭

ಅಂತು ವಿಶಿಷ್ಟಬೋಧಚತುಷ್ಟಯಾಳಂಕೃತಚರಮಶರೀರಂ ಚಂದ್ರಪ್ರಭಮುನಿಪ್ರಭು ಪರಮಪಂಚಮಜ್ಞಾನಸಂಜನನಕರಣಾತ್ಯಂತಶುದ್ಧಧ್ಯಾನೋದ್ಯೋಗಸಂಸಕ್ತಚಿತ್ತಂ ಛದ್ಮಸ್ಥಕಾಲಂ ಮಾಸತ್ರಯಪ್ರಮಿತಮಾದುದೆಂಬಂದಿಂಗೆ

ಬಿತ್ತಿದೆನಗತುಳಫಳಸಂ ।
ಪತ್ತಿಯನಱಿಸಲ್ಕೆ ಬರ್ಪವೋಲಲ್ಲಿ ತಪೋ ॥
ವೃತ್ತಿ ಸಮನಿಸಿದದಲ್ಲಿಗೆ ।
ಮತ್ತೆಯ್ದಿಂದಂ ಸುಬೋಧಲಬ್ಧಿನಿಮಿತ್ತಂ ॥ ೫೮

ಅಂತು ಮುನ್ನೆ ದೀಕ್ಷಾಗ್ರಹಣಮಾದ ಶುಭಂಕರೋದ್ಯಾನಕ್ಕೆ ವಂದೊಂದು ನಾಗವೃಕ್ಷದಕ್ಷೂಣ ಚ್ಛಾಯಾಚ್ಛನ್ನಮಪ್ಪ ನಿರ್ಮಳಶಿಳಾತಳದೊಳ್ ಈರ್ಯಾಪರಿಶುದ್ಧೀಕರಣಾನಂತರಂ ಪೂರ್ವಾಭಿ ಮುಖನಾಗಿ

ಕೃತಪರ್ಯಂಕಾಸನಂ ಸೂಸದೆ ನಿಲೆ ಕರಮುತ್ತಾನಕಸ್ವಸ್ತಿಕಂ ನಾ ।
ಭಿತಟನ್ಯಸ್ತಂ ಬೆಡಂಗಾಗಿರೆ ನಯನಯುಗಂ ನಿಶ್ಚಳಧ್ಯಾನಮುದ್ರಾಂ ॥
ಕಿತಮಾದಂ ಚೆಲ್ವನಾಲಿಂಗಿಸೆ ವಿಶದಶಶಿಗ್ರಾವಸಂಶುದ್ಧಸಿದ್ಧ ।
ಪ್ರತಿಮಾನಿಷ್ಕಂಪನಿರ್ದಂ ಯತಿಪತಿ ಪರಮಧ್ಯಾನಯೋಗಪ್ರಯೋಗಂ ॥ ೫೯

ಯವರಿಗೆ ಸಾಧ್ಯವಿಲ್ಲ. ೫೭. ಈ ಜ್ಞಾನದಲ್ಲಿ ಋಜುಮತಿ ಮತ್ತು ವಿಪುಲಮತಿಯೆಂಬ ಎರಡು ಭೇದಗಳುಂಟು. ವ್ಯವಹಾರದಲ್ಲಿ ಅದ್ಯರ್ಧದ್ವೀಪವೆನಿಸಿ ಮೊದಲಾಗುವುದು. ವ॥ ಹೀಗೆ ವಿಶಿಷ್ಟವಾದ ನಾಲ್ಕು ಬಗೆಯ ಜ್ಞಾನಗಳನ್ನು ಪಡೆದುಕೊಂಡ, ಚರಮ ಶರೀರಧಾರಿಯಾದ, ಚಂದ್ರಪ್ರಭಮುನೀಂದ್ರನು ಶ್ರೇಷ್ಠವಾದ ಐದನೆಯ ಜ್ಞಾನವನ್ನು ಪಡೆಯುವುದಕ್ಕೋಸ್ಕರ ಅತ್ಯಂತ ಶುದ್ಧವಾದ ಧ್ಯಾನದಲ್ಲಿ ಚಿತ್ತವನ್ನು ಲೀನಗೊಳಿಸಿ, ಛದ್ಮಸ್ಥ ಕಾಲವು ಮೂರು ತಿಂಗಳಾದಾಗ– ೫೮. ಬಿತ್ತಿದವನು, ಅದರ ಅಧಿಕ ಫಲ ವನ್ನು ಪಡೆಯಲು ಅದೇ ಸ್ಥಳಕ್ಕೆ ಬರುವಂತೆ, ತಾನೂ ತಪೋವೃತ್ತಿಯನ್ನು ಎಲ್ಲಿ ಕೈಕೊಂಡಿದ್ದನೊ ಆ ಸ್ಥಳಕ್ಕೆ, ಜ್ಞಾನಪ್ರಾಪ್ತಿಗಾಗಿ ಆ ಮುನಿ ಬಂದನು. ವ॥ ಹಾಗೆ ಮುಂಚೆ ದೀಕ್ಷೆವಹಿಸಿದ ಸ್ಥಾನವಾದ ಶುಭಂಕರೋದ್ಯಾನಕ್ಕೆ ಬಂದು ಒಂದು ನಾಗವೃಕ್ಷದ ವಿಶಾಲವಾದ ನೆರಳಲ್ಲಿದ್ದ ನಿರ್ಮಲ ಶಿಲೆಯ ಮೇಲೆ ಈರ್ಯಾಪರಿಶುದ್ಧಿ ಮಾಡಿ ಕೊಂಡು ಬಳಿಕ ಪೂರ್ವಕ್ಕೆ ಮುಖಮಾಡಿ– ೫೯. ಪರ್ಯಂಕಾಸನದಲ್ಲಿ ನಿಶ್ಚಲವಾಗಿ ಧ್ಯಾನಕ್ಕೆ ತೊಡಗಲು, ಎರಡೂ ಅಂಗೈ ಮೇಲ್ಮುಖವಾಗಿ ಸ್ವಸ್ತಿಕಾಕಾರದಲ್ಲಿ ಹೊಕ್ಕುಳ ಬಳಿ ಶೋಭಿಸಿದುವು; ಕಣ್ಣುಗಳೆರಡೂ ನಿಶ್ಚಲವಾದ ಧ್ಯಾನದಲ್ಲಿ ಮುದ್ರಿತವಾಗಿದ್ದುವು; ಪರಿಶುದ್ಧವಾದ ಚಂದ್ರಕಾಂತದ ಪ್ರತಿಮೆಯಂತೆ ಆ ಯತೀಶನು ನಿಷ್ಕಂಪನಾಗಿದ್ದನು.

ಆಗಳ್

ಪರಿಹೃತವಾತಪಾತರುತಮುಜ್ಝಿತಪಲ್ಲವಕಂಪನಸ್ವನಂ ।
ವಿರಹಿತಕೀರತಾರರಣಿತಂ ಗತಕೋಕಿಳಕಾಕಳೀಕಮಂ ॥
ತರಿತಮದಾಳಿಝುಂಕೃತಮಪಾಕೃತಶಾರಿಚಟೂಕ್ತಿ ಚಿತ್ರದೊಳ್ ।
ಬರೆದ ಬನಂಬೊಲಾದುದು ಬನಂ ಮುನಿಯೋಗವಿಘಾತಭೀತಿಯಿಂ ॥ ೬೦

ಅಂತವ್ಯಗ್ರನುಂ ಬಾಹ್ಯಸಮಗ್ರಸಾಮಗ್ರನುಮಾಗಿ ಲೋಕಾಗ್ರಮನೆಯ್ದುವಾಗ್ರಹದಿಂ ತತ್‌ಸ್ಥಾನನಿಷ್ಠಿತರಪ್ಪ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ಕ್ಷಾಯಿಕಸಮ್ಯಕ್ತ್ವಮನಂತಜ್ಞಾನಮನಂತದರ್ಶನಮನಂತವೀರ್ಯಮಮೂರ್ತತ್ವಮವಗಾಹಿತ್ವಮಗುರುಲಘುತ್ವಮವ್ಯಾಬಾಧಿತ್ವಮೆಂಬಿವಂ ಪರಿಭಾವಿಸುತ್ತುಂ ಧ್ಯಾನೋನ್ಮುಖನಾಗಿ

ಪರಮಪ್ರವಚನರತ್ನಾ ।
ಕರಸಮುದಿತನವಪದಾರ್ಥದಿಂ ಮತಿಯನಳಂ ॥
ಕರಿಸಿ ಮುನಿನಾಯಕಂ ಬಿ ।
ತ್ತರದಾಜ್ಞಾವಿಚಯವಿಳಸನೋಚಿತನಾದಂ ॥ ೬೧

ಬಿಡದೆ ಚತುರ್ಗತಿಯೊಳ್ ಬಟಿ ।
ವಿಡಿದಟಲೆ ತೊಟಲ್ಚುತಿರ್ಪಘಪ್ರತತಿಯ ಬ ॥
ಲ್ತೊಡರನೆ ಬಿಡಿಸುವ ಬಗೆಯೊಳ್ ।
ತೊಡರ್ದಚಳನಪಾಯವಿಜಯಚಿಂತೆಯನಾಂತಂ ॥ ೬೨

ಆಗ – ೬೧. ಆ ವನದಲ್ಲಿ ಗಾಳಿ ಬೀಸುವ ಸದ್ದಿಲ್ಲ; ಎಲೆಗಳು ಅಲುಗುವ ಸಣ್ಣ ಸದ್ದೂ ಇಲ್ಲ; ಗಿಳಿಗಳ ತಾರಸ್ವರವಿಲ್ಲ; ಕೋಗಿಲೆಗಳ ಮೃದುವಾದ ಧ್ವನಿಯಿಲ್ಲ; ದುಂಬಿಗಳ ಝೇಂಕಾರವಿಲ್ಲ; ಶಾರಿಕೆಗಳ ನುಡಿಯಿಲ್ಲ; ಮುನಿಯ ಯೋಗಕ್ಕೆಲ್ಲಿ ಭಂಗಬಂದೀತೋ ಎಂಬ ಹೆದರಿಕೆಯಿಂದ ನಿಶ್ಚಲ ನಿಶ್ಯಬ್ದವಾಗಿ ಆ ವನವು ಚಿತ್ರದಲ್ಲಿ ಬರೆದ ಬನದಂತಾಯಿತು. ವ॥ ಹೀಗೆ ಅವ್ಯಗ್ರನಾಗಿ ಆ ಮುನಿಯು ಲೋಕಾಗ್ರವನ್ನೇರುವ ಉತ್ಕಟತೆಯಿಂದ ಆ ಸ್ಥಾನದಲ್ಲಿರುವ ಸಿದ್ಧಪರಮೇಷ್ಠಿಗಳ– ಕ್ಷಾಯಿಕ ಸಮ್ಯಕ್ತ್ವ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅಮೂರ್ತತ್ವ, ಅವಗಾಹಿತ್ವ, ಅಗುರುಲಘುತ್ವ, ಅವ್ಯಾಬಾಧಿತ್ವ ಎಂಬ ಎಂಟು ಗುಣಗಳನ್ನು ಪರಿಭಾವಿಸುತ್ತ ಧ್ಯಾನಮಗ್ನನಾಗಲಾಗಿ– ೬೧. ಪರಮೇಶ್ವರನ ಪ್ರವಚನವೆಂಬ ಸಮುದ್ರದಲ್ಲಿ ಹುಟ್ಟಿದ ನವ ಪದಾರ್ಥಗಳಿಂದ ತನ್ನ ಮತಿಯನ್ನು ಅಲಂಕರಿಸಿಕೊಂಡು ಮುನೀಶ್ವರನು ಶ್ರೇಷ್ಠವಾದ ಆಜ್ಞಾವಿಚಯ (ಶಾಸ್ತ್ರಪ್ರಮಾಣದಿಂದ ಆಗಮಗಳ ವಸ್ತುಜ್ಞಾನ) ವಿಲಾಸದಿಂದ ಶೋಭಿಸಿದನು. ೬೨. ಜೀವನನ್ನು ಸತತವಾಗಿ ಚತುರ್ಗತಿಗಳಲ್ಲಿ ತೊಳಲಾಡಿಸುವ ದುರಿತಸಮೂಹದ ಕಠಿಣವಾದ ತೊಡಕನ್ನು ಬಿಡಿಸುವ ಉದ್ದೇಶದಿಂದ ಆತನು ಅಪಾಯವಿಜಯ (ಕರ್ಮನಾಶ)ದ

ಇರದೆ ಶುಭಾಶುಭಕರ್ಮ।
ಸ್ವರೂಪಮಂ ತತ್ಫಲಂಗಳಂ ಪರಿವಿಡಿಯಿಂ ॥
ಪರಿಭಾವಿಸೆ ಪರಮಯತೀ।
ಶ್ವರನಂದು ವಿಪಾಕವಿಜಯಪರಿಚಿತನಾದಂ ॥ ೬೩

ಕ್ರಮದಿನನುಪ್ರೇಕ್ಷೆಗಳೊಳ್।
ಸಮಸಂದಾ ದ್ರವ್ಯಭೇದಸಂಸ್ಥಾನಮನಾ ॥
ದಮೆ ಚಿಂತಿಸಿ ಮುನಿಮುಖ್ಯಂ।
ಸಮಸ್ತಸಂಸ್ಥಾನವಿಜಯಸುಸ್ಥಿತನಾದಂ ॥ ೬೪

ಅಂತು ಚತುರ್ವಿಧಧರ್ಮಧ್ಯಾನಮಂ ಧ್ಯಾನಿಸುತ್ತುಂ ನಿರತಿಶಯಲೇಶ್ಯಾವಿಶುದ್ಧನಧಃ ಪ್ರವೃತ್ತಮಪೂರ್ವನಿವೃತ್ತಮೆಂಬ ಕರಣತ್ರಯಶೋಷಣದಿನನಂತಾನುಬಂಧಿಸಂಜ್ಞೆಯಿಂ

ತಳೆದಿರ್ದಾದಿಕಷಾಯಂ।
ಗಳನಾದಂ ಕ್ರೋಧಮಾನಮಾಯಾಲೋಭಂ ॥
ಗಳನುಟಿದೀರಾಱಱಿಕೊಳಾ।
ಗಳೆ ಯೋಗಿಜನಸ್ತುತಂ ವಿಸಂಯೋಜಿಸಿದಂ ॥ ೬೫

ಅನಂತರಮಿನಿತುಬೇಗಂ ವಿಶ್ರಮಿಸಿ ಪೂರ್ವೋಕ್ತಮತದಿಂ ಮಿಥ್ಯಾತ್ವ ಸಮ್ಯಗ್ಮಿಥ್ಯಾತ್ವ ಸಮ್ಯಕ್ತ್ವ ಪ್ರಕೃತಿಗಳೆಂಬ ದರ್ಶನಮೋಹನೀಯತ್ರಿತಯಮಂ ಲಯಕ್ಕೆ ಸಲಿಸಿ

ಚಿಂತೆಗೆ ತೊಡಗಿದನು. ೬೩. ಶುಭಾಶುಭ ಕರ್ಮಗಳ ಸ್ವರೂಪವನ್ನೂ ಅವುಗಳ ಫಲಗಳನ್ನೂ ಕ್ರಮವಾಗಿ ಪರಿಭಾವಿಸಿ ಆ ಯತೀಂದ್ರನು ವಿಪಾಕವಿಜಯ (ಕರ್ಮಗಳ ಪರಿಪಾಕ ವಿಚಾರ)ವನ್ನು ಸಂಪಾದಿಸಿದನು. ೬೪. ಕ್ರಮದಿಂದ ಅನುಪ್ರೇಕ್ಷೆಗಳಲ್ಲಿ ಸಂದಾ ದ್ರವ್ಯಭೇದ ಸಂಸ್ಥಾನವನ್ನು ಸಂಪೂರ್ಣವಾಗಿ ಚಿಂತಿಸಿ ಮುನೀಂದ್ರನು ಸಮಸ್ತ ಸಂಸ್ಥಾನ ವಿಜಯ (ಲೋಕಾಕಾರ ವಿಚಾರ) ವನ್ನು ಗಳಿಸಿಕೊಂಡನು. ವ॥ ಹೀಗೆ ಅವುಗಳ ಹೆಸರಿನಿಂದಲೆ ವ್ಯಕ್ತವಾಗುವ (ಆಜ್ಞಾವಿಚಯ, ಅಪಾಯವಿಜಯ, ವಿಪಾಕವಿಜಯ ಮತ್ತು ಸಂಸ್ಥಾನವಿಜಯ ಎಂಬ) ನಾಲ್ಕು ಬಗೆಯ ಧರ್ಮ ಧ್ಯಾನವನ್ನು ಧ್ಯಾನಿಸುತ್ತ ಲೇಶ್ಯಾ ವಿಶುದ್ಧನಾಗಿ ಅಧಃಪ್ರವೃತ್ತ ಮತ್ತು ಅಪೂರ್ವ ನಿವೃತ್ತ ಎಂಬ ತ್ರಿಕರಣ ಶೋಷಣದಿಂದ ಅನಂತಾನುಬಂಧಿ ಸಂಜ್ಞೆಯಿಂದ ೬೫. ಕ್ರೋಧ, ಮಾನ, ಮಾಯಾ, ಲೋಭವೆಂಬ ಕಷಾಯಗಳನ್ನು ಆ ಯೋಗಿಯು ತೊಲಗಿಸಿದನು. ವ॥ ಬಳಿಕ ಕೆಲಸಮಯ ವಿಶ್ರಮಿಸಿ ಪೂರ್ವೋಕ್ತಮತದಂತೆ ಮಿಥ್ಯಾತ್ವ, ಸಮ್ಯಗ್ಮಿಥ್ಯಾತ್ವ ಸಮ್ಯಕ್ತ್ವ ಪ್ರಕೃತಿಗಳೆಂಬ

ತ್ರಿಕರಣಪರಿಣತನೇೞಂ ।
ಪ್ರಕೃತಿಗಳುಮನಿಂತು ಕಿಡಿಸಿ ತತ್‌ಕ್ಷಯದಿಂ ಕ್ಷಾ ॥
ಯಿಕಸಮ್ಯಗ್ದೃಷ್ಟಿತ್ವಮ ।
ನಕಳಂಕಂ ತಳೆದು ಶುದ್ಧದರ್ಶನನಾದಂ ॥ ೬೬

ಆಗಿ ಬೞಿಯಂ ಕರ್ಮವಿಕಾರಮಂ ಜೀವಸ್ವಭಾವಮಂ ಪರಸ್ಪರಾತಿಕ್ರಮಮಂ ಮಾಡಿ ಸಂಕ್ಲೇಶ ವಿರೋಧಂಗಳ್ ನಿಯಮದಿಂ ಪರಾವರ್ತಿಸುವುದಱಿಂದಮುಂ ಶುದ್ಧೋಪಯೋಗಂ ಸಮೃದ್ಧಮಪ್ಪನ್ನೆಗಂ ಚಾರಿತ್ರಮೋಹೋದಯಮುಂ ಜ್ಞಾನವೈರಾಗ್ಯಸಂಪತ್ತಿಯುಮೊಂದನೊಂದೊಟ್ಟಯಿಸುತಿರ್ಪುದಱಿಂ ಮುಂ ಅಂತರ್ಮುಹೂರ್ತಂಬರಂ ಪ್ರಮತ್ತಾಪ್ರಮತ್ತಾಪರಾವರ್ತನಸಹಸ್ರಂಗಳಂ ಕೞಿಪಿ ನಿಶ್ರೇಯಸಾನಂತಬೋಧಸುಖಪ್ರಾಸಾದಾರೋಹಣನಿಶ್ರೇಣೀಭೂತಕ್ಷಪಕಶ್ರೇಣಿಯೋಗ್ಯಾಧಃಪ್ರಮತ್ತಕರಣಪರಿಣತಾತಿಶಯಾಪ್ರಮತ್ತಗುಣಸ್ಥಾನದೊಳ್ ಸ್ಥಿತಿಬಂಧಾಪಸರಣಸಹಸ್ರಂಗೆಯ್ದಿನಿತಾನುಂ ಬೇಗದಿಂ

ಉಪಗತಮಪೂರ್ವಕರಣ ।
ಕ್ಷಪಕಗುಣಸ್ಥಾನಮಾಗೆ ತನಗೆ ಬೞಿಕ್ಕಾ ॥
ತ್ಮಪರಂ ನಾಲ್ವತ್ತೆರಡೆಂ ।
ಬ ಪವಣ್ ನೆಲಸಿದ ವಿಕಲ್ಪದಿಂದೊಪ್ಪುವುದಂ ॥ ೬೭

ಪೃಥಕ್ತ್ವ ವಿತರ್ಕವಿಚಾರಾಭಿಧಾನಮಂ ಪ್ರಥಮಶುಕ್ಲಧ್ಯಾನಮಂ ಧ್ಯಾನಿಸುತ್ತುಮಾಯುಷ್ಕರ್ಮ ಮುೞಿಯೆಉೞಿದಖಿಳಕರ್ಮಂಗಳಂ ಸ್ಥಿತ್ಯನುಭಾಗಕಾಂಡಕಘಾತಗುಣಸಂಕ್ರಮಣಪ್ರದೇಶಗುಣಶ್ರೇಣಿ

ಮೂರು ದರ್ಶನ ಮೋಹನೀಯಗಳನ್ನು ನಾಶಪಡಿಸಿ– ೬೬. ತ್ರಿಕರಣಶುದ್ಧನಾಗಿ ಏಳು ಪ್ರಕೃತಿಗಳನ್ನು ಹೀಗೆ ಲಯಗೊಳಿಸಿ, ಆ ಮೂಲಕ ಕ್ಷಾಯಿಕ ಸಮ್ಯಗ್‌ದೃಷ್ಟಿತ್ವವನ್ನು ಪಡೆದು ಶುದ್ಧದರ್ಶನನಾದನು. ವ॥ ಬಳಿಕ ಕರ್ಮವಿಕಾರವನ್ನೂ ಜೀವಸ್ವಭಾವವನ್ನೂ ಪರಸ್ಪರ ಅತಿಕ್ರಮಗೊಳಿಸಿ, ಸಂಕ್ಲೇಶವಿರೋಧಗಳು ನಿಯಮದಿಂದ ಪರಾವರ್ತಿಸುವುದರಿಂದಲೂ, ಶುದ್ಧೋಪಯೋಗವು ಸಮೃದ್ಧವಾಗುವವರೆಗೆ ಚಾರಿತ್ರಮೋಹೋದಯವೂ ಜ್ಞಾನವೈರಾಗ್ಯಸಂಪತ್ತಿಯೂ ಒಂದನ್ನೊಂದು ಆಕ್ರಮಿಸುವುದರಿಂದಲೂ, ಮೊದಲು ಅಂತರ್ಮುಹೂರ್ತದವರೆಗೆ ಪ್ರಮತ್ತ, ಅಪ್ರಮತ್ತ, ಪರಾವರ್ತನ ಸಹಸ್ರಗಳನ್ನು ಲಯಗೊಳಿಸಿ, ಮೋಕ್ಷವೆಂಬ ಮನೆಗೆ ಏಣಿಯಾದ ಕ್ಷಪಕ (ಕರ್ಮಗಳನ್ನು ನಾಶಗೊಳಿಸುವ) ಶ್ರೇಣಿಯನ್ನು ಏರಲು ಅಪ್ರಮತ್ತ (ಪ್ರಮಾದರಹಿತವಾದ) ಭಾವದಿಂದ ಅಧಃಪ್ರಮತ್ತಕರಣ (ನಾನಾ ಜೀವಾಪೇಕ್ಷೆಯಿಂದ ಉತ್ತರ ಪರಿಣಾಮಗಳು ಪೂರ್ವಪರಿಣಾಮಗಳೊಡನೆ ಸಾದೃಶ್ಯ ಹೊಂದುವುದು)ವನ್ನು ಭಾವಿಸಿ, ಸ್ಥಿತಿಬಂಧಾಪಸರಣ ಸಹಸ್ರ ಮಾಡಿ– ೬೭. ಅಪೂರ್ವಕರಣವನ್ನು ಸಾಧಿಸಿ ಕ್ಷಪಕಗುಣಸ್ಥಾನ ಪ್ರಾಪ್ತವಾಗಲಾಗಿ ಆತ್ಮಪರನಾಗಿ ನಾಲ್ವತ್ತೆರಡು ಭೇದಗಳುಳ್ಳ ವ॥ ಪೃಥಕ್ತ್ವವಿತರ್ಕವಿಚಾರವೆಂಬ ಪ್ರಥಮ ಶುಕ್ಲಧ್ಯಾನವನ್ನು ಧ್ಯಾನಿಸುತ್ತ ಆಯುಷ್ಕರ್ಮ ನಾಶವಾಗಲಾಗಿ, ಇನ್ನುಳಿದ ಎಲ್ಲ ಕರ್ಮಗಳನ್ನು

ನಿರ್ಜರೆಗಳಿನನುಕ್ರಮದಿಂ ಕಿಡಿಸುತ್ತುಂ ಪ್ರತಿಕ್ಷಣಮನಂತಗುಣಪ್ರಭಾವದೊಳೊಂದಿದೊಂದೊಂದೆ ಪರಿಣತಿಯ ನಿವೃತ್ತಿಕರಣಕ್ಷಪಕಗುಣಸ್ಥಾನಮಂ ಪೊರ್ದಿ ಪೂರ್ವೋಕ್ತಸ್ಥಿತಿಕಾಂಡಕಾದಿಕರಣದಿನಂತರ್ಮುಹೂರ್ತದೊಳ್ ಶುದ್ಧಪರಿಣಾಮದೊಳ್ ನಿದ್ರಾನಿದ್ರಾಪ್ರಚಲಾಪ್ರಚಲಸ್ತ್ಯಾನಗೃದ್ಧಿ ನರಕತಿರ್ಯಗ್ಗತಿತತ್ಪ್ರಾಯೋಗ್ಯಾನುಪೂರ್ವೈಕೇಂದ್ರಿಯಜಾತ್ಯಾತಪೋದ್ಯೋತಸ್ಥಾವರಸಾಧಾರಣಸೂಕ್ಷ್ಮಂಗಳೆಂಬ ಷೋಡಶಪ್ರಕೃತಿಗಳಂ ನಿಶ್ಶೇಷಂ ಕಿಡಿಸಿ ಮತ್ತಮಂತರ್ಮುಹೂರ್ತದಿನತಿವಿಶುದ್ಧಪರಿಣಾಮಪರತಂತ್ರರಾಗಿ,

ಅಪ್ರಭುಮುನಿಕುಲತಿಲಕನ ।
ಪಪ್ರತ್ಯಾಖ್ಯಾನಕರ್ಮಸತ್ವಂಗಳ ರೂ ॥
ಪಪ್ರಳಯಮನೆಯ್ದಿಸಿದಂ ॥
ಕ್ಷಿಪ್ರಮನುಕ್ರಮದೆ ತತ್ಕಷಾಯಷ್ಟಕಮಂ ॥ ೬೮

ಬಟಿಕಂ ತತ್ಪರಿಣಾಮದೆ ।
ಬಳಿದಂತಃಕರಣಮಂ ತಗುಳ್ಚಿ ಚತುಸ್ಸಂ ॥
ಜ್ವಳನನವಲೋಕಷಾಯಂ ।
ಗಳೆಂಬಘಪ್ರಕೃತಿಗಿಂತು ಪದಿಮೂಱಿಕ್ಕುಂ ॥ ೬೯

ಮತ್ತಂ ಕತಿಪಯಸಮಯದೊಳನುಕ್ರಮದಿಂ ನಪುಂಸಕವೇದಂ ಸ್ತ್ರೀವೇದವೆಂಬ

ಸ್ಥಿತ್ಯನುಭಾಗಕಾಂಡಕ ಅಘಗುಣ ಸಂಕ್ರಮಣ ಪ್ರದೇಶ ಗುಣಶ್ರೇಣಿ ನಿರ್ಜರೆಗಳಿಂದ ಅನುಕ್ರಮವಾಗಿ ನಾಶ ಮಾಡುತ್ತ, ಪ್ರತಿಕ್ಷಣವೂ ಅನಂತಗುಣ ಪ್ರಭಾವವನ್ನು ಪಡೆದು, ಒಂದೊಂದೆ ಪರಿಣತಿಯ ನಿವೃತ್ತಿಕರಣ ಕ್ಷಪಕಗುಣಸ್ಥಾನವನ್ನು ಹೊಂದಿ, ಪೂರ್ವೋಕ್ತವಾದ ಸ್ಥಿತಿಕಾಂಡಕಾದಿಕರಣದಿಂದ ಅಂತರ್ಮುಹೂರ್ತದಲ್ಲಿ ಶುದ್ಧಪರಿಣಾಮದಲ್ಲಿ ನಿದ್ರಾನಿದ್ರಾ ಪ್ರಚಲಾಪ್ರಚಲಸ್ತ್ಯಾನಗೃದ್ಧಿ, ನರಕತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವವಾದ ಏಕೇಂದ್ರಿಯ ಆತಪ, ಉದ್ಯೋತ, ಸ್ಥಾವರ, ಸಾಧಾರಣ ಸೂಕ್ಷ್ಮಗಳೆಂಬ ಹದಿನಾರು ಪ್ರಕೃತಿಗಳನ್ನು ನಿಶ್ಶೇಷಗೊಳಿಸಿ ಮತ್ತೆ ಅಂತರ್ಮುಹೂರ್ತದಿಂದ ಅತಿ ಪರಿಶುದ್ಧ ಪರಿಣಾಮ ಪರವಶರಾಗಿ– ೬೮. ಆ ಮುನಿಶ್ರೇಷ್ಠನು ಅಪ್ರತ್ಯಾಖ್ಯಾನ ಕ್ರೋಧ ಮಾನಮಾಯಾ ಲೋಭ ಕಷಾಯಗಳನ್ನೂ ಪ್ರತ್ಯಾಖ್ಯಾನ ಕ್ರೋಧ ಮಾನಮಾಯಾ ಲೋಭ ಕಷಾಯಗಳನ್ನೂ ನಾಶಮಾಡಿದನು. ೬೯. ಬಳಿಕ ಅಂತಃಕರಣಪೂರ್ವಕವಾಗಿ ನಾಲ್ಕು ಸಂಜ್ವಲನಕಷಾಯ ಹಾಗು ಒಂಬತ್ತು ನೋಕಷಾಯಗಳನ್ನು ಕರ್ಮಪ್ರಕೃತಿಗಳನ್ನು ನಾಶಮಾಡಿದನು. ವ॥ ಆಮೇಲೆ ಕೆಲಸಮಯದಲ್ಲಿ ಅನುಕ್ರಮದಿಂದ ನಪುಂಸಕ

ಎರಡುಮನದಿರ್ಪ ಸಮನಂ ।
ತರದೊಳ್ ಪುಂವೇದಪೂರ್ವಸತ್ಕರ್ಮಪರಂ ॥
ಪರಮೊಱಿಸಿ ಕಿಡಿಸಿದಂ ಹಾ ।
ಸ್ಯರತ್ಯರತಿಶೋಕಭಯಜುಗುಪ್ಸೆಗಳಾಱಿಂ ॥ ೭೦

ಸಮಯೋನದ್ವ್ಯಾವಳಿಕಾ ।
ಳಮಾತ್ರದಿಂ ಪುರುಷವೇದದಭಿನವಬಂಧ ॥
ಕ್ರಮಮುಮನಟಿಜಿಸಿ ನಿರ್ವೇ ।
ದಮಯಂ ತಾನಾದನತಿಬಳಂಗರಿದುಂಟೇ ॥ ೭೧

ಮತ್ತಂ ಪರಿಮೃಷ್ಟಾವಶಿಷ್ಟಸಂಜ್ವಳನಚತುಷ್ಟಯಮಮಂ ಪ್ರತಿಕ್ಷಣಂ ಪ್ರವರ್ತಮಾನಾನುಭಾಗಾಶ್ವಕರ್ಣಕರಣಪೂರ್ವಸ್ಪರ್ಧಕಮರ್ದನದಿನಂತರ್ಮುಹೂರ್ತಮಂ ಕಟಿಪಿ ಬಟಿಯಮುಚಿತಕೃಷ್ಟಿಕ್ರಿಯೆಯಿಂ ಪೂರ್ವಾಪೂರ್ವಸ್ಪರ್ಧಕಾನುಭಾಗಮನನಂತಗುಣಹಾನಿರೂಪದಿಂ ದ್ವಾದಶಸಂಗ್ರಹಕೃಷ್ಟಿಗಳಂ ಮಾಡುತ್ತುಮಂತರ್ಮುಹೂರ್ತದಿಂ ಕೃಷ್ಟಿರೂಪಪ್ರವಿಷ್ಟ ಚತುಃಕಷಾಯಸಮಸ್ತಾನುಭಾಗನಾಗಿ ಮತ್ತಮಿನಿತು ಬೇಗದಿಂ ಪ್ರತ್ಯೇಕಂ ತ್ರಿವಿಧಮಪ್ಪ ಕ್ರೋಧಮಾನಮಾಯಾಸಂಜ್ವಳನಕೃಷ್ಟಿಗಳನನುಕ್ರಮದಿಂ ಬೇಱಿವೇಱಿ ಕಿಡಿಸಿ ಮೂಲೋಚ್ಛಿತ್ತಿಯಂ ತತ್ಕಷಾಯತ್ರಯಕ್ಕೆ ಪಡೆದು ಮತ್ತಂ ಕಿಱಿದು ಬೇಗದಿಂ ಲೋಭಸಂಜ್ವಳನಪ್ರಥಮಕೃಷ್ಟಿಗತಾನುಭಾಗಮಂ ಭಂಜಿಸಿ ಬಟಿಯಮೆರಡನೆಯ ಕೃಷ್ಟಿಗತಾನುಭಾಗಮಂ ಭಾವಿಸುತ್ತುಂ ಬಾದರಸಾಂಪರಾಯಕೃಷ್ಟ್ಯನುಭಾಗಮನನಂತಗುಣಹಾನಿರೂಪದಿಂ ತುಂದಿಸಿ ಸೂಕ್ಷ್ಮಸಾಂಪರಾಯಕೃಷ್ಟಿಗಳಂ ಮಾಡುತುಮಂತರ್ಮುಹೂರ್ತಕಾಲದಿಂ ಬಾದರಲೋಭ

ವೇದ ಸ್ತ್ರೀವೇದವೆಂಬ– ೭೦. ಎರಡನ್ನೂ ಲಯಗೊಳಿಸಿ, ಬಳಿಕ ಪುಂವೇದವನ್ನು ತೊಲಗಿಸಿ ಹಾಸ್ಯ, ರತಿ, ಅರತಿ, ಶೋಕ, ಭಯ ಮತ್ತು ಜುಗುಪ್ಸೆಗಳೆಂಬ ಆರನ್ನೂ ಧ್ವಂಸಗೊಳಿಸಿದನು. ೭೧. ಪುಂವೇದದ ಅಭಿನವಬಂಧ ಕ್ರಮವನ್ನು ನಾಶಗೊಳಿಸಿ ನಿರ್ವೇದನಾದನು. ಮಹಾಬಲಶಾಲಿಗಳಿಗೆ ಅಸಾಧ್ಯವಾದುದುಂಟೆ? ವ॥ ಆಮೇಲೆ ಉಳಿದಿದ್ದ ನಾಲ್ಕು ಸಂಜ್ವಳನಗಳನ್ನು ಪ್ರತಿಕ್ಷಣ ಪ್ರವರ್ತಮಾನ ಅನುಭಾಗಾಶ್ವಕರ್ಣಕರಣ (ನಿಶ್ಚಂಚಲತೆ) ಪೂರ್ವ ಸ್ಪರ್ಧಕ ಮರ್ದನ ಮಾಡಿ ಅಂತರ್ಮುಹೂರ್ತ ಬಿಟ್ಟು, ಉಚಿತವಾದ ಕೃಷ್ಟಿಕ್ರಿಯೆಯಿಂದ ಪೂರ್ವಾಪೂರ್ವ ಸ್ಪರ್ಧಕಾನುಭಾಗವನ್ನು ಅನಂತಗುಣ ಹಾನಿರೂಪದಿಂದ ದ್ವಾದಶ ಸಂಗ್ರಹ ಕೃಷ್ಟಿಗಳನ್ನು ಮಾಡುತ್ತ ಅಂತರ್ಮುಹೂರ್ತದ ಕೃಷ್ಟಿರೂಪ ಪ್ರವಿಷ್ಟ ಚತುಃಕಷಾಯ ಸಮಸ್ತಾನುಭಾಗನಾಗಿ ಮತ್ತೆ ಕೆಲಕಾಲದಲ್ಲಿ ಪ್ರತ್ಯೇಕವೂ ಮೂರು ಬಗೆಯಾಗಿರುವ ಕ್ರೋಧ ಮಾನ ಮಾಯಾ ಸಂಜ್ವಲನ ಕೃಷ್ಟಿಗಳನ್ನು ಅನುಕ್ರಮವಾಗಿ ಬೇರೆ ಬೇರೆ ನಾಶಮಾಡಿ ಕಷಾಯತ್ರಯವನ್ನು ನಿರ್ಮೂಲಗೊಳಿಸಿ, ಮತ್ತೆ ಅಲ್ಪ ಸಮಯದಲ್ಲಿ ಲೋಭಸಂಜ್ವಲನ ಪ್ರಥಮ ಕೃಷ್ಟಿಗತಾನುಭಾಗವನ್ನು ಭಂಗಗೊಳಿಸಿ ಆಮೇಲೆ ಎರಡನೆಯ ಕೃಷ್ಟಿಗತಾನುಭಾಗವನ್ನು ಭಾವಿಸುತ್ತ ಬಾದರ ಸಾಂಪರಾಯ ಕೃಷ್ಟ್ಯನುಭಾಗವನ್ನು ಅನಂತಗುಣಹಾನಿ ರೂಪದಿಂದ ತುಂಡಿಸಿ ಸೂಕ್ಷ್ಮ

ಸಂಜ್ವಳನಮಂ ಕಿಡಿಸಿ ಸಾಮಾಯಿಕಚ್ಛೇದೋಪಸ್ಥಾಪನಾಶುದ್ಧಿಸಂಯಮಸಮೇತಾನಿವೃತ್ತಿಕರಣಕ್ಷಪಕ ಗುಣಸ್ಥಾನಮಂ ದಾಂಟಿ ಸಮನಂತರದಿಂ ಸೂಕ್ಷ್ಮಸಾಂಪರಾಯಸಂಯಮೋಪಯುಕ್ತ ಸೂಕ್ಷ್ಮಸಾಂಪ ರಾಯಕ್ಷಪಕನಾಗಿ,

ಪ್ರಕಟಂ ಯಥೋಕ್ತಪರಿಣಾ ।
ಮಕಾಲದಿಂ ಕಟಿಪಿ ಸೂಕ್ಷ್ಮ ಲೋಭಕಷಾಯ ॥
ಪ್ರಕೃತಿಯುಮನಷ್ಟವಿಂಶತಿ ।
ವಿಕಲ್ಪರಿಪುಮೋಹನೀಯಬಲಮಂ ಗೆಲ್ದಂ ॥ ೭೨

ಅನಂತರಂ ವಿಗತರಾಗದ್ವೇಷಭಾವಿಸಂಭಾವಿತಯಥಾಖ್ಯಾತಚಾರಿತ್ರ ಪವಿತ್ರಕ್ಷೀಣಕಷಾಯವೀತ ರಾಗಛದ್ಮಸ್ಥಸಂಯತಗುಣಸ್ಥಾನಮಂ ಕರಣಲಬ್ಧಿಯ ಪರಮಪ್ರಕರ್ಷದಿಂ ಪಡೆದು ಶುದ್ಧ ನಿಶ್ಚಯ ನಯದಿಂ ಸ್ಪರ್ಶರಸಗಂಧವರ್ಣದೂರಮುಂ ಕಾರಣಸಮಯಸಾರಮುಮನಾದ್ಯನಿಧನಚೈತನ್ಯಮಯಮುಮಪ್ಪ ನಿಜನಿರಂಜನಪರಮಾತ್ಮ ಜ್ಯೋತಿಯೊಂದನೆ ನಿರ್ವಿಕಲ್ಪಕನಿಶ್ಚಯಭಾವಂ ಶ್ರುತಜ್ಞಾನದಿನವಳಂಬಿಸಿ ನಿಶ್ಚಳಮಾಗಿರ್ಪ

ಕೇವಲಮೇಕತ್ವವಿತ ।
ರ್ಕಾವೀಚಾರದ್ವಿತೀಯಶುಕ್ಲಧ್ಯಾನ ॥
ಶ್ರೀವಿಳಸನದಿಂ ಮಾಡು ।
ತ್ತಾ ವಿಭು ಬಹಳಪ್ರದೇಶನಿರ್ಜರೆಗಳುಮಂ ॥ ೭೩

ಆ ಗುಣಸ್ಥಾನದುಪಾಂತ್ಯಸಮಯದೊಳ್ ನಿದ್ರಾಪ್ರಚಲೆಗಳಂ ಕಿಡಿಸಿ ಚರಮಸಮಯ ದೊಳೊರ್ಮೊದಲೊಳೆ

ಸಾಂಪರಾಯ ಕೃಷ್ಟಿಗಳನ್ನು ಮಾಡುತ್ತ ಅಂತರ್ಮುಹೂರ್ತಕಾಲದಲ್ಲಿ ಬಾದರಲೋಭ ಸಂಜ್ವಲನವನ್ನು ಕೆಡಿಸಿ, ಸಾಮಾಯಿಕಚ್ಛೇದೋಪಸ್ಥಾಪನಾಶುದ್ಧಿ ಸಂಯಮ ಸಮೇತವಾಗಿ ಅನಿವೃತ್ತಿಕರಣ ಕ್ಷಪಕಗುಣಸ್ಥಾನವನ್ನು ದಾಟಿ ಬಳಿಕ ಸೂಕ್ಷ್ಮ ಸಾಂಪರಾಯ ಸಂಯಮದಿಂದ ಕೂಡಿದ ಸೂಕ್ಷ್ಮಸಾಂಪರಾಯ ಕ್ಷಪಕನಾಗಿ– ೭೨. ಯಥೋಕ್ತ ಪರಿಣಾಮ ಕಾಲದಿಂದ ಸೂಕ್ಷ್ಮ ಲೋಭ ಕಷಾಯ ಪ್ರಕೃತಿಯನ್ನೂ ಇಪ್ಪತ್ತೆಂಟು ತೆರನಾದ ಮೋಹನೀಯಕರ್ಮವನ್ನು ಗೆದ್ದನು. ವ॥ ರಾಗದ್ವೇಷ ವಿರಹಿತವಾದ ಚಾರಿತ್ರ ಪವಿತ್ರವಾದ ಕ್ಷೀಣಕಷಾಯ ವೀತರಾಗಛದ್ಮಸ್ಥ ಸಂಯುತ ಗುಣಸ್ಥಾನವನ್ನು ಕರಣಲಬ್ಧಿಯ ಪ್ರಕರ್ಷದಿಂದ ಪಡೆದು, ಶುದ್ಧನಿಶ್ಚಯ ನಯದಿಂದ ಸ್ಪರ್ಶರಸ ಗಂಧವರ್ಣದೂರವೂ ಕಾರಣಸಮಯಸಾರವೂ ಅನಾದ್ಯನಿಧನ ಚೈತನ್ಯಮಯವೂ ಆದ ನಿರಂಜನ ಪರಮಾತ್ಮ ಜ್ಯೋತಿಯೊಂದನ್ನೆ ನಿರ್ವಿಕಲ್ಪ ನಿಶ್ಚಯಭಾವನಾಗಿ ಶ್ರುತಜ್ಞಾನದಿಂದ ಅವಲಂಬಿಸಿ ನಿಶ್ಚಲವಾಗಿರುವ– ೭೩. ಕೇವಲ ಏಕತ್ವವಿತರ್ಕಾವೀಚಾರ ದ್ವಿತೀಯ ಶುಕ್ಲಧ್ಯಾನವನ್ನು ಮಾಡುತ್ತ ಆ ಪ್ರಭು ಬಹಳ ನಿರ್ಜರೆಗಳನ್ನು ಮಾಡುತ್ತ ವ॥ ಆ ಗುಣದ ಉಪಾಂತ್ಯ ಸಮಯ ದಲ್ಲಿ ನಿದ್ರಾಪ್ರಚಲೆಗಳನ್ನು ನಾಶಮಾಡಿ ಚರಮಸಮಯದಲ್ಲಿ ಒಮ್ಮೆಲೆ–

ತವಿಸಿದನೆಯ್ದೆ ಮತಿಶ್ರುತ ।
ಮವಧಿಮನಃಪರ್ಯಯಾಹ್ವಯಂ ಕೇವಳಮೆಂ ॥
ಬಿವಱಾವರಣಮನಯ್ದುಮ ।
ನವದಾತಚರಿತ್ರನಿರತನಾತ್ಮೈಕರತಂ ॥ ೭೪

ನಿಧನಮನೆಯ್ದಿಸಿದಂ ಸುಗು ।
ಣಧನಂ ತತ್ತ್ವೈಕಸಾಧನಂ ವಿಜಿತಾರಿ ॥
ಪ್ರಧನಂ ಚಕ್ಷುರಚಕ್ಷುರ ।
ವಧಿಕೇವಳದರ್ಶನಾವರಣಮಂ ನಾಲ್ಕಂ ॥ ೭೫

ವಿಭು ದಾನಲಾಭಭೋಗೋ ।
ಪಭೋಗವೀರ್ಯಾಂತರಾಯಪಂಚಕಮಂ ವೀ ॥
ತಭಯಂ ಲಯಕ್ಕೆ ಸಲಿಸಿದ ।
ನಭೂತಪೂರ್ವಪ್ರಭಾವನತಿಶಯವಿಭವಂ ॥ ೭೬

ಅಂತು ಘಾತಿಚತುಷ್ಟಯಕ್ಕಂ ಕದಳೀಘಾತಂ ಮಾಡಲೊಡಂ

ಪದೆಪಂ ಸಂಯುತಚಕ್ರಮೆಯ್ದೆ ಲಯಮಂ ಘಾತ್ಯಂಧಕಾರಂ ಪ್ರತಾ ।
ಪದ ಪೆಂಪೊಂದಿರೆ ರಾಗಮಂ ಪಡೆಯೆ ಸದ್ಭವ್ಯಾಶಯಾದ್ಯಾಶೆ ಮಾಂ ॥
ದದ ಕುಂದಂ ಕುಮುದೋತ್ಪಳಂ ತಳೆಯೆ ತಚ್ಚಂದ್ರಪ್ರಭಪ್ರಾಜ್ಞಗೇಂ ।
ದ್ರದೊಳಂದಾದುದು ಕೇವಳಾವಗಮಭಾಸ್ವದ್ಭಾನುಬಿಂಬೋದಯಂ ॥ ೭೭

೭೪. ಮತಿ, ಶ್ರುತ, ಅವಧಿ, ಮನಃಪರ್ಯಯ, ಕೇವಲವೆಂಬ ಈ ಜ್ಞಾನಗಳಿಗೆ ಇದ್ದ ಐದೂ ಆವರಣಗಳನ್ನು ಆ ಮಹಾತ್ಮನು ನಾಶಮಾಡಿದನು. ೭೫. ಬಳಿಕ ಚಕ್ಷು, ಅಚಕ್ಷು, ಅವಧಿ ಮತ್ತು ಕೇವಲ ದರ್ಶನಾವರಣವೆಂಬ ನಾಲ್ಕನ್ನೂ ಆ ತತ್ವಸಾಧಕನು ಲೋಪಗೊಳಿಸಿದನು. ೭೬. ದಾನಲಾಭ ಭೋಗೋಪಭೋಗ ವೀರ್ಯಾಂತರಾಯಗಳನ್ನು ಅಭೂತಪೂರ್ವ ಸಾಮರ್ಥ್ಯವುಳ್ಳ ಆತನು ಲಯಗೊಳಿಸಿದನು. ವ॥ ಹೀಗೆ ನಾಲ್ಕು ಘಾತಿಕರ್ಮಗಳನ್ನೂ ನಿರ್ಮೂಲ ಮಾಡಲಾಗಿ– ೭೭. ಯೋಗಿಗಳೆಂಬ ಚಕ್ರವಾಕಗಳು ಸಂತೋಷಪಡಲಾಗಿ, ಘಾತಿಕರ್ಮಗಳೆಂಬ ಅಂಧಕಾರಲಯವಾಗಲಾಗಿ, ತಪಸ್ಸೆಂಬ ಪ್ರಕಾಶವು ಹೆಚ್ಚಳವನ್ನು ಪಡೆಯಲಾಗಿ, ಸದ್ಭಕ್ತಸಮೂಹವೆಂಬ (ಪೂರ್ವ) ದಿಕ್ಕು ರಾಗ "(೧. ಕೆಂಬಣ್ಣ, ೨. ಪ್ರೀತಿ)ವನ್ನು ಹೊಂದಲಾಗಿ, ಕುಮುದ" (ದುಷ್ಟರ ಉತ್ಸಾಹ) ವೆಂಬ ಕನ್ನೈದಿಲೆಗಳು ಕುಂದಲಾಗಿ, ಚಂದ್ರಪ್ರಭನೆಂಬ ಪೂರ್ವಾಚಲದಲ್ಲಿ

ಅನಘಂಗೆ ಕೇವಲಜ್ಞಾ।
ನನೇತ್ರಮುನ್ಮೀಳಿಸಿತ್ತು ಸರ್ವಗತಂ ಫಾ ॥
ಲ್ಗುನಮಾಸಬಹುಳಸಪ್ತ।
ಮ್ಯನುರಾಧೆಯೊಳೊಂದಿ ಸಂದ ಸಾಯಂತನದೊಳ್ ॥ ೭೮

ಸಮಸಂದ ಮತಿಶ್ರುತಮವ।
ಧಿಮನಃಪರ್ಯಾಯಮೆನಿಪ್ಪವುಬಿದಿರೆ ತನ್ನೊಳ್ ॥
ಕ್ರಮಕರಣವ್ಯವಧಾನ।
ಪ್ರಮುಕ್ತಮೆಸೆದತ್ತು ವಿಮಳಕೇವಳಬೋಧಂ ॥ ೭೯

ಸುರಶಿಖರಿ ಭಾಸ್ವರಜ್ಯೋ।
ತಿರಂಗಮಂ ಜಳಧಿ ವಿಮಳಮಣಿಯಂ ಗಗನಂ ॥
ಸ್ಫುರದಿಂದುವನಾಂತಂತಿರೆ।
ಪರಮಂ ಕೈವಲ್ಯಬೋಧಮಂ ತಳೆದೆಸೆದಂ ॥ ೮೦

ಮತ್ತಂ ತತ್ಸಮಯದೊಳ್ ಲಬ್ಧಕ್ಷಾಯಿಕಸಮ್ಯಕ್ತ್ವಾದಿ ನವಕೇವಳಲಬ್ಧಿಯಾಗೆ,

ಆಧ್ಯಾತ್ಮಿಕಮೆನಿಸಿದ ಶು।
ಕ್ಲಧ್ಯಾನಮೆ ಬಳೆದು ಪೊಱಗೆ ಬಳಸಿದುದೆನೆ ವಿ ॥
ಶ್ವದ್ಯೇಯನ ಚರಮಾಂಗದೊ।
ಳಧ್ಯಾಸಿತಮಾಯ್ತು ಮೆಯ್ಯ ದೀಪ್ತಿನಿಕಾಯಂ ॥ ೮೨

ಅಂದು ಕೇವಲಜ್ಞಾನವೆಂಬ ಸೂರ್ಯಬಿಂಬ ಉದಯವಾಯಿತು ೭೮. ಫಾಲ್ಗುಣ ಮಾಸ ಬಹುಳ ಸಪ್ತಮೀ ಅನುರಾಧಾ ನಕ್ಷತ್ರದಲ್ಲಿ ಸಾಯಂಕಾಲ ಸಮಯಕ್ಕೆ ಆ ಪರಿಶುದ್ಧ ಮಹಾತ್ಮನಿಗೆ ಸರ್ವಗತವಾದ ಕೇವಲ ಜ್ಞಾನದೃಷ್ಟಿ ಒದಗಿತು. ೭೯. ಮತಿ, ಶ್ರುತ, ಅವಧಿ, ಮನಃಪರ್ಯಾಯವೆಂಬುವು ಉಳಿದಿರಲಾಗಿ ಕ್ರಮಕರಣ ವ್ಯವಧಾನದಿಂದ ಮುಕ್ತವಾಗಿ ಶುದ್ಧಕೇವಲಜ್ಞಾನವು ಶೋಭಿಸಿತು. ೮೦. ಮೇರು ಪರ್ವತವು ಉಜ್ವಲವಾದ ಜ್ಯೋತಿರಂಗವನ್ನು, ಸಾಗರವು ನಿರ್ಮಲರತ್ನವನ್ನು, ಆಕಾಶವು ತಳತಳಿಸುವ ಚಂದ್ರನನ್ನು ಹೊಂದಿದಂತೆ ಪರಮೇಶ್ವರನು ಕೈವಲ್ಯಜ್ಞಾನವನ್ನು ಹೊಂದಿ ಶೋಭಿಸಿದನು. ವ॥ ಅದೇ ಸಮಯದಲ್ಲಿ ಲಬ್ಧಕ್ಷಾಯಿಕ ಸಮ್ಯಕ್ತ್ವಾದಿ ಒಂಬತ್ತು ಕೇವಲಲಬ್ಧಿಯಾಗಲಾಗಿ ೮೨. ಆಧ್ಯಾತ್ಮಿಕವಾದ ಶುಕ್ಲಧ್ಯಾನವೆ ಬೆಳೆದು ಹೊರಮೈಯನ್ನೂ ಸುತ್ತುವರಿಯಿತೊ ಏನೊ ಎಂಬಂತೆ ಆ ವಿಶ್ವಪೂಜ್ಯನ ಚರಮಾಂಗ

---

ಸಿರಿಸಾರದೆಯರ್ ಸಹಬಂ।
ಧುರರುಚಿಸಂಪೂರ್ಣಚಂದ್ರನಮೃತಾಕರನೊಳ್ ॥
ಮೆಱೆವಂತನಂತಲಕ್ಷ್ಮೀ।
ಪರಮಶ್ರೀಚಂದ್ರನಾಥನೇನೊಪ್ಪಿದನೋ ॥ ೮೧
ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರ ಇದೆ; ಗ್ರಂಥಕರ್ತನದಲ್ಲದೆಂದು ತೋರುತ್ತದೆ.

ಅಂತು ಯುಗಪತ್ಸಮುದಿತಸಹಸ್ರಸಹಸ್ರಪ್ರಭಪ್ರಭಾಭಾಸುರಪರಮೌದಾರಿಕಶರೀರಂ ಪಂಚ ಶತಚಾಪೋತ್ಸೇಧಮಾ ಗಗನಕ್ಕೆ ನೆಗೆಯಲೊಡಮಮರೇಂದ್ರಾಸನಕಂಪದೊಡನೆ

ವನಭವನಜ್ಯೋತಿರ್ಲೋ।
ಕನಾಕಮೆಂಬಿವಱೊಳೆಯ್ದೆ ಭೇರೀಶಂಖ ॥
ಸ್ವನಮುಂ ಗಜಾರಿಘಂಟಾ।
ಧ್ವನಿಗಳುಮಕೃತಂಗಳೊಗೆದುವಿರದೊರ್ಮೊದಲೊಳ್ ॥ ೮೩

ಲೋಕತ್ರಯವರ್ತನಮುಮ।
ನಾ ಕೇವಳಬೋಧನೇಕಸಮಯದೊಳಿಂತ ॥
ವ್ಯಾಕುಳಮಱಿವವೊಲಱಿದಂ।
ಲೋಕತ್ರಯಮಂ ತದುದಯಮಂ ತತ್ಕ್ಷಣದೊಳ್ ॥ ೮೪

ಪಾತಾಳಾವಸಥಂ ಮಹಾವನಸಮೂಹಂ ಸ್ವರ್ವಿಮಾನೋತ್ಕರಂ।
ಜ್ಯೋತಿರ್ಲೋಕಮಿವೆಯ್ದೆ ಪಾೞಿನಿಸಿ ಬಂದತ್ತಾವಗಂ ತತ್ಫಣಿ।
ವ್ರಾತಂ ವ್ಯಂತರದೇವಸಂತತಿ ದಿವೌಕಸ್ಸಂಕುಳಂ ಚಂಕನತ್।
ಜ್ಯೋತಿಷ್ಕಾವಳಿ ಕೇವಳಾವಗಮಕಲ್ಯಾಣೋತ್ಸವೋತ್ಸುಕ್ಯದಿಂ ॥ ೮೫

ಗಗನಮನಂತಮೆಂಬ ನುಡಿ ಸತ್ಯಮದಲ್ಲದೊಡೆಯ್ದೆ ಬರ್ಪ ದೇ।
ವಗಣದನೂನಯಾನನಿಕರಕ್ಕೆ ವಿಭೂಷಣರತ್ನ ರಶ್ಮಿರಾ ॥

ದಲ್ಲಿ ಉದ್ದೀಪ್ತವಾದ ಕಾಂತಿ ನೆಲೆಗೊಂಡಿತು. ವ॥ ಅದೇ ಕಾಲಕ್ಕೆ ಉಂಟಾದ ಸಹಸ್ರ ಸೂರ್ಯಪ್ರಭೆಯಿಂದ ಬೆಳಗುವ ಪರಮೌದಾರಿಕವಾದ ಐನೂರು ಬಿಲ್ಲಳತೆಯ ಶರೀರವುಳ್ಳವನಾಗಿ ಆಕಾಶಕ್ಕೆ ಒಮ್ಮೆಲೆ ನೆಗೆದನು. ಕೂಡಲೆ ಇಂದ್ರನಿಗೆ ಆಸನಕಂಪವಾಯಿತು ಮತ್ತು– ೮೩. ವನಭವನ ಜ್ಯೋತಿರ್ಲೋಕನಾಕವೆಂಬ ಲೋಕಗಳಲ್ಲಿ ಭೇರಿ, ಶಂಖ ಧ್ವನಿಗಳೂ ಸಿಂಹ ಘಂಟಾಧ್ವನಿಗಳೂ ತಮ್ಮಿಂದ ತಾವಾಗಿ ಹೊಮ್ಮಿದುವು. ೮೪. ಲೋಕತ್ರಯ ವರ್ತನವನ್ನು ತಿಳಿಯುವಂತೆ ಇಂದ್ರನು ಅವಧಿ ಜ್ಞಾನದಿಂದ ಜಿನನಿಗೆ ಕೇವಲಜ್ಞಾನವಾದುದನ್ನು ಅರಿತನು. ೮೫. ಪಾತಾಳನಿವಾಸ, ಮಹಾವನಸಮೂಹ ಸ್ವರ್ಗದ ವಿಮಾನ ಸಮುದಾಯ, ಜ್ಯೋತಿರ್ಲೋಕಗಳು ಹಾಳುಬಿದ್ದುವೊ ಏನೊ ಎಂಬಂತೆ ಒಬ್ಬರೂ ಉಳಿಯದೆ ಅಲ್ಲಿಯ ನಾಗರು, ವ್ಯಂತರರು, ನಾಕವಾಸಿಗಳು ಜ್ಯೋತಿಷ್ಕರು ಎಲ್ಲರೂ ಕೇವಲಾ ಗಮ ಕಲ್ಯಾಣೋತ್ಸವಕ್ಕಾಗಿ ಉತ್ಸಾಹದಿಂದ ನೆರೆದರು. ೮೬. ಆಕಾಶವು ಅನಂತ ವೆಂಬ ಮಾತು ಸತ್ಯವಲ್ಲ, ಹಾಗಿದ್ದರೆ, ನಿರ್ಭರವಾಗಿ ಬರುತ್ತಿರುವ ದೇವ ಸಮೂಹದ ಸಂಚಾರಕ್ಕೆ, ಅವರ ಆಭರಣ ರತ್ನಗಳ ಪ್ರಭೆಗೆ, ನಾನಾ ವಿಧವಾದ

ಜಿಗೆ ವಿವಿಧಧ್ವಜಪ್ರತತಿಗಿದ್ಧಚತುರ್ವಿಧವಾದ್ಯನಿಸ್ವನಾ ।
ನುಗಜಯಜೀವನಂದತುಮುಲಧ್ವನಿಗಿಂತೆಡೆಯಾಗಿ ತೋರ್ಕುಮೇ ॥ ೮೬

ಅನ್ನೆಗಂ,

॥ ಮಂದ್ರಾಕಾಂತೆ ॥

ವ್ಯಾಧೂತೋದ್ಯಚ್ಚಮರಜಮಿಳನ್ಮೌಳಿಭೂಷಾಮಣಿಶ್ರೀ ।
ಣೀಧಾಮೋದ್ಯೋತಿತದಶದಿಶಂ ಜೈನಕೈವಲ್ಯಕಲ್ಯಾ ॥
ಣಾಧೀನಾತ್ಮಂ ಸುರಪರಿವೃಢಂ ಸಿಂಧುರೇಂದ್ರಾಧಿರೂಢಂ ।
ಸೌಧರ್ಮೇಂದ್ರಂ ಶಚಿವೆರಸು ಬಂದಂ ಮಹಾನಂದದಿಂದಂ ॥ ೮೭

ತ್ರಿದಶಸ್ತ್ರೀಚಯಮುದ್ಧಶೋಣಮಣಿದೀಪಶ್ರೇಣಿಯಂ ಪಾರಿಜಾ ।
ತದಳತ್ಪುಷ್ಪಕದಂಬಮಂ ವಿವಿಧರತ್ನಾಮತ್ರಸಂದೋಹಮಂ ॥
ಮುದದಿಂ ತಾಳ್ದಿ ಬರುತ್ತೆ ಮತ್ತೆ ತಳೆದತ್ತಿತ್ತಾವಗಂ ಜ್ಯೋತಿರಂ ।
ಗದ ಮಾಲ್ಯಾಂಗದ ಭಾಜನಾಂಗದ ಚಳಚ್ಛಾಖಾವಳೀಲೀಲೆಯಂ ॥ ೮೮

ಪೊಳೆವೆಳಮಿಂಚುಗಳಂಬರ ।
ತಳದೊಳ್ ಮಿಳಿರ್ವಂತೆ ದಿವಿಜನರ್ತಕಿಯರ್ ಗೊಂ ॥
ದಳದಿಂದೆ ಗೀತವಾದ್ಯಂ ।
ಗಳ ಲಯದಿಂ ನರ್ತಿಸುತ್ತೆ ಬಂದರ್ ಪಲರುಂ ॥ ೮೯

ಅಂತು ನಭೋವಿಭಾಗಮೆಲ್ಲಂ ಚಂದ್ರಮಂಡಲಮಯಮುಂ, ದಿಶಾಪ್ರದೇಶಮೆಲ್ಲಂ ಸುರಶರಾಸನಮಯಮುಂ, ವಸುಧಾವಳಯಮೆಲ್ಲಂ ತಾರಕಾಮಯಮುಮಾದುದೆಂಬಂತಿರೆತ್ತಿದ ಮುತ್ತಿನ ಸತ್ತಿಗೆಯ ಮೊತ್ತಮುಂ, ಪಸರಿಸಿದ ಪಲತೆಱದ ಮಣಿದೊಡವುಗಳ ಬೆರಕೆವೆಳಗುಗಳ ಬಳಗಮುಂ,

ಧ್ವಜ ಸಮುದಾಯಕ್ಕೆ, ಚತುರ್ವಿಧ ವಾದ್ಯನಿಸ್ವನಕ್ಕೆ, "ಜಯು", "ಜೀವ", "ನಂದ" ಎಂಬ ಕೋಲಾಹಲ ಧ್ವನಿಗೆ ಇದು ಹಿಡಿಸಲಾರದೆಂದು ತೋರುವುದೆ ? ಅಷ್ಟರಲ್ಲಿ- ೮೭. ಬೀಸುತ್ತಿರುವ ಚಾಮರಗಳ ಹೊಳಪಿನೊಡನೆ ಕಿರೀಟದ ಕಾಂತಿಯೂ ಕೂಡಿ ದಶ ದಿಕ್ಕುಗಳನ್ನು ಬೆಳಗುತ್ತಿರಲಾಗಿ, ಆನೆಯನ್ನೇರಿ, ಶಚಿಯೊಡನೆ ದೇವೇಂದ್ರನು ಮಹಾನಂದದಿಂದ ಕೇವಲ ಕಲ್ಯಾಣೋತ್ಸವಕ್ಕಾಗಿ ಬಂದನು. ೮೮. ದೇವಾಂಗನೆಯರು, ಮಾಣಿಕ್ಯದೀಪ ಸಮೂಹವನ್ನು, ಪಾರಿಜಾತ ಪುಷ್ಪಗಳ ರಾಶಿಯನ್ನು ವಿವಿಧ ರತ್ನಪಾತ್ರ ಸಂಚಯವನ್ನು ಅಳವಡಿಸಿಕೊಂಡು ಬರುತ್ತಿರುವಾಗ ಜ್ಯೋತಿರಂಗ, ಮಾಲ್ಯಾಂಗ, ಭಾಜನಾಂಗವೆಂಬ ಕಲ್ಪವೃಕ್ಷಗಳ ಶಾಖೆಗಳೊ ಏನೊ ಎಂಬಂತೆ ಕಂಗೊಳಿಸಿದರು. ೮೯. ಆಕಾಶಮಂಡಲದಲ್ಲಿ ಎಳೆಯ ಮಿಂಚುಗಳು ಚಂಚಲವಾಗಿ ಸಂಚಲಿಸುವಂತೆ ದೇವನರ್ತಕಿಯರು ಮೇಳವಾಗಿ ಗೀತವಾದ್ಯ ಗಳ ಲಯಕ್ಕೆ ನರ್ತಿಸುತ್ತ ಬಂದರು. ವ॥ ಹೀಗೆ ಆಕಾಶಭಾಗವೆಲ್ಲ ಚಂದ್ರಬಿಂಬ ಮಯವೂ ದಿಕ್ ಪ್ರದೇಶವೆಲ್ಲ ಇಂದ್ರಧನುಮಯವೂ, ಭೂಮಂಡಲವೆಲ್ಲ ತಾರಕಾ ಮಯವೂ ಆಯಿತೆಂಬಂತೆ ಎತ್ತಿದ ಛತ್ರಗಳ ಸಮೂಹವೂ ಪಸರಿಸಿದ ಹಲವು

ಅಲ್ಲೊಕ್ಕಪುಷ್ಪವೃಷ್ಟಿಯ ಪಾರಿಜಾತದರಲ ನೆರವಿಯುಂ, ಅತ್ತೆತ್ತಲುಮತ್ಯಂತಶೋಭಾವಳಂಬ ಮಾಗೆ ಚತುರ್ನಿಕಾಯಾಮರಸಮನ್ವಿತಂ ಬಂದು ಮುನ್ನಮೆ ತನ್ನ ಬೆಸದಿಂ ವೈಶ್ರವಣನಶ್ರಾಂತಭಕ್ತಿಯಿಂ ಸಮೆದ ಸಮವಸರಣಮಂಡಳಮನಾಖಂಡಳಂ ಪೊಕ್ಕು, ತನ್ಮಧ್ಯಸ್ಥಿತೋತ್ತುಂಗಸಿಂಹಾಸನಮನಳಂ ಕರಿಸಿರ್ದ ಭುವನತ್ರಯಜ್ಯಾಯನಂ ತ್ರಿಪ್ರದಕ್ಷಿಣಂಗೆಯ್ದು ನಿಟಿಳನಿಹಿತ ಮುಕುಳಿತಕರಸರೋಜನಾಗಿ

॥ ಪೃಥ್ವೀವೃತ್ತಂ ॥

ಸ್ತವಾವಳಿಗೆ ವಾಙ್ಮಯಂ ಸ್ಮೃತಿಗೆ ತಾಂ ಮನೋವೃತ್ತಿಯೆಂ ।
ಬಿವಾರಯೆ ಸಮನ್ತುಪಾಯಮೆನಿಸಿರ್ದುವಿರ್ದಂದುಮೇಂ ॥
ಅವಾಙ್ಮನಸಗೋಚರಂ ದಿಟಕೆ ನೀಂ ಬಟಿಕ್ಕಾವುದೀ ।
ಭವಚ್ಚರಣಸೇವೆಯೊಳ್ ಕ್ರಿಯೆ ಜಿನೇಂದ್ರಚಂದ್ರಪ್ರಭಾ ॥ ೯೦

ಕಷಾಯಕಲುಷಾತ್ಮರಂ ಬಗೆದು ದೇವರೆಂದಾವಗಂ ।
ವಿಷಾದವಿಕಳತ್ವಮಂ ತಳೆವರನ್ಯರಜ್ಞಾನದಿಂ ॥
ನಿಷೇವ್ಯಜಳಮೋಹದಿಂ ಮರುಮರೀಚಿಯಂ ಪೊರ್ದುವಾ ।
ತೃಷಾರ್ತಮೃಗಜಾಳದಂದದೆ ಜಿನೇಂದ್ರಚಂದ್ರಪ್ರಭಾ ॥ ೯೧

ಅವಾರ್ಯಕುಮತಾವಳೀವಿಷಮನಕ್ರಚಕ್ರಾಕುಳಂ ।
ಭವಾಂಬುನಿಧಿ ದಾಂಟಲೆಂದರೆಬರಂತದಂ ಸಾರ್ವುದುಂ ॥
ಭವನ್ಮತಬಹಿತ್ರಮಂ ತಳೆದು ಕರ್ಣಧಾರತ್ವಮಂ ।
ನಿವೇದಿಸಿ ಸುಮಾರ್ಗಮಂ ಪೊರೆ ಜಿನೇಂದ್ರಚಂದ್ರಪ್ರಭಾ ॥ ೯೨

ಬಗೆಯ ರತ್ನಾಭರಣಗಳ ಮಿಶ್ರಪ್ರಭೆಗಳೂ, ಪುಷ್ಪವೃಷ್ಟಿಯಿಂದ ನೆಲದಲ್ಲೆಲ್ಲ ಹರಡಿದ ಪಾರಿಜಾತ ಪುಷ್ಪಗಳೂ ಎತ್ತೆತ್ತಲೂ ಶೋಭಿಸುತ್ತಿರಲಾಗಿ ಚತುರ್ನಿಕಾಯ ದೇವತೆಗಳೊಡನೆ ಬಂದು ಇಂದ್ರನು ಮುಂಚೆಯೆ ತನ್ನಾಜ್ಞೆಯಿಂದ ಕುಬೇರನು ಅವಿಶ್ರಾಂತ ಭಕ್ತಿಯಿಂದ ನಿರ್ಮಿಸಿದ್ದ ಸಮವಸರಣ ಮಂಡಪವನ್ನು ಪ್ರವೇಶಮಾಡಿ ಅದರ ಮಧ್ಯದಲ್ಲಿದ್ದ ಉನ್ನತ ಸಿಂಹಾಸನದಲ್ಲಿ ಮಂಡಿಸಿದ್ದ ತ್ರಿಲೋಕಗುರುವನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಮುಗಿದ ಕೈಗಳನ್ನು ಹಣೆಗಿಟ್ಟುಕೊಂಡು– ೯೦. "ಸ್ತೋತ್ರಕ್ಕೆ ವಾಙ್ಮಯ, ಸ್ಮರಣೆಗೆ ಮನಸ್ಸು ಸಾಧನಗಳಾಗಿವೆ. ಆದರೆ ಅವೆರಡೂ ಏನು ಪ್ರಯೋಜನ? ಮಾತಿಗಾಗಲಿ ಮನಸ್ಸಿಗಾಗಲಿ ನೀನು ನಿಲುಕುವವನಲ್ಲ. ಜಿನೇಂದ್ರ ಚಂದ್ರಪ್ರಭನೆ, ನಿನ್ನ ಚರಣಸೇವೆಗೆ ನಮಗೆ ಹಾದಿಯಿನ್ನಾವುದು? ಹೇಳು. ೯೧. ಕುಡಿಯಲು ದೊರೆಯುವ ನೀರೆಂದು ಬಿಸಿಲ್ಗುದುರೆಯನ್ನು ಬೆಂಬತ್ತಿ ಹೋಗುವ ತೃಷಾರ್ತ ಜಿಂಕೆಗಳ ಹಿಂಡಿನಂತೆ ಹೆರವರು, ದೇವರೆಂಬ ಭ್ರಮೆಯಿಂದ ಕಷಾಯ ಕಲುಷಿತರನ್ನು ಆಶ್ರಯಿಸಿ ವಿಷಾದಪಡುವರು. ೯೨. ಅನಿವಾರ್ಯವೆನಿಸಿದ ಕುಮತಗಳೆಂಬ ಮೊಸಳೆಗಳಿಂದ ತುಂಬಿದ ಸಂಸಾರ ಸಮುದ್ರವನ್ನು ದಾಟಲೆಂದು ಕೆಲವರು ನಿನ್ನ ಮತವೆಂಬ ನೌಕೆಯನ್ನು ಆಶ್ರಯಿಸುವರು. ಜಿನೇಂದ್ರ ಚಂದ್ರಪ್ರಭನೆ, ನೀನು ಕರ್ಣ

ಜರತ್ತೃಣಜುಗುಪ್ಸೆಯಿಂ ಬಿಸುಟಹೀಂದ್ರಮರ್ತ್ಯೇಂದ್ರನಿ ।
ರ್ಜರೇಂದ್ರಪದಮಂ ಪದಾನತರ್ಗೆ ಮತ್ತೆ ನೀನೀವುದೇಂ ।
ಕರಂ ಬಗೆಯೆ ಚೋದ್ಯಮೇ ಬಯಸಿ ತಾಳ್ದಿದಾರ್ಹಂತ್ಯಮಂ ।
ನಿರಾಕುಳಿತಮೀವೆಯೆಂದೊಡೆ ಜಿನೇಂದ್ರಚಂದ್ರಪ್ರಭಾ ॥ ೯೩

ಲಸತ್ಸಿತಸರೋಜಮಂ ಹಿಮಕರೋಪಳಾದರ್ಶಮಂ ।
ಪ್ರಸಿದ್ಧವಿಧುಬಿಂಬಮಂ ನೆಲೆಯಿವಲ್ಲವೆಂದೆಲ್ಲಮಂ ॥
ಬಿಸುಟ್ಟುಮವಿಕಾರದೊಳ್ ನೆಲಸಿದತ್ತು ತನ್ನಿಚ್ಚೆಯಿಂ ।
ಪ್ರಸನ್ನತೆ ನಿಜಾಸ್ಯದೊಳ್ ಸಲೆ ಜಿನೇಂದ್ರಚಂದ್ರಪ್ರಭಾ ॥ ೯೪

ತ್ವದೀಯ ತನುಚಿಂತೆಯಂ ಪಡೆಯೆ ನಿತ್ಯನೈಶ್ಚಿಂತ್ಯಮಂ ।
ತ್ವದೀಯಪದಪೂಜೆಯೊಳ್ ತೊಡರೆ ಲೋಕಪೂಜ್ಯತ್ವಮಂ ॥
ತ್ವದೀಯಗುಣಕೀರ್ತನಕ್ಕೆಳಸೆ ಕೀರ್ತಿಯಂ ನೀನೆ ಮಾ ।
ಣದೀವೆ ವಿಪರೀತಮಿಂತಿದು ಜಿನೇಂದ್ರಚಂದ್ರಪ್ರಭಾ ॥ ೯೫

ಸ್ಮರಂ ಸ್ಮರಣಮಾತ್ರದಿಂ ಪಡೆದನರ್ಧನಾರೀತ್ವಮಂ ।
ಹರಂಗೆ ದಿಟಮೆಂದೆ ನಿನ್ನೊಳಮಡುರ್ತಹಂಕಾರದಿಂ ॥
ವಿರೋಧಿಸಿ ಹತಪ್ರಭಂ ಸೆಡೆದನಂತೆ ದಲ್ ಕಾರಣಂ ।
ಪರಾಭವಕೆ ಗರ್ವಮಲ್ಲದೆ ಜಿನೇಂದ್ರಚಂದ್ರಪ್ರಭಾ ॥ ೯೬

ಪದಂ ನಿನಗೆ ಮುಕ್ತಿಯೊಂದೆ ಕುಡುತಿರ್ಪೆ ನೀನಂತದಂ ।
ಪದಾಶ್ರಿತರ್ಗೆ ಸಂತತಂ ಪಲರ್ಗೆ ಕೊಟ್ಟೊಡಂ ಮತ್ತೆ ತ ॥

ಧಾರನಾಗಿ, ಸರಿಯಾದ ಮಾರ್ಗವನ್ನು ತೋರಿ ಅವರನ್ನು ಕಾಪಾಡು. ೯೩. ನಾಗೇಂದ್ರ, ನರೇಂದ್ರ, ದೇವೇಂದ್ರ ಪದವಿಗಳನ್ನು ಒಣಗಿದ ಹುಲ್ಲುಕಡ್ಡಿಗೆ ಸಮನೆಂದು ಬಗೆದು ಬಿಸುಟು ಬಂದು ನಿನ್ನ ಪಾದಗಳ ಮೊರೆಹೊಕ್ಕವರಿಗೆ ನೀನು ದಯಪಾಲಿಸುವುದೇನು ? ನೀನು ಬಯಸಿ ಪಡೆದ ಅರ್ಹತ್ಪದವಿಯನ್ನೆ ಅವರಿಗೆ ಸಹಜವಾಗಿ ಕೊಟ್ಟುಬಿಡುವೆ. ೯೪. ಚೆಲುವಾದ ಬೆಳ್ದಾವರೆ, ಚಂದ್ರಕಾಂತದ ದರ್ಪಣ, ಪ್ರಸಿದ್ಧವಾದ ಚಂದ್ರಬಿಂಬ ಇವು ಯಾವುವೂ ತನಗೆ ಸರಿಯಾದ ನೆಲೆಯಲ್ಲವೆಂದು ಅವುಗಳನ್ನು ನಿರ್ವಿಕಾರವಾಗಿ ತ್ಯಜಿಸಿ ಪ್ರಸನ್ನತೆ ನಿನ್ನ ಮುಖದಲ್ಲಿಯೆ ಬಂದು ನೆಲಸಿತು. ೯೫. ನಿನ್ನ ಧ್ಯಾನಮಾಡಿದವರಿಗೆ ನಿತ್ಯ ನಿಶ್ಚಿಂತತೆಯನ್ನು, ನಿನ್ನ ಪಾದಪೂಜಕರಿಗೆ ಲೋಕಪೂಜ್ಯತೆಯನ್ನು, ನಿನ್ನ ಗುಣಸಂಕೀರ್ತನ ಮಾಡಿದವರಿಗೆ ಕೀರ್ತಿಯನ್ನು ನೀನೆ ಒದಗಿಸುವೆ. ಜಿನೇಂದ್ರ ಚಂದ್ರಪ್ರಭನೆ, ಇದು ವಿಪರೀತ ವಲ್ಲವೆ? ೯೬. ಮನ್ಮಥನು ಸ್ಮರಣಮಾತ್ರದಿಂದಲೆ ಶಿವನಿಗೆ ಅರ್ಧನಾರೀತ್ವವನ್ನುಂಟು ಮಾಡಿದನು. ಆ ಅಹಂಕಾರದಿಂದ ಅಬ್ಬರಿಸಿ ನಿನ್ನನ್ನು ವಿರೋಧಿಸಲಾಗಿ ಮದನನು ಶಕ್ತಿಗುಂದಿ ಹಿಮ್ಮೆಟ್ಟಬೇಕಾಯಿತು. ಜಿನೇಂದ್ರ ಚಂದ್ರಪ್ರಭನೆ ಗರ್ವಬರುವುದು ಪರಾಭವಕ್ಕೆಯೆ ಅಲ್ಲವೆ? ೯೭. ನಿನಗೆ ಇರತಕ್ಕ ಪದವೆಂದರೆ ಮೋಕ್ಷವೊಂದೆ. ಅದನ್ನೆ ನೀನು ನಿನ್ನ ಪಾದಾಶ್ರಯಿಗಳಿಗೆ ಕೊಡುತ್ತಿರುವೆ. ಸತತವಾಗಿ

ತ್ವದಚ್ಯುತಿಯದಿಲ್ಲ ನಿನ್ನೊಳಿದು ಚೋದ್ಯಮೇ ತ್ವತ್ಪ್ರಭಾ ।
ವದಿಂದೆ ದೊರೆಕೊಳ್ಳದಾವುದೊ ಜಿನೇಂದ್ರಚಂದ್ರಪ್ರಭಾ ॥ ೯೭

ಎಂದು ಸಮಸ್ತಾಮರಸಮೇತಂ ಸ್ತುತಿಗೆಯ್ದು ಮಾಣದೆ ಮತ್ತಂ,

ಸುಮನೋದಾಮಂಗಳಂ ಸಂಗಳಿಸು ಕನಕುಂಭಂಗಳಂ ತುಂಬು ತೀರ್ಥಾಂ
ಬು ಮನುದ್ಯದ್ಗಂಧಮಂ ಗಂಧಮನಳವಡಿಸುತ್ಕೃಷ್ಟಮಂ ಕೊಳ್ ಫಲವ್ರಾ ॥
ತಮನಾ ನೈವೇದ್ಯಮಂ ವರ್ಧಿಸು ಸರಭಿಲಸದ್ಧೂಪಮಂ ಕೂಡು ದೀಪೋ ।
ದ್ಗಮಮಂ ಮಾಡಕ್ಷತಕ್ಷಾಳನಮನೊಡರಿಸೆಂದಿಂದ್ರನಿಂದ್ರಾಣಿಗೆಂದಂ ॥ ೯೮

ಎನಲೊಡಮೊಡನೆ ತಂದವಟಯ್ಸಿದನೇಕದಿವ್ಯಾರ್ಚನಾದ್ರವ್ಯಂಗಳನಲ್ತೆವೆರಸರ್ಚಿಸಿಯುಮಿಂತು

ವರತೀರ್ಥಾಧೀಶಸೇವೋತ್ಸವದೊಳೆ ಮನಮಂ ತದ್ಗುಣಸ್ತೋತ್ರವೃತ್ತೋ ।
ತ್ಕರಪಾಠ ಪ್ರಸ್ತುತೋದ್ಯೋಗದೊಳೆ ವಚನಮಂ ತತ್ಪದಾಂಭೋಜಪೂಜಾ ॥
ಕರಣಪ್ರಾಚುರ್ಯಕಾರ್ಯಾಂತರದೊಳೆ ತನುವಂ ಯೋಜಿಸುತ್ತಿರ್ದನಿಂದ್ರಂ ।
ಪಿರಿದೊಂದಾನಂದದಿಂದಂ ಸುಕೃತಿ ಸಕಳಸಾಹಿತ್ಯ ವಿದ್ಯಾವಿನೋದಂ ॥ ೯೯

॥ ಗದ್ಯಂ ॥

ಇದು ಪರಮಪುರುನ್ನಾಥಕುಳಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಚಕ್ರವರ್ತಿ ಪದಪದ್ಮನಿಧಾನದೀಪವರ್ತಿ

**ಶ್ರೀಮದಗ್ಗಳದೇವ**

**ವಿರಚಿತಮಪ್ಪ**

## ಚಂದ್ರಪ್ರಭಪುರಾಣದೊಳ್

**ಕೇವಲಜ್ಞಾನೋದಯೋತ್ಸವಂ**

**ಚತುರ್ದಶಾಶ್ವಾಸಂ**

ಕೊಡುತ್ತಿದ್ದರೂ ನಿನ್ನ ಆ ಪದಕ್ಕೆ ಚ್ಯುತಿಯಿಲ್ಲ. ಇದು ಸೋಜಿಗವಲ್ಲವೆ ? ಜಿನೇಂದ್ರ ಚಂದ್ರಪ್ರಭನೆ, ನಿನ್ನ ಪ್ರಭಾವದಿಂದ ದೊರೆಯಲಾರದುದು ಯಾವುದು?" ವ॥ ಎಂದು ಸಕಲದೇವತಾಸಹಿತನಾಗಿ ಸ್ತುತಿಸಿ, ಮತ್ತೆ– ೯೮. "ಹೂಮಾಲೆಗಳನ್ನು ಅಣಿಗೊಳಿಸು ! ಸುಗಂಧವಾದ ತೀರ್ಥೋದಕವನ್ನು ಕಲಶಗಳಲ್ಲಿ ತುಂಬು; ಉತ್ಕೃಷ್ಟವಾದ ಗಂಧವನ್ನು ಅಳವಡಿಸು; ಫಲಾವಳಿಗಳನ್ನು ತೆಗೆದುಕೊಂಡು ಬಾ; ನೈವೇದ್ಯವನ್ನು ಬಡಿಸು; ಸುಗಂಧಧೂಪವನ್ನು ಇಡು; ದೀಪಗಳನ್ನು ತಂದಿಡು; ಅಕ್ಷತೆಗಳನ್ನು ತೊಳೆದು ಸಿದ್ಧಪಡಿಸು" ಎಂದು ಇಂದ್ರಾಣಿಗೆ ನುಡಿದನು. ವ॥ ಹಾಗೆ ನುಡಿದೊಡನೆ ತಂದುಕೊಟ್ಟ ಅನೇಕ ಪೂಜಾದ್ರವ್ಯಗಳಿಂದ ಹರ್ಷನಿರ್ಭರನಾಗಿ ಅರ್ಚಿಸಿ– ೯೯. ತೀರ್ಥಂಕರನ ಸೇವೋತ್ಸವದಲ್ಲಿ ಮನಸ್ಸನ್ನು, ಜಿನಗುಣಸ್ತೋತ್ರ ಪಾಠದಲ್ಲಿ ವಾಣಿಯನ್ನು, ಜಿನಪಾದ ಕಮಲಪೂಜೆಯ ಕಾರ್ಯದಲ್ಲಿ ದೇಹವನ್ನು ತೊಡಗಿಸಿ ಪುಣ್ಯಶಾಲಿಯಾದ ಇಂದ್ರನು ಆನಂದಪಡುತ್ತಿದ್ದನು.

**ಹದಿನಾಲ್ಕನೆಯ ಆಶ್ವಾಸ ಮುಗಿದುದು**

# ಪಂಚದಶಾಶ್ವಾಸಂ

ಶ್ರೀದಂ ನಿಜಾಜ್ಞೆಯಿಂ ಸಂ ।
ಪಾದಿಸಿದಾಸಮವಸೃತಿಯನೀಕ್ಷಿಸಿ ಪರಮಾ ॥
ಹ್ಲಾದಮನಾಂತಂ ಪೌಳೋ ।
ಮೀದಯಿತಂ ಜೈನಜನಮನೋಹರಚರಿತಂ ॥ ೧

ಪರಮನನೆ ಕಾಣ್ಬ ಪೂಜಿಪ ।
ಭರದಿಂ ಮುಂ ಪೊಕ್ಕನಂತರಂ ತತ್ಸಭೆಯಂ ॥
ಹರಿ ನೋಡಿ ತನ್ನ ಕಣ್ಸಾ ।
ಸಿರಮುಮನಾನಂದರಸದೊಳೋಲಾಡಿಸಿದಂ ॥ ೨

ಪರಮೇಶಂ ಮಧ್ಯದ ಮಂ ।
ದರದಂತಿರೆ ಸಮವಸರಣವಳಯಂ ವಿಳಸ ॥
ದ್ಗಿರಿಸಿಂಧುನದೀಪುರಭಾ ।
ಸುರಜಂಬೂದ್ವೀಪಮೆಂಬಿನಂ ಸೊಗಯಿಸುಗುಂ ॥ ೩

ಅದು ಗಗನಲಕ್ಷ್ಮಿಗಾದ ।
ತ್ತುದಾತ್ತಮಂಡನಮದರ್ಕೆ ನಾಯಕಮಣಿಯಂ ॥
ದದೆ ಮಧ್ಯದೊಳಿರ್ದಂ ದೇ ।
ವದೇವನತ್ರಾಸನುತ್ಪ್ರಭಂ ನುತಗಾತ್ರಂ ॥ ೪

## ಪಂಚದಶಾಶ್ವಾಸಂ

೧. ತನ್ನ ಅಪ್ಪಣೆಯ ಮೇರೆಗೆ ನಿರ್ಮಿಸಲಾದ ಸಮವಸರಣಮಂಡಪವನ್ನು ನೋಡಿ ಸಚ್ಚರಿತ್ರನಾದ ಇಂದ್ರನು ಅತ್ಯಂತವಾಗಿ ಸಂತೋಷಪಟ್ಟನು. ೨. ಅರ್ಹಂತನನ್ನೆ ಕಂಡು ಪೂಜಿಸುವ ಉತ್ಸಾಹದಿಂದ ಮೊದಲು ಹೊಕ್ಕ ಇಂದ್ರನು ಆ ಸಭೆಯನ್ನು ನೋಡಿ ತನ್ನ ಸಾವಿರ ಕಣ್ಣುಗಳನ್ನು ಆನಂದರಸದಲ್ಲಿ ತೇಲಾಡಿಸಿದನು. ೩. ಜಿನೇಂದ್ರನು ಮಧ್ಯದ ಮಂದರಗಿರಿಯಂತಿರಲು, ಸಮವಸರಣಮಂಡಪವು ಬೆಟ್ಟ, ಹೊಳೆ, ಪಟ್ಟಣಗಳಿಂದ ಶೋಭಿಸುವ ಜಂಬೂದ್ವೀಪದಂತೆ ಶೋಭಿಸಿತು. ೪. ಆ ಮಂಡಪವು ಆಕಾಶಲಕ್ಷ್ಮಿಯ ಉತ್ಕೃಷ್ಟ ಅಲಂಕಾರವೆನಿಸಿತು; ಅದರ ಮಧ್ಯದ ಮಣಿಯಂತೆ ಪರಮೇಶ್ವರನು

ಮತ್ತಂ,

ಅದು ಪರಮಾರ್ಹಂತ್ಯಶ್ರೀ ।
ಸುದತೀವಿವಹನವಿಶಾಳವೇದಿಕೆಯನಘಂ ॥
ಗದು ಮುಕ್ತಿಗೆ ನಡೆಯಲೊಡ ।
ರ್ಚಿದ ಪೊಱವೀಡೆನಿಸಿದತ್ತು ತತ್ಸಭೆ ಶುಭದಂ ॥ ೫

ಅದೆಂತೆಂದೊಡೆ –

ಧರೆಯಿಂ ಪಂಚಸಹಸ್ರಚಾಪನಿಯತೋತ್ಸೇಧಂಬರಂ ವ್ಯೋಮಭೂ ।
ಮಿರುಹಸ್ಕಂಧಮಿದೆಂಬಿನಂ ನಿಮಿರ್ದು ನಿಂದತ್ತಾದಮಾದರ್ಶಭಾ ॥
ಸುರಮಾದ್ವಾದಶಯೋಜನಾತ್ತಸಮವೃತ್ತಂ ಕಣ್ಗೆ ಗೊತ್ತಪ್ಪಿನಂ ।
ಹರಿನೀಲೈಕಶಿಳಾಮಯಂ ಮಹಿತಳಂ ತೀರ್ಥೇಶನಾಸ್ಥಾನದಾ ॥ ೬

ಅಂತುಮಲ್ಲದೆಯುಂ

ಆಸಮವಸರಣಲಕ್ಷ್ಮಿಯ ।
ಭಾಸುರತರಪಂಚರತ್ನಮಯಕಾಂಚನಮಾ ॥
ಳಾಸಾದೃಶ್ಯಕ್ಕಾಯ್ತುವ ।
ಕಾಶಂ ಕಿಂಮೀರಕಿರಣಜಾಳಂ ಶಾಳಂ ॥ ೭

ಪರಮ ಪ್ರಕಾಶಮಾನನಾಗಿ ಶಾಂತನಾಗಿ ಕುಳಿತಿದ್ದನು. ಮತ್ತು– ೫. ಪರಮನ ಅರ್ಹಂತ್ಯಲಕ್ಷ್ಮೀ ವಿವಾಹದ ವಿಶಾಲವಾದ ಜಗಲಿಯೊ, ಜಿನೇಂದ್ರನು ಮುಕ್ತಿಗೆ ನಡೆಯಲು ಮಾಡಿದ ಹೊರಬೀಡೊ ಎಂಬಂತೆ ಮಂಡಪವು ಶುಭವಾಗಿ ರಂಜಿಸಿತು. ಅದು ಹೇಗಿತ್ತೆಂದರೆ– ೬. ಭೂಮಿಯಿಂದ ಐದುಸಾವಿರ ಬಿಲ್ಲಳತೆಯ ಅಂತರದಲ್ಲಿ ಆಕಾಶ ವೃಕ್ಷದ ಹೆಗ್ಗೊಂಬೊ ಏನೊ ಎಂಬಂತೆ ಹನ್ನೆರಡು ಯೋಜನದಳತೆಯ ಸಮವೃತ್ತವಾದ ಇಂದ್ರನೀಲದ ನೆಲಗಟ್ಟು ಕನ್ನಡಿಯಂತೆ ಥಳಥಳಿಸುತ್ತ ತೀರ್ಥೇಶನ ಆಸ್ಥಾನ ಮಂಡಪದಲ್ಲಿ ಶೋಭಿಸಿತು. ಅದಲ್ಲದೆ– ೭. ಆ ಸಮವಸರಣಲಕ್ಷ್ಮಿಯ ಉಜ್ವಲವಾದ

---

ಮತ್ತಂ ವಸುಧಾವಲ್ಲಭ ।
ನೆತ್ತಿದ ಪೀಲಿದಟಿಯೆನಿಪ ನೀಳಸ್ಥಳಿಯಂ ॥
ಸುತ್ತಿ ಮಲರ್ದೆಸೆವ ತೊಂಗಲ ।
ಭಿತ್ತಿಯನೊಳಕೆಯ್ದುದತುಳಧೂಳೀಶಾಳಂ ॥ ೭

ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರ ಇದೆ, ಗ್ರಂಥಕರ್ತನದಲ್ಲವೆಂಬು ತೋರುತ್ತದೆ.

ತ್ರಿದಶೇಂದ್ರಧನುಶ್ರೀಗಾ ।
[1]ಸ್ಪದಮೆನಿಸಿರ್ದುಂ ಬಟೆಕ್ಕಮಚಿರದ್ಯುತಿಸಂ ।
ಪದಮೆನಿಸಿ ತೋರ್ಪುದಂ ತಾ ।
ಮದು ಚಿತ್ತಕ್ಕೆ ಚಿತ್ರತರಮೆಂಬಿನೆಗಂ ॥ (?) ೮

ಮತ್ತಂ

ತೊಳಪ ಸರಿಗೆಗಳ ಮುಗಿಲ ।
ಟ್ಟಳೆಗಳ ಮಿಳ್ಳಿಸುವ ಪಲವು ಪಟಿಯಿಗೆಗಳ ಗೊಂ ॥
ದಳಮೆಯ್ದೆ ಬಳಸಿ ಚೆಲ್ವಿನ ।
ಬೆಳಸೆನೆ ಸೊಗಯಿಪುದು ತನ್ಮಹಾಪ್ರಾಕಾರಂ ॥ ೯

ಅದಱ ಪೂರ್ವಾದಿದಿಕ್ಚತುಷ್ಟಯದೊಳಂ ವಿಂಶತಿಸಹಸ್ರಸಂಖ್ಯಾಸಮನ್ವಿತಂಗಳುಂ, ದ್ಯುಚರ ಖಚರಭೂಚರವ್ಯಂತರೋರಗತಿರ್ಯಗ್ಭವ್ಯಗಣತ್ವರಿತಾರೋಹಣಾವರೋಹಣಕಾರಣಪ್ರಭಾವಪಾದ ಲೇಪಾದಿವಿಲಿಪ್ತಪ್ರಥಮಾಗ್ರಸೋಪಾನಸಮೀಚೀನಂಗಳುಮಾಗಿ,

ಧರೆಗಿೞಿವ ಬಾಂದೊಱೆಯ ಬ ।
ಲ್ದರೆಗಳೆ ಕರಮೆನಿಸಿ ಮಿಸುಪ ಪೊಸಪಳಿಕಿಂ ಬಿ ॥
ತ್ತರಿಸಿದ ಸೋಪಾನಂಗಳ್ ।
ಕರಮೆಸೆದುವು ನೋಡಿದವರ ಕಣ್ ನುಣ್ಚುವಿನಂ ॥ ೧೦

ಪಂಚರತ್ನ ಖಚಿತ ಚಿನ್ನದ ಸರವೆಂಬಂತೆ ಮಿಶ್ರಪ್ರಭೆಯ ಶಾಲೆಯೊಪ್ಪಿತು. ೮. ಇಂದ್ರಧನುವಿನ ವೈಭವಕ್ಕೆ ಆಸ್ಪದವಾಗಿದ್ದೂ ಮಿಂಚಿನ ಬೆಳಕಿಗೆ ಆಶ್ರಯವಾಗಿ ಅದು ಚಿತ್ತಕ್ಕೆ ಆಶ್ಚರ್ಯಕರವಾಯಿತು. ಮತ್ತು– ೯. ಹೊಳೆಯುವ ಮುಗಿಲಟ್ಟಳೆಗಳಿಂದಲೂ, ಚಂಚಲವಾದ ಹಲವು ಧ್ವಜಗಳಿಂದಲೂ ದಟ್ಟವಾಗಿ, (ಬಿತ್ತಿ ಬೆಳೆದ) ಚೆಲುವಿನ ಬೆಳೆಯೊ ಏನೊ ಎಂಬಂತೆ ಅದರ ಪ್ರಾಕಾರವು ಶೋಭಿಸಿತು. ವ॥ ಆ ಮಂಡಪದ ನಾಲ್ಕೂ ದಿಕ್ಕಿನಲ್ಲಿ ಇಪ್ಪತ್ತುಸಾವಿರ ಮೆಟ್ಟಿಲುಗಳು: ದ್ಯುಚರ, ಖೇಚರ, ಭೂಚರ, ವ್ಯಂತರ, ಉರಗ, ತಿರ್ಯಕ್ ಮೊದಲಾದ ಭವ್ಯಸಮೂಹವನ್ನು ಮೊದಲ ಮೇಲಿನ ಸೋಪಾನಗಳು 'ಪಾದಲೇಪ'ವೆಂಬ ಶಕ್ತಿಯಿಂದ ಏರಿಸುವ ಮತ್ತು ಇಳಿಸುವ ಕಾರ್ಯವನ್ನು ಮಾಡುತ್ತಿದ್ದುವು. ೧೦. ಮೇಲಿಂದ ಭೂಮಿಗೆ ಇಳಿದು ಬರುತ್ತಿರುವ ಆಕಾಶಗಂಗೆಯ ವಿಶಾಲವಾದ ತೆರೆಗಳೆಂಬಂತೆ ಹೊಸ ಸ್ಫಟಿಕದಿಂದ ನಿರ್ಮಿತವಾದ ಸೋಪಾನಗಳು ಕಣ್ಣಿಗೆ

---

1. ಸ್ಪದಮನಿಸಿರ್ದಂ ಸಂಚರದ್ಯುತಿಸಂಪರಮೆನಿಸಿ ತೋರ್ಪುಯಂತೋವದೆ ಮಿದುಚಿತ್ತಕೆ. ಕ॥

ಆ ಸೋಪಾನಂಗಳಗ್ರದೇಶದೊಳ್

ದೆಸೆಯಂ ಕೆಂಬಿಸಿಲೆಂಬಿನಂ ಬಳಸೆ ಪೀತೋದ್ದ್ಯೋತಸಂಘಾತಮಾ ।
ಗಸಮಂ ಚಿತ್ರಿಸೆ ಪಂಚರತ್ನಕಳಶೋದ್ಯತ್ಕಾಂತಿ ಮುಂದೊಂದಿ ಕ ॥
ಣ್ಬಸರಂಬೆತ್ತಿರೆ ತುಂಗತೋರಣಶತಂ ಕೆಂಬೊನ್ನಮಾಡಂಗಳೇ ।
ನೆಸೆದೊಪ್ಪಿರ್ದುವೊ ಬಿತ್ತರಂಬಡೆದು ತತ್ತದ್ಗೋಪುರದ್ವಾರದಿಂ ॥ ೧೧

ಹರಿನೀಳಮಹೀಪ್ರಾಂತ ।
ಸ್ಫುರದಂಶುಕೃತಾಂಧಕಾರಮಂ ಮೆಯ್ವೆಳಗಿಂ ॥
ಪರಿಹರಿಸಿರ್ಪರ್ ಜ್ಯೋತಿ ।
ಷ್ಕರಮರದೌವಾರಿಕರ್ ನಿರಂತರಮದಱೊಳ್ ॥ ೧೨

ಮತ್ತಮವಱೊಳ್ ಬಹಿರಂತರುಭಯಪಾರ್ಶ್ವವೇದಿಕಾದ್ವಯಂಗಳೊಳ್ ಕಳಶಭೃಂಗಾರುಚಾಮರ ವ್ಯಜನದರ್ಪಣಾತಪತ್ರಧ್ವಜಸುಪ್ರತಿಷ್ಠಕಂಗಳೆಂಬಷ್ಟಮಂಗಳಂಗಳುಮಂ, ಸ್ವಸ್ತಿಕಾದಿಪ್ರಾಸಾದಂಗಳುಮಂ, ಶಾಲ್ಯಾದಿ ಧಾನ್ಯಂಗಳುಮಂ, ದೇವಾಂಗಾದಿ ವಸ್ತ್ರಂಗಳುಮಂ, ಮಕುಟಾದಿವಿಭೂಷಣಂಗಳುಮಂ, ಮಾಕಂದಾದಿಸಕಳರ್ತುಕಫಲಂಗಳುಮಂ, ಸುವರ್ಣಸ್ಥಾಲ್ಯಾದಿಭಾಜನಂಗಳುಮಂ, ಚಕ್ರಾದ್ಯಾಯುಧಂಗಳುಮಂ, ತತಾದಿವಾದ್ಯಂಗಳುಮಂ, ಪದ್ಮರಾಗಾದಿವಸ್ತುಗಳುಮಂ, ಬೇಡಿದಾಗಳೆ ತಡೆಯದೆ ಕುಡುವ ನೈಸರ್ಪ ಪಾಂಡುಕ ಪದ್ಮ ಪಿಂಗಳ ಕಾಳ ಮಹಾಕಾಳ ಮಾಣವ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಮಂ ನಿರಂತರಮೆನಿಸಿ

ಸೊಗಸಿದುವು. ವ॥ ಆ ಸೋಪಾನಗಳ ಮೇಗಡೆಯಲ್ಲಿ– ೧೧. ಹೊಂಬೆಳಕಿನ ಕೆಂಬಿಸಿಲೆಂಬಂತೆ ದಿಕ್ಕು ತುಂಬಿ, ಪಂಚರತ್ನ ಕಲಶಗಳ ಕಾಂತಿ ಆಕಾಶವನ್ನು ಚಿತ್ರಮಯವಾಗಿಸಲಾಗಿ, ಕಣ್ಣಿಗೆ ಹಬ್ಬವಾಗುವಂತೆ ಉನ್ನತವಾಗಿ ಆ ನೂರಾರು ತೋರಣಗಳು ಕಂಗೊಳಿಸಲಾಗಿ, ಗೋಪುರ ದ್ವಾರಗಳಿಂದ ಅಂದವಾಗಿ ಚಿನ್ನದ ಉಪ್ಪರಿಗೆಗಳು ತುಂಬ ಶೋಭಾಯಮಾನವಾಗಿದ್ದುವು. ೧೨. ಇಂದ್ರನೀಲದ ನೆಲಗಟ್ಟಿನಿಂದ ಹೊಮ್ಮುವ ಕತ್ತಲೆಯಂತಹ ನೀಲಕಾಂತಿಯನ್ನು ಜ್ಯೋತಿಷ್ಕರೂ, ಹಾಗು ದೇವತೆಗಳೂ ತಮ್ಮ ಮೈ ಬೆಳಕಿನಿಂದ ನಿವಾರಿಸುತ್ತ ದ್ವಾರಪಾಲಕಾರ್ಯವನ್ನು ಮಾಡುತ್ತಿದ್ದರು. ವ॥ ಮತ್ತು ಅವುಗಳಲ್ಲಿ ಒಳಹೊರಗೆ ಇಕ್ಕೆಲಗಳಲ್ಲಿದ್ದ ಜಗಲಿಗಳಲ್ಲಿ ಕಲಶ, ಗಿಂಡಿ, ಚಾಮರ, ಬೀಸಣಿಗೆ, ಕನ್ನಡಿ, ಕೊಡೆ, ಧ್ವಜ, ಸುಪ್ರತಿಷ್ಠಕಗಳೆಂಬ ಅಷ್ಟಮಂಗಳು, ಸ್ವಸ್ತಿಕವೆ ಮೊದಲಾದ ಪ್ರಾಸಾದಗಳು, ಭತ್ತ ಮೊದಲಾದ ಧಾನ್ಯಗಳು, ದೇವಾಂಗವೆ ಮೊದಲಾದ ವಸ್ತ್ರಗಳು, ಕಿರೀಟಾದಿ ಆಭರಣಗಳು, ಮಾಕಂದ ಮೊದಲಾದ ಸಾರ್ವರ್ತುಕ ಫಲಗಳು, ಚಿನ್ನದ ಥಾಲಿ ಮೊದಲಾದ ಪಾತ್ರೆಗಳು, ಚಕ್ರಾದಿ ಆಯುಧಗಳು, ತತ ಮೊದಲಾದ ವಾದ್ಯಗಳು, ಮಾಣಿಕ ಮೊದಲಾದ ವಸ್ತುಗಳು– ಇವೆಲ್ಲವನ್ನು ಬೇಡಿದಾಗಲೆ ತಂದುಕೊಡುವ ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಕಾಳ, ಮಹಾಕಾಳ, ಮಾಣವ, ಶಂಖ, ಸರ್ವರತ್ನ ಎಂಬ ನವ

ಪ್ರತ್ಯೇಕಾಷ್ಟೋತ್ತರಶತ ।
ಮಿತ್ಯುಪಯುಕ್ತಂಗಳಿರ್ಪುವೊಪ್ಪದಿನೆನೆ ಮ ॥
ತ್ತತ್ಯತಿಶಯಮಮಂ ತ್ರಿಭುವನ ।
ಪತ್ಯಾಸ್ಥಾಯಿಕೆಯನಾರೊ ಬಣ್ಣಿಸಲಜೆವರ್ ॥ ೧೩

ಅದಲ್ಲದೆಯುಂ ಉಭಯತಟಘಟಿತಸ್ಫಟಿಕಭಿತ್ತಿಭಾಸುರಂಗಳುಂ ತತ್ತದ್ಭೂಪ್ರದೇಶಪ್ರವೇಶೋಚಿತಪಕ್ಷದ್ವಯೋಪಲಕ್ಷಿತಕ್ಷುಲ್ಲಕದ್ವಾರಮನೋಹರಂಗಳುಮೇಕಕ್ರೋಶವಿಶಾಲಂಗಳುಮಾಗಿ,

ಕರಮೆಸೆವುವಾ ಚತುರ್ಮುಖ ।
ಪರಿಷದ್ಗೋಮಿನಿಯ ನಾಲ್ಕು ಸೀಮಂತದವೋಲ್ ॥
ಪುರವೀಧಿಗಳೋಳಿಯ ಗೋ ।
ಪುರಂಗಳಿಂ ನೀಳ್ದು ಮೊದಲ ಪೀಠಂಬರೆಗಂ ॥ ೧೪

ಎನಿಸಿ ಪರ್ವಿದ ಪೆರ್ವೀಧಿಗಳ ನಡುವೆ ಗೋಪುರದ್ವಾರಂಗಳಿಂತೊಟ್ಟು ಮಣಿತೋರಣಶತಾಲಂಕೃತಮಪ್ಪೇಕಗವ್ಯೂತಿಮಾತ್ರಾಂತರದೊಳ್

ಏನೆಸೆದುವೊ ನಾಲ್ದೆಸೆಗಳ ।
ಮಾನಸ್ತಂಭಂಗಳಮಳಪೀಠತ್ರಯಜಾಂ ॥
ಬೂನದಶಾಳತ್ರಯಮಣಿ ।
ಮಾನಿತಗೋಪುರಚತುಷ್ಟಯಂಗಳಿನನಿತುಂ ॥ ೧೫

ಮತ್ತಂ ಪ್ರಥಮಪ್ರಾಕಾರದೊಳಗೆ ಸುರಪತಿಪಿತೃಪತಿಸರಿತ್ಪತಿಧನಪತಿಸತತಕೇಳೀವಿಲಾಸೋಚಿತಂಗಳಪ್ಪ ನಾಲ್ಕುಂ ದೆಸೆಯ ರತ್ನಹರ್ಮ್ಯಂಗಳೊಳಂ, ಎರಡನೆಯ ಶಾಳದೊಳಗೆ ಪಾವಕಪುಣ್ಯಜನ ಪವಮಾನ

ನಿಧಿಗಳು ನಿರಂತರವೆನಿಸಿ, ೧೩. ಪ್ರತ್ಯೇಕಕ್ಕೂ ನೂರೆಂಟು ಉಪಯುಕ್ತವಾಗಿ ಶೋಭಿಸಿದವು. ಎಂದ ಮೇಲೆ ತ್ರಿಲೋಕಪತಿಯ ಆ ಸ್ಥಾನದ ಅತಿಶಯವನ್ನು ಯಾರು ಬಣ್ಣಿಸಬಲ್ಲರು? ವ॥ ಅದಲ್ಲದೆ ಇಕ್ಕೆಲಗಳಲ್ಲಿ ಸ್ಫಟಿಕ ಭಿತ್ತಿಗಳಿಂದ ಸುಂದರವಾಗಿ ಆಯಾ ಪ್ರದೇಶಕ್ಕೆ ಪ್ರವೇಶ ಮಾಡಲು ಯೋಗ್ಯವಾದ ಉಭಯ ಪಾರ್ಶ್ವಗಳಲ್ಲಿಯೂ ಚಿಕ್ಕ ಚಿಕ್ಕ ಬಾಗಿಲುಗಳನ್ನೊಳಗೊಂಡು ಮನೋಹರವಾಗಿ ಒಂದು ಕ್ರೋಶದಷ್ಟು ಅಗಲವಾದ ೧೪. ನಾಲ್ಕು ಬೀದಿಗಳು ಗೋಪುರದ್ವಾರದಿಂದ ಜಿನಪೀಠದವರೆಗೆ ನೀಳವಾಗಿ, ಆ ಪರಿಷತ್ತೆಂಬ ಲಕ್ಷ್ಮಿಯ ನಾಲ್ಕು ಸೀಮಂತಗಳಂತೆ ಶೋಭಿಸಿದುವು. ವ॥ ಹೀಗಿರುವ ಹಿರಿಯ ಬೀದಿಗಳ ನಡುವೆ ಗೋಪುರದ್ವಾರದಿಂದ ಆರಂಭಿಸಿ ಒಂದೊಂದು ಗಾವುದದ ಅಂತರಕ್ಕೆ ಒಂದರಂತೆ ನೂರಾರು ರತ್ನತೋರಣಗಳಿಂದ ಅಲಂಕೃತವಾದ ೧೫. ನಾಲ್ಕು ದಿಕ್ಕಿನ ಮಾನಸ್ಥಂಭಗಳಿದ್ದುವು; ಪೀಠತ್ರಯಗಳಿಂದಲೂ, ಚಿನ್ನದ ಶಾಳತ್ರಯಗಳಿಂದಲೂ, ರತ್ನಮಯವಾದ ನಾಲ್ಕು ನಾಲ್ಕು ಗೋಪುರಗಳಿಂದಲೂ ಅವು ಅತಿಶಯವಾಗಿ ಶೋಭಿಸಿದುವು. ವ॥ ಮೊದಲನೆಯ ಪ್ರಾಕಾರದೊಳಗೆ ಇಂದ್ರ, ಯಮ, ವರುಣ ಮತ್ತು ಕುಬೇರರಿಗೆ ಸಂತತ ಕ್ರೀಡೋಚಿತವಾದ ನಾಲ್ಕು ದಿಕ್ಕಿನ ರತ್ನಹರ್ಮ್ಯಗಳು; ಎರಡನೆಯ ಶಾಳದೊಳಗೆ ಅಗ್ನಿ, ನಿರುತಿ, ವಾಯು

ಪಶುಪತಿವಿನೋದವಿಹಾರಯೋಗ್ಯಂಗಳಪ್ಪ ನಾಲ್ಕುಂ ಕೋಣೆಗಳ ಸೌವರ್ಣಸೌಧಂಗಳೊಳಂ, ಅವನವಂ ಬಳಸಿದ ಹೃದ್ಯೋದ್ಯಾನಂಗಳೊಳಂ, ತೃತೀಯವಪ್ರದೊಳಗಪ್ರತಿಮವಾಳವಾಯುಜ ಸುವರ್ಣಕಳಶ ಮಣಿಮಯಂಗಳುಮಷ್ಟಾಷ್ಟಾರ್ಧಚತುಶ್ಚಾಪೋನ್ನತಂಗಳುಮಪ್ಪ ಮೂಱುಂ ಪೀಠಂಗಳ ಮೂರ್ಧದೊಳ್ ಪರಾರ್ಥ್ಯರತ್ನರಚಿತಜಿನಪ್ರತಿಕೃತಿಚತುಷ್ಟಯೋಪಶೋಭಿತಕನಕಮಯಚತುರಶ್ರ ಮೂಲಪ್ರದೇಶಂಗಳೊಳ ಮಳವಟ್ಟುಮಂತುಮಲ್ಲದೆಯುಂ,

> ಅಕುಟಿಳರೇಖೆಗಳ್ ಸುವಿದಿತಾಂತರವೀಧಿಗಳುದ್ಧಕಾಂತಿಗಳ್ ।
> ಸಕುಲಿಶಪಙ್ಕ್ತಿಗಳ್ ಸಲೆ ಕುದೃಗ್ಜನದರ್ಶನಮೋಹನೀಯದಾ ॥
> ರುಕುಳವಿದಾರಣೋಚಿತಸಿತಕ್ರಕಚಂಗಳಿವೆಂಬ ಲೀಲೆಯಂ ।
> ಪ್ರಕಟಿಸುತಿರ್ಪುವಂತವಱ ಜಂಘೆಗಳೊಳ್ ದ್ವಿಸಹಸ್ರಧಾರೆಗಳ್ ॥ ೧೬

ಮತ್ತಮವನಿತರ್ಕಂ ಬೇಱಿವೇಱಿ

> ಸಮವೃತ್ತಂ ವಿಮಳಸ್ಫಟಿ ।
> ಕಮಯಂ ಮಧ್ಯಪ್ರಕಾಂಡಮಲ್ಲಿಂದತ್ತಂ ॥
> ಕ್ರಮದೆ ಮಣಿಘಟಿತಕಟಕಂ ।
> ಕುಮುದಂ ಕಟಕಂ ಮರಳ್ದು ಹೈಮಂ ಫಳಕಂ ॥ ೧೭

> ಅದಱಗ್ರದೊಳೆಸೆದು ಚತು ।
> ರ್ವದನಂ ಮಾಣಿಕ್ಯಮಯಜಿನಾಕೃತಿ ನೆಲಸಿ ॥
> ರ್ಪುದು ಮುಕ್ತಾಛತ್ರತ್ರಯ ।
> ಸದಮಳಭಾಭಾರಭರಿತರೋದೋವಿವರಂ ॥ ೧೮

ಮತ್ತು ಪಶುಪತಿಗಳಿಗೆ ವಿನೋದ ವಿಹಾರಯೋಗ್ಯವಾದ ನಾಲ್ಕು ಉಪದಿಕ್ಕುಗಳ ಚಿನ್ನದ ಸೌಧಗಳು; ಆಯಾ ನಿವಾಸಗಳನ್ನು ಬಳಸಿದ ಉದ್ಯಾನಗಳು; ತೃತೀಯ ಪ್ರಾಕಾರದೊಳಗೆ ಅಪ್ರತಿಮವಾದ ಸುವರ್ಣ ಕಲಶರತ್ನಮಯವಾದ ಎಂಟು, ನಾಲ್ಕು ಹಾಗು ನಾಲ್ಕು ಬಿಲ್ಲಳತೆಯ ಮೂರು ಪೀಠಗಳು; ಅವುಗಳ ಮೇಲೆ ಉತ್ಕೃಷ್ಟ ರತ್ನಖಚಿತ ಜಿನಬಿಂಬಗಳು ನಾಲ್ಕು: ಇವುಗಳಿಂದ ಶೋಭಿಸುವ ಚಿನ್ನದ ಚಚ್ಚೌಕದ ಮೂಲ ಪ್ರದೇಶ (ತಳಪೀಠ) ದಿಂದ ಅಳವಟ್ಟುವು. ಇದಲ್ಲದೆ- ೧೬. ಅವುಗಳ ಜಂಘಾಪ್ರದೇಶದಲ್ಲಿ ಸರಳವಾದ ರೇಖೆಯುಳ್ಳ ಹಾಗು ಉಜ್ವಲ ಪ್ರಭೆಯ ವಜ್ರಮಯವಾದ ಎರಡುಸಾವಿರ ಧಾರೆಗಳುಳ್ಳ ಸಾಲುಗಳು ಕುದೃಷ್ಟಿಯ ಜನ ಹಾಗು ದರ್ಶನಮೋಹನೀಯವೆಂಬ ಮರವನ್ನು ಕೊರೆಯುವ ಕರಗಸಗಳೆಂಬಂತೆ ಕಂಗೊಳಿಸಿದುವು. ಮತ್ತು ಅವೆಲ್ಲಕ್ಕೂ ಬೇರೆ ಬೇರೆಯಾಗಿ ೧೭. ನಿರ್ಮಲ ಸ್ಫಟಿಕಮಯವಾದ ಮಂಡಲಾಕಾರದ ಮಧ್ಯಪ್ರಕಾಂಡ; ಅಲ್ಲಿಂದ ಮೇಲೆ ಕ್ರಮವಾಗಿ ರತ್ನ ಖಚಿತ ಕಟಕ, ಕುಮುದ, ಕಟಕ ಮತ್ತು ಚಿನ್ನದ ಫಲಕ. ೧೮. ಅದರ ತುದಿಯಲ್ಲಿ ಮುತ್ತಿನ ಮುಕ್ಕೊಡೆಯ ಕಾಂತಿಯಿಂದ ಆಕಾಶವನ್ನೆಲ್ಲ ಬೆಳಗುವ ಮಾಣಿಕ್ಯದ

ಫಳಕದ ನಾಲ್ಕುಂ ಗೊಂಟಿನೊ ।
ಳಲಘುಪತಾಕಾಚತುಷ್ಕಮಿರ್ಕುಂ ಮತ್ತಂ ॥
ಬಳಸಿ ಕಡೆಕಡೆಯೊಳೆಸೆಗುಂ ।
ಚಳಚಮರಜಲಂಬಮಾನಘಂಟಾಜಾಳಂ ॥ ೧೯

ಅಂತು ಸಕಳಾಳಂಕಾರಸಮೇತಂಗಳಪ್ಪ ನಾಲ್ಕುಂ ಮಾನಸ್ತಂಭಂಗಳ ಮೊದಲ ಮಗಿಲಿಂ ಪೊಱಗೆ ನಾಲ್ಕುಂ ಗೋಪುರದ್ವಾರಂಗಳೆಡೆಯೆಡೆಯೊಳ್ ಸಮವಸರಣಕ್ಷೇತ್ರವಿವಿಕ್ಷುಜನಪಾದಪ್ರಕ್ಷಾಳನೋಚಿತಕನಕಕುಂಡದ್ವಿತಯಮಂಡಿತೋಭಯಪಾರ್ಶ್ವಂಗಳಪ್ಪ ನಂದೆ ನಂದೋತ್ತರೆ ನಂದಾವತಿ ನಂದಿಘೋಷಿ ವಿಜಯೆ ವೈಜಯಂತಿ ಜಯಂತಿ ಅಪರಾಜಿತೆ ಅಶೋಕೆ ಸುಪ್ರತಿಷ್ಠೆ ಕುಮುದೆ ಪುಂಡರೀಕೆ ಹೃದಯಾನಂದೆ ಮಹಾನಂದೆ ಸುಪ್ರಬುದ್ಧೆ ಪ್ರಭಾಕರಿ ಎಂಬ ಪದಿನಾಱುಂ ರತ್ನಮಯಸೋಪಾನಪಙ್ಕ್ತಿಗಳಪ್ಪ ಸಮಚತುರಶ್ರವಾಪಿಗಳ್ ಪೂರ್ವಾದಿಪರ್ಯಾಯದಿನೊಂದೊಂದರ್ಕೆ ನಾಲ್ಕುಂ ನಾಲ್ಕಾಗಿ ದಿವ್ಯಯೋಷಿಜ್ಜನಮಜ್ಜನೋಪಯೋಗ್ಯಂಗಳೊಪ್ಪುಗುಂ, ಅದಲ್ಲದೆಯುಂ,

ಜಿನತನುಗೆ ಪನ್ನೆರಣ್ಮಡಿ ।
ಯೆನಿಪುನ್ನತಿ ನೋಡಿದೆನ್ನರೊಳಮುನ್ನತಿಯಂ ॥
ಜನಿಯಿಪುದೆಂಬೀ ನುಡಿ ನಿಜ ।
ವೆನೆ ಮಾನಸ್ತಂಭಮಿಂತು ನಾಲ್ಕುಂ ರಮ್ಯಂ ॥ ೨೦

ಮಾನಸ್ತಂಭನಿಚಯಮ ।
ಜ್ಞಾನಿಜನಸ್ವಾಂತಜನಿತಮಾನಸ್ತಂಭಂ ॥

ಜಿನಬಿಂಬ ನೆಲಸಿತ್ತು. ೧೯. ಫಲಕದ ನಾಲ್ಕು ಮೂಲೆಗಳಲ್ಲಿ ವಿಶಾಲವಾದ ನಾಲ್ಕು ಪತಾಕೆಗಳು; ತುದಿ ತುದಿಯಲ್ಲಿ ಚಂಚಲವಾದ ಚಮರ ಹಾಗು ಇಳಿಬಿಟ್ಟ ಗಂಟೆಗಳ ಸಾಲು ಒಪ್ಪಿದುವು. ವ॥ ಹೀಗೆ ಸರ್ವಾಲಂಕಾರ ಭೂಷಿತವಾದ ನಾಲ್ಕು ಮಾನಸ್ತಂಭಗಳ ಮೊದಲ ಗೋಡೆಯಿಂದ ಹೊರಗೆ ನಾಲ್ಕು ಗೋಪುರ ದ್ವಾರಗಳ ಎಡೆ ಎಡೆಯಲ್ಲಿ ಸಮವಸರಣಕ್ಕೆ ಬಂದ ಜನರು ಕಾಲ್ತೊಳೆಯಲು ಯೋಗ್ಯವಾದ ಎರಡು ಚಿನ್ನದ ಕುಂಡಗಳು; ಹಾಗು ಎರಡೂ ಪಕ್ಕಗಳಲ್ಲಿ ಶೋಭಿಸುವ ನಂದೆ, ನಂದೋತ್ತರೆ, ನಂದಾವತಿ, ನಂದಿಘೋಷಿ, ವಿಜಯೆ, ವೈಜಯಂತಿ, ಜಯಂತಿ, ಅಪರಾಜಿತೆ, ಅಶೋಕೆ, ಸುಪ್ರತಿಷ್ಠೆ, ಕುಮುದೆ, ಪುಂಡರೀಕೆ, ಹೃದಯಾನಂದೆ, ಮಹಾನಂದೆ, ಸುಪ್ರಬುದ್ಧೆ, ಪ್ರಭಾಕರಿ ಎಂಬ ಹದಿನಾರು ರತ್ನಮಯ ಸೋಪಾನಗಳುಳ್ಳ ಚಚ್ಚೌಕಾದ ಬಾವಿಗಳು ಪೂರ್ವದಿಕ್ಕಿನಿಂದ ಅನುಕ್ರಮವಾಗಿ ಒಂದೊಂದು ದಿಕ್ಕಿಗೂ ನಾಲ್ಕು ನಾಲ್ಕರಂತೆ ದಿವ್ಯ ಸ್ತ್ರೀಯರ ಸ್ನಾನಕ್ಕೆ ಯೋಗ್ಯವಾಗಿ ಒಪ್ಪಿದುವು. ಅದಲ್ಲದೆ– ೨೦. ಜಿನದೇಹಕ್ಕೆ ಹನ್ನೆರಡು ಮಡಿಯೆನಿಸುವ ಎತ್ತರವನ್ನು ಹೊಂದಿ, "ನೋಡಿದ ಎಂಥವರಲ್ಲಿಯೂ ಉನ್ನತಿಯನ್ನು ಉಂಟುಮಾಡುವುದೆಂಬ"ನುಡಿ ನಿಜವೆಂಬಂತೆ ನಾಲ್ಕು ಮಾನಸ್ತಂಭಗಳು ಸುಂದರವಾದುವು ೨೧. ಅಜ್ಞಜನರ 'ಮಾನಸ್ತಂಭ' (ಗರ್ವಭಂಗ) ವೆನಿಸಿ,

ತಾನೆನಸಿ ಮತ್ತೆ ವಾಗಭಿ ।
ಮಾನಸ್ತಂಭಂಗಳೆನಿಸುಗುಂ ಪೊಗಳ್ವರ್ಗಂ ॥ ೨೧

ಆ ನಾಲ್ದೆಸೆಯ ಮಾನಸ್ತಂಭಂಗಳೆಡೆಯೆಡೆಯೊಳರ್ಧಯೋಜನವ್ಯಾಸಮನಪ್ಪುಕೆಯ್ದು ಸಮಚತುರಶ್ರಂ ಪಾದಾಧಿಕಚತುರಶ್ರಂ ವೃತ್ತಮಾಯತವೃತ್ತಮಷ್ಟಾಶ್ರಂಗಳೆಂಬ ತಳಚ್ಛಂದಂಗಳಿಂ ಮೇಲೆ ಪುಟ್ಟುವ ವೈರಾಜಂ ಪುಷ್ಪಕಂ ಕೈಲಾಸಂ ಮಣಿಕಂ ತ್ರಿವಿಷ್ಟಪಮೆಂಬ ಸ್ವರ್ಗಸಂಭವಂಗಳಪ್ಪಯ್ದು ಮಹಾಪ್ರಾಸಾದಂಗಳೊಳಂ, ಭೂಮಿಜಂಗಳಪ್ಪ ಸ್ವಸ್ತಿಕ ವರ್ಧಮಾನ ನಂದ್ಯಾವರ್ತ ಸರ್ವತೋಭದ್ರ ವಳಭಿಚ್ಛಂದಮೆಂಬಯ್ದುಂ ಪ್ರಾಸಾದಂಗಳೊಳಂ, ದ್ರಾವಿಡಂ ಕಾಳಿಂಗ ವೇಸರಂ ಯಾಮ್ಯಂತರಮೆಂಬಂತರೀಜಾತಿಗಳೊಳಂದನುರಿ ಮಧುರಿ ಸಾಧಾರಿಣಿ ತ್ರಾಸ್ತಿಯೆಂಬ ನಾಲ್ಕುಂರೇಖೆಗಳೊಳಮಳವಟ್ಟ ಚೆಲ್ವಿನಿಂ "ಪ್ರಸೀದಂತಿ ಜನಮನಾಂಸಿ ದೇವಪ್ರಾಸಾದಾ" ಎಂಬ ನುಡಿಗೆ ನಿದರ್ಶನಮಾಗಿ ಸೊಗಯಿಸುವ,

ಪ್ರಾಸಾದಾಂತರದಿಂದಮಯ್ದು ಜಿನಚೈತ್ಯಾಗಾರಮೊಂದಿಂತೆ ವಿ ।
ನ್ಯಾಸಂ ನಾಡೆ ಬೆಡಂಗುವೆತ್ತಿರೆ ಹಟತ್ತದ್ರತ್ನಕೂಟಾಂಶುಮಾ ॥
ಳಾಸಂಪೀತಪರೀತನಂದನತರುಚ್ಛಾಯಾಂಧಕಾರಂ ವಿಹಾ ।
ರಾಸಕ್ತಾಮರಕಾಮಿನೀಸಮುದಯಂ ತದ್ಭೂಮಿ ಕಣ್ಗೊಪ್ಪುಗುಂ ॥ ೨೨

ಮಣಿಯಯ್ದು ಮತ್ತೆ ಚಿಂತಾ ।
ಮಣಿಯೊಂದೆನೆ ಸಮೆದ ಬಣ್ಣಸರಮಂ ತದ್ಭೂ ॥
ಪ್ರಣಯಿನಿ ತಳೆದವೊಲೊಪ್ಪಿನ ।
ಕಣಿಯಾದುವು ರತ್ನಹರ್ಮ್ಯಚಯಚೈತ್ಯಂಗಳ್ ॥ ೨೩.

ಬಣ್ಣಿಸುವೆನೆಂಬವರ ವಾಕ್ಶಕ್ತಿಯ ಗರ್ವವನ್ನೂ ನಾಶಪಡಿಸುವೆವೆಂಬಂತೆ ಮಾನಸ್ತಂಭಗಳು ಕಂಗೊಳಿಸಿದವು. ವ॥ ನಾಲ್ಕು ದಿಕ್ಕಿನ ಆ ಮಾನಸ್ತಂಭಗಳ ಎಡೆಯೆಡೆಯಲ್ಲಿ ಅರ್ಧಯೋಜನ ವ್ಯಾಸವುಳ್ಳ ಚಚ್ಚೌಕ, ಮಂಡಲಾಕಾರ, ದೀರ್ಘವೃತ್ತಾಕಾರ, ಅಷ್ಟಕೋನಾಕೃತಿಯೆಂಬ ತಳಪಾಯಗಳ ಮೇಲೆ ನಿರ್ಮಿಸಿದ ವೈರಾಜ, ಪುಷ್ಪಕ, ಕೈಲಾಸ, ಮಣಿಕ, ತ್ರಿವಿಷ್ಟಪವೆಂಬ ಸ್ವರ್ಗೀಯವಾದ ಐದು ಮಹಾಭವನಗಳು; ಸ್ವಸ್ತಿಕ; ವರ್ಧಮಾನ; ನಂದ್ಯಾವರ್ತ, ಸರ್ವತೋಭದ್ರ, ವಲಭಿಚ್ಛಂದವೆಂಬ ಮರ್ತ್ಯಲೋಕದ ಐದು ಭವನಗಳು ದ್ರಾವಿಡ, ಕಾಳಿಂಗ, ವೇಸರ, ಯಾಮ್ಯಂತರ ಎಂಬ ಅಂತರೀಜಾತಿಗಳ ಅನುಂದರಿ, ಮಧುರಿ, ಸಾಧಾರಿಣಿ, ತ್ರಾಸ್ತಿಯೆಂಬ ನಾಲ್ಕು ರೇಖೆಗಳಲ್ಲಿ ಅಳವಟ್ಟ ಚೆಲುವಿನಿಂದ "ಜನಮನವನ್ನು ಪ್ರಸನ್ನಗೊಳಿಸುವುವು ದೇವ ಪ್ರಾಸಾದಗಳು" ಎಂಬ ನುಡಿಗೆ ನಿದರ್ಶನವಾಗಿ ಶೋಭಿಸುವ ೨೨. ಐದೈದು ಪ್ರಾಸಾದಗಳ ನಡುವೆ ಒಂದೊಂದು ಜಿನ ದೇವಾಲಯ ಬೆಡಗಾಗಿ ತೋರುತ್ತಿತ್ತು. ಆ ದೇವಾಲಯ ಶಿಖರಗಳ ರತ್ನ ಪ್ರಭಾಮಾಲೆಯು ಕೆಳಗೆ ಇರುವ ಉದ್ಯಾನ ವೃಕ್ಷಗಳ ನೆಳಲನ್ನು ಕುಡಿದು ಬಿಡುತ್ತಿತ್ತು; ಆ ಉದ್ಯಾನಗಳಲ್ಲಿ ವಿಹಾರಮಾಡುವ ದೇವಕಾಮಿನಿಯರು ಶೋಭಿಸುತ್ತಿದ್ದರು. ೨೩. ಐದು ರತ್ನಗಳ ನಡುವೆ ಚಿಂತಾಮಣಿಯೊಂದನ್ನು ಅಳವಡಿಸಿದ

ಮತ್ತಂ ತತ್ಪ್ರಮದವನಂಗಳೊಳ್

ಮೃದುಪದಪಾತಮಮಂ ಬಯಸದುತ್ಕುಚಭಾರದ ಸೋಂಕನಾಸೆಗೆ ।
ಯ್ಯದ ವದನಾಸವಕ್ಕೆಳಸದಬ್ಜದಳಾಕ್ಷಿಯರೀಕ್ಷಣಕ್ಕಣಂ ॥
ಪದೆಯದಶೋಕಮಾಕುರವಕಂ ವಕುಳಂ ತಿಳಕಂ ಮರಲ್ದರ ।
ಲ್ದುದೆ ಪೊಗಟ್ಟುಂ ಚರಾಚರಸುಖಾವಹಮಪ್ಪ ಜಿನಪ್ರಭಾವಮಂ ॥ ೨೪

ಬೇರ್ಗೊಂಡು ಪಣ್ತ ಪಲಸೆಳ ।
ನೀರ್ಗಾಯಂ ತಳೆದ ತೆಂಗು ತನಿರಸಮೊಸರ್ವಾ ॥
ನೇರ್ಗೊನೆಯನಾಂತ ಮಾವಿವು ।
ನೇರ್ಗಿಜೆಯವು ಕಲ್ಪತರುಗೆ ಸಿರಿಯಿಂದೆನಿಕುಂ ॥ ೨೫

ಮತ್ತಮಲ್ಲಿ,

ವಿಕಚೋತ್ಪಳಾಬ್ಜಕಲ್ಹಾ ।
ರಕುಳಂಗಳತುಚ್ಛಮೌಕ್ತಿಕಚ್ಛೇದಾಚ್ಛೋ ॥
ದಕಭರಿತಂಗಳ್ ವೃತ್ತ ।
ತ್ರಿಕೋಣಚತುರಶ್ರವಾಪಿಗಳ್ ಸೊಗಯಿಸುಗುಂ ॥ * ೨೬

ಅದಲ್ಲದೆಯುಮಲ್ಲಿ ವಿಹರಿಸುವ ಕಲ್ಪಾಮರವಿದ್ಯಾಧರಫಣಾಧರಜ್ಯೋತಿಷ್ಕನಾನವ್ಯಂತರ ದಿವ್ಯಭವ್ಯಜನಂಗಳಾ ಮಹಾವಾಪಿಗಳ ವಿಮಳಜಳದಿನಚಳಸಂ ಪ್ರಮದವನಸುರಭಿಸುಮನದಿನಮನನರ್ಹ

ಹಾರವನ್ನು ಆ ಭೂರಮಣಿ ಧರಿಸಿದಳೆಂಬಂತೆ ಆ ರತ್ನಹರ್ಮ್ಯಗಳೂ ಮಧ್ಯದ ಚೈತ್ಯಾಲಯಗಳೂ ಶೋಭಿಸಿದುವು. ಮತ್ತು ಅಲ್ಲಿಯ ಪ್ರಮದೋದ್ಯಾನಗಳಲ್ಲಿ– ೨೪. (ಸ್ತ್ರೀಯರ) ಮೃದುವಾದ ಪಾದಪ್ರಹಾರವನ್ನು ಬಯಸದೆ ಅಶೋಕವೂ, ಉನ್ನತವಾದ ಸ್ತನಸ್ಪರ್ಶವನ್ನು ಅಪೇಕ್ಷಿಸದೆ ಕುರವಕವೂ, ಮುಖಾಸವಕ್ಕೆ ಎಳಸದೆ ಬಕುಳವೂ, ಕಮಲನೇತ್ರೆಯರ ದೃಷ್ಟಿಪಾತಕ್ಕೆ ಆಸೆಗೆಯ್ಯದ ತಿಲಕವೂ ಸೊಗಸಾಗಿ ಅರಳಿರುವುದೆ ಚರಾಚರಸುಖಕರವಾದ ಜಿನಪ್ರಭಾವವನ್ನು ಬಿತ್ತರಿಸಿತು. ೨೫. ಬೇರಿಂದ ತುದಿವರೆಗೆ ಹಣ್ಣುಬಿಟ್ಟ ಹಲಸು, ಎಳನೀರಕಾಯಿಗಳನ್ನು ಹೊತ್ತ ತೆಂಗು, ಸವಿಯಾದ ರಸವನ್ನೊಸರುತ್ತಿರುವ ತೋರಗೊನೆಗಳ ಮಾವು– ಇವು ತಮ್ಮ ಸಮೃದ್ಧಿಯಿಂದ ಕಲ್ಪವೃಕ್ಷಗಳಿಗೆ ಕೊಂಚ ಮಾತ್ರ ಚಿಕ್ಕವೆನಿಸಿದುವು ಮತ್ತು ಅಲ್ಲಿ– ೨೬. ಅಲ್ಲಿ ಅರಳಿದ ಕಮಲ ಕಲ್ಹಾರಗಳನ್ನೊಳಗೊಂಡು ಮುತ್ತಿನಂತೆ ಬೆಳ್ಳಗಾದ ತಿಳಿನೀರಿನಿಂದ ತುಂಬಿ ತುಳುಕುವ ವರ್ತುಲಾಕಾರದ, ತ್ರಿಕೋನಾಕಾರದ, ಚೌಕಾಕಾರದ ಬಾವಿಗಳು ಕಂಗೊಳಿಸಿದುವು. ವ॥ ಅಲ್ಲಿ ವಿಹಾರಮಾಡುವ ಕಲ್ಪದೇವತೆಗಳು, ವಿದ್ಯಾಧರರು, ನಾಗರು, ಜ್ಯೋತಿಷ್ಕರು, ವ್ಯಂತರರು ಮೊದಲಾದ ದಿವ್ಯಭಕ್ತರು ಆ

---

* ಈಕಡೆ–ಅಂತು ಚತುರ್ಮುಖಂಗಳೊಳ್ ಪ್ರತ್ಯೇಕವಾಪಿತ್ರಯಂಗಳಕ್ಕುಂ, ಎಂದೊಂದು ಪ್ರತಿಯಲ್ಲಿದೆ.

ತ್ಪರಮೇಷ್ಠಿಯಂ ತತ್ತಚ್ಚೈತ್ಯಮಂದಿರಂಗಳೊಳಪೊಕ್ಕು ಪೂಜಿಸಿ ಮತ್ತಮತ್ಯಂತಭಕ್ತಿಭರದಿಂ ಶಕ್ತಿಯುಂ ವ್ಯುತ್ಪತ್ತಿಯುಮಭ್ಯಾಸಮುಮೆಂಬ ಗುಣತ್ರಯೋಪಯುಕ್ತರುಂ ರತ್ನತ್ರಯಾಳಂಕೃತರುಮಪ್ಪ ಸುಕವಿಗಳ್ ಸಮಚಿ ಸಮೆದತಿವಿಶಿಷ್ಟಶಿಷ್ಟಾದಿಪದಾಳಂಕಾರಾಸ್ಪದಂಗಳುಮುಪಮಾದ್ಯರ್ಥಾಳಂಕಾರಸಮರ್ಥಂಗಳುಂ ವೈದರ್ಭಾದಿರೀತಿಸಮೇತಂಗಳುಂ ರತ್ಯಾದಿಯೋಗ್ಯಭಾವಸಂಪಾದಿತಂಗಳುಂ ಶೃಂಗಾರಾದಿಸಮುಚಿತ ರಸಪ್ರಸರಾರ್ದ್ರಂಗಳುಮಪ್ಪ ವೃತ್ತಗಂಧಿ ಚೂರ್ಣಮುತ್ಕಳಿಕೆ ಲಲಿತಂ ಖಂಡಂ ವಿಚಿತ್ರಮೆಂಬಾಱು ತೆಱದ ಗದ್ಯಂಗಳೊಳಂ ವೃತ್ತಂ ಜಾತಿಯೆಂಬೆರಡುತೆಱದ ಪದ್ಯಂಗಳೊಳಂ ಮುಕ್ತಕಂ ಕುಳಕಂ ಕೋಶಂ ಸಂಘಾತಮೆಂಬ ಸಮುಕಟ್ಟಿನೊಳಮಳವಟ್ಟು ಪದವಾಕ್ಯಪ್ರಮಾಣಾದಿಸಾರಸಾಹಿತ್ಯಸರ್ವಸ್ವಂಗಳಪ್ಪ ಸ್ವರೂಪಸ್ತವ ಗುಣಸ್ತವ ವಸ್ತುಸ್ತವಂಗಳಂ ನಿರ್ಬಂಧದಿಂದೋದುವ ಮಧುರಗಂಭೀರನಾದಂಗಳೊಡನೆ ಪೊಡರ್ವನೂನಪ್ರತಿಧ್ವಾನಂಗಳನೊಳಕೆಯ್ದು ಜಿನಭವನರಮ್ಯಹರ್ಮ್ಯೋಪವನಕುಜಂಗಳಿಂ ರಂಜಿಪಾ ಪ್ರಾಸಾದಚೈತ್ಯಭೂಮಿಯಿಂದೊಳಗೆ

ತಳತಳಿಪಚ್ಚಪೊಚ್ಚಪೊಸಪೊಂಬೆಸದಿಂಬಿನ ವೇದಿಯೆಯ್ದೆ ಮಂ।
ಡಳಸಿದುದಾ ಸಭಾರಮೆಯ ನೂಪುರರೂಪದ ರೂಪ್ಯಗೋಪುರಂ॥
ಗಳುಮಳವಟ್ಟುವಂತದಱ ನಾಲ್ದೆಸೆಯೊಳ್ ಬಟಿಕಂತವರ್ಕೆ ಮಂ।
ಗಳನಿಧಿರಕ್ಷಕಪ್ರತತಿ ಮುನ್ನುಸಿರ್ದಂತೆಸೆದಿರ್ದುದೆತ್ತಲುಂ॥ ೨೭

ಮಹಾ ವಾಪಿಗಳ ತಿಳಿನೀರನ್ನು ಪ್ರಮದವನದ ಸುಗಂಧಪುಷ್ಪಗಳನ್ನೂ ತೆಗೆದುಕೊಂಡು ಅಲ್ಲಲ್ಲಿಯ ಚೈತ್ಯಾಲಯಗಳನ್ನು ಹೊಕ್ಕು ಅಚಲನೂ, ವಿರಕ್ತನೂ ಆದ ಅರ್ಹತ್ ಪರಮೇಷ್ಠಿಯನ್ನು ಪೂಜಿಸುವವರು; ಅತ್ಯಂತ ಭಕ್ತಿಪರವಶರಾಗಿ ಶಕ್ತಿ–ವ್ಯುತ್ಪತ್ತಿ ಅಭ್ಯಾಸವೆಂಬ ಮೂರುಗುಣಗಳಿಂದ ಯುಕ್ತರೂ ರತ್ನತ್ರಯದಿಂದ ಅಲಂಕೃತರೂ ಆದ ಸತ್ಕವಿಗಳು ಚೆನ್ನಾಗಿ ರಚಿಸಿದ ವಿಶಿಷ್ಟವಾದ ಶಿಷ್ಟಪದಾಲಂಕಾರಯುಕ್ತವೂ ಉಪಮಾದಿ ಅರ್ಥಾಲಂಕಾರಯುಕ್ತವೂ, ವೈದರ್ಭಾದಿ ರೀತಿಸಹಿತವೂ, ರತಿಯೇ ಮೊದಲಾದ ಯೋಗ್ಯಭಾವ ಸಮೃದ್ಧವೂ, ಶೃಂಗಾರಾದಿ ಯುಕ್ತ ರಸಗಳಿಂದ ಹೃದ್ಯವೂ ಆದ ವೃತ್ತಗಂಧಿ, ಚೂರ್ಣ, ಉತ್ಕಲಿಕೆ, ಲಲಿತ, ಖಂಡ, ವಿಚಿತ್ರ ಎಂಬ ಆರು ಬಗೆಯ ಗದ್ಯಗಳಿಂದಲೂ, ವೃತ್ತ ಜಾತಿ ಎಂಬ ಎರಡು ಬಗೆಯ ಪದ್ಯಗಳಿಂದಲೂ, ಮುಕ್ತಕ, ಕುಲಕ, ಕೋಶ, ಸಂಘಾತವೆಂಬ ರಚನೆಗಳಿಂದಲೂ ಅಳವಟ್ಟು ಪದ, ವಾಕ್ಯ ಪ್ರಮಾಣಾದಿ ಸಾಹಿತ್ಯದ ಸಾರಸರ್ವಸ್ವವೆನಿಸುವ ರೂಪಸ್ತವ, ಗುಣಸ್ತವ, ವಸ್ತುಸ್ತವಗಳನ್ನು ನಿಯಮಾನುಸಾರವಾಗಿ ಓದುವ ಇಂಪಾದ ಹಾಗು ಗಂಭೀರವಾದ ನಾದಗಳೊಡನೆ ಹೊಮ್ಮುವ ಸ್ಪಷ್ಟ ಪ್ರತಿಧ್ವನಿಗಳನ್ನು ಒಳಗೊಂಡು ಜಿನಾಲಯದ ಸುಂದರವಾದ ಉಪವನ ಕುಂಜಗಳಿಂದ ಪ್ರಾಸಾದ ಚೈತ್ಯಭೂಮಿ ಶೋಭಿಸುವುದು; ಅದನ್ನು ದಾಟಿ ಒಳಗೆ– ೨೭. ತಳತಳಿಸುವ ಹೊಚ್ಚ ಹೊಸ ಚಿನ್ನದ ಕುಸುರಿಗೆಲಸದ ವೇದಿ ಮಂಡಲಾಕಾರವಾಗಿತ್ತು; ಅದರ ನಾಲ್ಕೂ ದಿಕ್ಕಿನಲ್ಲಿ ಆ ಸಭಾ ರಮಣಿಯ ಅಂದುಗೆಗಳೆಂಬಂತೆ ಬೆಳ್ಳಿಯ ಗೋಪುರಗಳು ಅಳವಟ್ಟಿದ್ದುವು; ಅವುಗಳಿಗೆ ಮುಂಚೆ ಹೇಳಿದಂತೆ ಮಂಗಲಕರವಾದ ನಿಧಿಗಳೂ ಅವುಗಳ ರಕ್ಷಕರೂ ಇದ್ದರು.

ಆ ವೇದಿಕೆಯಿಂದೊಳಗೊ ।
ರ್ಗಾವುದ ತನಗಗಲಮಾಗೆ ಸೊಗಯಿಪುದು ವಿಧು ॥
ಗ್ರಾವದ್ರವನಿರ್ಮಳತರ ।
ಜೀವನನಿಳಯಂ ಸಲೀಲಖಾತೀವಲಯಂ ॥ ೨೮

ಅಲ್ಲಿ,

ಸಾರಸಜೀವಂಜೀವಕ ।
ಹಾರೀತಕಹಂಸಕುರರಕಂಕಬಳಾಕಾ ॥
ಕಾರಂಡಕಚಕ್ರಾಹ್ವಚ ।
ಕೋರಬಕಪ್ರಕರನಿಕರಮಸದಳಮೆಸೆಗುಂ ॥ ೨೯

ಮತ್ತಮಾ ಮಹಾಪರಿಖೆ ಶಬ್ದಶಾಸ್ತ್ರಪದ್ಧತಿಯಂತೆ ತುಹಿನನಿಪಾತಸಮುಪೇತೆಯುಂ, ಜಯನ ಶಾಲೆಯಂತೆ ಬಹುತರವಾರಿಭರಿತೆಯುಂ, ಅತಿಸಂಧಿತೆಯಂತೆ ವಿರಳೋತ್ಕಳಿಕಾತರಳೆಯುಂ, ಕರಿಕಪೋಳ ಪಾಳಿಯಂತೆ ಬಿಂದುಜಾಲಿಕಚಿತ್ರಾಗ್ರಭಾಸೆಯುಂ, ಪುಳಿಂದಕಾಂತೆಯಂತೆ ನಿರಂತರವನಭ್ರಮಾಯತ್ತೆಯುಂ, ಜನಕನಂದನೆಯಂತೆ ಅನುಕೂಲರಾಮಾನ್ವಿತೆಯುಂ, ವ್ಯಾಕೃಷ್ಟಚಾಪಾಟನಿಯಂತತಿಪ್ರಸನ್ನ ತಾತ್ಮಿಕೆಯುಂ,

೨೮. ಆ ವೇದಿಕೆಯ ಒಳಗಡೆ ಒಂದು ಗಾವುದ ಅಗಲವಾದ ಚಂದ್ರಕಾಂತಶಿಲೆಯಿಂದ ದ್ರವಿಸಿದ ನಿರ್ಮಲವಾದ ನೀರಿನಿಂದ ತುಂಬಿ ಸುಂದರವಾದ ಅಗಳ್ತೆಯೊಪ್ಪಿತು. ಅದರ ಒಳಗೆ-೨೯. ಸಾರಸ, ಜೀವಂಜೀವಕ, ಹಾರೀತ, ಹಂಸ, ಕುರರ, ಬಲಾಕ, ಕಾರಂಡಕ, ಚಕ್ರವಾಕ, ಚಕೋರ, ಬಕಪಕ್ಷಿ ಎಂಬ ಅನೇಕ ಜಲಪಕ್ಷಿಗಳ ಸಮೂಹ ಕಂಗೊಳಿಸಿತು. ವ॥ ಆ ಹಿರಿಯ ಅಗಳ್ತೆಯು ಶಬ್ದಶಾಸ್ತ್ರ ಪದ್ಧತಿಯಂತೆ "ತುಹಿನನಿಪಾತ ಸಮೋಪೇತ" (೧. ತು, ಹಿ, ನ ಎಂಬ ನಿಪಾತಗಳಿಂದ ಕೂಡಿದುದು. ೨. ತಂಪಾದ ತುಷಾರವನ್ನುಳ್ಳುದು); ಆಯುಧಶಾಲೆಯಂತೆ "ಬಹುತರವಾರಿಭರಿತ" (೧. ಅನೇಕ ಖಡ್ಗಗಳಿಂದ ತುಂಬಿದುದು. ೨. ಅತ್ಯಧಿಕವಾದ ಜಲಸಂಚಯು ವುಳ್ಳುದು); ಅತಿಸಂಧಿತೆ (ಪ್ರಣಯದಲ್ಲಿ ವಂಚಿತಳಾದವಳು) ಯಂತೆ "ಅವಿರಳೋತ್ಕಳಿ ಕಾತರಳ" (೧. ಅತ್ಯಂತ ವಿರಹ ಕಾತರೆ. ೨. ಆಧಿಕವಾದ ನೀರಿನ ತೆರೆಗಳಿಂದ ಸಂಚಲವಾದುದು); ಆನೆಯ ಕಪೋಲದಂತೆ "ಬಿಂದುಜಾಲಿಕಾಚಿತ್ರಾಗ್ರಭಾಸ" (೧. ಅನೇಕ ಚುಕ್ಕೆಗಳಿಂದ ಚಿತ್ರಚಿತ್ರವಾಗಿ ಕಂಗೊಳಿಸುವುದು. ೨. ನೀರಹನಿಗಳ ಚಿಮ್ಮುವಿಕೆಯಿಂದ ಚಿತ್ರಿತವಾಗಿ ಶೋಭಿಸುವುದು); ಶಬರಸ್ತ್ರೀಯಂತೆ "ನಿರಂತರವನಭ್ರಮಾಯುತ್ತ" (೧. ಸತತವಾಗಿ ಕಾಡಿನಲ್ಲಿ ಸುತ್ತುವವಳು. ೨. ಸ್ಪಷ್ಟವಾಗಿ ತೋರುವ ನೀರಿನ ಸುಳಿಗಳುಳ್ಳುದು); ಸೀತಾದೇವಿಯಂತೆ "ಅನುಕೂಲ ರಾಮಾನ್ವಿತ" (೧. ತನಗೆ ತಕ್ಕ ರಾಮಚಂದ್ರನನ್ನು ಹೊಂದಿರುವವಳು; ೨. ಸುಂದರವಾದ ದಡಗಳನ್ನುಳ್ಳುದು); ಎಳೆದು ಬಿಟ್ಟ ಬಿಲ್ಲಿನ ಹೆದೆಯಂತೆ "ಅತಿಪ್ರಸನ್ನತಾತ್ಮಿಕ" (೧. ತುಂಬ ಶಾಂತವಾಗಿರುವುದು (?), ೨. ಅತ್ಯಂತ ತಿಳಿಯಾದ

ಸರಸ್ವತಿಯಂತೆ ಕವಿಕುಳಕೃತಪಕ್ಷಪಾತೆಯುಂ, ರಾಶಿರಾಜಿಯಂತೆ ರಾಜಹಂಸಪ್ರಭಾರಾಜಿತೆಯುಂ, ರಾತ್ರಿಯಂತಾಕುಳಕೋಕನದಪರಿಕಲಿತೆಯುಂ, ರಾಜನೀತಿಯಂತೆ ಕುಮುದವನಶೋಭಿತೆಯುಮೆನಿಕು. ಅಂತುಮಲ್ಲದೆಯುಂ,

ಯುತಕಮಳಂ ಗತಕಮಳಂ ।
ಭೃತಕುರವಂ ಮುಕ್ತಕುರವಮಾತ್ತಕುವಳಯಂ ॥
ಪ್ರತಿಮುಕ್ತಕುವಳಯುಂ ಚಿ ।
ತ್ರತರಂ ನೋಡುವ ನರಂಗೆ ಖಾತಮಖಾತಂ ॥ ೩೦

ತಳದ ಹರಿನೀಳಭೂಮಿಯ ।
ಬೆಳಗು ಪಯಃಸ್ವಾಚ್ಛ್ಯದಿಂ ಪೊದಟ್ಟಿರೆ ಪಂಕಾ ॥
ವಿಳತೆಯಘಟಿತಮೆನುತ್ತುಂ ।
ಜಳಕೇಳಿಯೊಳಚ್ಚರಸಿಯರಚ್ಚರಿಪಡುವರ್ ॥ ೩೧

ಅಳಿಪರಿವೃತಪದ್ಮಂಗಳೊ ।
ಮೞುಂಕಿ ನೆಗೆವಮರಿಯರ ಕುರುಳ್ ಪುದಿದ ಮೊಗಂ ॥
ಗಳೊ ಮೇಣೆಂದಾಳೋಚಿಪು ।
ದೊಳಗೊಳಗಲರ್ಗೊಯ್ವ ದಿವಿಜವಧೂನಿಕುರುಂಬಂ ॥ ೩೨

ಅಂತರಂಗವುಳ್ಳದು); ಸರಸ್ವತಿಯಂತೆ "ಕವಿಕುಲಪಕ್ಷಪಾತಿ" (೧. ಕಬ್ಬಿಗರ ಮೇಲೆ ಹೆಚ್ಚು ಮಮತೆಯುಳ್ಳವಳು. ೨. ಜಲಪಕ್ಷಿಗಳ ರೆಕ್ಕೆಗಳ ಬಡಿತವನ್ನು ಒಳಗೊಂಡುದು;) ಜ್ಯೋತಿಷ್ಯದ ರಾಶಿಮಂಡಲದಂತೆ "ರಾಜಹಂಸಪ್ರಭಾರಾಜಿತ" (೧. ಚಂದ್ರಸೂರ್ಯರ ಪ್ರಭೆಯಿಂದ ಶೋಭಿಸುವುದು. ೨. ರಾಜಹಂಸಗಳ ಕಾಂತಿಯಿಂದ ಚೆಲುವಾದುದು); ರಾತ್ರಿಯಂತೆ "ಆಕುಳಕೋಕನದಪರಿಕಲಿತ" (೧. ಕೊರಗಿದ ಕೆಂದಾವರೆಗಳನ್ನುಳ್ಳದು. ೨. ಕೆಂದಾವರೆಗಳ ದಟ್ಟಣೆಯಿಂದ ತುಂಬಿದುದು); ರಾಜನೀತಿಯಂತೆ "ಕುಮುದವನ ಶೋಭಿತ" (೧. ಭೂಮಿಯ ಸಂತೋಷ ಹಾಗು ರಕ್ಷಣೆಗಳಿಂದ ಶೋಭಿಸುವುದು. ೨. ಕನ್ನೈದಿಲೆಗಳ ಸಮೂಹದಿಂದ ಚೆಲುವಾದುದು); ಇಷ್ಟೆ ಅಲ್ಲದೆ- ೩೦. ಕಮಲಗಳಿಂದ ಕೂಡಿಕೊಂಡಿದ್ದರೂ ಕಮಳ (ಹಾವಸೆ) ರಹಿತವಾಗಿ, ಕುರವ (ಪಕ್ಷಿ) ಗಳನ್ನು ಒಳಗೊಂಡಿದ್ದರೂ ಕುರವ (ಕೆಟ್ಟ ಧ್ವನಿ) ವಿರಹಿತವಾಗಿ, ಕುವಲಯ (ಕನ್ನೈದಿಲೆ) ಯುಕ್ತವಾಗಿದ್ದರೂ ಕುವಲಯ (ದುಷ್ಟ ಸಮೂಹ) ದಿಂದ ಮುಕ್ತವಾಗಿ ಆಖಾತ (ಅಗಳ್ತೆ)ವು ಅಖಾತ (ಅಗೆದು ಮಾಡದೆ, ಅಕೃತಕವಾದುದು) ಎನಿಸಿ ನೋಡುವ ಮನುಷ್ಯರ ಕಣ್ಣಿಗೆ ಬಹು ವಿಚಿತ್ರವಾಗಿತ್ತು. ೩೧. (ಆ ಕಂದಕದ) ತಳದ ಇಂದ್ರನೀಲ ಭೂಮಿಯ ಕಾಂತಿ ನೀರಿನ ಸ್ವಚ್ಛತೆಯಿಂದ ಸ್ಪಷ್ಟವಾಗಿ ಕಾಣುತ್ತಿದ್ದುದರಿಂದ, ಇಲ್ಲಿ ಕೆಸರಿನ ಸಂಪರ್ಕವಾಗುವುದು ಅಸಾಧ್ಯ ಎನ್ನುತ್ತ ಅಲ್ಲಿ ನೀರಾಟವಾಡುವ ಅಪ್ಸರೆಯರು ಸೋಜಿಗಗೊಳ್ಳುವರು. ೩೨. ನೀರಲ್ಲಿ ಇವೇನು ದುಂಬಿಗಳು ಬಳಸಿದ ತಾವರೆಗಳೊ ಅಥವಾ ಮುಳುಗಿ ಮೇಲೇಳುವಾಗ ಕೂದಲು ಮುಸುಕಿದ ದೇವಾಂಗನೆಯರ ಮುಖಗಳೊ

ಜಳಕೇಳಿಲೋಲಭಾವನ ।
ಲಳನಾಕುಚತಟವಿಲಿಖಿತಮೃಗಮದಪತ್ರಾ ॥
ವಳಿ ಪರಿಕಲಿಸಿ ತರಂಗಂ ।
ಗಳೊಳೀವುದದರ್ಕಪೂರ್ವಜಳನೀಳಿಕೆಯಂ ॥ ೩೩

ಇರುಳುಂ ಪಗಲುಂ ಮರಲ್ದಂ ।
ಬುರುಹಮುಮುತ್ಪಳಮುಮೆಸೆಗುಮೊಲವಿಂದೆ ಪರ ॥
ಸ್ಪರಕಲುಷಮನುಟಿದಂಭ ।
ಶ್ಚರಂಗಳಿರ್ಕುಂ ಪ್ರಭುಪ್ರಭಾವದಿನದಱಿಕೊಳ್ ॥ ೩೪

ಮತ್ತಮಲ್ಲಿ

ಅಗಲದೆ ಮೇಣ್ ನೆರೆಯದಿರುಳ್ ॥
ಪಗಲೆಂಬಿವಱಕೊಂದು ಪೋಗುಮಂ ಬರವುಮನಾ ॥
ಸೆಗೆಯದೆ ರಥಾಂಗಯುಗಳಂ ।
ಬಗೆಯೊಳೆ ಬೇಱಕೊಂದು ತಣಿವನೊಳಕೊಂಡಿರ್ಕುಂ ॥ ೩೫

ಅದಲ್ಲದೆಯುಂ

ಆ ಪರಿಖೆಯೆಂಬ ನೂತನ ।
ಕೂಪಾರದುದಗ್ರವಜ್ರವೇದಿಕೆಯೆಂಬಾ ॥
ಳಾಪಮನದಱವಾರ್ಕ್ತೀ ।
ರೋಪಾಂತದೊಳಿರ್ದ ವೇದಿಯೊದವಿಸಿತಾದಂ ॥ ೩೬

ಎಂದು ತೀರದಲ್ಲಿ ಹೂಕೊಯ್ಯುವ ದೇವವಧುಗಳು ಆಲೋಚಿಸುವರು. ೩೩. ಜಲಕ್ರೀಡಾಮಗ್ನರಾದ ಲಲನೆಯರ ಮೊಲೆಗೆಲದಲ್ಲಿ ಬರೆದ ಕಸ್ತೂರಿಯ ಪತ್ರಗಳು ನೀರಲ್ಲಿ ಕರಗಿ ಮೇಲೆದ್ದು ತೆರೆಗಳಲ್ಲಿ ಹರಡಿ, ಆ ನೀರಿಗೊಂದು ಅಪೂರ್ವವಾದ ಹಾವಸೆಯ ಬೆಡಗನ್ನು ಒದಗಿಸುವುವು. ೩೪. ಇರುಳಾಗಲಿ, ಹಗಲಾಗಲಿ ಎಲ್ಲ ಕಾಲದಲ್ಲಿಯೂ ಜಿನಪ್ರಭುವಿನ ಪ್ರಭಾವದಿಂದ ಕೆಂದಾವರೆ ಕನ್ನೈದಿಲೆಗಳು ಉತ್ಸಾಹದಿಂದ ಅಲ್ಲಿ ಅರಳಿಯೆ ಇರುವುವು; ಜಲಚರಗಳು ಪರಸ್ಪರ ದ್ವೇಷವನ್ನು ತೊರೆದು ಸ್ನೇಹದಿಂದಲೆ ಇರುವುವು. ಮತ್ತು ಅಲ್ಲಿ– ೩೫. ಅಗಲುವುದನ್ನೂ ಕೂಡುವುದನ್ನೂ ಮರೆತು, ಹಗಲಿರುಳುಗಳ ಬರುಹೋಗುವುದನ್ನು ಬಯಸದೆ ಚಕ್ರವಾಕ ದಂಪತಿಗಳು ಮನಸ್ಸಿನಲ್ಲಿ ಬೇರೊಂದು ಬಗೆಯ ತೃಪ್ತಿಯನ್ನು ತಾಳಿರುತ್ತಿದ್ದುವು. ಅದಲ್ಲದೆ– ೩೬. ಆ ಕಂದಕವೆಂಬ

ಅವಚಱಿಸಾಗಿಸದೆಸೆದಿ ।
ರ್ದುವು ವೇದೀದ್ವಾರಮಂಗಳಂ ನಿಧಿಪ್ರತಿಹಾ ॥
ರವಿತಾನಂಗಳ್ ಮುಂ ಪೇ ।
ೞ್ದುವನೆ ವೊಲಂ ಪೋಲ್ತು ಯಮಕವರ್ಣಂಗಳವೋಲ್ ॥ ೩೭

ಅಂತು ನಯನಹೃದಯಸಂಪನ್ನಿಧಿಯಾದ ವೇದಿಯಿಂದಮೊಳಗೆ ಚತುಃಕ್ರೋಶವಿಷ್ಕಂಭ ಸಂಭೃತಮಾಗಿ

ಆವಿಷ್ಕೃತನಿಜಲಕ್ಷ್ಮೀ ।
ಯೌವನಮಾಮೋದಸಮುದಯೋತ್ಪಾದಿತಭೃಂ ॥
ಗಾವನಮೆಸೆದಿರ್ದುದು ವ ।
ಲ್ಲೀವನಮನವರತಕುಸುಮರಸಕೃತಸವನಂ ॥ ೩೮

ಅತಿಲಲಿತಪತ್ರಕುಳಪರಿ ।
ವೃತಪತ್ರಲತಾಳಿ ವಿಕಚಪುಷ್ಪಚಯೋದಂ ॥
ಚಿತಪುಷ್ಪಲತಾಳಿ ಫಲ ।
ಪ್ರತತಿಚಲತ್ಫಲಲತಾಳಿಸೊಗಯಿಸುಮದಱೊಳ್ ॥ ೩೯

ಮತ್ತಮಾ ವನಂ ಬಹುಲತಾನ್ವಿತಮಾಗಿಯುಂ ಅಶಿಶಿರಬಾಧಾವಳಂಬಮಲ್ತು, ವಿನೂತಜಾತಿ ಯುತಮಾಗಿಯುಂ ಕುಲೀನವೃತ್ತಿವರ್ತನಮಲ್ತು, ಸಂಗತಾನೇಕಭಂಗಭಂಗುರಮಾಗಿಯುಂ

ಸಮುದ್ರದ ಈಚೆಯ ದಡದಲ್ಲಿ ವೇದಿಕೆಯೊಂದು ವಜ್ರವೇದಿಕೆ ಎಂದೆನಿಸಿತು. ೩೭. ಆ ವೇದಿಯ ದ್ವಾರಮಂಗಳದಲ್ಲಿ ಈ ಮುಂಚೆ ಹೇಳಿದಂತೆ ಅದೇ ಬಗೆಯ ನಿಧಿಗಳಿಂದಲೂ, ಪ್ರತಿಹಾರದಿಂದಲೂ ಯುಕ್ತವಾಗಿ, ಯಮಕವರ್ಣಗಳಂತೆ ಶೋಭಿಸಿದುವು. ವ॥ ಹೀಗೆ ನಯನಮನೋಹರವಾದ ವೇದಿಯಿಂದ ಒಳಗೆ ನಾಲ್ಕುಕ್ರೋಶ ವಿಸ್ತಾರವಾಗಿ ೩೮. ಸದಾ ರಸಭರಿತವಾದ ಹೂಗಳನ್ನು ಹೊಂದಿ ದುಂಬಿಗಳನ್ನು ಸಲಹುತ್ತ, ತನ್ನ ಯೌವನ ಸಂಪತ್ತಿನಿಂದ ವಿಜೃಂಭಿಸುವ ಬಳ್ಳಿಗಳ ಬನ ಅಲ್ಲಿ ಕಂಗೊಳಿಸಿತು. ೩೯. ಅತ್ಯಂತ ಸುಂದರವಾದ ಎಲೆಗಳಿಂದ ಎಲೆ ಬಳ್ಳಿಗಳೂ, ಅರಳಿದ ಹೂಗಳಿಂದ ಹೂಬಳ್ಳಿಗಳೂ ಹಣ್ಗೊಂಚಲುಗಳಿಂದ ಫಲಲತೆಗಳೂ ಅದರಲ್ಲಿ ಒಪ್ಪಿದುವು. ವ॥ ಆ ಬನವು "ಬಹುಲತಾನ್ವಿತ" (೧. ಅಗ್ನಿಯ ಸ್ವಭಾವದಿಂದ ಕೂಡಿದುದು. ೨. ಅನೇಕ ಬಳ್ಳಿಗಳನ್ನುಳ್ಳುದು) ವಾಗಿದ್ದರೂ ಉಷ್ಣಬಾಧೆಯುಳ್ಳುದಲ್ಲ; ಶ್ರೇಷ್ಠವಾದ "ಜಾತಿ" (೧. ಕುಲ, ೨. ಜಾಜಿ ಹೂ) ಯಿಂದ ಕೂಡಿದ್ದರೂ "ಕುಲೀನವೃತ್ತಿಗೆ ಸೇರಿದುದಲ್ಲ; ಅನೇಕ "ಭಂಗ ಭಂಗುರ" (೧. ತೆರೆಗಳಿಂದ ಚಂಚಲವಾದುದು. ೨. ಬಳ್ಳಿಗಳಲ್ಲಿ ಅನೇಕ ಬಾಗುಗಳನ್ನುಳ್ಳುದು) ಆದರೂ ಸಮುದ್ರದ ಶೋಭೆಯಿಲ್ಲದುದು; ಸತತವಾಗಿ "ಸುಮನೋನಿವೇಶ"

ಸಮುದ್ರಶೋಭಾವಹಮಲ್ತು, ನಿರಂತರಸುಮನೋನಿವೇಶಮಾಗಿಯುಂ ಚೇತನತ್ವಾಭ್ಯುಪೇತಮಲ್ತು, ಷಟ್ಪದೋತ್ಸಾಹಗೀತಕಾವರ್ತನವಿಷಯಮಾಗಿಯುಂ ಏಕದೇಶಶೋಭಾಪ್ರಭಾಭೂತಮಲ್ತು. ಅಂತುಮಲ್ಲದೆಯುಂ

ಅಲರ್ದದಿರ್ಮುತ್ತೆ ಪೂತ ಪೊಸಮಲ್ಲಿಗೆ ಬಂಡುಣಿವಿಂಡು ಮುತ್ತೆ ಕ ॥
ಟ್ಟಲಿಸವ ಮೊಲ್ಲೆ ಕಂಪಿನೊಳೆ ಪೊಂಪುಟಿವೋಪಿರುವಂತಿ ಬಲ್ಮುಗುಳ್ ॥
ನೆಲಸೆ ನೆಗಟ್ಟಿ ಜಾಜಿ ವಿಗಳನ್ಮಕರಂದದೆ ನಾಂದ ಸಿಂದುರಂ ।
ಸಲೆ ಋತುವೆಲ್ಲಮಲ್ಲಿ ನೆಲಸಿರ್ದುದನೇನಜೆಪಲ್ಕೆ ಸಾಲ್ವುವೋ ॥ ೪೦

ಮತ್ತಮಲ್ಲಿ

ಋತುಗಳನೊಂದನೊಂದು ಲತೆ ಪಾರ್ದಲರ್ವೇಜುವುವಿಂತಧೀಶನ ।
ಪ್ರತಿಹತಶಕ್ತಿಯಿಂದಲರ್ದುವೊರ್ಮೊದಲೆಲ್ಲಮನೀಕಗಂಧಸಂ ॥
ತತಿಗಳನಾಂತು ಗಂಧವಹಸಂಜ್ಞೆಗೆ ಸಾರ್ಥತೆಯಾದುದೆಂದು ಮಾ ।
ರುತನೊಳಕೆಯ್ದುದುಣ್ಮುವ ಪರಾಗಪರಂಪರೆಯಿಂದೆ ರಾಗಮಂ ॥ ೪೧

ಮಳಿನತೆ ಚಂದ್ರಜಿನೇಂದ್ರನ ।
ಬಳವತ್ಸಾಮರ್ಥ್ಯದಿಂದಮೋಸರಿಸೆ ತಳ ॥
ತ್ತಳಿಸುವ ಪೊಂಬಣ್ಣದಿನೆಸೆ ।
ವೆಳದುಂಬಿಗಳೀವುವದಜಿಕೊಳತಿಕೌತುಕಮಂ ॥ ೪೨

(೧. ಒಳ್ಳೆಯ ಮನಸ್ಸಿಗೆ ನೆಲೆಯಾದುದು. ೨. ಉತ್ತಮವಾದ ಹೂಗಳಿಗೆ ಆಶ್ರಯವಾದುದು) ಆಗಿದ್ದರೂ ಚೇತನತ್ವವುಳ್ಳುದಲ್ಲ; "ಷಟ್ಪದೋತ್ಸಾಹಗೀತಕಾವರ್ತನ ವಿಷಯ" (೧. ಷಟ್ಪದಿಯಲ್ಲಿ ರಚಿತವಾದ ಉತ್ಸಾಹ ಗೀತವನ್ನು ಪುನಃ ಪುನಃ ಹಾಡುತ್ತಿರುವುದು (?). ೨. ದುಂಬಿಗಳ ಉತ್ಸಾಹದ ಗಾಯನಕ್ಕೆ ಮರಳಿ ಮರಳಿ ಅವಕಾಶವಾದುದು) ಆಗಿದ್ದರೂ ಒಂದೇ ರೀತಿಯ ಶೋಭೆಯುಳ್ಳುದಲ್ಲ. ಅದಲ್ಲದೆ–೪೦. ಅರಳಿದ ಅದಿರ್ಗಂತಿ, ಹೂತ ಹೊಸ ಮಲ್ಲಿಗೆ, ದುಂಬಿಗಳು ಮುಸುಕಿ ಕತ್ತಲೆಗೊಂಡ ಮೊಲ್ಲೆ, ಕಂಪಿನ ಅತಿಶಯವನ್ನುಳ್ಳ ಇರವಂತಿ, ದೊಡ್ಡ ಹೂಗಳ ಜಾಜಿ, ಮಕರಂದವೊಸರುತ್ತಿರುವ ಸಿಂಧೂರ (ಬೇರೆ ಬೇರೆ ಋತುಗಳಲ್ಲಿ ಅರಳುವ) ಈ ಎಲ್ಲ ಹೂಗಳೂ ಅಲ್ಲಿದ್ದು ಎಲ್ಲ ಋತುಗಳೂ ಅಲ್ಲಿಯೆ ನೆಲಸಿದ್ದುವೆಂದು ಸ್ಪಷ್ಟವಾಗಿ ತೋರಿದುವು. ಮತ್ತು ಅಲ್ಲಿ--೪೧. (ಸಾಮಾನ್ಯವಾಗಿ) ಒಂದೊಂದು ಬಳ್ಳಿ ಒಂದೊಂದು ಋತುವಿನಲ್ಲಿ ಹೂಬಿಡುವುದು. ಆದರೆ ಇಲ್ಲಿ ಜಿನೇಶನ ಅಪ್ರತಿಮವಾದ ಪ್ರಭಾವದಿಂದ ಎಲ್ಲವೂ ಒಮ್ಮೆಲೆ ಅರಳಿ ಸುಗಂಧ ಸಂಪತ್ತಿನಿಂದ "ಗಂಧವಹ" ನೆಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿದ ವೆಂದು ಗಾಳಿಯು ಅವುಗಳ ಪರಾಗವನ್ನು ಹೊಂದಿ ಸಂತೋಷಪಟ್ಟಿತು. ೪೨. ಚಂದ್ರಪ್ರಭ ಜಿನೇಂದ್ರನ ಮಹಾ ಸಾಮರ್ಥ್ಯದಿಂದ ತಮ್ಮ ಮಲಿನತೆಯೆಲ್ಲ ಹೊರಟು ಹೋಗಲಾಗಿ ತಳತಳಿಸುವ ಹೊಂಬಣ್ಣದಿಂದ ಕಂಗೊಳಿಸುವ ಮರಿದುಂಬಿಗಳು

ಪಿರಿದುಂ ರೇಫದ್ವಯಭಾ ।
ಸುರಮಂ ಚಂದ್ರಪ್ರಭಾಂಕಮಂ ನಲವಿಂದು ॥
ಚ್ಚರಿಸಿ ಮೊರೆವಳಿಗಳದಱಿಕೊಳ್ ।
ದ್ವಿರೇಫನಾಮಂಗಳಾದುವಂದಿಂಬಱಿಯಂ ॥ ೪೩

ಅಮನನನರ್ಚಿಸಲಿಚ್ಚೈ ।
ಪ ಮನಮೆ ತಮಗಾಗೆ ಬಳ್ಳಿವಳ್ಳಿಯೊಳೆಲ್ಲಂ ॥
ಸುಮನಃಪ್ರತತಿಯನಾಯ್ವರ್ ।
ಸುಮನಃಪ್ರಮದೆಯರನೂನರಾಗದಿನದಱಿಕೊಳ್ ॥ ೪೪

ಮತ್ತಂ

ನಿಜಗಮನತ್ರಿಭಂಗದೆ ಲತಾಳಿಯ ಭಂಗುರಭಂಗಶುದ್ಧಿಯಂ ।
ನಿಜಕರಪಲ್ಲವೋಲ್ಲಸನದಿಂ ನವಪಲ್ಲವಜಾಲಲೀಲೆಯಂ ॥
ನಿಜದರಹಾಸದಿಂ ಮುಕುಳಬೃಂದಮಿಳಿದ್ದರಹಾಸಶೋಭೆಯಂ ।
ನಿಜಭುಜಶಾಖೆಯಿಂ ಲಲಿತಶಾಖೆಯನಗ್ಗಲಿಪರ್ ಲತಾಂಗಿಯರ್ ॥ ೪೫

ಅಂತು ದಿವಿಜವಲ್ಲಭಿಕಾಪ್ರತಾನಮಾನಸೋಲ್ಲಸನಜನಕಮಾದ ವಲ್ಲೀವನದಿಸೊಳಗೆ,

ರಾರಾಜನ್ನಿಧಿಮಂಗಳೋಪಚಿತಪಕ್ಷಂ ಯಕ್ಷದೌವಾರಿಕೋ ।
ದಾರಂ ಚಂಚುರತಾರಗೋಪುರಚತುಷ್ಕಂ ತನ್ನೊಳೋರಂತೆ ವಿ ॥
ಸ್ತಾರಂಬೆತ್ತಿರೆ ಭೂರಿಸಾರರಚಿತಂ ಪ್ರಾಕಾರಮುದ್ಯತ್ಪ್ರಭಾ ।
ಭಾರಂ ಸುತ್ತಿದುದೆಯ್ದೆ ಲೋಚನಚಕೋರೀವಾಗುರಾಕಾರದಿಂ ॥ ೪೬

ಆ ಹೂಗಳಲ್ಲಿ ಶೋಭಿಸಿದುವು. ೪೩. ಎರಡು ರೇಫಗಳನ್ನೊಡಗೊಂಡ ಚಂದ್ರಪ್ರಭವೆಂಬ ಅಂದವಾದ ಹೆಸರನ್ನು ಉತ್ಸಾಹದಿಂದ ಉಚ್ಚರಿಸಿ ಮೊರೆಯುವುದರಿಂದ ದುಂಬಿಗಳಿಗೆ ಅಂದಿನಿಂದ "ದ್ವಿರೇಫ" ಎಂಬ ಹೆಸರಾಯಿತು. ೪೪. ಸಂಪೂರ್ಣವಾಗಿ ನಿರಾಸಕ್ತರಾದ ಜಿನೇಂದ್ರನನ್ನು ಪೂಜಿಸುವ ಬಯಕೆಯಿಂದ ದೇವಾಂಗನೆಯರು ಬಳ್ಳಿ ಬಳ್ಳಿಗಳನ್ನು ಸುತ್ತಾಡಿ ತುಂಬಾ ಉತ್ಸಾಹದಿಂದ ಅವುಗಳಲ್ಲಿಯ ಹೂಗಳನ್ನು ಆಯುತ್ತಿದ್ದರು. ಮತ್ತು–೪೫. ತಮ್ಮ ಸಂಚಾರದಲ್ಲಿ ತಮ್ಮ ಮೈಯ ತ್ರಿಭಂಗದಿಂದ ಬಳ್ಳಿಗಳು ಬಾಗುವ ಚೆಲುವನ್ನು, ತಮ್ಮ ಚಿಗುರೆಲೆಗಳಂತಹ ಕೈಗಳ ವಿಲಾಸದಿಂದ ಹೊಸ ತಳಿರಿನ ಶೋಭೆಯನ್ನು, ತಮ್ಮ ನಸುನಗೆಯಿಂದ ಬಿರಿಮೊಗ್ಗುಗಳ ನಸುನಗೆಯ ಬೆಡಗನ್ನೂ, ತಮ್ಮ ಬಳ್ಳಿದೋಳುಗಳಿಂದ ಬಳ್ಳಿಯ ಶಾಖೆಗಳ ಅಂದವನ್ನು ಆ ಬಳ್ಳಿ ಮೈಯ ಬೆಡಗಿಯರು ಹೆಚ್ಚಿಸುತ್ತಿದ್ದರು. ವ॥ ಹೀಗೆ ದೇವವಲ್ಲಭೆಯರಿಗೆ ಮನೋಲ್ಲಾಸಕರವಾದ ಆ ಬಳ್ಳಿಬನದಿಂದ ಒಳಗೆ–೪೬. ರಾರಾಜಿಸುತ್ತಿರುವ ನಿಧಿಗಳು ಹಾಗು ಮಂಗಳಗಳಿಂದ ಕೂಡಿ, ಯಕ್ಷದ್ವಾರಪಾಲಕರಿಂದ ಶೋಭಿಸುತ್ತ, ಹೊಳೆಯುತ್ತಿರುವ ನಾಲ್ಕು ಬಳ್ಳಿಯ ಗೋಪುರಗಳನ್ನೊಡಗೊಂಡು, ವಿಸ್ತಾರವಾಗಿ ಪ್ರಭೆಯನ್ನು ಹರಡುತ್ತ ಕಣ್ಣುಗಳೆಂಬ ಚಕೋರಿಗಳಿಗೆ ಬೀಸಿದ ಬಲೆಯೆಂಬಂತೆ ಸಾರ

ಅಲ್ಲಿಂದೊಳಗೆ ಮತ್ತಂ ಚತುಃಕ್ರೋಶವಿಶಾಳಪ್ರದೇಶಂಗಳೊಳೆ ನಾಲ್ಕುಂ ಮಹಾವೀಧಿಗಳೆಡೆಯೊಳ್

ನಿಱಿದಳಿರ್ದೊಂಗಲಿಂದೆಸೆವಶೋಕವನಂ ತನಿವಣ್ಣ ಗೊಂಚಲಿಂ।
ದೊಱಗಿದ ಸಪ್ತಪರ್ಣವನಮುಳ್ಳಲರ್ದೊಳ್ಳಲರಿಂದಮೆತ್ತಲುಂ॥
ಮಿಱುಗುವ ಚಾರುಚಂಪಕವನಂ ತಳಿರಿಂದಲರಿಂ ಫಳಂಗಳಿಂ।
ತುಱುಗಿದ ಬಾಳಚೂತವನಮೀಕ್ರಮದಿಂದಮೆ ತಪ್ಪದೊಪ್ಪುಗುಂ॥ ೪೭

ಗಿಳಿಗಳ್ ಸ್ಯಾದ್ವಾದಮೀಮಾಂಸೆಯೊಳೆ ಬಿಡದುಪನ್ಯಾಸಮಂ ಮಾೞ್ಪುದಾದಂ।
ಕಳಕಂಠಗಳ್ ಚತುರ್ಮಂಗಳಮನೆ ನುಡಿಯುತ್ತಿರ್ಪುವಾಕಲ್ಪವಾಸಂ॥
ಗಳವುದ್ಯತ್ಪದ್ಮರಾಗದ್ಯುತಿಗಳಮಳಚಂದ್ರೋಪಳಜ್ಯೋತಿಗಳ್ ಗೊಂ।
ದಳದಿಂ ಸುತ್ತಿರ್ದ ನಾಲ್ಕುಂ ಬನದೊಳೆನೆ ಕರಂ ಚೋದ್ಯಮುದ್ಯಾನದೇಶಂ॥ ೪೮

ಮತ್ತಮಲ್ಲಿ

ಮಣಿಮಯಶೃಂಗತುಂಗಕೃತಕಾಚಳಮಾಕೃತಕಾಚಳಾಗ್ರದೊಳ್।
ಕುಣಿವ ನವಿಲ್ ನವಿಲ್ಗೆ ಜತಿಯಂ ತಳತಾಳದಿನೊಂದಿಪಪ್ಸರೋ॥
ಗಣಮಿರದಪ್ಸರೋಗಣಮನಾಱಿಪ ತೆಂಕಣ ಗಾಳಿ ಗಾಳಿಯೊಳ್।
ಪೆಣೆದಲರ್ಗಂಪಿನಿಂ ತಣಿದು ಪಾಡುವ ತುಂಬಿಯದೇನಳುಂಬಮೋ॥ ೪೯

ವತ್ತಾದ ಬೆಳ್ಳಿಯ ಪ್ರಾಕಾರ ಸುತ್ತಿಕೊಂಡಿತ್ತು. ವ॥ ಅದರಿಂದಾಚೆ ಒಳಗಡೆಗೆ ನಾಲ್ಕು ಕ್ರೋಶ ವಿಶಾಲವಾದ ನಾಲ್ಕು ಹೆದ್ದಾರಿಗಳ ಎಡೆಯಲ್ಲಿ–೪೭. ಚೆಲುವಾದ ತಳಿರ ಗೊಂಚಲಿಂದೊಪ್ಪುವ ಅಶೋಕವನ, ಸವಿಯಾದ ಹಣ್ಣುಗಳ ಗೊನೆಗಳಿಂದ ಬಾಗಿದ ಸಪ್ತಪರ್ಣವನ, ತುಂಬ ಅರಳಿದ ಹೂಗಳಿಂದ ಎತ್ತೆತ್ತಲೂ ಹೊಳೆಯುವ ಚಂಪಕವನ, ತಳಿರಿಂದಲೂ, ಹೂಗಳಿಂದಲೂ, ಕಿಕ್ಕಿರಿದ ಎಳಮಾವಿನ ವನ– ಹೀಗೆ ಕ್ರಮವಾಗಿ ನಾಲ್ಕು ವನಗಳು ಒಪ್ಪಿದುವು. ೪೮. ಉಜ್ವಲವಾದ ಮಾಣಿಕ್ಯದ ಪ್ರಭೆಯಿಂದಲೂ ಚಂದ್ರಕಾಂತದ ಕಾಂತಿಯಿಂದಲೂ ಆವೃತವಾದ ಈ ನಾಲ್ಕು ಬನಗಳಲ್ಲಿ ಗಿಳಿಗಳು ಸ್ಯಾದ್ವಾದ ಮೀಮಾಂಸೆಯಲ್ಲಿ ಸತತವಾಗಿ ಉಪನ್ಯಾಸ ಮಾಡುತ್ತಿದ್ದುವು. ಕೋಗಿಲೆಗಳು ಚತುರ್ಮಂಗಳಗಳನ್ನು ನುಡಿಯುತ್ತಿದ್ದವು. ಹೀಗೆ ಆ ಉದ್ಯಾನ ಪ್ರದೇಶವು ಆಶ್ಚರ್ಯಕರವಾಗಿತ್ತು. ಮತ್ತು ಅಲ್ಲಿ–೪೯. ರತ್ನಮಯವಾದ ಉನ್ನತ ಶಿಖರಗಳುಳ್ಳ ಕೃತಕಗಿರಿಗಳು; ಆ ಗಿರಿಗಳ ಮೇಲೆ ಕುಣಿಯುತ್ತಿರುವ ನವಿಲು; ನವಿಲ ಕುಣಿತಕ್ಕೆ ಕೈಯಿಂದ ತಾಳ ಹಿಡಿವ ಅಪ್ಸರಾಸಮೂಹ; ಆ ಅಪ್ಸರೆಯರ ಶ್ರಮವನ್ನು ಆರಿಸುವ ತೆಂಕಣ ಗಾಳಿ; ಆ ಗಾಳಿಯಲ್ಲಿ ಅಳವಟ್ಟ ಪರಿಮಳದಿಂದ ತೃಪ್ತಿಹೊಂದಿ ಹಾಡುವ ದುಂಬಿಗಳು– ಇವೆಲ್ಲ ಎಷ್ಟೊಂದು ಅತಿಶಯವಾಗಿದ್ದುವು!

ಅದಲ್ಲದೆಯುಂ, ಕನಕಕೋಷ್ಟಚಕ್ರತ್ರಯಪರಿಕೃತೋತ್ತುಂಗಮಣಿಪೀಠತ್ರಯಾಧಿಷ್ಠಿತತೀರ್ಥಕರ ಪರಮದೇವಾಭಿಮುಖಪರ್ಯಂಕಾಸನಾಂಕಿತಾಷ್ಟಮಹಾಪ್ರಾತಿಹಾರ್ಯವರ್ತ್ಯರ್ಹದ್ಬಿಂಬಸಂಭೃತವಿಶಾಳಮೂಳಪ್ರದೇಶಮುಂ ಅನವರತಸವನಪೂಜೋನ್ಮುಖಾನೇಕವೈಮಾನಿಕಾವಾಸಭನಾಮರಪರೀತಮುಮಾಗಿ

ಅಮೃತಶ್ರೀಯುಮನೀಯಲಾರ್ಪಭಿನವಂ ಕಲ್ಪಾವನೀಜಾತಮೆಂ।
ಬ ಮಹೋದಾತ್ತತೆವೆತ್ತ ವಿಶ್ವಭುವನಪ್ರಸ್ತುತ್ಯಮಂ ಚೈತ್ಯವೃ ॥
ಕ್ಷಮನೋರೊಂದನೆ ತಾಳ್ದಿ ಮಧ್ಯಮಹಿಯೊಳ್ ನಾಲ್ಕುಂ ಬನಂ ಪಾವನ।
ತ್ವಮನಾಳ್ದಿರ್ದುದಶೋಕಸಪ್ತದಳಚಾಂಪೇಯಪ್ರಭೇದಾನ್ವಿತಂ ॥ ೫೦

ಅಂತನೂನಶೋಭಾವಳಂಬನಂಗಳೆರಡುಂ ಕೆಲಕೆಲದ ಪೆರ್ವೀಧಿಗಳೆರಡುಂ ದೆಸೆಯೊಳೆಸವೆಂಟುಂ ಕ್ಷುಲ್ಲಕದ್ವಾರದಿರ್ಕೆಲಂಗಳೊಳಮೆರಡೆರಡೆನಿಸಿ

ಸೊಗಯಿಸುವುವು ನಾಟಕಶಾ।
ಲೆಗಳುತ್ತುಂಗತ್ರಿಭೂಮಿಕೋಪೇತಂಗಳ್ ॥
ದ್ವಿಗುಣೀಕೃತಾಷ್ಟಸಂಖ್ಯಾ।
ನುಗತಂಗಳ್ ಶುಭ್ರಕಾಂತಿಭರಿತಾಭ್ರಂಗಳ್ ॥ ೫೧

ಮತ್ತಮವಱೊಂದೊಂದು ಭೂಮಿಕೆಗಳೊಳ್ ಏಕತಾಳ ಧ್ರುವ ತ್ರಿಪುಡೆ ಮಟ್ಠೆಯ ಝಂಪೆ ಅಟತಾಳ ರೂಪಕಂ ಮೊದಲಾದ ಸೂತ್ರತಾಳಂಗಳೊಳಂ ನೂಱೆಂಟು ನ್ಯಾಸತಾಳಂಗಳೊಳಂ ಕೂಡಿ,

ವ॥ ಅದಲ್ಲದೆ, ವೃತ್ತಾಕಾರದ ಮೂರು ಚಿನ್ನದ ಕೋಟೆಗಳ ನಡುವೆ ಉನ್ನತವಾದ ರತ್ನ ಪೀಠತ್ರಯದ ಮೇಲೆ ಮಂಡಿಸಿದ ತೀರ್ಥಕರನಿಗೆ ಅಭಿಮುಖವಾಗಿ ಪರ್ಯಂಕಾಸನದಲ್ಲಿ ಅಷ್ಟಮಹಾಪ್ರಾತಿಹಾರ್ಯ ಸಹಿತವಾದ ಜನಬಿಂಬವನ್ನು ಮೂಲದಲ್ಲಿ ಒಡಗೊಂಡು ವೈಮಾನಿಕರೆ ಮೊದಲಾದ ನಾಲ್ಕು ಬಗೆಯ ದೇವತೆಗಳು ಸುತ್ತುಗಟ್ಟಿರಲಾಗಿ_೫೦. ಅಮೃತತ್ವವನ್ನು ಕೊಡಬಲ್ಲ ಅಭಿನವ ಕಲ್ಪವೃಕ್ಷಗಳೆಂಬ ಮಹಿಮೆಯುಳ್ಳ ವಿಶ್ವಭುವನ ಪೂಜ್ಯವಾದ ಚೈತ್ಯವೃಕ್ಷ (ಅರಳಿಮರ) ಗಳು ಒಂದೊಂದು ಬನಕ್ಕೆ ಒಂದೊಂಧರಂತೆ ನಿಂತಿರಲಾಗಿ, ಅವುಗಳಿಂದ ಆ ನಾಲ್ಕೂ ಬನಗಳು ಪಾವನವಾಗಿದ್ದವು ವ॥ ಬನಗಳ ಇಕ್ಕೆಲದಲ್ಲಿಯು ಅತ್ಯಂತ ಶೋಭೆಯುಳ್ಳ ಹಿರಿಯ ಬೀದಿಗಳೆರಡು; ಅವುಗಳಿಗೆ ಎರಡೂ ಪಕ್ಕಗಳಲ್ಲಿ ಎಂಟೆಂಟು ಚಿಕ್ಕಬಾಗಿಲುಗಳು; ಬಾಗಿಲ ಉಭಯ ಪಾರ್ಶ್ವಗಳಲ್ಲಿ ಎರಡೆರಡರಂತೆ_೫೧. ಗಗನಚುಂಬಿಯಾದ ಮೂರಂತಸ್ತಿನ ನಾಟಕಶಾಲೆಗಳು-ಒಟ್ಟು ಹದಿನಾರು ಶೋಭಿಸಿದುವು. ವ॥ ಅವುಗಳ ಒಂದೊಂದು ಅಂತಸ್ತಿನಲ್ಲಿಯೂ ಏಕತಾಳ, ಧ್ರುವ, ತ್ರಿಪುಡೆ, ಮಟ್ಠೆಯ, ಝಂಪೆ, ಅಟತಾಳ, ರೂಪಕ ಮೊದಲಾದ ಸೂತ್ರತಾಳ

ಪಸರಿಸಿದುದು ಭಾವಂ ರಸ ।
ಮೊಸರ್ದುವು ಲಯದೊಡನೆ ಗೀತವಾದ್ಯಂ ಸಮಸಂ ॥
ದೆಸೆದುದೆನೆ ದೇವಿಯರ್ ನಟಿ ।
ಯಿಸುವರ್ ನಾಟಕಮನೊಡನೆ ಮೂವತ್ತಿರ್ಬರ್ ॥ ೫೨

ಒಂದೊಂದು ನಾಟ್ಯಶಾಲೆಯ ।
ಮುಂದೊಂದೊಂದೆನಿಸಿ ಧೂಪಘಟಮುಂ ಪದಿನಾ ॥
ಱಂದೆಸೆದಿರ್ದುವು ಪದಿನಾ ।
ಱುಂ ದಿವಮುಮನಡರೆ ಸುರಭಿಧೂಮಸ್ತೋಮಂ ॥ ೫೩

ಅಂತನೇಕಶೋಭಾಪರಿಕಲಿತಮಾದುಪವನದಿನೊಳಗೆ

ಪೊಸ ಪೊನ್ನವೇದಿ ನಾಲ್ಕುಂ ।
ದೆಸೆಗಳೊಳಂ ಬೆಳ್ಳಿವೆಸದ ಬಾಗಿಲ್ವಾಡಂ ॥
ಪಸರಿಸಿದ ಸಕಳಮಂಗಳ ।
ಪಿಸರಂ ನಿಧಿಸಮಿತಿ ಯಕ್ಷರಕ್ಷಕರೆಸೆಗುಂ ॥ ೫೪

ಮತ್ತಾ ವಿಶಾಳವೇದಿಯ ।
ಸುತ್ತಿಂದೊಳಗೇಕಯೋಜನವ್ಯಾಸಾಢ್ಯಂ ॥
ಪ್ರೋತ್ತುಂಗಕಾಂಚನಸ್ತಂ ।
ಭಾತ್ತಧ್ವಜಭೂಮಿಯಿರ್ಕುಮತ್ಯಭಿರಾಮಂ ॥ ೫೫

ಅಲ್ಲಿ

ಗಳಲ್ಲಿಯೂ, ನೂರೆಂಟು ನ್ಯಾಸತಾಳಗಳಲ್ಲಿಯೂ ಕೂಡಿ-೫೨. ಭಾವ ಪಸರಿಸಿ, ರಸವೊಸರುವಂತೆ ಗೀತ ವಾದ್ಯಗಳು ಲಯಕ್ಕೆ ಸಮನಾಗಿ ನಡೆಯುತ್ತಿರಲು ಮೂವತ್ತೆರಡು ಜನ ದೇವಿಯರು ನಾಟ್ಯವಾಡುತ್ತಿದ್ದರು. ೫೩. ಪ್ರತಿಯೊಂದು ನಾಟಕಶಾಲೆಯ ಮುಂದೆ ಒಂದು ಧೂಪಘಟ; ಹೀಗೆ ಹದಿನಾರು ಧೂಪಘಟಗಳಿಂದ ಹೊಮ್ಮುತ್ತಿದ್ದ ಸುಗಂಧದ ಹೊಗೆ ಹದಿನಾರು ಸ್ವರ್ಗಗಳವರೆಗೆ ಹಬ್ಬುತ್ತಿತ್ತು. ವ॥ ಹೀಗೆ ಅನೇಕ ಬಗೆಯ ಶೋಭೆಗಳಿಂದ ಕೂಡಿದ ಉಪವನದಿಂದ ಒಳಗೆ-೫೪. ಚಿನ್ನದ ವೇದಿಯಿತ್ತು; ಅದರಲ್ಲಿ ನಾಲ್ಕು ದಿಕ್ಕಿಗೂ ಬೆಳ್ಳಿಯ ನಾಲ್ಕು ಬಾಗಿಲುವಾಡಗಳು. ಅವುಗಳ ಬಳಿ ಅಷ್ಟಮಂಗಳಗಳೂ, ನವನಿಧಿಗಳೂ ಹಾಗು ಯಕ್ಷರಕ್ಷಕರೂ ಕಂಗೊಳಿಸಿದರು. ೫೫. ಈ ವಿಶಾಲವೇದಿಯ ಬಳಸಿನೊಳಗೆ ಒಂದು ಯೋಜನ ವ್ಯಾಸವುಳ್ಳ, ಅತ್ಯುನ್ನತವಾದ ಚಿನ್ನದ ಧ್ವಜಸ್ತಂಭಗಳಿಂದ ತುಂಬಿದ ಅತ್ಯಂತ ಸುಂದರವಾದ ಧ್ವಜಭೂಮಿಯಿತ್ತು. ಅದರಲ್ಲಿ-

ಗರುಡಂ ಗಜಂ ಮಯೂರಂ ।
ಮರಾಳಮಂಬುರುಹಮಂಬರಂ ಚಂದ್ರಂ ಭಾ ॥
ಸುರಚಕ್ರಂ ದಾಮಂ ದಂ ।
ತಿರಿಪುವೆನಿಪ್ಪಂಕದಿಂ ದಶಧ್ವಜಮೆಸೆಗುಂ ॥ ೫೬

ಪರಿಕಿಪೊಡೊಂದೊಂದಷ್ಟೋ ।
ತ್ತರಶತಮೊಂದೆಸೆಯೊಳೆಯ್ದಿ ನಾಲ್ದೆಸೆಗಳವಂ ॥
ಬೆರಸಿದೊಡನಿಂತು ನಾಲ್ಸಾ ।
ಸಿರಮೆಣ್ಬತ್ತುಟಿಯೆ ಮತ್ತೆ ನಾಲ್ಕೂಣಿಕ್ಕುಂ ॥ ೫೭

ಮತ್ತಮದೊಂದೊಂದರ್ಕ ।
ಷ್ಟೋತ್ತರಶತಮಾದುಪಧ್ವಜಂಗಳ್ ಲಕ್ಕಂ ॥
ಮೊತ್ತದೆ ನಾಲ್ಕು ಸಹಸ್ರಂ ।
ಮತ್ತಱುವತ್ತಾಱು ಷಷ್ಟಿಯುತಪಂಚಶತಂ ॥ ೫೮

ಬಗೆವಂದೆಣ್ಬೆತ್ತೆಣ್ಬೆರ ।
ಲಗಲಂ ದೈರ್ಘ್ಯಂ ದ್ವಿಗುಣಿತನವಶತಚಾಪಂ ॥
ಸೊಗಯಿಪ ಕಂಭಕ್ಕೆಡೆದೆಱ ।
ಪುಗಳಿರ್ಪತ್ತಯ್ದು ಬಿಲ್ ಧ್ವಜಂಗಳ್ಗೆಲ್ಲಂ ॥ ೫೯

ಶರದದ ಬಿಳಿಯ ಮುಗಿಲ್ದೆಱ ।
ಪರಿಕಲಿಸುತ್ತಿರ್ದುವಂತರಿಕ್ಷದೊಳೆನಿಕುಂ ॥
ಪಿರಿದುಂ ಧ್ವಜನಿಕರಶಿರಃ ।
ಪರಿಲಗ್ನದುಕೂಲಲೋಲಘಟಿಕಾಜಾಲಂ ॥ ೬೦

೫೬. ಗರುಡ, ಆನೆ, ನವಿಲು, ಹಂಸ, ಕಮಲ, ಅಂಬರ, ಚಂದ್ರ, ಚಕ್ರ, ದಾಮ, ಸಿಂಹ ಎಂಬ ಚಿಹ್ನೆಗಳ ಹತ್ತು ಧ್ವಜಗಳು ಕಂಗೊಳಿಸಿದುವು. ೫೭. ಒಂದೊಂದು ದಿಕ್ಕಿನಲ್ಲಿ ಇಂತಹ ಒಂದೊಂದು ಬಗೆಯ ನೂರೆಂಟು ಧ್ವಜಗಳು; ಎಂದರೆ ಒಂದು ಸಾವಿರದಎಂಬತ್ತು; ನಾಲ್ಕು ದಿಕ್ಕಿನ ಒಟ್ಟು ಧ್ವಜಗಳ ಸಂಖ್ಯೆ ನಾಲ್ಕು ಸಾವಿರದ ಮೂನ್ನೂರೆಂಬತ್ತು. ೫೮. ಮತ್ತೆ ಒಂದೊಂದಕ್ಕೂ ನೂರೆಂಟು ಉಪಧ್ವಜಗಳು: ಹೀಗೆ ಒಟ್ಟು ನಾಲ್ಕುಲಕ್ಷ ಅರವತ್ತು ಸಾವಿರದ ಐನೂರ ಅರುವತ್ತು ೫೯. ಎಂಬತ್ತೆಂಟು ಬೆರಲಷ್ಟು ಅಗಲವಾಗಿ ಹದಿನೆಂಟು ಬಿಲ್ಲಳತೆಯ ಧ್ವಜಸ್ತಂಭಗಳು; ಒಂದರಿಂದೊಂದು ಇಪ್ಪತ್ತೈದು ಬಿಲ್ಲಳತೆಯ ಅಂತರದಲ್ಲಿದ್ದುವು. ೬೦. ಉನ್ನತವಾದ ಸ್ತಂಭದ ತುದಿಯಲ್ಲಿ ದುಕೂಲ ಪಟದಿಂದ ಅಲ್ಲಾಡುತ್ತಿರುವ ಕಲಶಗಳು ಶರತ್ಕಾಲದ ಬಿಳಿಮೋಡಗಳ ಹಿಂಡೊ ಎನೊ

ಕೆಲದ ಬನಂಗಳ ಕೃತಕಾ ।
ಚಲದ ಲತಾಂತಂಗಳನಿಳವಶದಿಂ ತದ್ಧೂ ॥
ತಳದೊಳ್ ಧ್ವಜಾಗ್ರಹತಿಯಿಂ ।
ಗಳಿಯಿಪ ತಾರಗೆಗಳೆನಿಸಿ ಬಂದುಗುತಿರ್ಕುಂ ॥ ೬೧

ಮತ್ತಂ

ಓರಂದಮಾಗಿ ತರದಿಂ ।
ತಾರಾಧ್ವಕ್ಕೊಗೆದ ತದ್ಧ್ವಜಾಳಿ ಕುಬೇರಂ ॥
ಕಾರೋಪಕನೆನೆ ಬಳೆದ ಶ ।
ಚೀರಮಣನ ಪುಣ್ಯಫಲದ ಬೆಳೆಗೈಯೆನಿಕುಂ ॥ ೬೨

ಆ ಧ್ವಜಭೂಮಿಯಿಂದೊಳಗೆ

॥ ಅನವದ್ಯವೃತ್ತಂ ॥

ಬಳಸಿದತ್ತು ಮಹಾಹಿಮವದ್ಧಾತ್ರೀಧರಮೆತ್ತಲುಮೆಂಬಿನಂ ।
ತೊಳಗುವರ್ಜುನವರ್ಣದ ಶಾಳಂ ರಾಜತಗೋಪುರಜಾಳದಿಂ ॥
ಮಿಳಿರ್ವ ಸರ್ವಮಹಾನಿಧಿರಾಜನ್ಮಂಗಳವಸ್ತುಸಮಾಜದಿಂ ।
ಜಳಜಪಾಳನನಾಗಕುಮಾರಾನೀಕದಿನೊಪ್ಪುವುದೊರ್ಮೆಯುಂ ॥ ೬೩

ಅಂತೆಸೆವ ಶಾಳವಳಯಾ ।
ಭ್ಯಂತರದೊಳ್ ಕಲ್ಪವೃಕ್ಷವನಮಹಿಯಿರ್ಕುಂ ॥
ಸ್ವಾಂತೋತ್ಸವಕರಮೆನಿಸಿ ಸ ।
ಮಂತಷ್ವಸಹಸ್ರಚಾಪಕೃತವಿಸ್ತಾರಂ ॥ ೬೪

ಎಂಬಂತೆ ತೋರುತ್ತಿದ್ದುವು. ೬೧. ಆ ಧ್ವಜಗಳ ತುದಿ ತಿವಿದು ಉದುರಿ ಬಿದ್ದ ತಾರೆಗಳೊ ಏನೊ ಎಂಬಂತೆ, ಪಕ್ಕದ ಬನಗಳಿಂದ ಗಾಳಿಗೆ ಹಾರಿ ಬಂದು ಬಿದ್ದ ಹೂಗಳು ಶೋಭಿಸುತ್ತಿದ್ದುವು ಮತ್ತು–೬೨. ಓರಣವಾಗಿ ಆಕಾಶಕ್ಕೆ ಎದ್ದು ನಿಂತ ಆ ಧ್ವಜಸಮೂಹಗಳನ್ನು ನೋಡಲಾಗಿ, ಕುಬೇರನೆಂಬ ಕೆಲಸಗಾರನು ಇಂದ್ರನಿಗಾಗಿ ಬಿತ್ತಿ ಬೆಳೆ ತುಂಬಿ ನಿಂತ ಪುಣ್ಯಫಲದ ಭೂಮಿಯೊ ಏನೊ ಎಂದೆನಿಸಿತು. ಆ ಧ್ವಜ ಭೂಮಿಯಿಂದಾಚೆ ಒಳಗಡೆಗೆ–೬೩. ಮಹಾ ಹಿಮವತ್‌ಪರ್ವತವೆ ಬಂದು ಸುತ್ತುಗಟ್ಟಿತೊ ಏನೊ ಎಂಬಂತೆ ಅಚ್ಚಬಿಳಿಯ ವರ್ಣದ ಕೋಟೆಯೊಂದು ಬೆಳ್ಳಿಯ ಗೋಪುರಗಳ ಸಮೂಹದಿಂದಲೂ, ಹೊಳೆಯುವ ಸರ್ವಮಹಾನಿಧಿಗಳಿಂದಲೂ, ವಿಜೃಂಭಿಸುವ ಮಂಗಳಗಳಿಂದಲೂ, ದ್ವಾರಪಾಲಕರಾದ ನಾಗಕುಮಾರರಿಂದಲೂ ಶೋಭಿಸಿತು. ೬೪. ಹೀಗೆ ಕಂಗೊಳಿಸುವ ಕೋಟೆಯ ಒಳಗಡೆಗೆ ಚಿತ್ತೋತ್ಸವಕರವಾದ ಕಲ್ಪವೃಕ್ಷಗಳ

ಜ್ಯೋತಿಯನೀವ ಮಂದಿರಮನೀವ ಸುಧಾನ್ನಮನೀವ ವಸ್ತ್ರಸಂ ।
ಘಾತಮನೀವ ವಾದಿತಮನೀವ ಸುಮಾಲ್ಯಮನೀವ ಭಾಜನ ॥
ವ್ರಾತಮನೀವ ದೀಪಮುಮನೀವ ವಿಭೂಷೆಯನೀವ ಸೋಮಸಂ ।
ಘಾತಮನೀವ ಕಲ್ಪಕುಜಮೊಪ್ಪುವುವಲ್ಲಿ ದಶಾಂಗಸಂಗಂತಂ ॥ ೬೫

ಮತ್ತಂ

ದೇವನಗಾಗ್ರದಿಂದಭಿಷವೋತ್ಸವದಿಂದಿಟಿತಂದು ಬೇಗದಿಂ ।
ತೀವಿ ನಿಜಾಳವಾಳಕುಳಮಂ ತಣಿವಿತ್ತ ಸುಧಾಬ್ಧಿಜೀವನಂ ॥
ಜೀವನಮೆಂದೆ ಬಂದುದು ಜಿನೇಂದ್ರನಸೋಲಗಿಪಟ್ಟೆಯಿಂದೆ ಕ ।
ಲ್ಪಾವನಿಜೋತ್ಕರಂ ಕುರುಧರಿತ್ರಿಗಳಿಂದೆನಿಸಿತ್ತು ತದ್ವನಂ ॥ ೬೬

ಅದಲ್ಲದೆಯುಮಲ್ಲಿ ಸೊಗಯಿಸುವ

ಕೃತಕೋರ್ವೀಧರಜಾಳದೊಳ್ ಕೃತಕಸಿಂಧುವ್ರಾತದೊಳ್ ಕಾಂಚನೋ ।
ನ್ನತಡೊಳ್ ವಾರ್ನಿಕುರಂಬದೊಳ್ ವಿತತಧಾರಾಗೇಹಸಂದೋಹದೊಳ್ ॥
ಕೃತಮುಷ್ಪಚ್ಛದತಲ್ಪಕಲ್ಪಲತಿಕಾಗಾರಾಳಿಯೊಳ್ ದೇವದಂ ।
ಪತಿಗಳ್ ಕ್ರೀಡಿಪರೆಂದೊಡೇಂ ಬನಮದೆಂತುಂ ದಿವ್ಯಸಂಸೇವ್ಯಮೋ ॥ ೬೭

ಮತ್ತಂ ಪೂರ್ವೋಕ್ತಕ್ರಮದಿಂ ನಾಲ್ದೆಸೆಯ ನಾಲ್ಕುಂ ಬನಂಗಳ ಮಧ್ಯದೊಳ್ ತ್ರಿಶಾಳಪರಿವೃತತ್ರಿವಿಷ್ಟರಾಗ್ರಕಾಯೋತ್ಸರ್ಗಸ್ಥಿತವಿಶುದ್ಧ ಸ್ಫಟಿಕಮಯಸಿದ್ಧ ಪ್ರತಿಮಾಪ್ರತಿಬದ್ಧಮೂಳಪ್ರದೇಶ

ಉದ್ಯಾನವು ಎಂಟು ಸಾವಿರ ಬಿಲ್ಲಳತೆಯ ವಿಸ್ತಾರವನ್ನೊಳಗೊಂಡಿತ್ತು. ೬೫. ಜ್ಯೋತಿಯನ್ನು, ಮಂದಿರಗಳನ್ನು, ಅಮೃತಾನ್ನವನ್ನು, ವಸ್ತ್ರಸಮೂಹವನ್ನು, ವಾದ್ಯಗಳನ್ನು, ಮಾಲ್ಯಾದಿಗಳನ್ನು, ಪಾತ್ರೆಗಳನ್ನು, ದೀಪಗಳನ್ನು, ಆಭರಣ ಗಳನ್ನು, ಮದ್ಯವನ್ನು ಒದಗಿಸುವ ಹತ್ತು ಬಗೆಯ ಕಲ್ಪವೃಕ್ಷಗಳು ಅಲ್ಲಿ ಒಪ್ಪಿದುವು. ಮತ್ತು–೬೬. "ಮೇರುಗಿರಿಯಿಂದ ಜನ್ಮಾಭಿಷೇಕೋತ್ಸವದಲ್ಲಿ ಹರಿದು ಬಂದು ನಮ್ಮ ಪಾತಿಗಳನ್ನೆಲ್ಲ ತುಂಬಿ ತೃಪ್ತಿಯಿತ್ತ ಆ ಜೀವನ (ನೀರು) ನಮಗೆ ಕೊಟ್ಟ ಜೀವನ (ಸಂಬಳ)" ಎಂದುಕೊಂಡು ಜಿನೇಂದ್ರನ ಸೇವೆಗಾಗಿ ಭಕ್ತಿಯಿಂದ ಕುರುಭೂಮಿಯ ಕಲ್ಪವೃಕ್ಷಗಳು ಎದ್ದು ಬಂದು ಇಲ್ಲಿ ನಿಂತಿವೆಯೊ ಏನೊ ಎಂಬಂತೆ ಆ ವನವು ಕಂಗೊಳಿಸಿತು. ಅದಲ್ಲದೆ ಅಲ್ಲಿ ಶೋಭಿಸುವ – ೬೭. ಅನೇಕ ಕೃತಕ ಗಿರಿಗಳಲ್ಲಿ, ಕೃತಕ ಜಲಾಶಯಗಳಲ್ಲಿ, ಧಾರಾಗೃಹಗಳಲ್ಲಿ, ಹೂವಿನ ಹಾಸುಗೆಯುಳ್ಳ ಕಲ್ಪಲತೆಯ ಮಂಡಪಗಳಲ್ಲಿ ದೇವದಂಪತಿಗಳು ಕ್ರೀಡಿಸು ತ್ತಿರುವರೆಂದ ಮೇಲೆ ಆ ಬನ ಎಂತಹ ದಿವ್ಯವೆಂದು ಹೇಳಬೇಕು ! ವ॥ ಈ ಹಿಂದೆ ಹೇಳಿದ ಕ್ರಮದಲ್ಲಿ ನಾಲ್ಕು ದಿಕ್ಕಿನ ನಾಲ್ಕು ಬನಗಳ ಮಧ್ಯದಲ್ಲಿ ಮೂರು

ಪೇಶಲಂಗಳುಂ ಪ್ರತಿವಿಟಪಘಟಿತಘಂಟಾಜಾಳಮುಕ್ತಾದಾಮಚಾಮರೋದ್ದಾಮಂಗಳುಮಪ್ಪ ನಮೇರು ಮಂದಾರಪಾರಿಜಾತಹರಿಚಂದನಸಂತಾನಮೆಂಬ ಸಿದ್ಧಾರ್ಥಕವೃಕ್ಷಂಗಳಿಂದಮೆಂಟುಂ ಪಕ್ಷಕದ್ವಾರಂಗಳಿರ್ಕೆಲದ ಪದಿನಾಱುಂ ನಾಟಕಶಾಲೆಗಳಿಂದಮನಿತೆ ಧೂಪಘಟಂಗಳಿಂದಮೆಸೆದು ಸಕಳಮಂಗಳಜನ್ಮಭೂಮಿಯಾದ ಕಲ್ಪವೃಕ್ಷವನಭೂಮಿಯಿಂ ಬಟಿಕ್ಕೆ,

ಮಂಗಳನಿಧಿನಿಕರಸನಾ ।
ಥಂಗಳಿನತಿರುಚಿತರಜತರಚಿತಮಹಾದ್ವಾ ॥
ರಂಗಳಿನುರಗಪ್ರತಿಹಾ ।
ರಂಗಳಿನೊಪ್ಪುವುದು ಕನಕವೇದೀವಳಯಂ ॥ ೭೮

ಅಲ್ಲಿಂದೊಳಗರ್ಧಯೋಜನವಿಶಾಳಶೋಭಾವಿಷಯಮಾಗಿ

ನಯನಾಮೃತಕ್ಕೆ ಮತ್ತಾ ।
ರಯೆ ಕರ್ಣರಸಾಯನಕ್ಕೆ ಸುರನರ ಜನತಾ ॥
ಶಯಸೌಖ್ಯಕ್ಕುದ್ಭವಭೂ ।
ಮಿಯಿದೆನೆ ಸಂಗೀತಭೂತಳಂ ಸೊಗಯಿಸುಗುಂ ॥* ೭೯

ಕೋಟೆಗಳ ಬಳಸಿನ ಒಳಗಡೆಗೆ ಪೀಠತ್ರಯದ ಮೇಲೆ ಕಾಯೋತ್ಸರ್ಗದಲ್ಲಿರುವ ಶುದ್ಧ ಸ್ಫಟಿಕಮಯವಾದ ಸಿದ್ಧಪ್ರತಿಮೆಗಳನ್ನು ತಮ್ಮ ಮೂಲ ಪ್ರದೇಶದಲ್ಲಿ ಒಡಗೊಂಡು, ಗಂಟೆಯ ಸಾಲು, ಮುತ್ತಿನ ಹಾರ ಹಾಗು ಚಾಮರಗಳಿಂದ ಅಲಂಕೃತವಾಗಿ ನಮೇರು, ಮಂದಾರ, ಪಾರಿಜಾತ, ಹರಿಚಂದನ, ಸಂತಾನಕವೆಂಬ ಸಿದ್ಧಾರ್ಥಕ ವೃಕ್ಷಗಳು ಅಲ್ಲಿ ನೆಲಸಿದ್ದುವು; ಪ್ರತಿ ಪಕ್ಷದಲ್ಲಿರುವ ಎಂಟು ಬಾಗಿಲುಗಳ ಇಕ್ಕೆಲದಲ್ಲಿರುವ ಹದಿನಾರು ನಾಟಕಶಾಲೆಗಳಿಂದಲೂ, ಹದಿನಾರು ಧೂಪಘಟಗಳಿಂದಲೂ ಶೋಭಿಸಿ ಸಕಲಮಂಗಳಗಳಿಗೂ ತಾಯಿಮನೆಯಾದ ಕಲ್ಪವೃಕ್ಷೋದ್ಯಾನದಿಂದ ಆಚೆಗೆ– ೭೮. ಅಷ್ಟಮಂಗಳ, ನವನಿಧಿಗಳಿಂದ ಕೂಡಿದ ಬೆಳ್ಳಿಯ ಮಹಾದ್ವಾರಗಳಿಂದಲೂ ನಾಗಕುಮಾರ ದ್ವಾರಪಾಲರಿಂದಲೂ ಕನಕವೇದಿಯೊಪ್ಪಿತು. ವ॥ ಅಲ್ಲಿಂದ ಒಳಗೆ ಅರ್ಧಯೋಜನ ವಿಶಾಲವಾಗಿ ಶೋಭಿಸುವ– ೭೯. ಕಣ್ಣಿಗೆ ಅಮೃತವನ್ನು, ಕಿವಿಗೆ ರಸಾಯನವನ್ನೂ, ಸುರಜನರಿಗೆ ಸೌಖ್ಯವನ್ನೂ ಒದಗಿಸುವ ಮೂಲಾಶ್ರಯವೆಂಬಂತೆ ಸಂಗೀತ

---

* ಸುರನರ್ತಕಿಯರವರಿಸಲ್ ।
ಲ್ಮರೆಯಾದತ್ತವರದಿವ್ಯರೂಪುಗುಣಂಗಳ್ ॥
ವರಮೆಸನ್ನೆರಮಾದಂ ।
ಸುರರಾಗಂವೀತರಾಗಮಯಮಾಯ್ತಾಗಳ್ ॥ ೭೯

ಇದು ಒಂದು ಪ್ರತಿಯಲಿಲ್ಲ; ಗ್ರಂಥಕರ್ತನದಲ್ಲದೆಂದು ತೋರಿಬರುತ್ತದೆ.

ಮತ್ತಮಲ್ಲಿ ನೃತ್ಯಸಾಂಪ್ರದಾಯಕಸಾಮಾಜಕಜನನಿವೇಶೋಚಿತೋತ್ತುಂಗರಂಗಪಾರ್ಶ್ವವಿಶಾಳ ಭೂಪ್ರದೇಶಂಗಳಿಂದಂ ಅತಿಬಹಳಶಾತಕುಂಭಸ್ತಂಭಂಗಳಿಂದಂ ಅಪ್ರತಿಸುರತ್ನವರಾತಿಭದ್ರಂಗಳಿಂದಂ ಉದಾರಚತುರ್ದ್ವಾರಂಗಳಿಂದಂ ಆತ್ತಮತ್ತವಾರಣಂಗಳಿಂದಂ ಮತ್ತಂ ದೇವಮಾನವಮೃಗಖಗೋರ್ವೀಜ ಪರ್ವತಂಗಳಿಂ ಕ್ರಿಯಾಗುಣದ್ರವ್ಯಗಳಿಂ ಜಾತಿಯಾಗೆ ಒರೆದ ಚಿತ್ರಂ । ಚಿತ್ರಾರ್ಧಂ । ಚಿತ್ರಾಭಾಸ ಮೆಂಬ ಮೂಱುಂ ಚಿತ್ರದೊಳಂ, ಶ್ರುತವಿದ್ಧಮಾತ್ಮವಿದ್ಧಂ ಪರವಿದ್ಧಮೆಂಬ ವಿದ್ಧಪದ್ಧತಿಯೊಳಂ, ಋಜು । ಋಜುಪರಾವೃತ್ತಿ । ಅರ್ಧಋಜು । ಅರ್ಧಋಜುಪರಾವೃತ್ತಿ । ಸಾಚಿ । ಸಾಚಿಪರಾವೃತ್ತಿ । ದ್ವ್ಯರ್ಧಾಕ್ಷಂ। ತತ್ಪರಾವೃತ್ತಿ । ಪಾರ್ಶ್ವಗತಮೆಂಬ ನವಸ್ಥಾನಕಂಗಳೊಳಂ, ಆಯಾಮವಿಸ್ತಾರಮೆಂಬ ಮಾನದ್ವಯದೊಳಂ ರಸಚಿತ್ರಂ । ಧೂಳೀಚಿತ್ರಮೆಂಬೆರಡೋಜೆಯೊಳಂ, ಪುಲಕಂ । ಪತ್ರಕಂ । ಬಿಂದುಕಂ । ಧೂಮ್ರಾವರ್ತಂ। ಉದ್ವರ್ತನಂ । ಚಿತ್ರವರ್ತಮೆಂಬಾಱುಮಕ್ಕೆಗಳೊಳಂ, ಉದಕಂ । ಅರ್ಧೋದಕಂ । ವರ್ಣಾಂತರಮೆಂಬೀ ಪಲವುಂ ಭವಿಗೆಯ್ವ ಪದದೊಳಮಳವಡೆ ಭೂತಭವದ್ಭಾವಿ ಶಲಾಕಾಪುರುಷಚರಿತಂಗಳಂ ದಿವ್ಯಜ್ಞಾನಿಗಳಿಂ ತಿಳಿದು ಜನ್ಮಪರಂಪರೆವೆರಸು ಮಯಮಾಂಡವ್ಯವಿಶ್ವ ಕರ್ಮರೆಂಬ ಮರ್ತ್ಯ ಚಿತ್ರಕರ್ ಬರೆದ ಚಿತ್ರಂಗಳೊಳಂ, ಅವಱಿಡೆಯೆಡೆಯೊಳ್ ಚಿತ್ರಾರ್ಧಪತ್ರಮೆಂದು ತದ್ವಿದ್ಯಾ ವೈಶಾರದ್ಯಮಂ ಮೆಱೆವ ತೆಱದೆಕಳಿಕೆ । ಕಂಟಕಂ । ಬಾಳಶಿಶಿರ । ತ್ರಿಭಂಗಂ । ಮಕರಿಕೆಯೆಂಬ

ಭೂಮಿ ಕಂಗೊಳಿಸಿತು. ವ॥ ಅಲ್ಲಿ ನೃತ್ಯಕಾರರ ಸಾಮಾಜಿಕರ ನಿವಾಸಕ್ಕೆ ಯೋಗ್ಯವಾದ ಉನ್ನತವಾದ ಹಾಗು ವಿಶಾಲವಾದ ರಂಗಭೂಮಿ ಪಾರ್ಶ್ವಭೂಮಿಗಳಿಂದಲೂ, ಅನೇಕಾನೇಕ ಚಿನ್ನದ ಕಂಬಗಳಿಂದಲೂ, ಅಪ್ರತಿಮವಾದ ರತ್ನ ರಚನೆಗಳಿಂದಲೂ, ವಿಸ್ತಾರವಾದ ನಾಲ್ಕು ಬಾಗಿಲುಗಳಿಂದಲೂ, ಬಿತ್ತರದ ಅಂಗಳಗಳಿಂದಲೂ ದೇವ ಮಾನವ ಮೃಗ ಖಗ ವೃಕ್ಷಗಳಿಂದ ತುಂಬಿದ ಪರ್ವತಗಳಿಂದಲೂ, ಕ್ರಿಯಾ ಗುಣದ್ರವ್ಯಗಳಿಂದ ಜಾತಿಯಾಗಿ ಬರೆದ ಚಿತ್ರ, ಚಿತ್ರಾರ್ಧ, ಚಿತ್ರಾಭಾಸವೆಂಬ ಮೂರು ಬಗೆಯ ಚಿತ್ರಣದಿಂದಲೂ, ಶ್ರುತವಿದ್ಧ, ಆತ್ಮವಿದ್ಧ, ಪರವಿದ್ಧವೆಂಬ ವಿದ್ಧ ಪದ್ಧತಿ ಯಿಂದಲೂ, ಋಜು, ಋಜುಪರಾವೃತ್ತಿ, ಅರ್ಧಋಜು, ಅರ್ಧಋಜು ಪರಾವೃತ್ತಿ, ಸಾಚಿ, ಸಾಚಿಪರಾವೃತ್ತಿ, ದ್ವ್ಯರ್ಧಾಕ್ಷ, ದ್ವ್ಯರ್ಧಾಕ್ಷಪರಾವೃತ್ತಿ, ಪಾರ್ಶ್ವಗತ ಎಂಬ ಒಂಬತ್ತು ಸ್ಥಾನಕಗಳಿಂದಲೂ, ಆಯಾಮ, ವಿಸ್ತಾರ ಎಂಬ ಎರಡು ಬಗೆಯ ಮಾನಗಳಿಂದಲೂ, ರಸಚಿತ್ರ, ಧೂಳೀಚಿತ್ರ ಎಂಬ ಎರಡು ರೀತಿಗಳಲ್ಲಿಯೂ, ಪುಲಕ, ಪತ್ರಕ, ಬಿಂದುಕ, ಧೂಮ್ರಾವರ್ತ, ಉದ್ವರ್ತನ, ಚಿತ್ರವರ್ತ ಎಂಬ ಆರು ಬಗೆಯ ವರ್ಣಲೇಪದಿಂದಲೂ ಉದಕ, ಅರ್ಧೋದಕ, ವರ್ಣಾಂತರ ಎಂಬ ಹಲವಾರು ಭವಿಗೊಡುವ ಹದದಲ್ಲಿಯೂ ಅಳವಟ್ಟು, ಈಗಾಗಲೆ ಆಗಿ ಹೋದ, ಈಗಿರುವ ಹಾಗು ಇನ್ನು ಆಗಲಿರುವ ಶಲಾಕಾಪುರುಷರ ಚರಿತ್ರೆಗಳನ್ನು ದಿವ್ಯಜ್ಞಾನಿಗಳಿಂದ ತಿಳಿದು ಜನ್ಮಾವಳಿ ಸಹಿತವಾಗಿ ಮಯ, ಮಾಂಡವ್ಯ, ವಿಶ್ವಕರ್ಮರೆಂಬ ದೇವ ಚಿತ್ರಕಾರರು ಬರೆದ ಚಿತ್ರಗಳಿಂದಲೂ, ಅವುಗಳ ಎಡೆಯೆಡೆಯಲ್ಲಿ ಚಿತ್ರ, ಅರ್ಧಪತ್ರವೆಂದು ಚಿತ್ರವಿದ್ಯಾನಿಪುಣತೆ

ಪಂಚಾಂಕುರಪ್ರಪಂಚಮುಂ, ಗ್ರಂಥಿಗರ್ಭಂ । ಛಲಿತಾಳವಟ್ಟಂ । ಪುದಿವು । ಪೊದಱು । ಉತ್ಪಾಳಿಕವಿ । ಮರುಳು । ಪೂರ್ವಶಾಖೆ । ಪಶ್ಚಿಮಶಾಖೆ । ಶಿರಂ । ಮನುಶಿರಂ । ವರಾಹಕರ್ಣಿಕೆ ಗಜಕರ್ಣಿಕೆಯೆಂಬವಯವಪ್ರಕಾರಮುಮೆಸೆಯೆ ಬರೆದ ಶಿಶು । ಸಕಲಂ । ಸ್ವಸ್ತಿಕಂ । ವರ್ಧಮಾನಂ । ಸರ್ವತೋಭದ್ರಂ । ಕಾಂತಂ । ಮಹಾಕಾಂತಂ । ಚಿತ್ರೋತ್ಸವಮೆಂಬೆಂಟುಂ ಪತ್ರಂಗಳೊಳಂ, ಅಸಾದೃಶ್ಯಮುಂ ದೃಶ್ಯಮುಮಾದ ಶುಶ್ಲಕ್ಷ್ಣಸುಧಾಭಿತ್ತಿಭಾಗಂಗಳಿಂದಮಪೂರ್ವಭಿತ್ತಿಯಂ ತಳೆದು

ಸಂಗೀತದ ದೆಸೆಯಱಿಯದ ।
ವಂಗಂ ಪುಗಲೊಡನೆ ಪಾಡುವಾಡುವ ಚಿತ್ತಂ ॥
ಸಂಗಳಿಪುದೆನಿಪ ನೃತ್ಯಗೃ ।
ಹಂಗಳ್ ಸುತ್ತಿಱಿದು ನೆಱೆಯೆ ಮೆಱೆಯುತ್ತಿರ್ಕುಂ । ೭೧

ಅದಲ್ಲದೆಯುಂ ಷಡ್ಜಮಧ್ಯಮಗ್ರಾಮಸಂಬಂಧಂಗಳಪ್ಪ ಅಷ್ಟಾದಶಜಾತಿಗಳೊಳ್ ಪುಟ್ಟಿದ ಪಲವುಂ ಗ್ರಾಮರಾಗಂಗಳೊಳಂ, ಅಲ್ಲಿ ಪುಟ್ಟಿದ ಭಾಷೆಗಳ್ಗೊಳಂ, ಭಾಷೆಗಳೊಳ್ ಪುಟ್ಟಿದ ವಿಭಾಷೆಗಳೊಳಂ, ವಿಭಾಷೆಗಳೊಳ್ ಪುಟ್ಟಿದಂತರಭಾಷೆಗಳೊಳಂ, ತತ್ತದಂಗಂಗಳಪ್ಪ ರಾಗಾಂಗಂ । ಭಾಷಾಂಗಂ । ಉಪಾಂಗಂ । ಕ್ರಿಯಾಂಗಮೆಂಬ ದೇಶೀರಾಗಂಗಳೊಳಂ, ಮತ್ತಂ ಸ್ಥಾನತ್ರಯನಿಯತಮುಂ ಸ್ಥಾಯ್ಯಾದಿವರ್ಣಯುತಮುಂ ಅಮುಕ್ತಸ್ಥಾನರಂಜನಮುಂ ನಾನಾಲಂಕಾರಸಾರಮುಂ ಲೀನೋಲ್ಲಸನ್ನಾದನ್ಯಾಸಭಾಸುರಮುಂ ತಂ । ಹ । ಯ । ಎ । ಆ । ದ । ತಿನಂ । ನಿತ । ನಿತ । ಗೀತಾಕ್ಷರೋಪಲಕ್ಷಿತಮುಂ

ಯನ್ನು ಮೆರೆವಂತೆ ಕಳಿಕೆ, ಕಂಟಕ, ಬಾಳಶಿಶಿರ, ತ್ರಿಭಂಗ, ಮಕರಿಕೆ ಎಂಬ ಐದು ಅಂಕುರಗಳಿಂದಲೂ, ಗ್ರಂಥಿಗರ್ಭ, ಛಲಿತಾಳವಟ್ಟ, ಪುದಿವು, ಪೊದಱು, ಉತ್ಪಾಳಿಕವಿ, ಮರುಳು, ಪೂರ್ವಶಾಖೆ, ಪಶ್ಚಿಮಶಾಖೆ, ಶಿರ, ಮನುಶಿರ, ವರಾಹಕರ್ಣಿಕೆ, ಗಜಕರ್ಣಿಕೆ ಎಂಬ ಅವಯುವ ಪ್ರಕಾರಗಳಿಂದಲೂ ಚೆಲುವಾಗಿ ಬರೆದ ಶಿಶು, ಸಕಲ, ಸ್ವಸ್ತಿಕ, ವರ್ಧಮಾನ, ಸರ್ವತೋಭದ್ರ, ಕಾಂತ, ಮಹಾಕಾಂತ, ಚಿತ್ರೋತ್ಸವ ಎಂಬ ಎಂಟು ಪತ್ರಗಳಿಂದಲೂ ಅಸಮಾನವೂ ದರ್ಶನೀಯವೂ ಆದ ನಯನುಣುಪು ಗಳಿಂದೊಪ್ಪುವ ಅಪೂರ್ವವಾದ ಭಿತ್ತಿಗಳಿಂದ ಯುಕ್ತವಾಗಿ ೭೧. ಸಂಗೀತದ ಗಂಧವೂ ಇಲ್ಲದವನಿಗೆ ಕೂಡ ಅಲ್ಲಿ ಪ್ರವೇಶಮಾಡಿದೊಡನೆ ಹಾಡುವ ಕುಣಿಯುವ ಮನಸ್ಸಾಗುವಂತೆ ಪ್ರಭಾವ ಬೀರುವ ನೃತ್ಯಗೃಹಗಳು ಸುತ್ತಲೂ ಶೋಭಿಸಿದುವು. ವ॥ ಅದಲ್ಲದೆ, ಷಡ್ಜಮಧ್ಯಮ ಗ್ರಾಮಸಂಬಂಧಗಳಾದ ಹದಿನೆಂಟು ಜಾತಿಗಳಲ್ಲಿ ಹುಟ್ಟಿದ ಹಲವು ಗ್ರಾಮ ರಾಗಗಳಲ್ಲಿಯೂ, ಅಲ್ಲಿ ಹುಟ್ಟಿದ ಭಾಷೆಗಳಲ್ಲಿಯೂ ಭಾಷೆಗಳಲ್ಲಿ ಹುಟ್ಟಿದ ವಿಭಾಷೆಗಳಲ್ಲಿಯೂ ವಿಭಾಷೆಗಳಲ್ಲಿ ಹುಟ್ಟಿದ ಅಂತರ ಭಾಷೆಗಳಲ್ಲಿಯೂ, ಅವುಗಳ ಅಂಗಗಳಾದ ರಾಗಾಂಗ, ಭಾಷಾಂಗ, ಉಪಾಂಗ, ಕ್ರಿಯಾಂಗ ಎಂಬ ದೇಶೀರಾಗಗಳಲ್ಲಿಯೂ, ಮತ್ತು ಸ್ಥಾನತ್ರಯನಿಯತವೂ ಸ್ಥಾಯಿಯೆ ಮೊದಲಾದ ವರ್ಣಯುಕ್ತವೂ, ಅಮುಕ್ತಸ್ಥಾನರಂಜನವೂ, ನಾನಾ ರಸಾಲಂಕಾರಸಹಿತವೂ ಅಂದವಾದ ನಾದನ್ಯಾಸದಿಂದ ಇಂಪಾಗಿಯೂ,

ಗಮಕರಮಣೀಯಮುಂ ನಿಖಿಳಗೀತವಸ್ತ್ವಾದಿರೂಪಮುಮಪ್ಪಾಲಾಪಿಯೊಳಂ, ವಿಸ್ತರ । ಸಂಕೀರ್ಣ । ಶುದ್ಧ । ಮಿಶ್ರಮೆಂಬ ಚತುರ್ವಿಧರಾಗಂಗಳಿಂ ಉದ್ಗ್ರಾಹ । ಧ್ರುವ । ವೇಳಾಪ । ಭೋಗಂಗಳೆಂಬ ನಾಲ್ಕುಂ ಧಾತ್ವಂಗಂಗಳಿಂ, ಸ್ವರ । ಪದ । ಬಿರುದ । ಪಾಟ । ತೆನ್ನ । ತಾಳಮೆಂಬ ಷಡಂಗಂಗಳಿಂ ನಳಂ । ಕೃತಂ । ಪ್ರಸನ್ನಂ । ವ್ಯಕ್ತಂ । ಪೂರ್ಣಂ । ಸಮಂ । ಸುಕುಮಾರಂ । ಸುರಕ್ತಂ । ಶ್ಲಕ್ಷ್ಣಂ । ಮಧುರಂ । ವಿನಿಕೃಷ್ಟಮೆಂಬ ದಶಗುಣಂಗಳಿನೆಸೆವ ಗೀತಕಾದಿಶುದ್ಧಪ್ರಬಂಧಂಗಳೊಳಂ, ಮಾತೃಕಾದಿದೇಶೀಪ್ರಬಂಧಂಗಳೊಳಂ, ಧ್ರುವಾದಿದೇಶೀಗೀತಂಗಳೊಳಂ, ತ್ರಿಮಾರ್ಗಸೂಳಕ್ರಮದೊಳಂ, ಲಕ್ಷ್ಯಲಕ್ಷಣಕುಶಲರುಂ ಸಂದಷ್ಟಾದ್ಯೇಕೋನವಿಂಶತಿದೋಷದೂರರುಂ ಜಿತಶ್ರಮರುಂ ವಶ್ಯಕಂಠರುಮಪ್ಪ ಉತ್ತಮೋತ್ತಮಗಾಯಕರುಮಂ, ಮತ್ತಂ ತತಘನಸುಷಿರಾವನದ್ಧಚತುರ್ವಾದ್ಯಭೇದವೇದಿಗಳುಮಂ, ಏಕಹಸ್ತ । ದ್ವಿಹಸ್ತ । ಕೋಣ । ಹಸ್ತಕೋಣ । ಅಂಗುಳಿಕಾ । ಪೂತ್ಕಾರವಾದನ ಕ್ರಮಜ್ಞರುಂ, ಯತ್ಯಾದಿಸಪ್ತತ್ರಿಂಶದ್ವಾದ್ಯಪ್ರಬಂಧಪ್ರಯೋಗಪಟುಗಳುಮಂ, ಶುದ್ಧಂ । ಸಮಂ । ವಿಭಕ್ತಂ । ರಕ್ತಂ । ಮಧುರಂ । ಸ್ಫುಟಂ । ಪ್ರಹರಣಂ । ಶುಭದಂ । ವಿಘುಷ್ಟಂ । ಕಳಂ । ಘನಮೆಂಬ ದಶರಾದ್ಯಪ್ರಬಂಧಪ್ರಯೋಗಗುಣಪ್ರವೀಣರುಮಂ, ಗೀತಾನುಯಾಯಿ । ನೃತ್ಯಾನುಯಾಯಿ । ಉಭಯಾನುಯಾಯಿವಾದ್ಯಭೇದವಿಶಾರದರುಂ ವ್ಯಕ್ತಾದ್ಯಷ್ಟಹಸ್ತಗುಣಾಶ್ರಯ

ತಂ, ಹಯ, ಎ, ಆ, ದ, ತಿನಂ, ನಿತ, ನಿತ, ಎಂಬ ಗೀತಾಕ್ಷರಗಳಿಂದ ಉಪಲಕ್ಷಿತವೂ, ಗಮಕರಮಣೀಯವೂ, ಸಕಲ ಗೀತವಸ್ತುರೂಪವೂ ಆದ ಆಲಾಪಿಯಲ್ಲಿಯೂ, ವಿಸ್ತರ, ಸಂಕೀರ್ಣ, ಶುದ್ಧ, ಮಿಶ್ರ ಎಂಬ ನಾಲ್ಕು ಬಗೆಯ ರಾಗಗಳಿಂದ ಉದ್ಗ್ರಾಹ, ಧ್ರುವ, ವೇಳಾಪ, ಭೋಗ ಎಂಬ ನಾಲ್ಕು ಧಾತ್ವಂಗಗಳಿಂದ, ಸ್ವರ, ಪದ, ಬಿರುದ, ಪಾಟ, ತೆನ್ನ, ತಾಳ ಎಂಬ ಆರು ಅಂಗಗಳಿಂದ, ನಳ, ಕೃತ ಪ್ರಸನ್ನ, ವ್ಯಕ್ತ, ಪೂರ್ಣ, ಸಮ, ಸುಕುಮಾರ, ಸುರಕ್ತ, ಶ್ಲಕ್ಷ್ಣ, ಮಧುರ, ವಿನಿಕೃಷ್ಟ ಎಂಬ ಹತ್ತು ಗುಣಗಳಿಂದ ಶೋಭಿಸುವ ಗೀತಕವೆ ಮೊದಲಾದ ಶುದ್ಧ ಪ್ರಬಂಧಗಳಲ್ಲಿಯೂ, ಮಾತೃಕವೆ ಮೊದಲಾದ ದೇಶೀಪ್ರಬಂಧಗಳಲ್ಲಿಯೂ, ಧ್ರುವ ಮುಂತಾದ ದೇಶೀಗೀತೆಗಳಲ್ಲಿಯೂ ತ್ರಿಮಾರ್ಗಸೂಳಕ್ರಮದಲ್ಲಿಯೂ, ಲಕ್ಷ್ಯಲಕ್ಷಣನಿಪುಣರೂ ಸಂದಷ್ಟವೆ ಮೊದಲಾದ ಹತ್ತೊಂಬತ್ತು ದೋಷವರ್ಜಿತರೂ, ಸಾಧನೆಯಿಂದ ಜಿತಶ್ರಮರೂ, ಕಂಠದ ಮೇಲೆ ಪ್ರಭುತ್ವವುಳ್ಳವರೂ ಆದ ಅತ್ಯುತ್ತಮ ಗಾಯಕರನ್ನು, ಮತ್ತು ತತ, ಘನ, ಸುಷಿರ, ಅವನದ್ಧವೆಂಬ ನಾಲ್ಕು ಬಗೆಯ ವಾದ್ಯವಿಶಾರದರನ್ನು, ಏಕಹಸ್ತ, ದ್ವಿಹಸ್ತ, ಕೋಣ, ಹಸ್ತಕೋಣ, ಅಂಗುಳಿಕೆ, ಪೂತ್ಕಾರ ಎಂಬ ವಾದನಕ್ರಮಗಳಲ್ಲಿ ಬಲ್ಲಿದರನ್ನು, ಯತಿ ಮೊದಲಾದ ಮೂವತ್ತೇಳು ವಾದ್ಯಪ್ರಬಂಧ ಪ್ರಯೋಗದಲ್ಲಿ ಪ್ರವೀಣರನ್ನು ಶುದ್ಧ, ಸಮ, ವಿಭಕ್ತ, ರಕ್ತ, ಮಧುರ, ಸ್ಫುಟ, ಪ್ರಹರಣ, ಶುಭದ, ವಿಘುಷ್ಟ, ಕಳ, ಘನ, ಎಂಬ ದಶವಾದ್ಯ ಪ್ರಬಂಧ ಪ್ರಯೋಗದಲ್ಲಿ ವಿಶಾರದರನ್ನೂ, ಗೀತಾನುಯಾಯಿ, ನೃತ್ಯಾನುಯಾಯಿ, ಉಭಯಾನುಯಾಯಿ ಎಂಬ ವಾದ್ಯ ಪ್ರವೀಣರನ್ನೂ, ವ್ಯಕ್ತವೆ

ರುಮಪ್ಪ ವಾದಕರುಮಂ, ಮತ್ತಂ ಸಂಯುತಾಸಂಯುತನೃತ್ಯಭೇದದಱುವತ್ತುನಾಲ್ಕು ಹಸ್ತಂಗಳುಮಂ ಸ್ಥಾಯೀಭಾವ । ವ್ಯಭಿಚಾರೀಭಾವ । ರಸಭೇದ ಮೂವತ್ತಾಱುದೃಷ್ಟಿಗಳುಮನಾಱುಂ ಪಾದಪ್ರಕಾರಂಗಳುಮಂ ಮತ್ತಮಱಿದಂಗೋಪಾಂಗಪ್ರತ್ಯಂಗಚೇಷ್ಟೆಗಳುಮಂ ಮೂಱುಂ ಲಾಸ್ಯಸ್ಥಾನಂಗಳುಮನಾಱುಂ ನಾಟ್ಯಸ್ಥಾನಂಗಳುಮು ಮತ್ತಂ ಪಲವು ಮಿಶ್ರಸ್ಥಾನಂಗಳುಮಂ ಪದಿನಾಱು ಭೂಮಿಚಾರಿಗಳುಮನನಿತೆ ಗಗನಚಾರಿಗಳುಮಂ ಪತ್ತುಂ ಭೌಮಮಂಡಲಂಗಳುಮನನಿತೆ ವೈಹಾಯಸಮಂಡಲಂಗಳುಮಂ ಹದಿನಾಱುಂ ಹಾರುಗಳುಮಂ ನೂಱೆಂಟು ಕರಣಂಗಳುಮಂ ಪದಿನೆಂಟು ದೇಶೀಕರಣಂಗಳುಮನೇೞುಂ ಭ್ರಮರಿಗಳುಮಂ ಮೂಱುಂ ತೆಱದ ಸೂಚಿಗಳುಮಂ ಕರಣಂಗಳ ಕೂಟದಿಂ ಪುಟ್ಟುವ ಮೂವತ್ತೆರಡಂಗಹಾರಂಗಳುಮಂ ನಾಲ್ಕುಂ ರೇಚಿತಂಗಳುಮಂ ಯಥಾಶಾಸ್ತ್ರಮುಮತಿಲಲಿತಮುಮಾಗಿ ಅಭಿನಯಿಸಲಱಿವ ರೂಪಲಾವಣ್ಯಪ್ರಾವೀಣ್ಯಯೌವನಾದಿಗುಣಪರಿಪೂರ್ತಿಯನುಳ್ಳ ನರ್ತಕಿಯರುಮಂ, ಮೇಳವಱಿಯಱಿವಾಯ್ದುಕೊಂಡು

ಶ್ಲೋ॥ "ಮುಖ್ಯಾದ್ವಾದಶಗಾತಾರಃ ದ್ವಾದಶೈವ ಚ ಗಾಯಿಕಾಃ ।
ಅಷ್ಟಾಚಿಹಲಿಕಾಃ ಪ್ರೋಕ್ತಾಃ ಷಟ್ತಥಾ ವಾಂಶಿಕಾ ಮತಾಃ ॥
ಒತ್ತಕಾರಾಶ್ಚ ಪಂಚಾಸ್ಯುಃ ತಥಾ ಪಾಟಹಿಕಾಸ್ತ್ರಯಃ ।
ಯತ್ರಮಾರ್ದಂಗಿಕಾಃ ಷಟ್ಚವೃಂದಸ್ಸ್ಯಾದುತ್ತಮೋತ್ತಮಂ ॥" ೭೨

ಮೊದಲಾದ ಎಂಟು ಹಸ್ತಗುಣ ಸಂಪನ್ನರಾದ ವಾದಕರನ್ನು, ಮತ್ತು ಸಂಯುತ, ಅಸಂಯುತ, ನೃತ್ಯಭೇದದ ಅರುವತ್ತುನಾಲ್ಕು ಹಸ್ತಗಳನ್ನು ಸ್ಥಾಯೀಭಾವ, ವ್ಯಭಿಚಾರೀಭಾವ, ರಸಭೇದ ಮೂವತ್ತಾರು ದೃಷ್ಟಿಭೇದಗಳನ್ನು, ಆರು ಪಾದ ವಿನ್ಯಾಸಗಳನ್ನು ಮತ್ತು ಇತರ ಅಂಗೋಪಾಂಗಗಳಲ್ಲಿ ಪ್ರತ್ಯಂಗ ವಿನ್ಯಾಸಗಳನ್ನು ಮೂರು ಲಾಸ್ಯ ಸ್ಥಾನಗಳನ್ನು ಮತ್ತು ಹಲವು ಮಿಶ್ರಸ್ಥಾನಗಳನ್ನು ಹದಿನಾರು ಭೂಮಿಚಾರಿಗಳನ್ನೂ, ಅಷ್ಟೇ ಸಂಖ್ಯೆಯ ಗಗನಚಾರಿಗಳನ್ನೂ, ಹತ್ತು ಭೌಮಮಂಡಲಗಳನ್ನು ಅಷ್ಟೆ ಸಂಖ್ಯೆಯ ಆಕಾಶಮಂಡಲಗಳನ್ನು ಹದಿನಾರು ಹಾರಗಳನ್ನು, ನೂರೆಂಟು ಕರಣಗಳನ್ನು, ಹದಿನೆಂಟು ದೇಶೀಕರಣಗಳನ್ನು ಏಳು ಭ್ರಮರಿಗಳನ್ನು ಮೂರು ಬಗೆಯ ಸೂಚಿಗಳನ್ನು, ಕರಣಗಳ ಕೂಟದಿಂದ ಹುಟ್ಟುವ ಮೂವತ್ತೆರಡು ಅಂಗಹಾರಗಳನ್ನು, ನಾಲ್ಕು ರೇಚಿತಗಳನ್ನು ಶಾಸ್ತ್ರಾನುಸಾರವಾಗಿಯೂ, ಅತ್ಯಂತ ಲಲಿತವಾಗಿಯೂ ಅಭಿನಯಿಸಬಲ್ಲ ರೂಪಲಾವಣ್ಯ, ಪ್ರಾವೀಣ್ಯ ಯೌವನ ಮೊದಲಾದ ಗುಣಗಳನ್ನೆಲ್ಲ ಉಳ್ಳ ನರ್ತಕಿಯರನ್ನು ಮೇಳವರಿತು ಆಯ್ದುಕೊಂಡು ೭೨. "ಮುಖ್ಯ ಹಾಡುಗಾರರು ಹನ್ನೆರಡು ಜನ ; ಗಾಯಕಿಯರು ಹನ್ನೆರಡು ಜನ; ಚಿಹಲಿಕೆಯರು ಎಂಟು ಜನ ; ಕೊಳಲುಗಾರರು ಆರು ಜನ ; ಒತ್ತಕಾರರು ಐವರು; ಪಾಟಹಿಕರು ಮೂವರು; ಮೃದಂಗವಾದಕರು ಆರು ಜನ–ಇವರುಗಳಿಂದ ಉತ್ತಮೋತ್ತಮವಾದ ವೃಂದವಾಗುತ್ತದೆ ಎಂಬ ಭರತಶಾಸ್ತ್ರದ ಉಕ್ತಿಯ ಮೇರೆಗೆ ಐವತ್ತೆರಡು

ಎಂಬ ಭರತಾಗಮೋಕ್ತಕ್ರಮದಿಂ ದ್ವಾಪಂಚಾಶದ್ವಿದ್ಯಾವರ್ಜನಸಜ್ಜಿತಮಪ್ಪ ಸಂಪ್ರದಾಯಂಗಳುಮಂ ಸಮಕಟ್ಟಿ ದೇವಮಾನವಕುತಪವಿತತಿನೃತ್ಯಭವನಂಗಳೊಳ್ ಪ್ರತ್ಯೇಕಂಸಮಸ್ತಾದಿಪೂರ್ವರಂಗಸಂಗತಿಯಿಂ ಶುದ್ಧಂ ಚಿತ್ರಮೆಂಬೆರಡುಂ ಪದ್ಧತಿಯೊಳ್ ಸರ್ವವಿದ್ಯೇಶ್ವರನುಂ ಚತುರಾಸ್ಯನುಮಪ್ಪ ತೀರ್ಥೇಶ್ವರನಂ ಕೇವಳಂ ತಾಳಲಯಾಶ್ರಯಮುಮಂ ದೇಶೀಯಮುಮಪ್ಪ ಸಂಗೀತ ಪ್ರಸಂಗದಿನೋಲಗಿಸುವಲ್ಲಿ,

ವಿತರಚ್ಛಾಯಾದಿಕರಾ ।
ಹತಿಯೊಳ್ ಗೀತಾನುಗತಿಯೊಳವಧಾನಸಮ ॥
ನ್ವಿತರತ್ತ ಮತ್ತೆ ತಾಳದೊ ।
ಳತಿದೃಢರೆನೆ ಪಾಡಿ ಗಾಯಕರ್ ಮೆಚ್ಚಿಸುವರ್ ॥ ೭೩

ಆದಂ ಗೀತದ ಬಣ್ಣಂ ॥
ನಾದದೊಳಕ್ಕರಮುಯ್ದೆ ಶಬ್ದದೊಳಱಿಯ ॥
ಲ್ಕಾದಪುದೆನೆ ಬಾಜಿಸುವರ್ ।
ವಾದಕರುಂ ಪಿಕ್ಕೆ ಗೀತಸಮಯಮದಿಂಪಂ ॥ ೭೪

ತೊಡರದ ಪಹರಣೆಯಿಂ ಪಯ ।
ದೊಡನುಗ್ಘಡಿಸುವುದು ತೂಕದೆಸಕಂ ಜತಿಯಂ ॥
ನಡೆಯಿಪುದು ಕಿತ್ತು ಚಂಡಣೆ ।
ಗುಡುವುದು ನಚ್ಚಣಿಯರಾಟಮೇನಚ್ಚರಿಯೋ ॥ ೭೫

ಅಂತು ಸಾಶ್ಚರ್ಯತೂರ್ಯತ್ರಯಮಯಮಾದ ಭವನಭೂಚಕ್ರದೆಡೆಯೊಳೆಡೆಯ ನಾಲ್ಕುಂ ವೀಧಿಗಳ ಮಧ್ಯದೊಳ್ ಮಣಿಮಾಳಾವಿರಚಿತೋತ್ತುಂಗತೋರಣಶತಾಂತರಿತಂಗಳುಂ ಛತ್ರಚಾಮರ

ವಿದ್ಯಾವರ್ಜನ ಸಜ್ಜಿತವಾದ ಸಂಪ್ರದಾಯಗಳನ್ನು ಅನುಸರಿಸಿ ದೇವಮಾನವ ಸಂಗೀತಗಾರ ಮೇಳಗಳು ನೃತ್ಯಭವನಗಳಲ್ಲಿ ಪ್ರತ್ಯೇಕವೂ ಸಮಸ್ತಾದಿ ಪೂರ್ವರಂಗ ಸಹಿತವಾಗಿ ಶುದ್ಧ, ಚಿತ್ರ ಎಂಬೆರಡು ಪದ್ಧತಿಯಲ್ಲಿ ಸಮಸ್ತ ವಿದ್ಯಾಧಿಪತಿಯೂ ಚತುರ್ಮುಖನೂ ಆದ ತೀರ್ಥಕರನನ್ನು ತಾಳಲಯಾಶ್ರಯವಾದ ದೇಶೀಯ ಸಂಗೀತ ಪ್ರಸಂಗದಿಂದ ಓಲೈಸುತ್ತಿರುವಾಗ- ೭೩. ಛಾಯಾದಿ ಕರಾಹತಿಯಿಂದ ಗೀತದ ಅನುಗತಿಯಲ್ಲಿ ಅವಧಾನಗೊಂಡು ತಾಳದಲ್ಲಿ ತುಂಬ ಗಟ್ಟಿಗರಾದ ಗಾಯಕರು ಹಾಡಿ ಮೆಚ್ಚಿಸುವರು. ೭೪. ಗೀತದ ವರ್ಣವನ್ನು ನಾದದಲ್ಲಿಯೂ, ಅಕ್ಷರವನ್ನು ಶಬ್ದದಲ್ಲಿಯೂ ಅರಿಯಬಹುದೆಂಬಂತೆ ಗೀತಕ್ಕೆ ಮೇಳವಾಗಿ ವಾದಕರು ಬಾರಿಸುವರು. ೭೫. ನರ್ತಕಿಯರ ಕುಣಿತ ತಪ್ಪದ ಪಹರಣೆಯಿಂದ ಪಯದೊಡನೆ ಉಗ್ಗಡಿಸುವುದು; ತೂಕದ ಕ್ರಿಯೆಯಿಂದ ಜತಿಯನ್ನು ನಡೆಯಿಸುವುದು; ಕಿತ್ತು ಚಂಡಣೆಗೊಡುವುದು. ಹೀಗೆ ಅವರ ನೃತ್ಯ ಆಶ್ಚರ್ಯಕರವಾದುದು. ವ॥ ಹೀಗೆ ಆಶ್ಚರ್ಯಕರವಾದ ತೂರ್ಯತ್ರಯದ ಭವನ ಪ್ರದೇಶದ ಎಡೆಯೆಡೆಯ ನಾಲ್ಕು ಬೀದಿಗಳ ಮಧ್ಯದಲ್ಲಿ ರತ್ನಖಚಿತ

ಕನಕಕಿಂಕಿಣೀಜಾಳ ಕುಸುಮಮಾಳಾವಿಳಾಸವಿಳಸಿತಂಗಳುಂ ಜಿನಸಿದ್ಧಬಿಂಬಕದಂಬಸಂಛನ್ನಂಗಳುಂ ಅಖಂಡಶೋಣಮಾಣಿಕ್ಯಘಟಿತಂಗಳುಮಾಗಿ,

ನವನಿಧಿಯೊಂದೊಂದನೆ ಕುಡು ।
ವುವವರ್ಕೆಯ ಭವ್ಯಸಮಿತಿಗಿಷ್ಟಮನಿತ್ತೊ ॥
ಪ್ಪುವ ನವನವನಿಧಿ ನೋಡುವೊ ।
ಡಿವೆನಿಪ್ಪುವು ಕೂಡೆ ನವನವಸ್ತೂಪಂಗಳ್ ॥ ೭೬

ಆಸಂಗೀತಭೂತಳದಿನೊಳಗೆ

ಪಳಿಕಿನ ಕೋಟೆ ಕೋಟೆಗೆಳವಟ್ಟ ಹರಿನ್ಮಣಿಗೋಪುರಂಗಳು ।
ಜ್ಜಳಿಸುವ ಗೋಪುರಂಗಳ ಕೆಲಂಗೊಳಿರ್ಪ ನಿಧಿಪ್ರತಾನಮಂ ॥
ಗಳತತಿ ಮತ್ತೆ ಕಲ್ಪಜಕುಮಾರರ ಭೂತಿಗಳಾತ್ತಹಸ್ತಮ ।
ಗ್ಗಳಿಸಿದ ಕಾಪು ಕಣ್ಗೆ ಸಮನಿಪ್ಪುದು ಕೌತುಕಮಂ ನಿರಂತರಂ ॥ ೭೭

ಪರಮೌದಾರಿಕದಿವ್ಯಾಂ ।
ಗರೋಚಿ ಮೇಗೊಗೆದು ಬಳಸಿದತ್ತೆನೆ ನಿಮಿರ್ದ ॥
ಚ್ಚರಿಯಾಯ್ತಾ ಕೊಟೆಯ ಕೊನೆ ।
ವರೆಗಂ ಶ್ರೀಮಂಡಪಂ ನಭಸ್ಫಟಿಕಮಯಂ ॥ ೭೮

ಅಗಲು ತನಗೊರ್ಗಾವುದ ।
ಮಿಗಿಲಿಲ್ಲೆನೆ ಶಾಳಮೂಳದಿಂದೆ ತಗುಳ್ದೊ ॥
ಪ್ಪುಗುಮಾಶ್ರೀಮಂಡಪದೊಳ ।
ಗೆ ಗಣಾವನಿದೇಶಮಸಮಸುಕೃತಿನಿವೇಶಂ ॥ ೭೯

ವಾದ ನೂರಾರು ಉನ್ನತ ತೋರಣಗಳಿಂದಲೂ, ಹೂಮಾಲೆಗಳಿಂದಲೂ, ಅಲಂಕೃತವಾಗಿ ಅನೇಕ ಜಿನಸಿದ್ಧ ವಿಗ್ರಹಗಳಿಂದ ತುಂಬಿ ಅಖಂಡ ಮಾಣಿಕ್ಯ ಖಚಿತವಾಗಿ– ೭೬. ಬೇಡಿದವರಿಗೆ ಒಂದೊಂದನ್ನೆ ಕೊಡುವ ನವನಿಧಿಗಳುಂಟು. ಆದರೆ ಭಕ್ತಸಮೂಹಕ್ಕೆ ಬೇಡಿದ್ದೆಲ್ಲವನ್ನೂ ಒಮ್ಮೆಲೆ ಕೊಡುವ ನವೀನ ನವನಿಧಿಗಳಿವು ಎಂಬಂತೆ ಒಂಬತ್ತೊಂಬತ್ತು ಇರುವುವು. ಆ ಸಂಗೀತ ಭೂಮಿಯಿಂದ ಆಚೆ ಒಳಗಡೆಗೆ– ೭೭. ಸ್ಫಟಿಕದ ಕೋಟೆ, ಕೋಟೆಗೆ ಅಳವಡಿಸಿದ ಪಚ್ಚೆಯ ಗೋಪುರಗಳು ಗೋಪುರಗಳ ಕೆಲದಲ್ಲಿ ನಿಧಿಮಂಗಳಗಳು. ಆ ನಿಧಿಮಂಗಳಗಳಿಗೆ ಕಲ್ಪಜಕುಮಾರರ ದೀರ್ಘ ಬಾಹುಗಳ ಕಾವಲು– ನಿರಂತರವಾಗಿ ಕಣ್ಣಿಗೆ ಕೌತುಕವನ್ನುಂಟುಮಾಡು ವುವು. ೭೮. ಜಿನೇಂದ್ರನ ಪರಮೌದಾರಿಕ ದೇಹದ ಕಾಂತಿಯೆ ಮೇಲಕ್ಕೆ ಹೊಮ್ಮಿ ವ್ಯಾಪಿಸಿತೊ ಏನೊ ಎಂಬಂತೆ ಕೋಟೆಯು ಕೊನೆವರೆಗೂ ಆಕಾಶ ಸ್ಫಟಿಕದ ಶ್ರೀಮಂಡಪವು ಶೋಭಿಸಿತು. ೭೯. ಆ ಶ್ರೀಮಂಡಪದಲ್ಲಿ ಒಂದು ಗಾವುದ ಅಗಲವಾದ ಪುಣ್ಯಾವೇಶವಾದ ಗಣಭೂಮಿಯೊಪ್ಪಿತು,

ನೆಗಟ್ದಿರ್ದಾ ನಾಲ್ಕುಂ ಬೀ ।
ದಿಗಳೆರಡುಂ ಕೆಲದವೆರಡು ಮತ್ತೆಡೆಯೆಡೆಯೊಳ್ ॥
ಸೊಗಯಿಪುವೆರಡೆರಡೆನೆ ಭೆ ।
ತ್ತಿಗಳೀರೆಂಟಲ್ಲಿ ಕೋಷ್ಠವೀರಾಜಿಕ್ಕುಂ ॥ ೮೦

ಮುನಿಪರ್ ಕಲ್ಪಜೆಯರ್ ಮನುಷ್ಯವನಿತಾ... ರ್ಯೆಯರ್ ಜ್ಯೋತಿರಂ ।
ಗನೆಯರ್ ವ್ಯಂತರಕಾಂತೆಯರ್ ಭವನವಾಸಸ್ತ್ರೀಯರಾಭವನರ್ ॥
ವನಜರ್ ಜ್ಯೋತಿಷಿಕರ್ ಸುರರ್ ನರವರರ್ ತಿರ್ಯಕ್ಸಮೂಹಂಗಳೆಂ ।
ಬಿನಿತುಂ ಪನ್ನೆರಡುಂ ಗಣಂಗಳವಱೊಳ್ ಪರ್ಯಾಯದಿಂದೊಪ್ಪುಗುಂ ॥ ೮೧

ಅದೆಂತೆಂದೊಡೆ : ದತ್ತಾದ್ಯರಪ್ಪ ತೊಂಬತ್ತು ಮೂವರ್ ಗಣಧರರುಂ, ನಾಲ್ಸಾಸಿರ್ವರ್ ದಶ ಪೂರ್ವಧರರುಂ, ಎರಡುಲಕ್ಕೆಯ ಪತ್ತುಸಾಸಿರದ ನಾಲ್ನೂರ್ವರ್ ಶಿಕ್ಷಕರುರಂ, ಇರ್ಚ್ಛಾಸಿರ್ವರವಧಿಜ್ಞಾನಿಗಳುಂ, ಪದಿನೆಂಟು ಸಾಸಿರ್ವರ್ ಕೇವಲಜ್ಞಾನಿಗಳುಂ, ಅಱುನೂರ್ವರ್ ವೈಕ್ರಿಯಿಕರುಂ, ಎಂಟು ಸಾಸಿರ್ವರ್ ಮನಃಪರ್ಯಯಜ್ಞಾನಿಗಳುಂ, ಏೞುಂ ಸಾಸಿರ್ವರ್ ವಾದಿಗಳುಂ, ಮೂಱು ಲಕ್ಕೆಯು ಮೆಣ್ಬತ್ತು ಸಾಸಿರ್ವರಾರ್ಯಕೆಯರುಂ, ಐದು ಲಕ್ಕ ಶ್ರಾವಕಿಯರುಂ, ಮೂಱು ಲಕ್ಕ ಶ್ರಾವಕರುಂ, ಅಸಂಖ್ಯಾತದೇವದೇವಿಯರುಂ, ಅಸಂಖ್ಯಾತತಿರ್ಯಕ್ಸಮಾಜಮುಂ, ಪೂರ್ವೋಕ್ತಪರ್ಯಾಯದಿಂ ಪರಿಮಿತಪ್ರವೇಶಕೋಷ್ಠಂಗಳೊಳ್ ಪರಮೇಷ್ಠಿಪ್ರಭಾವದಿನಸಂಶ್ಲಿಷ್ಟರೂಪಮಾಗಿರ್ಕುಂ, ಅದಲ್ಲದೆಯುಂ,

ನಾಲ್ಕು ಬೀದಿಗಳ ಪಕ್ಕದಲ್ಲಿ ಒಂದೊಂದಕ್ಕೆ ಎರಡೆರಡರಂತೆ ಎಂಟು ಗೋಡೆಗಳು; ಅವುಗಳ ಪಕ್ಕದ ಭೂಮಿಗಳಲ್ಲಿ ಎರಡೆರಡು ಗೋಡೆ. ಹೀಗೆ ಹದಿನಾರು ಗೋಡೆಗಳು, ಅವುಗಳ ಎಡೆಯಲ್ಲಿ ಹನ್ನೆರಡು ಕೋಷ್ಠಗಳು, ೮೧. ಅವುಗಳಲ್ಲಿ ಮುನಿಪರು, ಕಲ್ಪಸತಿಯರು, ಮನುಷ್ಯವನಿತೆಯರು... ಆರ್ಯೆಯರು, ಜ್ಯೋತಿಷ್ಯ ಸತಿಯರು, ವ್ಯಂತರ ಸ್ತ್ರೀಯರು, ಭವನವಾಸಿ ಕಾಂತೆಯರು, ಭಾವನ ರಮಣಿಯರು, ವನಜರು, ಜ್ಯೋತಿಷಿಕರು, ಸುರರು, ನರಶ್ರೇಷ್ಠರು, ತಿರ್ಯಕ್ ಸಮೂಹ ಎಂಬ ಹನ್ನೆರಡು ಗಣಗಳು ಇರುವವರು. ವ॥ ಅದು ಹೇಗೆಂದರೆ– ದತ್ತ ಮೊದಲಾದ ತೊಂಬತ್ತುಮೂರು ಗಣಧರರು, ನಾಲ್ಕುಸಾವಿರ ದಶಪೂರ್ವಧರರು, ಎರಡು ಲಕ್ಷ ಹತ್ತು ಸಾವಿರದ ನಾಲ್ನೂರ್ವರು ಶಿಕ್ಷಕರು, ಎರಡು ಸಾವಿರ ಅವಧಿ ಜ್ಞಾನಿಗಳು, ಹದಿನೆಂಟು ಸಾವಿರ ಕೇವಲ ಜ್ಞಾನಿಗಳು, ಆರುನೂರು ವೈಕ್ರಿಯಿಕರು, ಎಂಟು ಸಾವಿರ ಮನಃಪರ್ಯಯ ಜ್ಞಾನಿಗಳು, ಏಳು ಸಾವಿರ ವಾದಿಗಳು, ಮೂರು ಲಕ್ಷ ಎಂಬತ್ತು ಸಾವಿರ ಆರ್ಯಕೆಯರು, ಐದು ಲಕ್ಷ ಶ್ರಾವಕಿಯರು, ಮೂರು ಲಕ್ಷ ಶ್ರಾವಕರು, ಅಸಂಖ್ಯಾತ ದೇವದೇವಿಯರು, ಅಸಂಖ್ಯವಾದ ತಿರ್ಯಕ್ಸಮೂಹ, ಈ ಹಿಂದೆ ಹೇಳಿದ ಕ್ರಮದಿಂದ ಪರಿಮಿತವಾದ ಕೋಷ್ಠಗಳಲ್ಲಿ ಪರಮೇಷ್ಠಿಯ ಪ್ರಭಾವದಿಂದ ಇಕ್ಕಟ್ಟಾಗದೆ ನಿರಾಯಾಸವಾಗಿ ಇರುವವರು.

ದ್ವಾದಶಕೋಷ್ಠಗಣಂಗಳು ।
ಮಾದರದಿಂ ಬಳಸೆ ಮೊದಲ ಪೀಠಮದೇಂ ಚೆ ॥
ಲ್ವಾದುದೊ ರವಿಮಂಡಳಮಂ ।
ದ್ವಾದಶರಾಶಿಗಳ ಬಳಸಿದಂದದಿನಾದಂ ॥ ೮೨

ಆಗಳಾ ಕ್ಷೋಣಿಯಿಂದೊಳಗೆ

ಇದು ದೇವನ ಸಂಸ್ಥಾಗಾ ।
ರದೊಳಮರ್ದ ದುಕೂಲನವಖಿಳೂರಿಕೆಯೆಂಬಂ ॥
ದದಿನೆಸೆವಾಕಾಶಸ್ಫಟಿ ।
ಕದ ವೇದಿಕೆಯೆಯ್ದೆ ಬಳಸಿ ತೊಳಗುತ್ತಿರ್ಕುಂ ॥ ೮೩

ಮತ್ತಂ

ಮರಕತರಜತಚತುರ್ಗೋ ।
ಪುರದಿಂ ಮಂಗಳನಿಧಿಪ್ರತಾನಂಗಳ ಬಿ ॥
ತ್ತರದಿಂ ಕಾಪಿನ ಕಲ್ಪಾ ।
ಮರರಿಂ ತ್ರಿಗುಣಿಸುವುದೆಯ್ದೆ ವೇದಿವಿಳಾಸಂ ॥ ೮೪

ಅದಱಿಂದೊಳಗೆ ಲೋಕತ್ರಯಲಲಾಮಮೆನಿಪ ಪೀಠತ್ರಯಮಿರ್ದುದು. ಅಲ್ಲಿ

ಸುರುಚಿರವೈಡೂರ್ಯಮಯಂ ।
ಸ್ಫುರತ್ಪ್ರಭಾನಿಕರಭರಿತಕನಕಮಯಂ ಭಾ ॥
ಸುರಸಕಲಮಣಿಮಯಂ ಮೊದ ।
ಲೆರಡನೆಯಾದಲೆಯ ಪೀಠಮೊಪ್ಪುಗುಮೆಂದುಂ ॥ ೮೫

೮೨. ಹನ್ನೆರಡು ಕೋಷ್ಠಗಳು ಸುತ್ತುವರಿದ ಮೊದಲ ಪೀಠವು. ಹನ್ನೆರಡು ರಾಶಿಗಳ ಮಧ್ಯದಲ್ಲಿ ಇರುವ ಸೂರ್ಯನಂತೆ ಚೆಲುವಾಗಿತ್ತು. ಆ ಭೂಮಿಯಿಂದಾಚೆ ಒಳಗೆ– ೮೩. ಅದು ಅರ್ಹಂತನ ಸಂಸ್ಥಾಗಾರದಲ್ಲಿ ಅಳವಟ್ಟ ದುಕೂಲದ ಅಭ್ಯಾಸ ಗೃಹವೊ ಏನೊ ಎಂಬಂತೆ ಆಕಾಶಸ್ಫಟಿಕದ ವೇದಿ ಸುತ್ತಲೂ ಥಳಥಳಿ ಸುತ್ತಿರುವುದು. ಮತ್ತು– ೮೪. ಪಚ್ಚೆಯ ನಾಲ್ಕು ಗೋಪುರಗಳಿಂದಲೂ, ಮಂಗಳ ನಿಧಿ ಸಮೂಹಗಳಿಂದಲೂ, ಕಾವಲಿರುವ ಕಲ್ಪಾಮರರಿಂದಲೂ ವೇದಿಯ ಚೆಲುವು ಮುಮ್ಮಡಿಯಾಗಿರುವುದು. ಅದರಿಂದ ಒಳಗೆ ತ್ರಿಲೋಕಭೂಷಣ ವೆನಿಸಿದ ಪೀಠತ್ರಯವಿರುವುದು. ೮೫. ಕಾಂತಿಮಯವಾದ ವೈಡೂರ್ಯಮಯ ಮೊದಲನೆಯ ಪೀಠ, ಹೊಳೆಯುವ ಚಿನ್ನದ್ದು ಎರಡನೆಯ ಪೀಠ, ಸಕಲರತ್ನಮಯವಾದುದು ಮೂರನೆಯ ಪೀಠ– ಹೀಗೆ ಒಪ್ಪುತ್ತಿರುವುವು.

ಮತ್ತದುಮೆಸೆವೇೞ್ನೂಱ ।
ಯ್ವತ್ತು ಶರಾಸನಮದಗಲಮಷ್ಟಾಷ್ಟಾರ್ಥಂ ॥
ಪ್ರೋತ್ತುಂಗತೆಯೆನೆ ಸೊಗಯಿಪು ।
ವೆತ್ತಂ ಪ್ರಥಮದ್ವಿತೀಯನುತಪೀಠಂಗಳ್ ॥ ೮೬

ಪಂಚಧನುಶ್ಯತವಿಸ್ತಾ ।
ರಾಂಚಿತಸಮಭಾಗಮಾ ಚತುಶ್ಚಾಪೋತ್ಸೇ ॥
ಧಂ ಚಂಚನ್ಮಣಿರೋಚಿ ।
ಸ್ಸಂಚಯಮೊಪ್ಪುವುದುದಗ್ರಮಗ್ರಿಮಪೀಠಂ ॥ ೮೭

ಅದಲ್ಲದೆಯುಂ,

ರುಚಿರಮಕುಟಾಗ್ರದೊಳ್ ಧ ।
ರ್ಮಚಕ್ರಮಂ ಯಕ್ಷರೇಕಚಾಪಮಿತಮನಾಂ ॥
ತು ಚತುರ್ದಶೆಯೊಳಮಿರ್ಪರ್ ।
ಖಚರನರೇಂದ್ರಾರ್ಚಿತಾದಿಪೀಠದೊಳನಿಶಂ ॥ ೮೮

ಅಂಬರಹರಿತಾಕ್ಷೋರ್ಕ್ಷಗ ।
ಜಾಂಬುಜಮಾಳಾಮೃಗೇಂದ್ರಚಿಹ್ನಪತಾಕಾ ॥
ಡಂಬರಮೆಸೆವುದು ಸುರನಿಕು ।
ರುಂಬಸುಪೂಜ್ಯದ್ವಿತೀಯಪೀಠದೊಳೆತ್ತಂ ॥ ೮೯

ನವನಿಧಿಯಮಷ್ಟಮಂಗಲ ।
ನಿವಹಮುಮುಪನಿಧಿಗಳಂದದಿಂದೊಪ್ಪುವುವಿ ॥
ರ್ಪುವುಪಾಸಕಸಂದೋಹದ ।
ತವನಿಧಿಯೆನಿಸಿದ ತೃತೀಯಪೀಠದ ಕೆಲದೊಳ್ ॥ ೯೦

೮೬. ಏಳುನೂರೈವತ್ತು ಬಿಲ್ಲಳತೆ ಅಗಲವಾಗಿಯೂ ಕ್ರಮವಾಗಿ ಎಂಟು ಹಾಗು ನಾಲ್ಕು ಬಿಲ್ಲಳತೆಯೆತ್ತರವಾಗಿಯೂ ಮೊದಲನೆಯ ಮತ್ತು ಎರಡನೆಯ ಪೀಠಗಳು ಕಂಗೊಳಿಸುವುವು. ೮೭. ಐದು ಬಿಲ್ಲಳತೆ ಅಗಲವಾಗಿ, ನಾಲ್ಕು ಬಿಲ್ಲಳತೆ ಎತ್ತರವಾಗಿ ಥಳಥಳಿಸುವ ರತ್ನಕಾಂತಿಯಿಂದ ತುದಿಯಲ್ಲಿಯ ಮೂರನೆಯ ಪೀಠವೊಪ್ಪುವುದು. ಅದಲ್ಲದೆ– ೮೮. ಮೊದಲನೆಯ ಪೀಠದ ನಾಲ್ಕೂ ದಿಕ್ಕಿನಲ್ಲಿ ಒಂದು ಬಿಲ್ಲಳತೆಯ ಧರ್ಮಚಕ್ರವನ್ನು ತಲೆಯ ಮೇಲೆ ಧರಿಸಿಕೊಂಡ ಯಕ್ಷರು ಇರುವರು. ೮೯. ಅಂಬರ, ಸೂರ್ಯ, ಗರುಡ, ಉಕ್ಷ, ಗಜ, ಪದ್ಮ, ಸಿಂಹ– ಎಂಬ ಚಿಹ್ನೆಗಳುಳ್ಳ ಧ್ವಜಗಳ ಸಮೂಹವು ದ್ವಿತೀಯ ಪೀಠದಲ್ಲಿ ಎತ್ತೆತ್ತಲೂ ಶೋಭಿಸುವುವು. ೯೦. ನವನಿಧಿ, ಅಷ್ಟಮಂಗಲಗಳು ಉಪಾಸಕ

ವಿದಿತಂ ತತ್ಪೀಠದ ಮ ।
ಧ್ಯದೊಳಿರ್ಪುದು ಷಡ್ಧನುಶ್ಶತಾಯಾಮವ್ಯಾ ॥
ಸದಿನಾತ್ತನವಶತೋತ್ಸೇ ।
ಧದಿನೊಪ್ಪುವ ಗಂಧಕುಟಿ ಹಟನ್ಮಣಿಘಟಿತಂ ॥ ೯೧

ಸುರಗಿರಿಯಂತೆವೊಲದು ವಿ ।
ಸ್ತಕಲ್ಯಾಣಪ್ರದೇಶವಿಬುಧಾವಾಸಂ ॥
ಶರನಿಧಿಯಂತದು ರತ್ನಾ ।
ಕರಮದು ನಂದನವೆನಲ್ಕೆ ಕಮಲಾನಂದಂ ॥ ೯೨

ನಯಮಂ ಬೀಱುವ ಚಿತ್ರಪತ್ರನಿಧಿಕೂಟಸ್ತಂಭಭಿತ್ತಿಚ್ಛದಾ ।
ಶ್ರಯದಾಲಕ್ಷಣಮಾನಮೇಯಗುಣರೇಖಾಶುದ್ಧಿ ಸರ್ವಾರ್ಥಸಿ ॥
ದ್ಧಿಯತದ್ರತ್ನವಿಮಾನದಲ್ಲಿಯುಮಿವಿಲ್ಲೆಂಬೀ ಜಸಕ್ಕಾದುದಾ ।
ಶ್ರಯಮೇನಪ್ರತಿಗಬಂಧಿ ಗಂಧಕುಟಿ ಶಶ್ವದ್ಗಂಧಸಂತಾನಿತಂ ॥ ೯೩

ಪರಮಾತ್ಮನ ದಿವ್ಯವಪುಃ ।
ಪರಿಮಳದಿಂ ತೀವಿ ನಿಂದ ಗಂಧಕುಟಿಯ ಬಂ ॥
ಧುರಗಂಧದ ಕೆಲದೊಳ್ ಗಂ ।
ಧರಾಜಿಲೇಶಾರ್ಥದಿಂದೆ ವರ್ತಿಸುತಿರ್ಕುಂ ॥ ೯೪

ಸಮೂಹದ ಅಖಂಡ ನಿಧಿಯೆನಿಸಿದ ತೃತೀಯ ಪೀಠದಲ್ಲಿ ಇರುವುವು. ೯೧. ಆ ಪೀಠದ ಮಧ್ಯದಲ್ಲಿ ಆರುನೂರು ಬಿಲ್ಲಳತೆಯ ವ್ಯಾಸವುಳ್ಳ ಹಾಗು ಒಂಬಯ್ನೂರು ಬಿಲ್ಲು ಎತ್ತರವಾದ ರತ್ನಖಚಿತ ಗಂಧಕುಟಿ ಒಪ್ಪುವುದು. ೯೨. ಮೇರು ಪರ್ವತದಂತೆ ಅದು ಬಿತ್ತರದ "ಕಲ್ಯಾಣಪ್ರದೇಶ"ವೂ (೧. ಅರ್ಹಂತನ ಜನ್ಮಾಭಿಷೇಕ ಕಲ್ಯಾಣದ ಸ್ಥಳ. ೨. ಶುಭಕರವಾದ ಪ್ರದೇಶ), "ವಿಬುಧಾವಾಸವೂ" (೧. ದೇವತೆಗಳ ನಿವಾಸ, ೨. ಪ್ರಾಜ್ಞರಿಗೆ ನೆಲೆ), ಸಮುದ್ರದಂತೆ ರತ್ನಗಳಿಗೆ ಆಶ್ರಯಸ್ಥಾನವೂ ಆಗಿ ಶೋಭಿಸುವುದು. ೯೩. ಸೊಗಸನ್ನು ಬೀರುವ ಚಿತ್ರಗಳಿಂದ ಕೂಡಿದ ಕಂಬಗಳು ಹಾಗು ಗೋಡೆಗಳು, ಮೇಲುಕಟ್ಟು, ಶಿಲ್ಪಶಾಸ್ತ್ರದ ಲಕ್ಷಣಗಳಿಗೆ ಅನುಸಾರವಾದ ಗುಣರೇಖಾಶುದ್ಧಿ– ಇವು ರತ್ನ ವಿಮಾನಗಳಲ್ಲಿ ಕೂಡ ಇಷ್ಟು ಸೊಗಸಾಗಿ ಇರಲಾರವೆಂಬ ಪ್ರಸಿದ್ಧಿಯಿಂದ ಸದಾ ಸುಗಂಧಮಯವಾದ ಗಂಧಕುಟಿ ಒಪ್ಪುವುದು. ೯೪. ಜಿನೇಂದ್ರನ ದಿವ್ಯ ದೇಹ ಸುಗಂಧದಿಂದ ತುಂಬಿ ನಿಂತ ಗಂಧಕುಟಿಯ ಸೌರಭ್ಯದ ಪಕ್ಕದಲ್ಲಿ ಗಂಧದ ರಾಶಿ ತೀರ ಕಳಪೆಯಾಗಿ

ಮರವಟ್ಟುದು ಮಳಯರುಹಂ ।
ಕರಗಿದುದಾಸವದ ನೆವದೆ ಕುಸುಮಂ ಕಾಳಾ ॥
ಗರು ಪೊಗೆಯುಂತಿರ್ದುದೊಡರಿಸೆ ।
ಪರಿಭವಮಂ ಗಂಧಕುಟಿಯ ನಿರ್ಭರಗಂಧಂ ॥ ೯೫

ತದ್ಗಂಧಕುಟಿಯ ಮಧ್ಯದೊ ।
ಳುದ್ಗತರತ್ನಾಂಶುಜಾಳಜಟಿಳಂ ರಾರಾ ॥
ಜದ್ಗಜರಿಪುಧೃತಮಖಿಳಮ ।
ರುದ್ಗಣಸಂಸೇವ್ಯಮೊಪ್ಪುಗುಂ ಹರಿಪೀಠಂ ॥ * ೯೬

ಅಲ್ಲಿ

ಇಂತಿದೆ ಕರ್ಮನಿರ್ಜರೆಯನಾಗಿಪ ನಿರ್ಮಳಯೋಗಮುದ್ರೆಯಿಂ ।
ಬಂತಿರೆ ಸೌಷ್ಠವಂ ನೆಲಸಿ ಮೂರ್ತಿಯೊಳಾದಮನಂತಬೋಧಮ ॥
ಭ್ಯಂತರದೊಳ್ ಪೊದಟ್ಟು ಬೆಳಗುತ್ತಿರೆ ಚಂದ್ರಜಿನೇಂದ್ರನೇಕಮಂ ।
ಷ್ಟ್ಯಂತರದಲ್ಲಿ ಮುಟ್ಟದೆಸೆದಿರ್ದನಣಂ ಹರಿವಿಷ್ಟರಾಗ್ರಮಂ ॥ ೯೮

ಸದಯಂ ತ್ರಿವಿಷ್ಟರಪ್ರಾ ।
ಗ್ರದೊಳೆಸೆವ ಗಜಾರಿಪೀಠದೊಳ್ ತ್ರೈಲೋಕ್ಯಾ ॥
ಗ್ರದೊಳೆಸೆವೀಷತ್ಪ್ರಾಗ್ಭಾ ।
ರದೊಳಿರ್ಪುದನಂದೆ ಸೂಚಿಪಂದದಿನಿರ್ದಂ ॥ ೯೯

ತೋರುತ್ತಿರುವುದು. ೯೫. ಗಂಧಕುಟಿಯ ಅತಿಶಯವಾದ ಪರಿಮಳದೆದುರಿಗೆ ಸೊತು ಕಸ್ತೂರಿ ಮರಗಟ್ಟಿತು; ಮಕರಂದದ ನೆವದಲ್ಲಿ ಪುಷ್ಪಗಳು ಕರಗಿ ಹೋದುವು; ಕಾಳಾಗರು ಹೊತ್ತಿ ಹೊಗೆಯುತ್ತಿತ್ತು. ೯೬. ಆ ಗಂಧಕುಟಿಯ ನಟ್ಟನಡುವೆ ರತ್ನಕಿರಣ ಜಾಲಗಳಿಂದ ವಿಜೃಂಭಿಸುತ್ತಿರುವ ಸರ್ವದೇವಪೂಜ್ಯವಾದ ಸಿಂಹಾಸನವು ಒಪ್ಪುತ್ತಿರುವುದು. ಅಲ್ಲಿ– ೯೮. ಕರ್ಮವನ್ನು ನಿರ್ಜರೆಗೊಳಿಸುವ ಯೋಗಮುದ್ರೆಯೆಂದರೆ ಇದೇ ಎಂಬಂತೆ ಸುಂದರವಾಗಿ (ಯೋಗದಲ್ಲಿ) ನೆಲಸಿದ ಜಿನೇಂದ್ರನ ದೇಹವು. ಅನಂತಜ್ಞಾನ ಅತಿಶಯವಾಗಿ ಬೆಳಗುತ್ತಿರಲಾಗಿ ಸಿಂಹಾಸನವನ್ನು ಮುಟ್ಟದೆ ಅದರ ಮೇಲೆ ಒಂದು ಮುಷ್ಟಿಯಂತರದಲ್ಲಿ ಕಂಗೊಳಿಸುವುದು. ೯೯. ಲೋಕತ್ರಯವಾದ ತುದಿಯಲ್ಲಿರುವ ಈಷತ್ ಪ್ರಾಗ್ಭಾರದಲ್ಲಿ ಅವನಿನ್ನು ಇರುವನೆಂದು ಸೂಚಿಸುವಂತೆ ಮೂರು ಪೀಠಗಳ

---

* ಪರಮೇಶಂ ನಿಜವೆಂದತಿ ।
ಸಿರಿ ಪೇಟಿಕೆ ಸಹಸ್ರದಳವ ಪೊಂದಾವರೆಯಿಂ ॥
ದರುಹಂ ಜಗತ್ತಯಂಗಳ ।
ಸಿರಿಯಂ ಕೈಸೆಜಿಕೆಯ ವಿಡಿದ ತೆಜದಿಂದೆಸೆಗುಂ ॥ ೯೭

ಈ ಪದ್ಯವು ಗ್ರಂಥಕರ್ತನದಲ್ಲವೆಂದು ತೋರಿಬಂದುದರಿಂದ ಕೆಳಗೆ ಕೊಟ್ಟಿದೆ. ಇದು ಒಂದು ಪ್ರತಿಯಲ್ಲಿಲ್ಲ.

ಅಂಚೆಯನಸಕಳಿದಮರ್ದಂ।
ಬಂಚಿಸಿ ಮಂಜಂ ಮರಳ್ಚಿ ಬಂದವಿಚಳಿತಂ॥
ಚಂಚಚ್ಚಳಲಕ್ಷ್ಮಿಯ।
ದೇಂ ಚಂದ್ರಪ್ರಭನ ತನುವಿನೊಳ್ ನೆಲಸಿದುದೋ॥ ೧೦೦

ಪರಮನ ಮೆಯ್ಗದಿರೊಳ್ ಮೆ।
ಯ್ಗರೆದಿರ್ಪುದು ನಿಚ್ಚಮಚ್ಚಬೆಳ್ದಿಂಗಳದ॥
ರ್ಕಿರುಳಂ ಪಗಲುಂ ಮರಲ್ವುವು।
ಹರಿಸಂ ಕೈಗಣ್ಮೆ ನೋಟ್ಪ ಕಣ್ನೈದಿಲ್ಗಳ್॥ ೧೦೧

ಅದಲ್ಲದೆಯುಂ,

ಇದು ಶರದಭ್ರದಿಂದುಗುವ ನಿರ್ಮಲವೃಷ್ಟಿಯಿದಿಂದು ಬಿಂಬದಿಂ।
ದುದಯಿಪ ಸಾಂದ್ರಚಂದ್ರಿಕೆಯಿದಿಂಗಡಲಿಂದೊಗೆವುದ್ಧವೀಚಿಯಿಂ॥
ತಿದು ಹಿಮಶೈಳದಿಂ ಪಸರಿಪಚ್ಛಮರುನ್ನದಿಯೆಂಬ ಲೀಲೆಗಾ।
ದುದು ನೆಲೆ ಚಂದ್ರನಾಥಚರಮಾಂಗದಿನುಣ್ಮುವ ಕಾಂತಿ ಸಂತತಂ॥ ೧೦೨

ಮತ್ತಂ

ಕೆಲದೊಳ್ ಪರ್ತಿಪ ರೂಪನೆ।
ಸಲೆ ತಾನಱಿಪುವುದು ಚಂದ್ರರವಿರೋಚಿಸ್ಸಂ॥
ಕುಳಮೇೞು ಭವದ ರೂಪಂ।
ಜಲಕ್ಕನಱಿಪುವುದು ಜಿನನ ಘನಭಾವಳಯಂ॥ ೧೦೩

ತುದಿಯಲ್ಲಿರುವ ಸಿಂಹಾಸನದಲ್ಲಿ ದಯಾಳುವಾದ ಜಿನೇಂದ್ರನಿದ್ದನು. ೧೦೦. ಹಂಸವನ್ನೂ, ಅಮೃತವನ್ನೂ, ಮಂಜನ್ನೂ ತೊರೆದು ಬಂದು, ಚಂಚಲಳಾದ ಶೋಭಾಲಕ್ಷ್ಮಿ ಚಂದ್ರಪ್ರಭನ ದೇಹದಲ್ಲಿ ಸ್ಥಿರವಾಗಿ ನೆಲಸಿದಳು. ೧೦೧. ಪರಮ ಜಿನನ ಮೈಕಾಂತಿಯಲ್ಲಿ ಅಚ್ಚ ಬೆಳ್ದಿಂಗಳು ನಿತ್ಯವೂ ಮೈದೋರದೆ ಬೆರೆತುಕೊಂಡಿರುವುದು. ಆದುದರಿಂದ ನೋಡುವ ಕಣ್ಣುಗಳೆಂಬ ನೈದಿಲೆಗಳು ಹಗಲೂ ಇರುಳೂ ಅರಳುತ್ತಲೆ ಇರುವುವು. ಅದಲ್ಲದೆ – ೧೦೨. ಇದು ಶರತ್ಕಾಲದ ಮೋಡದಿಂದ ಸುರಿಯುವ ನಿರ್ಮಲವಾದ ಮಳೆ. ಇದು ಚಂದ್ರಬಿಂಬದಿಂದ ಹೊಮ್ಮುವ ಸಾಂದ್ರವಾದ ಬೆಳ್ದಿಂಗಳು. ಇದು ಹಾಲ್ಗಡಲಿಂದ ಏಳುವ ಉನ್ನತವಾದ ತೆರೆ, ಇದು ಹಿಮಗಿರಿಯಿಂದ ಪಸರಿಸುವ ಸ್ವಚ್ಛವಾದ ದೇವಗಂಗಾಪ್ರವಾಹ ಎಂಬಂತೆ ಚಂದ್ರನಾಥನ ಚರಮದೇಹದಿಂದ ಹೊಮ್ಮುವ ಕಾಂತಿ ಸಂತತವಾಗಿ ಚೆಲುವಿಗೆ ನೆಲೆಯಾಯಿತು. ಮತ್ತು–೧೦೩. ಚಂದ್ರಸೂರ್ಯರ ಬೆಳಕು ಎದುರಿಗಿರುವ ರೂಪವನ್ನು ಮಾತ್ರ ತೋರಿಸಬಲ್ಲುವು. ಜಿನೇಂದ್ರನ ಪ್ರಭಾಮಂಡಲವು ಆತನ ಏಳು

ತ್ರಿಭುವನದೊಳಗಣ ಭವ್ಯರ ।
ನಭವಪದಾರ್ಚನೆಗೆ ಬನ್ನಿಮೆಂಬಂದದೆ ದುಂ ॥
ದುಭಿನಾದಮಾದಮೆಸೆವುದು ।
ನಭೋದಿಶಾವಳಯವಸುಮತೀತಳಭರಿತಂ ॥ ೧೦೪

ತಮಮುಂ ಚಂದ್ರಿಕೆಯುಂ ವೈ ।
ರಮನುಟಿದೊಂದಾಗಿ ದಿವದಿನಿಟಿತಂದಪುವೋ ॥
ಸಮವಸೃತಿಗೆನಿಸಿ ಸುರಿದುವು ।
ಸಮವರ್ಷಮುಮಳಸುವೆಳೆಸುವಳಿಸಮುದಯಮುಂ ॥ ೧೦೫

ಸುರಪತಿಯನುರಾಗಪರಂ ।
ಪರೆ ಪರಮನ ಕೆಲದೊಳಗಲದಿರ್ದಪುವೆಂಬ ॥
ಚ್ಚರಿಯಂ ಪೆರ್ಚಿಸಿದುದು ಸುರು ।
ಚಿರಕಿಸಲಯಕುಸುಮಯುಕ್ತರಕ್ತಾಶೋಕಂ ॥ ೧೦೬

ಯುತಹಸ್ತವಿಕೃತಿಯವಾಯು ।
ಪ್ರತಿರೋಧಜಮೇಕಕಾಲವರ್ತನವರ್ತ ॥
ವ್ಯತಿರಿಕ್ತಮೇವುದಂಬುದ ।
ರುತಮೆಂಬವೊಲೆಸೆವುದಸದಳಂ ದಿವ್ಯರವಂ ॥ ೧೦೭

ಭವಗಳ ರೂಪವನ್ನೂ ತಟ್ಟನೆ ತೋರುವುದು. ೧೦೪. ಅರ್ಹಂತನ ಪೂಜೆಗೆ ಬನ್ನಿಯೆಂದು ಮೂರು ಲೋಕದೊಳಗಿನ ಭಕ್ತರನ್ನೆಲ್ಲ ಕರೆಯುತ್ತಿರುವುದೊ ಏನೊ ಎಂಬಂತೆ ಭೂಮಿ, ಆಕಾಶ ಹಾಗು ದಿಗ್ವಲಯಗಳನ್ನೆಲ್ಲ ತುಂಬುತ್ತ ದುಂದುಭಿನಾದವು ಶೋಭಿಸುವುದು. ೧೦೫. ಕತ್ತಲೆ-ಬೆಳದಿಂಗಳುಗಳೆರಡೂ ಪರಸ್ಪರವೈರವನ್ನುಳಿದು ಜೊತೆಯಾಗಿಯೆ ಆಕಾಶದಿಂದ ಸಮವಸರಣಕ್ಕೆ ಇಳಿದು ಬರುತ್ತಿರುವುವೊ ಏನೊ ಎಂಬಂತೆ ಹೂಮಳೆಯೊಡನೆ ಪ್ರಣಯ ಧ್ವನಿಮಾಡುವ ದುಂಬಿಗಳ ಹಿಂಡು ಮೇಲಿಂದ ಸುರಿದು ಬಂದುವು. ೧೦೬. ದೇವೇಂದ್ರನ ಅನುರಾಗಪರಂಪರೆ ಪರಮೇಶ್ವರನ ಸನ್ನಿಧಿಯನ್ನು ಅಗಲದೆ ಇರುವುದೆಂಬುದನ್ನು ತಿಳಿಸುವಂತೆ ಸುಂದರವಾದ ಕೆಂದಳಿರು ಹೂಗಳಿಂದ ತುಂಬಿದ ರಕ್ತಾಶೋಕವೃಕ್ಷವು ಸೋಜಿಗವನ್ನು ಹೆಚ್ಚಿಸಿತು. ೧೦೭. "ಯುತಹಸ್ತವಿಕೃತಿ" (೧. ಹಸ್ತನಕ್ಷತ್ರದಿಂದ ಕೂಡಿದುದು. ೨. ಕೈಗಳ ವಿಕಾರವುಳ್ಳುದು) ಯೂ "ವಾಯುಪ್ರತಿರೋಧಜ"ವೂ (೧. ಗಾಳಿ ನಿಂತಾಗ ಮೂಡುವುದು. ೨. ಉಸಿರು ಕಟ್ಟುವುದರಿಂದ ಉಂಟಾಗುವುದು) "ಏಕಕಾಲವರ್ತನ"ವೂ (೧. ಮಳೆಗಾಲವೆಂಬ ಒಂದು ಕಾಲಾವಧಿಯಲ್ಲಿ ಮಾತ್ರ ಇರತಕ್ಕುದು. ೨. ಒಪ್ಪೊತ್ತು ಊಟ ಮಾಡುವುದು.) ಆದ ಮೋಡದ

ಇದು ಚಿತ್ರಂ ಛತ್ರತ್ರಯ ।
ಮುದಾತ್ತಮುಕ್ತಾಫಳಾಂಶುಪಾಂಡುರಮಾಗಿ ॥
ರ್ಪುದು ಮತ್ತನೂನರಾಗಮ ।
ನೊದವಿಸುವುದು ಭವ್ಯಜನದ ಕಣ್ಗಂ ಮನಕಂ ॥ ೧೦೮

ಪಿರಿದುಂ ಬಯಳೊಳೆ ಬಂಬ ।
ಲ್ದರೆ ಮಸಗಿದುದಭವನಂಗಚಂದ್ರಿಕೆಯೆಂಬಂ ॥
ತಿರೆ ಸುರನಿಕರಕರಪ್ರ ।
ಸ್ಫುರಿತಚತುಷ್ಪಷ್ಟಿಚಾಮರಂ ಕರಮೆಸೆಗುಂ ॥ ೧೦೯

ವನದಂತೆ ಭದ್ರಪಂಚಾ ।
ನನರಮ್ಯಂ ವನಧಿಯಂತೆ ಮಣಿಗಣಲಕ್ಷ್ಮೀ ॥
ವಿನಿಯುಕ್ತಂ ಕೌತುಕಮಂ ।
ಜನಿಯಿಸುವುದು ವಿಷ್ಟರಂ ತ್ರಿವಿಷ್ಟಪಪತಿಯಾ ॥ * ೧೧೦

ಧ್ವನಿ ಏತಕ್ಕೆ ಬಂದೀತು ಎಂಬಂತೆ ದಿವ್ಯಧ್ವನಿ ಅಸದೃಶವಾಗಿ ಶೋಭಿಸುವುದು. ೧೦೮. ಮುಕ್ಕೊಡೆಯು ಉಜ್ವಲವಾದ ಮುತ್ತಿನ ಕಾಂತಿಯಿಂದ ಬೆಳ್ಳಗೆ ಹೊಳೆಯುತ್ತಿದ್ದರೂ, ಭಕ್ತಜನರ ಕಣ್ಣಿಗೂ ಮನಕ್ಕೂ ಅತಿಶಯವಾದ ರಾಗ (೧. ಸಂತೋಷ, ೨. ಕೆಂಪು ಬಣ್ಣ)ವನ್ನು ಒದಗಿಸುವುದು ವಿಚಿತ್ರವೇ ಸರಿ. ೧೦೯. ಪರಮೇಶ್ವರನ ದೇಹಕಾಂತಿಯೆಂಬ ಬೆಳ್ದಿಂಗಳು ಹೆದ್ದೆರೆಗಳನ್ನು ಬಯಲಲ್ಲಿ ಹೊಮ್ಮಿಸುತ್ತಿರುವುದೊ ಏನೊ ಎಂಬಂತೆ ದೇವತೆಗಳು ಬೀಸುತ್ತಿರುವ ಅರುವತ್ತುನಾಲ್ಕು ಚಾಮರಗಳು ಕಂಗೊಳಿಸುವುವು. ೧೧೦. ತ್ರಿಲೋಕಪತಿಯ ಪೀಠವು ಅರಣ್ಯದಂತೆ "ಭದ್ರ ಪಂಚಾನನರಮ್ಯ"ವೂ (೧. ಶ್ರೇಷ್ಠವಾದ ಸಿಂಹಗಳಿಂದ ಶೋಭಿಸುವುದು. ೨. ಚಿನ್ನದ ಸಿಂಹಾಕಾರದಿಂದ ಒಪ್ಪುವುದು), ಸಮುದ್ರದಂತೆ "ಮಣಿಗಣಲಕ್ಷ್ಮೀವಿನಿಯುಕ್ತ"ವೂ (೧. ಅನೇಕ ರತ್ನಗಳು ಹಾಗು ಲಕ್ಷ್ಮಿಯಿಂದ ಕೂಡಿದುದು. ೨. ಅನೇಕ ರತ್ನಶೋಭೆಯನ್ನೊಳಗೊಂಡುದೂ,) ಆಗಿ ಕೌತುಕ

---

* ಸಿರಮೆನೆ ಚಂದ್ರಜಿನೇಂದ್ರನ ।
ಕಿರಣಂಗಳೊಪ್ಪಿ ತೋಱಿ ಲೋಕಕ್ಕೆಂ ॥
ಸಿರಿದಾವರೆಗಳ್ ದುಗ್ಧಾ ।
ಕರದೊಳ್ ಜನಿಸಿರ್ದುವೆಂದು ಪೇೞ್ವರ್ ಕವಿಗಳ್ ॥ ೧೧೧

ಈ ಪದ್ಯವು ಗ್ರಂಥಕರ್ತನದಲ್ಲದೆಂದು ತೋರಿಬರುವುದರಿಂದ ಕೆಳಗೆ ಕೊಟ್ಟಿದೆ, ಇದು ಒಂದು ಪ್ರತಿಯಲ್ಲಿಲ್ಲ.

ಆರಾತ್ನಂನೂತ್ನಸಿಂಹಾಸನಮೆಳವಟಿಕಂ ಪೋಲ್ವಿನಂ ಭಾಮರೇಂದ್ರ।
ಕಾರಂ ಕರ್ಪೂರದಿಂದಂ ಸಮೆದುದೆನಿಪಿನಂ ಶಾರದಾಂಭೋದಶೋಭಾ ॥
ಧಾರಚ್ಛತ್ರತ್ರಯಕ್ಕತ್ಯಧಿಕಧವಳಿಮಂ ಸಾರ್ವಿನಂ ತೀರ್ಥನಾಥೋ ।
ದಾರಾಂಗಜ್ಯೋತ್ಸ್ನೆಯೆತ್ತಂ ಪಸರಿಸಿದುದು ಚಕ್ಷುಶ್ಚಕೋರಾತಿಸೇವ್ಯಂ ॥ ೧೧೨

ಮತ್ತಂ ಘಾತಿಚತುಷ್ಟಯಕ್ಷಯಾನಂತರಜನಿತಂಗಳಪ್ಪ

ಚತುರಾಸ್ಯತ್ವಮಭುಕ್ತಿಭಾವನಿಮೇಷತ್ವಂ ನಭೋಯಾನಸಂ ।
ಗತಿ ಗವ್ಯೂತಿಚತುಶ್ಶತಾಂತರಸುಭಿಕ್ಷತ್ವಂ ವಿಮುಕ್ತೋಪಸ ॥
ರ್ಗತೆಯಪ್ರಾಣಿವಧಂ ಸಮಾನನಖಕೇಶತ್ವಂ ಸಮಸ್ತಾಗಮ ।
ಜ್ಞತೆಯಚ್ಛಾಯತೆಯೆಂಬ ಪತ್ತತಿಶಯಂ ತೀರ್ಥೇಶನೊಳ್ ಶೋಭಿಕುಂ ॥ ೧೧೩

ಆ ಪರಮನ ತನುವಿಂ ಕೇ ।
ಳೀಪರ್ವತಸಿದ್ಧಚೈತ್ಯತರುಹರ್ಮ್ಯಮಹಾ ॥
ಗೋಪುರಮಂಡಪವಸತಿ ।
ಸ್ತೂಪಾಶೋಕೋಚ್ಛ್ರಯಂ ದ್ವಿಷಡ್ಗುಣಮಕ್ಕುಂ ॥ ೧೧೪

ಉತ್ತುಂಗತೆ ನಾಲ್ವಡಿಯಂ ।
ಹರ್ತ್ತನುವಿಂ ಶಾಳವೇದಿಕಾಸಮಿತಿಗೆ ಭಾ ॥

ವನ್ನುಂಟು ಮಾಡುವುದು. ೧೧೨. ಆ ರತ್ನ ಸಿಂಹಾಸನವು ಎಳೆಯ ಸ್ಫಟಿಕವನ್ನು ಹೋಲುವಂತೆ, ಕಾಂತಿಮಯವಾದ ಇಂದ್ರನ ದೇಹ ಕಪ್ಪುರದಿಂದ ನಿರ್ಮಿತವೆನಿಸುವಂತೆ ಶರನ್ಮೇಘ ಶೋಭೆಯುಳ್ಳ ಮುಕ್ಕೊಡೆಗೆ ಇನ್ನಷ್ಟು ಅತಿಶಯವಾದ ಧವಳತೆಯುಂಟಾಗುವಂತೆ ತೀರ್ಥಂಕರನ ಔದಾರಿಕ ದೇಹದ ಬೆಳ್ದಿಂಗಳಂತಹ ಉಜ್ವಲಪ್ರಭೆ ಎತ್ತೆತ್ತಲೂ ಪಸರಿಸಿ ಕಣ್ಣುಗಳೆಂಬ ಚಕೋರಗಳಿಗೆ ಅತ್ಯಂತ ಸಂತೋಷವೊದಗಿಸಿತು. ವ॥ ಘಾತಿಕರ್ಮಚತುಷ್ಕದ ನಾಶಾನಂತರ ಹುಟ್ಟಿದ– ೧೧೩. ಚತುರ್ಮುಖತ್ವ, ಭುಕ್ತಿರಹಿತತೆ, ನಿರ್ನಿಮೇಷತೆ, ಆಕಾಶಗಮನಶಕ್ತಿ, ಸುತ್ತಲೂ ಒಂದು ನೂರು ಗಾವುದದಳತೆಯುಲ್ಲೆಲ್ಲ ಸುಭಿಕ್ಷತ್ವ, ಸಮಸ್ತ ಉಪಸರ್ಗಗಳಿಂದ ಮುಕ್ತಿ ಪ್ರಾಣಿಗಳಿಗೆ ಬಾಧಾಹೀನತೆ, ನಖಕೇಶಗಳ ಸಮಾನತೆ ಸರ್ವಾಗಮಪ್ರಾಜ್ಞತೆ, (ದೇಹಕ್ಕೆ) ನೆರಳಿಲ್ಲದಿರುವಿಕೆ– ಎಂಬ ಹತ್ತು ಅತಿಶಯಗಳು ತೀರ್ಥಂಕರನಿಗೆ ಶೋಭಿಸುವುವು. ೧೧೪. ಕ್ರೀಡಾಶೈಲ, ಸಿದ್ಧ, ಚೈತ್ಯವೃಕ್ಷ, ಹರ್ಮ್ಯ, ಮಹಾಗೋಪುರ, ಮಂಡಪ, ಸ್ತೂಪ, ಅಶೋಕ, ಇವೆಲ್ಲವುಗಳ ಶೋಭೆ ಆ ಪರಮೇಶ್ವರನ ದೇಹದಿಂದ ಹನ್ನೆರಡು ಮಡಿಯಾಗಿ ಅಭಿವೃದ್ಧಿ ಹೊಂದುವುದು.

ಸ್ವತ್ತೋರಣಗಣಮವಱಿನಿ ।
ನಿತ್ತಧಿಕಮೆನಿಕ್ಕುಮಾಗಮಜ್ಞರ ಮತದಿಂ ॥ ೧೧೫

ಅದಲ್ಲದೆಯುಮಷ್ಟೋತ್ತರಚತ್ವಾರಿಂಶದ್ಗವ್ಯೂತಿಪ್ರಮಿತಪರಿಷನ್ಮಹೀಮಂಡಳಮಂ

ಅಂತರ್ಮುಹೂರ್ತದಿಂ ಪುಗ ।
ಲುಂ ತಡೆಯದೆ ಪೊಱಮಡಲ್ಕಮಾರ್ಪ ಪೊಡರ್ಪಂ ॥
ಕಾಂತಾಶಿಶುವೃದ್ಧಸಮೂ ।
ಹಂ ತಳೆವುದು ತೀರ್ಥನಾಥಸಾಮರ್ಥ್ಯಕೃತಂ ॥ ೧೧೬

ಮೃತಿಜನನಶೋಕನಿದ್ರಾ ।
ರತದೋಷತ್ರಿತಯದೋಷಬಾಧೆಗಳೊಳ್ ತತ್ ।
ಸ್ಥಿತದೇಹಿಸಮೂಹಂ ಸಂ ॥
ಗತಿವಡೆಯದನಿತ್ತುಮಿಂತಿದೇಂ ವಿಸ್ಮಯಮೋ । ೧೧೭

ಪುಗೆ ಪಸಿವುಂ ನೀರಟಿಕ್ಕೆಯು ॥
ಮಗಲ್ದುವಿದನೆಂದು ರಮ್ಯಭೂಮಿಯನರೆಬರ್ ॥
ಪೊಗೞ್ವ ನುಡಿ ಸಮವಸೃತಿಯೊಳ್ ।
ಪುಗೆ ದಿಟಮಾ ಕ್ಷುತ್ಪಿಪಾಸೆಗಳ್ ಕಿಡುವುದಱಿಂ ॥ ೧೧೮

ಬಗೆವೊಡಬೋಧತ್ರಿತಯಾ ।
ನುಗಳುಮಭವ್ಯರ್ಕಳುಂ ಕುದೃಷ್ಟಿಗಳುಮಸಂ ॥
ಜ್ಞಿಗಳುಮಣಮಿಲ್ಲೆನಿಪ್ಪತಿ ।
ಶಗುಣಂ ಜಿನಸಭೆಯೊಳಲ್ಲದೆಲ್ಲಿಯುಮುಂಟೇ ॥ ೧೧೯

೧೧೫. ಅಲ್ಲಿಯ ಕೋಟೆ ಹಾಗು ವೇದಿಕೆಗಳಿಗೆ ಅರ್ಹಂತನ ದೇಹದಿಂದ ನಾಲ್ಕು ಮಡಿ ಉನ್ನತಿ ಒದಗುವುದು; ಸುಂದರವಾದ ತೋರಣಗಳಿಗೆ ಇವುಗಳಿಗಿಂತ ಹೆಚ್ಚಿನ ಉನ್ನತಿಯಾಗುವುದು. ವ॥ ಅದಲ್ಲದೆ ನಾಲ್ವತ್ತೆಂಟು ಗಾವುದ ವಿಸ್ತಾರವಾಗಿರುವ ಪರಿಷದ್ ಭೂಮಂಡಲವನ್ನು– ೧೧೬. ಒಂದೇ ಅಂತರ್ಮುಹೂರ್ತದಲ್ಲಿ ಒಳಹೊಗಲೂ, ಹೊರಬರಲೂ ಸಾಧ್ಯವಾಗುವಂತಹ ಸಾಮರ್ಥ್ಯವನ್ನು ಹೆಂಗಸರು, ಹುಡುಗರು, ಮುದುಕರು ತೀರ್ಥನಾಥನ ಪ್ರಭಾವದಿಂದ ಪಡೆಯುವರು. ೧೧೭. ಅಲ್ಲಿಗೆ ಬಂದ ಜೀವಗಳಿಗೆ ಮರಣ, ಜನನ, ಶೋಕ, ನಿದ್ರೆ, ವಾತಪಿತ್ತಾದಿ ದೋಷಗಳು ಹಾಗು ಬಾಧೆಗಳು ಎಷ್ಟೆಷ್ಟೂ ಉಂಟಾಗಲಾರವು. ಇದೆಂತಹ ವಿಸ್ಮಯ! ೧೧೮. ಈ ಮನೋಹರವಾದ ಭೂಮಿಯಲ್ಲಿ ಹಸಿವು ನೀರಡಕೆಗಳು ಇಲ್ಲವೇ ಇಲ್ಲವೆಂಬ ಮಾತು ಸಂಪೂರ್ಣ ಸತ್ಯ, ಏಕೆಂದರೆ ಸಮವಸರಣವನ್ನು ಹೊಕ್ಕೊಡನೆ ಹಸಿವು ನೀರಡಿಕೆಗಳು ಹಿಂಗೆ ಹೋಗುವುವು. ೧೧೯. (ಕುಮತಿ, ಕುಶ್ರುತ ಮತ್ತು ವಿಭಂಗವೆಂಬ) ಮೂರು ಬಗೆಯ ಅಜ್ಞಾನವುಳ್ಳವರೂ, ಭವ್ಯರಲ್ಲದವರೂ, ಕುದೃಷ್ಟಿಗಳೂ, (ಆಹಾರಾದಿ ನಾಲ್ಕು ಬಗೆಯ) ಸಂಜ್ಞೆಗಳಿಲ್ಲದವರೂ ಒಬ್ಬರು ಕೂಡ ಇಲ್ಲಿ ಇಲ್ಲವೆಂಬ ಅತಿಶಯತೆ ಜಿನಸಭೆಯೊಳಗಲ್ಲದೆ ಬೇರೆಲ್ಲಿ

ಎನಿಸಿ ನಿಖಿಳಭುವನಾಲಂಕರಣಮುಮಾಗೆ

ವೈಶ್ರವಣವಾಸ್ತುವಿದ್ಯಾ ।
ವಿಶ್ರಮಣಸ್ಥಾನವದು ದಲೆನಿಸಿದುದು ವೃ ॥
ದ್ಧಶ್ರವನೀಕ್ಷಿಸಿದಂ ಜಗ ।
ದಾಶ್ರಯಣನ ಸಮವಸರಣಭೂಮಂಡಳಮಂ ॥ ೧೨೦

ಅಂತು ಸಹಸ್ರಲೋಚನಂ ನಿಜವಿಲೋಚನಮರೀಚಿನಿಚಯಂ ಅಮರಕಾಮಿನೀನಿಕರಕೇಕರಮಯೂಖಮಾಳೆಯೊಳಂ ನಿಳಿಂಪಸಮುದಯನಯನಕಾಂತಿಸಂತಾನದೊಳಂ ತಳ್ವೊಯ್ದು ನಿಮಿರ್ದನೇಕಪ್ರಾಕಾರವೇದಿಕಾನಿಕರಮನೇಕವರ್ಣಮಾಗೆ ಧವಳಿಸೆಯುಂ, ಕನಕಹರಿನೀಳಗೋಪುರ ಕಳಾಪಮಂ ರೂಪ್ಯಗೋಪುರಗಳೊಳ್ ಸಾರೂಪ್ಯಮನೆಯ್ದಿಸಿಯುಂ, ಮಾನಸ್ತಂಭಂಗಳಂ ಬಳ್ಳಿ ಮಿಂಚಿನ ಬಳ್ಳಿವಳ್ಳಿಗಡರ್ಪನಿಟ್ಟಂತೆ ಮಾಡೆಯುಂ, ಪ್ರಾಸಾದಚೈತ್ಯಂಗಳಂ ಧವಳಕಮಳವಂದನಮಾಳಾಳಂಕೃತಂಗಳೆನಿಸೆಯುಂ, ಜಳಖಾತಿಕೆಯನಪೂರ್ವಫೇನಸಂತಾನನಿರಂತರಮಾಗಿಸಿಯು, ವಲ್ಲೀವನಮನುತ್ಫುಲ್ಲಕುಸಮಕಾಂತಿಯೊಡನೆ ಬೆಳೆದು ಬಳಸೆಯುಂ, ಉಪವನಮುಮನಪರಿಮಿತತುಹಿನಪಟಳಪರಿವೃತಮೆಂಬ ಸಂದೆಗದೊಳೊಂದಿಸೆಯುಂ, ಕೇತನಪ್ರತಾನಮಂ ನವೀನಚೀನಧವಳಪಲ್ಲವೋಲ್ಲಸಿತದೊಳ್ ಯೋಜಿಸೆಯುಂ, ದಶಾಂಗಕಲ್ಪತರುನಂದನಮಂ ಮಾಲ್ಯಾಂಗಮಯಮೆಂಬ ವಿಸ್ಮಯಮನೊದವಿಸೆಯುಂ, ವಸ್ತುವಿರಚಿತೋತ್ತುಂಗಸ್ತೂಪಂಗಳಂ ಸ್ನಿಗ್ಧಮಗ್ಧಾಬ್ಧಿಸಿಕ್ತಂಗಳೆಂಬಾಡಂಬರಂಗಳನೊಡರ್ಚಿಯುಂ, ಸಂಗೀತ

ಯಾದರೂ ಉಂಟೆ? ೧೨೦. ಕುಬೇರನ ವಾಸ್ತುವಿದ್ಯೆಗೆ ಇದೇ ನೆಲೆಯೆನಿಸಿದ ಸಮಸರಣಭೂಮಂಡಲವನ್ನು ಇಂದ್ರನು ಚೆನ್ನಾಗಿ ನೋಡಿದನು. ವ॥ ಹೀಗೆ ಇಂದ್ರನು ತನ್ನ ಕಣ್ಣುಗಳ ಕಾಂತಿಯು ದೇವಾಂಗನೆಯರ ಕುಡಿನೋಟಗಳ ಸಾಲುಸಾಲಾದ ಪ್ರಭೆಗಳಲ್ಲಿಯೂ ದೇವಸಮೂಹದ ನೇತ್ರಕಾಂತಿಸಮೂಹದಲ್ಲಿಯೂ ಬೆರೆತು ಅಲ್ಲಿಯ ಅನೇಕ ಪ್ರಾಕಾರ ವೇದಿಕೆಗಳನ್ನು ಏಕವರ್ಣವಾಗುವಂತೆ ಧವಳಿಸಿ, ಇಂದ್ರನೀಲದ ಹಾಗು ಸುವರ್ಣದ ಗೋಪುರಗಳನ್ನು ಬೆಳ್ಳಿಯ ಗೋಪುರಗಳಿಗೆ ಸಮಾನವೆನಿಸಿ, ಮಾನಸ್ತಂಭಗಳನ್ನು ಬಳ್ಳಿಮಿಂಚಿನ ಹಬ್ಬುಗೆಗೆ ಆಧಾರಸ್ತಂಭಗಳೆಂಬಂತೆ ಮಾಡಿ, ಪ್ರಾಸಾದಗಳನ್ನೂ ಚೈತ್ಯಾಲಯಗಳನ್ನೂ ಬೆಳ್ದಾವರೆಯ ತೋರಣಗಳಿಂದ ಅಲಂಕೃತವಾದುವೆನಿಸಿ, ನೀರ ಕಂದಕವನ್ನು ಅಪೂರ್ವವಾದ ನೊರೆಯ ಹಿಂಡಿನಿಂದ ಕೂಡಿದಂತೆ ತೋರಿ, ಬಳ್ಳಿಯ ಬನವನ್ನು ಅರಳಿದ ಹೂಗಳ ಕಾಂತಿಯೊಡನೆ ಬೆರಸಿ ಆವರಿಸಿ, ಉಪವನವನ್ನು ಅಸಂಖ್ಯವಾದ ಮಂಜಿನ ತೆರೆಗಳು ಮುಸುಕಿದವೊ ಏನೊ ಎಂದೆನಿಸಿ, ಧ್ವಜಗಳೆಲ್ಲ ಹೊಸ ಬಿಳಿಯ ರೇಷ್ಮೆಯ ಪಟಗಳನ್ನು ಹೊದಿಸಿದಂತೆ ತೋರುವ ಹಾಗೆ ಮಾಡಿ ಹತ್ತು ಬಗೆಯ ಕಲ್ಪವೃಕ್ಷಗಳ ಬನವೆಲ್ಲ ಕೇವಲ ಮಾಲ್ಯಾಂಗ ಕಲ್ಪವೃಕ್ಷಗಳಿಂದಲೆ ತುಂಬಿತೊ ಏನೊ ಎಂಬಂತೆ ವಿಸ್ಮಯವನ್ನುಂಟುಮಾಡಿ, ಸುವರ್ಣರಚಿತ ಸ್ತೂಪಗಳನ್ನು ಗಟ್ಟಿಯಾದ ಹಾಲಿನ ಅಭಿಷೇಕದಿಂದ ಕೂಡಿದುವೆನಿಸಿ, ಸಂಗೀತ ಸೌಧಗಳ ಸಾಲುಗಳಿಗೆಲ್ಲ

ಸೌಧಮಾಲೆಯಂ ನೂತನಸುಧಾಲೇಪಶೋಭೆಯೊಳೊಡಗೂಡೆಯುಂ, ದ್ವಾದಶಗಣಮನಸಮಯ ಚಂಚಚ್ಚಂದ್ರಿಕಾಪ್ರವಾಹದೊಳಗಾಹಮಿರಿಸೆಯುಂ, ಅರ್ಹದಂಗಪ್ರವಾಹಪೀಯೂಷದೊಳ್ ಬೆರಸಿ ಬಟಿಯಂ ಕ್ಷೀರನೀರನ್ಯಾಯದಿಂದೇಕೀಭಾವಮಾಗೆಯುಂ, ನೀಡುಂ ನೋಡಿ ನಿಜವಿನೋದಪರಂಪರೆಯಂ ಮೆಱೆದು ಭಕ್ತಿಭಾವಶುದ್ಧಸಿದ್ಧರಸವನೆ ಬಲಿದು *

ಸೌಧರ್ಮಮುಮಂ ಸೌಧ ।
ರ್ಮಾಧಿಪತಿತ್ವಮುಮನಧಿಪತಿತ್ವಾಹಿತನಿ ॥
ರ್ಬಾಧವಿಳಾಸಮುಮನಣಂ ।
ಸೌಧರ್ಮೇಂದ್ರಂ ಮನಕ್ಕೆ ತಾರದೆ ನಿಂದಂ ॥ ೧೨೧

ಪ್ರತಿಹಾರಂ ತಾನೆ ಚಂಚಚ್ಚಮರರುಹಧರಂ ತಾನೆ ಪೀಠಾರ್ಚನಾಪ್ರ ।
ಸ್ತುತಯುಕ್ತಂ ತಾನೆ ತೂರ್ಯತ್ರಯಸಮಧಿಕೃತಂ ತಾನೆ ನಾನಾಪ್ರಕಾರ ॥
ಸ್ತುತಿಕಾರಂ ತಾನೆ ಮತ್ತಾವನೊ ಪೆಱನೆನೆ ದೇವಾದಿದೇವಾಂಘ್ರಿಸೇವಾ ।
ನತನಿರ್ದಂ ಪುಣ್ಯಶೀಲಂ ಜಿನಸಮಯಸರಸ್ಸಾರಕೇಳೀಮರಾಳಂ ॥ ೧೨೨

ಹೊಸ ಸುಣ್ಣದ ಲೇಪ ಮಾಡಲಾಯಿತೊ ಏನೊ ಎಂಬಂತೆ ಧವಳವರ್ಣದ ಶೋಭೆಯನ್ನೊದಗಿಸಿ, ಹನ್ನೆರಡು ಗಣಗಳನ್ನು ಅಕಾಲಿಕವಾದ ಬೆಳುದಿಂಗಳ ಪ್ರವಾಹದಲ್ಲಿ ಮುಳುಗಿಸಿ, ಅರ್ಹಂತನ ದೇಹ ಪ್ರಭೆಯು ಅಮೃತ ದಲ್ಲಿ ಬೆರೆತುಕೊಂಡು– ಬಳಿಕ ನೀರ ಕ್ಷೀರನ್ಯಾಯದಂತೆ ಏಕೀಭಾವವಾಗಿ ದೀರ್ಘವಾಗಿ ನೋಡಿ ಸಂತೋಷಪಟ್ಟು ಭಕ್ತಿ ಭಾವಾತಿಶಯದಿಂದ ೧೨೧. ತನ್ನ ಲೋಕವಾದ ಸೌಧರ್ಮಕಲ್ಪವನ್ನಾಗಲಿ, ಆ ಲೋಕದ ಒಡೆತನವನ್ನಾಗಲಿ, ಆ ಆಧಿಪತ್ಯದಿಂದಾದ ತನ್ನ ಅನಿರ್ಬಂಧ ವಿಲಾಸವನ್ನಾಗಲಿ ಮನಸ್ಸಿಗೆ ಎಷ್ಟೂ ತಾರದೆ ಇಂದ್ರನು ನಿಂತನು. ೧೨೨. ಪ್ರತೀಹಾರನು ತಾನೆ, ಚಾಮರದ ಆಳು ತಾನೆ, ಪೀಠಾರ್ಚನೆ ಮಾಡು ವವನು ತಾನೆ. ತೂರ್ಯತ್ರಯಕ್ಕೆ ಅಧಿಕೃತನೂ ತಾನೆ, ನಾನಾಪ್ರಕಾರದ ಸ್ತುತಿಮಾಡುವವನು ತಾನೆ– ಈ ಕಾರ್ಯಕ್ಕೆ ಬೇರಾವನುಂಟು ಎಂಬಂತೆ ದೇವಾಧಿದೇವನ ಪಾದಪೂಜಾನಿರತನಾಗಿ ಪುಣ್ಯಶಾಲಿಯಾದ ಇಂದ್ರನು ಇದ್ದನು.

---

* ಇಲ್ಲಿಂದ ಮುಂದೆ ಸುಮಾರು ೯೦ ಪದ್ಯಗಳಷ್ಟು ಗ್ರಂಥವನ್ನು ಬರೆದು ಯಾರೋ ಸೇರಿಸಿ ದ್ದಂತೆ ತೋರುತ್ತದೆ. ಈ ಭಾಗವು ಅಶುದ್ಧವಾಗಿ ಏತದ್ಗ್ರಂಥಕರ್ತೃಕೃತವಲ್ಲವೆಂದು ತೋರಿ ಬರುವುದರಿಂದಲೂ, ಪುರಾತನಪ್ರತಿಯಲ್ಲಿ ಇಲ್ಲವಾದುದರಿಂದಲೂ, ಈ ಭಾಗವನ್ನು ಮುದ್ರಿಸದೆ ಬಿಟ್ಟಿರುತ್ತೇವೆ.

॥ ಗದ್ಯಂ ॥

ಇದು ಪರಮಪುರುನ್ನಾಥಕುಲಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯಚಕ್ರವರ್ತಿ ಪದಪದ್ಮನಿಧಾನದೀಪವರ್ತಿ

**ಶ್ರೀಮದಗ್ಗಳದೇವ**

ವಿರಚಿತಮಪ್ಪ

**ಚಂದ್ರಪ್ರಭಪುರಾಣದೊಳ್**

ಸಮವಸರಣ ವರ್ಣನಂ

ಪಂಚದಶಾಶ್ವಾಸಂ

**ಹದಿನೈದನೆಯ ಆಶ್ವಾಸ ಮುಗಿದುದು.**

# ಷೋಡಶಾಶ್ವಾಸಂ

ಶ್ರೀಯಂ ತಳೆದಂ ತ್ರಿಜಗ ।
ಜ್ಜ್ಯಾಯಂ ವಿಮಳಾಂತರಂಗಬಹಿರಂಗಪದ ॥
ಸ್ಥಾಯಿನಿಯಂ ಭವ್ಯೋತ್ಸವ ।
ದಾಯಿನಿಯಂ ಜೈನಜನಮನೋಹರಚರಿತಂ ॥ ೧

ಒಳಗಣ ರತ್ನಪ್ರಕರಂ ।
ಗಳಿನಮೃತಪಯೋಧಿ ಸೊಗಯಿಪೊಂದಂದದೆ ತ ॥
ನ್ನೊಳಗಣ ರತ್ನತ್ರಿತಯಂ ।
ಗಳಿನಮೃತಶ್ರೀವಧೂಪ್ರಿಯಂ ಸೊಗಯಿಸಿದಂ ॥ ೨

ತಾಂ ಭುವನಭೂಷಣಂ ತನ ।
ಗಿಂ ಭೂಷಣಮೇವುದೆಂಬ ತೆಱದಿಂ ಜಿನದೇ ॥
ಹಂ ಭೂಷಣಗಣರಹಿತಮ ।
ದೇಂ ಭೂರಿತರೋಪಶೋಭೆಯಂ ತಾಳ್ದಿದುದೋ ॥ ೩

ಅಂತನಂತಚತುಷ್ಟಯಲಕ್ಷ್ಮೀಸಮಾಶ್ಲಿಷ್ಟನುಮಷ್ಟಮಹಾಪ್ರಾತಿಹಾರ್ಯಪ್ರಕೃಷ್ಟನುಂ, ಕಾಯಾಕಾರಪರಿಣತತ್ರಿಲೋಕಾಗ್ರ್ಯಪುಣ್ಯಪುದ್ಗಳಪುಂಜಾಯಮಾನಪರಮೌದಾರಿಕಶರೀರನುಂ, ಅಷ್ಟಾದಶ

## ಷೋಡಶಾಶ್ವಾಸಂ

೧. ತ್ರಿಲೋಕ ಪೂಜ್ಯನಾದ ಪರಮೇಶ್ವರನು ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಸ್ಥಾಯಿಯಾದ ಭಕ್ತೋತ್ಸವಕರವಾದ ಶೋಭೆಯನ್ನು ಹೊಂದಿದ್ದನು. ೨. ತನ್ನೊಳಗಿನ ರತ್ನಸಂಚಯದಿಂದ ಅಮೃತಸಮುದ್ರವು ಶೋಭಿಸುವಂತೆ ತನ್ನೊಳಗಣ ರತ್ನತ್ರಯಗಳಿಂದ ಮೋಕ್ಷಲಕ್ಷ್ಮೀಪ್ರಿಯನಾದ ಅರ್ಹಂತನು ಒಪ್ಪಿದನು. ೩. ಲೋಕಕ್ಕೆ ತಾನೆ ಆಭರಣವಾಗಿರುವಾಗ ತನಗೆ ಆಭರಣಗಳೇಕೆಂಬಂತೆ ಜಿನೇಶ್ವರನು ನಿರಾಭರಣನಾಗಿ ಅತ್ಯಂತ ಶೋಭೆಯನ್ನು ತಾಳಿದ್ದನು. ವ॥ ಅನಂತಚತುಷ್ಟಯದಿಂದ ಕೂಡಿ, ಅಷ್ಟಪ್ರಾತಿಹಾರ್ಯಗಳನ್ನೊಡಗೊಂಡು, ದೇಹಾಕಾರದಲ್ಲಿ ಮೂರು ಲೋಕಗಳ ಪುಣ್ಯವನ್ನು ಪುಂಜೀಕರಿಸಿಟ್ಟಂತಿರುವ ಪರಮೌದಾರಿಕ ದೇಹವುಳ್ಳವನಾಗಿ, ಹದಿನೆಂಟು ದೋಷಗಳಿಂದ ದೂರನೂ, ಏಳು ಋದ್ಧಿಗಳನ್ನುಳ್ಳವನೂ, ಅಹಮಿಂದ್ರ ಪೂಜ್ಯನೂ, ಸಮಸ್ತಸಿದ್ಧಿ

ದೋಷದೂರನುಂ, ಸಪ್ತರ್ಧಿಸಮುದಯಸಂತತೋಪಾಸ್ಯನುಂ, ಅಹಮಿಂದ್ರನಮಸ್ಯನುಂ, ಸಿದ್ಧಾಶೇಷ ಸಾಧ್ಯನುಂ, ಬುದ್ಧಸಮಸ್ತಬೋಧ್ಯನುಮಾಗಿರ್ಪಿನಂ ; ಸೌಧರ್ಮೇಂದ್ರ ಪ್ರೇರಿತನುಂ, ಭವ್ಯಸಾರ್ಥ ಪ್ರಾರ್ಥಿತನುಮಾಗಿ

ವರಬುದ್ಧಿಚತುಷ್ಟಯಪರಿ ।
ಕರಿತಂ ಜ್ಞಾನರ್ಧಿಭಾಸುರಂ ಬೆಸಗೊಂಡಂ ॥
ಭರದೆ ಕೃತಾಂಜಲಿ ತತ್ತ್ವ ।
ಸ್ವರೂಪಮಂ ದತ್ತಗಣಧರಾಗ್ರಣಿ ಜಿನನಂ ॥ ೪

ಅಂತು ಬೆಸಗಳಲೊಡಂ

ದೂರಾಸನ್ನಸಮಂ ಗಂ ।
ಭೀರತರಂ ವ್ಯಾಪ್ತನಿಖಿಳತತ್ತ್ವಂ ಪರಮೋ ॥
ದಾರಂ ವ್ಯಪಗತವದನವಿ ।
ಕಾರಂ ಪೊಣ್ಮಿದುದು ಜಿನನ ದಿವ್ಯನಿನಾದಂ ॥ ೫

ಮತ್ತಂ

ಭೂರಿತರಭವ್ಯಪುಳಕವಿ ।
ಡೂರಾಂಕುರಜನನಕಾರಿ ಮುನಿಹಂಸಮನೋ ॥
ಹಾರಿಯೆಸೆದುದು ಶಶಿಪ್ರಭ ।
ಶಾರದನೀರಧರಗರ್ಜಿತಂ ದಿವ್ಯರವಂ ॥ ೬

ಆ ದಿವ್ಯಭಾಷೆಯಿಂ ಜಗತ್ಸೇವ್ಯನಿಂತೆಂದು ಬೆಸಸಿದಂ :– ತತ್ತ್ವಮೆಂಬುದು ಜೀವಾಜೀವಾಶ್ರವ ಬದ್ಧಸಂವರನಿರ್ಜರಾಮೋಕ್ಷಭೇದದಿಂ ಸಪ್ತಪ್ರಕಾರಮಕ್ಕುಂ, ಅಲ್ಲಿ

ಗಳನ್ನು ಪಡೆದವನೂ, ಬುದ್ಧರೆಲ್ಲರಿಗೆ ಗೋಚರನೂ ಆಗಿ ತೀರ್ಥಕರನು ಶೋಭಿಸುತ್ತಿರುವಾಗ ಸೌಧರ್ಮೇಂದ್ರನ ಪ್ರೇರಣೆಯಿಂದಲೂ, ಭಕ್ತ ಸಮೂಹದ ಪ್ರಾರ್ಥನೆಯಿಂದಲೂ ೪. ಚತುರ್ಬುದ್ಧಿ ಸಮೇತನೂ ಜ್ಞಾನಋದ್ಧಿಸಂಪನ್ನನೂ ಆದ ದತ್ತ ಗಣಧರಶ್ರೇಷ್ಠನು ಕೈಮುಗಿದು ಜಿನೇಶ್ವರನನ್ನು (ಉಪದೇಶಕ್ಕಾಗಿ) ಬೇಡಿಕೊಂಡನು. ಹಾಗೆ ಬೇಡಿಕೊಳ್ಳಲಾಗಿ– ೫. ದೂರಸಮೀಪವೆಂಬ ಭೇದವಿಲ್ಲದಂತೆ, ಅತಿ ಗಂಭೀರವೂ, ಸಮಸ್ತ ತತ್ತ್ವ ವ್ಯಾಪಕವೂ ಆದ ಪರಮ ಶ್ರೇಷ್ಠವಾದ ಜಿನವಾಣಿ ಮುಖವಿಕಾರ ರಹಿತವಾಗಿ ಹೊಮ್ಮಿತು. ಮತ್ತು– ೬. ಮಹಾಭಕ್ತ ಜನರಲ್ಲಿ ಪುಲಕವೆಂಬ ಅಂಕುರವನ್ನು ಮೊಳೆಯಿಸುತ್ತ, ಮುನಿಗಳೆಂಬ ಹಂಸಗಳಿಗೆ ಮನೋಹರವಾಗಿ ಚಂದ್ರಪ್ರಭನ ಶರನ್ಮೇಘ ಗರ್ಜನೆಯ ದಿವ್ಯಧ್ವನಿ ಶೋಭಿಸಿತು. ವ॥ ಆ ದಿವ್ಯಭಾಷೆಯಿಂದ ಜಗತ್ಪೂಜ್ಯನು ಹೀಗೆಂದು ಹೇಳಿದನು– “ತತ್ತ್ವವೆಂಬುದು ಜೀವ, ಅಜೀವ, ಆಶ್ರವ, ಬಂಧ, ಸಂವರ,

ಪರಿಕಿಪೊಡೆ ಪುಣ್ಯಪಾಪಮ ।
ವೆರಡುಂ ಬಂಧಾನುಬಂಧಿಗಳ್ ಬೇಱವನಿಂ ॥
ನಿರವಿಪೊಡೆ ನವಪದಾರ್ಥತೆ ।
ದೊರೆಕೊಳ್ಗುಮಿವರ್ಕನುಕ್ತಮಾದ್ವಯಮದಱಿಂ ॥ ೭

ಆರಯ್ವೊಡಮೂರ್ತಂ ಸ್ವಶ ।
ರೀರಮಿತಂ ನಿಜದಿನೂರ್ಧ್ವಗತಿ ಸಂಭವಸಂ ॥
ಹಾರದ್ರವ್ಯಾತ್ಮ ಸಂ ।
ಸಾರಸ್ಥಂ ಕರ್ತೃಭೋಕ್ತೃವೆನಿಕುಂ ಜೀವಂ ॥ ೮

ಆ ಜೀಮಮುಂ ಭವ್ಯಾಭವ್ಯಭೇದದಿಂ ದ್ವಿಪ್ರಕಾರಂ, ಅವರ್ಕೆ ನರಕತಿರ್ಯಙ್ಮನುಷ್ಯದೇವಗತಿ ವಿಕಲ್ಪದಿಂ ಚತುರ್ಭೇದಮಕ್ಕುಂ, ಆ ನರಕಭೂಮಿಗಳುಂ ಅಧೋಲೋಕದೊಳ್ ರತ್ನಪ್ರಭೆ । ಶರ್ಕರಪ್ರಭೆ । ವಾಳುಕಪ್ರಭೆ । ಪಂಕಪ್ರಭೆ । ಧೂಮಪ್ರಭೆ । ತಮಪ್ರಭೆ । ಮಹಾತಮಪ್ರಭೆಯೆಂಬೇೞುಂ, ಅಲ್ಲಿ

ಕರಗುಗುಮಾಗಳೆ ವಜ್ರಮು ।
ಮಿರದೆನಿಪುಷ್ಣಮಯಮಾಗಿ ನಾಲ್ಕರೆನೆಲನ ॥
ತ್ತೆರಡರೆಯಗ್ನಿಗಮೈಕಿ ।
ಲ್ದೊರೆಕೊಳ್ಗುಮೆನಿಪ್ಪ ಶೀತಮಯಮಾಗಿರ್ಕುಂ ॥ ೯

ಮತ್ತಮಾ ನರಕಬಿಲಂಗಳ್ ಇಂದ್ರಕಶ್ರೇಢೀಬದ್ಧಪ್ರಕೀರ್ಣಕರೂಪಂಗಳನನುಕ್ರಮದಿಂ

ನಿರ್ಜರ ಮತ್ತು ಮೋಕ್ಷವೆಂದು ಏಳು ಬಗೆಯಾಗಿದೆ. ಅಲ್ಲಿ– ೭. ಪುಣ್ಯಪಾಪಗಳೆಂಬ ಎರಡು ಬಂಧಕಾರಣಗಳು ಅವುಗಳಿಂದ ನವಪದಾರ್ಥಗಳು ಆಗುವುವು. ೮. ಅಮೂರ್ತವೂ ಸ್ವದೇಹದ ಮಿತಿಗೆ ಒಳಪಟ್ಟದೂ ಸಹಜವಾಗಿ ಊರ್ಧ್ವಗತಿಯುಳ್ಳದೂ ಸಂಸಾರಸ್ಥವೂ, ಕರ್ತೃ ಹಾಗು ಭೋಕ್ತೃವೂ ಎಂದೆನಿಸುವುದು ಜೀವ. ವ॥ ಆ ಜೀವವು ಭವ್ಯ ಮತ್ತು ಅಭವ್ಯ ಎಂದು ಎರಡು ಬಗೆ. ಅವುಗಳಲ್ಲಿ ನರಕ, ತಿರ್ಯಕ್, ಮನುಷ್ಯ ಮತ್ತು ದೇವ ಎಂಬ ನಾಲ್ಕು ಗತಿಭೇದದಿಂದ ನಾಲ್ಕು ಪ್ರಕಾರಗಳುಂಟು. ಆ ನರಕ ಭೂಮಿಗಳು ಅಧೋಲೋಕದಲ್ಲಿ ರತ್ನಪ್ರಭೆ, ಶರ್ಕರಪ್ರಭೆ, ವಾಳುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಪ್ರಭೆ, ಮಹಾತಮಪ್ರಭೆ ಎಂದು ಏಳಾಗಿವೆ. ಅಲ್ಲಿ – ೯. ವಜ್ರವೂ ಕರಗಿ ಹೋಗುವಂತೆ ಅತ್ಯಂತ ಉಷ್ಣಮಯವಾದುವು ನಾಲ್ಕೂವರೆ ಭೂಮಿಗಳು; ಬೆಂಕಿಯೂ ತಣ್ಣಗೆನಿಸುವಂತೆ ಶೀತಮಯವಾಗಿರುವುವು ಇನ್ನುಳಿದ ಎರಡೂವರೆ ಭೂಮಿಗಳು. ವ॥ ಆ ನರಕಗಳಲ್ಲಿ ಬಿಲಗಳು ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕ ಎಂದು ಮೂರು ಬಗೆಯಾಗಿದ್ದು

ತೋರ್ಪುವು ಮೂವತ್ತಯ್ದುಮು ।
ದಿರ್ಪತ್ತೆರೆವೆರಸು ಪತ್ತು ಮತ್ತೀರಯ್ದು ॥
ತ್ರಿಪ್ಪದು ಮೂಱಿಯ್ದೂನಂ ।
ನೇರ್ಪಡೆ ಲಕ್ಕೆಯಿವು ಕಡೆಯೊಳೆಯ್ದೆ ದಲಕ್ಕುಂ ॥ ೧೦

ಆ ಬಿಲಂಗಳೊಳಗಣ ಕರಭಖರಕುರ್ಕುರಸೃಗಾಲಕಾಕಘೂಕಮುಖಾನುಕಾರಿಗಳಪ್ಪ ದುರ್ಗಂಧ ಪೇಶ್ಮಕಶ್ಮಲೋಪಪಾದಸ್ಥಳಂಗಳೊಳ್ ಮಿಥ್ಯಾದರ್ಶನಾವಿರತಿಪ್ರಮಾದಕಷಾಯಬಹ್ವಾರಂಭಕೃಷ್ಣನೀಳ ಕಪೋತಲೇಶ್ಯಾದ್ಯಶುಭಪರಿಣಾಮಮಂ ಕಾರಣಮಾಗೆ ಜೀವಂ ನೆಲಸಿದಂತರ್ಮುಹೂರ್ತಕಾಲದೊಳ್ ಆಹಾರಶರೀರೇಂದ್ರಿಯೋಚ್ಛ್ವಾಸನಿಶ್ವಾಸಭಾಷಾಮನಂಗಳೆಂಬ ಷಟ್ಪರ್ಯಾಪ್ತಿಗಳೊಳ್ ನೆಱೆದು ಹುಂಡಸಂಸ್ಥಾನಂಗಳುಂ ತೃತೀಯವೇದರುಂ ಮಷೀಮಳಿನಸವರ್ಣರುಂ ಪೂತಿಗಂಧರುಂ ಸಪ್ತಚಾಪತ್ರಿಹಸ್ತಷಡಂಗುಳಾದಿಪಂಚಧನುಶ್ಶತಪರ್ಯಂತದ್ವಿಗುಣದ್ವಿಗುಣೋತ್ಸೇಧರುಂ ಪೂರ್ವಾನುಪೂರ್ವೋತ್ತರಮಾದುತ್ಕೃಷ್ಟಮಧ್ಯಮಜಘನ್ಯಭೇದಪ್ರಯುಕ್ತೈಕತ್ರಿತಯಸಪ್ತಕದಶಸಪ್ತದಶದ್ವಾವಿಂಶತಿತ್ರಯಸ್ತ್ರಿಂಶತ್ಸಾಗರೋಪಮಾನಪ್ರವೃತ್ತ್ಯಾಯುಷ್ಯರುಮಾಗಿ ಪುಟ್ಟಿ ತೃತೀಯನರಕಂಬರಂ ಶಾರೀರಮಾನಸಕ್ಷೇತ್ರಜ ಪರಸ್ಪರೋದೀರಿತಘನಜ್ಯೋದೀರಿತಂಗಳೆಂಬ

ಅನುಕ್ರಮವಾಗಿ ೧೦. ಮೂವತ್ತು ಲಕ್ಷ, ಇಪ್ಪತ್ತೈದು ಲಕ್ಷ, ಹದಿನೈದು ಲಕ್ಷ, ಹತ್ತು ಲಕ್ಷ, ಮೂರು ಲಕ್ಷ, ತೊಂಬತ್ತೊಂಬತ್ತು ಸಾವಿರದ ಐದು ಮತ್ತು ಕೇವಲ ಐದು ಬಿಲಗಳಿರುವುವು. ವ॥ ಆ ಬಿಲಗಳೊಳಗಿನ ಒಂಟೆ, ಕತ್ತೆ, ನಾಯಿ, ನರಿ, ಕಾಗೆ, ಗೂಗೆ ಮೊದಲಾದವುಗಳ ಮುಖಗಳಂತಿರುವ ದುರ್ಗಂಧಮಯವಾದ ಕೊಳೆಗಳಿಂದ ತುಂಬಿದ ಸ್ಥಳಗಳಲ್ಲಿ ಹುಟ್ಟಿ, ಮಿಥ್ಯಾದರ್ಶನ, ಅವಿರತ ಪ್ರಮಾದ ಕಷಾಯ, ಕೃಷ್ಣ, ನೀಲ, ಕಪೋತಲೇಶ್ಯ ಮೊದಲಾದ ಅಶುಭ ಪರಿಣಾಮ ಕಾರಣವಾಗಿ ಜೀವ ನೆಲಸುವುದು; ಹಾಗೆ ನೆಲಸಿದ ಅಂತರ್ಮುಹೂರ್ತ ಕಾಲದಲ್ಲಿ ಆಹಾರ, ಶರೀರ, ಇಂದ್ರಿಯ, ಉಚ್ಛ್ವಾಸ, ನಿಶ್ವಾಸ, ಭಾಷೆ, ಮನಸ್ಸು ಎಂಬ ಆರು ಪರ್ಯಾಪ್ತಿಗಳನ್ನು ಪಡೆದು ಹುಂಡಸಂಸ್ಥಾನರೂ, ನಪುಂಸಕವೇದರೂ, ಮಸಿಯಂತೆ ಕಪ್ಪಾದ ವರ್ಣದವರೂ, ಕೊಳೆನಾತವುಳ್ಳವರೂ ಆಗಿರುವರು; ಆಯಾ ನರಕಗಳಲ್ಲಿ ಅವರ ದೇಹ ಪ್ರಮಾಣ ಅನುಕ್ರಮವಾಗಿ ಮೊದಲನೆಯದರಲ್ಲಿ ಏಳು ಬಿಲ್ಲು ಮೂರು ಮೊಳ ಮತ್ತು ಆರಂಗುಲ, ಎರಡನೆಯದರಲ್ಲಿ ಅದರ ಎರಡರಷ್ಟು, ಮೂರನೆಯದರಲ್ಲಿ ನಾಲ್ಕರಷ್ಟು, ನಾಲ್ಕನೆಯದರಲ್ಲಿ ಎಂಟರಷ್ಟು ಹೀಗೆ ಕೊನೆಯದರಲ್ಲಿ ಐನೂರು ಬಿಲ್ಲಳತೆಯಾಗಿರುವುದು; ಉತ್ಕೃಷ್ಟ, ಮಧ್ಯಮ, ಜಘನ್ಯ ಭೇದದಿಂದ ಅವರ ಆಯುಷ್ಯ ನರಕಗಳ ಅನುಕ್ರಮದಲ್ಲಿ ಒಂದು ಸಾಗರೋಪಮ, ಮೂರು ಸಾಗರ, ಏಳು ಸಾಗರ, ಹತ್ತು ಸಾಗರ, ಹದಿನೇಳು ಸಾಗರ, ಇಪ್ಪತ್ತೆರಡು ಸಾಗರ ಹಾಗು ಮೂವತ್ತು ಮೂರು ಸಾಗರೋಪಮವಾಗಿರುವುದು; ಮೂರನೆಯ ನರಕದವರೆಗೆ ಶಾರೀರ, ಮಾನಸ,

ಪಂಚಪ್ರಕಾರದುಃಖಮೆ ।
ಪಂಚಮಹಾಭೂತಮಾಗೆ ಪುಟ್ಟಿದರೆಂಬಂ ॥
ತಂಚಿಮರಲ್ಲದ ಕೋಟಲೆ ।
ಯಂ ಚಿತ್ತದೊಳಾಂತು ನಾರಕರ್ ಸಲೆ ನಮೆವರ್ ॥ ೧೧

ಅದಲ್ಲದೆಯುಂ

ನಿಸದಂ ತಿರ್ಯಗ್ಜೀವಂ ।
ತ್ರಸಮುಂ ಸ್ಥಾವರಮುಮೆಂದೆರಟ್ಟಿಱಿನದಱಿಕೊಳ್ ॥
ತ್ರಸಮೆನಿಕುಂ ದ್ವೀಂದ್ರಿಯದಿಂ ।
ಪೆಸರ್ಗೊಳೆ ಪಂಚೇಂದ್ರಿಯಂಬರಂ ಕ್ರಮದಿಂದಂ ॥ ೧೨

ಸ್ಥಾವರದೊಳ್ ಪೃಥ್ವ್ಯಪ್ತೇ ।
ಜೋವಾಯುವನಸ್ಪತೀದ್ಧಕಾಯಿಕಭೇದಂ ॥
ಜೀವಂ ಪಂಚವಿಧಂ ಪರಿ ।
ಭಾವಿಪೊಡೇಕೇಂದ್ರಿಯಪ್ರಪಂಚಿತಮನಿತುಂ ॥ ೧೩

ಅವಱೊಳುತ್ಕೃಷ್ಟದಿಂ ವನಸ್ಪತಿಕಾಯಿಕಕ್ಕೆ ಸಾಧಿಕಂ ಯೋಜನಸಹಸ್ರಮಾನಮಕ್ಕುಂ, ಅನಿತೆ ತಿರ್ಯಕ್ಪಂಚೇಂದ್ರಿಯಶರೀರಕ್ಕಮಕ್ಕುಂ, ಮತ್ತಂ

ಪನ್ನೆರಡು ಯೋಜನಂ ದೇ ।
ಹನ್ನೀಳ್ವಿಂ ದ್ವೀಂದ್ರಿಯಕ್ಕೆ ಮೂಗಾವುದ ದಲ್ ॥
ಕೆನ್ನಂ ತ್ರೀಂದ್ರಿಯಕಂ ಮ ।
ತ್ತೆನ್ನದೆ ಚತುರಿಂದ್ರಿಯಕ್ಕೆ ಯೋಜನಮಕ್ಕುಂ ॥ ೧೪

ಕ್ಷೇತ್ರಜ, ಪರಸ್ಪರೋದೀರಿತ ಮತ್ತು ಧನಜ್ಯೋದೀರಿತ ಎಂಬ– ೧೧. ಐದು ಪ್ರಕಾರದ ದುಃಖವೆ ಪಂಚಮಹಾಭೂತವಾಗಿ ಹುಟ್ಟಿದರೆಂಬಂತೆ (ಪಂಚಮಹಾಭೂತಗಳಿಂದ ದೇಹ ಹೇಗೆ ಹುಟ್ಟುವುದೊ ಹಾಗೆ ಈ ಐದು ದುಃಖಗಳಿಂದಲೆ ನಿರ್ಮಿತರಾದವರಂತೆ), ದೀರ್ಘವಾದ ಕೋಟಲೆಗಳನ್ನು ಚಿತ್ತದಲ್ಲಿ ಹೊಂದಿ ನಾರಕರು ನವೆಯುವರು, ಅದಲ್ಲದೆ– ೧೨. ತಿರ್ಯಗ್ ಜೀವವು ತ್ರಸ ಮತ್ತು ಸ್ಥಾವರ ಎಂದು ಎರಡು ಬಗೆ; ತ್ರಸಜೀವವು ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಹಾಗು ಪಂಚೇಂದ್ರಿಯವೆಂಬ ಪ್ರಕಾರಗಳನ್ನೊಡಗೊಳ್ಳುವುದು. ೧೩. ಸ್ಥಾವರವೆಂಬುದು ಏಕೇಂದ್ರಿಯವಾಗಿದ್ದು, ಪೃಥ್ವೀಕಾಯ, ಅಪ್‌ಕಾಯ, ತೇಜಃಕಾಯ, ವಾಯುಕಾಯ ಮತ್ತು ವನಸ್ಪತಿಕಾಯವೆಂದು ಐದು ತೆರನಾಗಿರುವುದು. ವ॥ ಅವುಗಳಲ್ಲಿ ಉತ್ಕೃಷ್ಟದಿಂದ ವನಸ್ಪತಿಕಾಯಿಕಕ್ಕೆ ಸಾವಿರ ಯೋಜನ ವಿಸ್ತೀರ್ಣವುಂಟು; ತಿರ್ಯಕ್ ಪಂಚೇಂದ್ರಿಯಕ್ಕೂ ಅಷ್ಟೇ. ೧೪. ದ್ವೀಂದ್ರಿಯಕ್ಕೆ ಹನ್ನೆರಡು ಯೋಜನ; ತೀಂದ್ರಿಯಕ್ಕೆ ಮೂರು ಗಾವುದ; ಚತುರಿಂದ್ರಿಯಕ್ಕೆ ಒಂದು

ಮತ್ತಂ ಸ್ಪರ್ಶನರಸನಘ್ರಾಣಚಕ್ಷುಶ್ರೋತ್ರಮೆಂಬಿಂದ್ರಿಯಪಂಚಕದೊಳ್ ಯಥಾಕ್ರಮ ಮೇಕೈಕವೃದ್ಧಿಯಿನೇಕದ್ವಿತ್ರಿಚತುಃಪಂಚೇಂದ್ರಿಯಮೆನಿಕ್ಕುಂ, ಏಕೇಂದ್ರಿಯದೊಳ್ ಪೃಥಿವೀಕಾಯಿಕಕ್ಕೆ ವರ್ಷಂ ಪನ್ನಿರ್ಚ್ಛಾಸಿರಮಕ್ಕುಂ, ವಾಪ್ಕಾಯಿಕ್ಕೇೞುಂ ಸಾಸಿರಮಕ್ಕುಂ, ವಾಯುಕಾಯಿಕಕ್ಕೆ ಮೂಱು ಸಾಸಿರಮಕ್ಕುಂ ವನಸ್ಪತಿಕಾಯಿಕಕ್ಕೆ ಪತ್ತು ಸಾಸಿರಮಕ್ಕುಂ. ತೇಜಃಕಾಯಿಕಕ್ಕೆ ದಿನತ್ರಯಮಕ್ಕುಂ, ಉತ್ಕರ್ಷದಿನಾಯುಸ್ಸಮುದಯಮಕ್ಕುಂ. ಅದಲ್ಲದೆಯುಂ,

ಪನ್ನೆರಡು ವತ್ಸರಂ ದಿವ ।
ಸಂ ನಾಲ್ವತ್ತೊಂಬತಾಱು ದಲ್ ತಿಂಗಳ್ ಷೂ ॥
ರ್ವಂ ನೆಱೆಯೆ ಕೋಟಿಯಧಿಕತೆ ।
ಯಿಂ ನಿರಂತಂ ದ್ವೀಂದ್ರಿಯಾದಿಗಳ್ಗಾಯುಷ್ಯಂ ॥ ೧೫

ಅದಲ್ಲದೆಯುಂ ಭೋಗಕರ್ಮಭೂಮಿಭೇದದಿಂ ಮನುಷ್ಯಜೀವಂ ದ್ವಿಪ್ರಕಾರಮಕ್ಕುಂ. ಆಭೋಗಭೂಮಿಗಳುಂ ದೇವಕುರ್ವಾದಿಭೇದದಿಂ ಮೂವತ್ತಕ್ಕುಂ. ಅವು ಉತ್ತಮಮಧ್ಯಮ ಜಘನ್ಯಭೇದದಿಂ ಮೂದೆಱಂ, ತದ್ಭೂಮಿಜರ್ಗನುಕ್ರಮದಿಂ ಷಟ್ಚತ್ವಾರಿದ್ವಿಸಹಸ್ರಚಾಪೋತ್ಸೇಧಮಕ್ಕುಂ, ತ್ರಿದ್ವ್ಯೆಕಪಲ್ಯೋಪಮಂ ಜೀವನಮಕ್ಕುಂ. ಅಲ್ಲಿ

ಸಲೆ ದಶವಿಧಕಲ್ಪದ್ರುಮ ।
ಫಲಮಂ ಸತ್ಪಾತ್ರದಾನಸಾಮರ್ಥ್ಯದಿನಾ ॥

ಯೋಜನ ವಿಸ್ತೀರ್ಣವುಂಟು. ವ॥ ತ್ವಕ್ಕು, ನಾಲಗೆ, ಮೂಗು, ಕಣ್ಣು, ಕಿವಿ ಎಂಬೀ ಪಂಚೇಂದ್ರಿಯಗಳಲ್ಲಿ ಅನುಕ್ರಮವಾಗಿ ಒಂದೊಂದೇ ಇಂದ್ರಿಯ ವೃದ್ಧಿಯಿಂದ ಏಕೇಂದ್ರಿಯ ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯವೆಂಬ ಭೇದ ಗಳಾಗುತ್ತವೆ. ಏಕೇಂದ್ರಿಯದಲ್ಲಿ ಪೃಥವೀ ಕಾಯಿಕಕ್ಕೆ ಆಯುಷ್ಯ ವರ್ಷ ಹನ್ನೆರಡು ಸಾವಿರ; ಅಪ್‌ಕಾಯಿಕಕ್ಕೆ ಏಳು ಸಾವಿರ; ವಾಯು ಕಾಯಿಕಕ್ಕೆ ಮೂರು ಸಾವಿರ; ವನಸ್ಪತಿ ಕಾಯಿಕಕ್ಕೆ ಹತ್ತು ಸಾವಿರ; ತೇಜಃಕಾಯಿಕಕ್ಕೆ ಮೂರೇ ದಿನ. ಉತ್ಕರ್ಷದಿಂದ ಆಯುಸ್ಸಮುದಯವಾಗುತ್ತದೆ. ಅದಲ್ಲದೆ– ೧೫. ಹನ್ನೆರಡು ವರ್ಷ, ನಾಲ್ವತ್ತೊಂಬತ್ತು ದಿವಸ, ಮತ್ತು ಆರು ತಿಂಗಳು ಅನುಕ್ರಮವಾಗಿ ದ್ವೀಂದ್ರಿಯಾದಿಗಳ ಆಯುಷ್ಯ ಪ್ರಮಾಣ ವಾಗಿರುವುದು. ವ॥ ಅದಲ್ಲದೆ ಭೋಗಭೂಮಿ ಮತ್ತು ಕರ್ಮಭೂಮಿ ಎಂಬ ಭೇದದಿಂದ ಮನುಷ್ಯಜೀವ ಎರಡು ಬಗೆಯಾಗಿರುವುದು. ಆ ಭೋಗ ಭೂಮಿಗಳು ದೇವಕುರುವೆ ಮೊದಲಾದ ಭೇದಗಳಿಂದ ಮೂವತ್ತಾಗಿವೆ. ಅವು ಉತ್ತಮ, ಮಧ್ಯಮ ಮತ್ತು ಜಘನ್ಯವೆಂದು ಮೂರು ಪ್ರಕಾರ. ಆ ಭೋಗಭೂಮಿಗಳಲ್ಲಿ ಹುಟ್ಟಿದವರಿಗೆ ದೇಹ ಪ್ರಮಾಣ ಅನುಕ್ರಮವಾಗಿ ಆರು, ನಾಲ್ಕು ಹಾಗು ಎರಡು ಸಾವಿರ ಬಿಲ್ಲಳತೆ; ಆಯುಷ್ಯ ಮೂರು, ಎರಡು ಮತ್ತು ಒಂದು ಪಲ್ಯೋಪಮವಾದುದು. ಅಲ್ಲಿ–೧೬. ಸತ್ಪಾತ್ರದಾನ ಸಾಮರ್ಥ್ಯದಿಂದ ಮನುಷ್ಯರು ದಂಪತಿಗಳಾಗಿಯೆ ಹುಟ್ಟಿ,

ಕುಲರಹಿತರ್ ದಂಪತಿಗಳ್ ।
ನಲವಿಂದನುಭವಿಪರಾಗಮನಜರ್ ಮನುಜರ್ ॥ ೧೬

ಮತ್ತಂ ಕರ್ಮಭೂಮಿಗಳ್ ಭರತಾದಿಭೇದದಿಂ ಹದಿನೈದು. ಆರ್ಯಮ್ಲೇಚ್ಛಪ್ರಭೇದದಿಂ ತದ್ಭೂಮಿಜರ್ ಇರ್ತೆಱನಕ್ಕುಂ. ಅವರ್ಗುತ್ಕೃಷ್ಟದಯ್ನೂರೆಪ್ಪತ್ತಯ್ದು ಚಾಪಮುತ್ಸೇಧಂ, ಪೂರ್ವ ಕೋಟಿಪ್ರಮಾಣಮಾಯುಷ್ಯಮಿವು ವಿದೇಹಂಗಳೊಳ್ ನಿಯತಂ, ಭರತೈರಾವತಂಗಳೊಳ್ ಕಾಲ ವಶದಿಂ ವೃದ್ಧಿಹ್ರಾಸಂಗಳನೆಯ್ದುಗುಂ. ಆಕಾಲಮುತ್ಸರ್ಪಿಣಿಯುಮವಸರ್ಪಿಣಿಯುಮೆಂದವೆರಡು. ಅವೊಂದೊಂದರ್ಕೆ ಪತ್ತುಕೋಟಿಕೋಟಿಸಾಗರೋಪಮಕಾಲಂ ಪ್ರಮಾಣಮಕ್ಕುಂ. ಮತ್ತಮುತ್ಸ ರ್ಪಿಣಿ ಸುಷಮಸುಷಮೆಯುಂ ಸುಷಮೆಯುಂ ಸುಷಮದುಷ್ಷಮೆಯುಂ ದುಷ್ಷಮಸುಷಮೆಯುಂ ದುಷ್ಷಮೆಯುಂ, ಅತಿದುಷ್ಷಮೆಯುಮೆಂದು ಷಟ್‌ಪ್ರಕಾರಮನುಳ್ಳುದಕ್ಕುಂ. ವ್ಯತಿಕ್ರಮದಿನವಸರ್ಪಿಣಿ ಯುಮಂತೆಯಕ್ಕುಂ, ಅಲ್ಲಿ ಮೊದಲ ಕಾಲಕ್ಕೆ ನಾಲ್ಕು ಕೋಟಿಕೋಟಿಸಾಗರರೋಪಮಂ, ಎರಡನೆಯ ದರ್ಕೆ ಮೂಱು ಕೋಟಿಕೋಟಿಸಾಗರೋಪಮಂ, ಮೂಱನೆಯದರ್ಕೆರಡು ಕೋಟಿಕೋಟಿಸಾಗರೋಪ ಮಂ, ನಾಲ್ಕನೆಯದರ್ಕೆ ನಾಲ್ವತ್ತೆರಡು ಸಾಸಿರವರ್ಷಂ ಕೂಡಿದೊಂದು ಕೋಟಿಕೋಟಿ, ಅಯ್ದನೆಯ ದರ್ಕೆ ಇರ್ಪತ್ತೊಂದುಸಾಹಸ್ರವತ್ಸರಮಾಱನಯದರ್ಕಮನಿತೆ ಪ್ರಮಾಣಂ. ವ್ಯತಿರೇಕದಿನವಸರ್ಪಿಣಿಯ ಕಾಲಂಗಳ್ಗವನಿತೆಯಕ್ಕುಂ, ಅದಲ್ಲದೆಯುಂ,

ದುಃಖಾನುಭವವಿಲ್ಲದೆ ಹತ್ತು ಬಗೆಯ ಕಲ್ಪವೃಕ್ಷಗಳ ಫಲವನ್ನು ಅನುಭವಿಸುತ್ತ ಸಂತೋಷಪಡುವರು. ವ॥ ಮತ್ತು ಕರ್ಮಭೂಮಿಗಳು ಭರತವೆ ಮೊದಲಾಗಿ ಹದಿನೈದು. ಆ ಭೂಮಿಯಲ್ಲಿ ಹುಟ್ಟಿದವರು ಆರ್ಯ ಮತ್ತು ಮ್ಲೇಚ್ಛ ಎಂದು ಎರಡು ತೆರ. ಅವರಿಗೆ ಉತ್ಕೃಷ್ಟದ ಐನೂರ ಎಪ್ಪತ್ತೈದು ಬಿಲ್ಲಳತೆಯ ದೇಹಪ್ರಮಾಣ, ಒಂದು ಕೋಟಿ ಪೂರ್ವ ಆಯುಷ್ಯ; ಇವು ವಿದೇಹಭೂಮಿಗಳಲ್ಲಿ ನಿಯತವಾಗಿವೆ. ಭರತ ಹಾಗು ಐರಾವತ ಕ್ಷೇತ್ರಗಳಲ್ಲಿ ಕಾಲವಶದಿಂದ ವೃದ್ಧಿ ಕ್ಷಯಗಳುಂಟಾಗುವುವು. ಆ ಕಾಲವು ಉತ್ಸರ್ಪಿಣಿ, ಅವಸರ್ಪಿಣಿ ಎಂದು ಎರಡು ಬಗೆಯಾಗಿದೆ. ಅವುಗಳಲ್ಲಿ ಪ್ರತಿಯೊಂದಕ್ಕೂ ಹತ್ತುಕೋಟಿಕೋಟಿ ಸಾಗರೋಪಮಕಾಲ ಪ್ರಮಾಣವುಂಟು. ಸುಷಮ ಸುಷಮೆ, ಸುಷಮೆ, ಸುಷಮ ದುಃಷಮೆ, ದುಃಷಮೆ ಸುಷಮೆ, ದುಃಷಮೆ, ಅತಿ ದುಃಷಮೆ ಎಂದು ಉತ್ಸರ್ಪಿಣಿ ಆರು ಪ್ರಕಾರವಾಗಿದೆ. ವ್ಯತಿಕ್ರಮದಿಂದ ಅವ ಸರ್ಪಿಣಿಯೂ ಅದೇ ಆರು ಪ್ರಕಾರಗಳುಳ್ಳದು. ಅಲ್ಲಿ ಮೊದಲ ಕಾಲಕ್ಕೆ ನಾಲ್ಕು ಕೋಟಿ ಕೋಟಿ ಸಾಗರೋಪಮ, ಎರಡನೆಯದಕ್ಕೆ ಮೂರು ಕೋಟಿಕೋಟಿ ಸಾಗರೋಪಮ, ಮೂರನೆಯದಕ್ಕೆ ಎರಡು ಕೋಟಿಕೋಟಿ ಸಾಗರೋಪಮ, ನಾಲ್ಕನೆ ಯದಕ್ಕೆ ನಾಲ್ವತ್ತೆರಡು ಸಾವಿರ ವರ್ಷ ಕೂಡಿದ ಒಂದು ಕೋಟಿಕೋಟಿ, ಐದನೆಯದಕ್ಕೆ ಇಪ್ಪತ್ತೊಂದು ಸಾವಿರ ವರ್ಷ, ಆರನೆಯದಕ್ಕೂ ಅಷ್ಟೇ ಪ್ರಮಾಣದ ಅವಧಿಯುಂಟು.

ಎನಿತೊಳವು ಕರ್ಮಭೂಮಿಗ ।
ಳನಿತಱೊಳಂ ಮ್ಲೇಚ್ಛಖಂಡಮಯ್ದೆ ದಲವಱೊಳ್ ॥
ಜನಿಯಿಸಿದಾಮ್ಲೇಚ್ಛರ್ ತದ ।
ವನಿಖಂಡವಿಭೇದದಿಂದಮಯ್ದೆಱನಪ್ಪರ್ ॥ ೧೭

ಮತ್ತಮಾರ್ಯರುಂ ಷಟ್ಕರ್ಮಭೇದದಿಂ ಷಟ್ಪ್ರಕಾರಮಪ್ಪರ್. ಅವರ್ಗಂ ಮಿಥ್ಯಾದೃಷ್ಟಿ ಸಾಧನಸಮ್ಯಕ್‌ದೃಷ್ಟಿ ಸಮ್ಯಗ್ಮಿಥ್ಯಾದೃಷ್ಟಿ ಅಸಂಯುತಸಮ್ಯಗ್ದೃಷ್ಟಿ ದೇಶವ್ರತಿ ಪ್ರಮತ್ತಸಂಯತಂ ಅಪ್ರಮತ್ತಸಂಯತಂ ಅಪೂರ್ವಕರಣ ಕ್ಷಪಕೋಪಶಮಕಸಂಯತಂ ಸೂಕ್ಷ್ಮಪರಾಯ ಕ್ಷಪಕೋಪಶಮಕ ಸಂಯತಂ ಅನಿವೃತ್ತಿಕರಣ ಕ್ಷಪಕೋಪಶಮಕಸಂಯುತಸೂಕ್ಷ್ಮಸಾಂಪರಾಯ ಕ್ಷಪಕೋಪ ಶಮಕ ಸಂಯುತನುಪಶಾಂತಿಕಷಾಯ ವೀತರಾಗಛದ್ಮಸ್ಥಸಂಯುತ ಕ್ಷೀಣಕಷಾಯವೀತರಾಗಛದ್ಮಸಂಯುತಂ ಸಂಯೋಗ ಕೇವಲಿಭಟ್ಟಾರಕನಯೋಗಿಕೇವಲಿಜಿನಭಟ್ಟಾರಕನುಮೆಂದು

ವಿದಿತಗುಣಸ್ಥಾನಂಗಳ್ ।
ಪದಿನಾಲ್ಕವಱಿಂದಮಾರ್ಯಜನಕಂ ಭೇದಂ ॥
ಪದಿನಾಲ್ಕಕ್ಕುಂ ಭಾವಿಪೊ ।
ಡಿದು ದಲನೇಕಾಂತಸಮಯಸತ್ಸಿದ್ಧಾಂತಂ । ೧೮

ಮತ್ತಂ ದೇವಗತಚತುರ್ನಿಕಾಯಭೇದದಿಂ ನಾಲ್ಕುಮಕ್ಕುಂ. ಅಲ್ಲಿ ಭವನಾವಾಸಿಗರ್ ಅಸುರಕುಮಾರಾದಿಭೇದದಿಂ ದಶವಿಧಂ; ವ್ಯಂತರರ್ ಕಿನ್ನರಾದಿಭೇದದಿನಷ್ಟವಿಧಂ ; ಜ್ಯೋತಿಷ್ಕರ್ ಚಂದ್ರಾದಿತ್ಯಭೇದದಿಂ ಪಂಚವಿಧಂ ; ವೈಮಾನಿಕರ್ ಕಲ್ಪಜಕಲ್ಪಾತೀತಭೇದದಿಂ ದ್ವಿವಿಧಂ. ಅಲ್ಲಿ

ಅದಲ್ಲದೆ– ೧೭. ಕರ್ಮಭೂಮಿಗಳೆಷ್ಟಿವೆಯೊ ಅವೆಲ್ಲವುಗಳಲ್ಲಿ ಮ್ಲೇಚ್ಛಖಂಡ ಐದೈದು; ಅವುಗಳಲ್ಲಿ ಹುಟ್ಟಿದ ಮ್ಲೇಚ್ಛರು ಭೂಖಂಡಭೇದದಿಂದ ಐದು ಬಗೆಯಾಗಿರುವರು ವ॥ ಆರ್ಯರು ಷಟ್ಕರ್ಮಭೇದದಿಂದ ಆರು ಪ್ರಕಾರವಾಗಿರುವರು. ಅವರಿಗೆ ಮಿಥ್ಯಾದೃಷ್ಟಿ, ಸಾಧನ ಸಮ್ಯಕ್‌ದೃಷ್ಟಿ, ಸಮ್ಯಗ್ಮಿಥ್ಯಾದೃಷ್ಟಿ, ಅಸಂಯುತ ಸಮ್ಯಗ್ ದೃಷ್ಟಿ, ದೇಶವ್ರತಿ, ಪ್ರಮತ್ತ ಸಂಯುತ, ಅಪ್ರಮತ್ತ ಸಂಯುತ, ಅಪೂರ್ವಕರಣ ಕ್ಷಪಕೋಪಶಮಕ ಸಂಯುತ, ಸೂಕ್ಷ್ಮಪರಾಯ ಕ್ಷಪಕೋಪಶಮಕ ಸಂಯುತ, ಅನಿವೃತ್ತಿಕರಣ ಕ್ಷಪಕೋಪಶಮಕ ಸಂಯುತ, ಸೂಕ್ಷ್ಮಸಾಂಪರಾಯ ಕ್ಷಪಕೋಪಶಮಕ ಸಂಯುತ, ಉಪಶಾಂತ ಕಷಾಯ ವೀತರಾಗಛದ್ಮಸ್ಥ ಸಂಯುತ, ಕ್ಷೀಣಕಷಾಯ ವೀತರಾಗಛದ್ಮಸ್ಥ ಸಂಯುತ, ಸಂಯೋಗ ಕೇವಲ ಭಟ್ಟಾರಕ, ಅಯೋಗ ಕೇವಲಿಜಿನ ಭಟ್ಟಾರಕ ಎಂದು– ೧೮. ಪ್ರಸಿದ್ಧವಾದ ಹದಿನಾಲ್ಕು ಗುಣಸ್ಥಾನಗಳುಂಟು. ಅವುಗಳಿಂದ ಆರ್ಯರು ಹದಿನಾಲ್ಕು ಪ್ರಕಾರದವರು. ಇದು ಅನೇಕಾಂತಸಮಯದ ಸತ್ ಸಿದ್ಧಾಂತ. ವ॥ ದೇವಗತಿಯು ಚತುರ್ನಿಕಾಯ ಭೇದದಿಂದ ನಾಲ್ಕು ವಿಧವಾಗಿದೆ. ಅಲ್ಲಿ ಭವನವಾಸಿಗರು ಅಸುರಕುಮಾರ ಮೊದಲಾದ ಭೇದದಿಂದ ಹತ್ತು ಬಗೆ; ವ್ಯಂತರರು ಕಿನ್ನರಾದಿ ಭೇದದಿಂದ ಎಂಟು ಬಗೆ; ಜ್ಯೋತಿಷ್ಕರು ಚಂದ್ರಸೂರ್ಯಾದಿ

ಭವನಾಮರರೊಳಸುರಕುಮಾರರ್ಗುತ್ಸೇಧಂ ಪಂಚವಿಂಶತಿಧನು, ಉಳಿದರ್ಗೆ ದಶಧನು, ವ್ಯಂತರ ಜ್ಯೋತಿಷ್ಕರ್ಗೆ ದಶಸಪ್ತಧನು, ಸೌಧರ್ಮೇಶಾನಕಲ್ಪಜರ್ಗೆ ಶರೀರಮಾನಂ ಸಪ್ತಾರತ್ನಿ, ಸನತ್ಕುಮಾರ ಮಾಹೇಂದ್ರಕಲ್ಪಜರ್ಗೆ ಷಡರತ್ನಿ, ಬ್ರಹ್ಮಬ್ರಹ್ಮೋತ್ತರಾದಿಚತುಃಕಲ್ಪಜರ್ಗೆ ಪಂಚಾರತ್ನಿ, ಶುಕ್ರಾದಿ ಚತು, ಕಲ್ಪಜರ್ಗೆ ಚತುರರತ್ನಿ, ಆನತಪ್ರಾಣತಕಲ್ಪಜರ್ಗೆ ಸಾರ್ಧತ್ರಯಾರತ್ನಿಃ ಆರಣಾಚ್ಯುತಕಲ್ಪಜರ್ಗೆ ಅರತ್ನಿತ್ರಯ, ಕಲ್ಪಾತೀತಂಗಳಪ್ಪಧೋಗ್ರೈವೇಯಕತ್ರಯದವರ್ಗೆ ಸಾರ್ಧಹಸ್ತತ್ರಯಂ, ಮಧ್ಯಮ ಗ್ರೈವೇಯಕದವರ್ಗೆ ಹಸ್ತದ್ವಯಂ, ಊರ್ಧ್ವಗ್ರೈವೇಯಕತ್ರಯದವರ್ಗೆ ಸಾರ್ಧಹಸ್ತಂ, ಅಲ್ಲಿಂ ಮೇಗಣವರ್ಗೆಲ್ಲಂ ಹಸ್ತಪ್ರಮಾಣಮಕ್ಕುಂ, ಮತ್ತಮುತ್ಕೃಷ್ಟದಿಂ ಭವನವ್ಯಂತರರ್ಗೆ ಸಾಗರೋಪಮ ಸಾಧಿಕಪಲ್ಯೋಪಮಂ ಜೀವನಂ, ಜಘನ್ಯದಿಂ ದಶಸಹಸ್ರವರ್ಷಂ. ಜ್ಯೋತಿಷ್ಕದೇವರ್ಗೆ ಸಾಧಿಕಪಲ್ಯಂ ಜಘನ್ಯದಿಂ ಪಲ್ಯಾಷ್ಟಮಭಾಗಂ. ಸೌಧರ್ಮೇಶಾನಕಲ್ಪಂಗಳೊಳಾಯುಷ್ಯಂ ಸಾಗರೋಪಮ ಮೆರಡು, ಸನತ್ಕುಮಾರಮಾಹೇಂದ್ರಕಲ್ಪಂಗಳೊಳೇೞು, ಬ್ರಹ್ಮಬ್ರಹ್ಮೋತ್ತರಕಲ್ಪಂಗಳೊಳ್ ಪತ್ತು, ಲಾಂಕವಕಾಪಿತ್ಥಕಲ್ಪಂಗಳೊಳ್ ಪದಿನಾಲ್ಕು, ಅಲ್ಲಿಂ ಮೇಗಣೆರಡೆರಡು ಕಲ್ಪಂಗಳೊಳೆರೆಡೆರಡು ಸಾಗರೋಪಮಂ ಪೆರ್ಚಲ್ ಕಡೆಯೊಳಾರಣಾಚ್ಯುತಕಲ್ಪಂಗಳೊಳಿರ್ಪತ್ತೆರಡು. ಮತ್ತಂ ಕಲ್ಪಾತೀತ

ಭೇದದಿಂದ ಐದು ತೆರ; ವೈಮಾನಿಕರು ಕಲ್ಪಜ ಮತ್ತು ಕಲ್ಪಾತೀತ ಎಂದು ಎರಡು ಪ್ರಕಾರ. ಭವನಾಮರರಲ್ಲಿ ದೇಹ ಪ್ರಮಾಣ ಅಸುರಕುಮಾರರಿಗೆ ಇಪ್ಪತ್ತೈದು ಬಿಲ್ಲಳತೆ; ಉಳಿದವರಿಗೆ ಹತ್ತುಬಿಲ್ಲಳತೆ; ವ್ಯಂತರರಿಗೆ ಹತ್ತು ಬಿಲ್ಲು; ಜ್ಯೋತಿಷ್ಕರಿಗೆ ಏಳು ಬಿಲ್ಲು; ಸೌಧರ್ಮ ಹಾಗು ಈಶಾನ ಕಲ್ಪಜರಿಗೆ ದೇಹ ಪ್ರಮಾಣ ಏಳು ಮೊಳ; ಸನತ್ಕುಮಾರ ಮತ್ತು ಮಾಹೇಂದ್ರಕಲ್ಪಜರಿಗೆ ಆರು ಮೊಳ, ಬ್ರಹ್ಮೋತ್ತರಾದಿ ನಾಲ್ಕು ಕಲ್ಪಗಳವರಿಗೆ ಐದು ಮೊಳ; ಶುಕ್ರ ಮೊದಲಾದ ನಾಲ್ಕು ಕಲ್ಪಗಳವರಿಗೆ ನಾಲ್ಕು ಮೊಳ ; ಆನತ ಹಾಗು ಪ್ರಾಣಕಲ್ಪಜರಿಗೆ ಮೂರುವರೆಮೊಳ; ಆರಣ ಹಾಗು ಅಚ್ಯುತ ಕಲ್ಪಜರಿಗೆ ಮೂರು ಮೊಳ; ಕಲ್ಪಾತೀತಗಳಾದ ಮೂರು ಗ್ರೈವೇಯುಕದವರಿಗೆ ಮೂರುವರೆ ಹಸ್ತಪ್ರಮಾಣ; ಮಧ್ಯಮ ಗ್ರೈವೇಯುಕದವರಿಗೆ ಎರಡು ಹಸ್ತ ಪ್ರಮಾಣ; ಮೂರು ಊರ್ಧ್ವಗ್ರೈವೇಯುಕದವರಿಗೆ ಒಂದೂವರೆ ಹಸ್ತ ಪ್ರಮಾಣ; ಅಲ್ಲಿಂದ ಮೇಲಿನವರಿಗೆಲ್ಲ ಒಂದು ಹಸ್ತ ಪ್ರಮಾಣ. ಉತ್ಕೃಷ್ಟದಿಂದ ಭವನವ್ಯಂತರರಿಗೆ ಒಂದು ಸಾಗರ ಸಾಧಿಕ ಪಲ್ಯೋಪಮ ಆಯುಷ್ಯ; ಜಘನ್ಯದಿಂದ ಹತ್ತುಸಾವಿರ ವರ್ಷ; ಜ್ಯೋತಿಷ್ಕದೇವರಿಗೆ ಸಾಧಿಕ್ಯ ಪಲ್ಯ; ಜಘನ್ಯದಿಂದ ಪಲ್ಯಾಷ್ಟಮ ಭಾಗ; ಸೌಧರ್ಮ ಹಾಗು ಈಶಾನ ಕಲ್ಪಗಳಲ್ಲಿ ಆಯುಷ್ಯ ಎರಡುಸಾಗರೋಪಮ; ಸನತ್ಕುಮಾರ ಮಾಹೇಂದ್ರ ಕಲ್ಪಗಳಲ್ಲಿ ಏಳು, ಬ್ರಹ್ಮಬ್ರಹ್ಮೋತ್ತರ ಕಲ್ಪಗಳಲ್ಲಿ ಹತ್ತು, ಲಾಂಕವ ಕಾಪಿತ್ಥ ಕಲ್ಪಗಳಲ್ಲಿ ಹದಿನಾಲ್ಕು, ಅಲ್ಲಿಂದ ಮೇಲಿನ ಎರಡು ಕಲ್ಪಗಳಲ್ಲಿ ಎರಡೆರಡು ಸಾಗರೋಪಮ ಹೆಚ್ಚುತ್ತ ಹೋಗಿ, ಕೊನೆಯ ಆರಣ, ಅಚ್ಯುತ ಕಲ್ಪಗಳಲ್ಲಿ ಇಪ್ಪತ್ತೆರಡು ಸಾಗರೋಪಮವಾಗುವುದು. ಮತ್ತು ಕಲ್ಪಾತೀತ ವಿಮಾನಗಳಲ್ಲಿ ಒಂದೊಂದರಂತೆ

ವಿಮಾನಂಗಳೊಳೇಕೈಕವೃದ್ಧಿಯಿಂ ಕಡೆಯ ಸರ್ವಾರ್ಥಸಿದ್ಧಿಯೊಳ್ ಮೂವತ್ತುಮೂಱಕ್ಕುಮೆಂದಿಂತು

ನರಕಾದಿಗತಿಚತುಷ್ಟಯ ।
ಪರಿಗತಜೀವಪ್ರಕಾರಮಂ ಪೇೞ್ದು ಸುರಾ ॥
ಸುರಸಭೆಗೆ ಜೀವತತ್ವ ।
ಸ್ವರೂಪಮಂ ಬೞಕೆ ತಿಳಿಪಿದಂ ಸಕಳಜ್ಞಂ ॥ ೧೯

ಅದೆಂತೆಂದೊಡೆ – ಧರ್ಮಾಧರ್ಮಕಾಲಾಕಾಲಪುದ್ಗಲಭೇದದಿಂ ಜೀವಂ ಪಂಚಪ್ರಕಾರಮಕ್ಕುಂ. ಅಲ್ಲಿ

ಸಮನಿಸಿ ಜೀವಂ ತಾಮವು ।
ಸಮಂತು ಷಡ್ದ್ರವ್ಯಮೆನಿಕುಮವೆ ಮತ್ತಂ ಕಾ ॥
ಲಮುದಿಲ್ಲದಂದು ಪರಮಾ ।
ಗಮದೊಳ್ ಪಂಚಾಸ್ತಿಕಾಯಮೆನಿಕುಮಮೋಘಂ । ೨೦

ಮತ್ತಂ ಧರ್ಮಾಧರ್ಮಂಗಳೆಂಬೆರಡುಂ ಲೋಕಾಕಾಶವ್ಯಾಪಕಂಗಳುಂ ಜೀವಪುದ್ಗಲಂಗಳ್ಗೆ, ಮತ್ಸ್ಯಂಗಳ್ಗೆ ಜಳದಂತೆಯುಂ, ಪಥಿಕರ್ಗೆ ತರುಚ್ಛಾಯೆಯಂತೆಯುಂ, ಗತಿಸ್ಥಿತಿಕಾರಣಂಗಳಕ್ಕುಂ, ಆಕಾಶಮೆಂಬುದು ನಿತ್ಯಮುಂ ವ್ಯಾಪಕಮುಮವಗಾಹಲಕ್ಷಣಮುಮಕ್ಕುಂ. ಜೀವಾದಿದ್ರವ್ಯಂಗಳನುಳ್ಳುದು ಲೋಕಾಕಾಶಮುೞಿದುದಲೋಕಾಕಾಶಮಕ್ಕುಂ. ಮತ್ತಂ ಧರ್ಮಾಧರ್ಮಂಗಳುಮೇಕ

ಹೆಚ್ಚುತ್ತ ಕೊನೆಯ ಸರ್ವಾರ್ಥಸಿದ್ಧಿಯಲ್ಲಿ ಮೂವತ್ತು ಮೂರು ಸಾಗರೋಪಮವಾಗುವುದು. ೧೯. ನರಕಾದಿ ಚತುರ್ಗತಿಗಳನ್ನು ಸುರಾಸುರ ಸಭೆಗೆ ಹೀಗೆ ತಿಳಿಸಿದ ಬಳಿಕ ಸರ್ವಜ್ಞನು ಜೀವತತ್ವಸ್ವರೂಪವನ್ನು ತಿಳಿಸಿದನು. ವ|| ಅದು ಹೇಗೆಂದರೆ– ಧರ್ಮಾಧರ್ಮ, ಕಾಲಾಕಾಲ ಪುದ್ಗಲ ಭೇದದಿಂದ ಜೀವವು ಐದು ತೆರನಾಗಿರುವುದು. ಅಲ್ಲಿ– ೨೦. ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲವೆಂಬುವೆ ಆರು ದ್ರವ್ಯಗಳು. ಇವುಗಳಲ್ಲಿ ಕಾಲವೊಂದನ್ನು ಬಿಟ್ಟು ಉಳಿದುವು ಪಂಚಾಸ್ತಿಕಾಯಗಳೆನಿಸುತ್ತವೆ. ವ|| ಧರ್ಮ ಮತ್ತು ಅಧರ್ಮವೆಂಬೆರಡೂ ಲೋಕಾಕಾಶವ್ಯಾಪಕವಾಗಿದ್ದು, ಜೀವಪುದ್ಗಲಗಳಿಗೆ–ಮೀನುಗಳಿಗೆ ನೀರಿನಂತೆಯೂ,– ಹಾದಿಕಾರರಿಗೆ ಮರದ ನೆಳಲಂತೆಯೂ–ಗತಿಸ್ಥಿತಿ ಕಾರಣಗಳಾಗುವುವು. ಆಕಾಶವೆಂಬುದು ನಿತ್ಯವೂ, ವ್ಯಾಪಕವೂ, ಅವಗಾಹಲಕ್ಷಣವೂ ಆಗಿರುವುದು. ಜೀವಾದಿದ್ರವ್ಯಗಳನ್ನು ಉಳ್ಳುದು ಲೋಕಾಕಾಶ; ಅದರಾಚೆಯದು ಅಲೋಕಾಕಾಶ, ಧರ್ಮ, ಅಧರ್ಮ, ಏಕಜೀವಗಳು ಅಸಂಖ್ಯಾತ ಪ್ರದೇಶವುಳ್ಳುವು; ಆಕಾಶವು ಅನಂತ ಪ್ರದೇಶವಾಗಿದೆ ಜೀವ ಅಜೀವಾದಿ

ಜೀವಮುಮಸಂಖ್ಯಾತಪ್ರದೇಶಂಗಳ್. ಆಕಾಶಮನಂತಪ್ರದೇಶಮಕ್ಕುಂ, ಮತ್ತಂ ಜೀವಾಜೀವಾದಿ ದ್ರವ್ಯಪರಿವರ್ತನಾರೂಪಮಪ್ಪುದು ಕಾಲಂ. ಅದುವುಂ ವ್ಯವಹಾರಮುಖ್ಯಭೇದದಿಂ ದ್ವಿವಿಧಂ ; ತತ್ಪರ್ಯಾಯಸ್ಥಿತಂಗಳಪ್ಪ ಸಮಯಘಟಿಕಾಭೇದಲಕ್ಷಣವ್ಯವಧಾನಕಾಲಂ ತಮ್ಮಿಂ ತಾಮೆ ನಾನಾರೂಪದಿಂ ಪರಿಣಾಮಿಸುವ ಪದಾರ್ಥಂಗಳ ವರ್ತನೆಗೆ ಸಹಕಾರಿಣಿಯಾಗಿರ್ಪ ದ್ರವ್ಯಮುಖ್ಯಕಾಲಮಕ್ಕುಂ. ಪುದ್ಗಲಮೆಂಬುದು ರೂಪರಸಗಂಧಸ್ಪರ್ಶಶಬ್ದಂಗಳನುಳ್ಳುದು. ಅದುವೆ ಮೇಣ್ ಸ್ಕಂದ ಭೇದದಿಂದಿರ್ತೆಱನಕ್ಕುಂ. ಅವರ್ಕಂ ಸ್ಥೂಳಸೂಕ್ಷ್ಮಛಾಯಾತಪಾದಿರೂಪವಿಕಲ್ಪದಿನನೇಕಭೇದಮಕ್ಕುಂ, ಅದಲ್ಲದೆಯುಂ,

ಆರಯೆ ಕರ್ಮಾಗಮನ ।
ದ್ವಾರಂ ವಾಕ್ತನುಮನಃಕ್ರಿಯಾಯೋಗವ್ಯಾ ॥
ಪಾರಯುತಮಾಶ್ರವಂ ಸಮು ।
ದೀರಿತಮದು ಸದಭಿಹಿತದೊಳರ್ಹನ್ಮತದೊಳ್ ॥ ೨೧

ಅದುವುಂ ಪುಣ್ಯಪಾಪಾಪೇಕ್ಷೆಯಿಂ ಶುಭಾಶುಭರೂಪಮಕ್ಕುಂ. ಮತ್ತಂ ತದಾಶ್ರವಕ್ಕೆ ಸಕ ಷಾಯನುಮಕಷಾಯನುಂ ಕರ್ತೃಗಳಕ್ಕುಂ. ಅಲ್ಲಿ ಪ್ರದೋಷಾಸಾಧನಮಾತ್ಸರ್ಯೋಪಘಾತಾಂತ ರಾಯನಿಹ್ನವಂಗಳ್ ಜ್ಞಾನದರ್ಶನಾವರಣಕರ್ಮಾಶ್ರವಂ ; ಸಂತಾಪಶೋಕಪರಿದೇವನಾಕ್ರಂದವಧಾದಿ ಗಳ್, ಅಸಾತವೇದನೀಯಾಶ್ರವಂ; ಸರಾಗಸಂಯಮದಾನಾನುಕಂಪನಕ್ಷಾಂತ್ಯಾದಿಗಳ್ ಸಾತವೇದನೀ

ದ್ರವ್ಯಪರಿವರ್ತನಾ ರೂಪವಾದುದು ಕಾಲ. ಅದು ವ್ಯವಹಾರ ಮತ್ತು ಮುಖ್ಯ ಎಂದು ಎರಡು ಪ್ರಕಾರವಾಗಿದೆ. ಅದರ ಪರ್ಯಾಯ ಸ್ಥಿತಗಳಾದ ಸಮಯಗಳಿಗೆ ಮೊದಲಾದ ಭೇದ ಲಕ್ಷಣವುಳ್ಳುದು ವ್ಯವಧಾನ ಕಾಲ. ತಮ್ಮಿಂದ ತಾವೆ ನಾನಾ ರೂಪದಿಂದ ಪರಿಣಾಮಿಸುವ ಪದಾರ್ಥಗಳ ವರ್ತನೆಗೆ ಸಹಕಾರಿಯಾಗಿರುವುದು ದ್ರವ್ಯಮುಖ್ಯಕಾಲ. ಪುದ್ಗಲವೆಂಬುದು ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳನ್ನು ಉಳ್ಳುದು. ಅದು ಸ್ಕಂದಭೇದದಿಂದ ಎರಡು ತೆರನಾಗಿದೆ. ಅವುಗಳಿಗೂ ಸ್ಥೂಲ, ಸೂಕ್ಷ್ಮ, ನೆಳಲು, ಬಿಸಿಲು ಮೊದಲಾದ ವಿಕಲ್ಪದಿಂದ ಅನೇಕ ಭೇದಗಳುಂಟು. ಅದಲ್ಲದೆ– ೨೧. ಕರ್ಮಕ್ಕೆ ಆಗಮದ್ವಾರವೂ, ಮಾತು, ಮನಸ್ಸು ಮತ್ತು ಕ್ರಿಯೆಗಳ ಯೋಗ ವ್ಯಾಪಾರ ಯುಕ್ತವೂ ಆದುದು ಆಶ್ರವವೆಂದು ಅರ್ಹನ್ಮತದಲ್ಲಿ ಹೇಳಲ್ಪಟ್ಟಿದೆ. ವ॥ ಆಶ್ರವವು ಪುಣ್ಯಪಾಪಗಳ ಮೇರೆಗೆ ಶುಭರೂಪವೆಂದೂ, ಅಶುಭರೂಪವೆಂದೂ ಎರಡು ಬಗೆ. ಆಶ್ರವಕ್ಕೆ ಸಕಷಾಯ ಮತ್ತು ಅಕಷಾಯ ಇಬ್ಬರೂ ಕರ್ತೃಗಳು. ಪ್ರದೋಷ, ಅಸಾಧನ, ಮಾತ್ಸರ್ಯ, ಉಪಘಾತ, ಅಂತರಾಯ ಮತ್ತು ನಿಹ್ನವ ಎಂಬುವು ಜ್ಞಾನದರ್ಶನಾವರಣ ಕರ್ಮಾಶ್ರವ; ಸಂತಾಪ, ಶೋಕ, ಪರಿದೇವನ, ಆಕ್ರಂದನ, ವಧೆ ಮೊದಲಾದವು ಅಸಾತವೇದನೀಯಾಶ್ರವ; ಸರಾಗ, ಸಂಯಮ, ದಾನ,

ಯಾಶ್ರವಂ, ಆಕೇವಲಶ್ರುತಧರ್ಮಸಂಘದೇವಾವರ್ಣವಾದಂಗಳ್ ದರ್ಶನಮೋಹನೀಯಾಶ್ರವಂ; *ಕಷಾಯೋದಯಪ್ರಭೂತತೀವ್ರಪರಿಣಾಮಂಗಳ್ ಚಾರಿತ್ರಮೋಹನೀಯಾಶ್ರವಂ; ಬಹ್ವಾರಂಭಪರಿಗ್ರಹಂಗಳ್ ಬಹುಪ್ರಕಾರಮಾಯೆಗಳ್ ತಿರ್ಯಗಾಯುಷ್ಯಾಶ್ರವಂ; ಸ್ವಲ್ಪಾರಂಭ ಪರಿಗ್ರಹಂಗಳ್ ಮಾನುಷಾಯುಷ್ಯಾಶ್ರವಂ; ಕುರಾಗಸಂಯಮಾದಿಗಳ್ ದೇವಾಯುಷ್ಯಾಶ್ರವಂ; ವಿಸಂವಾದನಯೋಗ ವಕ್ರತೆಗಳ್ ಅಶೋಭನಾಮಾಶ್ರವಂ; ತದ್ವಿಪರೀತಂಗಳ್ ಶುಭನಾಮಾಶ್ರವಂ; ದಾನಾದಿವಿಘ್ನ ಕರಣಮನ್ತರಾಯಾಶ್ರವಂ. ಅದಲ್ಲದೆಯುಂ *

ಪರಿಭಾವಿಸೆ ಮಿಥ್ಯಾತ್ವಾ ।
ವಿರತಿಕಷಾಯಪ್ರಮಾದಯೋಗಾಖ್ಯಂಗಳ್ ॥
ನಿರುತಮಿವಯ್ದುಂ ತತ್ತ್ವ ।
ಜ್ಞರುಕ್ತಿಯಿಂ ಬಂಧಕಾರಣಂಗಳೆನಿಕ್ಕುಂ ॥ ೨೨

ಸತತಂ ಜೀವಂ ಸಕಷಾ ।
ಯತೆಯಿಂದಂ ಕರ್ಮಯೋಗ್ಯಮಂ ಪುದ್ಗಲಸಂ ॥
ತತಿಯಂ ಕೈಕೊಳ್ವುದು ನಿ ।
ಶ್ಚಿತಮಂತದೆ ಬಂಧಮೆಂಬ ಪೆಸರಂ ಪಡೆಗುಂ ॥ ೨೩

ಅನುಕಂಪನ, ಕ್ಷಾಂತಿ ಮುಂತಾದವು ಸಾತವೇದನೀಯಾಶ್ರವ; ಆ ಕೇವಲ ಶ್ರುತ ಧರ್ಮ ಸಂಘ ದೇವ ಮೊದಲಾದವುಗಳ ನಿಂದೆ ದರ್ಶನಮೋಹನೀಯಾಶ್ರವ; ಕಷಾಯೋದಯದಿಂದ ಹುಟ್ಟಿದ ತೀವ್ರ ಪರಿಣಾಮಗಳು ಚಾರಿತ್ರಮೋಹನೀಯಾಶ್ರವ; ಬಹ್ವಾರಂಭ (ಅತಿಯಾದ ಹಿಂಸಾಕರ್ಮ) ಪರಿಗ್ರಹಗಳು ಬಹುಪ್ರಕಾರದ ಮಾಯೆಗಳು ತಿರ್ಯಗಾಯುಷ್ಯಾಶ್ರವ; ಸ್ವಲ್ಪಾರಂಭ (ಅಲ್ಪಹಿಂಸಾ ಕರ್ಮ) ಪರಿಗ್ರಹಗಳು ಮಾನುಷಾಯುಷ್ಯಾಶ್ರವ; ದುಷ್ಟವಿಷಯಗಳಲ್ಲಿ ಅನುರಾಗವಾಗದಂತೆ ಇಂದ್ರಿಯನಿಗ್ರಹವೇ ಮೊದಲಾದವು ದೇವಾಯುಷ್ಯಾಶ್ರವ; ವಿಸಂವಾದನ ಯೋಗ ವಕ್ರತೆಗಳು ಅಶುಭಾಶ್ರವ; ಅದಕ್ಕೆ ವಿರುದ್ಧವಾದವು ಶುಭಾಶ್ರವ; ದಾನಾದಿಗಳಿಗೆ ವಿಘ್ನವೊಡ್ಡುವುದು ಅಂತರಾಯಾಶ್ರವ. ಅದಲ್ಲದೆ– ೨೨. ಮಿಥ್ಯಾತ್ವ, ಅವಿರತಿ, ಕಷಾಯ, ಪ್ರಮಾದ ಮತ್ತು ಯೋಗ ಎಂಬ ಈ ಐದು ತತ್ತ್ವಜ್ಞರ ಮೇರೆಗೆ ಬಂಧ ಕಾರಣಗಳಾಗಿವೆ. ೨೩. ಜೀವವು ಸತತವಾಗಿ ಸಕಾಷಾಯತೆಯಿಂದಾಗಿ ಕರ್ಮಯೋಗ್ಯವಾದ ಪುದ್ಗಲ ಸಮೂಹವನ್ನು

---

* ನಾರಕಾಯುಷ್ಯಾವಂ ದರ್ಶನವಿಶುದ್ಧ್ಯಾದಿಷೋಡಶಭಾವನೆಗಳ್ ಶುಭನಾಮಕರ್ಮವಿಶೇಷ ತೀರ್ಥಕೃನ್ನಾಮಾಶ್ರವಂ ಪರಾತ್ಮನಿಂದಾಪ್ರಸಂಸೆಗಳುನಿಚೈರ್ಗ್ಗೋತ್ರಾಶ್ರವಂ ತದ್ವಿಪರ್ಯಾಸಂಗಳುಚ್ಚೈರ್ಗೋತ್ರಾಶ್ರವಂ ದಾನಾದಿವಿಘ್ನಕರಣವಂತರಾಯಾಶ್ರವಮದಲ್ಲದೆಯುಂ. ಎಂದು ಪಾಠಾಂತರ.

ಕ್ರಮದಿಂ ಪ್ರಕೃತಿಸ್ಥಿತಿಯುಗ ।
ಳಮುಮನುಭಾಗಪ್ರದೇಶಯುಗಳಮಮೆನೆ ಭೇ ॥
ದಮಿನಿತು ನಾಲ್ಕುಂ ತೆಱದಿಂ ।
ಸಮನಿಸುಗುಂ ಬಂಧಕತ್ವಸಂಬಂಧಂಗಳ್ ॥ ೨೪

ಮತ್ತಮಯ್ದುಂ ತೆಱದ ಜ್ಞಾನಾವರಣಮುಮೊಂಭತ್ತುಂತೆಱದ ದರ್ಶನಾವರಣಮುಮೆರಡುಂ ತೆಱದ ವೇದನೀಯಮುಮಿರ್ಪತ್ತೆಂಟುಂ ತೆಱದ ಮೋಹನೀಯಮುಂ ನಾಲ್ಕುಂ ತೆಱದಾಯುಷ್ಯಮುಂ ತೊಂಭತ್ತುಮೂಱುಂ ತೆಱದ ನಾಮಮುಮೆರಡುಂ ತೆಱದ ಗೋತ್ರಮುಮಯ್ದಂತೆಱದಂತರಾಯಮು ಮೆಂಬಿವೆಂಟುಂ ಪ್ರಕೃತಿಗಳ ಬಂಧಭೇದಮಕ್ಕುಂ, ಮತ್ತಂ ಜ್ಞಾನದರ್ಶನಾವರಣವೇದನೀಯಾಂತ ರಾಯಂಗಳುತ್ಕೃಷ್ಟದಿಂ ಪ್ರತ್ಯೇಕಂ ಮೂವತ್ತು ಕೋಟಿಕೋಟಿ, ಮೋಹನೀಯಕ್ಕೆಱ್ಪತ್ತು ಕೋಟಿಕೋಟಿ, ನಾಮಗೋತ್ರಂಗಳ್ಗೆ ಪ್ರತ್ಯೇಕಮಿರ್ಪತ್ತು ಕೋಟಿ. ಆಯುಷ್ಯಕ್ಕೆ ಮೂವತ್ತಮೂಱುಸಾಗರೋಪಮಂ, ಜಘನ್ಯದಿಂ ವೇದನೀಯಕ್ಕೆ ಪನ್ನೆರಡು ಮುಹೂರ್ತಂ, ನಾಮಗೋತ್ರಂಗಳ್ಗೆಂಟು ಮುಹೂರ್ತಂ, ಉಳಿದವರ್ಕಂತರ್ಮುಹೂರ್ತಂ ಸ್ಥಿತಿಬಂಧಮಕ್ಕುಂ,

ಒದವಿದ ಕರ್ಮದ ಶಕ್ತಿಯೆ ।
ವಿದಿತಮದನುಭಾಗಬಂಧಮಕ್ಕುಂ ಬಹುಭೇ ॥
ದದಿನಾದ ಜೀವಕರ್ಮ ।
ಪ್ರದೇಶಯೋಗಂ ಪ್ರದೇಶಬಂಧಮೆನಿಕ್ಕುಂ ॥ ೨೫

ಪಡೆಯುತ್ತದೆ. ಅದಕ್ಕೆ ಬಂಧವೆಂದು ಹೆಸರು. ೨೪. ಬಂಧ ಸಂಬಂಧಗಳು ಕ್ರಮವಾಗಿ ಪ್ರಕೃತಿ, ಸ್ಥಿತಿ, ಅನುಭಾಗ ಮತ್ತು ಪ್ರದೇಶ ಎಂದು ನಾಲ್ಕು ಪ್ರಕಾರವಾಗಿವೆ. ವ॥ ಐದು ಬಗೆಯ ಜ್ಞಾನಾವರಣ, ಒಂಭತ್ತು ಬಗೆಯ ದರ್ಶನಾವರಣ, ಎರಡು ಬಗೆಯ ವೇದನೀಯ, ಇಪ್ಪತ್ತೆಂಟು ತೆರದ ಮೋಹನೀಯ, ನಾಲ್ಕು ತೆರದ ಆಯುಷ್ಯ. ತೊಂಭತ್ತುಮೂರು ಬಗೆಯ ನಾಮ, ಎರಡು ಬಗೆಯ ಗೋತ್ರ, ಐದು ಬಗೆಯ ಅಂತರಾಯ, – ಈ ಎಂಟು ಪ್ರಕೃತಿಗಳು ಬಂಧಭೇಗಳು. ಮತ್ತು ಜ್ಞಾನದರ್ಶನಾವರಣ ವೇದನೀಯ ಅಂತರಾಯಗಳು ಉತ್ಕೃಷ್ಟದಿಂದ ಪ್ರತ್ಯೇಕವೂ ಮೂವತ್ತು ಕೋಟಿಕೋಟಿ ಮೋಹನೀಯಕ್ಕೆ ಎಪ್ಪತ್ತು ಕೋಟಿಕೋಟಿ, ನಾಮ ಗೋತ್ರಗಳಿಗೆ ಪ್ರತ್ಯೇಕ ಇಪ್ಪತ್ತುಕೋಟಿ. ಆಯುಷ್ಯಕ್ಕೆ ಮೂವತ್ತು ಮೂರು ಸಾಗರೋಪಮ, ಜಘನ್ಯದಿಂದ ವೇದನೀಯಕ್ಕೆ ಹನ್ನೆರಡು ಮುಹೂರ್ತ, ನಾಮಗೋತ್ರಗಳಿಗೆ ಎಂಟು ಮುಹೂರ್ತ ಉಳಿದುವುಗಳಿಗೆ ಅಂತರ್ಮು ಹೂರ್ತ ಸ್ಥಿತಿಬಂಧವಾಗುವುದು. ೨೫. ಒದಗಿದ ಕರ್ಮದ ಶಕ್ತಿಯು ಅನುಭಾಗ ಬಂಧವೆನಿಸುವುದು. ಬಹುಭೇದದಿಂದಾದ ಜೀವಕರ್ಮ ಪ್ರದೇಶ

ಅದಲ್ಲದೆಯುಂ,

ನಿರವಿಸುವೊಡೆ ಕರ್ಮಾಶ್ರವ ।
ನಿರೋಧಮದೆ ಸಂವರಾಖ್ಯಮಕ್ಕುಂ ತತ್ವಂ ॥
ವರತತ್ವಕ್ಕಂ ತೋರ್ಕುಂ ।
ದೊರೆವತ್ತು ಸಮಗ್ರಕಾರಣಂಗಳ್ ಪಲವುಂ ॥ ೨೬

ಆವಾವುದೆಂದೊಡೆ–ಮನೋಗುಪ್ತ್ಯಾದಿತ್ರಿಗುಪ್ತಿಯುಂ, ಈರ್ಯಾದಿಪಂಚಸಮಿತಿಯುಂ, ಉತ್ತಮ ಕ್ಷಮಾದಿದಶಧರ್ಮಮುಂ, ಅಧ್ರುವಾದಿದ್ವಾದಶಾನುಪ್ರೇಕ್ಷೆಯುಂ, ಕ್ಷುಧಾದಿದ್ವಾವಿಂಶತಿಪರೀಷಹ ಜಯಮುಂ, ಸಾಮಾಯಿಕಾದಿಪಂಚಚಾರಿತ್ರಮುಮಕ್ಕುಂ, ಅದಲ್ಲದೆಯುಂ,

ಸಾಕ್ಷಾತ್ಕರ್ಮಕ್ಷಪಣಾ ।
ಲಕ್ಷಣಮದು ನಿರ್ಜರಾಹ್ವಯಂ ತತ್ವಮದ ।
ಕೀರ್ಕ್ಷಿಸೆ ಕಾಲೋಪಕ್ರಮ ।
ಲಕ್ಷಿತಭೇದದ್ವಯಂ ವಿವಿಕ್ಷಿತಮಕ್ಕುಂ ॥ ೨೭

ಅದೆಂತೆಂದೊಡೆ–ನರಕಾದಿಗತಿಗಳೊಳ್ ಕರ್ಮಂಗಳನುಂಡು ತವಿಸುವುದು ಯಥಾಕಾಲನಿರ್ಜ ರೆಯೆಂಬುದು, ತಪಶ್ಚರಣದಿಂ ತವಿಸುವುದು ಉಪಕ್ರಮನಿರ್ಜರೆಯೆಂಬುದು. ತಪಮುಂ ಬಾಹ್ಯಾ ಭ್ಯಂತರವಿಕಲ್ಪದಿಂ ದ್ವಿಪ್ರಕಾರಮಕ್ಕುಂ. ಅಲ್ಲಿಯುಮನಶನಾವಮೋದರ್ಯವೃತ್ತಪರಿಸಂಖ್ಯಾನರಸ ಪರಿತ್ಯಾಗವಿವಿಕ್ತಾವಾಸಕಾಯಕ್ಲೇಶಮೆಂಬಾಱುಂ ಬಾಹ್ಯತಪಂಗಳುಂ; ಪ್ರಾಯಶ್ಚಿತ್ತ ವಿನಯ ವೈಯ್ಯಾಪೃತ್ಯ

ಯೋಗವು ಪ್ರದೇಶ ಬಂಧವೆನಿಸುವುದು. ಅದಲ್ಲದೆ– ೨೬. ಕರ್ಮಾಶ್ರವವನ್ನು ತಡೆಗಟ್ಟುವುದೆ ಸಂವರವೆನಿಸುವುದು. ಆ ಸಂವರ ತತ್ತ್ವಕ್ಕೆ ಸಮಗ್ರಕಾರಣಗಳು ಹಲವು ಉಂಟು. ವ॥ ಅವು ಯಾವುವೆಂದರೆ–ಮನೋಗುಪ್ತಿಯೆ ಮೊದಲಾದ ಮೂರುಗುಪ್ತಿಗಳು, ಈರ್ಯೆ ಮೊದಲಾದ ಐದು ಸಮಿತಿಗಳು, ಉತ್ತಮಕ್ಷಮೆ ಮೊದಲಾದ ದಶಧರ್ಮಗಳು, ಅಧ್ರುವವೆ ಮುಂತಾದ ಹನ್ನೆರಡು ಅನುಪ್ರೇಕ್ಷೆ ಗಳು, ಹಸಿವೆ, ನೀರಡಿಕೆ ಮೊದಲಾದ ಇಪ್ಪತ್ತೆರಡು ಪರೀಷಹಜಯ, ಮತ್ತು ಸಾಮಾಯಿಕವೆ ಮೊದಲಾದ ಐದು ಚಾರಿತ್ರಗಳು. ಅದಲ್ಲದೆ– ೨೭. ಕರ್ಮಗಳನ್ನು ಸಾಕ್ಷಾತ್ತಾಗಿ ಕ್ಷಯಗೊಳಿಸುವುದಕ್ಕೆ ನಿರ್ಜರೆಯೆಂಬ ಹೆಸರು. ನಿರ್ಜರಾತತ್ತ್ವಕ್ಕೆ ಯಥಾಕಾಲ ಮತ್ತು ಉಪಕರ್ಮ ಎಂದು ಎರಡು ಭೇದಗಳುಂಟು. ವ॥ ಅದು ಹೇಗೆಂದರೆ–ನರಕಾದಿ ಗತಿಗಳಲ್ಲಿ ಕರ್ಮಗಳನ್ನು ಪೂರ್ತಿಯಾಗಿ ಉಂಡು ಮುಗಿಸುವುದು ಯಥಾಕಾಲ ನಿರ್ಜರೆ; ತಪಸ್ಸಿನಿಂದ ಕರ್ಮನಾಶ ಮಾಡುವುದು ಉಪಕ್ರಮ ನಿರ್ಜರೆಯೆನಿಸುವುದು. ತಪಸ್ಸು ಬಾಹ್ಯ ಮತ್ತು ಅಭ್ಯಂತರವೆಂದು ಎರಡು ತೆರ; ಅದರಲ್ಲಿ ಅನಶನ, ಆವಮೋದರ್ಯ, ವೃತ್ತಿಪರಿಸಂಖ್ಯಾನ, ರಸ ಪರಿತ್ಯಾಗ, ವಿವಿಕ್ತಾವಾಸ, ಮತ್ತು ಕಾಯಕ್ಲೇಶವೆಂಬ ಆರು ಬಾಹ್ಯ ತಪಗಳು; ಪ್ರಾಯಶ್ಚಿತ್ತ, ವಿನಯ, ವೈಯ್ಯಾಪೃತ್ಯ, ಸ್ವಾಧ್ಯಾಯ, ಉತ್ಸರ್ಗ ಮತ್ತು

ಸ್ವಾಧ್ಯಾಯ ಉತ್ಸರ್ಗ ಧ್ಯಾನಮೆಂಬಾಱುಮಾಭ್ಯಂತರಾನಶನಾವಮೋದರ್ಯವೃತ್ತಿತಪಂ ಗಳ್. ಇವು ಕರ್ಮನಿರ್ಜರೇಚ್ಛುಗಳ್ಗೆ ನಿರ್ವಿಕಲ್ಪದಿಂದಾಚರಣೀಯಂಗಳ್. ಆಂತರತಪಂಗಳೊಳ್ ಧ್ಯಾನಮೆಂಬುದಾರ್ತ ರೌದ್ರ ಧರ್ಮ ಶುಕ್ಲಭೇದದಿಂ ನಾಲ್ಕು ತೆಱಂ. ಅವಱೊಳಾರ್ತಧ್ಯಾನಮಮನೋಜ್ಞದ್ರವ್ಯ ವಿಪ್ರಯೋಗಾಕಾಂಕ್ಷಯುಂ ಮನೋಜ್ಞದ್ರವ್ಯಸಂಯೋಗಾಕಾಂಕ್ಷೆಯುಂ, ದುಸ್ಸಹವೇದ ನೋಪಸಮಚಿಂತಾಪ್ರಬಂಧಮುಂ, ಹರ್ಷೋನ್ಮತ್ತಾರ್ತಲಾಭಜಮುಮೆಂದು ನಾಲ್ಕು ತೆಱಂ. ರೌದ್ರ ಧ್ಯಾನಂ ಹಿಂಸಾನೃತಸ್ತೇಯವಿಷಯಪರಿಪಾಲನಪ್ರಬಂಧದಿಂ ನಾಲ್ಕುಂ ತೆಱಂ. ಧರ್ಮಧ್ಯಾನಮಾ ಜ್ಞಾಪಾಯವಿಪಾಕಸಂಸ್ಥಾನನಿಚಯವಿವರಣೆಯಿಂ ನಾಲ್ಕುಂ ತೆಱಂ. ಶುಕ್ಲಧ್ಯಾನಂ ಪೃಥಕ್ತ್ವವಿತರ್ಕ ವಿಚಾರಣೈಕತ್ವವಿತರ್ಕವಿಚಾರಣಸೂಕ್ಷ್ಮಕ್ರಿಯಾಪ್ರತಿಪಾತಿವ್ಯುಪರಕ್ರಿಯಾನಿವೃತ್ತಿಭೇದದಿಂ ನಾಲ್ಕು ತೆಱಂ. ಮತ್ತಂ ಮೊದಲವೆರಡು ಧ್ಯಾನಂಗಳ್ ನಿಷೇಧಮುಖದಿಂ ನಿರ್ಜರಾಕರಣಂಗಳ್; ಉೞಿದು ವೆರಡುಂ ವಿಧಿಮುಖದಿನಖಿಳಕರ್ಮನಿರ್ಜರಾಕರಣಂಗಳ್. ಅದಲ್ಲದೆಯುಂ,

> ಸಮನಿಸಿರೆಕೃತ್ಸ್ನಕರ್ಮ ।
> ಪ್ರಮುಕ್ತಿ ಪರಿಣಾಮಿಯೆನಿಪ ಭವ್ಯಂಗದೆ ಮೋ ॥
> ಕ್ಷಮೆನಿಪ್ಪ ಸಪ್ತಮಂ ತ ।
> ತ್ತ್ವಮದರ್ಕೆ ಸಮಂತು ಹೇತುರತ್ನತ್ರಿತಯಂ ॥ ೨೮

ಅದೆಂತೆಂದೊಡೆ– ಸಮ್ಯಗ್ದರ್ಶನಜ್ಞಾನಚಾರಿತ್ರಮೆಂದಕ್ಕುಂ. ಅಲ್ಲಿ ದರ್ಶನಮೆಂಬುದು– ತತ್ವಾರ್ಥಶ್ರದ್ಧಾನಂ, ಅದರ್ಕೆ ಯಥಾಸ್ವರೂಪಗ್ರಹಣಕಾರಣಂ ಸಮ್ಯಕ್ತ್ವದಪ್ರಯೋಗಂ. ಜ್ಞಾನಮೆಂಬುದು–

ಧ್ಯಾನವೆಂಬ ಆರು ಅಭ್ಯಂತರ ತಪಗಳು. ಕರ್ಮನಿರ್ಜರವನ್ನು ಬಯಸುವವರು ಇವುಗಳನ್ನು ತಪ್ಪದೆ ಆಚರಿಸತಕ್ಕುದು. ಅಂತರ ತಪಗಳಲ್ಲೊಂದಾದ ಧ್ಯಾನಮೆಂಬುದು ಆರ್ತ, ರೌದ್ರ, ಧರ್ಮ ಮತ್ತು ಶುಕ್ಲವೆಂದು ನಾಲ್ಕು ಬಗೆಯಾಗಿವೆ. ಅವುಗಳಲ್ಲಿ ಆರ್ತಧ್ಯಾನವು, ಅಮನೋಜ್ಞದ್ರವ್ಯ ವಿಪ್ರಯೋಗಾಕಾಂಕ್ಷ, ಮನೋಜ್ಞದ್ರವ್ಯ ಸುಯೋಗ ಕಾಂಕ್ಷೆ, ದುಃಸಹವೇದನೋಪಸಮಚಿಂತಾ ಪ್ರಬಂಧ, ಹರ್ಷೋನ್ಮತ್ತಾರ್ತಲಾಭಜ ಎಂದು ನಾಲ್ಕು ತೆರನಾಗಿದೆ. ರೌದ್ರಧ್ಯಾನವು ಹಿಂಸಾ, ಅನೃತ, ಸ್ತೇಯ, ವಿಷಯ ಪರಿಪಾಲನ ಪ್ರಬಂಧದಿಂದ ನಾಲ್ಕು ತೆರನಾಗಿದೆ. ಧರ್ಮಧ್ಯಾನವು ಆಜ್ಞಾ, ಅಪಾಯ, ವಿಪಾಕ, ಸಂಸ್ಥಾನ ವಿಚಯವೆಂದು ನಾಲ್ಕು ಬಗೆಯಾಗಿದೆ. ಶುಕ್ಲಧ್ಯಾನವು ಪೃಥಕ್ತ್ವ ವಿತರ್ಕವಿಚಾರಣೈಕತ್ವ, ವಿತರ್ಕ ವಿಚಾರಣ, ಸೂಕ್ಷ್ಮಕ್ರಿಯಾ ಪ್ರತಿಪಾತಿ, ವ್ಯುಪರ ಕ್ರಿಯಾ ನಿವೃತ್ತಿ ಭೇದದಿಂದ ನಾಲ್ಕು ಬಗೆಯಾಗಿದೆ. ಮೊದಲ ಎರಡು ಧ್ಯಾನಗಳು ನಿರ್ಜರಾ ಕಾರಣಗಳಲ್ಲ; ಉಳಿದುವೆರಡು ಸರ್ವಕರ್ಮ ನಿರ್ಜರಾಕಾರಣಗಳು. ಅದಲ್ಲದೆ– ೨೮. ಸರ್ವಕರ್ಮಗಳಿಂದ ವಿಮೋಚನೆ ಹೊಂದಿ ಪರಿಣಾಮಿಯೆನಿಸುವ ಭವ್ಯನಿಗೆ ಮೋಕ್ಷ ದೊರೆಯುವುದು. ಮೋಕ್ಷವೆಂಬುದು ಏಳನೆಯ ತತ್ತ್ವ; ಅದಕ್ಕೆ ರತ್ನತ್ರಯಗಳು ಕಾರಣ. ವ॥ ಹೇಗೆಂದರೆ– ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್ ಚಾರಿತ್ರವೆಂಬುವೆ ಆ ಮೂರು ರತ್ನಗಳು, ದರ್ಶನವೆಂದರೆ–ತತ್ತ್ವಾರ್ಥ

ಜೀವಾದಿಪದಾರ್ಥನಿಶ್ಚಯಾವಬೋಧಂ, ಅದರ್ಕೆ ಸಂಶಯವಿಪರ್ಯಾಸಾದಿನಿವಾರಣಾರ್ಥಂ ಸಮ್ಯಕ್ತ್ವದ ಪ್ರಯೋಗಂ, ಚಾರಿತ್ರಮೆಂಬುದು-ಪಾಪಕ್ರಿಯಾನಿವೃತ್ತಿ, ಅದರ್ಕಜ್ಞಾನಾಚರಣಪರಿಹಾರನಿಮಿತ್ತಂ ಸಮ್ಯಕ್ತ್ವದಪ್ರಯೋಗಂ ಅದಲ್ಲದೆಯುಂ,

ಸಂಸ್ಕೃತಿಗಿವಱ ಸಮಾಯೋ ।
ಗಂ ಸಮನಿಸುಗುಂ ಸಮಂತು ನಿರ್ನಾಶಮನಾ ॥
ದಂ ಸಮನಿಪಂದದಿಂ ವಿ ।
ಧ್ವಂಸನಮಂ ರೋಗಸಮಿತಿಗೌಷಧಯೋಗಂ ॥ ೨೯

ಮತ್ತಂ ರತ್ನತ್ರಯಸಂ ।
ಪತ್ತಿಯೆ ರಾಗದಿಗಳ್ಗೆ ಸಮನಿಸುಗುಂ ವ್ಯಾ ॥
ಪತ್ತಿಯನವು ಕಿಡೆ ಹೇತು ನಿ ।
ವೃತ್ತಿಯಿನಾಸಕಳಕರ್ಮಮಂ ಕಿಡುತರ್ಕುಂ ॥ ೩೦

ಕರ್ಮಕ್ಷಯದೊಳ್ ಚರಮವ ।
ಪುರ್ಮಾತ್ರಾಕೃತಿಯಿನೆಯ್ದಿ ಲೋಕಾಗ್ರಮುಮಂ ॥
ನಿರ್ಮಳಮಪ್ಪಷ್ಟಗುಣ ।
ಕ್ಕಾರ್ಮಂ ತಾನಾಗಿ ಮುಕ್ತನಕ್ಕುಂ ಜೀವಂ ॥ ೩೧

ಅಂತಗ್ನಿಶಿಖಿಯಂತೂರ್ಧ್ವಗತಿಸ್ವಭಾವತೆಯಿಂ ತ್ರಿಭುವನಾಗ್ರಕ್ಕೆ ಸಂದುಗತಿಕಾರಣಮಪ್ಪ ಧರ್ಮಾಸ್ತಿಕಾಯಾಭಾವದಿನಾಲೋಕಕೆ ಸಲವಿಲ್ಲದಿಲ್ಲಿಯೆ ನಿಶ್ಚಳತ್ವಮನವಳಂಬಿಸಿರ್ಕುಂ.

ಶ್ರದ್ಧೆ. ಯಥಾರ್ಥ ಸ್ವರೂಪವನ್ನು ತಿಳಿಯುವುದಕ್ಕೆ ಅದು ಕಾರಣವೆಂದು ಹೇಳಬಹುದು. ಜ್ಞಾನವೆಂದರೆ- ಜೀವಾದಿ ಪದಾರ್ಥಗಳ ನಿಶ್ಚಿತ ತಿಳಿವಳಿಕೆ. ಅದಕ್ಕೆ ಸಂಶಯವಿಪರ್ಯಾಸಾದಿಗಳ ನಿವಾರಣೆಯೆಂದು ಹೇಳಬಹುದು. ಚಾರಿತ್ರವೆಂದರೆ- ಪಾಪಕ್ರಿಯೆ ಮಾಡದಿರುವಿಕೆ. ಅಜ್ಞಾನಚಾರಣ ಪರಿಹಾರ ನಿಮಿತ್ತ ಎಂದು ಅದನ್ನು ಕರೆಯಬಹುದು. ಅದಲ್ಲದೆ-೨೯. ರೋಗಗಳನ್ನೆಲ್ಲ ಔಷಧ ಪ್ರಯೋಗವು ನಾಶಮಾಡುವಂತೆ, ಈ ರತ್ನತ್ರಯಗಳ ಸಂಯೋಗವು ಸಂಸಾರ (ಬಂಧ)ವನ್ನು ನಾಶಗೊಳಿಸುವುದು. ೩೦. ರತ್ನತ್ರಯ ಸಂಪತ್ತಿಯು ರಾಗಾದಿಗಳನ್ನು ಲಯಗೊಳಿಸುವುದು; ಹೀಗೆ ಅವು ಲಯವಾದಾಗ ನಿವೃತ್ತಿಯಿಂದ ಸಮಸ್ತಕರ್ಮಗಳೂ ನಾಶವಾಗುವುವು. ೩೧. ಕರ್ಮಕ್ಷಯವಾದಾಗ ಚರಮದೇಹಧಾರಿಯಾಗಿ, ಅಷ್ಟಗುಣಕ್ಕೆ ಆಶ್ರಯವಾಗಿ ಲೋಕಾಗ್ರಕ್ಕೆ ಹೋಗಿ ಜೀವನು ಮುಕ್ತನಾಗುವನು. ವ॥ ಬೆಂಕಿಯ ನಾಲಗೆಯಂತೆ ಊರ್ಧ್ವಗತಿಯೆ ಸ್ವಭಾವವಾದ ಜೀವವು ಲೋಕತ್ರಯದ ಅಗ್ರಕ್ಕೆ ಏರಿ, ಚತುರ್ಗತಿಕಾರಣವಾದ ಧರ್ಮಾಸ್ತಿಕಾಯಾಭಾವದಿಂದ ಆ ಲೋಕಕ್ಕೆ ಸಲ್ಲ

ಅಮದರ್ೊಸೆದಪ್ಪುದಾನನಸುಧಾಂಶುವಿನಿಂದೆನೆ ದಿವ್ಯಭಾಷೆ ಚೆ ॥
ಲ್ವಮದರ್ೊಗೆತರ್ಪಿನಂ ಸಕಳತತ್ತ್ವಸಮುಚ್ಚಯಮಂ ಸಮಾಸದಿಂ ॥
ದಮೆ ತಿಳಿವಂತು ಪೇಟ್ದನನವದ್ಯಗುಣಾಶ್ರಯಣಂ ಗಣಾಗ್ರಣಿ ।
ಪ್ರಮುಖಸಮಸ್ತಭವ್ಯನಿಕರಕ್ಕೆ ಜಿನಂ ವರಬೋಧಲೋಚನಂ । ೩೨

ಜಿನವಚನರಸಾಯನವಾ ।
ಹಿನಿಯೊಳಗವಗಾಹಮಿರ್ದು ಗಣಮನಿತುಂ ತ ॥
ಣ್ಣನೆ ತಣಿದುದು ಪರಿವರ್ಜಿತ ।
ಘನಮಿಥ್ಯಾತ್ವಾಭಿತಾಪಮಪಗತಲೇಪಂ ॥ ೩೩

ಅನಂತರಂ ಮಿಥ್ಯಾತ್ವತಮಃಪರಿಹಾರಕಾಲಮನವಧಿಬೋಧದಿನಜೆದಮರರಾಜಂ ಮುಕುಳಿತ ಕರಸರೋಜಂ ಜಿನರಾಜಾಭಿಮುಖನಾಗಿ

ಭರತಕ್ಷೇತ್ರದ ಧರ್ಮಭೂಮಿಗಳ ಭವ್ಯರ್ಗಾವಗಂ ಭಾವದೊಳ್ ।
ಪರಿತೋಷಂ ಬಳೆವನ್ನೆಗಂ ಕಜಿಯುತುಂ ಧರ್ಮಾಮೃತಾಸಾರಮಂ ॥
ಪಿರಿದುಂ ನಿರ್ಮಳಧರ್ಮತೀರ್ಥರೆಸಕಂ ಲೋಕಕ್ಕೆ ಕಣ್ಬಚ್ಚಮ ।
ಚ್ಚರಿಯಪ್ಪಂತು ವಿಹಾರಿಸಲ್ಕಿದೆ ಪದಂ ತ್ರೈಲೋಕ್ಯರಕ್ಷಾಮಣೀ ॥ ೩೪

ಎಂದು ಬಿನ್ನಪಂಗೆಯ್ವುದುಂ ತದನಂತರಂ.

ವಾದುದರಿಂದ ಇಲ್ಲಿಂದೆ ನಿಶ್ಚಲತೆಯನ್ನು ಅವಲಂಬಿಸುವುದು." ೩೨. ಮುಖಚಂದ್ರನಿಂದ ಅಮೃತವು ಸುರಿಯುವುದೆಂಬಂತೆ ದಿವ್ಯಭಾಷೆ ಚೆಲುವಾಗಿ ಹೊಮ್ಮುತ್ತಿರಲಾಗಿ ಸರ್ವತತ್ತ್ವಸಮುದಾಯವನ್ನು ಸಂಗ್ರಹವಾಗಿ ಆದರೆ ಗಣಧರರೆ ಮೊದಲಾದ ಸಮಸ್ತ ಭವ್ಯರಿಗೆಲ್ಲ ತಿಳಿಯುವಂತೆ ಪರಮ ಜ್ಞಾನಿಯಾದ ಜಿನೇಂದ್ರನು ವಿವರಿಸಿದನು. ೩೩. ಜಿನವಚನವೆಂಬ ರಸಾಯನ ಪ್ರವಾಹದಲ್ಲಿ ಮುಳುಗಿ ಎದ್ದ ಎಲ್ಲ ಗಣಗಳವರೂ ಮಿಥ್ಯಾತ್ವದ ಅಭಿತಾಪವನ್ನು ಸಂಪೂರ್ಣವಾಗಿ ಕಳೆದುಕೊಂಡು ತಣ್ಣನೆ ತಣಿದರು, ವ॥ ಬಳಿಕ ಮಿಥ್ಯಾತ್ವವೆಂಬ ಕತ್ತಲೆಯ ಪರಿಹಾರಕಾಲವನ್ನು ಅವಧಿಜ್ಞಾನದಿಂದ ತಿಳಿದ ದೇವೇಂದ್ರನು ಕೈಮುಗಿದು ಜಿನೇಂದ್ರನಿಗೆ ಅಭಿಮುಖನಾಗಿ–೩೪. ತ್ರೈಲೋಕ್ಯ ರಕ್ಷಕನೆ, ಭರತಕ್ಷೇತ್ರದ ಧರ್ಮಭೂಮಿಗಳ ಭವ್ಯರಿಗೆ ಯಾವಾಗಲೂ ಭಾವದಲ್ಲಿ ಸಂತೋಷ ಅಭಿವೃದ್ಧಿಗೊಳ್ಳುವಂತೆ, ಧರ್ಮಾಮೃತದ ಮಳೆಯನ್ನು ಕರೆಯುತ್ತ ನಿರ್ಮಲರಾದ ಧರ್ಮತೀರ್ಥರ ಕಾರ್ಯವು ಲೋಕಕ್ಕೆ ನೇತ್ರ ಭೂಷಣವಾಗುವಂತೆ ವಿಹಾರ ಮಾಡಲು ಇದೇ ಸರಿಯಾದ ಸಮಯವಾಗಿದೆ ಎಂದು ಬಿನ್ನಯಿಸಿದನು.

ತ್ರಿದಶಜ್ಯೋತಿಷ್ಕಮುಖ್ಯಾಮರಗಣಯುಗಪತ್ತಾಡಿತಸ್ಫಾರಭೇರೀ ।
ಗದಿತಪ್ರಕ್ಷೋಭದಿಂ ಮಾರ್ದನಿವಿಡೆ ದೆಸೆಗಳ್ ಪ್ರೋಚ್ಚಳತ್ಕೇತನವ್ರಾ ॥
ತದ ತಳ್ತೊತ್ತೊತ್ತೆಯಂ ಪೆತ್ತೆಡೆಗಿಡೆ ಗಗನಂ ಧರ್ಮಚಕ್ರಾಧಿಪತ್ಯ ।
ಕ್ಕಿದೆ ದಲ್ದಿಗ್ಜೈತ್ರಯಾತ್ರೋತ್ಸವಮೆನೆ ತಳರ್ದಂ ಖ್ಯಾತತೀರ್ಥಾಧಿನಾಥಂ॥ ೩೫

ಅಂತಶೇಷಭವ್ಯ ಮಂಡಳಿಯ ಪುಣ್ಯಪ್ರೇರಣದಿನಾಖಂಡಳಂ ಸಮವಸರಣ ಮಂಡಳಮಂ ಗಗನ ಮಂಡಲದೊಳಂ ನಡೆಯಿಪಲ್ಲಿ.

ಚರಣನ್ಯಾಸೋಚಿತಮೇ ।
ದುರಕಾಂಚನಕಮಳಸಪ್ತಕಂ ಕರಮೆಸೆಗುಂ ॥
ತರದಿಂ ಹರಿಪೀಠಾಗ್ರದ ।
ಪರಭಾಗದೊಳಂ ಸ್ಥಳಾಬ್ಜವನಮಾಳೆಯವೊಲ್ ॥ ೩೬

ನ್ಯಾಯಾನ್ವಿತತತ್ವಾಭಿ ।
ಪ್ರಾಯಂ ಪಸರಿಪುದು ಭಾಷೆ ಸಾಧುಜನಶ್ರ ॥
ದ್ಧೇಯಂ ಪರಪ್ರಮಾಣಾ ।
ಜೇಯಂ ಸರ್ವಾರ್ಥಮಾಗಮೀಯಂ ಶ್ರೇಯಂ ॥ ೩೭

ಸಕಳಜನಗೋಚರಂ ಕೌ ।
ತುಕಕರಮೆನಿಸಿದ ಜನಾನುರಾಗಂ ತತ್ತೀ ॥
ರ್ಥಕರಪರಮೇಶ್ವರಾಸ್ಥಾ ।
ಯಿಕೆ ವಿಹರಿಸುತಲ್ಲಿ ಕೂಡೆ ಪರಿವರ್ತಿಸುಗುಂ ॥ ೩೮

ಆ ಬಳಿಕ–೩೫. ತ್ರಿದಶ ಜ್ಯೋತಿಷ್ಕ ಮುಖ್ಯ ದೇವತೆಗಳು ಒಮ್ಮೆಲೆ ಹೊಡೆದ ಭೇರಿಗಳ ನಿನಾದ ಕ್ಷೋಭೆಯಿಂದ ದಿಕ್ಕುಗಳೆಲ್ಲ ಪ್ರತಿಧ್ವನಿಸಲಾಗಿ, ಚಂಚಲವಾದ ಹಾಗು ಉನ್ನತವಾದ ಧ್ವಜಸಮೂಹದ ದಟ್ಟಣೆಗೆ ಆಕಾಶಮಂಡಲವು ಹಿಡಿಸದಂತಾಗಲಾಗಿ ಧರ್ಮಚಕ್ರಾಧಿಪತ್ಯದ ದಿಗ್ವಿಜಯ ಯಾತ್ರೋತ್ಸವವಿದು ಎಂಬಂತೆ ತೀರ್ಥನಾಥನು ಹೊರಟನು. ವ॥ ಹಾಗೆ ಸಮಸ್ತ ಭವ್ಯಸಮೂಹದ ಪುಣ್ಯಪ್ರೇರಣೆಯಿಂದ ಇಂದ್ರನು ಸಮವಸರಣ ಮಂಡಲವನ್ನು ಆಕಾಶಮಂಡಲದಲ್ಲಿ ನಡೆಯಿಸಿದನು. ಆಗ–೩೬. ಜಿನೇಂದ್ರನು ಪಾದವಿಡುವುದಕ್ಕೆ ಯೋಗ್ಯವಾದ ನಯುನುಣುಪಿನ ಹೊಂದಾವರೆಗಳೇಳೇಳು ಸಿಂಹಾಸನದ ಮುಂಭಾಗದಲ್ಲಿಯೂ, ಹಿಂಭಾಗದಲ್ಲಿಯೂ ಸ್ಥಳಕಮಲಗಳ ಸಾಲಿನಂತೆ ಕಂಗೊಳಿಸಿದುವು. ೩೭. ನ್ಯಾಯಯುಕ್ತವಾದ ತತ್ವಾಭಿಪ್ರಾಯ ಸಹಿತವೂ, ಸಾಧುಜನ ಶ್ರದ್ಧೆಗೆ ಯೋಗ್ಯವೂ, ಪ್ರಮಾಣ ಸಿದ್ಧವೂ, ಸರ್ವಾರ್ಥವೂ, ಆಗಮೀಯವೂ ಆದ ಭಾಷೆ ಪಸರಿಸುವುದು. ೩೮. ತೀರ್ಥಕರ ಪರಮೇಶ್ವರನ ಆಸ್ಥಾನಮಂಡಪವು ಸರ್ವಜನ ಗೋಚರವಾಗಿ, ಆಶ್ಚರ್ಯಕರವಾಗಿ ಜನಾನುರಾಗವನ್ನು ಪಡೆಯುತ್ತ

ಆಡೆ ಪತಾಕಾತತಿ ತೂ ।
ಗಾಡೆ ಕನದ್ರತ್ನತೋರಣಾವಳಿ ಮುದದೊಳ್ ॥
ಕೂಡೆ ಸಭಾಜನಮೊಯ್ಯನೆ ।
ತೀಡಿದುದನುಕೂಳಸುರಭಿಸಾರಸಮೀರಂ ॥ ೩೯

ಧರೆಯಂ ವಿಗತತೃಣಪ್ರ ।
ಸ್ತರಕಂಟಕಧೂಳಿಕೀಟಶರ್ಕರಮಪ್ಪಂ ॥
ತಿರೆ ಯೋಜನಪರಿಮಿತಮಂ ।
ಮರುತ್ಕುಮಾರರ್ ಸಮಂತು ಸಂಮಾರ್ಜಿಸುವರ್ ॥ ೪೦

ಕುಳಿಶಧರನಾಜ್ಞೆಯಿಂದಂ ।
ತಳಿವರ್ ಬಟಿವಟಿಯೊಳಾವಗಂ ತನ್ಮಹಿಮಂ ॥
ಡಳಮಂ ಸ್ತನಿತಕುಮಾರರ್ ।
ಮಳಯಜಕಾಶ್ಮೀರಗಂಧಬಂಧುರಜಳದಿಂ ॥ ೪೧

ಸಕಳರ್ತುಸಮಾಗಮಸೂ ।
ಚಕಪಲ್ಲವಪುಷ್ಪಫಳಸಮುಲ್ಲಸಿತತರು ॥
ಪ್ರಕರಚಿತಂ ಮುಕುರತಳಾ ।
ನುಕಾರಿ ಭೂವಳಯಮೊಪ್ಪುಗುಂ ರತ್ನಮಯಂ ॥ ೪೨

ತ್ರೈಲೋಕ್ಯನಾಥವಿಭವಸ ।
ಮಾಲೋಕನಜಾತಹರ್ಷಪುಳಕವಿಳಾಸ ॥
ವ್ಯಾಳಂಬಮಾಯ್ತು ಪುಳನತ ।
ಶಾಳಿವ್ರೀಹ್ಯಾದಿಸಕಳಸಸ್ಯಸಮೂಹಂ ॥ ೪೩

ವಿಹಾರಿಸುವುದು. ೩೯. ಧ್ವಜಪಟಗಳನ್ನು ಆಡಿಸುತ್ತ, ಥಳಥಳಿಸುವ ರತ್ನ ತೋರಣಗಳನ್ನು ತೂಗಾಡಿಸುತ್ತ. ಸಭಾಜನಕ್ಕೆ ಸಂತೋಷವನ್ನೊದಗಿಸುತ್ತ ಅನುಕೂಲವಾದ ಗಾಳಿ ಸುಗಂಧಮಯವಾಗಿ ಮೆಲ್ಲಮೆಲ್ಲಗೆ ತೀಡಿತು. ೪೦. ಹುಲ್ಲುಕಡ್ಡಿ, ಮುಳ್ಳು, ಧೂಳಿ, ಕೀಟಗಳು ಹಾದಿಯಲ್ಲಿ ಬಾರದಂತೆ ಮುಂದೆ ಒಂದು ಯೋಜನದವರೆಗಿನ ಪ್ರದೇಶವನ್ನು ಮರುತ್ಕುಮಾರರು ಚೆನ್ನಾಗಿ ಉಡುಗುವರು. ೪೧. ಅವರ ಹಿಂದು ಹಿಂದೆಯೆ ಇಂದ್ರನ ಆಜ್ಞೆಯಿಂದ ಮೇಘಕುಮಾರರು ಆ ಭೂಮಿಗೆ ಕಸ್ತೂರಿಕಾಶ್ಮೀರಗಳ ಸುಗಂಧದಿಂದ ಸೊಗಸುಗೊಂಡ ನೀರನ್ನು ತಳಿಯುತ್ತ ಬರುವರು. ೪೨. ಸರ್ವಋತುಗಳ ಸಮಾಗಮ ಸೂಚಕವಾಗಿ ಮರಗಳೆಲ್ಲೆಲ್ಲ ತಳಿರು–ಹೂ–ಹಣ್ಣುಗಳನ್ನು ಏಕಕಾಲಕ್ಕೆ ಧರಿಸಿದ ಮರಗಳಿಂದ ತುಂಬಿದ ಭೂಮಂಡಲವು ರತ್ನಮಯವಾದ ಕನ್ನಡಿಯಂತೆ ಕಂಗೊಳಿಸುವುದು. ೪೩. ತ್ರಿಲೋಕನಾಥನ ವೈಭವಪೂರ್ಣವಾದ ದರ್ಶನಸುಖದಿಂದ ರೋಮಾಂಚಗೊಂಡಂತೆ ಶಾಲಿ, ವ್ರೀಹಿ ಮೊದಲಾದ ಸಮಸ್ತ ಸಸ್ಯ ಸಮೂಹವು ಚಿಗುರೇಳುವುದು.

ನರತಿರ್ಯಗ್ಗ್ರೀವಾದಳಿ।
ಪರಸ್ಪರಕ್ರೋಧಬುದ್ಧಿಯಂ ಬಿಟ್ಟು ನಿರಂ ॥
ತರಮೈತ್ರೀಭಾವಮನಂ।
ತರಂಗದೊಳ್ ತಾಳ್ದಿ ತೂಳ್ದಿದುದು ಕುಟಿಲತೆಯಂ ॥ ೪೪

ಅಪಗತಘನಪಟಳೋದಯ।
ಮಪಕ್ಷಿಸಂಚಾರಮಸ್ತಲಹರೀಸಂದೋ ॥
ಹಪಯೋಧಿವಿಮಳಮಾಕಾ।
ಶಪಥಂ ಚೆಲ್ವಾಯ್ತು ಧೌತಖಡ್ಗಶ್ಯಾಮಂ ॥ ೪೫

ಪಸರಿಪ ತಮದಿಂ ರಜದಿಂ।
ಮಸುಳ್ಕೆವೆತ್ತಿರದೆ ದೆಸೆಗಳುಂ ದಿಗ್ದೇವೀ ॥
ವಿಸರದ ಮೊಗದೊಡನೆನಸುಂ।
ಪ್ರಸನ್ನಭಾವಮನದೇಂ ಪುದುಂಗೊಳಿಸಿದುದೋ ॥ ೪೬

ದಿವಿಜಜ್ಯೋತಿರ್ವ್ಯಂತರ।
ಭವನಾಮರರಿಂದ್ರನಾಜ್ಞೆಯಿಂದತ್ತಿತ್ತಿ ॥
ರ್ದವರುಮನಭವವಿಹಾರೋ।
ತ್ಸವಕ್ಕೆ ನೆಱೆ ಕರೆವ ಸಂಭ್ರಮಂ ಕರಮೆಸೆಗುಂ ॥ ೪೭

ಪರಮಸಭಾಮಂಡಳಸಂ।
ಚರಣಕ್ಕಿನಮಂಡಳಂ ಪುರಶ್ಚರಮಾದಂ ॥
ತಿರೆ ಧರ್ಮಚಕ್ರಮೆಸೆದ।
ತ್ತರದಶಶತಕಿರಣಭರಿತರೋದಶ್ಚಕ್ರಂ ॥ ೪೮

೪೪. ಮನುಷ್ಯರೂ, ತಿರ್ಯಕ್ ಪ್ರಾಣಿಗಳೂ ಪರಸ್ಪರ ವೈರಭಾವವನ್ನು ತೊರೆದು, ಅಂತರಂಗದಲ್ಲಿ ನಿರಂತರ ಸ್ನೇಹಭಾವವನ್ನು ತಾಳಿ ಕುಟಿಲತೆಯನ್ನು ನಾಶಗೊಳಿಸಿದುವು. ೪೫. ಮೋಡಗಳ ಸಂಪರ್ಕವೆ ಇಲ್ಲದೆ, ಪಕ್ಷಿಗಳ ಸಂಚಾರವೂ ಇಲ್ಲದೆ, ತೆರೆಗಳಿಲ್ಲದ ಸಾಗರದಂತೆ ನಿರ್ಮಲವಾಗಿಯೂ, ತೊಳೆದ ಖಡ್ಗದಂತೆ ಹೊಳಪಾಗಿಯೂ ಆಕಾಶಮಾರ್ಗವು ಚೆಲುವಾಯಿತು. ೪೬. ಹಬ್ಬುವ ಕತ್ತಲೆಯಿಂದಲೂ ಧೂಳಿನಿಂದಲೂ ಎಷ್ಟೆಷ್ಟೂ ಮಸುಳಿಸದೆ ದಿಕ್ಕುಗಳೆಲ್ಲ ದಿಗ್ದೇವಿಯರ ಮುಖಗಳೊಡನೆ ಅದೆಷ್ಟು ಪ್ರಸನ್ನವಾದುವು! ೪೭. ದಿವಿಜರು, ಜ್ಯೋತಿಷ್ಕರು, ವ್ಯಂತರರು, ಭವನಾಮರರು ಇಂದ್ರನ ಆಜ್ಞೆಯಿಂದ ಅತ್ತಿತ್ತ ಇದ್ದವರನ್ನೆಲ್ಲ ಜಿನೇಂದ್ರನ ವಿಹಾರೋತ್ಸವಕ್ಕೆ ಕರೆಯುವ ಸಂಭ್ರಮ ತುಂಬ ಶೋಭಿಸಿತು. ೪೮. ಪರಮೇಶ್ವರನ ಸಭಾಮಂಡಳ ಸಂಚಾರಕ್ಕೆ ಸೂರ್ಯಮಂಡಲವೆ

ವಿಮಳಮಣಿದರ್ಪಣಾದ್ಯ।
ಷ್ಟಮಂಗಳೋತ್ಕರಮನಾಂತು ಬರೆ ಮುಂದಮರ ॥
ಪ್ರಮದೆಯರಂಬರದೊಳ್ ನಾ।
ಡೆ ಮನೋಹರಮಾಯ್ತು ಸಮವಸರಣವಿಹಾರಂ ॥ ೪೯

ಅಂತು ದೇವಕಲ್ಪಿತಚತುರ್ದಶಾತಿಶಯಮುಂ ಪ್ರಾಕ್ಪ್ರಣೀತಸಹೋತ್ಪನ್ನದಶಾತಿಶಯಮುಂ ಘಾತಿಕ್ಷಯಾನಂತರಜನಿತದಶಾತಿಶಯಮುಮೆಂಬ ಚತುಸ್ತ್ರಿಂಶದತಿಶಯಮುಮಷ್ಟಮಹಾಪ್ರಾತಿಹಾರ್ಯ ಮುಮನಂತಚತುಷ್ಟಯಮುಂ ತ್ರಿವಿಷ್ಟಪಾಧಿಪತ್ಯಮಂ ಸ್ಪಷ್ಟಂಮಾಡೆ ಸೌರಾಷ್ಟ್ರ ಮಹಾರಾಷ್ಟ್ರ ಕುಂತಳಾ ವಂತಿವಿದರ್ಭಪಾಂಚಾಳಕುರುಜಾಂಗಣಾದಿವಿಷಯದೊಳಂ ಧರ್ಮತೀರ್ಥಪ್ರಭಾವನೆಯುಂ ಸಂಭಾವಿಸುತುಂ ಬರ್ಪಲ್ಲಿ

ಇಳಿಗೆ ಸುಧರ್ಮಮೆಂಬಮೃತವರ್ಷಮನಾಗಿಪಪೂರ್ವಮೇಘಮಂ।
ಡಳಮೊ ಕುತೀರ್ಥಮೆಂಬ ತಮಮಂ ಸಲೆ ತೂಳ್ದುವ ನೂತ್ನಭಾನುಮಂ ॥
ಡಳಮೊ ದಿಟಕ್ಕೆ ತಾನೆನಿಸಿ ಚಂದ್ರಜಿನೇಂದ್ರಸಭಾಸಮಗ್ರಮಂ।
ಡಳಮೆಸೆದಿರ್ದುದಬ್ದಪಥಮಂಡಳಲಕ್ಷ್ಮಿಯನರ್ಘ್ಯಮಂಡನಂ ॥ ೫೦

ಪಿರಿದುಂ ಚೆಲ್ವಾಯ್ತು ಭೇರೀನಿವಹಪಟುರವವ್ಯಾಪ್ತದಿಕ್ಚಕ್ರಪಾರಂ।
ಸುರಪುಷ್ಪಾಸಾರಸಾರಂ ಭುವನವಿನುತಧರ್ಮಾವತಾರಂ ಪುರಸ್ಸಂ ॥

ಮುಂದಾಳಾಗಿ ಹೊರಟಿತೊ ಏನೊ ಎಂಬಂತೆ ತನ್ನ ಅರಗಳ ಸೂರ್ಯಪ್ರಕಾಶದಿಂದ ಆಕಾಶಮಂಡಲವನ್ನೆಲ್ಲ ತುಂಬುತ್ತ ಧರ್ಮಚಕ್ರವು ಶೋಭಿಸಿತು. ೪೯. ನಿರ್ಮಲವಾದ ರತ್ನದರ್ಪಣವೆ ಮೊದಲಾದ ಅಷ್ಟಮಂಗಳಗಳನ್ನು ಹಿಡಿದುಕೊಂಡು ದೇವಾಂಗನೆಯರು ಮುಂದೆ ಬರುತ್ತಿರಲಾಗಿ ಆಕಾಶದಲ್ಲಿ ಸಮವಸರಣ ವಿಹಾರವು ಮನೋಹರವಾಯಿತು. ವ॥ ದೇವಕಲ್ಪಿತವಾದ ಹದಿನಾಲ್ಕು ಅತಿಶಯಗಳೂ, ಜಿನೇಂದ್ರನ ಜನ್ಮದೊಡನೆ ಹುಟ್ಟಿದ ಹತ್ತು ಅತಿಶಯಗಳೂ ಘಾತಿ ನಾಶಾನಂತರ ಹುಟ್ಟಿದ ಹತ್ತು ಅತಿಶಯಗಳು–ಹೀಗೆ ಒಟ್ಟು ಮೂವತ್ತುನಾಲ್ಕು ಅತಿಶಯಗಳೂ, ಅಷ್ಟಮಹಾಪ್ರಾತಿಹಾರ್ಯಗಳೂ, ಅನಂತ ಚತುಷ್ಟಯವೂ, ಸ್ವರ್ಗಾಧಿಪತ್ಯವನ್ನು ಸ್ಪಷ್ಟಮಾಡಲಾಗಿ, ಸೌರಾಷ್ಟ್ರ, ಮಹಾರಾಷ್ಟ್ರ, ಕುಂತಳ, ಅವಂತಿ, ವಿದರ್ಭ, ಪಾಂಚಾಲ, ಕುರುಜಾಂಗಣ ಮೊದಲಾದ ರಾಜ್ಯಗಳಲ್ಲಿ ಧರ್ಮತೀರ್ಥ ಪ್ರಭಾವನೆಯನ್ನು ಒದಗಿಸುತ್ತ ಬರುವಾಗ–೫೦. ಆಕಾಶಮಂಡಲ ಲಕ್ಷ್ಮಿಯ ಅಮೌಲ್ಯ ಭೂಷಣವಾದ ಜಿನೇಂದ್ರ ಸಭಾಸ್ಥಾನವು, ಭೂಮಿಗೆ ಸುಧರ್ಮವೆಂಬ ಅಮೃತದ ಮಳೆಗರೆಯುವ ಅಪೂರ್ವ ಮೇಘಮಂಡಲವೊ, ಕುತೀರ್ಥವೆಂಬ ಅಂಧಕಾರವನ್ನು ಇಕ್ಕಿ ಮೆಟ್ಟುವ ನೂತನ ಸೂರ್ಯಮಂಡಲವೊ ಎಂದೆನಿಸಿ ವಿಜೃಂಭಿಸಿತು. ೫೧. ತನ್ನ ಭೇರಿಗಳ ಗಂಭೀರ ಧ್ವನಿಯಿಂದ ದಿಗ್ವಲಯವನ್ನೆಲ್ಲ ವ್ಯಾಪಿಸುತ್ತ, ದೇವಪುಷ್ಪಗಳ ಮಕರಂದದ ಮಳೆಯನ್ನು ಸುರಿಸುತ್ತ, ಲೋಕಪೂಜ್ಯವಾದ ಧರ್ಮಾವತಾರ

ಚರಚಂಚದ್ಧರ್ಮಚಕ್ರಪ್ರಚುರಕಿರಣಭಾರಂ ಸಮಸ್ತಾತಿದೂರಂ ।
ಪುರುಹೂತಾನಂದಕಾರಂ ಜಿನಪತಿಪರಿಷನ್ಮಂಡಳಶ್ರೀವಿಹಾರಂ ॥ ೫೧

ಮತ್ತಂ ದ್ಯಾವಾಪೃಥಿವಿಯೆಲ್ಲಂ ಜಯಜಯನಿನಾದಮಯಮುಂ, ಅಗುರುಧೂಪಾಮೋದ ಮಯಮುಂ, ದಯಾರಸಪ್ರವಾಹಮಯಮುಂ, ಅನೇಕ ಮಂಗಳಸಮೂಹಮಯಮುಂ, ವೃಂದಾರಕ ಬೃಂದಮಯಮುಂ, ಅನೂನಾನಂದಮಯಮುಂ, ಪುಣ್ಯಕಾರ್ಯಮಯಮುಂ, ಆಶ್ಚರ್ಯಮಯ ಮುಮಾಗಿ ವಿಹಾರಿಸುತ್ತುಂ ಬಂದು ಛದ್ಮಸ್ಥಕಾಲಂ ಮೂಱುತಿಂಗಳ್ ಪೊಱಗಾಗೆ ತೊಂಬತ್ತೊಂಬತ್ತು ಸಾಸಿರದೊಂಬೈನೂಱ ತೊಂಬತ್ತೊಂಬತ್ತು ಪೂರ್ವಮುಮೆಣ್ಬತ್ತುಮೂಱು ಲಕ್ಕೆಯುಂ ತೊಂಬ ತ್ತೊಂಬತ್ತು ಸಾಸಿರದೊಂಬೈನೂಱಿಪ್ಪತ್ತೈದು ಪೂರ್ವಾಂಗಮುಮೆಣ್ಬತ್ತುಮೂಲಕ್ಕೆಯುಂ ತೊಂಬತ್ತೊಂಬತ್ತು ಸಾಸಿರದೊಂಬೈನೂಱ ತೊಂಬತ್ತೊಂಬತ್ತು ಬರಿಸಮುಮೊಂಬತ್ತು ತಿಂಗಳು ಮಪ್ಪ ಕೇವಳಿಕಾಲಂ ಮಾಸಾವಶೇಷಮಾದುದೆಂಬಂದಿಂಗೆ

ಎಸೆವಂತರೀಪಮಂ ಗಗ ।
ನಸಮುದ್ರದ ನಾವೆ ಸಾರ್ದುದೆನೆ ತಜ್ಜಿನರಾ ॥
ಜಸಭಾವಳಯಂ ಸಾರ್ದ ।
ತ್ತಸಮಂ ಸಮ್ಮೇದಮೇದಿನೀಧರಶಿರಮಂ ॥ ೫೨

ಆಗಳರ್ಹತ್ಪ್ರಭಾವದಿಂದಂ

ಆಡುತ್ತಿರ್ದುದು ಸೋಗೆವಿಂಡು ತರುಷಂಡಂ ತೋರವಣ್ ಪೇಱಿ ತೂ ।
ಗಾಡುತ್ತಿರ್ದುದುಕ್ಕೈರವಾಬ್ಜನಿಳಯಂ ಸ್ವಚ್ಛಾಂಬುವಿಂ ತುಂಬಿ ತು ॥

ವಾಗಿ, ಮುನ್ನಡೆಯುತ್ತಿರುವ ಧರ್ಮಚಕ್ರದ ಪ್ರಭೆಯುನ್ನು ಹೊಮ್ಮಿಸುತ್ತ, ಇಂದ್ರನಿಗೆ ಆನಂದಕರವಾಗಿ ಜಿನೇಂದ್ರ ಪರಿಷನ್ಮಂಡಳದ ವಿಹಾರವು ತುಂಬ ಚೆಲುವಾಯಿತು. ವ॥ ಆಕಾಶ ಭೂಮಿಗಳೆರಡೂ ಜಯಜಯ ಧ್ವನಿಮಯವೂ, ಅಗುರುಧೂಪ ಪರಿಮಳಮಯವೂ, ದಯಾರಸ ಪ್ರವಾಹಮಯವೂ, ಅನೇಕ ಮಂಗಳ ಸಮೂಹಮಯವೂ, ದೇವಸಮುದಾಯಮಯವೂ, ಅಖಂಡ ಆನಂದಮಯವೂ, ಪುಣ್ಯಕಾರ್ಯಮಯವೂ, ಆಶ್ಚರ್ಯಮಯವೂ ಆಗಲಾಗಿ ವಿಹಾರಿಸುತ್ತ ಬಂದು ಛದ್ಮಸ್ಥಕಾಲ ಮೂರು ತಿಂಗಳು ಹೊರತು ತೊಂಬತ್ತೊಂಬತ್ತು ಸಾವಿರದ ಒಂಬೈನೂರ ತೊಂಬತ್ತೊಂಬತ್ತು ಪೂರ್ವವೂ ಎಂಬತ್ತು ಮೂರು ಲಕ್ಷ ತೊಂಬತ್ತೊಂಬತ್ತು ಸಾವಿರದ ಒಂಬೈನೂರ ಇಪ್ಪತ್ತೈದು ಪೂರ್ವಾಂಗವೂ ಎಂಬತ್ತುಮೂರು ಲಕ್ಷ ತೊಂಬತ್ತೊಂಬತ್ತು ಸಾವಿರದ ಒಂಬೈನೂರ ತೊಂಬತ್ತೊಂಬತ್ತು ವರ್ಷ ಒಂಬತ್ತು ತಿಂಗಳು ಅವಧಿಯ ಕೇವಳಿಕಾಲವು ಇನ್ನು ಒಂದು ತಿಂಗಳಷ್ಟು ಮಾತ್ರ ಉಳಿದಿದೆ ಎಂದಾದಾಗ–೫೨. ಆಕಾಶಸಮುದ್ರದ ನಾವೆ ಶೋಭಿಸುವ ನಡುಗಡ್ಡೆಗೆ ಬಂದು ಮುಟ್ಟಿತೆಂಬಂತೆ ಆ ಜಿನೇಂದ್ರಸಭಾ ವಲಯವು ಅಸಮಾನವಾದ ಸಮ್ಮೇದ ಗಿರಿ ಶಿಖರಕ್ಕೆ ಮುಟ್ಟಿತು. ಆಗ ಅರ್ಹಂತನ ಪ್ರಭಾವದಿಂದ–೫೩. ಸಮ್ಮೇದ ಪರ್ವತದಲ್ಲಿ ನವಿಲುಗಳ ಹಿಂಡು ಕುಣಿಯುತ್ತಿತ್ತು; ತೋರವಾದ ಹಣ್ಣುಗಳ ಭಾರ

ಳ್ಕಾಡುತ್ತಿರ್ದುದು ಪೂತ ವಲ್ಲಿಗಳೊಳೆಲ್ಲಂ ಕೂಡೆ ಭೃಂಗಾಳಿ ಮು ।
ದ್ದಾಡುತ್ತಿರ್ದುದು ವಿಸ್ಮಯಂ ನೆಗಳ್ವಿನಂ ಸಮ್ಮೇದಶೈಳೇಂದ್ರದೊಳ್ ॥ ೫೩

ಮತ್ತಂ

ಭೂಮಿಯೊಳದ್ರಿಗಳ್ ಪಲವುಮಿರ್ದೊಡವಂ ಪೆಱಗಿಕ್ಕಿ ಭವ್ಯರ ।
ಕ್ಷಾಮಣಿ ಘಾತಿಜಾತತಿಮಿರೌಘನಭೋಮಣಿ ಸಾಧುಸಂಘಚಿಂ ॥
ತಾಮಣಿಯಿಂದು ಬಂದೆನಗೆ ಚಂದ್ರ ಜಿನೇಶ್ವರನಾದನಲ್ತೆ ಚೂ ।
ಡಾಮಣಿಯೆಂದಗಂ ಮುದಮನಾಳ್ದವೊಲಾಂತುದಪೂರ್ವಶೋಭೆಯಂ ॥ ೫೪

ಅಂತುಮದಲ್ಲದೆಯುಂ

ತ್ರಿದಶೇಂದ್ರಾದ್ರಿಯೊಳಾದುದೀವಿಭುಗೆ ಮುಂ ದ್ವೈತೀಯಕಲ್ಯಾಣಮಂ ।
ತೆ ದಲಾದಪ್ಪುದದೆನ್ನೊಳಂ ಕುಳಿಶಿಯಿಂ ನಿರ್ವಾಣಕಲ್ಯಾಣಮಿಂ ॥
ಸದೃಶಂ ಪೂತತೆಯಿಂದಮಾಗಿರಿಯೊಳಾನೆನ್ನೊಳ್ ತದುರ್ವೀಧ್ರಮಾ ।
ವುದು ಮತ್ತೆಂದುಲಿವಂತುಟಾಯ್ತು ಗಿರಿ ತನ್ಮಾಯೂರಕೋಲಾಹಳಂ ॥ ೫೫

ನಾನಾಜೈನಗೃಹಾಧಿ ।
ಸ್ಥಾನಂ ವಿಂಶತಿಜಿನೇಶಪರಿನಿರ್ವಾಣ ॥
ಸ್ಥಾನಂ ವಿಚಿತ್ರಕೂಟವಿ ।
ತಾನಂ ಸಮ್ಮೇದಮಸಮಶೋಭಾಧಾನಂ ॥ ೫೬

ದಿಂದ ಮರಗಳು ತೂಗಾಡುತ್ತಿದ್ದುವು; ಕನ್ನೈದಿಲೆ ತಾವರೆಗಳ ನೆಲೆಯಾದ ಸರೋವರವು ತಿಳಿನೀರಿನಿಂದ ತುಂಬಿ ತುಳುಕಾಡುತ್ತಿತ್ತು; ಹೂತುಂಬಿದ ಬಳ್ಳಿಗಳಲ್ಲೆಲ್ಲ ದುಂಬಿವಿಂಡು ಮುದ್ದಾಡುತ್ತಿತ್ತು. ಮತ್ತು–೫೪. "ಭೂಮಿಯಲ್ಲಿ ಪರ್ವತಗಳು ಇನ್ನೆಷ್ಟೋ ಇದ್ದರೂ, ಅವೆಲ್ಲವನ್ನು ಬಿಟ್ಟು ಭಕ್ತರಕ್ಷಾಮಣಿಯೂ ಘಾತಿತಿಮಿರಕ್ಕೆ ಸೂರ್ಯನೂ, ಸಾಧುಗಳಿಗೆ ಚಿಂತಾಮಣಿಯೂ, ಆದ ಚಂದ್ರಪ್ರಭ ಜಿನೇಂದ್ರನು ನನಗೆ ಚೂಡಾಮಣಿಯಾಗಿ ಬಂದನಲ್ಲವೆ"? ಎಂದು ಸಂತೋಷದಿಂದ ಹಿಗ್ಗಿದಂತೆ ಸಮ್ಮೇದಗಿರಿಯು ಅಪೂರ್ವಶೋಭೆಯನ್ನು ತಾಳಿತ್ತು. ಅದಲ್ಲದೆ–೫೫. "ಈ ಪ್ರಭುವಿನ ದ್ವಿತೀಯ ಕಲ್ಯಾಣೋತ್ಸವವು ಮೇರುಗಿರಿಯಲ್ಲಾಯಿತು. ಇಂದ್ರನಿಂದ ಇನ್ನು ನಿರ್ವಾಣಕಲ್ಯಾಣವು ನನ್ನಲ್ಲಿ ಆಗಲಿರುವುದು, ಆದುದರಿಂದ ಪಾವಿತ್ರ್ಯ ದೃಷ್ಟಿಯಿಂದ ಈಗ ನಾನು ಆ ಗಿರಿಗೆ ಸಮಾನನಾದೆನು. ಇಂತಹ ಭಾಗ್ಯವನ್ನು ಪಡೆಯುವ ಪರ್ವತ ಇನ್ನಾವುದು?" ಎಂದು ಹೆಮ್ಮೆಯಿಂದ ಬೆಟ್ಟವು ನುಡಿಯುತ್ತಿರುವುದೊ ಏನೋ ಎಂಬಂತೆ ಅಲ್ಲಿಯ ನವಿಲುಗಳ ಕೋಲಾಹಲ ಕೇಳಿಬರುತ್ತಿತ್ತು. ೫೬. ನಾನಾ ಜಿನಾಲಯಗಳಿಗೆ ಅಧಿಷ್ಠಾನವಾಗಿ, ಇಪ್ಪತ್ತು ಜಿನೇಶರಿಗೆ ನಿರ್ವಾಣಸ್ಥಾನವಾಗಿ ವಿಚಿತ್ರ ಶಿಖರಗಳನ್ನುಳ್ಳ ಸಮ್ಮೇದಗಿರಿಯು ಅಪ್ರತಿಮ

ಆ ಮಹಾಮಹೀಧರದಧಿತ್ಯಕದೊಳೊಂದತ್ಯಂತಪಾವನಪ್ರದೇಶದೊಳ್ ವಿಸರ್ಜಿತ ವಿಹರಣವಿಧಾನನುಮೇಕಮಾಸಪರ್ಯಂತಪರ್ಯಂಕಾಸನಸ್ಥಿತನುಮುತ್ತರಾಭಿಮುಖನುಮನೇಕಗಣಧರಮುನಿವೃಷಭಸಭಾಪರಿವೃತನುಮಾಗಿ ಯೋಗನಿರೋಧದಿಂದಿರ್ದು ಚಂದ್ರಪ್ರಭಜಿನೇಂದ್ರಂ ಶುಕ್ಲಧ್ಯಾನಸಾಮಾನ್ಯದಿಂ ತೃತೀಯಮುಂ ಪರಮಶುಕ್ಲಾಪೇಕ್ಷೆಯಿಂ ಪ್ರಥಮಮುಮಪ್ಪ ಸೂಕ್ಷ್ಮಕ್ರಿಯಾಪ್ರತಿದಿಧ್ಯಾನಮನೊಳಕೆಯ್ದಂತರ್ಮುಹೂರ್ತದಿಂ ಚರಮಾಂಗತ್ರಿಗುಣಬಾಹುಲ್ಯದಿನೇಕಸಮಯದೊಳ್ ಚತುರ್ದಶರಜ್ಜೂತ್ಸೇಧಜೀವಪ್ರದೇಶವಿಸರ್ಪಣಮಪ್ಪ ದಂಡಸಮುದ್ಘಾತಮುಮಂ ದ್ವಿತೀಯಸಮಯದೊಳ್ ಪ್ರಾಕ್ಪ್ರಣೀತಬಾಹುಲ್ಯಾಯಾಮದಿಂ ಯಮಳಕವಾಟಾಕೃತಿಜೀವಪ್ರದೇಶವಿಸರ್ಪಣಮಪ್ಪ ಕವಾಟಸಮುದ್ಘಾತಮುಮಂ ತೃತೀಯಸಮಯದೊಳ್ ವಾಯುತ್ರಯಾವಶೇಷಲೋಕಾಕಾಶಜೀವಪ್ರದೇಶಪ್ರವರ್ತನಮಪ್ಪ ಪ್ರತರಸಮುದ್ಘಾತಮುಮಂ ಚತುರ್ಥಸಮಯದೊಳ್ ಸಕಳಲೋಕವ್ಯಾಪ್ತಿ ಜೀವಪ್ರದೇಶಪ್ರವರ್ತನಮಪ್ಪ ಲೋಕಪೂರಣಸಮುದ್ಘಾತಮುಮಂ ನೆಱಪಿ ಮತ್ತಂವ್ಯತ್ಯಮಪ್ರವರ್ತಿತತತ್ತದುಪಸಂಹೃತಿಕ್ರಿಯೆಯಂ ಘಾತಿತಾಘಾತಿಸ್ಥಿತ್ಯನುಭಾಗಪರಿಪ್ರಾಪ್ತಪೂರ್ವಕಾಯಪ್ರಮಾಣಾತ್ಮಪ್ರದೇಶನಾಯಸ್ಥಿತಿಯೊಳುಱಿದ ಘಾತಿಸ್ಥಿತಿಯಂ ಸಮೀಕರಿಸಿ ಬೞಿಯಮಂತರ್ಮುಹೂರ್ತದಿಂ ಬಾದರಮನೋವಚನೋಚ್ಛ್ವಾಸಂಬಾದರಕಾಯಯೋಗಸೂಕ್ಷ್ಮಮನೋತ್ಸಾಸುಗಳುಮಂ ನಿರೋಧಿಸಿ ಸೂಕ್ಷ್ಮಕಾಯಯೋಗನಾಗಿ ಸಮನಂತರಂ ನೀಲೋದಂಗೆಯ್ದು ಲಘ್ವಕ್ಷರಪಂಚಕೋಚ್ಚರಣಸಮಯಸಮಿತಾಯೋಗಕೇವಳಿಗುಣಸಂಸ್ಥಾನಸ್ಥಿತಂ ಸಮುಚ್ಛಿನ್ನಪ್ರಾಣಾಪಾನಸಮಾನಪ್ರಚಾರಸರ್ವಕಾಯವಾಙ್ಮನೋಯೋಗ

ಶೋಭೆಗೆ ನೆಲೆಯಾದುದು. ವ॥ ಆ ಮಹಾಪರ್ವತದ ಸಾನುಪ್ರದೇಶದಲ್ಲಿಯ ಒಂದು ಅತ್ಯಂತ ಪವಿತ್ರವಾದ ಸ್ಥಳದಲ್ಲಿ ವಿಹಾರವನ್ನು ಮುಗಿಸಿದ ತೀರ್ಥಕರನು ಒಂದು ತಿಂಗಳವರೆಗೆ ಪರ್ಯಂಕಾಸನದಲ್ಲಿ ಉತ್ತರಾಭಿಮುಖನಾಗಿ, ಸುತ್ತಲೂ ಅನೇಕ ಗಣಧರ ಮುನೀಂದ್ರರ ಸಮೂಹವು ಬಳಸಿರಲಾಗಿ, ಯೋಗನಿರತನಾಗಿದ್ದು, ಶುಕ್ಲಧ್ಯಾನ ಸಾಮಾನ್ಯದಿಂದ ಮೂರನೆಯದೂ ಪರಮಶುಕ್ಲಾಪೇಕ್ಷೆಯಿಂದ ಮೊದಲನೆಯದೂ ಆದ ಸೂಕ್ಷ್ಮಕ್ರಿಯಾ ಪ್ರತಿಧ್ಯಾನವನ್ನು ಮಾಡಿಮುಗಿಸಿ, ಅಂತರ್ಮುಹೂರ್ತದಿಂದ ಚರಮಾಂಗ ತ್ರಿಗುಣಬಾಹುಲ್ಯದಿಂದ ಏಕಸಮಯದಲ್ಲಿ ಹದಿನಾಲ್ಕು ರಜ್ಜು ಪ್ರಮಾಣದ ಜೀವಪ್ರದೇಶ ವಿಸರ್ಪಣವಾದ ದಂಡಸಮುದ್ಘಾತವನ್ನೂ, ದ್ವಿತೀಯ ಸಮಯದಲ್ಲಿ ಪ್ರಾಕ್‌ಪ್ರಣೀತ ಬಾಹುಲ್ಯಾಯಾಮದಿಂದ ಜೋಡಿಕದಗಳ ಆಕಾರವಾಗಿರುವ ಜೀವಪ್ರದೇಶ ವಿಸರ್ಪಣವಾದ ಕವಾಟ ಸಮುದ್ಘಾತವನ್ನೂ, ತೃತೀಯ ಸಮಯದಲ್ಲಿ ವಾಯುತ್ರಯಾವಿಶೇಷವಾದ ಲೋಕಾಕಾಶ ಜೀವ ಪ್ರದೇಶ ಪ್ರವರ್ತನವಾದ ಪ್ರತರ ಸಮುದ್ಘಾತವನ್ನು ಚತುರ್ಥಸಮಯದಲ್ಲಿ ಸಕಲ ಲೋಕವ್ಯಾಪಿಯಾದ ಜೀವ ಪ್ರದೇಶವರ್ತಿ ಲೋಕಪೂರಣ ಸಮುದ್ಘಾತವನ್ನು ನೆರವೇರಿಸಿದನು. ಮತ್ತು ವ್ಯತ್ಯಮಪ್ರವರ್ತಿತವಾದ ಆಯಾ ಉಪಸಂಹೃತಿಕ್ರಿಯೆಯನ್ನು ಘಾತಿತ, ಅಘಾತಿ ಸ್ಥಿತ್ಯನುಭಾಗಪರಿಪ್ರಾಪ್ತ ಪೂರ್ವಕಾಯ ಪ್ರಮಾಣವಾದ ಆತ್ಮ ಪ್ರದೇಶನಾಯಸ್ಥಿತಿಯಲ್ಲಿ ಉಳಿದ

ಪರಿಸ್ಪಂದಕ್ರಿಯಾವ್ಯಾಪಾರಮಪ್ಪ ಸಮುಚ್ಛಿನ್ನ ಕ್ರಿಯಾನಿವೃತ್ತಿಯೆಂಬ ಚತುರ್ಥಪರಮಶುಕ್ಲಧ್ಯಾನದೊಳೆ ನಿಂದು ಸಂಶುದ್ಧಸರ್ವಾಶ್ರವಂ ಸಂಪೂರ್ಣಸಕಲಶೀಲಗುಣಸಮಾಜಂ ನಿಜೋಪರತಿಸಮಯ ದೊಳನ್ಯತರವೇದನೀಯದೇವಗತಿ ತತ್ಪ್ರಾಯೋಗ್ಯಾನುಪೂರ್ವ ಶರೀರಬಂಧನಸಂಘಾತವರ್ಣರಸಪ್ರತ್ಯೇಕ ಪಂಚಕಸಂಹನನಸಂಸ್ಥಾನಷಟ್ಕಗಂಧದ್ವಿತೀಯಾಂಗೋಪಾಂಗದ್ವಿತೀಯವಿಹಾಯೋಗತಿಸ್ಪರ್ಶಾಷ್ಟಕಾಗುರು ಲಘುಚತುಷ್ಕಶುಭಾಶುಭ ಸ್ಥಿರಾಸ್ಥಿರ ಸುಸ್ವರ ದುಸ್ವರ ಸುಭಗದುರ್ಭಗ ಪ್ರತ್ಯೇಕಶರೀರ ಯಶಸ್ಕೀರ್ತ್ಯನಾದೇಯನಿರ್ಮಾಣಪರ್ಯಾಪ್ತನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ನಿರವಶೇಷಂಮಾಡಿನಿಜಚರಮಸಮಯದೊಳವಶಿಷ್ಟಾನ್ಯತರವೇದ್ಯಮನುಷ್ಯಾಯುರ್ಗತಿ ತತ್ಪ್ರಯೋಗ್ಯಾ ನುಪೂರ್ವಪಂಚೇಂದ್ರಿಯಜಾತಿತ್ರಸನಾಮಶುಭಗಾಧೇಯಪರ್ಯಾಪ್ತಬಾದರಯಶಸ್ಕೀರ್ತ್ಯುಚ್ಚೈರ್ಗೋತ್ರ ತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳುಮನುನ್ಮೂಳಿಸಿದಂ. ಇಂತು

> ಪರಮಧ್ಯಾನಮಣಿಪ್ರದೀಪದಿನಘೌಘಧ್ವಾಂತಮಟ್ಟಾಡೆ ಸಾ ।
> ರ್ತರೆ ವಿಸ್ಪಷ್ಟಗುಣಾಷ್ಟಕಂ ವಿಗತಕಿಟ್ಟಪ್ರಸ್ತರಸ್ವರ್ಣಭಾ ॥

ಘಾತಿಸ್ಥಿತಿಯನ್ನು ಸಮೀಕರಿಸಿದನು. ಬಳಿಕ ಅಂತರ್ಮುಹೂರ್ತ ಕಾಲದಲ್ಲಿ, ಬಾದರ ಮನೋವಚನೋಚ್ಛ್ವಾಸ ಹಾಗು ಬಾದರ ಕಾಯ ಯೋಗ ಸೂಕ್ಷ್ಮ ಮನೋತ್ಸಾಹಗಳನ್ನು ನಿರೋಧಿಸಿ ಸೂಕ್ಷ್ಮಕಾಯ ಯೋಗನಾದನು. ಅನಂತರ ನೀಲೋದ ಮಾಡಿ ಲಘ್ವಕ್ಷರ ಪಂಚಕೋಚ್ಚರಣ ಸಮಿತಾಯೋಗ ಕೇವಲಿ ಗುಣ ಸಂಸ್ಥಾನಸ್ಥಿತನಾಗಿ ಸಮುಚ್ಛಿನ್ನ ಪ್ರಾಣ, ಅಪಾನ, ಸಮಾನ ಪ್ರಚಾರವಾದ ಸರ್ವ ಕಾಯ ವಾಙ್ಮನೋಯೋಗ ಪರಿಸ್ಪಂದ ಕ್ರಿಯಾವ್ಯಾಪಕವಾದ ಸಮುಚ್ಛಿನ್ನ ಕ್ರಿಯಾನಿವೃತ್ತಿ ಯೆಂಬ ಚತುರ್ಥ ಪರಮ ಶುಕ್ಲಧ್ಯಾನದಲ್ಲಿ ನಿಂತು, ಸರ್ವಾಶ್ರವಗಳನ್ನು ಕಳೆದು, ಸಂಪೂರ್ಣ ಸಕಲ ಶೀಲಗುಣಯುಕ್ತನಾಗಿ, ತನ್ನ ಉಪರತಿ ಸಮಯದಲ್ಲಿ ಅನ್ಯತರ ವೇದನೀಯ ದೇವನತಿ ತತ್ ಪ್ರಾಯೋಗ್ಯಾನುಪೂರ್ವ ಶರೀರ ಬಂಧನ ಸಂಘಾತ ವರ್ಣ ರಸ ಪ್ರತ್ಯೇಕ ಪಂಚಕ ಸಂಸ್ಥಾನಷಟ್ಕಗಂಧದ್ವಿತೀಯಾಂಗೋಪಾಂಗ ದ್ವಿತೀಯ ವಿಹಾಯೋಗತಿ ಸ್ಪರ್ಶಾಷ್ಟಕ ಅಗುರು ಲಘು ಚತುಷ್ಕ ಶುಭಾಶುಭ ಸ್ಥಿರಾಸ್ಥಿರ ಸುಸ್ವರ ದುಸ್ವರ ಸುಭಗದುರ್ಭಗ ಪ್ರತ್ಯೇಕ ಶರೀರ ಯಶಸ್ಕೀರ್ತಿ ಅನಾದೇಯ ನಿರ್ಮಾಣ ಪರ್ಯಾಪ್ತ ನೀಚೈರ್ಗೋತ್ರಗಳೆಂಬ ಎಪ್ಪತ್ತೆರಡು ಪ್ರಕೃತಿಗಳನ್ನು ನಿರ್ಮೂಲಗೊಳಿಸಿದನು. ತನ್ನ ಚರಮ ಕಾಲದಲ್ಲಿ ಉಳಿದಿರುವ ಅನ್ಯತರ ವೇದ್ಯ ಮನುಷ್ಯಾಯುರ್ಗತಿ ತತ್ ಪ್ರಯೋಗ್ಯಾನುಪೂರ್ವ ಪಂಚೇಂದ್ರಿಯ ಜಾತಿ ತ್ರಸ ನಾಮ ಶುಭಗಾಧೇಯ ಪರ್ಯಾಪ್ತ ಬಾದರ ಯಶಸ್ಕೀರ್ತಿಉಚ್ಚೈರ್ಗೋತ್ರ ತೀರ್ಥಕರ ನಾಮಗಳೆಂಬ ಹದಿಮೂರು ಪ್ರಕೃತಿಗಳನ್ನು ನಾಶಗೊಳಿಸಿದನು. ಹೀಗೆ- ೫೭. ಶ್ರೇಷ್ಠವಾದ ಧ್ಯಾನವೆಂಬ ರತ್ನದೀಪದಿಂದ ದುರಿತಸಮೂಹವೆಂಬ ಕತ್ತಲೆ ನಾಶವಾಗಿ, ಪರಿಶುದ್ಧವಾದ ಅಷ್ಟಗುಣಗಳು ಪ್ರಾಪ್ತವಾದುವು; ಕಿಟ್ಟವನ್ನು ಕಳೆದುಕೊಂಡು

ಸುರಸಂಶುದ್ಧನಿಜಸ್ವರೂಪನಭವಂ ಚಂದ್ರಪ್ರಭಸ್ವಾಮಿ ಮು ।
ಕ್ತಿರಮಾಸಂಗಮಸೌಖ್ಯಮಂ ನೆಱೆಯೆ ಪೆತ್ತಂ ನಿತ್ಯಮಂ ಸ್ತುತ್ಯಮಂ ॥ ೫೭

ತಾಂ ತನ್ನಂ ತನ್ನಿಂದಾ ।
ದಂ ತನಗೆಡೆಮಾಡೆ ಪುಟ್ಟಿ ತನ್ನತ್ತಣೆನೆಂ ॥
ಟುಂ ತನ್ನಯ ಗುಣಮವಿಚಳಿ ।
ತಂ ತನ್ನೊಳ್ ನೆಲಸೆ ನೆಲಸಿದಂ ನಿರ್ವೃತಿಯೊಳ್ ॥ ೫೮

ಸಮನಿಸೆ ಫಾಲ್ಗುನಸಿತಸ ।
ಪ್ತಮಿಯಪರಾಹ್ಣಂ ಶುಭಪ್ರದಂ ಜ್ಯೇಷ್ಠೆ ತದು ॥
ತ್ತಮಸಮಯದೊಳಪಗತಸಕ ।
ಳಮಳಂ ತ್ರೈಲೋಕ್ಯಶಿಖರಿಶೇಖರನಾದಂ ॥ ೫೯

ನೆಗಳ್ದೀಷತ್ಪ್ರಾಗ್ಭಾರಂ ।
ಜಗತಿ ಗುಣಾಷ್ಟಕಮದಷ್ಟಮಂಗಳಮಾವಾ ॥
ಯುಗಣಂ ಮಂಡಪಮಾಗಿರೆ ।
ಜಗನ್ನುತಂ ಮದುವೆನೆರೆದನಮೃತಶ್ರೀಯೊಳ್ ॥ ೬೦

ಮನುಜಕ್ಷೇತ್ರದವೊಲ್ ಯೋ ।
ಜನಲಕ್ಷಂ ತನಗಮಗಲದೊಳ್ ನಾಲ್ವತ್ತ ॥
ಯ್ದನೆ ತೋರಮೆಂಟು ಯೋ ।
ಜನಮೆನೆ ಸಮವೃತ್ತಂ ಕ್ರಮೋನ್ನತಂ ಶುಚಿತೇಜಂ ॥ ೬೧

ಹೊಳೆಯುವ ಚಿನ್ನದಂತೆ ಶುದ್ಧಸ್ವರೂಪನಾದ ಚಂದ್ರಪ್ರಭ ಸ್ವಾಮಿಯು ನಿತ್ಯವಾದ ಮೋಕ್ಷಲಕ್ಷ್ಮಿಯ ಸಮಾಗಮಕ್ಕೆ ಯೋಗ್ಯನಾದನು. ೫೮. ಆತ್ಮವನ್ನು ತಾನು ತನ್ನಿಂದ ಸಾಕ್ಷಾತ್ಕರಿಸಿಕೊಳ್ಳಲಾಗಿ ತನ್ನಿಂದಲೆ ಹುಟ್ಟಿದ ಎಂಟು ಗುಣಗಳು ತನ್ನಲ್ಲಿ ನೆಲಸಲಾಗಿ ಪರಮನು ನಿರ್ವಾಣದಲ್ಲಿ ನೆಲಸಿದನು. ೫೯. ಫಾಲ್ಗುಣ ಶುದ್ಧ ಸಪ್ತಮಿಯ ಅಪರಾಹ್ಣದಲ್ಲಿ ಶುಭಕರವಾದ ಜ್ಯೇಷ್ಠಾ ನಕ್ಷತ್ರವಿರುವ ಉತ್ತಮ ಸಮಯದಲ್ಲಿ ಸರ್ವ ನಿರ್ಮಲನಾದ ಜಿನೇಂದ್ರನು ತ್ರೈಲೋಕ್ಯ ಶಿಖರವನ್ನೇರಿದನು. ೬೦. ಈಷತ್ ಪ್ರಾಗ್ಭಾರವೆ ಜಗಲಿ, ಅಷ್ಟಗುಣಗಳೆ ಅಷ್ಟಮಂಗಳಗಳು, ವಾಯು ಗಣಗಳೆ ವಿವಾಹ ಮಂಡಪ– ಹೀಗಿರಲು ಜಗತ್ಪೂಜ್ಯನು ಮುಕ್ತಿಶ್ರೀಯನ್ನು ಮದುವೆಯಾದನು. ೬೧. ಮನುಷ್ಯಕ್ಷೇತ್ರದಂತೆ ಅಗಲ ಒಂದು ಲಕ್ಷಯೋಜನ, ಉದ್ದ ನಾಲ್ವತ್ತೈದು ಯೋಜನ, ಎತ್ತರ ಎಂಟು ಯೋಜನನಾಗಿ, ಸಮವೃತ್ತಾಕಾರದಿಂದ ಕ್ರಮವಾಗಿ ಉನ್ನತ

ಓರಂತೆಸೆವುದು ಲೋಕಾ ।
ಕಾರಶ್ರೀಗೆತ್ತಿ ನಿಂದ ಧವಳಚ್ಛತ್ರಾ ॥
ಕಾರಮನಾಂತೀಷತ್ಪ್ರಾ ।
ಗ್ಭಾರಶಿಳಾವಳಯಮತುಳಶೋಭಾನಿಳಯಂ ॥ ೬೨

ಅಂತಷ್ಟಮಭೂಮಿಯೆನಿಸುವ ಲೋಕಶಿಖರದೊಳ್ ನಾಲ್ವತ್ತಯ್ದು ಲಕ್ಷಯೋಜನಸವೃತ್ತಮುಂ ಸಮಸ್ಥಾನಮುಂ ಸುಗಂಧಮುಂ ಸಮಗುಣಮುಂ ಅತಿಪ್ರಸಿದ್ಧಮುಂ ವಿಶುದ್ಧಮುಮಾಗಿರ್ದ ಸಿದ್ಧಶಿಲೆಯ ಮೇಗಣ ವಾಯುತ್ರಿತಯಭಾಗದೊಳ್ ಕಿಂಚಿನ್ನ್ಯೂನಚರಮಶರೀರಮಾತ್ರಜೀವಘನಾಕಾರನುಂ ಕ್ಷಾಯಿಕಾಸಮ್ಯಕ್ತ್ವಾನನ್ತಜ್ಞಾನದರ್ಶನಾನಂತವೀರ್ಯಸೂಕ್ಷ್ಮತ್ವಾವಗಾಹಗುರುಲಘುಕಾಖ್ಯಾಬಾಧಾಷ್ಟಗುಣಮಣಿನಿಧಾನನುಂ ನಿಶ್ಚಳನುಂ ನಿರಾಕಾರನುಂ ನಿತ್ಯನುಂ ನಿರಂತರಸುಖಿನುಂ ನಿರಂಜನನುಮಾಗಿ ಸಿದ್ಧಪದವಿಯೊಳ್ ನಿಂದನನ್ನೆಗಮಿತ್ತಲ್

ಜ್ಯೋತಿಷ್ಕಾವಳಿ ಭಾವನಪ್ರತತಿ ವಾನೇಯವ್ರಜಂ ಕಲ್ಪಜ ।
ವ್ರಾತಂ ಯಾನವಿಮಾನಸೈನಿಕವಧೂವರ್ಗಾನ್ವಿತಂ ಪ್ರೋಚ್ಛಳ ॥
ತ್ಕೇತುಛತ್ರಕದಂಬಚುಂಬಿತನಭೋಭಾಗಂ ಸ್ಫುರದ್ಭೂಷಣೋ ।
ದ್ಯೋತಂ ಬಂದುದು ಮಾಣ್ಬ ಕೌತುಕದಿನಾನಿರ್ವಾಣಕಲ್ಯಾಣಮಂ ॥ ೬೪

ವಾಗಿ ಶುದ್ಧಕಾಂತಿಯನ್ನು ಹೊಂದಿರುವುದು ಸಿದ್ಧಶಿಲೆ. ೬೨. ಲೋಕಾಕಾರ ಲಕ್ಷ್ಮಿಗೆ ಎತ್ತಿ ಹಿಡಿದ ಬೆಳ್ಗೊಡೆಯೊ ಏನೊ ಎಂಬಂತೆ ಈಷತ್‌ಪ್ರಾಗ್ಭಾರದ (ಸಿದ್ಧ) ಶಿಲಾವಲಯವು ಅಪ್ರತಿಮ ಶೋಭೆಯನ್ನು ಹೊಂದಿತು. ವ॥ ಹೀಗೆ ಅಷ್ಟಮ ಭೂಮಿಯೆನಿಸುವ ಲೋಕಾಗ್ರದಲ್ಲಿ ನಾಲ್ವತ್ತೈದು ಯೋಜನ ವಿಸ್ತಾರವೂ ಸಮಸ್ಥಾನವೂ, ಸುಗಂಧಮಯವೂ, ಸಮಗುಣವೂ, ಅತಿಪ್ರಸಿದ್ಧವೂ, ಪರಿಶುದ್ಧವೂ ಆಗಿದ್ದ ಸಿದ್ಧಶಿಲೆಯ ಮೇಲಿನ ವಾಯುತ್ರಯ ಭಾಗದಲ್ಲಿ ಕಿಂಚಿನ್ನ್ಯೂನ ಚರಮ ಶರೀರ ಜೀವ ಘನಾಕಾರನಾಗಿ, ಕ್ಷಾಯಿಕಾ ಸಮ್ಯಕ್ತ್ವ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಸೂಕ್ಷ್ಮತ್ವ, ಅವಗಾಹ, ಅಗುರುಲಘುತ್ವ, ಅವ್ಯಾಬಾಧತ್ವ ಎಂಬ ಎಂಟು ಗುಣರತ್ನಗಳಿಗೆ ನೆಲೆಯಾಗಿ, ನಿಶ್ಚಲನೂ, ನಿರಾಕಾರನೂ, ನಿತ್ಯನೂ, ನಿರಂತರಸುಖಿಯೂ, ನಿರಂಜನನೂ ಆಗಿ ಸಿದ್ಧ ಪದವಿಯಲ್ಲಿ ನಿಂತನು. ಅಷ್ಟರಲ್ಲಿ ಇತ್ತ– ೬೪. ಜ್ಯೋತಿಷ್ಕರು, ಭವನವಾಸಿಗಳು, ವಾನೇಯರು, ಕಲ್ಪಜರು ಸಮೂಹವಾಗಿ ತಂತಮ್ಮ ವಾಹನ, ಸೈನಿಕರು, ವಧುಗಳು ಮೊದಲಾದ ಪರಿವಾರದೊಂದಿಗೆ, ಧ್ವಜ, ಛತ್ರಗಳಿಂದ ಆಕಾಶವನ್ನು ಚುಂಬಿಸುತ್ತ, ತಮ್ಮ ಆಭರಣಗಳಿಂದ ಕಾಂತಿಯನ್ನು ಹೊಮ್ಮಿಸುತ್ತ ನಿರ್ವಾಣ ಕಲ್ಯಾಣವನ್ನು ಮಾಡುವ

---

ಸಮತಳಸಮತೇಜಮಯಂ ।
ಸುಮವೃತ್ತಂ ಸುಖಮಯಂ ವಿಶುದ್ಧವಿಶಾಲಂ ॥
ಸಮಲಕ್ಷ್ಮೀಮಣಿಪೀಠಂ ।
ಸಮಲೋಕೋತ್ತಂಸಮಾಯ್ತು ಸಿದ್ಧಕ್ಷೇತ್ರಂ ॥ ೬೩
ಇದು ಗ್ರಂಥಕರ್ತನದಲ್ಲವೆಂದು ತೋರುತ್ತದೆ. ಒಂದು ಪ್ರತಿಯಲ್ಲಿಲ್ಲ.

ಅಂಬರಮಾವಗಂ ನೆರೆದು ತಿಂಬಿದ ದೇವನಿಕಾಯದಿಂದೆ ಚಿ ।
ತ್ರಂಬರೆದಂಬರಕ್ಕೆ ದೊರೆಯಾದುದು ದುಂದುಭಿರಾವದಿಂ ಪ್ರಪೂ ॥
ರ್ಣಾಂಬುಧಿಘೋಷಮಾದ ತೆಱದಿಂದೆಸೆದೆಣ್ದೆಸೆಯಿರ್ದುದೇಂ ಮಹಾ ।
ಡಂಬರಮಾಯ್ತೊ ಬರ್ಪ ಬರವಂದು ಸಮಸ್ತಸುರೇಂದ್ರಬೃಂದದಾ ॥ ೬೫

ಅಂತು ಬರ್ಪಲ್ಲಿ

ಕಳಶಮನಂಸದ ಕೆಲದೊಳ್ ।
ಜಳರುಹಗಂಧಾಂಬುಪೂರ್ಣಮಂ ಕರತಳದಿಂ ॥
ತಳೆದಮರರಮಣಿ ನಿಜಕುಚ ।
ಕಳಶದ ಚೆಲ್ವಿಂಗೆ ಮಾಡಿದಳ್ ಸಂಗಡಮಂ ॥ ೬೬

ಅಳವಡೆ ಕೇಸರರಸಮಂ ।
ಪಳಿಕಿನ ಶುಕ್ತಿಕೆಯೊಳಾಂತ ಕಾಂತೆ ಕರಂ ಕ ॥
ಣ್ಗೊಳಿಸಿದಳುದಯದ ಕೆಂಪಡ ।
ರ್ದೆಳವೆಱೆಯಂ ತಳದೊಳಿಕ್ಕಿ ತೋಱುವ ತೆಱದಿಂ ॥ ೬೭

ಭರಿತಸಿತಾಕ್ಷತಕುಳಮಂ ।
ಪರಿಯಣಮಂ ತಳೆದು ಬರ್ಪ ಸುರವಧುವಗೆವೊ ॥
ಯ್ದಿರಿಸಿಟ್ಟ ಪುಣ್ಯಬೀಜಾಂ ।
ಕುರಪಾತ್ರಮನಾಂತ ಲಕ್ಷ್ಮಿಯಿಂ ನೆನೆಯಿಸಿದಳ್ ॥ ೬೮

ಉತ್ಸಾಹದಿಂದ ಬಂದರು. ೬೫. ತುಂತುಂಬಿ ಬರುವ ದೇವಸಮೂಹ ದಿಂದ ಆಕಾಶವು ಚಿತ್ರ ಬರೆದ ಪಟದಂತೆ ಶೋಭಿಸಿತು; ದುಂದುಭಿಧ್ವನಿಯಿಂದ ಎಂಟೂ ದಿಕ್ಕುಗಳಲ್ಲಿ ಸಮುದ್ರ ಉಕ್ಕೇರಿ ಗರ್ಜನೆ ಮಾಡುತ್ತಿರುವುದೊ ಏನೊ ಎಂದೆನಿಸಿತು. ಹೀಗೆ ಸಮಸ್ತ ದೇವಸಮೂಹದ ಆಗಮನ ಸಂಭ್ರಮ ವಿಜೃಂಭಿಸಿತು. ಹಾಗೆ ಬರುತ್ತಿರುವಾಗ– ೬೬. ಕಮಲ ಪರಿಮಳದಿಂದ ಸುಗಂಧಿತವಾದ ನೀರಿನ ಕಲಶವನ್ನು ತನ್ನ ಪಕ್ಕೆಗೆ ಕೈಯಿಂದ ಹಿಡಿದುಕೊಂಡು ಬರುವ ದೇವ ರಮಣಿ ತನ್ನ ಕುಚಕಲಶಗಳ ಚೆಲುವಿಗೆ (ಈ ಕಲಶದ) ಶೋಭೆಯನ್ನು ಜೊತೆ ಮಾಡಿದಳು. ೬೭. ಸ್ಫಟಿಕದ ಸಿಂಪಿನಲ್ಲಿ ಕೇಸರರಸವನ್ನು ತುಂಬಿ ತರುವ ಕಾಂತೆಯು, ಉದಯಕಾಲದಲ್ಲಿ ಕೆಂಪಡರಿದ ಬಾಲಚಂದ್ರನನ್ನು ಅಂಗೈಯಲ್ಲಿ ಇಕ್ಕಿ ತೋರುವಂತೆ ಕಂಗೊಳಿಸಿದಳು. ೬೮. ಧವಳಾಕ್ಷತೆ ತುಂಬಿದ ಹರಿವಾಣವನ್ನು ಹಿಡಿದು ಬರುವ ದೇವಕನ್ಯೆಯೊಬ್ಬಳು, ಅಗೆ ಹಾಕಿಟ್ಟ ಪುಣ್ಯ ಬೀಜಾಂಕುರ

---

೬೩ ಎಂಬ ಸಂಖ್ಯೆಯಿಂದ ಈ ಮುಂಚಿನ ಮುದ್ರಣದಲ್ಲಿರುವ ಅಡಿಟಿಪ್ಪಣಿಯ "ಸಮತಳ ಸಮತೇಜಮಯಂ" ಎಂಬ ಪದ್ಯ ಪ್ರಕ್ಷಿಪ್ತವೆಂದು ಬಿಟ್ಟಿದೆ. ಆ ಪದ್ಯದಲ್ಲಿ ಹೇಳಿದ ವಿಷಯ ಮುಂದಿನ ವಚನದಲ್ಲಿ ಬಂದಿದೆ.

ಮುರಿಪಿದ ಕರಂಬಬಾಸಿಗ ।
ದೆರಡುಂ ಕಡೆಯಂ ವಿಳಾಸವತಿ ಪಿಡಿದೆರಡುಂ ॥
ಕರದಿನನುಕರಿಸಿದಳ್ ಸುರ ।
ಶರಾಸನಶ್ರೀಯನಾಳ್ದ ಗಗನಶ್ರೀಯಂ ॥ ೬೯

ಅನಿಮಿಷಕಾಂತೆ ಸುಧಾಶನ ।
ವಿನಿಹಿತಮಂ ಪೊನ್ನ ಬೋನಮಂ ಪೊತ್ತು ಬರು ॥
ತ್ತೆನಸುಂ ಪೋಲ್ತೆಸೆದಳ್ ಭೋ ।
ಜನಾಂಗಮಂ ಕಲ್ಪಲತೆಯನಾವ್ಯತಿಕರದೊಳ್ ॥ ೭೦

ನಂದನಮಣಿದೀಪೋತ್ಕರ ।
ದಿಂದೆಸೆವಾರತಿಯನಾಂತು ಬರ್ಪಮರಿ ಮನ ॥
ಕ್ಕಂದೊಪ್ಪಿದಳಲರ್ಗೊಂಚಲೊ ।
ಳೊಂದಿದ ಬಂಧೂಕಲತಿಕೆಯಂದದಿನೊರ್ವಳ್ ॥ ೭೧

ಮಿಳಿರ್ದು ಸಿತಾಗರುಧೂಮಾ ।
ವಳಿ ಮೊಗದಿಂದೊಗೆವ ಧೂಪಘಟಮನದೊರ್ವಳ್ ॥
ತಳೆದಮರಿ ತಮಾಳದ ತಳಿ ।
ರ್ಗಳಸಮನಂದಾಂತ ಸಂದೆಗಕ್ಕೆಡೆಯಾದಳ್ ॥ ೭೨

ಪರಿನಿರ್ವಾಣೋತ್ಸವತ ।
ತ್ಪರತೆಯಿನೆಟ್ಟಿರ್ಪ ಸಮಯದೊಳ್ ಪುಣ್ಯಪರಂ ।
ಪರೆ ಕೆಯ್ಯೊಳ್ ಫಳಯಿಸಿದಂ ।
ತಿರೆ ಫಳಮಂ ತಳೆದು ತತ್ತಳೋದರಿಯೆಸೆದಳ್ ॥ ೭೩

ಗಳ ಪಾತ್ರೆಯನ್ನು ಧರಿಸಿದ ಲಕ್ಷ್ಮಿಯಂತೆ ತೋರಿದಳು. ೬೯. ನಾನಾಬಗೆಯ ಹೂಗಳಿಂದ ಕಟ್ಟಿದ ಬಾಸಿಗವನ್ನು ಬಾಗಿಸಿ ಎರಡು ಕೈಗಳಲ್ಲಿ ಎರಡು ತುದಿಗಳನ್ನು ಹಿಡಿದುಕೊಂಡ ಒನಪುಗಾತಿಯೊಬ್ಬಳು, ಇಂದ್ರಧನುವಿನಿಂದ ಚೆಲುವಾದ ಗಗನಶ್ರೀಯಂತೆ ಕಂಗೊಳಿಸಿದಳು. ೭೦. ಅಮೃತಾನ್ನವುಳ್ಳ ಹೊನ್ನ ಪಾತ್ರೆಯನ್ನು ಹೊತ್ತು ಬರುತ್ತಿದ್ದ ದೇವಕಾಂತೆಯೊಬ್ಬಳು ಭೋಜನಾಂಗ ಕಲ್ಪಲತೆಯಂತೆ ಒಪ್ಪಿದಳು. ೭೧. ನಂದನದ ರತ್ನದೀಪಗಳಿಂದೊಪ್ಪುವ ಆರತಿಯನ್ನು ಕೊಂಡು ಬರುವ ದೇವಾಂಗನೆಯೊಬ್ಬಳು ಹೂಗೊಂಚಲಿಂದ ಶೋಭಿಸುವ ಬಂದುಗೆಯ ಬಳ್ಳಿಯಂತೆ ತೋರಿದಳು. ೭೨. ಕಾಳಾಗುರುವಿನ ಹೊಗೆಯೇಳುತ್ತಿರುವ ಧೂಪಘಟವನ್ನು ಹಿಡಿದು ಬರುತ್ತಿರುವ ದೇವರಮಣಿಯೊಬ್ಬಳು, ತಮಾಲದ ತಳಿರು ಹೊದಿಸಿದ ಕಲಶವನ್ನು ತರುತ್ತಿರುವಳೊ ಏನೊ ಎಂಬ ಸಂದೇಹವನ್ನುಂಟು ಮಾಡಿದಳು. ೭೩. ಪರಿನಿರ್ವಾಣೋತ್ಸವ ತತ್ಪರತೆಯಿಂದ ಫಲವನ್ನು ಕೈಯಲ್ಲಿಟ್ಟುಕೊಂಡು ಚೆಲುವೆಯೊಬ್ಬಳು ಬರುತ್ತಿರಲಾಗಿ, ಪುಣ್ಯ ಪರಂಪರೆಯೆ ಕೈಯಲ್ಲಿ ಫಲಿಸಿತೆಂಬಂತೆ ತೋರಿತು. ವ॥ ಹೀಗೆ ಸಮಸ್ತ ದೇವಸಮೂಹ ಸಮೇತ

ಅಂತನೂನದೇವನಿಕಾಯಂಬೆರಸಮರರಾಜಂ ಬಂದು ಸಮ್ಮೇದಮೇದಿನೀಧರಶಿಖರದೊಳ್ ವತರಿಸಿ

ಜಯಜಯಜಯ ದುರಿತಾಂತಕ ।
ಜಯಜಯಜಯ ವಿಮಳಬೋಧ ಜಯಜಯಜಯ ನಿ ॥
ರ್ವ್ಯಯ ಲಕ್ಷ್ಮೀಪತಿ ಜಯ ಜಯ ।
ಜಯ ಚಂದ್ರಪ್ರಭ ಜಿನೇಂದ್ರ ವಿಘಟಿತತಂದ್ರಾ ॥ ೭೪

ಎಂದಭಿವಂದಿಸುತ್ತುಂ ಗೀರ್ವಾಣನಾಯಕಂ ಸರ್ವಜ್ಞಪರಿನಿರ್ವಾಣಕ್ಷೇತ್ರಮನತಿಪವಿತ್ರಮಂ ತ್ರಿಪದಕ್ಷಿಣಂಗೆಯ್ದು ಬಟಿಯಂ ಸಮಸ್ತಪ್ರಶಸ್ತವಸ್ತುಗಳಿಂ ತತ್ಪ್ರದೇಶಪೂಜೆಯಂ ವಿರಾಜಿಪಂತು ಮಾಡೆ

ತಣಿಯದು ಕಲ್ಪಭೂಜತತಿಯಿತ್ತು ಸುರಾಸುರಕೋಟಿ ತಂದಣಂ ।
ತಣಿಯದು ಕೈಗೆ ನೀಡಿ ತಣಿಯಳ್ ಶಚಿ ಪೂಜಿಸಿ ನಾಕಿನಾಯಕಂ ॥
ತಣಿಯನಶೇಷಪುಷ್ಪಫಳಚಂದನವಸ್ತ್ರವಿಭೂಷಣಾರ್ಚನಾ ।
ಗಣಮನದೇಂ ಜಿನೇಂದ್ರಪರಿನಿರ್ವೃತಿಪೂಜೆಯಗುರ್ವುವೆತ್ತುದೋ ॥ ೭೫

ಆ ನಿರ್ವಾಣಕಲ್ಯಾಣಪೂಜಾಕರಣಾನಂತರಂ

ರಸಭಾವಾಭಿನಯಂ ನೋ ।
ಟ್ಪಿ ಸಮಸ್ತಸ್ವರ್ಗಿಜನದ ಕಣ್ಗಂ ಮನಕಂ ॥
ಪೊಸತಾಗೆ ರಾಗದಿಂ ನಟಿ ।
ಯಿಸಿದಂ ಪುರುಹೂತನಾತ್ಮಕುತಪಸಮೇತಂ ॥ ೭೬

ನಾಗಿ ದೇವೇಂದ್ರನು ಬಂದು ಸಮ್ಮೇದ ಶಿಖರದಲ್ಲಿ ಇಳಿದನು. ೭೪. "ಜಯ ಜಯ ಜಯ ದುರಿತನಾಶಕ ! ಜಯ ಜಯ ಜಯ ನಿರ್ಮಲಜ್ಞಾನಿ! ಜಯ ಜಯ ಜಯ ನಿತ್ಯ ಲಕ್ಷ್ಮೀಪತಿಯೆ ! ಜಯ ಜಯ ಜಯ ಚಂದ್ರಪ್ರಭ ಜಿನೇಂದ್ರ!" ವ॥ ಎಂದು ಸ್ತೋತ್ರ ಮಾಡಿ ನಮಸ್ಕರಿಸುತ್ತ ದೇವೇಂದ್ರನು ಸರ್ವಜ್ಞನ ಅತ್ಯಂತ ಪವಿತ್ರವಾದ ನಿರ್ವಾಣಭೂಮಿಯನ್ನು ಮೂರುಸಲ ಪ್ರದಕ್ಷಿಣೆ ಮಾಡಿ ಬಳಿಕ ಪ್ರಶಸ್ತವಾದ ಅರ್ಚನಾದ್ರವ್ಯಗಳಿಂದ ಆ ಪ್ರದೇಶವನ್ನು ಪೂಜಿಸಿ ಅಲಂಕರಿಸಲಾಗಿ– ೭೫. ಕಲ್ಪವೃಕ್ಷಗಳ ಸಮೂಹಗಳು (ಅರ್ಚನದ್ರವ್ಯಗಳನ್ನು) ಇತ್ತೂ ಇತ್ತೂ ತಣಿಯವು; ಸುರಾಸುರ ಸಮೂಹವು ಅವುಗಳನ್ನು ತಂತಂದು ತಣಿಯರು; ಕೈಗೆ ನೀಡಿ ನೀಡಿ ಶಚಿ ತಣಿಯಳು; ಆ ಎಲ್ಲ ಹೂ, ಹಣ್ಣು, ಗಂಧ, ವಸ್ತ್ರ, ಆಭರಣ ಮೊದಲಾದವುಗಳಿಂದ ಅರ್ಚನೆ ಮಾಡಿ ಮಾಡಿ ಇಂದ್ರನೂ ತಣಿಯನು. ಜಿನೇಂದ್ರನ ನಿರ್ವಾಣಪೂಜೆಯ ಸಡಗರ ಅದೆಂತಹದು; ಹೀಗೆ ನಿರ್ವಾಣ ಕಲ್ಯಾಣ ಪೂಜೆಯಾದ ಬಳಿಕ– ೭೬. ನೋಡುವ ಸಮಸ್ತ ಸ್ವರ್ಗಜನದ ಕಣ್ಣುಮನಸ್ಸುಗಳಿಗೆ ರಸಭಾವಾಭಿನಯವು ಹೊಚ್ಚ ಹೊಸತಾಗಿ ತೋರುವಂತೆ

ಕೃತಕೃತ್ಯಂ ಬುದ್ಧಬೋಧ್ಯಂ ಬಗೆವೊಡೆ ದಿಟದಿಂ ಸಿದ್ಧಸಾಧ್ಯಂ ದಲೆಂಬು।
ನ್ನತಿಯಂ ಕೈಕೊಂಡು ಮುಂ ಮಾಡಿದ ಪರಮತಪಂ ಮತ್ತೆ ತಾಂ ಪೆತ್ತ ಬೋಧೋ॥
ದ್ಗತಿಯೀಗಳ್ ಸಾರ್ದಶಾಶ್ವತಪದಮಱಿಪಲೆ ಸಾಲ್ದಿರ್ದುವಿನ್ನಪ್ಪುದಿನ್ನು।
ನ್ನತಿಯೇನೆಂದಿಂದ್ರನಿಂದುಪ್ರಭನ ಮಹಿಮೆಗಂ ವಿಸ್ಮಿತ ಸ್ವಾಂತನಾದಂ॥ ೭೭

ಆಗಿ ಮತ್ತಂ

ಶ್ರೀಮನ್ಮಂದಾರಧಾರಾನಿಕರಪರಿವೃತಂ ದಿವ್ಯವಾಗ್ವಿಸ್ತರಾಂಶು।
ಸ್ತೋಮಪ್ರದ್ಯೋತಿತಾಶಾಂಬರಪಥನಮಳಜ್ಞಾನಪೀಯೂಷಗರ್ಭಾ॥
ವ್ಯಾಮೃಷ್ಟಾಂಹಸ್ತಮಂ ಸಂಭೃತಕುಮುದವನಂ ಮಾಟ್ಕಿ ಚಂದ್ರಪ್ರಭಂಪ್ರೋ।
ದ್ದಾಮಶ್ರೀಪಾದಸೇವೋತ್ಸವಮನೆ ಜಿನಪಂ ಹೃಚ್ಚಕೋರಕ್ಕೆ ನಮ್ಮಾ॥ ೭೮

ಎಂದು ಬಟೆಯಂ ಗಣಧರಪಾದಾರವಿಂದಂಗಳಂ ವಂದನಾರ್ಚನಾವಿಧಾನದಿನಾರಾಧಿಸಿ ತೀರ್ಥಭೂತಮಂ ಸಮ್ಮೇದಪರ್ವತಮಂ ಪ್ರದಕ್ಷಿಣೀಕರಿಸಿ ಪೋಪವಸರದೊಳರ್ಹದಾಗಮದಿನಱಿದವಸರ್ಪಣದ ಕಡೆಯ ಕಾಲದೊಳಪ್ಪ ತೀರ್ಥಕರಬಿಂಬಂಗಳಂ ತದ್ವರ್ಣೋತ್ಸೇಧಲಕ್ಷಣೋಪಲಕ್ಷಿತಂಗಳುಂ ರತ್ನಮಯಂಗಳುಮಾಗೆ ಭರತಸಗರಚಕ್ರಿಗಳ್ ಮುನ್ನಮೆ ಮಾಡಿಸಿದುವಂ ತತ್ಪರ್ವತಾಪತ್ಯಕದ ಚೈತ್ಯಾಗಾರಂಗಳೊಳ್ ಕಂಡು ಶತಮಖಪುಣ್ಯಾರ್ಜನೋನ್ಮುಖನಭಿಮುಖನಾಗಿ

ದೇವೇಂದ್ರನು ತನ್ನ ಸಂಗೀತ ಮೇಳದೊಡನೆ ಸಂತೋಷದಿಂದ ನರ್ತಿಸಿದನು. ೭೭. ಮಾಡಬೇಕಾದನ್ನು ಮಾಡಿ, ಅರಿಯಬೇಕಾದುದನ್ನು ಅರಿತು, ಸಾಧಿಸಬೇಕಾದುದನ್ನು ಸಾಧಿಸಿಕೊಂಡವನು ಎಂಬ ಶ್ರೇಷ್ಠತೆಯಿಂದ ಈ ಮೊದಲು ನೆರವೇರಿಸಿದ ಮಹಾತಪಸ್ಸು ಹಾಗು ಗಳಿಸಿದ ಜ್ಞಾನಸಮೃದ್ಧಿ, ಈಗ ಪಡೆದುಕೊಂಡ ಶಾಶ್ವತಪದವಿ–ಚಂದ್ರಪ್ರಭನ ಉನ್ನತಿಯುನ್ನು ತಿಳಿಸಲು ಇವು ಸಾಲವೆ ? ಇನ್ನೂ ಆತನಿಗೆ ಉನ್ನತಿಯಾಗಲಿದೆಯೆಂದು ಜಿನೇಂದ್ರನ ಮಹಿಮೆಗೆ ಇಂದ್ರನು ಬೆರಗುಗೊಂಡನು. ಮತ್ತು–೭೮. ಮಂದಾರ ಪುಷ್ಪಧಾರೆಗಳಿಂದ ಪರಿವೃತನಾಗಿ, ದಿವ್ಯವಾಣಿಯ ಪ್ರಭೆಯಿಂದ ಆಕಾಶವನ್ನೆಲ್ಲ ತುಂಬಿರಲಾಗಿ, ನಿರ್ಮಲ ಜ್ಞಾನಾಮೃತದಿಂದ ತುಂಬಿದ ಅಂತರಂಗವುಳ್ಳವನೂ, ಅಹಂಕಾರದ ಅಂಧಕಾರವನ್ನು ತೊಲಗಿಸಿದವನೂ, ಭೂಮಂಡಲವೆಂಬ ಕನ್ನೈದಿಲೆಗಳಿಗೆಲ್ಲ ಆಹ್ಲಾದವನ್ನು ಒದಗಿಸುವವನೂ ಆದ ಚಂದ್ರಪ್ರಭಜಿನೇಶ್ವರನು ನಮ್ಮ ಹೃದಯಚಕೋರಕ್ಕೆ ತನ್ನ ಪರಮಪೂಜ್ಯ ಪಾದಗಳ ಸೇವೋತ್ಸವವನ್ನು ಅನುಗ್ರಹಿಸಲಿ. ವ॥ ಎಂದು ಬಳಿಕ ಗಣಧರ ಪಾದಕಮಲಗಳನ್ನು ವಂದನಾರ್ಚನಾವಿಧಿಯಿಂದ ಆರಾಧಿಸಿ, ಪವಿತ್ರ ತೀರ್ಥವಾದ ಸಮ್ಮೇದಗಿರಿಯನ್ನು ಪ್ರದಕ್ಷಿಣೆ ಮಾಡಿ ಹೋಗುವ ಸಮಯದಲ್ಲಿ ಅರ್ಹಂತಾಗಮದಿಂದ ಅರಿತು ಅವಸರ್ಪಣದ ಕೊನೆಯ ಕಾಲದಲ್ಲಾಗುವ ತೀರ್ಥಂಕರರ ವಿಗ್ರಹಗಳನ್ನು ಅವರವರ ಬಣ್ಣ ಉತ್ತರ ಲಕ್ಷಣಾನುಸಾರವಾಗಿ ರತ್ನಮಯವಾಗಿ ಈ ಮುಂಚೆಯೆ ಭರತ ಹಾಗು ಸಗರ ಚಕ್ರವರ್ತಿಗಳು ಮಾಡಿಸಿ ಆ ಪರ್ವತದ ಸಾನುಪ್ರದೇಶದ ಚೈತ್ಯಾಗ್ರಗಳಲ್ಲಿ ಪ್ರಸ್ಥಾಪಿಸಿರುವುದನ್ನು ನೆನೆದು, ಅಲ್ಲಿ ಹೋಗಿ ಅವುಗಳನೆಲ್ಲ ಕಂಡು ಇಂದ್ರನು

॥ಶ್ಲೋಕಂ॥

ಶ್ರೀನಿಕೇತಾಯಿತಾತ್ಮಾಂಘ್ರಿನೀರಜಂ ನೀರಜೋವ್ರಜಂ ।
ಆದ್ಯಂತಶೂನ್ಯಮಾದ್ಯಂತಂ ವಂದೇಹಂ ವೃಷಭಂ ವಿಭುಂ ॥ ೧

ಅಜಿತಂ ವಿಜಿತಾಶೇಷವೃಜಿನಂ ಜಿನಪಂ ಸ್ತುವೇ ।
ದ್ವಿತೀಯಮದ್ವಿತೀಯೋರು ವಿಭವಂ ವಿಭವಶ್ರಿಯೇ ॥ ೨

ಸಂಭವಂ ನಿರ್ಜಿತಸ್ವಾಂತಸಂಭವಂ ಭುವನಾಧಿಪಂ ।
ತೃತೀಯಂ ನೌಮಿ ನೌರೂಪಂ ಭವ್ಯಾನಾಂ ಭವವಾರಿಧೌ ॥ ೩

ಅಭಿನಂದಿನತಾನಂದಮಭಿನಂದೇಭಿನಂದನಂ ॥
ಚತುರ್ಥಂ ತೀರ್ಥನಾಥಾನಾಂ ಮನ್ಮಥೋತ್ಸೇಕಮಾಥಿನಾಂ ॥ ೪

ಸುಮತಿಂ ಸುಮತಿಂ ತ್ಯಕ್ತ್ವಾಪ್ರವ್ರಜ್ಯಾರಾಜ್ಯಮಾಶ್ರಿತಂ ।
ಪಂಚಮಂ ಗತಿಮುದ್ದಿಶ್ಯ ಪಂಚಮಂ ಸೌಮ್ಯಪಂಚಮಂ ॥ ೫

ಸಪ್ರಭಾವಂ ಸ್ತುವೇ ದೇವಂ ಪದ್ಮಪ್ರಭಮುರುಪ್ರಭಂ ।
ಅಶ್ರಾಂತಶಾಂತಿಶಾರೀರವಂಸೌಪಷ್ಮಮಿಷ್ಟದಂ ॥ ೬

ಸುಪಾರ್ಶ್ವಂ ಪದಪಾರ್ಶ್ವಸ್ಥ ಸೇವಾಗತಸುರಾಧಿಪಂ ।
ಸಪ್ತಮಂ ಲುಪ್ತಸಂಸಾರಂ ನಮಾಮ್ಯುದ್ಧೃಪ್ತಸದ್ಗುಣಂ ॥ ೭

ಪುಣ್ಯಸಂಪಾದನಾರ್ಥವಾಗಿ (ಹೀಗೆ ಪ್ರಾರ್ಥಿಸಿದನು)–ಶ್ಲೋಕ ೧. ತನ್ನ ಪಾದ ಕಮಲಗಳಲ್ಲಿ ಲಕ್ಷ್ಮಿಗೆ ಆಶ್ರಯ ನೀಡಿದವನೂ, ರಜೋರಹಿತನೂ, ಆದಿ–ಅಂತಗಳಿಲ್ಲದವನೂ, ಆದಿ ತೀಥಂಕರನೂ ಆದ ವೃಷಭನನ್ನು ವಂದಿಸುತ್ತೇನೆ. ೨. ಸಮಸ್ತ ಪಾಪಗಳನ್ನು ಗೆದ್ದು ನಾಶಮಾಡಿದವನೂ, ಅದ್ವಿತೀಯ ವೈಭವ ಶಾಲಿಯೂ, ದ್ವಿತೀಯ ತೀರ್ಥಂಕರನೂ ಆದ ಅಜಿತನಾಥನಿಗೆ ನನ್ನ ನಮಸ್ಕಾರ. ೩. ಸಂಸಾರಸಾಗರದಲ್ಲಿ ಭವ್ಯರಿಗೆ ನೌಕೆಯಾದವನೂ, ಮನ್ಮಥನನ್ನು ಗೆದ್ದವನೂ, ಭುವನೇಶ್ವರನೂ ಆದ ಮೂರನೆಯ ತೀರ್ಥಂಕರ ಸಂಭವನಿಗೆ ನಮಸ್ಕರಿಸುತ್ತೇನೆ. ೪. ಶರಣಾಗತರಿಗೆ ಆನಂದದಾಯಕನೂ, ಮನ್ಮಥನ ಗರ್ವಸಂಹಾರಮಾಡಿದವನೂ ಆದ ನಾಲ್ಕನೆಯ ತೀರ್ಥಂಕರ ಅಭಿನಂದನನನ್ನು ನಾನು ಅಭಿನಂದಿಸುತ್ತೇನೆ. ರಾಜ್ಯವನ್ನು ತೊರೆದು, ವೈರಾಗ್ಯ ಸಾಮ್ರಾಜ್ಯವನ್ನು ಪಡೆದವನೂ, ಸನ್ಮತಿಯೂ, ಅಮರನೂ ಆದ ಐದನೆಯ ತೀರ್ಥಂಕರ ಸುಮತಿಗೆ ತಲೆಬಾಗುತ್ತೇನೆ. ೬. ಮಹಾಪ್ರಭೆಯುಳ್ಳವನೂ, ಪ್ರಭಾವಶಾಲಿಯೂ, ಅಪ್ರತಿಮವಾದ ರೂಪ ವುಳ್ಳವನೂ ಸದಾಶಾಂತನೂ ಆದ ಆರನೆಯ ತೀರ್ಥಂಕರ ಪದ್ಮಪ್ರಭನನ್ನು ಸ್ತುತಿಸುತ್ತೇನೆ. ೭. ಇಂದ್ರನಿಂದ ಪಾದಪೂಜೆಗೊಂಡವನೂ, ಸಂಸಾರಮುಕ್ತನೂ, ಮಹಾಸದ್ಗುಣ ಸಂಪನ್ನನೂ ಆದ ಏಳನೆಯ ತೀರ್ಥಂಕರ ಸುಪಾರ್ಶ್ವನಿಗೆ

ಅಷ್ಟಮೀಂ ಪೃಥಿವೀಂ ವೇಷ್ಟುಮಿಚ್ಛುರ್ವಂದೇಹಮಷ್ಟಮಂ ।
ಚಂದ್ರಪ್ರಭಂ ಪ್ರಭೂತಾಷ್ಟಪ್ರಾತಿಹಾರ್ಯಮನೋಹರಂ ॥ ೮

ಪುಷ್ಪದಂತಮಘಧ್ವಾಂತಪುಷ್ಪವಂತಂ ಸ್ತುವೇಭವಂ ।
ನವಮಂ ನವಮಂದಾರಸ್ಮೇರಪ್ರಸವವರ್ಷಿಣಂ ॥ ೯

ಚತುರ್ಗತಿಭ್ರಮಾಯಸ್ತಜನಶೀತಳವಾಙ್ಮಯಂ ।
ಶೀತಳಂ ನೌಮಿ ದಶಮಂ ಸಶಮಂ ಶಮನಾಪಹಂ ॥ ೧೦

ಶ್ರೇಯೋಜಿನಂ ಜನಶ್ರೇಯಃಪ್ರದಮಕ್ಷಯಸಂಪದಂ ।
ಏಕಾದಶಂ ಸಮಾರೂಢಾಶೇಷಪುಣ್ಯದಶಂ ಸ್ತುವೇ ॥ ೧೧

ವಾಸವಾಕಲ್ಪಿತಾಕ್ಷೂಣನಿಜಕಲ್ಯಾಣಪಂಚಕಂ ।
ವಾಸುಪೂಜ್ಯಂ ಜಗಜ್ಜ್ಯೇಷ್ಠಂ ವಂದೇಹು ದ್ವಾದಶಂ ವೃಷಂ ॥ ೧೨

ವಿಮಲಂ ವಿಮಲಜ್ಞಾನಭಾನೋದಯಮಹಾಚಲಂ ।
ನೌಮಿ ತ್ರಯೋದಶಂ ಲೋಕತ್ರಯರಕ್ಷಕಮಕ್ಷಯಂ ॥ ೧೩

ಅನಂತಂ ಸಹಜಾನಂತಚತುಷ್ಟಯವಿರಾಜಿತಂ ।
ಅನೇಕಾಂತರಮಾಕಾಂತಂ ನಮಾಮೀಶಂ ಚತುರ್ದಶಂ ॥ ೧೪

ನಮಿಸುತ್ತೇನೆ. ೮. ಅಷ್ಟಪ್ರಾತಿಹಾರ್ಯಗಳಿಂದ ಮನೋಹರನಾದ ಎಂಟನೆಯ ತೀರ್ಥಂಕರ ಚಂದ್ರಪ್ರಭನನ್ನು ಅಷ್ಟಮಭೂಮಿಯನ್ನು ದಯಪಾಲಿಸೆಂದು ಬೇಡಿಕೊಂಡು ನಾನು ವಂದಿಸುತ್ತೇನೆ. ೯. ಪಾಪಸಂಚಯವೆಂಬ ಅಂಧಕಾರಕ್ಕೆ ಸೂರ್ಯಸ್ವರೂಪನಾದವನೂ, ನವಮಂದಾರ ಪುಷ್ಪಗಳಂತಹ ಪ್ರಸನ್ನಹಾಸವುಳ್ಳವನೂ ಆದ ಒಂಬತ್ತನೆಯ ತೀರ್ಥನಾಥ ಪುಷ್ಪದಂತನನ್ನು ನಾನು ಸ್ತುತಿಸುತ್ತೇನೆ. ೧೦. ಚತುರ್ಗತಿಗಳಲ್ಲಿ ಸುತ್ತಿ ಬಳಲಿದವರಿಗೆ ತನ್ನ ವಾಣಿಯಿಂದ ತಂಪನ್ನೊದಗಿಸಿದವನೂ, ಶಾಂತಸ್ವರೂಪನೂ, ಮೃತ್ಯುನಾಶಕನೂ ಆದ ಹತ್ತನೆಯ ತೀರ್ಥೇಶ ಶೀತಲನಿಗೆ ನಮಿಸುತ್ತೇನೆ. ೧೧. ಸಮಸ್ತ ಪುಣ್ಯದಶಾವಂತನೂ, ಅಕ್ಷಯವಾದ ಶ್ರೇಯವನ್ನು ಅನುಗ್ರಹಿಸುವವನೂ ಆದ ಹನ್ನೊಂದನೆಯ ಜಿನಪತಿ ಶ್ರೇಯೋಜಿನನನ್ನು ಸ್ತುತಿಸುತ್ತೇನೆ. ೧೨. ದೇವೇಂದ್ರನಿಂದ ಅನೂನವಾದ ಐದೂ ಕಲ್ಯಾಣಗಳನ್ನು ಮಾಡಿಸಿಕೊಂಡವನೂ, ಲೋಕಗಳಿಗೆಲ್ಲ ಹಿರಿಯನೂ ಆದ ಹನ್ನೆರಡನೆಯ ಜಿನೇಶ್ವರ ವಾಸುಪೂಜ್ಯನನ್ನು ವಂದಿಸುತ್ತೇನೆ. ೧೩. ನಿರ್ಮಲಜ್ಞಾನವೆಂಬ ಸೂರ್ಯೋ ದಯಕ್ಕೆ ಉದಯಗಿರಿಯೆನಿಸಿದವನೂ, ಅಕ್ಷಯನೂ, ತ್ರಿಲೋಕರಕ್ಷಕನೂ ಆದ ಹದಿಮೂರನೆಯ ತೀರ್ಥಂಕರ ವಿಮಲನಿಗೆ ತಲೆಬಾಗುತ್ತೇನೆ. ೧೪. ಸ್ಯಾದ್ವಾದ ಲಕ್ಷ್ಮಿಗೆ ಒಡೆಯನೂ ಅನಂತ ಚತುಷ್ಟಯದಿಂದ ಶೋಭಿಸುವವನೂ ಆದ ಹದಿನಾಲ್ಕನೆಯ ತೀರ್ಥಂಕರ ಅನಂತನಾಥನಿಗೆ ನಮಸ್ಕರಿಸು

ಧರ್ಮಂ ಧರ್ಮಾಮೃತಾಸಾರಪರ್ಜನ್ಯಂ ನಿರ್ಜಿತೈನಸಂ ।
ವಂದೇ ಪಂಚದಶಂ ಚಂಚತ್ಪಂಚಮಜ್ಞಾನಸಂಚಿತಂ ॥ ೧೫

ಷೋಡಶಂ ತೀರ್ಥನಾಥಾನಾಂ ಪಂಚಮಂ ಚಕ್ರವರ್ತಿನಾಂ ।
ಅಗಣ್ಯಪುಣ್ಯಶಾಂತೀಶಂ ವಂದೇಹಮಘಶಾಂತಯೇ ॥ ೧೬

ಕುಂಥುಂ ಕುಂಥ್ವಾದಿಸತ್ವಾನಾಂ ದಯೈಕಮಯವರ್ತನಂ ।
ನೌಮಿ ಸಪ್ತದಶಂ ಪ್ರಾಪ್ತಪರಮಸ್ಥಾನಸಪ್ತಕಂ ॥ ೧೭

ನೌಮಿ ಪಂಚಶರೋಗ್ರಾರಿರಾರುಮರಮವ್ಯಯಂ ।
ಅಷ್ಟಾದಶಂ ವಿನಿರ್ಮುಕ್ತತತ್ಸಂಖ್ಯಾದೋಷದೂಷಣಂ ॥ ೧೮

ಮಲ್ಲಿಂ ವಿದ್ರಾವಿತಾನಂಗಮಲ್ಲಂ ತಲ್ಲಂ ದಯಾಂಭಸಂ ।
ಏಕೋನವಿಂಶಂ ತೀರ್ಥೇಶಂ ಸ್ತುವೇ ಭಕ್ತ್ಯಾತಿಶಕ್ತಯಾ ॥ ೧೯

ಸುವ್ರತಂ ಮೋಕ್ಷಸೌಧಾಗ್ರನಿಶ್ರೇಣೀಕೃತಸುವ್ರತಂ ।
ವಿಂಶಂ ತೀರ್ಥಕರಂ ವಂದೇ ದಯಾರಸಜಲಾಕರಂ ॥ ೨೦

ನಮಿಂ ನಮಿತದೇವೇಂದ್ರಂ ನೌಮಿ ನಿತ್ಯಂ ನಿರತ್ಯಯಂ ।
ಏಕವಿಂಶಂ ಗಳದ್ರಾಗಂ ಜನ್ಮವಾರಾಶಿವಾರಗಂ ॥ ೨೧

ತ್ತೇನೆ. ೧೫. ಕೇವಲಜ್ಞಾನ ಸಂಪನ್ನನೂ, ಪಾಪವನ್ನೆಲ್ಲ ಗೆದ್ದವನೂ, ಧರ್ಮಾಮೃತವನ್ನು ಮಳೆಗರೆಯುವವನೂ ಎನಿಸಿದ ಹದಿನೈದನೆಯ ತೀರ್ಥೇಶ ಧರ್ಮನಾಥನನ್ನು ವಂದಿಸುತ್ತೇನೆ. ೧೬. ಚಕ್ರವರ್ತಿಗಳಲ್ಲಿ ಐದನೆಯವನೂ, ತೀರ್ಥನಾಥರಲ್ಲಿ ಹದಿನಾರನೆಯವನೂ, ನಿಸ್ಸೀಮ ಪುಣ್ಯವಂತನೂ ಆದ ಶಾಂತೀಶ್ವರನನ್ನು ಪಾಪಶಾಂತಿಗಾಗಿ ವಂದಿಸುತ್ತೇನೆ. ೧೭. ಕುಂಥುವೆಂಬ ಕೀಟವೆ ಮೊದಲಾದ ಸಮಸ್ತ ಜೀವಗಳನ್ನು ಕೇವಲ ದಯೆಯಿಂದ ನೋಡಿಕೊಂಡವನೂ, ಪರಮಪದವನ್ನು ಪಡೆದುಕೊಂಡವನೂ ಆದ ಹದಿನೇಳನೆಯ ತೀರ್ಥನಾಥನಿಗೆ ನಾನು ನಮಿಸುತ್ತೇನೆ. ೧೮. ಮನ್ಮಥನೆಂಬ ಶತ್ರುವಿಗೆ ಮಹಾ ವಿಪತ್ಕಾರಕನೂ, ಅವ್ಯಯನೂ, ಹದಿನೆಂಟು ದೋಷಗಳಿಂದ ಮುಕ್ತನಾದವನೂ ಆದ ಹದಿನೆಂಟನೆಯ ತೀರ್ಥಂಕರ ಅರಸ್ವಾಮಿಗೆ ನಮಸ್ಕರಿಸುತ್ತೇನೆ. ೧೯. ಕಾಮನೆಂಬ ಮಲ್ಲನನ್ನು ಹೊಡೆದೋಡಿಸಿದವನೂ, ದಯಾರಸ ಸರೋವರನೂ ಆದ ಹತ್ತೊಂಬತ್ತನೆಯ ತೀರ್ಥಪತಿ ಮಲ್ಲಿನಾಥನನ್ನು ಭಕ್ತಿಪೂರ್ವಕವಾಗಿ ಸ್ತುತಿಸುತ್ತೇನೆ. ೨೦. ದಯಾರಸ ಸಮುದ್ರನೂ, ಮೋಕ್ಷಸೌಧಕ್ಕೆ ಏರುವ ಸೋಪಾನವಾರ್ಗವಾದ ಸದ್ವ್ರತಗಳನ್ನು ನಿಯಮಿಸಿದವನೂ ಆದ ಇಪ್ಪತ್ತನೆಯ ತೀರ್ಥಂಕರ ಸುವ್ರತನನ್ನು ವಂದಿಸುತ್ತೇನೆ. ೨೧. ರಾಗರಹಿತನೂ, ಜನ್ಮಸಾಗರವನ್ನು ದಾಟಿದವನೂ, ನಿತ್ಯನೂ, ನಿರುತನೂ, ದೇವೇಂದ್ರಪೂಜ್ಯನೂ ಆದ ಇಪ್ಪತ್ತೊಂದನೆಯ ಜಿನೇಶ ನಮಿಗೆ ನಮ

ಧರ್ಮಚಕ್ರದೃಢಾಯತ್ತನೇಮಿಂ ನೇಮಿಂ ನಮಾಮ್ಯಹಂ ।
ದ್ವಾವಿಂಶತಿತಮಂ ಧ್ವಸ್ತದ್ವಾವಿಂಶತಿಪರೀಷಹಂ ॥ ೨೨

ದುಷ್ಕರ್ಮಕರ್ಮಠಕ್ರೂರಕಮಠಾಶ್ಚರ್ಯಧೈರ್ಯಕಂ ।
ಪಾರ್ಶ್ವೇಶ್ವರಂ ತ್ರಯೋವಿಂಶತಮಂ ಸ್ತೌಮೀಶಸತ್ತಮಂ ॥ ೨೩

ಚತುರ್ವಿಂಶಂ ಜಿನಂ ಜನ್ಮಸಿಂಧುಸೇತೂಕೃತವ್ರತಂ ।
ವರ್ಧಮಾನಮಧಿಜ್ಞಾನವೃದ್ಧಂ ವಂದೇ ಸಮೃದ್ಧಯೇ ॥ ೨೪

॥ವಸಂತತಿಲಕಂ॥

ಪುಣ್ಯಾಮೃತಸ್ತವನಮಗ್ಗಳಸೂರಿಸೂಕ್ತ
ಮತ್ಯಂತಭಕ್ತಿಪರತಂತ್ರಧಿಯಾ ಪಠೇದ್ಯಃ ।
ಸಪ್ರಾಪ್ನು ಯಾದನಘತೀರ್ಥಕೃತಾಂ ಪ್ರಸಾದಾ
ದಾಮುತ್ರಿಕಂ ಚ ಸುಖಮೀಹಿತಮೈಹಿಕಂ ಚ ॥ ೭೯

ಅಂತತ್ಯಂತಭಕ್ತಿಯಿಂ ಸ್ತುತಿಯಿಸಿ ಮತ್ತಮಿಂತೆಂದಂ :–

ಘನಕೈಲಾಸದೊಳತ್ಯುದಾತ್ತವೆನಿಪೀ ಸಮ್ಮೇದದೊಳ್ ಚಂಪೆಯೊಳ್ ।
ವನಲೀಲಾಮಿಳಿತೋರ್ಜಯಂತಗಿರಿಯೊಳ್ ತತ್ಪಾವೆಯೊಳ್ ಧಾತ್ರಿ ಜೇ ॥
ಯೆನೆ ನಿರ್ವಾಣಪದಕ್ಕೆ ಸಂದ ಸಲಲಿರ್ದಾವಿಶ್ವತೀರ್ಥೇಶರೀ ।
ಗನಘರ್ ಭವ್ಯಜನಕ್ಕೆ ಮಂಗಳಮಹಾಶ್ರೀಯಂ ನಿಜಶ್ರೀಯುಮಂ ॥ ೮೦

ಸ್ಕರಿಸುತ್ತೇನೆ. ೨೨. ಧರ್ಮಚಕ್ರವನ್ನು ದೃಢಪಡಿಸಿದವನೂ, ಇಪ್ಪತ್ತೆರಡು ಪರೀಷಹಗಳನ್ನು ಧ್ವಂಸಗೊಳಿಸಿದವನೂ ಆದ ಇಪ್ಪತ್ತೆರಡನೆಯ ತೀರ್ಥನಾಥ ನೇಮಿನಾಥನಿಗೆ ತಲೆಬಾಗುತ್ತೇನೆ. ೨೩. ದುಷ್ಕರ್ಮನಿಪುಣನಾದ ಕಮಠನೆಂಬ ಕ್ರೂರ ವ್ಯಂತರನ ಉಪಸರ್ಗಗಳನ್ನು ಅತ್ಯಂತ ವಿಸ್ಮಯಕರವಾದ ಧೈರ್ಯದಿಂದ ಸಹಿಸಿಕೊಂಡವನೂ, ದೇವ ದೇವೇಶ್ವರನೂ ಆದ ಇಪ್ಪತ್ತುಮೂರನೆಯ ತೀರ್ಥಂಕರ ಪಾರ್ಶ್ವನಾಥನನ್ನು ಸ್ತುತಿಸುತ್ತೇನೆ. ೨೪. ಜನ್ಮಸಾಗರವನ್ನು ದಾಟಲು ವ್ರತದ ಸೇತುವೆಯನ್ನು ನಿರ್ಮಿಸಿದವನೂ, ಜ್ಞಾನವೃದ್ಧನೂ ಆದ ಇಪ್ಪತ್ತುನಾಲ್ಕನೆಯ ತೀರ್ಥಂಕರ ವರ್ಧಮಾನನಿಗೆ ಸಮೃದ್ಧಿಯನ್ನು ಅನುಗ್ರಹಿಸೆಂದು ವಂದಿಸುತ್ತೇನೆ. ೭೯. ಅಗ್ಗಳ ಪಂಡಿತನು ಸೂಕ್ತವಾಗಿ ರಚಿಸಿದ ಈ ಪುಣ್ಯಾಮೃತಸ್ತೋತ್ರವನ್ನು ಯಾರು ಅತ್ಯಂತ ಭಕ್ತಿಪರವಶರಾಗಿ ಪಠಿಸುವರೋ ಅವರಿಗೆ ನಿರ್ಮಲ ತೀರ್ಥಂಕರರ ಅನುಗ್ರಹದಿಂದ ಐಹಿಕ ಸುಖವೂ, ಪಾರಲೌಕಿಕ ಸೌಖ್ಯವೂ ದೊರಕುವುವು. ವ॥ ಹೀಗೆ ಅತ್ಯಂತ ಭಕ್ತಿಯಿಂದ ಸ್ತೋತ್ರಮಾಡಿ ಮತ್ತೆ ಹೀಗೆಂದನು– ೮೦ "ಘನವಾದ ಕೈಲಾಸದಲ್ಲಿ, ಉದಾತ್ತವೆನಿಸಿದ ಈ ಸಮ್ಮೇದಗಿರಿಯಲ್ಲಿ, ಚಂಪೆಯಲ್ಲಿ, ವನಶೋಭೆಯುಳ್ಳ ಊರ್ಜಯಂತ ಪರ್ವತದಲ್ಲಿ ಪ್ರಸಿದ್ಧವಾದ ಪಾವೆಯಲ್ಲಿ ಲೋಕವೆಲ್ಲ ಹೊಗಳುವಂತೆ ನಿರ್ವಾಣಪದವನ್ನು ಈಗಾಗಲೆ ಹೊಂದಿದ ಹಾಗು ಇನ್ನು ಮೇಲೆ ಹೊಂದಲಿರುವ ಸರ್ವತೀರ್ಥೇಶ್ವರರು ಭವ್ಯಜನರಿಗೆ ಮಂಗಳ ಮಹಾಶ್ರೀಯನ್ನು ಅನುಗ್ರಹಿಸಲಿ,

ಎಂದು ಸಕಳಾಮರೇಂದ್ರ ಬೃಂದಮಮಂ ನಿಜಮಂದಿರಕ್ಕೆ ಪೋಗಲ್ವೇಟ್ಟು

ಕ್ರಮದಿಂ ನಿರ್ವಾಣಕಲ್ಯಾಣಮನೊಡರಿಸಿದಂ ಶ್ರೀಜಿನಸ್ತೋತ್ರಕಲ್ಪ ।
ದ್ರುಮಮೆಯ್ದಿತ್ತೆಯ್ದೆ ಸಾಫಲ್ಯಮನಭಿಮತಸಂಸಿದ್ಧಿಯಂ ಪೆತ್ತೆನಿಂದೆಂ ॥
ದಮಳಂಸದ್ಧರ್ಮಶೀಳಂ ವಿಬುಧಪತಿ ಸಮಂತಗ್ಗಳಂ ಪೆರ್ಚಿ ರಾಗಂ ।
ಸುಮನೋಲೋಕಕ್ಕೆ ಸಂದಂ ಸುಲಲಿತಕವಿತಾನರ್ತಕೀನೃತ್ಯರಂಗಂ ॥ ೮೧

ಪ್ರಮುದಿತಭವ್ಯಮಂ ಸುಕವಿಸಂಕುಳಸೇವ್ಯಮನಾಪ್ತ ತತ್ವವಿ ।
ತ್ಸಮುದಯಭಾವ್ಯಮಂ ಸಕಳಸತ್ಕೃತಿನವ್ಯಮನೀಜಿನಾನ್ವಯ ॥
ಕ್ರಮಯುತಕಾವ್ಯಮಂ ನೆಱಿಯೆ ನಿರ್ಮಿಸಿ ನಿರ್ಮಳಭಕ್ತಿಭಾವದಿಂ ।
ದಮಳಿನಕೀರ್ತಿಗಂ ಸುಕೃತಪೂರ್ತಿಗಮಗ್ಗಳನಂತು ನೋಂತರಾರ್ ॥ ೮೨

ಚಂದ್ರಪ್ರಭಚರಿತಮನಾ ।
ಚಂದ್ರಾರ್ಕಸ್ಥಾಯಿಯಿಂತಿದೆನೆ ಪೇೞ್ದು ಶರ ॥
ಚ್ಚಂದ್ರೋಜ್ವಳಕೀರ್ತಿಗೆ ಸುಕ ।
ವೀಂದ್ರಂ ನೆಲೆಯಾದನಾದಮಗ್ಗಳದೇವಂ ॥ ೮೩

ಆ ತ್ರಿಭುವನೈಕಗುರುವ ಚ ।
ರಿತ್ರಾಬ್ಧಿಯ ಪಾರಮೆಯ್ದಿದಂ ಸ್ವೀಕೃತರ ॥
ತ್ನತ್ರಿತಯನಗ್ಗಳ ಸಾಂ ।
ಯಾತ್ರಿಕನೆನೆ ಸಂದ ಮತಿಬಹಿತ್ರದ ಬಲದಿಂ ॥ ೮೪

ಹೀಗೆಂದು ಹಾರೈಸಿ ಸರ್ವದೇವತಾಸಮೂಹವನ್ನು ಅವರವರ ನಿವಾಸಗಳಿಗೆ ಹೋಗ ಹೇಳಿ–೮೧. ಕ್ರಮದಿಂದ ನಿರ್ವಾಣ ಕಲ್ಯಾಣವನ್ನು ನೆರವೇರಿಸಿದನು. "ಶ್ರೀ ಜಿನನ ಸ್ತೋತ್ರವೆಂಬ ಕಲ್ಪವೃಕ್ಷವು ಇಂದು ಫಲಿತವಾಯಿತು; ನನ್ನ ಮನೋರಥ ಇಂದು ಸಿದ್ಧಿಸಿತು" ಎಂದು ನಿರ್ಮಲನೂ, ಸದ್ಧರ್ಮಶೀಲನೂ ಆದ ದೇವೇಂದ್ರನು ಅತಿಶಯವಾದ ಆನಂದದಿಂದ ತನ್ನ ದೇವಲೋಕಕ್ಕೆ ಹೋದನು. ೮೨. ಭವ್ಯಜನಕ್ಕೆ ಆನಂದಕರವೂ, ಸತ್ಕವಿ ಸಮೂಹಕ್ಕೆ ಪ್ರಿಯಕರವೂ, ಆತ್ಮತತ್ವ ಜ್ಞಾನಿಗಳಿಗೆ ಆದರಣೀಯವೂ ಸಕಲ ಸತ್ಕಾವ್ಯಗಳಲ್ಲಿ ನವೀನವೂ ಎನಿಸಿದ ಈ ಜಿನೇಶ್ವರಚರಿತ್ರೆಯ ಕ್ರಮಯುಕ್ತ ಕಾವ್ಯವನ್ನು ನಿರ್ಮಲವಾದ ಭಕ್ತಿಯಿಂದ ರಚಿಸಿ, ಇಂತಹ ಪುಣ್ಯಕೃತಿ ಪೂರ್ಣತೆಗೂ ನಿರ್ಮಲವಾದ ಕೀರ್ತಿಗೂ ಅಗ್ಗಳನಂತೆ (ಭಾಗ್ಯವನ್ನು) ಪಡೆದು ಬಂದವರು ಯಾರು ? ೮೩. ಆ ಚಂದ್ರ ಸೂರ್ಯ ಸ್ಥಾಯಿಯಾದ ಈ ಚಂದ್ರಪ್ರಭ ಚರಿತ್ರೆಯನ್ನು ರಚಿಸಿ ಶರಚ್ಚಂದ್ರನಂತೆ ಉಜ್ವಲವಾದ ಕೀರ್ತಿಗೆ ಸುಕವೀಂದ್ರನಾದ ಅಗ್ಗಳದೇವನು ನೆಲೆಯಾದನು. ೮೪. ರತ್ನತ್ರಯಗಳನ್ನು ಸ್ವೀಕರಿಸಿದ ಅಗ್ಗಳನು ಮತಿಯೆಂಬ ನೌಕೆಯ ಬಲದಿಂದ ಆ

ಅಸಹಾಯತೆಯಿಂ ಸಂಸಾ ।
ರಸಮುದ್ರಮನೀಸಿದಂ ಶಶಿಪ್ರಭನೆಂತಂ ॥
ತಸಹಾಯತೆಯಿಂ ತಚ್ಚರಿ ।
ತಸಮುದ್ರಮನಿಸಿ ಜಸಮನಗ್ಗಳನಾಂತಂ॥ ೮೫

ಪರಮೇಶ್ವರಕೀರ್ತಿಸುಧಾ ।
ಕರಬಿಂಬದೊಳಮರ್ದು ತೋರ್ಪ ಷೋಡಶಕಲೆಯೊಳ್ ॥
ದೊರೆಯಾದುವು ಚಂದ್ರಪ್ರಭ ।
ಪುರಾಣದೊಳ್ ನೆಗಟ್ದಿ ಷೋಡಶಾಶ್ವಾಸಂಗಳ್ ॥ ೮೬

ಏಕಾದಶಶತಮಂ ಮ ।
ತ್ತೇಕಾದಶಮಾಗೆ ಶಕನೃಪಾಬ್ದಂಸೌಮ್ಯ ॥
ಪ್ರಾಕಟವರ್ಷದ ಚೈತ್ರಸಿ ।
ತೈಕಾದಶಿಯಂದು ನೆಗಟ್ದುದೀ ಕೃತಿರತ್ನಂ ॥ ೮೭

॥ ಗದ್ಯಂ ॥

ಇದು ಪರಮಪುರುನ್ನಾಥಕುಳಕುಭೃತ್ಸಮುದ್ಭೂತಪ್ರವಚನಸರಿತ್ಸರಿನ್ನಾಥ
ಶ್ರುತಕೀರ್ತಿತ್ರೈವಿದ್ಯ ಚಕ್ರವರ್ತಿ ಪದಪದ್ಮನಿಧಾನದೀಪವರ್ತಿ

**ಶ್ರೀಮದಗ್ಗಳದೇವ**

ವಿರಚಿತಮಪ್ಪ

**ಚಂದ್ರಪ್ರಭಪುರಾಣದೋಳ್**

ನಿರ್ವಾಣಕಲ್ಯಾಣವರ್ಣನಂ

ಷೋಡಶಾಶ್ವಾಸಂ .

ಚಂದ್ರಪ್ರಭಪುರಾಣಂ ಸಮಾಪ್ತಂ.

ತ್ರಿಲೋಕ ಗುರುವಿನ ಚರಿತ್ರೆಯೆಂಬ ಸಮುದ್ರವನ್ನು ಸಮಗ್ರವಾಗಿ ದಾಟಿದನು. ೮೫. ಯಾರ ಸಹಾಯವನ್ನೂ ಬಯಸದೆ ಚಂದ್ರಪ್ರಭನು ಹೇಗೆ ಸಂಸಾರಸಮುದ್ರವನ್ನು ಈಸಿ ಪಾರುಗಂಡನೊ ಹಾಗೆ ಅಸಹಾಯ ಕವಿಯಾಗಿ ಅಗ್ಗಳನು ಆತನ ಚರಿತ್ರ ಸಮುದ್ರವನ್ನು ಈಸಿ ಯಶಸ್ಸನ್ನು ಗಳಿಸಿದನು. ೮೬. ಪರಮೇಶ್ವರನ ಕೀರ್ತಿಯೆಂಬ ಚಂದ್ರಬಿಂಬದಲ್ಲಿ ಅಳವಟ್ಟ ಹದಿನಾರು ಕಲೆಗಳಿಗೆ ಚಂದ್ರಪ್ರಭ ಪುರಾಣದ ಹದಿನಾರು ಆಶ್ವಾಸಗಳು ಸಮಾನವಾದುವು. ೮೭. ಶಕವರ್ಷ ಹನ್ನೊಂದು ನೂರ ಹನ್ನೊಂದರ ಸೌಮ್ಯ ಸಂವತ್ಸರದ ಚೈತ್ರ ಶುದ್ಧ ಏಕಾಕಶಿಯಂದು ಈ ಕೃತಿ ರತ್ನವು ಪೂರ್ಣಗೊಂಡಿತು.

**ಹದಿನಾರನೆಯ ಆಶ್ವಾಸ ಮುಗಿದುದು**

**ಚಂದ್ರಪ್ರಭಪುರಾಣಂ ಪೂರ್ಣವಾಯಿತು.**

# ಅರ್ಥಕೋಶ

| | | |
|---|---|---|
| ಅಗ್ಗರಣೆ | ೯-೧೦೧ವ | ನೇಣು ; ಹಗ್ಗ |
| ಅಡರ್ಪು | ೧-೮೨ | ಊರೆ; ಆಸರೆ;ಆಶ್ರಯ |
| ಅಡುರ್ಕೆ | ೨-೪೦ | ಆಕ್ರಮಣ |
| ಅಣಕ | ೮-೬೭ವ | ತೋರಿಕೆ ; ನಟನೆ |
| ಅಣ್ಣನೆ | ೩-೯೪ | ಹಿತವಾಗಿ ; ಆಪ್ಯಾಯಮಾನವಾಗಿ |
| ಅತ್ರಿಪುತ್ರ | ೪-೪ವ | ಚಂದ್ರ |
| ಅದಿರ್ಪು | ೩-೨೩ | ನಿವಾರಿಸು;ದೂರಗೊಳಿಸು |
| ಅದೃಢ | ೯-೮೪ | ಸಡಿಲವಾದ;ಶಿಥಿಲ:ಬಿಗಿಯಿಲ್ಲದ |
| ಅಧಮವರ್ಣ | ೮-೩೧ | ಶೂದ್ರ |
| ಅಧ್ವನ್ಯ | ೧-೯೯ | ದಾರಿಕಾರ;ಪಾಂಥ;ಪಥಿಕ |
| ಅನಾಗಾರತೆ | ೯-೪೦ | ಸಂನ್ಯಾಸಧರ್ಮ:ಮುನಿಧರ್ಮ |
| ಅನುಶಯ | ೭-೩೦ | ಖೇದ; ದುಃಖ |
| ಅನ್ನವಾಸ | ೧೧-೧೪೪ | ಭೋಜನಶಾಲೆ |
| ಅಪರ್ಯಂತ | ೧೧-೨೪ | ಮೇರೆಯಿಲ್ಲದ;ಸೀಮಾತೀತ |
| ಅಪ್ರತಿಷಿದ್ಧ | ೯-೧೭೪ | ಬೇಡವೆಂದು ಹೇಳದಿರುವುದು : ನಿಷೇಧಿಸದಿರುವುದು |
| ಅಬ್ದಕಾಲ | ೪-೭೯ | ಮಳೆಗಾಲ;ವರ್ಷಾಕಾಲ |
| ಅಭಿಜಾತತೆ | ೫-೧೭೭ | ಕುಲೀನತೆ |
| ಅಭಿಷೇಣನ | ೯-೧೩೦ | ದಂಡೆತ್ತಿ ಹೋಗುವುದು; ಮೇಲೇರಿ ಹೋಗುವುದು |
| ಅಮಂದರಾಗ | ೯-೩೯ | ಅತಿಶಯವಾದ ಸಂತೋಷ; ಅತ್ಯಾನಂದ |
| ಅಯ | ೧-೭೧ | ಶ್ರೇಯಸ್ಸು |
| ಅಯುಕ್ತ | ೮-೩೪ | ಅಗಲಿದ;ವಿರಹಿಯಾದ |
| ಅರ | ೧೦-೧೯ | ವೇಗವುಳ್ಳ;ವೇಗಶಾಲಿಯಾದ |
| ಅರಿಷ್ಟಸದ್ಮ | ೩-೯೨ | ಹೆರಿಗೆಮನೆ;ಬಾಣಂತಿಮನೆ |
| ಅಲಗಣಸು | ೨-೫೨ | ಪ್ರತಿಸ್ಪರ್ಧಿ |

| | | |
|---|---|---|
| ಅವಟಯಿಸು | ೨–೧೦ | ಒದಗಿಸು;ಉಂಟುಮಾಡು |
| ಅವದಾತ | ೧೦–೩೧ವ | (೧)ಸುಂದರವಾದ<br>(೨)ಬೆಳ್ಳಗಿರುವ : ಹೊಳೆಯುವ |
| ಅಶ್ಮಸಾರ | ೯–೭೩ | ಕಬ್ಬಿಣ |
| ಅಳಂಕೆಗೊಳ್ | ೧೦–೬೮ | ಹುಟ್ಟು;ಉದ್ಭವಿಸು;ಉಂಟಾಗು |
| ಅಳಿಕ | ೬–೩೮ | ಹೇಡಿ;ಪೌರುಷಹೀನ |
| ಅಕ್ಷಿಶ್ರುತಿ | ೫–೪ವ | ಹಾವು : ಸರ್ಪ |
| ಆ ಕಲ್ಪ | ೯–೪೭ | ತೊಡವು : ಆಭರಣ |
| ಆಕಳಿಸು | ೫–೧೮ | ಮುಸುಕು;ಆವರಿಸು |
| | ೬–೭೪ | ಹಿಡಿದುಕೊಳ್ಳು |
| ಆಕಾರವಂತ | ೬–೧೮ವ | ರೂಪವಂತ;ಸ್ಫುರದ್ರೂಪಿ |
| ಅಗಾರತೆ | ೯–೫೦ | ಗೃಹಸ್ಥಧರ್ಮ;ಶ್ರಾವಕಧರ್ಮ |
| ಆತ್ರೇಯ | ೧–೩೩ | ಚಂದ್ರ |
| ಆದಿತ್ಯಸುತ | ೬–೩೭ವ | ಯಮರಾಜ : ಮೃತ್ಯುದೇವತೆ |
| ಆಧಿ | ೯–೯೬ | ದುಃಖ : ವಿಪತ್ತು |
| ಆಮ್ರೇಡಿತ | ೨–೫೫ | ಮತ್ತೆ ಹೇಳಿದ ;ಪುನರುಕ್ತ |
| ಆರುರುಕ್ಷು | ೯–೩೧ | ಏರಬಯಸುವವನು; ಆರೋಹಾಪೇಕ್ಷಿ |
| ಆಲಿನೀರ್ | ೫–೧೩೨ | ತಂಪುಗೊಳಿಸಿದ ನೀರು;ಶೀತೋದಕ |
| ಆ ಸಂದಿ | ೨–೪೯ | ಪೀಠ; ಆಸನ |
| ಉಜ್ಜನ | ೭–೩೭ | ತ್ಯಾಗ; ವರ್ಜನ; ರಾಹಿತ್ಯ |
| ಉತ್ತವಳಿಸು | ೩–೪೭ | ಆತುರಪಡು; ಅಡವರಿಸು |
| ಉಪಢೌರಿತ | ೭–೩೦ | ಹತ್ತಿರ ಬಂದ : ಸಮೀಪಿಸಿದ |
| ಉಪಪ್ಲವ | ೫–೩೬ | ತೊಂದರೆ; ಪೀಡೆ; ಕೇಡು |
| ಉಪಾರ್ಜಿಸು | ೪–೫೮ | ಗಳಿಸು; ಸಂಪಾದಿಸು |
| ಉಮ್ಮೆ | ೯–೮೨ | ಉಮ್ಮಳ; ತಾಪ |
| ಉಷರ್ಬುಧ | ೧–೪೨ | ಬೆಂಕಿ; ಅಗ್ನಿ |
| ಊರ್ಜ | ೯–೪೩ | ಕಾರ್ತಿಕಮಾಸ |
| ಊಡು | ೫–೯೦ | ಉಣ್ಣು; ಅನುಭೋಗಿಸು |
| ಋಜುರೋಹಿತ | ೪–೫೧ವ | ಇಂದ್ರಧನು; ಕಾಮನಬಿಲ್ಲು |
| ಎಡಂಬಡು | ೬–೮೬ | ಅಸಮಾಧಾನ; ಅಸಂತೋಷ |

| | | |
|---|---|---|
| ಎಡಱು | ೨–೧೫೨ | ಬಡತನ; ದಾರಿದ್ರ್ಯ |
| ಎರ್ದೆಗೊಳ್ | ೨–೫೫ | ಒಪ್ಪಿಕೊಳ್ಳು; ಒಡಂಬಡು; ಸಮ್ಮತಿಸು |
| ಎಟ್ಟಿರ | ೫–೮೨ | ಅತಿಶಯ; ಮಹತಿ; ಅಗ್ಗಳಿಕೆ |
| ಐಳಬಿಳ | ೧೧–೧೧೮ | ಕುಬೇರ |
| ಒಗೆ | ೫–೪೪ | ಮೇಲೇಳು; ಎದ್ದು ಬರು |
| ಒಟ್ಟ | ೮–೭೭ | ತುಟಿ; ಓಷ್ಠ |
| ಒಡಮೆ | ೯–೧೨೩ | ಧನ; ದ್ರವ್ಯ |
| ಒತ್ತು | ೨–೧೫ | ನೆಲೆ; ಆಶ್ರಯ; ಬೀಡು |
| ಒನಲ್ | ೮–೯ | ಕೊರಗು; ಮರುಗು; ಪರಿತಪಿಸು |
| ಒಸೆಯಿಸು | ೮–೫೩ | ಸಂತೈಸು; ಪ್ರಸನ್ನಗೊಳಿಸು |
| ಒಳಸೋರ್ | ೬–೭೯ | ಕೈವಶವಾಗು; ಹಸ್ತಗತವಾಗು |
| | ೭–೭೭ | ಹಿಮ್ಮೆಟ್ಟು; ಹಿಂದೆಗೆ; ಉಡುಗು |
| ಓವರಿ | ೮–೬೧ | (೧)ಒಳಮನೆ; ಒಳಕೋಣೆ (೨)ಗುರಿ; ಈಡು; ಬಲಿ |
| ಔದ್ಧತ್ಯ | ೪–೧೧ | ಉದ್ಧಟತೆ; ಅಹಂಕಾರ |
| ಕತ್ತಳಿಕೆ | ೫–೧೦೫ | ಕಿರುಗತ್ತಿ; ಕಠಾರಿ |
| ಕರಣಿ | ೯–೭೭ | (ಆನೆಯ)ಸೊಂಡಿಲು; ಸೊಂಡೆ |
| ಕರಭ | ೧೦–೩೦ವ | ಆನೆ; ಗಜ |
| ಕಲ್ಪೋಪರಮ | ೧೦–೨೦ | ಕಲ್ಪಾಂತ, ಪ್ರಳಯ |
| ಕಿಂಶುಕ | ೯–೫ | ಮುತ್ತುಗ |
| ಕುಂಜರ | ೧೦–೩೯ವ | (೧)ಮಿಗಿಲಾದುದು, ಚೆಲುವಾದುದು (೨)ಆನೆ, ಗಜ |
| ಕುಶಲವ | ೭–೧೨೨ | ಜಲಕೇಳಿ, ನೀರಾಟ |
| ಕುಳಿಶಿ | ೧೨–೧೮೨ | ವಜ್ರಿ, ಇಂದ್ರ |
| ಕೃಂತನ | ೬–೭ | ಛೇದನ; ತುಂಡರಿಸುವಿಕೆ |
| ಕೇಳಿಸು | ೧೨–೧೯೮ | ನಾಟ್ಯವಾಡು; ನರ್ತಿಸು |
| ಕೈವಾರ್ | ೨–೩೩ | ತಡೆ; ನಿಲ್ಲು;ನಿಧಾನಿಸು |
| | ೨–೯೦ | ನೆರವನ್ನುಬಯಸು; ಸಹಾಯ ನಿರೀಕ್ಷಿಸು |
| ಕೈವಾರಿಸು | ೩–೬೬ | ನೆರವಾಗು; ಬೆಂಬಲವಾಗು |

| | | |
|---|---|---|
| ಕ್ಷುತ | ೩–೩೮ | ಸೀನುವಿಕೆ; ಸೀನು |
| ಕ್ಷ್ವೇಡ | ೨–೩೩ | ನಂಜು; ವಿಷ |
| ಗಡ್ಡೆಯುಂ ಬೋಗು | ೭–೬೭ | ಕೊರಡಾಗು; ಮರಗಟ್ಟು |
| ಗಣಿದ | ೧–೬೪ | ಎಣಿಕೆ; ಯೋಚನೆ; ವಿಚಾರ |
| ಗರ್ಭೇಶ್ವರಿ | ೧೦–೮ವ | ಆಗರ್ಭಶ್ರೀಮಂತೆ; ಧನಾಢ್ಯೆ |
| ಗಳಕಂಬಳ | ೨–೨೮ | ಗಂಗೆದೊಗಲು |
| ಗಾರುಡಮಣಿ | ೧–೧೪೭ | ಹಸಿರು ರತ್ನ; ಪಚ್ಚೆ |
| ಗೊಂದೆ | ೨–೨೯ | ಎತ್ತು; ಬಸವ |
| ಗೊಡ್ಡ | ೮–೮೦ | ಹುರುಳಿಲ್ಲದ, ನಿರರ್ಥಕ; ನಿಷ್ಪ್ರಯೋಜಕ |
| ಗೊತ್ತು | ೪–೮ | ನೆಲೆವೀಡು; ನಿವಾಸಸ್ಥಾನ |
| ಘಂಟಾಪಥ | ೧–೯೭ | ರಾಜಮಾರ್ಗ |
| ಘರ್ಮ | ೧–೮ | ಬೇಸಗೆ;ನಿದಾಘ |
| ಘೃಣಿ | ೧೧–೩೧ | ಕಿರಣ; ಕಾಂತಿ; ಪ್ರಭೆ |
| ಚರಿತಾರ್ಥತೆ | ೧೩–೪೩ | ಕೃತಾರ್ಥತೆ; ಕೃತಕತ್ಯತೆ; ಸಾರ್ಥಕತೆ |
| ಚೂಳಿಕೆ | ೫–೩ | ತುದಿ; ಶಿಖರ |
| ಛಾದ್ಯ | ೧೨–೧೦೯ | ಮೇಲ್ಕಟ್ಟು; ವಿತಾನ |
| ಜೃಂಭಣ | ೩–೩೬ | ಆಗುಳಿಕೆ; ಆಕಳಿಕೆ |
| ಜತುಕ | ೫–೬೫ | ಬಾವಲಿ |
| ಜನಾಂತ | ೬–೧೧ವ | ನಾಡು; ದೇಶ |
| ಜಪಾ | ೫–೬೧ | ದಾಸವಾಳ |
| ಜಂಬು | ೭–೬೨ವ | ಗಳಹು; (ಜಂಬ)ಕೊಚ್ಚು |
| ಜಲಲವ | ೪–೩೯ | ನೀರ ಹನಿ; ಜಲಬಿಂದು |
| ಜಳನೀಳಿಕೆ | ೨–೧೬ | ಹಾವಸೆ; ಶೈವಾಲ |
| ಜಿಹಣತನ | ೧೦–೩೬ | ಹಾಡುಗಾರಿಕೆ; ಗಾಯನ |
| ಜೀಮೂತ | ೩–೨ | ಮೋಡ; ಮೇಘ |
| ಝಂಪಾಳ | ೭–೧೦೪ | ಮೇಲುಹೊದಿಕೆ; ಮೇಲ್ಮುಸುಕು |
| ಠಕ್ಕುವೀಟಿಜ್ | ೫–೧೨೩ | ಮಂಕುಬಡಿ; ಮಂಕಾಗು |
| ಡಂಗೆ | ೫–೭೦ | ದೊಣ್ಣೆ; ದಂಡ |
| ಡಾಮರ | ೮–೬೬ | ಪೀಡೆ; ಬಾಧೆ |
| ತಡಂಗಲಸು | ೧–೬೪ | ಬೆರೆ; ಕೂಡಿಕೊಳ್ಳು; ಹೊಂದಿಕೊಳ್ಳು |

| | | |
|---|---|---|
| ತಡವಾಯ್ | ೭–೧೦೦ | ಸರಿಯಾಗು;ಸಮನಾಗು |
| ತಣ್ಮಲೆ | ೪–೬೪<br>೧೧–೧೩ | ತುಂಬು; ಆವರಿಸು;ವ್ಯಾಪಿಸು |
| ತಪನೀಯ | ೪–೬೮ವ | ಚಿನ್ನ; ಬಂಗಾರ |
| ತರ್ಪಣ | ೨–೭೧ | ತುಷ್ಟಿ; ತೃಪ್ತಿ; ಸಂತೋಷ |
| ತರಂಗ | ೧೦–೪೮ | (೧)ಅಲೆ; ತೆರೆ<br>(೨)(ಸೀರೆಯ)ನಿರಿ, ನಿರಿಗೆ |
| ತಲೆವೀಸು | ೧೩–೩೦ | ತಲೆಕೊಡಹು; ಒಲ್ಲೆನೆನ್ನು; ನಿರಾಕರಿಸು |
| ತವುತರ್ | ೯–೭೯ | ಮುಗಿದುಹೋಗು; ಬರಿದಾಗು; ನಾಶವಾಗು |
| ತರ್ಷ | ೯–೪೫ | ಬಯಕೆ; ಹಂಬಲು; ತೃಷೆ |
| ತಾಪಿಂಛ | ೫–೫೦ | ಹೊಂಗೆಮರ; ಹುಲಿಗಿಲ; ತಮಾಲ |
| ತಾರ್ಕ್ಷ್ಯ | ೫–೪ವ | ಹದ್ದು; ಗರುಡ |
| ತ್ರಿಶಕ್ತಿ | ೯–೧೧೭ | ರಾಜನಲ್ಲಿ ಇರಬೇಕಾದ ಪ್ರಭುಶಕ್ತಿ, ಉತ್ಸಾಹಶಕ್ತಿ ಮತ್ತು ಮಂತ್ರಶಕ್ತಿ ಎಂಬ ಮೂರು ಶಕ್ತಿಗಳು |
| ತುರಾಷಾಟ್ಖಡ್ಗ | ೫–೩೯ | ಇಂದ್ರನ ಆಯುಧ; ವಜ್ರ |
| ತೂಂಕಡು | ೮–೪ವ | ನಿದ್ದೆ; ನಿದ್ರೆ |
| ತೂರ್ಣಂ | ೧೦–೯೧ | ಶೀಘ್ರವಾಗಿ; ವೇಗವಾಗಿ |
| ತೃಣಕುಟಿ | ೪–೧೬ | ಹುಲ್ಲಿನ ಗುಡಿಸಲು; ಪರ್ಣಶಾಲೆ |
| ತೆರಳ್ಚು | ೩–೬೩ | ಒದಗಿಸು; ತಂದುಕೊಡು; ಪೂರೈಸು |
| ತೌಗೆ | ೪–೭೮ | ಮುಗಿತಾಯ; ಅಂತ್ಯ; ನಾಶ |
| ದಾಘ | ೯–೬೫ | ಉಮ್ಮಳ; ತಾಪ |
| ದುರ್ಬುಧ | ೧–೪೨ | ದುರ್ಬುದ್ಧಿ; ಕೆಟ್ಟಮನಸ್ಸಿವನು; ದುಷ್ಟ |
| ದುರ್ವೇಶ | ೫–೬೬ | ಒಳಸೇರಲು ಕಷ್ಟವಾದ; ದುಷ್ಟ ವೇಶ್ಯ; ದುರ್ಗಮ |
| ದೂರಿಸು | ೮–೬೪ | ಚಿಂತಿಸು; ಕಳವಳಿಸು |
| ದೊರೆ | ೮–೧೩ | ಯೋಗ್ಯ;ಉಚಿತ; ಸಮರ್ಪಕ |
| ದೋರಾಂದೋಳನ | ೧೦–೩ | ತೋಳುಗಳ ಚಲನೆ; ಕೈಬೀಸುವುದು |

| | | |
|---|---|---|
| ಧಾಮ | ೯–೧೯ | ತೇಜಸ್ಸು; ಕಾಂತಿ |
| ಧ್ವಜಿನಿ | ೫–೧೧೦ವ | ಪಡೆ; ಸೈನ್ಯ |
| ನಂಜುರುಳಿ | ೮–೧೫ | ವಿಷದ ಗುಳಿಗೆ |
| ನದಿಪು | ೭–೪೭ | ಆರಿಸು; ನಂದಿಸು |
| ನಾಭಸ | ೪–೩೦ | ಮಳೆಗಾಲಕ್ಕೆ ಸಂಬಂಧಿಸಿದ; ಮಳೆಗಾಲದಲ್ಲಿ ಬರುವ |
| ನಿಕಾಮಂ | ೨–೮೫ | ಚೆನ್ನಾಗಿ; ಸ್ಪಷ್ಟವಾಗಿ |
| ನಿಗುಂಬಿಸು | ೪–೬೪ | ಸಂದಣಿಸು; ದಟ್ಟಣಿಸು |
| ನಿಟ್ಟೆ | ೪–೫೭ | ನಿತ್ಯ ;ಶಾಶ್ವತ |
| ನಿಧನ | ೭–೧೪೯ | ಹೂಳಿಟ್ಟ ಧನ; ನಿಧಿ; ನಿಧಾನ |
| ನಿಪಾನ | ೯–೭೮ | ಚಿಕ್ಕ ಹೊಂಡ; ಪಲ್ವಲ |
| ನಿಸೃಷ್ಟಾರ್ಥ | ೬–೧೮ವ | ದೂತ; ರಾಯಭಾರಿ |
| ನಿಯುದ್ಧ | ೬–೨೭ | ದ್ವಂದ್ವಯುದ್ಧ; ಮಲ್ಲಗಾಳೆಗ |
| ನಿಯೋಗ | ೬–೮೫ವ | ಸೇವೆ; ಸೇವಾಕಾರ್ಯ; (ಸೇವೆಯ) ಉದ್ಯೋಗ |
| ನಿರಯ | ೯–೩೮ | ನರಕಲೋಕ |
| ನಿರ್ವಾಣರೇಖೆ | ೬–೬೩ವ | ಬಾಹ್ಯರೇಖೆ; ಸೀಮಾರೇಖೆ |
| ನಿವೃತ್ತಿ | ೨–೩೮ | ವಿರತಿ; ವೈರಾಗ್ಯ |
| ನಿಷ್ಕುಟ | ೮–೪೫ | ಉಪವನ |
| ನಿಷ್ಟಪ್ತ | ೯–೩ವ | ಕಾಯಿಸಿದ; ಪುಟವಿಟ್ಟ; ತಪ್ತ |
| ನಿಷ್ಪಂದಕಾರಿತ್ವ | ೮–೮೫ | ನಿಶ್ಚಲತೆ; ನಿಶ್ಚೇಷ್ಟತೆ |
| ನಿಷ್ಪ್ರತ್ಯೂಹ | ೧–೧೦೬ | ನಿರಾತಂಕವಾದ; ನಿರ್ಬಾಧವಾದ |
| ನೀರಿಕೆ | ೪–೫೦ | ಹಾವಸೆ; ಶೈವಲ |
| ನೀಹಾರ | ೩–೩೬ | ಮಲಪ್ರವೃತ್ತಿ; ಮಲವಿಸರ್ಜನೆ |
| ನೀಳ್ಪು | ೩–೮೧ | ಎತ್ತರ; ಉನ್ನತಿ |
| ನೃಪಾಗಮ | ೬–೧ | ರಾಜನೀತಿ; ರಾಜನ ನಡೆವಳಿಕೆ |
| ನೆಱಗೊಳ್ | ೮–೬೪ | ಮರ್ಮಕ್ಕೆ ತಾಕು; ಮರ್ಮವನ್ನು ಭೇದಿಸು |
| ನೆರಪು | ೭–೬೯ | ತೀರಿಸು; ಸಾಧಿಸು |
| ಪಂಚಜನ | ೧೩–೮೧ | ಮಾನವ; ಮನುಷ್ಯ |
| ಪಂಚತೆ | ೫–೧೩೬ | (೧)ಐದಾಗಿರುವಿಕೆ; ಪಂಚಕತ್ವ (೨)ಸಾವು; ಮರಣ |

| | | |
|---|---|---|
| ಪಂಥ | ೫–೪೨ | ಸರಿಯಾದ ಹಾದಿ; ಯೋಗ್ಯಕ್ರಮ |
| ಪಕ್ಕಾಗು | ೧–೫ | ಪಾತ್ರವಾಗು; ಯೋಗ್ಯವಾಗು |
| ಪಚ್ಚವಡಿಸು | ೬–೭೦ವ | ಹೊದಿಸು; ಆಚ್ಛಾದಿಸು |
| ಪಚ್ಚುಗೊಳ್ | ೩–೫೩ | ಹಂಚಿಕೊಳ್ಳು; ಪಾಲುಗೊಳ್ಳು |
| ಪಟ್ಟಣಿಗೆ | ೮–೫೧ | ಪಟ್ಟಾವಳಿ ಸೀರೆ; ದುಕೂಲ |
| ಪಟ್ಟವರ್ಧನ | ೯–೧೦೨ವ | ಪಟ್ಟದಾನೆ; ಪಟ್ಟಗಜ |
| ಪಣೆ | ೭–೮೭ | ಮರದ ಕಾಂಡ |
| ಪತ್ತುಗೆ | ೮–೭೯ | ಹತ್ತುಗಡೆ; ಸಂಬಂಧ |
| ಪದಂಬಡೆ | ೩–೯೦ | ಹದವನ್ನು ತಿಳಿ; ಹದಗೊಳ್ಳು |
| ಪದಪಾತ | ೭–೭೫ | ಒದೆ; ಒದಿಕೆ; ಲತ್ತೆ |
| ಪದ್ಮಸದ್ಮ | ೫–೪೧ | (೧)ತಾವರೆಗೊಳ; ಕಮಲ ಸರೋವರ;ಪದ್ಮಾಕರ |
| | ೫–೯೬ | (೨)ಬ್ರಹ್ಮ; ಸೃಷ್ಟಿಕರ್ತ |
| ಪನ್ನ | ೯–೧೧೩ | ಬಿಂಕ; ಅಗ್ಗಳಿಕೆ |
| ಪರಿಣಾಹ | ೧೧–೨೮ | ವಿಸ್ತಾರ; ವೈಶಾಲ್ಯ |
| ಪರಿವಾದಿನಿ | ೩–೬೧ | ವೀಣೆ |
| ಪರಿವಿಡಿಗೆಯ್ | ೮–೭೦ | ಉಪಕ್ರಮಿಸು; ಆರಂಭಿಸು |
| ಪಲಿತ | ೨–೨೦ | ನರೆ; ನರೆಗೋದಲು |
| ಪಲ್ಲಮಱಿ | ೫–೬೫ | ಆನೆಯ ಮರಿ; ಮರಿಯಾನೆ |
| ಪಸಾಯ | ೭–೪೨; | ಬಹುಮಾನ; ಪಾರಿತೋಷಿಕ |
| ಪಸುಗೆ | ೮–೬೬ | ಒಪ್ಪ; ಶೋಭೆ |
| ಪಱಿವಱಿ | ೮–೨೪ | ತುಂಡು ತುಂಡಾದುದು; ಛಿನ್ನ ವಿಚ್ಛಿನ್ನ; ಚೂರುಚೂರು |
| ಪಟಿಕೆಯ್ | ೮–೫೨ವ | ಅವಮಾನಿಸು; ಅಪಮಾನಗೊಳಿಸು |
| ಪಾಂಡುಮ | ೯–೮೪ | ಬಿಳುಪಾದ; ಬೆಳ್ಳಗಾದ |
| ಪಾಂಸುಳೆ | ೮–೪ | ಜಾರೆ; ಜೋಡೆ; ಪಾಣ್ಬೆ |
| ಪಾರಿಹಾರ್ಯ | ೧೨–೧೩ವ | ಕಡಗ; ಕಂಕಣ |
| ಪಾಳಿಸು | ೧೦–೫ | ಮೀರು; ಸೋಲಿಸು |
| ಪಿಚುಮಂದ | ೩–೯೭ | ಬೇವು |
| ಪಿಳಿಗು | ೬–೩೧ | ಬಿರಿ;ಸೀಳು |

| | | |
|---|---|---|
| ಪುಣಿಲ್ | ೧೦-೪೧ | ಮರಳುದಿಣ್ಣೆ; ಪುಲಿನ |
| ಪುನ್ನಾಗ | ೭-೬೨ವ | ಸುರಹೊನ್ನೆ |
| ಪುರಂದರ ಚಾಪ | ೪-೫೦ | ಇಂದ್ರಧನು;ಕಾಮನಬಿಲ್ಲು |
| ಪುರುಭೂತಿ | ೯-೧೨೧ವ | ಅಧಿಕಲಾಭ; ಅಧಿಕವಾದ ಶ್ರೇಯಸ್ಸು |
| ಪುರುಷಾಕಾರ | ೫-೯ವ | ಪೌರುಷ; ಧೈರ್ಯ |
| ಪುರುಳ್ | ೨-೬೮ | ಅರ್ಥ; ಔಚಿತ್ಯ |
| ಪುಲ್ವಟ್ಟೆ | ೫-೫೩ | ಕಾಲುದಾರಿ; ಸೀಳುದಾರಿ |
| ಪುಸಿಗೆಯ್ | ೪-೧೯ | ಕಳೆ; ನಿವಾರಿಸು |
| ಪೂರಿಸು | ೯-೭೬ | ಹೀರಿಕೊಳ್ಳು; ಕುಡಿ |
| ಪೃಥುಕತ್ವ | ೧೨-೧೬೮ | ಶಿಶುತ್ವ; ಶೈಶವ |
| ಪೃಷತ್ಕ | ೬-೩೯ | ಬಾಣ; ಅಸ್ತ್ರ |
| ಪೇರಣಿ | ೬-೩೪ | ಮಹಾಸೈನ್ಯ |
| ಪೇಶಲ | ೧-೧೩೯ | ಚೆಲುವಾದ; ಸುಂದರವಾದ; ನಯವಾದ |
| ಪೊಂಗು | ೫-೯೯ | ಹಿಗ್ಗು; ಉಬ್ಬು; ಉತ್ಸಾಹಿಸು |
| ಪೊದೆ | ೬-೩೬ | ಬತ್ತಳಿಕೆ; ಬಾಣಕೋಶ |
| ಪೊಸಯಿಸು | ೧-೧೮೬ | ರಚಿಸು; ನಿರ್ಮಿಸು |
| ಪೋರ್ | ೫-೪೦ವ | ಹೋರಾಟ; ಕಾಳಗ; ಸೆಣಸಾಟ |
| ಪ್ರಕೃತಿ | ೭-೩೬ವ | ಪ್ರಜೆಗಳು |
| ಪ್ರಘಣ | ೮-೨೪ವ | ಮೊಗಸಾಲೆ; ಮುಖಮಂಡಪ |
| ಪ್ರಣಾಳ | ೬-೪೭ | ಹರಿನಾಳಿಗೆ |
| ಪ್ರತಿಷ್ಠಿಸು | ೬-೨೪ | ಸ್ಥಿರೀಕರಿಸು; ದಕ್ಕಿಸಿಕೊಳ್ಳು |
| ಪ್ರತ್ಯಂತ | ೧-೧೩೧ | ಪಕ್ಕ; ಪಾರ್ಶ್ವ |
| ಪ್ರತ್ಯಯ | ೪-೬೫ | ಅರಿವು; ಜ್ಞಾನ |
| ಪ್ರಶ್ರಯ | ೩-೭೧ವ | (೧)ಗೌರವ; ಆದರ; ಮನ್ನಣೆ |
| | ೯-೨೫ | (೨)ವಿನಯ; ನಮ್ರತೆ; ಶಾಲೀನತೆ |
| ಪ್ರಸ್ತರ | ೩-೨ | ಬಂಡೆಗಲ್ಲು; ಹಾಸುಗಲ್ಲು |
| ಫಣೀಶ | ೨-೮೯ | ಆದಿಶೇಷ |
| ಬಂಟು | ೫-೧೧೧ವ | ಕಲಿತನ; ಶೌರ್ಯ; ಪರಾಕ್ರಮ |
| ಬಜ್ಜೆ | ೮-೫೯ವ | ಧೂರ್ತೆ; ಚತುರೆ |
| ಬದ್ದವಣ | ೪-೪೨ | ಮಂಗಳವಾದ್ಯ |

| | | |
|---|---|---|
| ಬಸಿ | ೫-೫೪ | ಹರಿತಗೊಳಿಸು; ಚೂಪುಮಾಡು |
| ಬಳಭಿಚ್ಚಾಪ | ೬-೫೨ | ಇಂದ್ರಧನು |
| ಬಳ್ವಳಿಕೆ | ೮-೫೦ವ | ಬೆಳವಣಿಗೆ; ಅಭಿವೃದ್ಧಿ |
| ಬಾಡವ | ೧೦-೨೨ | (೧)ಕುದುರೆ |
| | | (೨)ಬಡಬಾಗ್ನಿ |
| ಬಾಣ | ೨-೯೮ | (೧)ಬಾಣ; ಅಸ್ತ್ರ |
| | | (೨)ನೀಲಿ ಗೋರಟೆ |
| ಬಾನಲಾಗು | ೮-೭೨ | ಮುಸುಕಾಗು; ಮುಸುಳಿಸು |
| ಬಾೞ್ತೆಗೆಯ್ | ೨-೫೭ | ಗಣನೆಗೆ ತೆಗೆದುಕೊಳ್ಳು; ಲಕ್ಷಿಸು |
| ಬಾೞ್ಮೊದಲ್ | ೩-೩೭ | ಜನ್ಮಸ್ಥಾನ; ತವರು |
| ಬಿಚ್ಚಳಿಸು | ೧೦-೩೨ | ಬಣ್ಣಿಸು; ಹೊಗಳು |
| ಬಿದಿ | ೯-೯೬ | ಕವಳ; ಆಹಾರ |
| ಬಿದು | ೯-೭೪ | (ಆನೆಯ) ನೆತ್ತಿ; ಕುಂಭಸ್ಥಳದ ಮಧ್ಯ |
| ಬಿರುದನಿಗಡ | ೧೦-೨೦ | ಬಿರುದಿನ ಬಳೆ; ಬಿರುದಿನ ಪೆಂಡೆಯ |
| ಬಿರ್ದಿಸ | ೭-೮೪ | ಅತಿಥಿ |
| ಬೀಱು | ೬-೮೧ | (೧)ಕೊಡು; ದಾನಮಾಡು |
| | ೯-೯೩ | (೨)ನೀಳ್; ದೀರ್ಘತೆ |
| ಬೀಸರ | ೮-೪ವ | ವ್ಯರ್ಥ |
| ಬೆಂಜನ | ೯-೯೬ | ಅಂಜನ |
| ಬೆಗಡು | ೫-೬೫ವ | ಭ್ರಮೆ; ಭ್ರಾಂತಿ |
| ಬೆಸೆ | ೧೦-೧೯ | ಬಿಂಕತಾಳು; ಗರ್ವಿಸು |
| ಬೆಳ್ತನ | ೮-೫೯ | ದಡ್ಡತನ; ತಿಳಿಗೇಡಿತನ |
| ಬೋಧಾಲೋಕ | ೧-೫ | ಜ್ಞಾನದೃಷ್ಟಿಯುಳ್ಳವನು; ಜ್ಞಾನಿ |
| ಭರ್ಮ | ೧೦-೨೦ | ಚಿನ್ನ; ಸುವರ್ಣ |
| ಭಾವಿತಾತ್ಮ | ೯-೫೮ | ಆತ್ಮಜ್ಞಾನಿ |
| ಭೂಮಿಕೆ | ೧-೧೪೨ | ಉಪ್ಪರಿಗೆ; ಅಂತಸ್ತು; ಮಹಡಿ |
| ಮಂದರ | ೧-೮೦ | (೧)ಮೇರುಪರ್ವತ |
| | | (೨)ಸ್ವರ್ಗ |
| ಮಂದುರೆ | ೧-೧೪೧ | ಅಶ್ವಶಾಲೆ; ಕುದುರೆಯ ಲಾಯ |
| ಮಥಿಯಿಸು | ೫-೧೩೪ | ಘಾತಿಸು; ಪೀಡಿಸು |

| | | |
|---|---|---|
| ಮನಂಬಸು | ೫-೬ | ದಿಗ್ಭ್ರಮೆಗೊಳ್ಳು |
| ಮನದನ್ನದೆ | ೬-೮೭ | ಮನಃಪ್ರೀತಿಯಿಂದ; ಹೃತ್ಪೂರ್ವಕವಾಗಿ |
| ಮರುನ್ನದಿ | ೧-೧ | ದೇವನದಿ; ದೇವಗಂಗೆ |
| ಮಲಿನಾಕಾರ | ೯-೧೨೧ | ಅಂದಗೇಡಿ; ಕುರೂಪಿ |
| ಮಸಮಸನಾಗು | ೮-೫೯ | ಮಸುಳು; ಕುಗ್ಗು |
| ಮಹೀಗೃಹ | ೭-೧೨೮ | ನೆಲಮನೆ |
| ಮಟ್ಗು | ೨-೪೩ | ಆರು; ನಂದು |
| ಮಾಂಕರಿಸು | ೬-೭೦ | ಹೀಯಾಳಿಸು; ಧಿಕ್ಕರಿಸು |
| ಮಾತರಿಶ್ವ | ೪-೩೦ | ಗಾಳಿ |
| ಮಾಧವ | ೭-೬೫ | ಮಧುಮಾಸ; ವಸಂತಮಾಸ |
| ಮಾಯ್ದ | ೨-೪೨ | ಕೆಟ್ಟ; ದುಷ್ಟ |
| ಮಾರ್ಪಡಿ | ೧೦-೯೮ | ಶತ್ರುಸೈನ್ಯ; ಎದುರಾಳಿಯ ಪಡೆ |
| ಮಾಸರ | ೮-೫೧ | ಮನೋಹರ; ಸುಂದರ |
| ಮಿಗೆವರ್ | ೧-೬೯ | ಅತಿಶಯವಾಗು |
| ಮುಂಬದ | ೮-೬೮ | ಮದನದ್ರವ |
| ಮುಖಮುದ್ರೆ | ೯-೧೧೪ | ಬಾಯಿ ಮುಚ್ಚಿಸುವುದು; ನಿರುತ್ತರಗೊಳಿಸುವುದು |
| ಮುಟ್ಟು | ೫-೧೦೨ | ತಕ್ಕ; ಯೋಗ್ಯ; ಅರ್ಹ |
| ಮುಮೂರ್ಷು | ೧೦-೫೭ | ಸಾಯಬಯಸುವವನು ; ಸಾಯಲಿರುವವನು |
| ಮುಳ್ಪು | ೬-೩೭ | ಕೆಂಪುಬಟ್ಟೆ ; ರಕ್ತವರ್ಣದ ವಸ್ತ್ರ |
| ಮೂಡಿಗೆ | ೧-೧೧೧ | ಬತ್ತಳಿಕೆ |
| ಮೂಲಧನ | ೨-೬೧ | ಬಂಡವಾಳ |
| ಮೃದ್ವೀಕೆ | ೧-೧೦೫ವ | ದ್ರಾಕ್ಷೆ |
| ಮೆಯ್ವೆರ್ಚು | ೬-೨೫ | (೧) ಮೈಯುಬ್ಬು; ಮೈಸೊಕ್ಕು |
| | ೪-೪೭ | (೨) ಹೆಚ್ಚಾಗು; ಅಧಿಕವಾಗು |
| ಮೇಚಕತೆ | ೩-೮೬ | ಕಪ್ಪುಬಣ್ಣ; ಶ್ಯಾಮತೆ |
| ಮೊಟ್ಗು | ೫-೨೨ವ | ಬಾಗು; ಎರಗು; ವಂದಿಸು |
| ಯಥಾರ್ಥಜ್ಞ | ೫-೩೨ | ಸತ್ಯವನ್ನು ತಿಳಿದವನು; ಸತ್ಯಜ್ಞಾನಿ |
| ಯಾವಕದ್ರವ | ೬-೬೩ವ | ಅರಗಿನ ರಸ; ಅಲತಿಗೆ |

| | | |
|---|---|---|
| ಯೂಧಿಕೆ | ೧-೧೦೬ | ಮಲ್ಲಿಗೆ |
| ರಥಕಲ್ಪ | ೧೦-೨೧ | ರಥ ಸೈನ್ಯದ ಅಧಿಪತಿ |
| ರಸಿತ | ೧೦-೬೧ | ಧ್ವನಿ; ನಿನಾದ |
| ರೈಸ್ತಂಭ | ೧-೧೫ | ಚಿನ್ನದ ಕಂಬ |
| ರೋಧ | ೧-೮೨ | ದಂಡೆ; ತೀರ; ತಟ |
| ರೋಧಸ್ವಿನಿ | ೧-೧೨ | ಹೊಳೆ; ನದಿ |
| ಲಪನ | ೫-೧೩೪ | ಮೊಗ; ಮುಖ |
| ಲಾಸಕಿ | ೩-೮೩ | ನರ್ತಕಿ; ನಾಟ್ಯಗಾರ್ತಿ |
| ವಂಕದರ | ೫-೧೦೬ | ವಕ್ರದ್ವಾರ; ಗುಪ್ತದ್ವಾರ |
| ವಡ್ಡಾಗರ | ೫-೪೭ | ನೆಲೆವೀಡು; ಮೂಲಾಶ್ರಯ |
| ವತಂಸ | ೧೦-೩ | ಕಿವಿಯ ಆಭರಣ; ಕರ್ಣಕುಂಡಲ |
| ವರಾಕ | ೮-೧೦ | ಅದೃಷ್ಟಹೀನ; ದುರ್ದೈವಿ |
| ವರ್ಮ | ೧-೮ | ಅಂಗರಕ್ಷಕ ಕವಚ; ಚಿಲಖತ್ತು |
| ವಲ್ಲಭ | ೯-೧೦೪ | ಪ್ರಿಯವಾದ; ಮೆಚ್ಚಾದ |
| ವಳಭಿ | ೧೩-೨೬ವ | ಉಪ್ಪರಿಗೆ; ಅಂತಸ್ತು; ಮಹಡಿ |
| ವಾತೂಳಿಕೆ | ೪-೧೮ವ | ಸುಟ್ಟುರೆ; ಸುಂಟರಗಾಳಿ |
| ವಾತ್ಯೆ | ೧೨-೧೬೫ | ವಾತೂಳಿಕೆ |
| ವಾರುವ | ೩-೫೫ | ಕುದುರೆ |
| ವಾವದೂಕ | ೧-೧೧೦ | ಶಬ್ದಮಯ; ವಾಚಾಳ |
| ವಾಸರ | ೨-೧೫ | ಹಗಲುಹೊತ್ತು; ಹಗಲು |
| ವಾಸಿಸು | ೮-೩೭ | ಕಂಪುಗೊಳಿಸು; ವಾಸನೆ ಕಟ್ಟು; ಪರಿಮಳಿಸು |
| ವಿಗತಾರ್ಥ | ೫-೭೫ | ಹುರುಳುಗೆಟ್ಟ; ನಿರರ್ಥಕ |
| ವಿಚಕಿಲ | ೨-೯೬ | ಮಲ್ಲಿಗೆ |
| ವಿಜಾತಿ | ೯-೧೨೧ | ಪಕ್ಷಿಜಾತಿ; ಪಕ್ಷಿಕುಲ |
| ವಿಜೃಂಭಣ | ೫-೧೧೯ | ವಿಸ್ತಾರ; ವಿಕಾಸ |
| ವಿಪರ್ಯಯ | ೨-೬೧ | ಬದಲಾವಣೆ; ವ್ಯತ್ಯಾಸ |
| ವಿಭೂತಿ | ೯-೧೧೦ | (೧) ವೈಭವ<br>(೨) ಬೂದಿ; ಭಸ್ಮ |
| ವಿರೂಪತೆ | ೭-೭೯ | ನಿರಾಕಾರತೆ; ನಿರಂಗತ್ವ |
| ವಿಷಾದಗರ್ಭ | ೩-೭೭ | ದುಃಖಮಯವಾದ; ದುಃಖಕರವಾದ |

| | | |
|---|---|---|
| ವಿಸರ್ಜಿಸು | ೬–೪೨ವ | ಕಳುಹಿಸು; ಬೀಳ್ಕೊಡು |
| ವಿಹಿತಾರ್ಥ | ೨–೧೮ | ಸಾರ್ಥಕ; ಅನ್ವರ್ಥ |
| ವೃಂದಾರಕ | ೧೨–೧೨೦ | ಮುಖ್ಯ; ಪ್ರಧಾನ |
| ವೇಶಂತ | ೫–೬೧ | ಚಿಕ್ಕಹೊಂಡ; ಪಲ್ವಲ |
| ವೇಶ್ಮ | ೧–೫೨ | ನಿಲಯ; ನಿವಾಸ; ಗೃಹ |
| ವ್ಯಗ್ರ | ೬–೫೫ | ತೊಡಗಿದ; ನಿರತ; ಮಗ್ನ |
| ವ್ಯಸನ | ೬–೫೫ | ಕೆಲಸ; ಕಾರ್ಯ |
| ವ್ಯಾಸಕ್ತ | ೧–೧ | ತೊಡಗಿದ; ನಿರತ |
| ವ್ರೈಹೇಯ | ೧–೯೦ | ಕೆಂಪು ಭತ್ತವನ್ನು ಬೆಳೆಯುವ ಗದ್ದೆ |
| ಶಂಬ | ೮–೩೪ | ವಜ್ರಾಯುಧ; ವಜ್ರ |
| ಶಂಬಾಪಾತ | ೯–೩೮ | ಸಿಡಿಲಿನ ಹೊಡೆತ; ವಜ್ರಾಘಾತ |
| ಶಕುಳ | ೧–೪೩ | ಮೀನು |
| ಶತಮನ್ಯು | ೨–೭ | ಇಂದ್ರ |
| ಶಮನ | ೧೦–೯೧ | ಯಮ |
| ಶರ್ಮ | ೧–೮ | ನೆಲೆ; ಆಶ್ರಯ |
| ಶಶಿಮಣಿ | ೧೦–೪೦ | ಚಂದ್ರಕಾಂತಶಿಲೆ |
| ಶಾಲೂರ | ೫–೪೦ವ | ಕಪ್ಪೆ; ಮಂಡೂಕ |
| ಶಾಲೇಯ | ೧–೯೦ | ಬಿಳಿಯ ಭತ್ತದ ಗದ್ದೆ |
| ಶಿರೋಧಿ | ೫–೧೨ | ಕೊರಳು; ಕತ್ತು |
| ಶೈಲಿ | ೧೩–೧೫ | ನಡತೆ; ವರ್ತನೆ |
| ಷಡಭಿಜ್ಞ | ೧–೨೫ | ಬುದ್ಧ; ಬುದ್ಧಮತಾನುಯಾಯಿ |
| ಷಡ್ಬಲ | ೯–೧೧೮ವ | ಮೌಲ, ಭೃತಕ, ಶ್ರೇಣಿ, ಮಿತ್ರ, ಅಮಿತ್ರ, ಆಟವಿಕ, ಎಂಬ ಆರು ಬಗೆಯ ಸೈನ್ಯ(೧೦–೧೭ವ ನೋ). |
| ಷಾಡ್ಗುಣ್ಯ | ೯–೧೧೭ | ರಾಜ ಪರಮಂಡಲಗಳೊಡನೆ ವ್ಯವಹರಿಸುವಾಗ ಕೈಕೊಳ್ಳುವ ಆರು ಬಗೆಯ ಕ್ರಮಗಳು:– ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವ ಎಂದು ಅವುಗಳಿಗೆ ಹೆಸರು. |
| ಸಂವ್ಯಾನ | ೭–೯೮ | ಸೆರಗು |

| | | |
|---|---|---|
| ಸಣ್ಣಿಗೆ | ೧-೧೩೦ | ಒರಳು; ಒರಳುಕಲ್ಲು |
| ಸನಾಭಿ | ೯-೬೫ವ | ಬಂಧು; ರಕ್ತಸಂಬಂಧಿ |
| ಸನ್ನತೆ | ೧೦-೪೨ | ನಿರ್ವಿಣ್ಣತೆ; ಆಯಾಸ |
| ಸನ್ನಾಹ | ೧೦-೬೩ | ಕವಚ; ಚಿಲಖತ್ತು |
| ಸಪ್ತಿ | ೯-೮೭ | ಕುದುರೆ |
| ಸಮಂದರ್ | ೬-೬೭ವ | ಸರಿಯಿಟ್ಟು ನೋಡು; ಸರಿದೂಗಿಸು |
| ಸಮಕಟ್ಟು | ೫-೫೪ | ಏರ್ಪಡಿಸು; ತಯಾರಿಸು; ನಿರ್ಮಿಸು |
| ಸಮನಿಸು | ೪-೫ | ಒದಗು; ಕೂಡಿಕೊಳ್ಳು; ಹೊಂದು |
| ಸಮಱು | ೬-೬೩ವ | ತಿದ್ದು; ನೇರ್ಪಡಿಸು |
| ಸಮಾನ | ೧-೧೪೫ | ವಿಸ್ತೀರ್ಣ |
| ಸಮಾಹಿತ | ೯-೫೯ | ಶಾಂತ; ಸ್ವಸ್ಥ |
| ಸಮಾಹೃತಿ | ೨-೮೩ | ಬೆರಕೆ; ಸೇರಿಕೆ; ಮಿಶ್ರಣ |
| ಸಮ್ಮನಿಸು | ೪-೨೩ | ಗೌರವಿಸು; ಮೆಚ್ಚು |
| ಸವನ | ೪-೬೯ | ಅಭಿಷೇಕ |
| ಸವಿತ್ರಿ | ೧೧-೧೧೦ವ | ತಾಯಿ; ಜನನಿ |
| ಸಹಸ್ರೋಸ್ರ | ೫-೭೦ | ಸಹಸ್ರಕಿರಣ; ಸೂರ್ಯ |
| ಸಾಮಿಪಕ್ವ | ೬-೫೪ವ | ಅರ್ಧಹಣ್ಣಾದ; ಅರ್ಧಪಕ್ವ |
| ಸಾರ್ಚು | ೩-೧೦೨ | ಇಡು; ಇರಿಸು |
| ಸಾರ್ಥ | ೨-೧೧೫ | ಸಮೂಹ; ಸಮುದಾಯ |
| ಸಾಲ್ | ೨-೬೮ | ಸಮರ್ಥನಾಗಿರು; ತಕ್ಕವನಾಗಿರು |
| ಸಾವದ್ಯ | ೧-೫ | ಕಳಂಕ |
| ಸುಖಲವ | ೩-೪೨ | ಅಲ್ಪಸುಖ |
| ಸುತ್ತು | ೬-೬೨ | ಉಡುವ ಬಟ್ಟೆ; ಉಡುಗೆ |
| ಸುರಭಿ | | (೧) ಕಾಮಧೇನು |
| | ೭-೬೯ವ | (೨) ವಸಂತಮಾಸ |
| ಸೂರುಳ್ | ೮-೫೯ | (೧)ಆಣೆಮಾಡು; ಶಪಥಮಾಡು |
| | ೮-೬೦ | (೨) ಆಣೆ; ಶಪಥ; ಭಾಷೆ |
| ಸೂರ್ಯೋಪಲ | ೪-೬ | ಸೂರ್ಯಕಾಂತ ಶಿಲೆ |
| ಸೈತು | ೨-೨೪ | ಸುಮ್ಮನೆ; ಏನನ್ನೂ ಮಾಡದೆ |
| ಸೊಡರ್ವಕ್ಕು | ೩-೪೫ | ದೀಪದ ಕಾಡಿಗೆ |
| ಸೊಲ್ಲಿಸು | ೩-೬೨ | ನುಡಿ; ಮಾತಾಡು |

| | | |
|---|---|---|
| ಸ್ತನಂಧಯ | ೩–೭ | ಮಗು; ಶಿಶು |
| ಸ್ತನಯಿತ್ನು | ೪–೩೭ | ಮೋಡ: ಮೇಘ |
| ಸ್ತನಿತ | ೪–೩೨ | ಮೋಡದ ಗರ್ಜನೆ: ಗುಡುಗು |
| ಸ್ತವಕ | ೨–೭೬ | ಗೊಂಚಲು; ಗುಚ್ಛ; ಮಂಜರಿ |
| ಸ್ತೂಪಿತ | ೧–೧೫೧ | ರಾಶಿಹಾಕಿದ; ಒಟ್ಟಿದ; ಅಡಕಲೇರಿಸಿದ |
| ಸ್ಥಲೀಕ | ೬–೪೪ | ನೆಲಗಟ್ಟು; ಕುಟ್ಟಿಮ |
| ಸ್ಥಳಕಮಳ | ೯–೨೭ | ನೆಲದಾವರೆ |
| ಸ್ಥಳೇಂದೀವರ | ೧–೧ | ಸ್ಥಳಕಮಳ |
| ಸ್ರಂಸಿ | ೪–೩೬ | ಕಳಚುವ; ಉದಿರುವ |
| ಸ್ರವಂತಿ | ೯–೬೯ | ಹೊಳೆ; ನದಿ |
| ಸ್ವಾಂತಭೂ | ೧–೨೧ | ಮನೋಜ; ಮನ್ಮಥ; ಕಾಮ |
| ಹರವಸ | ೮–೭೦ | ಪರವಶತೆ; ಮೂರ್ಛೆ |
| ಹಳಿಕ | ೧೧–೪೨ | ಬೇಸಾಯಗಾರ; ಒಕ್ಕಲಿಗ; ಕೃಷಿಕ |
| ಹಾಟಕ | ೧–೧೧೪ | ಚಿನ್ನ; ಬಂಗಾರ |
| ಹೀರ | ೭–೧೨೯ | ವಜ್ರ |
| ಅತೋಡಾಡು | ೧೦–೭ | ಹಾಸ್ಯಮಾಡು; ಚೇಷ್ಟೆಮಾಡು. |

# ಪಾರಿಭಾಷಿಕ ಕೋಶ

[ಗ್ರಂಥದ ಒಡಲಲ್ಲಿಯೆ ಅನೇಕ ಪಾರಿಭಾಷಿಕ ಪದಗಳಿಗೆ ವಿವರಣೆಯಿದೆ; ಇನ್ನು ಕೆಲವು ಪದಗಳನ್ನು ಅನುವಾದದಲ್ಲಿ ವಿವರಿಸಿದೆ. ಮಿಕ್ಕ ಪದಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.]

**ಅಘಾತಿ** ೧-೨; ೩-೮೦. ಜೀವದ ಅನಂತಜ್ಞಾನಾದಿ ಗುಣಗಳಿಗೆ ಬಾಧಕವಾಗದ ನಾಲ್ಕು ಕರ್ಮಗಳು: ವೇದನೀಯ, ಆಯು, ನಾಮ ಮತ್ತು ಗೋತ್ರ ಎಂದು ಇವುಗಳ ಹೆಸರು.

**ಅಣಿಮಾ** ೩-೬೯ ವ; ೧೧-೩೩ವ. ತಪಸ್ಸಿನಿಂದ ದೊರಕುವ ಅಣಿಮೆ, ಮಹಿಮೆ, ಗರಿಮೆ, ಲಘಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಎಂಟು ಸಿದ್ಧಿಗಳಲ್ಲಿ ಒಂದು; ಅತ್ಯಂತ ಸೂಕ್ಷ್ಮವಾದ ರೂಪವನ್ನು ಹೊಂದಬಲ್ಲ ಶಕ್ತಿ.

**ಅಧಃಪ್ರವೃತ್ತಕರಣ** ೧೪-೬೪ ವ: ಕರಣವೆಂದರೆ ಪರಿಣಾಮ, ನಾನಾ ಜೀವಾಪೇಕ್ಷೆಯಿಂದ ಉತ್ತರ ಪರಿಣಾಮಗಳು ಪೂರ್ವಪರಿಣಾಮ ಗಳೊಡನೆ ಸಾದೃಶ್ಯವನ್ನು ಹೊಂದುವುದಕ್ಕೆ ಆಧಃಪ್ರವೃತ್ತಕರಣವೆಂದು ಹೆಸರು, ಭಿನ್ನ ಸಮಯದಲ್ಲಿರುವ ಜೀವಗಳ ಪರಿಣಾಮಗಳು ಪೂರ್ವಪರಿಣಾಮ ಗಳೊಡನೆ ಸಾದೃಶ್ಯ ಹೊಂದದೆ ನವೀನವಾಗಿರುವುದಕ್ಕೆ **ಅಪೂರ್ವಕರಣ** ವೆಂದು ಹೆಸರು. ನಾನಾಜೀವಗಳ ಪರಿಣಾಮಗಳು ಪ್ರತಿಸಮಯದಲ್ಲಿಯೂ ಪರಸ್ಪರ ಸದೃಶವಾಗಿರುವುದಕ್ಕೆ **ಅನಿವೃತ್ತಿಕರಣ**ವೆಂದು ಹೆಸರು. ಇವು ಮೂರು ೭.೮.೯ ನೆಯ ಗುಣಸ್ಥಾನಗಳ ಕ್ರಮವಾದ ಹೆಸರುಗಳಾಗಿವೆ.

**ಅನಂತಚತುಷ್ಟಯ** ೧೨-೧೪೭ ವ. ತೀರ್ಥಂಕರನಿಗೆ ಲಭಿಸುವ ಅನಂತಜ್ಞಾನ ಅನಂತ ದರ್ಶನ, ಅನಂತಸುಖ ಮತ್ತು ಅನಂತವೀರ್ಯ ಎಂಬ ನಾಲ್ಕುಗುಣಗಳು

**ಅನಿವೃತ್ತಿಕರಣ** ೧೪-೬೪ ವ. 'ಅಧಃಪ್ರವೃತ್ತಕರಣ' ನೋ.

**ಅನುತ್ತರೆ** ೧೧-೨೮. ಲೋಕಾಕಾರದ ತುದಿಯ ನೆಲೆಯಲ್ಲಿರುವ ವಿಜಯ, ವೈಜಯಂತ, ಜಯಂತ, ಅಪರಾಜಿತ ಮತ್ತು ಸರ್ವಾರ್ಥಸಿದ್ಧಿಯೆಂಬ ಐದು ವಿಮಾನಗಳು.

**ಅನುಬದ್ಧಕೇವಳಿ** ೧-೧೩. ಗೌತಮ ಗಣಧರ, ಸುಧರ್ಮಾಚಾರ್ಯ ಮತ್ತು ಜಂಬೂಸ್ವಾಮಿ ಎಂಬ ಮೂವರು ಕೇವಲಜ್ಞಾನಿಗಳು.

**ಅನುಯೋಗ ಚತುಷ್ಟಯ** ೧-೬೮. ಜೈನಾಗಮದ ನಾಲ್ಕು ವಿಭಾಗಗಳು: ಪ್ರಥಮಾನು ಯೋಗ, ಕರಣಾನುಯೋಗ, ಚರಣಾನುಯೋಗ ಮತ್ತು ದ್ರವ್ಯಾನುಯೋಗ ಎಂದು ಇವು ನಾಲ್ಕು.

**ಅನೈಕಾಂತ** ೧-೪. ಪ್ರತಿಯೊಂದು ವಸ್ತು ತನ್ನ ದ್ರವ್ಯ, ಕ್ಷೇತ್ರ, ಕಾಲ, ಭಾವಗಳಿಗೆ ಅನುಸಾರವಾಗಿ ಅಸ್ತಿ (ಭಾವರೂಪ), ನಾಸ್ತಿ (ಅಭಾವರೂಪ), ನಿತ್ಯ, ಅನಿತ್ಯ, ಏಕ, ಅನೇಕ ಹೀಗೆ ಬೇರೆಬೇರೆಯಾಗಿ ಇರುವುದೆಂದು ವಿವರಿಸುವ ಜಿನವಾಣಿಗೆ ಅನೇಕಾಂತವೆಂಬ ಹೆಸರು, ವಸ್ತುವಿನ ಸಮಸ್ತ ಧರ್ಮಗಳನ್ನು ಒಟ್ಟಿಗೆ ನಿರೂಪಿಸುವ ಏಕಾಂತವಾದಕ್ಕೆ ಪ್ರಮಾಣವಾದವೆಂದೂ, ಒಂದು ನಯದಿಂದ ಒಂದೊಂದೇ ಧರ್ಮವನ್ನು ನಿರೂಪಿಸುವುದು ಸ್ಯಾದ್ವಾದವೆಂದೂ ಹೆಸರು.

**ಅಪೂರ್ವಕರಣ** ೧೪-೬೪ ವ. 'ಅಧಃಪ್ರವೃತ್ತಕರಣ' ನೋ.

**ಅಪ್ರಮತ್ತ ಗುಣಸ್ಥಾನ** ೧-೫. 'ಜೀವ' ಕ್ರಮಕ್ರಮವಾಗಿ ಮೋಕ್ಷಕ್ಕೆ ಏರುವ ಹಂತಗಳನ್ನು ಸೂಚಿಸುವ ೧೪ ಗುಣಸ್ಥಾನಗಳಲ್ಲಿ ಇದು ಏಳನೆಯ ಗುಣಸ್ಥಾನ. ಅನ್ಯ ಕಷಾಯಗಳ ಉದಯವಾಗದೆ, ಕೇವಲ ಸಂಜ್ವಲನ ಕಷಾಯ ಹಾಗು ಹಾಸ್ಯಾದಿ ನೋಕಷಾಯಗಳ ಮಂದವಾದ ಉದಯವಿರುವ ಸ್ಥಿತಿ, ಈ ಗುಣಸ್ಥಾನ.

**ಅಭಿಯೋಗ್ಯ** ೪-೬೮ ವ. ಇಂದ್ರನ ಪರಿವಾರ ದೇವತೆಗಳಲ್ಲಿ ಒಂದು ವರ್ಗ. ಸೇವಕರಿಗೆ ಮತ್ತು ಭೃತ್ಯರಿಗೆ ಸಮಾನರಾದ ದೇವತೆಗಳು.

**ಅಷ್ಟಮಭೂಮಿ** ೧-೨. ಸಿದ್ಧರು ವಾಸಮಾಡುವ ಲೋಕಭಾಗ. 'ಸರ್ವಾರ್ಥಸಿದ್ಧಿ'ಗೆ ಹನ್ನೆರಡು ಯೋಜನ ಮೇಲೆ, ಮನುಷ್ಯಕ್ಷೇತ್ರದಷ್ಟೆ ವಿಶಾಲವಾಗಿರುವ ಭೂಮಿ ಈಷತ್ ಪ್ರಾಗ್ಭಾರವೆಂದೂ ಇದಕ್ಕೆ ಹೆಸರುಂಟು. ಜನ್ಮ, ವಾರ್ಧಕ್ಯ, ಮರಣ, ಭಯ, ಸಂಯೋಗ, ವಿಯೋಗ, ದುಃಖ, ರೋಗ ಮೊದಲಾದ ಯಾವುದೇ ವಿಕಾರವಿಲ್ಲದೆ ನಿರಂತರವಾದ ಅತೀಂದ್ರಿಯ ಸುಖ ಹಾಗು ಅನಂತಜ್ಞಾನಗಳಿರುವ ಭೂಮಿ ಇದು.

**ಅಷ್ಟಾಹ್ನಿಕ ಪೂಜೆ** ೩-೯೧. ಅಷ್ಟಮಿಯಿಂದ ಹುಣ್ಣಿಮೆಯವರೆಗೆ ಶ್ರಾವಕರು ಮಾಡುವ ಎಂಟು ದಿನಗಳ ಜಿನಪೂಜೆ.

**ಆತ್ಮರಕ್ಷಕ** ४-೬೮ ವ. ಇಂದ್ರನಾದವನಿಗೆ ಇರುವ ಪರಿವಾರ ದೇವತೆಗಳಲ್ಲಿ ಒಂದು ವರ್ಗ. ಅರಸನಿಗೆ ಮೈಗಾವಲಾಗಿ ಖಡ್ಗಧಾರಿಗಳಾಗಿ ನಿಲ್ಲುವ ಅಂಗರಕ್ಷಕರಂತೆ ಇಂದ್ರನ ಸಮೀಪದಲ್ಲಿಯೇ ಇರುವ ದೇವತೆಗಳು. ಇಂದ್ರನಿಗೆ ಶತ್ರುಬಾಧೆ ಯಿಲ್ಲವಾದುದರಿಂದ ಇವರು ಇರುವುದು ಆತನ ವೈಭವ ಪ್ರದರ್ಶನಕ್ಕೆ ಮಾತ್ರ.

**ಈರ್ಯಾಪರಿಶುದ್ಧಿ** ೧೪-೩. ನಡೆಯುವಾಗ ಜೀವಹಿಂಸಾದಿ ದೋಷಗಳನ್ನು ನಿವಾರಿಸುವುದಕ್ಕಾಗಿ ನೆಲವನ್ನು ನಾಲ್ಕು ಮೊಳಗಳಷ್ಟು ಮುಂದೆ ಸೂಕ್ಷ್ಮವಾಗಿ ನೋಡುತ್ತಾ ಎಚ್ಚರಿಕೆಯಿಂದ ನಡೆಯುವುದು.

**ಈಷತ್‌ಪ್ರಾಗ್ಭಾರ** ೧೬-೬೦=ಅಷ್ಟಮಭೂಮಿ.

**ಉಪಪಾದನಿಕೇತನ** ೧೧-೩೩ ವ. ಸ್ವರ್ಗದಲ್ಲಿ ಇಂದ್ರ ಮೊದಲಾದ ದೇವತೆಗಳು ಪೂರ್ಣ ಯೌವನವಂತರಾಗಿಯೂ, ಅಲಂಕಾರಸಹಿತರಾಗಿಯೂ ಹಾಸಿಗೆಯ ಮೇಲೆ ಮೈದಾಳುವುದಕ್ಕೆ ಉಪಪಾದನವೆಂದು ಹೆಸರು. ಹೀಗೆ ಅವರು ಹುಟ್ಟುವ ನಿವಾಸಕ್ಕೆ ಉಪಪಾದನಿಕೇತನವೆಂದು ಹೆಸರು.

**ಏಕವಿಹಾರಿ** ೧೧-೧೭ ವ. ತಪೋವೃದ್ಧನೂ, ಜ್ಞಾನವೃದ್ಧನೂ, ಆಚಾರವಂತನೂ, ಆಗಮಕುಶಲನೂ ಆಗಿರುವ ವಿಶಿಷ್ಟ ಸಾಧುವಿಗೆ ಏಕಾಕಿಯಾಗಿ ವಿಹರಿಸಲು ಜಿನೇಶ್ವರನು ಸಮ್ಮತಿಸುತ್ತಾನೆ. ಹೀಗೆ ಒಬ್ಬಂಟಿಗನಾಗಿ ಸಂಚರಿಸುವ ಸಾಧುವಿಗೆ ಏಕವಿಹಾರಿಯೆಂದು ಹೆಸರು.

**ಕಷಾಯ** ೧-೨೧. ಕರ್ಮಫಲವನ್ನು ಬೆಳೆಸುವ ದೋಷಗಳು ಕ್ರೋಧ, ಮಾನ, ಮಾಯಾ ಮತ್ತು ಲೋಭ ಎಂದು ಇವು ನಾಲ್ಕು. ಪ್ರತ್ಯಾಖ್ಯಾನ ಹಾಗು ಅಪ್ರತ್ಯಾಖ್ಯಾನ ಭೇದದಿಂದ ಇವು ಎಂಟೂ ಆಗುತ್ತವೆ.

**ಕಾಯೋತ್ಸರ್ಗ** ೩-೭೧. ಕೈ ಇಳಿಬಿಟ್ಟುಕೊಂಡು ದೇಹವನ್ನು ನೇರವಾಗಿ ಹಾಗು ನಿಶ್ಚಲವಾಗಿರಿಸಿಕೊಂಡು ನಿಲ್ಲುವುದು. ತಪಸ್ಸಿಗೆ ಉತ್ತಮವಾದ ಆಸನಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಖಡ್ಗಾಸನವೆಂದೂ ಹೆಸರಿದೆ.

**ಕಿಲ್ಬಿಷಿಕ** ४-೬೩. ಕಿಲ್ಬಿಷವೆಂದರೆ ಪಾಪ. ಕಿಲ್ಬಿಷವುಳ್ಳ ದೇವತೆಗಳಿಗೆ ಕಿಲ್ಬಿಷಿಕರೆಂದು ಹೆಸರು. ಮನುಷ್ಯಲೋಕದಲ್ಲಿ ಚಾಂಡಾಲ ಮೊದಲಾದ ಪ್ರಜೆಗಳಂತೆ ಸ್ವರ್ಗದಲ್ಲಿ ಸ್ವಲ್ಪಪುಣ್ಯಬಲದಿಂದಾದ ಋದ್ಧಿಯಿಂದ ಇರುವವರು.

**ಘಾತಿ** ೧-೨; ೩-೮೦. ಆತ್ಮನ ಗುಣಕ್ಕೆ ಘಾತಕವಾದ, ಕರ್ಮ. ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಮತ್ತು ಅಂತರಾಯ ಎಂದು ಇವು ನಾಲ್ಕು ಬಗೆಯಾಗಿವೆ.

**ಛದ್ಮಸ್ಥಕಾಲ** ೧೪-೫೭ ವ. ಸರ್ವಜ್ಞನಾಗುವುದಕ್ಕೆ ಮುಂಚಿನ ಅವಸ್ಥೆ, ಹನ್ನೆರಡನೆಯ ಗುಣಸ್ಥಾನದಲ್ಲಿರುವ ಸ್ಥಿತಿ, ದರ್ಶನಾವರಣ ಮತ್ತು ಜ್ಞಾನಾವರಣಗಳಿಂದ ಇನ್ನೂ ಮುಕ್ತನಾಗದಿರುವ ಕಾಲ.

**ಜ್ಯೋತಿಷ್ಕ** ೧೬-೬೩. ದೇವತೆಗಳ ನಾಲ್ಕು ವರ್ಗಗಳಲ್ಲಿ ಒಂದು, ಸೂರ್ಯ, ಚಂದ್ರ, ಗ್ರಹ, ನಕ್ಷತ್ರ ಮೊದಲಾದುವುಗಳಲ್ಲಿ ಇರುವವರು ಜ್ಯೋತಿಷ್ಕ ದೇವತೆಗಳು.

**ತ್ರಾಯಸ್ತ್ರಿಂಶ** ೧೨-೪೩ ವ. ದೇವೇಂದ್ರರಿಗೆ ಪುರೋಹಿತ, ಮಂತ್ರಿ ಮತ್ತು ಅಮಾತ್ಯರಂತೆ ಇರುವ ಮೂವತ್ತುಮೂರು ದೇವತೆಗಳು "ಮೂವತ್ತು ಮೂವರು" ಎಂಬರ್ಥದಲ್ಲಿಯೆ ಇವರು ತ್ರಾಯಸ್ತ್ರಿಂಶ ದೇವತೆಗಳು.

**ತ್ರಿಗುಪ್ತಿ** ೧೬-೨೬ ವ. ಮನಸ್ಸು ಮೈಮಾತುಗಳನ್ನು ನಿಗ್ರಹಿಸಿ, ಅವು ಧರ್ಮಧ್ಯಾನದಲ್ಲಿ ನಿರತವಾಗಿರುವಂತೆ ಮಾಡುವುದು ಗುಪ್ತಿ. ಇದು ಮನೋಗುಪ್ತಿ, ವಾಗ್ಗುಪ್ತಿ ಮತ್ತು ಕಾಯಗುಪ್ತಿ ಎಂದು ಮೂರು ವಿಧವಾಗಿದೆ.

**ತ್ರೈವಿದ್ಯ** ೧-೨೪. ಷಟ್ಖಂಡಾಗಮದ ಮೊದಲ ಮೂರು ಖಂಡಗಳನ್ನು ಚೆನ್ನಾಗಿ ಅಭ್ಯಾಸಮಾಡಿದವನು. "ತ್ರೈವಿದ್ಯದೇವ" ನೆಂಬ ಪ್ರಶಸ್ತಿಯು ಮಾಘಣಂದಿ, ಅಕಲಂಕದೇವ, ರಾಮಚಂದ್ರ ಮತ್ತು ಶ್ರುತಕೀರ್ತಿ ಎಂಬ ನಾಲ್ವರಿಗೆ ಮಾತ್ರ ಮೀಸಲಾಗಿದೆ.

**ತ್ರೈವಿದ್ಯೇಶ** ೧-೩೦=ತ್ರೈವಿದ್ಯ.

**ನವವಿಧಪುಣ್ಯ** ೧೩-೯ ವ. ಚರಿಗೆಗೆ ಬಂದ ಮುನಿಗಳನ್ನು ಸತ್ಕರಿಸುವ ಒಂಬತ್ತು ಕ್ರಮಗಳು. ಮೂರು ಪ್ರದಕ್ಷಿಣೆ, ಪಾದ ಪ್ರಕ್ಷಾಲನ, ಉನ್ನತ ಪೀಠಪ್ರದಾನ, ಅರ್ಚನ, ನಮಸ್ಕಾರ, ವಚನಶುದ್ಧಿ, ಕಾಯಶುದ್ಧಿ, ಮನಃಶುದ್ಧಿ ಮತ್ತು ಏಷಣಾಶುದ್ಧಿ ಎಂಬ ಈ ಒಂಬತ್ತು ನವವಿಧ ಪುಣ್ಯ. (೩-೩೦ ಅನುವಾದ ನೋ.)

**ನಿರಾಕಾರ(ಅನಶನ)** ೧೧-೮. ಉಪವಾಸ ವಿಧಿಯಲ್ಲಿ ಸಾಕಾರ ಮತ್ತು ನಿರಾಕಾರ ಎಂದು ಎರಡು ಬಗೆ, ಫಲಾಪೇಕ್ಷೆಯಿಂದ ನಿರ್ದಿಷ್ಟವಾದ ಅವಧಿಯವರೆಗೆ ಕೈಕೊಳ್ಳುವ ನೋಂಪಿ ಅಥವಾ ವ್ರತದ ಉಪವಾಸ ಸಾಕಾರ. ಅನಿರ್ದಿಷ್ಟವಧಿಯ ಹಾಗು ಯಾವುದೆ ನಿರ್ದಿಷ್ಟ ಫಲಾಪೇಕ್ಷೆಯಿಲ್ಲದೆ ಮಾಡುವ ತಪಸ್ಸಿನ ಅಂಗವಾದ ಉಪವಾಸ ನಿರಾಕಾರ. ಇವುಗಳನ್ನು ಸಾಕಾಂಕ್ಷ-ನಿರಾಕಾಂಕ್ಷ ಎಂದೂ ಹೇಳುವುದುಂಟು.

**ಪಂಚಸಮಿತಿ** ೧೬-೫೬ ವ. ಜೀವ ಹಿಂಸೆಯಾಗದಂತೆ ನಡೆದುಕೊಳ್ಳುವ ಕ್ರಮ, ಈರ್ಯಾಸಮಿತಿ (ನಡೆಯುವಾಗ ಪ್ರಾಣಿಗಳಿಗೆ ನೋವಾಗದಂತೆ ನೋಡಿಕೊಳ್ಳುವುದು), ಭಾಷಾಸಮಿತಿ (ಯಾರಮನಸ್ಸನ್ನೂ ನೋಯಿಸದಂತೆ ಮಾತಾಡುವುದು), ಏಷಣಾಸಮಿತಿ (ತನಗಾಗಿಯೆ ಏರ್ಪಡಿಸಿದ ಹಾಗು ಪರಿಶುದ್ಧವಾದ ಆಹಾರವನ್ನು ಮಾತ್ರ ತೆಗೆದುಕೊಳ್ಳುವುದು), ಆದಾನ ಸಮಿತಿ (ಪಾತ್ರೆ, ಪುಸ್ತಕ ಮೊದಲಾದುವನ್ನು ಇಡುವಾಗ ಹಾಗು ತೆಗೆದು ಕೊಳ್ಳುವಾಗ ಜೀವಹಿಂಸೆಯಾಗದಂತೆ ಎಚ್ಚರವಹಿಸುವುದು), ಉತ್ಸರ್ಗಸಮಿತಿ (ಮಿಕ್ಕ ಅಥವಾ ಕೆಟ್ಟುಹೋದ ಆಹಾರವನ್ನು ಚೆಲ್ಲುವಾಗಲೂ, ಮಲಮೂತ್ರ ವಿಸರ್ಜನೆಗಳಲ್ಲೂ ಜೀವಹಿಂಸೆಯಾಗದಂತೆ ಜಾಗರೂಕವಾಗಿರುವುದು) -ಎಂದು ಇವು ಐದು ಬಗೆಯಾಗಿವೆ.

**ಪಂಚಮಹಾವ್ರತ:** ೧೧-೨. ಅಹಿಂಸೆ, ಸತ್ಯ, ಆಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂಬುವು ಐದು ಮಹಾವ್ರತಗಳು. ಗೃಹಸ್ಥರಿಗೆ ಅನ್ವಯಿಸಿದಾಗ ಇವುಗಳಿಗೆ ಅಣುವ್ರತಗಳೆಂದೂ, ಮುನಿಗಳಿಗೆ ಅನ್ವಯಿಸಿದಾಗ ಮಹಾವ್ರತಗಳೆಂದೂ ಹೆಸರು.

**ಪಂಚಾತಿಚಾರ** ೨-೮೨. ಧರ್ಮಾಚರಣೆಯಲ್ಲಿ ಐದು ಬಗೆಯ ದೋಷಗಳು. ೧. ಆಗಮದಲ್ಲಿ ಶಂಕೆ, ೨. ಭೋಗಾಪೇಕ್ಷೆ, ೩. ಶರೀರದ ನಿರ್ವಿಚಿಕಿತ್ಸೆ, ೪. ನಿರ್ದೋಷಿಯ ಪ್ರಶಂಸೆಯಲ್ಲಿ ಅನ್ಯದೃಷ್ಟಿ ಪ್ರಶಂಸೆ, ೫. ಸದೋಷಿಯ ಹೊಗಳಿಕೆಯಲ್ಲಿ ಅನ್ಯದೃಷ್ಟಿಯ ಸ್ತೋತ್ರ.

**ಪರೀಷಹ** ೧-೩. ತಪಶ್ಚರಣಕ್ಕೆ ಬಾಧಕವಾದ ೨೨ ಬಗೆಯ ತೊಂದರೆಗಳು ೧. ಹಸಿವು, ೨. ಬಾಯಾರಿಕೆ, ೩. ಚಳಿ, ೪. ಉಷ್ಣ, ೫. ಸೊಳ್ಳೆ- ಚಿಕ್ಕಾಡು ಮೊದಲಾದುವುಗಳು ಕಚ್ಚುವುದು. ೬.ಬೆತ್ತಲೆಯಿರುವುದರಿಂದಾಗುವ ತೊಂದರೆ, ೭. ಅರತಿ, ೮. ಸ್ತ್ರೀವಿರಹ, ೯. ಸಂಚಾರಬಾಧೆ, ೧೦. ಶಯ್ಯಾಬಾಧೆ, ೧೧. ಆಸನಬಾಧೆ, ೧೨. ಬೈಗುಳು. ೧೩. ಯಾಚನೆಯಲ್ಲಾಗುವ ತೊಂದರೆ, ೧೪. ಹೊಡೆತ, ೧೫. ಭಿಕ್ಷೆ ದೊರೆಯದಿರುವ ಖೇದ, ೧೬. ತಪಸ್ಸಿಗೆ ತಕ್ಕ ಫಲಕಾಣದಿರುವಿಕೆ. ೧೭. ರೋಗ, ೧೮. ಮುಳ್ಳುಕಲ್ಲುಗಳ ಬಾಧೆ, ೧೯. ಅಹಂಕಾರ. ೨೦. ಅಜ್ಞಾನದ ಕೊರಗು. ೨೧. ಸ್ನಾನವಿಲ್ಲದುದರಿಂದಾಗುವ ಬಾಧೆ. ೨೨. ಜನರಿಂದ ಪುರಸ್ಕಾರವಾಗದಿರುವಿಕೆ.

**ಪಾರಿಷದ** ೧೨-೪೩. ಇಂದ್ರರ ಸಭೆಯಲ್ಲಿ ಇರುವ ದೇವತೆಗಳು ಅರಸರ ಆಸ್ಥಾನದಲ್ಲಿರುವ ಸಂಧಾನಕಾರಿ ಪುರುಷರಿಗೆ ಸಮಾನರಾಗಿದ್ದು ಇವರು ದೇವೇಂದ್ರನಿಗೆ ತುಂಬ ಮೆಚ್ಚಿಗೆಯುವರಾಗಿರುತ್ತಾರೆ.

**ಪೂರ್ವ** ೧೩-೫೬ ವ. ಎಂಬತ್ತುನಾಲ್ಕು ಲಕ್ಷ ವರ್ಷದ ಅವಧಿಗೆ ಒಂದು ಪೂರ್ವಾಂಗವೆಂದು ಹೆಸರು. ೮೪ ಲಕ್ಷ ಪೂರ್ವಾಂಗಗಳಾದರೆ ಒಂದು 'ಪೂರ್ವ'ವೆಂಬ ಕಾಲಾವಧಿಯಾಗುತ್ತದೆ.

**ಪೂರ್ವಾಂಗ** ೧೩-೫೬ ವ. 'ಪೂರ್ವ'ನೋ.

**ಪ್ರತಿಮಾನಿಯೋಗ** ೧೧-೨೦. ವಿಗ್ರಹದಂತೆ ನಿಶ್ಚಲವಾಗಿ ನಿಂತು ತಪಸ್ಸು ಮಾಡುವ ಕ್ರಮ.

**ಭವನವಾಸಿಗ** ೧೬-೧೮ ವ. =ಭವನಾಮರ.

**ಭವನಾಮರ** ೧೬-೧೮ ವ. ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿ ಎಂಬ ನಾಲ್ಕು ಬಗೆಯ ದೇವತಾವರ್ಗಗಳಲ್ಲಿ ಒಂದು.

**ಭಾವನ** ೧೬-೬೩ =ಭವನಾಮರ.

**ಮೂಲಗುಣ** ೧೧-೫ ವ. ಮುನಿಗಳಿಗೆ ಇರಬೇಕಾದ ೨೮ ಅವಶ್ಯಕ ಗುಣಗಳು:- ೫. ಮಹಾವ್ರತ, ೫ ಸಮಿತಿ, ಪಂಚೇಂದ್ರಿಯನಿಗ್ರಹ, ದಿಗಂಬರತ್ವ. ಕೇಶಲುಂಛನ ಪ್ರತಿಜ್ಞೆ, ಷಡಾವಶ್ಯಕಗಳಲ್ಲಿ ನಿರ್ಬಾಧಕತ್ವ, ಸ್ನಾನರಾಹಿತ್ಯ, ಭೂಶಯನ, ದಂತಧಾವನ ಮಾಡದಿರುವದು, ನಿಂತುಕೊಂಡು ಮಾಡುವ ಊಟ, ಒಪ್ಪೊತ್ತಿನ ಊಟ.

**ಮೂಲೋತ್ತರ ಗುಣ** ೧೧-೧೭ ವ. ಆಚಾರ್ಯರಿಗೆ ಇರಬೇಕಾದ ಮೂವತ್ತಾರು ಗುಣಗಳು:- ೧೨ ತಪಸ್ಸು, ೬ ಅವಶ್ಯಕಗಳು, ೫ ಆಚಾರಗಳು, ೧೦ ಧರ್ಮಗಳು, ೩ ಗುಪ್ತಿಗಳು.

**ವಾನೇಂಯ** ೧೬-೬೩. ವ್ಯಂತರ ದೇವತೆಗಳು, ನಾಲ್ಕು ಬಗೆಯ ದೇವತೆಗಳಲ್ಲಿ ಒಂದುವರ್ಗ, ಕಿನ್ನರ ಮೊದಲಾಗಿ ಇವರಲ್ಲಿ ಎಂಟು ಪ್ರಕಾರಗಳುಂಟು.

**ವಾಯುತ್ರಿತಯ** ೧೬-೬೨ ವ. ಲೋಕದ ಹೊರಭಾಗದಲ್ಲಿ ಅದನ್ನು ಸುತ್ತುಗಟ್ಟಿರುವ ಘನೋದಧಿ, ಘನವಾತ ಮತ್ತು ತನುವಾತ ಎಂಬ ಮೂರು ಗಾಳಿಗಳು.

**ಶ್ರುತಕೇವಳಿ** ೧-೧೩. ವಿಷ್ಣುನಂದಿ, ನಂದಿಮಿತ್ರ, ಅಪರಾಜಿತ, ಗೋವರ್ಧನ ಮತ್ತು ಭದ್ರಬಾಹು-ಈ ಐವರು ಶ್ರುತಕೇವಲಿಗಳು.

**ಷಟ್‌ತ್ರಿಂಶದ್ಗುಣ** ೧-೩. = ಮೂಲೋತ್ತರ ಗುಣ.

**ಸಪ್ತಭಂಗಿ** ೧-೧೧. ಯಾವುದೆ ಪದಾರ್ಥದಲ್ಲಿಯಾದರೂ ಅದರ ದ್ರವ್ಯ, ಕ್ಷೇತ್ರ, ಕಾಲ ಮತ್ತು ಭಾವ ಈ ದೃಷ್ಟಿಯಿಂದ ಪರಸ್ಪರ ವಿರುದ್ಧವಾದ ಧರ್ಮಗಳು

ಇರುವುದನ್ನು, ಒಂದೊಂದಾಗಿ ವಿವರಿಸುವ ಏಳು ಬಗೆಯ ತರ್ಕಕ್ರಮ. ಸ್ಯಾದಸ್ತಿ, ಸ್ಯಾನ್ನಾಸ್ತಿ, ಸ್ಯಾದಸ್ತಿನಾಸ್ತಿ, ಸ್ಯಾದವಕ್ತವ್ಯ, ಸ್ಯಾದಸ್ತ್ಯವಕ್ತವ್ಯ, ಸ್ಯಾನ್ನಾಸ್ತ್ಯವಕ್ತವ್ಯ, ಸ್ಯಾದಸ್ತಿನಾಸ್ತ್ಯವಕ್ತವ್ಯ–ಎಂಬ ಈ ಏಳು ಭಂಗಿಗಳುಳ್ಳ ವಾದ, ಇದಕ್ಕೆ ಸ್ಯಾದ್ವಾಸವೆಂದು ಹೆಸರು.

**ಸಮುದ್ಘಾತ** ೧೬ ೫೬ ವ. ಇನ್ನೂ ಸ್ವಲ್ಪ ಪ್ರಮಾಣದಲ್ಲಿ ಉಳಿದಿರುವ ಕರ್ಮಾಂಶವನ್ನು ಕಳೆದುಕೊಳ್ಳುವುದಕ್ಕಾಗಿ ಕೇವಲಿಯು ತನ್ನ ಆತ್ಮಪ್ರದೇಶವನ್ನು ವಿಸ್ತರಿಸುವುದು. ಮದಿರೆಯಲ್ಲಿ ನೊರೆ ಹಿಂಗಿ ಅದು ಪುನಃ ಶಾಂತವಾಗುವ ಹಾಗೆ ಸಮುದ್ಘಾತದಲ್ಲಿ ದೇಹಸ್ಥವಾದ ಆತ್ಮಪ್ರದೇಶವು ಹೊರಗೆ ಹರಡಿ ಕರ್ಮರಜವನ್ನು ಕೊಡಹಿಕೊಂಡು, ಪುನಃ ದೇಹದೊಳಗೆ ಸಮಾವೇಶವಾಗುತ್ತದೆ. ಸಮುದ್ಘಾತವು ದಂಡ, ಕವಾಟ, ಪ್ರತರ ಮತ್ತು ಲೋಕಪೂರಣವೆಂದು ನಾಲ್ಕು ಬಗೆಯಾಗಿದೆ. ದೇಹದ ಮೂರು ಮಡಿಯಷ್ಟು ವಿಸ್ತರಿಸಿ ಜೀವ ಪ್ರದೇಶವನ್ನು ೧೪ ರಜ್ಜುಗಳಷ್ಟು ಉದ್ದವಾದ ದಂಡದಂತೆ ಹರಡುವುದು ದಂಡಸಮುದ್ಘಾತ. ಹೀಗೆ ಉದ್ದವಾದ ಜೀವ ಪ್ರದೇಶವನ್ನು ಪೂರ್ವಪಶ್ಚಿಮಗಳಲ್ಲಿ ವಾತವಲಯದವರೆಗೆ ವಿಸ್ತೀರ್ಣಗೊಳಿಸುವುದು ಕವಾಟ ಸಮುದ್ಘಾತ, ವಾತವಲಯದಲ್ಲಿದ್ದ ಕ್ಷೇತ್ರವನ್ನು ಬಿಟ್ಟು ಸಂಪೂರ್ಣ ಲೋಕವನ್ನು ಆವರಿಸುವಂತೆ ಜೀವಪ್ರದೇಶವನ್ನು ಹರಡುವುದು ಪ್ರತರ ಸಮುದ್ಘಾತ. ಸರ್ವಲೋಕಗಳ ಪ್ರಮಾಣದಷ್ಟು ಜೀವಪ್ರದೇಶವನ್ನು ಹಿಗ್ಗಲಿಸಿ ಹರಡುವುದು ಲೋಕಪೂರಣ ಸಮುದ್ಘಾತ.

# ಅನುಬಂಧ

## ಪದ್ಯಗಳ ಅಕಾರಾದಿ

### ಅ

ಖ

ನ

ಫ



ಬ

ಶುಭವಾಗಲಿ

ಜಿನಸೇನಾಚಾರ್ಯ ಹಾಗೂ ಗುಣಭದ್ರಾಚಾರ್ಯರ ಮಹಾಪುರಾಣವೇ ಬಹುತೇಕ ಎಲ್ಲ ಜೈನ ಪುರಾಣ ಕಾವ್ಯಗಳಿಗೆ ಮೂಲಾಧಾರ ಆಗಿರುವುದರಿಂದ, ಅಗ್ಗಳನ ಚಂದ್ರಪ್ರಭ ಪುರಾಣಕ್ಕೂ ಗುಣಭದ್ರಾಚಾರ್ಯರ ಉತ್ತರ ಪುರಾಣದ ೧೨೨ ಶ್ಲೋಕಗಳೇ ಆಧಾರ. ಅದನ್ನೇ ಕವಿ ಹದಿನಾರು ಆಶ್ವಾಸಗಳವರೆಗೆ ವಿಸ್ತರಿಸಿದ್ದಾನೆ ಎನ್ನುತ್ತಾರೆ. ಆದರೆ ಅಗ್ಗಳ, ವೀರನಂದಿಯ ಕಾವ್ಯವನ್ನೇ ಹೆಚ್ಚಾಗಿ ಆಧರಿಸಿದ್ದಾನೆ ಎಂಬುದು ಡಿಎಲ್‌ಎನ್ ಅವರ ತಜ್ಞ ಅಭಿಪ್ರಾಯ.

ಧರ್ಮ ಹಾಗೂ ಕಾವ್ಯಧರ್ಮಗಳೆರಡನ್ನು ಸಮನ್ವಯಗೊಳಿಸುವುದು ಈ ಪರಂಪರೆಯ ಧ್ಯೇಯೋದ್ದೇಶವಾಗಿದೆ. ಅಂತೆಯೆ ಅಗ್ಗಳ ಕವಿ ಕೂಡ ಕಾವ್ಯಶೀಲತೆಯನ್ನು ಸಂಸ್ಥಾಪಿಸುವುದರಲ್ಲಿ ತನ್ನ ವೈಶಿಷ್ಟ್ಯವನ್ನು ಮೆರೆದಿದ್ದಾನೆ.

**ಧರ್ಮದರ್ಶಿ ಹರಿಕೃಷ್ಣ ಪುನರೂರು**
ಅಧ್ಯಕ್ಷರು